# ಶ್ರೀಶಂಕರಭಗವತ್ಪಾದವೃತ್ತಾಂತ ಸಾರಸರ್ವಸ್ವ



ಶ್ರೀಶಂಕರಭಗವತ್ಪಾದಾಚಾರ್ಯರು

ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ
1995

# ಗ್ರಂಥದ ಬಗ್ಗೆ

ಶ್ರೀಶಂಕರಭಗವತ್ಪಾದರ ಜೀವನಚರಿತ್ರೆಯನ್ನು ತಿಳಿಸುವ 'ಶಂಕರ ವಿಜಯ'ಗಳೆಂಬ ಹೆಸರಿನ ಗ್ರಂಥಗಳು ಆಯಾಕಾಲಕ್ಕೆ ವಿದ್ವಾಂಸರು ಗುರುಭಕ್ತಿ, ಶ್ರದ್ಧೆ, ಸಂಪ್ರದಾಯಗಳ ಚೌಕಟ್ಟಿಗೆ ಒಳಪಟ್ಟು ಬರೆಯಲ್ಪಟ್ಟ ಕಾವ್ಯಗ್ರಂಥಗಳೇ ಹೊರತು ಐತಿಹಾಸಿಕ ದಾಖಲೆಗಳಲ್ಲ. ಈ ಕಾರಣದಿಂದ ಶಂಕರವಿಜಯಗಳಲ್ಲಿ ಚರಿತ್ರೆಯ ನಾಯಕರ ಜೀವನ ಘಟನೆಗಳ ವಿಷಯಕ್ಕೆ ಪರಸ್ಪರವಿರೋಧವಿರುವುದು ಅನಿವಾರ್ಯವಾಗಿದೆ.

ಇಂಥ ಕ್ಲಿಷ್ಟವಿಷಯಗಳನ್ನೆಲ್ಲ ಈ ಗ್ರಂಥಕರ್ತರು ತಮಗೆ ಒದಗಿದ ದಾಖಲೆಗಳು ಹಾಗೂ ಗ್ರಂಥಗಳಿಂದ ಸಂಗ್ರಹಿಸಿ ಪರಸ್ಪರ ಹೋಲಿಸಿ ಸತ್ಯಕ್ಕೆಹತ್ತಿರವಾದವುಗಳನ್ನು ವಿಮರ್ಶಿಸಿ ಇಲ್ಲಿ ತಿಳಿಸಿದ್ದಾರೆ. ಇದರಿಂದ ಕೆಲವರಿಗೆ ಸಂತೋಷವೂ ಕೆಲವರಿಗೆ ಬೇಸರವೂ ಆಗಿದೆ ಯೆಂಬುದು ನಿಜ. ಆದರೂ ನಿಜವನ್ನು ಗೊತ್ತುಪಡಿಸುವ ಒಂದೇ ದೃಷ್ಟಿಯಿಂದ ಈ ವಿಮರ್ಶಾತ್ಮಕ ಪ್ರಬಂಧವು ರಚಿತವಾಗಿದೆಯೆಂಬುದು ಓದುಗರಿಗೆ ಮನದಟ್ಟಾಗಲಿದೆ.

ಶ್ರೀಶಂಕರಾಚಾರ್ಯರ ಚರಿತ್ರೆಗಳಿಗಿಂತಲೂ ಅವರ ಉಪದೇಶ ಗಳೇ ಪ್ರಧಾನವೆಂದೂ ಅಂಥ ಉಪದೇಶಗಳನ್ನು ಅವರ ಪ್ರಸ್ಥಾನತ್ರಯ ಭಾಷ್ಯಗಳಿಂದಲೇ ತಿಳಿಯಬೇಕೆಂದೂ ಗ್ರಂಥಕರ್ತರು ಇಲ್ಲಿ ಒತ್ತಿ ಹೇಳಿರುತ್ತಾರೆ. ವಾಚಕರು ಗ್ರಂಥವನ್ನೋದಿದ ಮೇಲೆ ತಮ್ಮ ತಮ್ಮ ತೀರ್ಮಾನಕ್ಕೆ ಬರಬಹುದಾಗಿದೆ.

# ಶ್ರೀ ಶಂಕರಭಗವತ್ಪಾದವೃತ್ತಾಂತ ಸಾರಸರ್ವಸ್ವ

ಶ್ರೀ ಶಂಕರಭಗವತ್ಪಾದಾಚಾರ್ಯರು

ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ
1995

# ಒಂದನೆಯ ಮುದ್ರಣದ ಪೀಠಿಕೆ

ಈ ಗ್ರಂಥವನ್ನು ಬರೆಯಬೇಕೆಂದು ನನ್ನನ್ನು ಮತ್ತೆಮತ್ತೆ ಒತ್ತಾಯದಿಂದ ಕೇಳಿದ ಬಳ್ಳಾರಿ ಜಿಲ್ಲೆಯ ಹೊಸಪೇಟೆಯ ವೇ|| ಬ್ರ|| ಶ್ರೀ|| ಬಿ. ನಾರಾಯಣಭಟ್ಟರವರ ಅಭಿಪ್ರಾಯಕ್ಕೆ ಮನ್ನಣೆಕೊಡಬೇಕೆಂದು ಮನಸ್ಸಿಗೆ ಬಂದಾಗ ಗ್ರಂಥದ ವಿಷಯವು ಇಷ್ಟು ಜಟಿಲವಾಗಬಹುದೆಂಬ ಕಲ್ಪನೆಯು ನನಗೆ ಇರಲಿಲ್ಲ. ಗ್ರಂಥವು ಇಷ್ಟು ದೊಡ್ಡದಾಗಬಹುದೆಂಬ ನಿರೀಕ್ಷಣೆಯೂ ಇರಲಿಲ್ಲ. ಆದರೆ ಭಗವಂತನ ಅನುಗ್ರಹದಿಂದ ಅನೇಕರು ನನಗೆ ವಿಷಯಗಳನ್ನು ಒದಗಿಸಿಕೊಡುವದಕ್ಕೆ ಬಂದರು ; ಕೆಲವರು ಗ್ರಂಥವನ್ನು ನೋಡುವದಕ್ಕೂ ನೆರವಾದರು. ಆದರ ಫಲವಾಗಿ ಈ ಪುಸ್ತಕವು ಹೊರಬಂದಿದೆ.

ಶ್ರೀಶಂಕರಭಗವತ್ಪಾದರ ಹೆಸರು ಈಗ್ಗೆ ನಾಗರಿಕಪ್ರಪಂಚದಲ್ಲೆಲ್ಲ ಹರಡಿಕೊಂಡಿದೆ. ಅವರು ಭಾರತದೇಶಕ್ಕೇ ಅಲ್ಲದೆ ಇಡಿಯ ಭೂಮಂಡಲಕ್ಕೇ ಮಾಡಿರುವ ಉಪಕಾರವು ಅಷ್ಟಿಷ್ಟಲ್ಲ. ನಮಗೆ ಕಾಣುವ ಪ್ರಪಂಚವೆಲ್ಲವೂ ಪರಮಾರ್ಥವಾಗಿ ಪರಮಸತ್ಯವಾಗಿರುವ ಪರಬ್ರಹ್ಮವಸ್ತುವೊಂದೇ ; ಇಲ್ಲಿರುವ ಜೀವರುಗಳೆಲ್ಲರೂ ನಿಜವಾಗಿ ಪರಮಾತ್ಮಸ್ವರೂಪರೇ–ಎಂಬ ಶಾಶ್ವತತತ್ತ್ವವನ್ನು ಮನಗಾಣಿಸುವ ವೇದಾಂತಸಿದ್ಧಾಂತವನ್ನು ಅವರು ಉಪನಿಷತ್ತುಗಳು, ಭಗವದ್ಗೀತೆ, ಬ್ರಹ್ಮಸೂತ್ರಗಳು– ಎಂಬ ಪ್ರಸ್ಥಾನತ್ರಯದ ತಮ್ಮ ಭಾಷ್ಯಗಳಲ್ಲಿ ವಿಶದಪಡಿಸಿರುತ್ತಾರೆ. ಆ ಗ್ರಂಥಗಳನ್ನು ಯಥಾಮತಿಯಾಗಿ ಕನ್ನಡಿಸುವ ಸೌಭಾಗ್ಯದ ಜೊತೆಗೆ ಅವರ ಚರಿತ್ರೆಯನ್ನೂ ಸ್ಮರಿಸಿಕೊಳ್ಳುವ ಸೌಭಾಗ್ಯವು ದೊರೆಯಿತಲ್ಲ !– ಎಂಬ ಹಿಗ್ಗು ನನ್ನ ಮನಸ್ಸಿನಲಿ ಮೊದಲು ಉಂಟಾಯಿತು. ಆದರೆ ಈ ಚರಿತ್ರೆಯ ಲೇಖನಕಾರ್ಯದಲ್ಲಿ ತೊಡಗಿದ ಸ್ವಲ್ಪಕಾಲದಲ್ಲಿಯೇ ಆ ಹಿಗ್ಗು ಮಾಯವಾಯಿತು. ಏಕೆಂದರೆ ನಮ್ಮ ದುರದೃಷ್ಟದಿಂದ ಜಗದ್ಗುರುಗಳಾದ ಆ ಆಚಾರ್ಯರ ವಿಷಯದಲ್ಲಿ ನಿಜವಾದ ಚರಿತ್ರೆಯನ್ನು ಬರೆದಿರುವ ಒಂದು ಗ್ರಂಥವೂ ಈವರೆಗೆ ಉಪಲಬ್ಧವಾಗಿರುವದಿಲ್ಲ; ಅದು ಸಿಕ್ಕುವ ಆಶೆಯೂ ಇಲ್ಲ.

ಆಚಾರ್ಯರ ಚರಿತ್ರೆಯ ಸಂಗ್ರಹಕ್ಕೆ ಸಾಮಗ್ರಿಯನ್ನು ಒದಗಿಸಿಕೊಂಡ ಮೇಲೆ ಸ್ಪಷ್ಟವಾಗಿ ತಿಳಿದುಬಂದದ್ದೇನೆಂದರೆ : ಶಂಕರವಿಜಯಗಳೆಂಬ ಕೆಲವು ಕಾವ್ಯಗಳು, ಅಲ್ಲಲ್ಲಿ ಆಚಾರ್ಯರಿಗೆ ಸಂಬಂಧಿಸಿದಂತೆ ಬರೆದಿರುವ ಕಟ್ಟುಕಥೆಗಳ ಸಂಗ್ರಹ ಮತ್ತು ಈ ಗ್ರಂಥಗಳ ಆಧಾರದಿಂದ ಶ್ರೀಶಂಕರಭಗವತ್ಪಾದರು ಸ್ಥಾಪಿಸಿರುವ ಮಠಗಳೆಂಬ ಹೆಸರಿನ ಸಂಸ್ಥೆಗಳವರು ಬರೆಯಿಸಿಟ್ಟುಕೊಂಡಿರುವ ವಿಚಾರಗಳ ಆಧಾರಗಳು ; ಈಚಿನ ಗ್ರಂಥವಿಮರ್ಶಕರು ಐತಿಹಾಸಿಕದೃಷ್ಟಿಯಿಂದ ಬರೆದಿರುವ ಗ್ರಂಥಗಳು– ಇಷ್ಟಲ್ಲದೆ ಮತ್ತೆ ಯಾವ ಸಾಮಗ್ರಿಯೂ ನಮಗೆ

ಸಿಕ್ಕಿಲ್ಲವೆಂಬುದು. ಐತಿಹಾಸಿಕದೃಷ್ಟಿಯಿಂದ ಬರೆದವರೂ ಬಲುಮಟ್ಟಿಗೆ ಒಂದೊಂದು ಮತದ ಶಿಷ್ಯರಾಗಿದ್ದದ್ದರಿಂದ ತಮ್ಮ ತಮ್ಮ ವಿಷಯವಿವೇಚನೆಯನ್ನು ತಮ್ಮತಮ್ಮ ಮೆಚ್ಚುಗೆಗೆ ಪಾತ್ರವಾಗಿರುವ ಮತಗಳಲ್ಲಿರುವ ಅಭಿನಿವೇಶಪೂರ್ವಕವಾಗಿಯೇ ಬರೆದಿರುತ್ತಾರೆ. ಕೆಲವರು ಮಾತ್ರ ನಿಷ್ಪಕ್ಷಪಾತವಾಗಿ ಬರೆದಿದ್ದಗೂ ಸರಿಯಾದ ಸಾಮಗ್ರಿಯ ಅಭಾವದಿಂದ ನಿಸ್ಸಹಾಯಕರಾಗಿ ತಿಳಿದಷ್ಟನ್ನು ಸಂಗ್ರಹಿಸಬೇಕಾಗಿಬಂದಿದೆ.

ಈಗ ನಾನು ಬರೆದಿರುವ ಪುಸ್ತಕವನ್ನು ಮೇಲೆ ಹೇಳಿದಂಥ ಗ್ರಂಥಗಳೆಲ್ಲವನ್ನೂ ಉಪಯೋಗಿಸಿಕೊಂಡೇ ಬರೆದಿರುತ್ತೇನಾದರೂ ಇದರಲ್ಲಿರುವ ಒಂದು ವಿಶೇಷವನ್ನು ಪುಸ್ತಕದ ಪ್ರಾರಂಭದಲ್ಲಿಯೇ ತಿಳಿಸಿರುತ್ತೇನೆ. ಆಚಾರ್ಯರ ಗ್ರಂಥಗಳೆಂದು ನಿರ್ವಿವಾದವಾಗಿ ಸರ್ವಸಂಮತವಾಗಿರುವ ಅವರ ಪ್ರಸ್ಥಾನತ್ರಯಭಾಷ್ಯಗಳಲ್ಲಿರುವ ಅಭಿಪ್ರಾಯಕ್ಕೆ ವಿರುದ್ಧವೆಂದು ನನಗೆ ತೋರಿದ ಯಾವ ವಿಷಯವನ್ನಾಗಲಿ ಆ ಅಭಿಪ್ರಾಯದ ಒರೆಗಲ್ಲಿಗೆ ತಿಕ್ಕಿನೋಡದೆ ಇಲ್ಲಿ ಬೆಲೆಯನ್ನು ಕಟ್ಟಿಲ್ಲ. ಅವಿರುದ್ಧವಾದ ಸ್ಥಲಗಳಲ್ಲಿಮಾತ್ರ ವಿವಿಧಗ್ರಂಥಗಳಲ್ಲಿರುವ ಅಭಿಪ್ರಾಯಗಳನ್ನು ಹೋಲಿಸಿನೋಡಿ ಅವುಗಳ ಸಾರಾಸಾರವಿವೇಕವನ್ನು ನನ್ನ ಅಲ್ಪಮತಿಗೆ ತಿಳಿದಂತೆ ಮಾಡಿ ನಿರ್ಣಯಿಸಿರುತ್ತೇನೆ.

ಹೀಗೆ ಮಾಡಿದ ನಿರ್ಣಯಗಳನ್ನು ನಿರ್ಭೀತಿಯಿಂದ ಬರೆದದ್ದರ ಫಲವಾಗಿ ಕೆಲವರಿಗೆ ಅಸಮಾಧಾನವಾಗಿದೆ ; ತತ್ತ್ವಜಿಜ್ಞಾಸುಗಳಿಗೆ ಹರ್ಷವೂ ಆಗಿದೆ. ಹೇಗಾದರೂ ಆಗಲಿ, ಭಗವತ್ಪಾದರ ಚರಿತ್ರೆಯಲ್ಲಿ ವಿನಾಕಾರಣವಾಗಿ ಆ ಮಹಾವಿಭೂತಿಪುರುಷರ ಯೋಗ್ಯತೆಗೆ ಕಲಂಕವನ್ನು ತರುವ ಯಾವ ವಿಷಯವನ್ನೂ ಯಾವ ಕಾರಣದಿಂದಲೂ ಒಪ್ಪಬಾರದೆಂಬ ಸಂಕಲ್ಪವನ್ನು ಸಾಗಿಸಿಕೊಂಡೇ ಬಂದಿದೇನೆಂಬುದೊಂದೇ ನನ್ನ ಮನಸ್ಸಿಗೆ ಸಮಾಧಾನ.

ಈ ಗ್ರಂಥವನ್ನು ಓದಿದ ಮಹಾತ್ಮರಿಗೆ ನನ್ನದೊಂದು ನಮ್ರವಿಜ್ಞಾಪನೆ ಏನೆಂದರೆ : ಆಚಾರ್ಯರ ಚರಿತ್ರೆ ಎಂದರೆ ಅವರ ಭಾಷ್ಯಗಳೇ ; ಆ ಗ್ರಂಥಗಳಲ್ಲಿರುವ ಉದಾತ್ತವಾದ ಅಭಿಪ್ರಾಯಗಳಿಂದಲೇ ಅವರ ಉಚ್ಚಸ್ಥಾನವನ್ನು ನಿರ್ಣಯಿಸಿ ಅವರ ಭಾಷ್ಯಗ್ರಂಥಗಳ ಪಠನಮನನಗಳ ಮೂಲಕವೇ ಆ ಜಗದ್ಗುರುಗಳನ್ನು ಆರಾಧಿಸಬೇಕು. ಆ ಮಹಾಮಹಿಮರಿಗೆ ನಮ್ಮ ಭಕ್ತಿಯನ್ನು ತೋರಿಸುವದಕ್ಕೆ ಇದಕ್ಕಿಂತ ಹೆಚ್ಚಿನ ಮಾರ್ಗವು ಯಾವದೂ ಇಲ್ಲ.

ಈ ಶಂಕರಭಗವತ್ಪಾದವೃತ್ತಾಂತಸಾರಸರ್ವಸ್ವವನ್ನು ಬರೆಯುವಾಗ ನನಗೆ ವಿಶೇಷವಾಗಿ ಸಹಾಯವನ್ನು ಮಾಡಿರುವ ಕೆಲವರ ಹೆಸರುಗಳನ್ನು ಇಲ್ಲಿ ಜ್ಞಾಪಿಸಿಕೊಳ್ಳುವದು ಅವಶ್ಯ. ಮೊಟ್ಟಮೊದಲನೆಯದಾಗಿ ಹೊಸಪೇಟೆಯ ವೇ|| ಬ್ರ||

ಶ್ರೀ|| ಬಿ. ನಾರಾಯಣಭಟ್ಟರವರು ಈ ಕೆಲಸಕ್ಕೆ ಬೇಕಾದ ಅನೇಕ ಗ್ರಂಥಗಳನ್ನು ಒದಗಿಸಿಕೊಟ್ಟು ಪ್ರೋತ್ಸಾಹಿಸಿರುತ್ತಾರೆ. ಎರಡನೆಯದಾಗಿ ಧಾರವಾಡದ ಜನತಾ ಲಾ ಕಾಲೇಜಿನ ಪ್ರಿನ್ಸಿಪಾಲ್ ಶ್ರೀ ನಾರಾಯಣ ರಾಮಚಂದ್ರ ಕುಲಕರ್ಣಿ ಎಂ.ಎ., ಎಲ್.ಎಲ್.ಬಿ. ರವರು 'ಶ್ರೀಶಂಕರಾಚಾರ್ಯ' ಎಂಬ ಗ್ರಂಥ(ಶ್ರೀ|| ಬಲದೇವ ಉಪಾಧ್ಯಾಯ ಎಂ.ಎ., ಸಾಹಿತ್ಯಾಚಾರ್ಯ-ಇವರು ಹಿಂದಿಭಾಷೆಯಲ್ಲಿ ಬರೆದಿರುವ ಪುಸ್ತಕ)ವನ್ನು ಎರವಲಾಗಿ ಕೊಟ್ಟು ಉಪಕಾರಮಾಡಿರುತ್ತಾರೆ. ಮೂರನೆಯದಾಗಿ ಹುಬ್ಬಳ್ಳಿಯ ಶ್ರೀಶ್ರೀ ಪರಮಹಂಸ ಅಭಿನವ ಪದ್ಮನಾಭತೀರ್ಥರು (ಪೂರ್ವಾಶ್ರಮದಲ್ಲಿ ಶ್ರೀ ಯೋಗೀಶ್ವರ ದತ್ತ ಮೂರ್ತಿದೀಕ್ಷಿತರು, ಬಂಕಾಪುರ) ಮರಾಠಿಭಾಷೆಯಲ್ಲಿ ಶ್ರೀ|| ಮಹಾದೇವ ರಾಜಾರಾಮ ಬೋಡಸ್-ಎಂಬವರು ಬರೆದಿರುವ 'ಶ್ರೀಶಂಕರಾಚಾರ್ಯ ವ ತ್ಯಾಂಚಾ ಸಂಪ್ರದಾಯ' ಎಂಬ ಗ್ರಂಥವನ್ನು ಎರವಲಾಗಿ ಕೊಟ್ಟು ಉಪಕಾರಮಾಡಿರುತ್ತಾರೆ. ಬಹುಮುಖ್ಯವಾಗಿ ಇಲ್ಲಿ ಕೃತಜ್ಞತೆಯಿಂದ ನೆನೆಸಿಕೊಳ್ಳಬೇಕಾದವರೆಂದರೆ: ಶೃಂಗೇರಿ ಜಗದ್ಗುರು ಪೀಠದ ಇತಿಹಾಸವನ್ನು ಕುರಿತು ಇಂಗ್ಲಿಷಿನಲ್ಲಿ The Throne of Transcendental Wisdom ಎಂಬ ಗ್ರಂಥವನ್ನು ಬರೆದಿರುವ ಪುದುಕೋಟೆಯ ನಿವೃತ್ತ ಡೈರೆಕ್ಟರ್ ಆಫ್ ಎಜ್ಯುಕೇಷನ್ ಶ್ರೀ|| ಕೆ. ಆರ್. ವೆಂಕಟರಾಮನ್‌ರವರು. ಇವರು ತಾವು ಬರೆದಿರುವ ಗ್ರಂಥವನ್ನು ಕೊಟ್ಟದ್ದಲ್ಲದೆ ಮಠಗಳ ವಿಷಯವಾಗಿ ವಿವಾದವು ಬಂದ ಸಂದರ್ಭಗಳಲ್ಲೆಲ್ಲ ಶೃಂಗೇರೀಪೀಠಕ್ಕೆ ಅನುಕೂಲವಾಗುವ ಹಲವು ಐತಿಹಾಸಿಕವಿಷಯಗಳನ್ನು ಕುರಿತ ಟಿಪ್ಪಣಿಗಳನ್ನು ಕಾಲಕ್ಕೆ ಸರಿಯಾಗಿ ಒದಗಿಸಿ ಸಹಾಯಮಾಡಿರುತ್ತಾರೆ. ಕೊನೆಯದಾಗಿ ಅತಿಮುಖ್ಯವಾಗಿ ಅಧ್ಯಾತ್ಮಪ್ರಕಾಶಕಾರ್ಯಾಲಯದ ಪಂಡಿತರಾದ ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಶಾಸ್ತ್ರಿಗಳವರು ಈ ಕೆಲಸಕ್ಕೆ ಮಾಡಿರುವ ಸಹಾಯವು ಅತ್ಯಮೋಘವಾಗಿದೆ. ನಾನು ಪರಿಶಿಷ್ಟಗಳ ಕರಡನ್ನು ಮಾತ್ರ ಬರೆದು ಅವರಿಗೆ ಕೊಟ್ಟಮೇಲೆ ಮೂಲಗ್ರಂಥಗಳಿಗೆ ಹೋಲಿಸುವದು, ಗ್ರಂಥವನ್ನು ಅಚ್ಚಿಗೆ ಸಿದ್ಧಪಡಿಸುವದು, ಪ್ರೂಫುಗಳನ್ನು ತಿದ್ದುವದು-ಮುಂತಾದ ಹಲವು ರೀತಿಗಳಿಂದ ಈ ಕೆಲಸವನ್ನು ಪರಿಪೂರ್ತಿಗೊಳಿಸುವ ಶ್ರಮವನ್ನು ಅವರು ವಹಿಸಿರುತ್ತಾರೆ.

ಈ ಮಹನೀಯರುಗಳಿಗೆಲ್ಲ ಅಭೀಷ್ಟಸಿದ್ಧಿಯನ್ನುಂಟುಮಾಡಲಿ!-ಎಂದು ನಾನು ಶ್ರೀಮನ್ನಾರಾಯಣಭಗವಂತನಲ್ಲಿ ಈ ಮೂಲಕವಾಗಿ ಪ್ರಾರ್ಥಿಸುತ್ತೇನೆ.

ಅಧ್ಯಾತ್ಮಪ್ರಕಾಶಕಾರ್ಯಾಲಯ,
ಹೊಳೆನರಸೀಪುರ
24—5—1963

ಗ್ರಂಥಕರ್ತ.

# ವಿಷಯಾನುಕ್ರಮಣಿಕೆ

(ಕಂಸದಲ್ಲಿರುವ ಸಂಖ್ಯೆಗಳು ಪುಟವನ್ನು ಸೂಚಿಸುವವು)

## ೧. ಆಚಾರ್ಯರ ಚರಿತ್ರದ ಸಂಗ್ರಹಕ್ಕೆ ಸಾಮಗ್ರಿ



## ೨. ಶಂಕರಾಚಾರ್ಯರ ಆವಿರ್ಭಾವಕಾಲ



## ೩. ಆಚಾರ್ಯರ ಜನ್ಮ, ತಂದೆತಾಯಿಗಳು



## ೪. ಬಾಲ್ಯ, ವಿದ್ಯಾಭ್ಯಾಸ, ಆತುರಸಂನ್ಯಾಸ



## ೫. ಗೋವಿಂದಭಗವತ್ಪಾದರಲ್ಲಿ ವೇದಾಂತಾಭ್ಯಾಸ

## ೬. ಭಾಷ್ಯಾದಿಗಳ ನಿರ್ಮಾಣ



## ೭. ಆಚಾರ್ಯ-ಕುಮಾರಿಲಸಮಾಗಮ



## ೮. ಮಂಡನಪ್ರಕರಣವಿಮರ್ಶೆ

## ೯. ಮಂಡನನೊಡನೆ ವಾದ



## ೧೦. ಉಭಯಭಾರತಿಯೊಡನೆ ವಾದ



## ೧೧. ಮಂಡನನು ಆಚಾರ್ಯರ ಶಿಷ್ಯನಾದದ್ದು



## ೧೨. ದಕ್ಷಿಣಕ್ಕೆ ಪ್ರಯಾಣ



## ೧೩. ಶೃಂಗೇರಿ

## ೧೪. ಆಚಾರ್ಯರ ಮಾತೃಭಕ್ತಿ



## ೧೫. ಆಚಾರ್ಯರ ದಿಗ್ವಿಜಯ



## ೧೬. ಸರ್ವಜ್ಞಪೀಠಾರೋಹಣ, ತಿರೋಧಾನ



## ೧೭. ಆಚಾರ್ಯರಿಂದಾಗಿರುವ ಲೋಕೋಪಕಾರ



## ೧೮. ಆಚಾರ್ಯರ ಮುಖ್ಯಗ್ರಂಥಗಳು



## ೧೯. ಆಚಾರ್ಯರ ಉಪದೇಶ



## ೨೦. ಆಚಾರ್ಯರ ವೇದಾಂತಸಂಪ್ರದಾಯ

## ೨೧. ಅದ್ವೈತವ್ಯಾಖ್ಯಾನಪ್ರಸ್ಥಾನಗಳು



## ೨೨. ಆಚಾರ್ಯಕೃತಪ್ರಕರಣಗಳು



## ೨೩. ಆಚಾರ್ಯರ ಹೆಸರಿನಲ್ಲಿರುವ ಸ್ತೋತ್ರಗಳು



## ೨೪. ಶಂಕರಾಚಾರ್ಯರೂ ತಂತ್ರಶಾಸ್ತ್ರವೂ



## ೨೫. ಆಚಾರ್ಯರು ಸ್ಥಾಪಿಸಿರುವ ಮಠಗಳು



## ೨೬. ಉಪಸಂಹಾರ



## ಪರಿಶಿಷ್ಟಗಳು

(೨) ಆಚಾರ್ಯರನ್ನು ನಿಂದಿಸುವ ಪುರಾಣಗಳು : ಪದ್ಮಪುರಾಣ (೩೮೮)– ಮಧ್ವಪರಾಮರ್ಶಕಪುರಾಣವಾಕ್ಯಗಳು (೩೮೯)- ಮಧ್ವರಾಮಾನುಜರು ಕಲಿಯ ಅಮಾತ್ಯರಾದ ಕಾಮಕ್ರೋಧಾಂಶಾವತಾರರೆಂಬ ಕಥೆ (೩೯೦)- ಸಂಸ್ಕೃತಚಂದ್ರಿಕೆ (೩೯೧). ಪುಟ ೩೮೮–೩೯೨

(೩) ಪರಮತದವರ ಅಭಿಪ್ರಾಯಗಳು : ಮಧ್ವಾಚಾರ್ಯರ ಮಹಾಭಾರತ ತಾತ್ಪರ್ಯನಿರ್ಣಯ (೩೯೨)– ಮಣಿಮಂಜರಿ (೩೯೩)- ಥಿಯಸಾಫಿಕಲ್ ಸೊಸೈಟಿಯವರ ಅಭಿಪ್ರಾಯ (೩೯೯). ಪುಟ ೩೯೨-೪೦೨

(೪) ಆಚಾರ್ಯರ ಕಾಲನಿರ್ಣಾಯಕರ ವಿವಿಧಾಭಿಪ್ರಾಯಗಳು : ಶಂಕರ ವಿಜಯಗಳು (೪೦೨)- ಅನ್ಯಮತಸ್ಥರ ಗ್ರಂಥಗಳು (೪೦೭)- ಆಧುನಿಕವಿದ್ವಾಂಸರ ಕಲ್ಪನೆಗಳು (೪೦೮). ಪುಟ ೪೦೨-೪೧೨

(೫) ಶಂಕರವಿಜಯಪಾಠಗಳು : ಆನಂದಗಿರಿ (೪೧೨)– ಚಿದ್ವಿಲಾಸೀಯಬೃಹಚ್ಛಂಕರವಿಜಯಗಳು (೪೧೩). ಪುಟ ೪೧೨-೪೧೭

(೬) ಆನಂದಗಿರೀಯ : ಆನಂದಗಿರೀಯದ ಪ್ರಾಚೀನಪಾಠ (೪೧೭)– ಆನಂದಗಿರೀಯದಲ್ಲಿರುವ ಪಾಠಾಂತರಗಳು (೪೧೮). ಪುಟ ೪೧೭-೪೧೯

(೭) ಕೂಷ್ಮಾಂಡಶಂಕರವಿಜಯ : (೪೧೯). ಪುಟ ೪೧೯–೪೨೩

(೮) ಆಚಾರ್ಯರ ಚರಿತ್ರೆಗೆ ಸಂಬಂಧಪಟ್ಟ ಸ್ತೋತ್ರಾದಿಗಳು : ಕನಕಲಕ್ಷ್ಮೀಸ್ತವ (೪೨೪)- ನಿರ್ವಾಣದಶಕ (೪೨೭)- ಮನೀಷಾಪಂಚಕಮ್ (೪೨೮)-ಲಕ್ಷ್ಮೀನೃಸಿಂಹ ಕರಾವಲಂಬನಸ್ತೋತ್ರ (೪೩೦)– ಹಸ್ತಾಮಲಕಸ್ತೋತ್ರ (೪೩೨)- ತೋಟಕಪ್ರಕರಣ (೪೩೪)- ಶಿವಭುಜಂಗಪ್ರಯಾತಸ್ತೋತ್ರ (೪೩೬)- ವಿಷ್ಣುಭುಜಂಗಪ್ರಯಾತಸ್ತೋತ್ರ (೪೪೨). ಪುಟ ೪೨೪–೪೪೪

(೯) ಮಠಾಮ್ನಾಯಗಳು, ಗುರುಪರಂಪರೆಯ ಪಟ್ಟಿಗಳು : ಮಠಾಮ್ನಾಯ (೪೪೪)- ಮಠಾಮ್ನಾಯ (೪೪೬)- ಮಠಾಮ್ನಾಯಭಾಗ (೪೫೨)- ಮಠಾಮ್ನಾಯ ಸೇತು (೪೫೨)- ಶೃಂಗೇರೀಪೀಠಗುರುಪರಂಪರೆ (೪೬೫)- ಕಾಂಚೀಮಠದ ಗುರುಪರಂಪರೆ (೪೭೩). ದ್ವಾರಕಾಪೀಠಗುರುಪರಂಪರೆ (೪೮೫)- ಗೋವರ್ಧನಮಠ (೪೯೨)– ಜ್ಯೋತಿರ್ಮಠ (೪೯೫)– ಸುಮೇರು ಮಠ (೪೯೭)- ಉಪಪೀಠಗಳು : ಕೂಡಲಿಯ ಮಠ (೪೯೮). ಶಿವಗಂಗೆಯ ಮಠ (೫೦೫)- ಸಂಕೇಶ್ವರ ಮಠ (೫೦೬)- ಆವನೀಮಠ (೫೧೧)- ಶ್ರೀರಾಮಚಂದ್ರಾಪುರಮಠ (೫೧೧)– ವಿರೂಪಾಕ್ಷಮಠ (೫೧೩)- ಪುಷ್ಪಗಿರಿ ಮಠ (೫೧೪)- ಉಪಸಂಹಾರ (೫೧೫). ಪುಟ ೪೪೪–೫೧೬

# ಸಹಾಯಕಗ್ರಂಥಗಳು

| ಗ್ರಂಥಗಳ ಹೆಸರು | ಸಂಕೇತ |
|---|---|

## ಶಂಕರವಿಜಯಗಳು

| | | |
|---|---|---|
| ೧. | (a) ಆನಂತಾನಂದಗಿರೀಯ ಶಂಕರವಿಜಯ (ನೇ. ವೆಂಕಟಸುಬ್ಬಾಶಾಸ್ತ್ರಿ ಮುದ್ರಿತ–ತೆಲುಗು, ಮದ್ರಾಸ್, ೧೮೬೭) | ಆ. ಗಿ. |
| | (b) ಆನಂತಾನಂದಗಿರೀಯ ಶಂಕರವಿಜಯ (ದೇವನಾಗರೀ–ಕಲ್ಕತ್ತ ಮುದ್ರಣ, 1881) | ದೇ. |
| ೨. | ಕೇರಳೀಯ ಶಂಕರವಿಜಯ[1] (ನಾವು ನೋಡಿಲ್ಲ) | |
| ೩. | ಕೂಷ್ಮಾಂಡಶಂಕರವಿಜಯ ಅಥವಾ ಶಂಕರಕಥಾಮೃತಸಾರ (ಎಡತೊರೆಯ ಯೋಗಾನಂದಸ್ವಾಮಿಗಳಿಂದ ಪ್ರಕಟಿಸಲ್ಪಟ್ಟದ್ದು, ಬೆಂಗಳೂರು ಬುಕ್ ಡಿಪೋ ಪ್ರೆಸ್–ಬೆಂಗಳೂರು-1905) | ಕೂ. ಶಂ. |
| ೪. | ಚಿದ್ವಿಲಾಸೀಯ ಶಂಕರವಿಜಯವಿಲಾಸ (ವಾವಿಳ್ಳ ರಾಮಸ್ವಾಮಿಶಾಸ್ತ್ರಿ, ಮದ್ರಾಸ್– ಇವರಿಂದ ಪ್ರಕಾಶಿತ ! ಯುವ. ಸಂ. 1875) | ಚಿ. ಶಂ. |
| ೫. | ಮಾಧವೀಯ ಶಂಕರದಿಗ್ವಿಜಯ ('ಸಂಕ್ಷೇಪಶಂಕರವಿಜಯ' ಎಂದೂ ಹೆಸರು (ಅದ್ವೈತರಾಜ್ಯಲಕ್ಷ್ಮೀ ಟೀಕಾಸಹಿತ, ಆನಂದಾಶ್ರಮ, ಪೂನಾ, 1891ರಲ್ಲಿ ಮುದ್ರಿತ) | ಮಾ. ಶಂ. |
| ೬. | ವ್ಯಾಸಾಚಲೀಯ ಶಂಕರವಿಜಯ (ಕೈಬರಹಪ್ರತಿ, ಓರಿಯಂಟಲ್ ಲೈಬ್ರರಿ. ಮದ್ರಾಸ್- ಇವರಿಂದ ಪಡೆದದ್ದು) | ವ್ಯಾ. ಶಂ. |
| ೭. | ಬೃಹಚ್ಛಂಕರವಿಜಯ* (ನಾವು ನೋಡಿಲ್ಲ) | |
| ೮. | ಪ್ರಾಚೀನಶಂಕರವಿಜಯ* (ನಾವು ನೋಡಿಲ್ಲ) | |
| ೯. | ಶಂಕರವಿಜಯಚೂರ್ಣಿಕಾ (ನಿರ್ಣಯಸಾಗರ ಮುದ್ರಣ) | ಶಂ. ಚೂ. |
| ೧೦. | ಭಗವತ್ಪಾದಾಭ್ಯುದಯಮ್ (ಲಕ್ಷ್ಮಣಸೂರಿವಿರಚಿತಮ್) (ವಾಣೀವಿಲಾಸ ಪ್ರೆಸ್-ಶ್ರೀರಂಗ ಮುದ್ರಣ 1927) | |

1. ಗೋವಿಂದನಾಥಕೃತ 'ಶಂಕರಾಚಾರ್ಯಚರಿತ ಎಂಬುದು ಈ 'ಕೇರಳೀಯ ಶಂಕರವಿಜಯ'ವಾಗಿರಲಾರದು ಎಂದು ಕೋರುತ್ತದೆ.

* ಇವು ಕುಂಭಕೋಣ ಶಂಕರಮಠದಲ್ಲಿರುವದಾಗಿ ವಾರ್ತೆ.

ಗ್ರಂಥಗಳ ಹೆಸರು ಸಂಕೇತ

೧೧. ಶಂಕರಮಂದಾರಸೌರಭ (ನೀಲಕಂಠಕೃತ)
(ಅರ್ವಾಚೀನ ಕೈಬರಹಪ್ರತಿ)

೧೨. ಶಂಕರಾಚಾರ್ಯಚರಿತಮ್(ಗೋವಿನ್ದನಾಥವಿರಚಿತಮ್)ಗೋ.ಶಂ.ಚ.
(ಕೇರಳ ಪಬ್ಲಿಷಿಂಗ್ ಹೌಸ್, 1926)

೧೩. (a) ಶಂಕರಾಭ್ಯುದಯ (ನೀಲಕಂಠಶಾಸ್ತ್ರಿ ಕೃತ 1926)
(b) ಶಂಕರಾಭ್ಯುದಯ (ರಾಜಚೂಡಾಮಣಿಕೃತ ;
ನಾವು ನೋಡಿಲ್ಲ)

೧೪. (a) ಶಂಕರದಿಗ್ವಿಜಯಸಾರ (ಸದಾನಂದಕೃತ)
(b) ಶಂಕರದಿಗ್ವಿಜಯಸಾರ (ಅರ್ವಾಚೀನ)
(ಶ್ರೀನಿವಾಸಕೇದಲಾಯಕೃತ 1959)

೧೫. ಶಂಕರಕಥಾಸುಧಾನಿಧಿ (ಕೈಬರಹಪ್ರತಿ, ರಾಮಶರ್ಮರಚಿತ)

## ಸಂಪ್ರದಾಯಗ್ರಂಥಗಳು

೧. ಗುರುರತ್ನಮಾಲಿಕಾ (ಆತ್ಮಬೋಧಕೃತ ಗು. ರ.
ಸುಷಮಾವ್ಯಾಖ್ಯಾಸಹಿತ)
(ಕಲಾರತ್ನಾಕರ ಪ್ರೆಸ್, ಮದ್ರಾಸ್ 1896)

೨. ಪುಣ್ಯಶ್ಲೋಕಮಂಜರೀ
(ಮದ್ರಾಸ್ ಕಲಾರತ್ನಾಕರಶಾಲೆ, ಶಾ. ಶ. ೧೮೧೮)

೩. ಶಿವರಹಸ್ಯ ಶಿ. ರ.

೪. ಮಾರ್ಕಣ್ಡೇಯಸಂಹಿತಾ

೫. ಗುರುವಂಶಕಾವ್ಯ (ನಾವು ನೋಡಿಲ್ಲ)

೬. ಗುರುಪರಂಪರಾಸ್ತೋತ್ರಮ್
(ವಾಣೀವಿಲಾಸ ಪ್ರೆಸ್, ಶ್ರೀರಂಗಮ್)

೭. ಮಠಾಮ್ನಾಯಗಳು–ಮಠಾಮ್ನಾಯಸೇತು–
ಮಹಾನುಶಾಸನ
(ಕಾಂಚೀ ಮತ್ತು ದ್ವಾರಕಾಪೀಠದವರ ಪ್ರಕಟನೆಗಳು)

## ವಿಮರ್ಶಾತ್ಮಕಗ್ರಂಥಗಳು

1. Sri Shankaracharya and
His Kamakoti Peetham NKVS
(By N·K· Venkateshnm Pantulu M·A·)
A· D, 1931

ಗ್ರಂಥಗಳ ಹೆಸರು | ಸಂಕೇತ

2. The Throne of Transcendental Wisdom KRTTW
(By K.R. Venkataraman) A.D. 1959)

3 Shankaracharya The Great and His Successors in Kanchi NVSSK
(By N. Venkataraman M.A.) A.D. 1923

4. Sri Sringeri Sharada Mutt
(By Kakarala S. Sundararamaiah) A.D. 1958

5. Shankaracharya His Life & Times CNKS
(By C.N. Krishna Swami Iyer M.A.L.T.)

6. ಶ್ರೀ ಶಂಕರಾಚಾರ್ಯ (ಶ್ರೀ ಬಲದೇವಉಪಾಧ್ಯಾಯ, ಎಂ. ಎ. ಸಾಹಿತ್ಯಾಚಾರ್ಯ)
(ಹಿಂದೀ ಪುಸ್ತಕ) ಕ್ರಿ. 1950 ಬಲ, ಶಂ.

7. ಶಂಕರಚರಿತ್ರಕಾಲವಿಚಾರ
(ಬೆಳ್ಳಾವೆ ಸೋಮನಾಥಯ್ಯನವರು,
ಮುದ್ರಣ ; ಐರಿಷ್ ಪ್ರೆಸ್, ಬೆಂಗಳೂರು 1912)

8. ಜಗದ್ಗುರು ಶ್ರೀಶಂಕರಭಗವತ್ಪಾದಾಚಾರ್ಯಚರಿತ್ರಮು ಶ್ರೀ.ಶಂ.
(ಶ್ರೀಪ್ಮಲೂರು ಕೃಷ್ಣಸ್ವಾಮಯ್ಯಗಾರು, ತೆಲುಗು 1928)

9. ಆಚಾರ್ಯ ಶ್ರೀಮಚ್ಛಂಕರಭಗವತ್ಪೂಜ್ಯಪಾದರು ಕೂ.ಶಂ.
(ಕೂಡಲೀ ಪೀಠಾಧ್ಯಕ್ಷರ ಭಾಷಣ, 1953)

10. ಶಂಕರಾಚಾರ್ಯ ವ ತ್ಯಾಂಚಾ ಸಂಪ್ರದಾಯ (ಮರಾಠಿ) ಮಹಾದೇವ. ರಾಜಾರಾಮಬೋಡಸ್ ಎಂ.ಎ ಎಲ್.ಎಲ್.ಬಿ., 1923
ಬೋ. ಶಂ.

11 ಶ್ರೀಶಾಂಕರಪೀಠತತ್ತ್ವದರ್ಶನಮ್ ಚೌಖಂಬಾ ಸಂಸ್ಕೃತ ಪುಸ್ತಕಾಲಯ ವಾರಣಾಸೀ (1935) ಶಾಂ. ಪೀ. ತ. ದ.

12. ಗಂಗಾದಿತೀರ್ಥವಿಜಯಯಾತ್ರಾ (ಕಾಂಚೀಪೀಠಾಧಿಪಾನಾಮ್)
(Viswamitra Press, Calcutta) ಕ್ರಿ, 1934

13. ಹವ್ಯಕಸಮಾಜ ಮತ್ತು ಶ್ರೀಗುರುಮಠದ ಸಂಕ್ಷಿಪ್ತ ಇತಿಹಾಸ ಹ. ಗು. ಇ.
(ರಾಮಚಂದ್ರಾಪುರಮಠ, ತೀರ್ಥಹಳ್ಳಿ) ಕ್ರಿ. ಶ. 1958

| ಗ್ರಂಥಗಳ ಹೆಸರು | ಸಂಕೇತ |
|---|---|
| 14. ದ್ವಾರಕಾಜಗದ್ಗುರು ಸಂಸ್ಥಾನದ ಸಂಕ್ಷಿಪ್ತ ಇತಿಹಾಸ (ಕನ್ನಡ) ಕ್ರಿ. ಶ. 1940 | |
| 15. ಶಾರದಾಪೀಠ ದ್ವಾರಕಾಸಂಸ್ಥಾನದ ಗುರುಪರಂಪರೆ ಕ್ರಿ. ಶ. 1957 | |
| 16. ಜಗದ್ಗುರುಪಾರಂಪರ್ಯಸ್ತುತಿಃ (ಕೂಡಲೀ ಶೃಂಗೇರೀ ಸಂಸ್ಥಾನಮ್) ಕ್ರಿ. 1946 | |
| 17. ವಿರೂಪಾಕ್ಷಿ ಪೀಠ ಗುರುಪರಂಪರೆ (ಐಂದ್ರಾವತಿ ಪ್ರೆಸ್, ಕರ್ನೂಲ್ 1931) | |
| 18. ಕೂಡಲಿಶೃಂಗೇರಿಮಠೀಯ ಪ್ರಾಚೀನಶಾಸನಲೇಖನಸಂಗ್ರಹ | |

## ಪರಾಮೃಷ್ಟವಾಗಿರುವ ಆಕರಗ್ರಂಥಗಳು

| | |
|---|---|
| ಬ್ರಹ್ಮಸೂತ್ರಭಾಷ್ಯ (ಆಚಾರ್ಯಭಗವತ್ಪಾದಕೃತ) | ಬ್ರ. ಸೂ. ಭಾ |
| ಗೀತಾಭಾಷ್ಯ ( ,, ) | ಗೀ. ಭಾ |
| ತೈತ್ತಿರೀಯೋಪನಿಷದ್ಭಾಷ್ಯ ,, | ತೈ. ಭಾ |
| ಬೃಹದಾರಣ್ಯಕೋಪನಿಷದ್ಭಾಷ್ಯ ,, | ಬೃ. ಭಾ |
| ಛಾಂದೋಗ್ಯೋಪನಿಷದ್ಭಾಷ್ಯ (ಆಚಾರ್ಯಭಗವತ್ಪಾದಕೃತ) | ಛಾಂ. ಭಾ |
| ಮುಂಡಕೋಪನಿಷದ್ಭಾಷ್ಯ ,, | ಮುಂ. ಭಾ |
| ಕಾಠಕೋಪನಿಷದ್ಭಾಷ್ಯ ,, | ಕಾ. ಭಾ |
| ಗೌಡಪಾದಕಾರಿಕಾ (ಮಾಂಡೂಕ್ಯಕಾರಿಕಾ)ಭಾಷ್ಯ ,, | ಗೌ. ಕಾ. ಭಾ |
| ಬಾದರಾಯಣಕೃತ ವೇದಾಂತಸೂತ್ರಗಳು | ವೇ. ಸೂ |
| ಶ್ರೀಮದ್ಭಾಗವತ | ಭಾಗ |
| ನೈಷ್ಕರ್ಮ್ಯಸಿದ್ಧಿ (ಸುರೇಶ್ವರಾಚಾರ್ಯಕೃತ) | ನೈ. ಸಿ |
| ಬೃಹದಾರಣ್ಯಕವಾರ್ತಿಕ ,, | ಬೃ. ವಾ |
| ಉಪದೇಶಸಾಹಸ್ರಿ (ಗದ್ಯ) | ಉಪ |
| ಶ್ಲೋಕವಾರ್ತಿಕ | ಶ್ಲೋ. ವಾ |
| ತಂತ್ರವಾರ್ತಿಕ | ತಂ. ವಾ |
| ಪ್ರಮಾಣವಾರ್ತಿಕಭಾಷ್ಯ (ಧರ್ಮಕೀರ್ತಿಕೃತ) | ಪ್ರ. ವಾ. ಭಾ |
| ರಾಮತೀರ್ಥವ್ಯಾಖ್ಯಾ (ದಕ್ಷಿಣಾಮೂರ್ತಿಸ್ತೋತ್ರಕ್ಕೆ) | ರಾ. ತೀ |
| ಬ್ರಹ್ಮಸಿದ್ಧಿ (ಮಂಡನಮಿಶ್ರವಿರಚಿತ) | ಬ್ರ. ಸಿ |
| ನಿರ್ಣಯಸಿಂಧು | ನಿ. ಸಿಂ. |

| ಗ್ರಂಥಗಳ ಹೆಸರು | ಸಂಕೇತ |
|---|---|
| ಜೈಮಿನೀಯಸೂತ್ರ | ಜೈ. ಸೂ. |
| ತೈತ್ತಿರೀಯಬ್ರಾಹ್ಮಣ | ತೈ. ಬ್ರಾ. |
| ಪಂಚಪಾದಿಕಾ–ವಿವರಣವ್ಯಾಖ್ಯಾಸಹಿತ (ಪೋಲಗಂ ಶ್ರೀರಾಮಶಾಸ್ತ್ರಿಗಳು ಸಂಪಾದಿಸಿರುವದು) | ಪೋ. ಪಂ. ಪಾ. |
| ಕಲ್ಪತರುವ್ಯಾಖ್ಯಾನ–ಪರಿಮಳವ್ಯಾಖ್ಯಾನ | ಕ. ತ. ಪ. |
| ವಿವರಣವ್ಯಾಖ್ಯಾನ (ಪುಟ) | ವಿ. ಪು. |

## ಇತರಗ್ರಂಥಗಳು

| | |
|---|---|
| ಮಣಿಮಂಜರಿ | |
| ಮಣಿಮಂಜರೀಭೇದಿನೀ | ಮಣಿ. ಭೇ. |
| ಪ್ರಭಾತ (ವಾರಪತ್ರಿಕೆ, ಮಂಗಳೂರು) | |
| Gowdeswar Gnanottama Shivacharya (By G. Srinivasa Iyer) | GGS |
| The Kumbakonam Mutt Claims (R. Krishna Swamy Iyer 1959) | KMC |

ಸೂಚನೆ :– ಈ ಪುಸ್ತಕದಲ್ಲಿ ಆಧಾರಗ್ರಂಥಗಳಾಗಿ ಉಪಯೋಗಿಸಿರುವ ಗ್ರಂಥಗಳಿಗೆಲ್ಲ ಸಂಕೇತಗಳನ್ನು ಅಲ್ಲಲ್ಲಿ ಕೊಟ್ಟಿರುತ್ತೇವೆ.

॥ ಶ್ರೀ ಗುರುಭ್ಯೋ ನಮಃ ॥

# ಶ್ರೀಶಂಕರಭಗವತ್ಪಾದವೃತ್ತಾಂತಸಾರಸರ್ವಸ್ವ

**ಓಂ ನಮೋ ನಾರಾಯಣಾಯ, ನಮೋ ಬಾದರಾಯಣಾಯ, ನಮಃ ಶಂಕರಾಯ**

—೦—

## ೧. ಆಚಾರ್ಯರ ಚರಿತ್ರದ ಸಂಗ್ರಹಕ್ಕೆ ಸಾಮಗ್ರಿ

### ಗ್ರಂಥರಚನೆಯ ಉದ್ದೇಶ

೧. ಶ್ರೀಮಚ್ಛಂಕರಭಗವತ್ಪಾದರವರ ಚರಿತ್ರೆ, ಅವರಿಂದಾಗಿರುವ ಲೋಕೋಪಕಾರ, ಅವರು ಬರೆದಿರುವ ಗ್ರಂಥಗಳು, ಅವರ ಉಪದೇಶಗಳು–ಮುಂತಾದವುಗಳ ನಿಜವನ್ನು ಅರಿತುಕೊಳ್ಳಬೇಕೆನ್ನುವವರು ಆ ಆಚಾರ್ಯವರ್ಯರ ವಿಷಯಕ್ಕೆ ರಚಿತವಾಗಿರುವ ಕಾವ್ಯಗಳಲ್ಲಿ ಕಾಣಬರುವ ವಿವಿಧಕಲ್ಪನೆಗಳ ಮತ್ತು ಆಧುನಿಕ ಪುರಾತತ್ತ್ವವಿಮರ್ಶಕರ ಊಹಾಪೋಹಗಳ ಚಕ್ರಭ್ರಮಣಕೋಟಿಯೊಳಗಿಂದ ಹೇಗೋ ಹೊರಕ್ಕೆ ಬಂದು ತಮತಮಗೆ ಮಾನ್ಯವೆಂದು ತೋರುವ ತೀರ್ಮಾನಗಳಿಂದಲೇ ತೃಪ್ತರಾಗಬೇಕಾಗಿದೆ– ಎಂಬುದೊಂದು ವಿಷಾದಕರವಾದ ಸತ್ಯವು. ಆದರೂ ಈ ದುರ್ಘಟಕಾರ್ಯದಲ್ಲಿ ತೊಡಗಿರುವವರ ವಿಚಾರಘರ್ಷಣೆಯು ಈಗ ಎಲ್ಲಿಯವರೆಗೆ ಬಂದು ನಿಂತಿದೆ ? ಇದೇ ವಿಷಯದಲ್ಲಿ ಇನ್ನೂ ತೃಪ್ತಿಕರವಾದ ತೀರ್ಮಾನಗಳನ್ನು ಮಾಡಿಕೊಳ್ಳುವ ವಿಮರ್ಶೆಗೆ ಅವಕಾಶವಿದೆಯೆ ?– ಎಂದು ಕೇಳುವವರ ಕುತೂಹಲನಿವೃತ್ತಿಗಾಗಿ ಈ ಗ್ರಂಥರಚನೆಯ ಪ್ರಯತ್ನವನ್ನು ನಾವು ಮಾಡಿರುತ್ತೇವೆ.

ಈವರೆಗೆ ಆಚಾರ್ಯರ ವಿಷಯದಲ್ಲಿ ಪ್ರಕಾಶಕ್ಕೆ ಬಂದಿರುವ ಗ್ರಂಥಗಳಲ್ಲಿ ಆಯಾ ಶಂಕರಪೀಠಗಳ ಸಂಪ್ರದಾಯಕ್ಕೆ ಒಪ್ಪಾಗಿರುವಂತೆ ವಿಷಯಗಳನ್ನು ಸಂಗ್ರಹಿಸಿ ಬರೆದಿರುವ ಚರಿತ್ರೆಗಳೂ ವಿಮರ್ಶನಗ್ರಂಥಗಳೂ ಒಂದು ಪಂಗಡ; ಈ ಗ್ರಂಥಗಳನ್ನು ಉಪಯೋಗಿಸಿಕೊಂಡು ಯಾವದೊಂದು ಸಂಪ್ರದಾಯದ ಅಭಿಮಾನವನ್ನೂ ತಾಳದೆ ಐತಿಹಾಸಿಕದೃಷ್ಟಿಯಿಂದ ನಿಜವನ್ನು ಊಹಿಸಿ ತಮ್ಮ ತೀರ್ಪನ್ನು ಬರೆದಿರುವ ಗ್ರಂಥಗಳು ಇನ್ನೊಂದು ಪಂಗಡ. ನಿಷ್ಪಕ್ಷಪಾತದಿಂದ ನಿಜವನ್ನರಿತುಕೊಳ್ಳಬೇಕೆನ್ನುವವರಿಗೆ ಈ ಎರಡನೆಯ ಪಂಗಡದವರ ಗ್ರಂಥಗಳಿಂದಲೇ ಹೆಚ್ಚು ಪ್ರಯೋಜನವೆಂಬುದರಲ್ಲಿ ಸಂಶಯವಿಲ್ಲ. ಆದರೆ ಇಂಥ ತೀರ್ಪುಗಳನ್ನು ನ್ಯಾಯಾಲಯದವರು ತಮಗೆ ಸಿಕ್ಕಿರುವ ಸಾಕ್ಷಿಗಳ ಅಭಿಪ್ರಾಯದಿಂದಲೇ ಸಿದ್ಧಾಂತಕ್ಕೆ ಬರುವಂತೆ ಗ್ರಂಥಕಾರರ ಬಹುಮತದಿಂದಮಾತ್ರವೇ ರೂಪಿಸಿಕೊಳ್ಳು

ವದು ಅಷ್ಟು ಸಮಂಜಸವೆಂದು ನಮಗೆ ಕಾಣುವದಿಲ್ಲ. ಆಚಾರ್ಯರ ವಿಷಯಕ್ಕೆ ಬರೆದಿರುವ ಶಂಕರವಿಜಯಗಳನ್ನೂ ಇತರ ಐತಿಹಾಸಿಕಸಾಮಗ್ರಿಗಳನ್ನೂ ತುಲನಾತ್ಮಕದೃಷ್ಟಿಯಿಂದ ಉಪಯೋಗಿಸಿಕೊಳ್ಳುವದೇ ಅಲ್ಲದೆ ಆಚಾರ್ಯರ ಗ್ರಂಥಗಳೆಂದು ನಿಃಸಂದಿಗ್ಧವಾಗಿ ಗೊತ್ತಾಗಿರುವ ಕೃತಿಗಳನ್ನೂ ಲೆಕ್ಕಕ್ಕೆ ತೆಗೆದುಕೊಂಡು ಅವುಗಳಿಗೆ ಅವಿರುದ್ಧವಾಗಿಯೇ ಇತರಸಾಮಗ್ರಿಗಳನ್ನೂ ಅಂಗೀಕರಿಸುವದು ಹೆಚ್ಚು ತೃಪ್ತಿಕರವಾದೀತೆಂದು ನಮ್ಮ ಭಾವನೆಯಿದೆ. ವೇದಾಂತವಿಚಾರದ ಇತಿಹಾಸವನ್ನು ತಿಳಿಯಬೇಕೆನ್ನುವವರಿಗೆ ಆಚಾರ್ಯರ ಗ್ರಂಥಗಳಂತೆ ಅವರ ಶಿಷ್ಯಪ್ರಶಿಷ್ಯಪರಂಪರೆಯವರ ಗ್ರಂಥಗಳೂ ಅವಶ್ಯವಾಗಿ ಪರೀಕ್ಷಣೀಯಗಳಾಗಿರುವವೆಂಬುದು ಸ್ಪಷ್ಟವೇ ಆಗಿದೆ. ಆದರೆ ಆಚಾರ್ಯರ ಚರಿತ್ರೆಯನ್ನಾಗಲಿ ಅವರ ಉಪದೇಶವನ್ನಾಗಲಿ ಗೊತ್ತುಪಡಿಸುವದಕ್ಕೆ ಹೊರಟಿರುವಾಗ ಅವರ ಮೂಲಗ್ರಂಥಗಳಲ್ಲಿರುವ ಅಭಿಪ್ರಾಯಗಳಿಗೆ ಅಗ್ರಸ್ಥಾನವನ್ನು ಕೊಡುವದು ಅತ್ಯವಶ್ಯವು. ಆದ್ದರಿಂದ ಈ ದೃಷ್ಟಿಯಿಂದಲೇ ನಾವು ಆಚಾರ್ಯರ ಚರಿತ್ರಾದಿಗಳ ಸತ್ಯತೆಯನ್ನು ನಿರ್ಧರಿಸುವದಕ್ಕೆ ಹೊರಟಿರುತ್ತೇವೆ. ಭಗವತ್ಪಾದವಿಷಯಕವಾದ ಮಿಕ್ಕ ಗ್ರಂಥಗಳಿಗೂ ಈ ಗ್ರಂಥಕ್ಕೂ ತುಲನೆಯನ್ನು ಮಾಡುವಾಗ ಈ ವಿಶೇಷವನ್ನು ಮನಸ್ಸಿನಲ್ಲಿಟ್ಟೇ ನಮ್ಮ ಅಭಿಪ್ರಾಯಗಳಿಗೆ ಬೆಲೆಯನ್ನು ಕಟ್ಟಬೇಕೆಂದು ವಾಚಕರನ್ನು ಬೇಡಿಕೊಳ್ಳುತ್ತೇವೆ.

## ಆಧಾರಗ್ರಂಥಗಳು, ಶಂಕರವಿಜಯಗಳು

೨. ಚರಿತ್ರೆಯ ವಿಷಯಕ್ಕೆ ಮೂಲಾಧಾರವಾಗಿರುವ ಗ್ರಂಥಗಳೆಂದರೆ **ಶಂಕರವಿಜಯಗಳೆಂಬ** ಹೆಸರಿನ ಕಾವ್ಯಗಳು. ಈ ಹೆಸರಿನ ಇಪ್ಪತ್ತೆರಡು ಗ್ರಂಥಗಳನ್ನು ಶ್ರೀಬಲದೇವ ಉಪಾಧ್ಯಾಯರೆಂಬವರು ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿರುತ್ತಾರೆ. ಅವುಗಳಲ್ಲಿ ಪ್ರಕಟವಾಗದಿರುವವೇ ಬಹಳ ಇವೆ. ನಾವು ಕಣ್ಣಾರೆ ನೋಡಿರುವವು ಇವು ; **ವ್ಯಾಸಾಚಲೀಯ ಶಂಕರವಿಜಯ, ಮಾಧವೀಯ ಸಂಕ್ಷೇಪಶಂಕರಜಯ, ಚಿದ್ವಿಲಾಸೀಯ ಶಂಕರವಿಜಯವಿಲಾಸ, ಅನಂತಾನಂದಗಿರೀಯ ಶಂಕರವಿಜಯ, ಸದಾನಂದವ್ಯಾಸಕೃತ ಶಂಕರದಿಗ್ವಿಜಯಸಾರ** (ಕೈಬರಹ, ಅಪೂರ್ಣ), **ಗುರುರತ್ನಮಾಲಾ-ಸುಷಮಾಸಹಿತ, ಶಂಕರಮಂದಾರಸೌರಭ** (ನೀಲಕಂಠಕೃತ), **ಶಂಕರಕಥಾಸುಧಾನಿಧಿ** (ಕೈಪ್ರತಿ, ರಾಮಶರ್ಮವಿರಚಿತ), **ಶಂಕರಚರಿತ್ರಮ್** (ಶಂಕರವಿಜಯಚೂರ್ಣಿಕಾ, ಗುರುನಾಥಕೃತ), **ಶ್ರೀಶಂಕರಾಭ್ಯುದಯ** (ನೀಲಕಂಠಶಾಸ್ತ್ರಿಕೃತ), **ಭಗವತ್ಪಾದಾಭ್ಯುದಯ** (ಲಕ್ಷ್ಮಣಸೂರಿವಿರಚಿತ), **ಶಂಕರದಿಗ್ವಿಜಯಸಾರ** (ಅರ್ವಾಚೀನ, ಶ್ರೀನಿವಾಸಕೇದಲಾಯಕೃತ). ಹೀಗೆ ಶಂಕರವಿಜಯಗಳು ಅನೇಕವಾಗಿದ್ದರೂ ಅವುಗಳಲ್ಲಿ ಯಾವವೂ ಆಚಾರ್ಯರ ಕಾಲದವು

ಗಳಲ್ಲವಾದ್ದರಿಂದ ಅವುಗಳಲ್ಲಿ ವರ್ಣಿತವಾಗಿರುವ ವಿಷಯಗಳಿಗೆ ಐತಿಹಾಸಿಕ ದೃಷ್ಟಿಯಿಂದ ಹೆಚ್ಚಿನ ಬೆಲೆಯೇನೂ ಇಲ್ಲ. ಆದರೂ ಅವನ್ನು ಬಿಟ್ಟರೆ ನಮಗೆ ಮತ್ತೆ ಯಾವ ಮೂಲವೂ ಇಲ್ಲದ್ದರಿಂದ ಅವುಗಳಲ್ಲಿ ಸರ್ವಸಂಮತವಾದ ವಿಷಯ ಗಳನ್ನು ಆರಿಸಿಕೊಂಡು ಯಥಾಯೋಗ್ಯವಾಗಿ ಅವುಗಳಲ್ಲಿ ವಿಶ್ವಾಸವನ್ನಿಡ ಬೇಕಾಗಿರುತ್ತದೆ.

## ಮಾಧವೀಯ ಸಂಕ್ಷೇಪಶಂಕರಜಯ

೩. ಶಂಕರವಿಜಯಗಳೆಂದು ಪ್ರಸಿದ್ಧವಾಗಿರುವ ಗ್ರಂಥಗಳ ಕಾಲವನ್ನು ನಿರ್ಣಯಿಸುವದು ಕಷ್ಟವಾಗಿದೆ. ಇವುಗಳಲ್ಲಿ ತಿಳಿಸಿರುವ ಚರಿತ್ರೆಯ ವಿವರ ಗಳನ್ನು ಎಷ್ಟರಮಟ್ಟಿಗೆ ನಂಬಬಹುದೆಂಬುದಕ್ಕೆ ನಮ್ಮ ಅಭಿಪ್ರಾಯವನ್ನು ಅಲ್ಲಲ್ಲಿಯೇ ಕೊಡುತ್ತಾಹೋಗುವೆವು. ಈಗ ನಾವು ಕೊಡುವ ಇವುಗಳ ಸಾಮಾನ್ಯವಿವರಗಳನ್ನು ನೆನಪಿನಲ್ಲಿಟ್ಟಿದ್ದರೆ ಮುಂದೆ ನಮ್ಮ ಅಭಿಪ್ರಾಯಗಳ ಬೆಲೆಯನ್ನು ಗೊತ್ತುಮಾಡುವದಕ್ಕೆ ವಾಚಕರಿಗೆ ಸಹಾಯವಾದೀತು.

ಮಾಧವೀಯ ಶಂಕರವಿಜಯವೆಂದು ಪ್ರಸಿದ್ಧವಾಗಿರುವ ಗ್ರಂಥಕ್ಕೆ 'ಸಂಕ್ಷೇಪಶಂಕರಜಯ'ವೆಂದೇ ಕವಿಯು ಪ್ರತಿಯೊಂದು ಸರ್ಗದ ಅಂತ್ಯದಲ್ಲಿ ಹೆಸರನ್ನು ಕೊಟ್ಟಿರುತ್ತಾನೆ. ಇದು ಸುಪ್ರಸಿದ್ಧವಿದ್ಯಾರಣ್ಯಸ್ವಾಮಿಗಳವರು ಪೂರ್ವಾಶ್ರಮದಲ್ಲಿ ಮಾಧವಾಚಾರ್ಯನೆಂಬ ಹೆಸರಿನಿಂದ ಬರೆದದ್ದೆಂದು ಬಹು ಜನರ ನಂಬಿಕೆಯಿದೆ. ಆದರೆ ಈ ನಂಬಿಕೆಗೆ ಮಂಗಲದಲ್ಲಿರುವ ವಿದ್ಯಾತೀರ್ಥರ ಸ್ಮರಣೆಯನ್ನೂ, 'ಇತಿ ಶ್ರೀಮಾಧವೀಯೇ' ಎಂದು ಬರೆದಿರುವ ಸರ್ಗಸಮಾಪ್ತಿ ವಾಕ್ಯವನ್ನೂ ಬಿಟ್ಟರೆ ಮತ್ತೆ ಯಾವ ಆಧಾರವೂ ಇಲ್ಲ. ಇದನ್ನು ಶ್ರೀವಿದ್ಯಾರಣ್ಯರು ಬರೆದಿರಲಾರರೆಂಬುದಕ್ಕೆ ಕಾರಣಗಳಲ್ಲಿ ಕೆಲವನ್ನು ಇಲ್ಲಿ ಕೊಡುವೆವು ;

(1) ಶೃಂಗೇರಿಯಲ್ಲಿ ಪೀಠಾಧ್ಯಕ್ಷರಾಗಿದ್ದ ಶ್ರೀಸಚ್ಚಿದಾನಂದಭಾರತೀಸ್ವಾಮಿಗಳ ವರ ಅಪ್ಪಣೆಯಂತೆ ('ಸಚ್ಚಿದಾನನ್ದಭಾರತೀನಿರ್ಮಾಪಿತೇ') ಕಾಶೀ ಲಕ್ಷ್ಮಣಶಾಸ್ತ್ರಿಗಳು ಬರೆದದ್ದೆಂಬ ಗುರುವಂಶಕಾವ್ಯವೆಂಬ ಗ್ರಂಥದಲ್ಲಿರುವ ಶಂಕರಚರಿತ್ರೆಗೂ ಮಾಧವೀಯ ದಲ್ಲಿರುವ ಶಂಕರಚರಿತ್ರೆಯ ವಿವರಗಳಿಗೂ ಹೆಚ್ಚುಕಡಿಮೆಯಿದೆ. ಗುರುವಂಶಕಾವ್ಯವು ಶೃಂಗೇರಿಯ ಪುಸ್ತಕಭಂಡಾರದಲ್ಲಿಯೇ ದೊರೆತ ಪ್ರತಿಯಿಂದ ಶ್ರೀರಂಗಂ ವಾಣೀವಿಲಾಸ ಮುದ್ರಣಾಲಯದಲ್ಲಿ ಅಚ್ಚಾಗಿದೆ. ವಿದ್ಯಾರಣ್ಯರು ಬರೆದ ಚರಿತ್ರೆಯ ವಿವರಕ್ಕೆ ವಿರುದ್ಧ ವಾಗಿರುವ ವಿಷಯಗಳನ್ನು ಶೃಂಗೇರಿ ಪೀಠದವರು ಬರೆಯಿಸಿದರೆಂಬುದು ವಿಶ್ವಸನೀಯ ವಾಗಿಲ್ಲ. ಗುರುವಂಶಕಾವ್ಯವು ನಿರ್ಮಿತವಾದಾಗ ಈ ಮಾಧವೀಯಗ್ರಂಥವು ಇನ್ನೂ ಹೊರಕ್ಕೆ ಬಂದಿರಲಿಲ್ಲವೆಂದು ಹೇಳುವದೇ ಯುಕ್ತಿಯುಕ್ತವಾಗಿ ಕಾಣುತ್ತದೆ.

(2) ಗ್ರಂಥಕರ್ತನು 'ಪ್ರೌಢೋಽಯಂ ನವಕಾಲಿದಾಸಕವಿತಾಸಂತಾನಸಂತಾನಕಃ' (ಮಾ. ಶಂ. ೧–೯), 'ವಾಗೇಷಾ ನವಕಾಲಿದಾಸವಿದುಷಃ' (ಮಾ. ಶಂ. ೧–೧೦) ಎಂದು ಎರಡು ಶ್ಲೋಕಗಳಲ್ಲಿ ತನ್ನನ್ನು ನವಕಾಲಿದಾಸನೆಂದು ಹೊಗಳಿಕೊಂಡಿರುತ್ತಾನೆ. ಮಾಧವಾ

ಚಾರ್ಯರಿಗೆ ಈ ಬಿರುದು ಇದ್ದದ್ದಕ್ಕೆ ಆಧಾರವಿಲ್ಲ; ಭಾಗವತಚಂಪುವನ್ನು ಬರೆದ ಮಾಧವನೆಂಬಾತನಿಗೆ ಈ ಬಿರುದು ಇತ್ತು.

(3) ಶಂಕರಾಭ್ಯುದಯವೆಂಬ ಗ್ರಂಥವು ನಾಯಕರಾಜನ ಆಸ್ಥಾನಕವಿಯಾದ ಶ್ರೀರಾಜಚೂಡಾಮಣಿದೀಕ್ಷಿತನು ಬರೆದದ್ದು; ಆ ಕಾವ್ಯದ ನಾಲ್ಕನೆಯ ಸರ್ಗದಲ್ಲಿರುವ ಇಪ್ಪತ್ತುನಾಲ್ಕು ಶ್ಲೋಕಗಳನ್ನು ಇದ್ದದ್ದು ಇದ್ದಹಾಗೆಯೇ ಮಾಧವಕವಿಯು ತನ್ನ ಗ್ರಂಥದ ಹನ್ನೆರಡನೆಯ ಸರ್ಗದ ಆದಿಯಲ್ಲಿ ಸೇರಿಸಿಕೊಂಡಿರುತ್ತಾನೆಂದು ಎನ್. ಕೆ. ವೆಂಕಟೇಶಪಂತಲುರವರು (*NKVS. Appendix* 11) ಹೇಳುತ್ತಾರೆ. ಈ ಶಂಕರಾಭ್ಯುದಯಗ್ರಂಥದ ಆರು ಸರ್ಗಗಳು ಪ್ರಕಾಶಿತವಾಗಿರುವುದರಿಂದ ಈ ಎರಡು ಕಾವ್ಯಗಳಲ್ಲಿ ಯಾರು ಯಾರಿಂದ ಗ್ರಂಥಚೌರ್ಯವನ್ನು ಮಾಡಿರಬೇಕೆಂಬುದನ್ನು ವಾಚಕರು ಊಹಿಸಬಹುದಾಗಿದೆ. ರಾಜಚೂಡಾಮಣಿಯು ಹದಿನೇಳನೆಯ ಶತಮಾನದವನಾದ್ದರಿಂದ ಅವನ ಶ್ಲೋಕಗಳನ್ನು ತೆಗೆದುಕೊಂಡ ಮಾಧವಾಚಾರ್ಯನು ಅದಕ್ಕಿಂತ ಈಚಿನವನಾಗಿರಬೇಕೆಂದಾಗುತ್ತದೆ; ಏಕೆಂದರೆ ವಿದ್ಯಾರಣ್ಯರು ೧೪ನೆಯ ಶತಮಾನದವರು.

(4) ಗ್ರಂಥಕಾರನು, ಶಂಕರಾಚಾರ್ಯರಿಗಿಂತ ಹಿಂದೆ ಇದ್ದವರೆಂದು ಐತಿಹಾಸಿಕರು ನಿಶ್ಚಯಿಸಿರುವ ಬಾಣದಂಡಿಮಯೂರರೊಡನೆಯೂ ಆಚಾರ್ಯರಿಗಿಂತ ಈಚಿನವರೆಂದು ಐತಿಹಾಸಿಕರು ಗೊತ್ತುಪಡಿಸಿರುವ ಶ್ರೀಹರ್ಷ, ಭಟ್ಟಭಾಸ್ಕರ, ಉದಯನ– ಇವರೊಡನೆಯೂ ಆಚಾರ್ಯರು ವಾದಮಾಡಿದಂತೆ ವರ್ಣಿಸಿರುತ್ತಾನೆ. ವಿದ್ಯಾರಣ್ಯರಂಥವರು ಹೀಗೆ ಪರಿಗಣಿಸಿದರೆಂದು ನಂಬುವುದು ಕಷ್ಟ.

(5) ಮಾಧವಕವಿಯು ಮಂಗಲಶ್ಲೋಕದಲ್ಲಿ 'ಪ್ರಣಮ್ಯ ಪರಮಾತ್ಮಾನಂ ಶ್ರೀವಿದ್ಯಾತೀರ್ಥರೂಪಿಣಮ್ ॥ ಪ್ರಾಚೀನಶಂಕರಜಯೇ ಸಾರಃ ಸಂಗೃಹ್ಯತೇ ಸ್ಫುಟಮ್॥ (ಮಾ. ಶ. ೧–೧) 'ವಿದ್ಯಾತೀರ್ಥ'ರೂಪಿಯಾದ ಪರಮಾತ್ಮನನ್ನು ನಮಸ್ಕರಿಸಿ 'ಪ್ರಾಚೀನಶಂಕರಜಯ'ದಲ್ಲಿ ಸಾರವನ್ನು ಸ್ಫುಟವಾಗಿ ಸಂಗ್ರಹಿಸುತ್ತೇನೆ– ಎಂದು ಬರೆದಿರುತ್ತಾನೆ. ನನ್ನ ಗ್ರಂಥದಲ್ಲಿ 'ಶಾಂಕರವಾಕ್ಯಸಾರ'ವನ್ನು ಕಾಣಿರಿ (ಲಘುಸಂಗ್ರಹೇಽಸ್ಮಿನ್ನುದ್ವೀಕ್ಷ್ಯತಾಂ ಶಾಙ್ಕರವಾಕ್ಯಸಾರಃ ೧–೩) ಎಂದಿರುತ್ತಾನೆ. ವಿದ್ಯಾತೀರ್ಥರೆಂಬವರು ಶೃಂಗೇರಿಪೀಠದ ಗುರುಪರಂಪರೆಯಲ್ಲಿ ಭಾರತೀತೀರ್ಥರಿಗೂ ವಿದ್ಯಾರಣ್ಯರಿಗೂ ಗುರುಗಳಾದ ವಿದ್ಯಾಶಂಕರರೆಂದು ಕೆ. ಆರ್. ವೆಂಕಟರಾಮನ್ (*KRTTW. p.*29) ಬರೆಯುತ್ತಾರೆ. ಶಂಕರವಿಜಯದ ಕವಿಯು ವಿದ್ಯಾರಣ್ಯರೆಂಬುವರಿಗೆ ವಿದ್ಯಾತೀರ್ಥಸ್ಮರಣೆಯೇ ಆಧಾರವಾಗಿದೆ. ಆದರೆ ವಿದ್ಯಾರಣ್ಯರು ಮಾಧವಾಚಾರ್ಯರಲ್ಲವೆಂದೇ ವೆಂಕಟರಾಮನ್ನರವರು ವಾದಿಸಿರುತ್ತಾರೆ. (*KRTTW. p.* 33). ಅದು ನಿಜವಾದರೆ ಈ ಶಂಕವಿಜಯವು ವಿದ್ಯಾರಣ್ಯಕೃತವಲ್ಲವೆಂದೇ ಆಗುತ್ತದೆ; ಆದರೆ ಸಾಯಣಮಾಧವರಿಬ್ಬರೂ ವಿದ್ಯಾತೀರ್ಥರ ಶಿಷ್ಯರೆಂಬವರ ಪಕ್ಷದಲ್ಲಿಯೂ ಮಾಧವಗ್ರಂಥಗಳೆಂದು ಪ್ರಸಿದ್ಧವಾಗಿರುವ ಗ್ರಂಥಗಳ ಪಟ್ಟಿಯಲ್ಲಿ ಈ ಶಂಕರವಿಜಯವನು

೩

1. ಭಾಗವತಚಂಪುವನ್ನು ಬರೆದಾತನು ತನ್ನ ಹೆಸರು ಮಾಧವನೆಂದು ಹೇಳಿಕೊಂಡಿಲ್ಲವಾದರೂ ಅವನ ಹೆಸರು ಅದೇ ಎಂದು ಶೋಧಕರು ಕೆಲವರು ನಿಶ್ಚಯಿಸಿರುತ್ತಾರೆ. ಆತನು 'ಅಭಿನವಪದಪೂರ್ವಃ ಕಾಳಿದಾಸಃ' (೧–೭). 'ನವಕಾಳಿದಾಸವಿದುಷಶ್ಚಮೂಪ್ರಬಂಧಾನ್ವೃತೇ'(೧–೧೫೩)ಎಂದು ನವಕಾಳಿದಾಸನೆಂಬ ಬಿರುದನ್ನು ಹೇಳಿಕೊಂಡಿರುತ್ತಾನೆ. ಯಮಕಾನುಪ್ರಾಸಾದಿಗಳಿಂದ ಆವನ ಶೈಲಿಯು ಶಂಕರವಿಜಯಕಾರನ ಶೈಲಿಯನ್ನೇ ಹೋಲುತ್ತಿದೆ.

ಯಾರೂ ಪರಿಗಣಿಸಲಿಲ್ಲವೆಂಬುದನ್ನು ನಾವು ಮನಸ್ಸಿಗೆ ತಂದುಕೊಳ್ಳುವದು ಅವಶ್ಯವಿದೆ. ಮಾಧವೀಯಕ್ಕೆ ಡಿಂಡಿಮವ್ಯಾಖ್ಯಾನವನ್ನು ಬರೆದಿರುವ ಧನಪತಿಸೂರಿಯು 'ಶ್ರೀ ವಿದ್ಯಾತೀರ್ಥೋ ಭಗವಾನ್ ಭಾಷ್ಯಕಾರಃ'। ಎಂದು ಬರೆದಿರುವದು ಯಾವ ಸಂಪ್ರದಾಯಕ್ಕೂ ಒಪ್ಪಲ್ಲವಾದ್ದರಿಂದ ಅದನ್ನು ನಾವು ಇಲ್ಲಿ ಲೆಕ್ಕಕ್ಕೆ ತೆಗೆದುಕೊಳ್ಳಬೇಕಾದದ್ದಿಲ್ಲ,

**ವ್ಯಾಸಾಚಲೀಯ :**

೪. ಮೇಲೆ ಹೇಳಿದ ಶ್ಲೋಕಗಳಲ್ಲಿ ಪರಾಮೃಷ್ಟರಾಗಿರುವ **'ಪ್ರಾಚೀನ ಶಂಕರಜಯ'** ಯಾವದು ? ಕಾಂಚೀಪೀಠಸಂಪ್ರದಾಯಾನುಸಾರಿಗಳಾದ ಆತ್ಮಬೋಧೇಂದ್ರರು **'ಪ್ರಾಚೀನಶಂಕರವಿಜಯ'**ವೆಂಬ ಹೆಸರಿನ ಒಂದು ಗ್ರಂಥದಿಂದ ಕೆಲವುಭಾಗವನ್ನು ತಮ್ಮ ಸುಷಮಾಗ್ರಂಥದಲ್ಲಿ ಅಲ್ಲಲ್ಲಿ ಉದಾಹರಿಸಿರುತ್ತಾರೆ. ಅವರು ಉದಾಹರಿಸಿರುವ ಶಂಕರವಿಜಯದಲ್ಲಿ ಆಚಾರ್ಯರ ಜನ್ಮಕಾಲವನ್ನು ಸ್ಪಷ್ಟವಾಗಿ ವಿವರಿಸಿದೆಯಾದರೂ ಮಾಧವನು[1] ಅದನ್ನು ಕೊಟ್ಟಿಲ್ಲ ; ಅಲ್ಲಿರುವ ಕೆಲವು ವಿವರಕ್ಕೂ ಮಾಧವೀಯದ ವಿವರಕ್ಕೂ ವಿರೋಧವೂ ಇದೆ. ಇದನ್ನು ಮುಂದೆ ಅಲ್ಲಲ್ಲಿ ತೋರಿಸುವೆವು. ಆದ್ದರಿಂದ ಮಾಧವನು ಹೇಳಿರುವ 'ಪ್ರಾಚೀನಶಂಕರಜಯ'ವು ಅದಲ್ಲ.[2]

ಇನ್ನು **ಮಾಧವೀಯದಲ್ಲಿ** ಪರಾಮರ್ಶಿಸಿರುವ 'ವ್ಯಾಸಾಚಲೀಯಶಂಕರವಿಜಯ'ವೆಂಬ ಗ್ರಂಥವೊಂದು ಬೇರೆ ಇದೆ. ಈ ಶ್ಲೋಕವನ್ನು ನೋಡಿ :

**ನೇತಾ ಯತ್ರೋಲ್ಲಸತಿ ಭಗವತ್ಪಾದಸಂಜ್ಞೋ ಮಹೇಶ:**
**ಶಾನ್ತಿರ್ಯತ್ರ ಪ್ರಕಟಿತಿ ರಸಃ ಶೇಷವಾನುಜ್ಜ್ವಲಾದ್ಯೈಃ**
**ಯತ್ರಾವಿದ್ಯಾಕ್ಷತಿರಪಿ ಫಲಂ ತಸ್ಯ ಕಾವ್ಯಸ್ಯ ಕರ್ತಾ**
**ಧನ್ಯೋ ವ್ಯಾಸಾಚಲಕವಿವರಸ್ತತ್ಕೃತಿಜ್ಞಾಶ್ಚ ಧನ್ಯಾಃ ॥**

—(ಮಾ. ಶಂ. ೧-೧೬)

---

1. ಆತ್ಮಬೋಧರು ಬರೆದಿರುವ 'ಸುಷಮಾ' ಎಂಬ ಗುರುರತ್ನಮಾಲಿಕೆಯ ವ್ಯಾಖ್ಯಾನದಲ್ಲಿ ಮಾಧವಾಚಾರ್ಯರೇ ವಿದ್ಯಾರಣ್ಯರೆಂದು ವಾದಿಸಿದೆ : 'ಶ್ರೂಯತೇ ಚ ಅಯಮೇವ ಶ್ರೀಶಙ್ಕರಾನನ್ದೇನ್ದ್ರಮುನಿನಾ ದತ್ತವಿದ್ಯಾರಣ್ಯನಾಮಾ ಸಹೈವಾಷ್ಟಭಿಃ ಸಬ್ರಹ್ಮಚಾರಿಭಿಃ ಸಚ್ಚಿದಾನನ್ದಾದಿಭಿರಚೀಕ್ಲೃಪದಷ್ಟೌಮಠೀನಾತ್ಮನಶ್ಚೈಕಂ ಮಧಿತುಙ್ಗಭದ್ರಮ್ ಅನುವಿರೂಪಾಕ್ಷೇಶ್ವರಮ್ ಅತಿವೇಲಪ್ರವೃದ್ಧಮಧ್ವಕದಧ್ವಾದಿವಿಮತಪ್ರಚಾರ ರೋಧಿನ ಇತಿ' (ಸು. ೭೬). ಶಂಕರಾನಂದರು ಮಾಧವನಿಗೆ ವಿದ್ಯಾರಣ್ಯನೆಂಬ ಹೆಸರನ್ನು ಕೊಟ್ಟರು. ವಿದ್ಯಾರಣ್ಯರು ಇನ್ನೆಂಟು ಸಬ್ರಹ್ಮಚಾರಿಗಳೊಡನೆ ಎಂಟು ಮಠಗಳನ್ನೂ, ತಮ್ಮದಾಗಿ ವಿರೂಪಾಕ್ಷೇಶ್ವರನ ಹತ್ತಿರಒಂದು ಮಠವನ್ನೂ ಸ್ಥಾಪಿಸಿ ಮಧ್ವಾದಿಮತಾವರ್ಗಗಳನ್ನು ಅಡ್ಡಗಟ್ಟಿದರು–ಎಂದರ್ಥ.

2. ಈ ಪ್ರಾಚೀನಶಂಕರವಿಜಯವನ್ನು 'ಮೂಕಶಂಕರ'ರೆಂಬ ಕಾಂಚೀಪೀಠದ ಹದಿನೆಂಟನೆಯ ಅಧ್ಯಕ್ಷರು ಬರೆದರೆಂದು ವೆಂಕಟರಾಮನ್ನರವರ ಹೇಳಿಕೆ (NVSSK· p 73) ಇದಕ್ಕೆ 'ಪ್ರಾಚೀನ'ವೆಂಬ ಹೆಸರನ್ನು ಏಕೆ ಕೊಟ್ಟರೆಂಬುದನ್ನು ಅಲ್ಲಿ ಹೇಳಿಲ್ಲ.

'ಭವಗತ್ಪಾದರೆಂಬ ಹೆಸರಿನ ಮಹೇಶ್ವರನೇ ಯಾವದಕ್ಕೆ ನಾಯಕನೋ, ಯಾವದರಲ್ಲಿ ಶೃಂಗಾರಾದಿಯಾದ ಅಪ್ರಧಾನರಸಗಳಿಂದೊಡಗೂಡಿದ ಶಾಂತಿರಸವೆ ಪ್ರಧಾನವಾಗಿರುವದೋ, ಯಾವದರಲ್ಲಿ ಅವಿದ್ಯಾನಾಶವೇ ಫಲವೋ ಆ ಕಾವ್ಯದ ಕರ್ತೃವಾದ ವ್ಯಾಸಾಚಲಕವಿಯೇ ಧನ್ಯನು, ಆತನ ಕೃತಿಯನ್ನು ಬಲ್ಲವರೂ ಧನ್ಯರು !'

ಈ ಶ್ಲೋಕದಲ್ಲಿ ಹೇಳಿರುವ 'ವ್ಯಾಸಾಚಲಕವಿಃ' ಎಂಬುದಕ್ಕೆ 'ವ್ಯಾಸ ಇವಾಚಲಃ ಸ್ಥಿರಶ್ಚಾಸೌ ಕವಿಶ್ರೇಷ್ಠಶ್ಚ ಇತಿ ವ್ಯಾಸಾಚಲಕವಿಪರೋ ಮಾಧವೋ ಧನ್ಯಃ' ವ್ಯಾಸನಂತೆ ಅಚಲನಾಗಿರುವ ಕವಿಶ್ರೇಷ್ಠನಾದ ಮಾಧವನು- ಎಂಬ ಅರ್ಥವನ್ನು ಡಿಂಡಿಮವ್ಯಾಖ್ಯಾನಕಾರನು ಮಾಡಿರುತ್ತಾನೆ. ನವಕಾಳಿದಾಸ ನೆಂಬ ಆತ್ಮಶ್ಲಾಘನೆಯನ್ನು ಮಾಡಿಕೊಂಡಿರುವ ಮಾಧವನು ತನ್ನನ್ನು ವ್ಯಾಸಾ ಚಲನೆಂದೂ ಹೇಳಿಕೊಂಡಿರಬಹುದೆಂದು ಕಲ್ಪನೆಮಾಡಬಹುದಾದರೂ 'ವ್ಯಾಸಾ ಚಲೀಯ'ವೆಂಬ ಗ್ರಂಥವು ಪ್ರತ್ಯಕ್ಷವಾಗಿರುವಾಗ ಹೀಗೆ ವ್ಯಾಖ್ಯಾನಕೌಶಲವನ್ನು ತೋರಿಸಿರುವದು ವಿದ್ಯಾತೀರ್ಥಶಬ್ದದ ವ್ಯಾಖ್ಯಾನದಂತೆಯೇ ಡಿಂಡಿಮಕಾರನಿಗೆ ನಿಜಸ್ಥಿತಿ ಗೊತ್ತಿರಲಿಲ್ಲವೆಂಬುದನ್ನೇ ತೋರಿಸುತ್ತದೆಯೆನ್ನಬೇಕು. ಡಿಂಡಿಮ ಕಾರನು ಕಾಶಿಯಲ್ಲಿದ್ದ ಪಂಡಿತ ರಾಮಕುಮಾರಜಿ ಎಂಬ ಸಾರಸ್ವತ ಬ್ರಾಹ್ಮಣನ ಪುತ್ರನಂತೆ (ಬಲ. ಶಂ. ಪು. ೧೩). ಆದ್ದರಿಂದ ನಿಜವನ್ನರಿಯದೆ ಅವನು ಹೀಗೆ ವ್ಯಾಖ್ಯಾನಮಾಡಿರಬಹುದು. ಈಚೆಗೆ ವ್ಯಾಸಾಚಲೀಯವು ಮದರಾಸ್ ಗೌರ್ನ ಮೆಂಟ್ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ ಲೈಬ್ರರಿಯಲ್ಲಿ ಅಚ್ಚಾಗಿದೆ ; ಅಲ್ಲಿಂದ ತರಿಸಿಕೊಂಡ ಕೈಬರಹದ ಪ್ರತಿಯೊಂದು ನಮ್ಮಲ್ಲಿದೆ. ಮಾಧವೀಯಕ್ಕೂ ವ್ಯಾಸಾಚಲೀಯಕ್ಕೂ ೫೨೦ ಶ್ಲೋಕಗಳಷ್ಟು ಗ್ರಂಥವು ಸಮಾನವಾಗಿರುವದಾಗಿ ತಿಳಿದುಬಂದಿದೆ. ವ್ಯಾಸಾಚಲೀಯವೇ ಇವೆರಡರಲ್ಲಿ ಪೂರ್ವತರವೆಂಬುದಕ್ಕೆ ಸಾಕ್ಷಿಯಾಗಿ ಅಚ್ಚಿನ ವ್ಯಾಸಾಚಲೀಯದಲ್ಲಿ 'ವ್ಯಾಸಾಚಲಪ್ರಮುಖಪಣ್ಡಿತಃ' ಎಂದು ಮುಂತಾಗಿರುವ ಮಾಧವೀಯದ ಒಂದನೆಯ ಸರ್ಗದ ಒಂದು ಶ್ಲೋಕ ವನ್ನು ಮುದ್ರಿತ ವ್ಯಾಸಾಚಲೀಯದಲ್ಲಿ ಪ್ರಕಾಶಕರು ಉದಾಹರಿಸಿದಾರಂತೆ. ಆದರೆ ಆ ಶ್ಲೋಕವು ತೆಲುಗಿನಲ್ಲಿ ಅಥವಾ ದೇವನಾಗರಿಯಲ್ಲಿ ಅಚ್ಚಾಗಿರುವ ಮಾಧವೀಯದಲ್ಲಿ ಕಂಡುಬರುವದಿಲ್ಲ. ಇದೇ ವಿಷಯದಲ್ಲಿ ವಿಮರ್ಶೆಯನ್ನು ಮಾಡಿರುವ ಬೆಳ್ಳಾವೆ ಸೋಮನಾಥಯ್ಯನವರು ( ಸೋ. ಶಂ. ಪು. ೧ ) ಇನ್ನೆರಡು ಶ್ಲೋಕಗಳನ್ನು ಉದಾಹರಿಸಿರುತ್ತಾರೆ. ಅವು ಒಂದನೆಯ ಸರ್ಗದ ಎರಡು-ಮೂರನೆಯ ಶ್ಲೋಕಗಳಂತೆ :

ಅತ್ಯುನ್ನತಸ್ಯ ಕಾವ್ಯದ್ರೋರ್ವ್ಯಾಸಾದ್ರಿಮುಖಜನ್ಮನಃ ।
ಸಮಗ್ರಾಣ್ಯರ್ಥಪುಷ್ಪಾಣಿ ಗೃಹೀತುಮಹಮಕ್ಷಮಃ ॥೨॥

ಪ್ರಸ್ಫೀಘ್ರ್ಯೇಣಿನಾ ಯಾವದಾಯತ್ತಾವದಧಾಪದತ್ ।
ಸಂಕ್ಷೇಪಶಙ್ಕರಜಯಸ್ರಜಂ ಸಂದರ್ಭಯಾಮ್ಯಹಮ್ ॥ ೩ ॥

'ವ್ಯಾಸಾದ್ರಿಯ ಮುಖದಲ್ಲಿ ಹುಟ್ಟಿದ ಎತ್ತರವಾಗಿರುವ ಕಾವ್ಯವೃಕ್ಷದ ಎಲ್ಲಾ ಅರ್ಥರೂಪವಾದ ಹೂಗಳನ್ನೂ ಎತ್ತಿಕೊಳ್ಳುವದಕ್ಕೆ ನಾನು ಅಶಕ್ತನು. ಮೋಟಾಗಿರುವ ಬುದ್ಧಿಯೆಂಬ ದೋಟಿಯಿಂದ ಎಷ್ಟು ಸಿಕ್ಕೀತೋ ಅಷ್ಟನ್ನು ತೆಗೆದುಕೊಂಡು 'ಸಂಕ್ಷೇಪಶಂಕರಜಯ'ವೆಂಬ ಮಾಲಿಕೆಯನ್ನು ಕಟ್ಟುವೆನು'–ಎಂಬುದು ಶ್ಲೋಕಗಳ ಅರ್ಥ. ಈಗಿನ ಅಚ್ಚಿನ ಪುಸ್ತಕಗಳಲ್ಲಿ ಇವೂ ಹೇಗೋ ಮಾಯವಾಗಿದೆ. ಇದರಂತೆ 'ವ್ಯಾಸಾಚಲಪ್ರಮುಖಪಣ್ಡಿತಃ' ಎಂಬ ಶ್ಲೋಕವೂ ಏತಕ್ಕೆ ಕೈಬಿಟ್ಟುಹೋಗಿರಬಾರದು ? ಆದ್ದರಿಂದ ವ್ಯಾಸಾಚಲಕವಿಯನ್ನು ಮಾಧವನು ಸ್ಮರಿಸಿರುವದು ನಿಶ್ಚಯವೆಂದಾಯಿತು.

ಈಗ ನಮಗೆ ಸಿಕ್ಕಿರುವ ವ್ಯಾಸಾಚಲೀಯವೇ ಮಾಧವೀಯಕ್ಕೆ ಮೂಲವೆಂಬುದು ಮಾತ್ರ ಇನ್ನೂ ಸಂಶಯಗ್ರಸ್ತವಾಗಿದೆ. ಏಕೆಂದರೆ ಆದರಲ್ಲಿರುವ ಕಥೆಯ ವಿವರಕ್ಕೂ ಮಾಧವೀಯದಲ್ಲಿರುವ ಕಥೆಯ ವಿವರಕ್ಕೂ ಕೆಲವುಕಡೆ ವಿರೋಧವೇ ಇದೆ. ಇದನ್ನು ನಾವು ಮುಂದೆ ಶಂಕರಜೀವನಚರಿತ್ರೆಯನ್ನು ಬರೆಯುವಾಗ ಅಲ್ಲಲ್ಲಿ ತೋರಿಸುತ್ತಾಹೋಗುವೆವು. ಮಾಧವನು ಹೊಗಳಿರುವ ವ್ಯಾಸಾಚಲೀಯವು ಪ್ರಕೃತ ಸಿಕ್ಕಿರುವ ವ್ಯಾಸಾಚಲೀಯಕ್ಕಿಂತ ಬೇರೆಯಾಗಿದ್ದಿರಬಹುದೆಂಬುವಕ್ಕೆ ಇಲ್ಲಿ ಒಂದು ಸಂಭಾವನಾಯುಕ್ತಿಯನ್ನು ಮಾತ್ರ ತಿಳಿಸಿದರೆ ಸಾಕಾಗಿದೆ. ಆಚಾರ್ಯರಿಗೆ ಉಪನಯನವನ್ನು ಯಾರು ಮಾಡಿಸಿದರೆಂಬ ವಿಷಯಕ್ಕೆ ಮತಭೇದವಿದೆ; ಆ ವಿಷಯವನ್ನು ಪ್ರಸ್ತಾಪಿಸುವಾಗ ಆದರ ವಿವರವನ್ನು ಕೊಡುವೆವು. ಮಾಧವಕವಿಯು ಆಚಾರ್ಯರ ತಂದೆಯು ಉಪನಯನವನ್ನು ಮಾಡುವದಕ್ಕಾಗದೆ ಮಗನು ಇನ್ನೂ ಮೂರು ವರ್ಷದವನಾಗಿರುವಾಗಲೇ ಮೃತನಾದನು ಎಂಬರ್ಥದ ಒಂದು ಶ್ಲೋಕವನ್ನು ಬರೆದಿರುತ್ತಾನೆ :

ಶಿವಗುರುಃ ಸ ಜರಂಸ್ತ್ರಿಸಮೋ ಶಿತಾ–
ವಮೃತ ಕರ್ಮವಶಃ ಸುತಪೋದಿತಃ ।
ಉಪನಿನೀಷಿತಸೂನುರಪಿ ಸ್ವಯಂ
ನ ಹಿ ಯನೋಽಸ್ಯ ಕೃತಾಕೃತಮೀಕ್ಷತೇ ॥ (ಮಾ.ಶಂ. ೪–೧೧)

ಈ ಶ್ಲೋಕವು ವ್ಯಾಸಾಚಲೀಯದ್ದೆಂದು ಆತ್ಮಬೋಧರು ಗುರುರತ್ನಮಾಲಿಕೆಯ ೧೮ನೆಯ ಶ್ಲೋಕದ ವ್ಯಾಖ್ಯಾನದಲ್ಲಿ ಉದಾಹರಿಸಿರುತ್ತಾರೆ ; ಆದರೆ ಈ ನಮ್ಮ ವ್ಯಾಸಾಚಲೀಯದಲ್ಲಿ 'ತಂ ಪಞ್ಚಮಾಬ್ದ ಉಪನೇತುಮನಾಃ ಸ ಏವ ಪಞ್ಚತ್ವಮಾಪ ದುರತಿಕ್ರಮಕಾಲ ವಿಷಃ' ॥(ವ್ಯಾ.ಶಂ.

೪-೩೨) ಎಂಬ ಇದೇ ಅರ್ಥದ ಬೇರೊಂದು ಶ್ಲೋಕವಿದೆ. ಆದ್ದರಿಂದ ಇದು ಮಾಧವೀಯಕ್ಕೆ ಮೂಲವಲ್ಲ. ಪ್ರಕಾಶಕ್ಕೆ ಬಂದಿರುವ ವ್ಯಾಸಾಚಲೀಯವು ಅಪೂರ್ಣಸ್ಥಿತಿಯಲ್ಲಿದೆ ; ನಮ್ಮಲ್ಲಿರುವ ಕೈಪ್ರತಿಯಲ್ಲಿ ಹನ್ನೊಂದನೆಯ ಸರ್ಗದೊಳಗೆ ೧೧೨ರಿಂದ ೧೩೫ರವರೆಗಿನ ಶ್ಲೋಕಗಳನ್ನು ಅನವಶ್ಯಕವಾದ ಸ್ಥಾನದಲ್ಲಿ -ಅವು ಮಾಧವೀಯಕ್ಕೇ ಸೇರಿದವುಗಳಾಗಿದ್ದರೂ-ಯಾರೋ ತುರುಕಿಸಿದ್ದಾರೆ ; ಅವುಗಳಲ್ಲಿ ಪ್ರಕೃತಮಾಧವೀಯಶ್ಲೋಕವೂ ಇದೆ !! ಆದ್ದರಿಂದ ಇದೊಂದು ಕೃತ್ರಿಮಪ್ರತಿ ಎಂಬುದು ಸ್ಪಷ್ಟವಾಗಿದೆ. ಹೀಗಿದ್ದರೂ 'ವ್ಯಾಸಾಚಲ' (೩,೪,೬, ೧೦), 'ವಾಸಶೈಲ' (೨), 'ವ್ಯಾಸಾದ್ರಿ' (೫-೯) ಅಥವಾ 'ವ್ಯಾಸಗಿರಿ' (೧೨) ಪ್ರೋಕ್ತವಾದ ಗ್ರಂಥವಿದೆಂದು ಪುತ್ತೆಪುತ್ತೆ ಸರ್ಗಗಳ ಕೊನೆಯಲ್ಲಿರುವದರಿಂದ ಮ ವ್ಯಾಸಾಚಲೀಯದಿಂದ ಸಂಗ್ರಹಿಸಿದ ಗ್ರಂಥವಾದರೂ ಆಗಿರಬೇಕೆಂಬುದ ರಲ್ಲಿ ಸಂಶಯವು ಕಾಣಿಸುವದಿಲ್ಲ. **ಗೋವಿಂದನಾಥನು** ಬರೆದಿರುವ ಶಂಕರಾಚಾರ್ಯಚರಿತ ( ಕೇರಳೀಯಶಂಕರವಿಜಯ )ದಲ್ಲಿಯೂ ವ್ಯಾಸಾಚಲಕವಿಯ ಪರಾಮರ್ಶವಿರುವದಾಗಿ ವ್ಯಾಸಾಚಲೀಯದ ಪ್ರಕಾಶಕರು ತಿಳಿಸಿರುತ್ತಾರೆ ; ಆದ್ದರಿಂದ ಆ ಗ್ರಂಥಕರ್ತೃವಿಗಿಂತ ಹಿಂದೆಯೇ ವ್ಯಾಸಾಚಲೀಯವು ಇದ್ದಿತೆಂದಾಗುತ್ತದೆ. ಆತ್ಮಬೋಧರು ವ್ಯಾಸಾಚಲೀಯದ್ದೆಂದು ಉದಾಹರಿಸಿರುವ ನಾಲ್ಕು ಶ್ಲೋಕಗಳು ಈಗ ಅಚ್ಚಾಗಿರುವ ವ್ಯಾಸಾಚಲೀಯದಲ್ಲಿ ಕಾಣುವದಿಲ್ಲವೆಂದು ತಿಳಿಯಬಂದಿದೆ, ಆತ್ಮಬೋಧರು ಕುಂಭಕೋಣಮಠದ ಪಕ್ಷಪಾತಿಗಳೆಂದು **ಸುಂದರರಾಮಯ್ಯನವರೇ** ಮೊದಲಾದವರು (KSSS. p.21, 27) ಅಭಿಪ್ರಾಯಪಟ್ಟಿರುವದಕ್ಕೆ ಸ್ವಲ್ಪಮಟ್ಟಿಗೆ ಆಧಾರವಿದೆಯಾದರೂ ನಾವು ಉದಾಹರಿಸಿರುವ 'ತಂ ಪಞ್ಚವರ್ಷ ಉಪನೇತುಮನಾಃ' (ವ್ಯಾ. ಶಂ. ೪-೩೨) ಎಂಬ ಶ್ಲೋಕವು ಪಕ್ಷಪಾತಿಗಳ ಶ್ಲೋಕವೆನ್ನುವದಕ್ಕೆ ಬರುವದಿಲ್ಲ ; ಆತ್ಮಬೋಧರು ಉದಾಹರಿಸಿರುವ 'ಶಿವಗುರುಃ ಸ ಜರನ್' ಎಂಬ ವ್ಯಾಸಾಚಲೀಯಶ್ಲೋಕವು ತಮ್ಮ ಮತಕ್ಕೆ ವಿರುದ್ಧವೆಂದೇ ಒಪ್ಪಿ ಉದಾಹರಿಸಿದ್ದರಿಂದ ಈ ಸಂದರ್ಭದಲ್ಲಿ ಅವರಮೇಲೆ ಯಾವ ಅಪವಾದವನ್ನೂ ಹೊರಿಸುವದಕ್ಕೆ ಬರುವಂತಿಲ್ಲ. ಈ ಎಲ್ಲಾ ಕಾರಣಗಳಿಂದ ವ್ಯಾಸಾಚಲೀಯವೆಂಬ ಗ್ರಂಥವೊಂದನ್ನು ಮಾಧವಕವಿ ಪರಾಮರ್ಶಿಸಿರುವನೆಂಬುದು ಖಂಡಿತವೆಂದು ನಿಶ್ಚಯವಾಗುತ್ತದೆ. ಎನ್. ವೆಂಕಟರಾಮನ್‌ರವರು "ಮಹದೇವ (ಚತುರ್ಥ) ಎಂಬ ಕಾಂಚೀಪೀಠಾಧಿಪರು ಪೂರ್ವಾಶ್ರಮದಲ್ಲಿ ಕುಪ್ಪಣ್ಣನೆಂಬ ಹೆಸರಿನವರು; ಕಾಂಚಿಯಲ್ಲಿದ್ದ ಕಾಮೇಶ್ವರ, ಕಮಲಾಂಬ-ಎಂಬ ದಂಪತಿಗಳ ಮಕ್ಕಳು, ಅವರು ವ್ಯಾಸಾಚಲದಲ್ಲಿ ವಾಸಮಾಡುತ್ತಿದ್ದದ್ದರಿಂದ ವ್ಯಾಸಾಚಲನೆಂದೂ ಅವರಿಗೆ ಹೆಸರು ಇತ್ತು. ಅವರೇ ವ್ಯಾಸಾಚಲೀಯಗ್ರಂಥಕರ್ತರು' (NVSSK. p.98) ಎಂದು ಬರೆದಿದಾರೆ. ಇದರ ನಿಜವನ್ನು ಗೊತ್ತುಪಡಿಸುವದು ಅವಶ್ಯ.

## ಚಿದ್ವಿಲಾಸೀಯ ಶಂಕರವಿಜಯವಿಲಾಸ

೫. ನಮ್ಮಲ್ಲಿರುವ ತೆಲುಗುಪುಸ್ತಕವು 1875ರಲ್ಲಿ ಮದ್ರಾಸು ವಾವಿಳ್ಳ ರಾಮಶಾಸ್ತ್ರಿಗಳಿಂದ ಪ್ರಕಟವಾದದ್ದು. ಇದರಲ್ಲಿ ಚಿದ್ವಿಲಾಸನೆಂಬ ಗುರುವು ವಿಜ್ಞಾನಕಂದನೆಂಬ ಶಿಷ್ಯನಿಗೆ ಹೇಳಿದಂತೆ ಕಥೆಯನ್ನು ಬರೆದಿದೆ. ಮಾಧವೀಯ ದಲ್ಲಿರುವ ಕಥಾವಿವರಕ್ಕೂ ಇದರಲ್ಲಿರುವ ವಿವರಕ್ಕೂ ಹೆಚ್ಚುಕಡಿಮೆಯಿದೆ. ಇವೆ ರಡರಲ್ಲಿ ಯಾವದು ಮೊದಲು ರಚಿತವಾಯಿತೋ ಹೇಳುವದಕ್ಕೆ ಬರುವಂತಿಲ್ಲ. ಈ ಗ್ರಂಥಕರ್ತರ ಹೆಸರಿನವರೊಬ್ಬರು ಇಪ್ಪತ್ತೈದನೆಯ ಕಾಂಚೀಪೀಠಾಧಿಪರಾಗಿ ದ್ದರು. (NVSK. p.77) ಆದರೆ ಅವರೇ ಈ ಶಂಕರವಿಜಯವನ್ನು ಬರೆ ದರೋ ಬೇರೊಬ್ಬರೋ ತಿಳಿಯದು. ಇವರು ಆಚಾರ್ಯರ ವಿಷಯಕ್ಕೆ ಕರ್ಮಾ ನುಷ್ಠಾನದ ವಿವರಗಳನ್ನು ಮಿಕ್ಕವರಿಗಿಂತ ವಿಸ್ತರಿಸಿ ತಿಳಿಸಿರುತ್ತಾರೆ. ಇದನ್ನು ಈ ಗ್ರಂಥದಲ್ಲಿ ಅಲ್ಲಲ್ಲಿ ನಾವು ತಿಳಿಸುತ್ತಾಹೋಗುವೆವು.

## ಅನಂತಾನಂದಗಿರೀಯ

೬. ಆನಂದಗಿರೀಯವೆಂದು ರೂಢಿಯಾಗಿ ಜನರು ಕರೆಯುತ್ತಿರುವ ಶಂಕರವಿಜಯವು ನಿಜವಾಗಿ ಅನಂತಾನಂದಗಿರಿ ಎಂಬಾತನಿಂದ ರಚಿತವಾದದ್ದು. ಇದರ ತೆಲುಗು ಅಚ್ಚಿನ ಪ್ರತಿಯೊಂದು ನಮ್ಮಲ್ಲಿ ಇರುತ್ತದೆ (ನೇ.ವೆಂಕಟಸುಬ್ಬಾ ಶಾಸ್ತ್ರಿಮುದ್ರಿತ 1867 ಡಿಸೆಂಬರ್ 10). 'ಈ ಗ್ರಂಥವು ಕೃತಕವೆಂಬುದು ಸ್ಪಷ್ಟ., ಸರ್ವಥಾ ನಿರುಪಯೋಗಿ' (an obvious forgery and quite useless) ಎಂದು ಎನ್. ವೆಂಕಟರಾಮನ್‌ರವರು (NVSK. Appendix) ಬರೆದಿರುತ್ತಾರೆ. ಈ ನಿಷ್ಠುರವಾಕ್ಕಿನ ವಿಶೇಷಣವು ಗ್ರಂಥಕ್ಕೆ ತಕ್ಕದ್ದೇ ಎಂತ ಕಾಣುತ್ತದೆ. ಏಕೆಂದರೆ ಇತ್ತೀಚಿನ ಎಷ್ಟೋ ವಿಷಯಗಳನ್ನು ಸಂಗ್ರಹಿಸಿರುವ ಈ ಗ್ರಂಥಕರ್ತನು 'ಅನನ್ತಾನನ್ದಗಿರಿರಹಮ್ ಅಪ್ರತಿಹತಾಜ್ಞಸ್ಯ ಭಗವತಃ ಶಿಷ್ಯಃ ಸ್ವಗುರೋರವತಾರಪ್ರಯೋಜನಂ ವರ್ಣಯಾಮಿ' (ಅ. ಶಂ. ಪು. ೧) ಅಪ್ರತಿಹತಾಜ್ಞರಾದ ಭಗವಂತರ ಶಿಷ್ಯನಾದ ಅನಂತಾನಂದಗಿರಿಯೆಂಬ ನಾನು ನನ್ನ ಗುರುವಿನ ಅವತಾರಪ್ರಯೋಜನವನ್ನು ವರ್ಣಿಸುತ್ತೇನೆ– ಎಂದು ಗ್ರಂಥದ ಆದಿಯಲ್ಲಿಯೂ 'ಜಯತು ಸಕಲಲೋಕೈಃ ಸೇವ್ಯಮಾನೋ ಗುರುರ್ಮೇ' ( ಅ. ಪು. ೨೫೬ ) ಸಕಲಲೋಕಸೇವ್ಯನಾದ ನನ್ನ ಗುರುವು ಜಯಶೀಲನಾಗಲಿ !–ಎಂದು ಗ್ರಂಥದ ಕೊನೆಯಲ್ಲಿಯೂ ತಾನು ಆಚಾರ್ಯರ ಶಿಷ್ಯನೆಂದು ಹೇಳಿಕೊಂಡಿರುತ್ತಾನೆ.

ಆದರೂ ಈ ಶಂಕರವಿಜಯಕ್ಕೆ ಆಧಾರವೇ ಇಲ್ಲವೆಂದು ಹೇಳುವದಕ್ಕೆ ಬರು ವದಿಲ್ಲ. ಏಕೆಂದರೆ ಶಂಕರವಿಜಯಕ್ಕೆ ... ್ನ ಬರೆದಿರುವ ಅಚ್ಯುತ

ರಾಮ ಪೋಡಕ-ಎಂಬಾತನು ಅದ್ವೈತರಾಜ್ಯಲಕ್ಷ್ಮೀಃ ಎಂಬ ಟೀಕೆಯಲ್ಲಿ ಬೇರೊಂದು ಆನಂದಗಿರೀಯವನ್ನು ಪರಾಮರ್ಶಿಸಿರುತ್ತಾನೆ. ಮಾಧವೀಯ ದಲ್ಲಿರುವ (೧-೨).

ಯಥಾ ಲಘಿಷ್ಠಾನಾಂ ಪಟಲೋ ವಿಶಾಲೋ
ವಿಲೋಕ್ಯತೇಽಲ್ಪೇ ಕಿಲ ದರ್ಪಣೇಽಪಿ ।
ತದ್ವನ್ಮದೀಯೇ ಲಘುಸಂಗ್ರಹೇಽಸ್ಮಿ-
ನ್ಸುಸ್ಪಷ್ಟಮೀಕ್ಷ್ಯತಾಂ ಶಾಂಕರವಾಕ್ಯಸಾರಃ ॥

ಹೇಗೆ ಸಣ್ಣಕನ್ನಡಿಯಲ್ಲಿಕೂಡ ಗಡಿಗೆಗಳ ಅಥವಾ ಆನೆಗಳ ತಲೆಗಳ ಸಮೂಹವು ವಿಸ್ತೃತವಾದದ್ದು ಕಾಣಬರುವದೋ ಅದರಂತೆ ನನ್ನ ಈ ಲಘು 'ಸಂಗ್ರಹದಲ್ಲಿ" ಶಾಂಕರವಾಕ್ಯಸಾರವನ್ನು ನೋಡಬಹುದು- ಎಂಬರ್ಥದ ಶ್ಲೋಕದಲ್ಲಿರುವ ಶಾಙ್ಕರವಾಕ್ಯಸಾರಃ, ಎಂಬ ಶಬ್ದಕ್ಕೆ ಶಙ್ಕರಸ್ಯ ಭಗವತೋ ಭಾಷ್ಯಕಾರಸ್ಯಾಯಂ ಶಾಙ್ಕರಃ, ಆನನ್ದಗಿರ್ಯಭಿಧಃ । ತಸ್ಯ ತತ್ಪ್ರಿಯ ಶಿಷ್ಯಸ್ಯ ವಾಕ್ಯಸಾರಃ' ಶಾಂಕರನೆಂದರೆ ಭಗವದ್ಭಾಷ್ಯಕಾರರ ಪ್ರಿಯಶಿಷ್ಯನಾದ ಆನಂದಗಿರಿಯೆಂಬಾತನೇ ; ಆತನ ವಾಕ್ಯದ ಸಾರವು' ಎಂದು ವ್ಯಾಖ್ಯಾನಮಾಡಿ ರುತ್ತಾನೆ. ಇಲ್ಲಿ ಮಾಧವಕವಿಯು ತನ್ನ ಕೃತಿಯನ್ನು ಲಘುಸಂಗ್ರಹವೆಂದಿರು ವದರಿಂದ ಮೂಲವಾದ 'ಪ್ರಾಚೀನಶಂಕರವಿಜಯ'ವು ವಿಸ್ತಾರವಾಗಿತ್ತೆಂದು ಊಹಿಸುವದಕ್ಕೆ ಅವಕಾಶವಿದೆ ; ಸಣ್ಣ ಕನ್ನಡಿಯ ದೃಷ್ಟಾಂತವೂ ಆಗಲೇ ಒಪ್ಪಾಗುತ್ತದೆ. ಆದರೆ ಪ್ರಕೃತದಲ್ಲಿ ನಮಗೆ ಗೊತ್ತಿರುವ ಆನಂದಗಿರೀಯವು ಆಕಾರದಲ್ಲಿ ಅಲ್ಪವೇ ಆಗಿರುವದರಿಂದ ಇದರ ಸಾರವು ಮಾಧವೀಯವು ಎನ್ನುವ ದಕ್ಕೆ ಬರುವಂತಿಲ್ಲ. ಇನ್ನೊಂದು ಮಾತು. ಇದೇ ಅಚ್ಯುತರಾಯನು ಮತ್ತೊಂದುಕಡೆಯಲ್ಲಿ 'ಏತತ್ಕಥಾಜಾಲಂ ಬೃಹಚ್ಛಙ್ಕರವಿಜಯ ಏವ ಆನನ್ದ ಜ್ಞಾನಾಖ್ಯಾನನ್ದಗಿರಿವಿರಚಿತೇ ದ್ರಷ್ಟವ್ಯಮ್ ಇತಿ ದಿಕ್' ಎಂದು (ಮಾ.ಶಂ. ೧೬-೧೦೩) ಟೀಕೆಯಲ್ಲಿ) ಬರೆದಿರುತ್ತಾನೆ. ಈ ಕಥೆಯೆಲ್ಲ ಆನಂದಜ್ಞಾನರೆಂಬ ಹೆಸರಿನ ಆನಂದಗಿರಿಗಳಿಂದ ವಿರಚಿತವಾದ ಬೃಹಚ್ಛಂಕರವಿಜಯದಲ್ಲಿಯೇ ನೋಡತಕ್ಕದ್ದೆಂದು ಸೂಚನೆ-ಎಂದು ಬರೆದಿರುವದನ್ನು ನೋಡಿದರೆ, ಮಾಧ ವೀಯಕ್ಕಿಂತ ಆನಂದಗಿರೀಯ ಶಂಕರವಿಜಯವು ದೊಡ್ಡದಾಗಿತ್ತೆಂದೇ ಗೊತ್ತಾಗು ತ್ತದೆ.

ಹೀಗಿದ್ದರೂ ಆ ಶಂಕರವಿಜಯವು ಪಠನಕ್ಕೆ ಸಿಕ್ಕದ ಹಾಗಾದಮೇಲೆಯೇ ಬರೆದಿರುವದರಿಂದ ಈಗಿನ ಅನಂತಾನಂದಗಿರೀಯವನ್ನೇ ಜನರು ಆನಂದಗಿರೀಯ ವೆಂದು ಭ್ರಾಂತರಾಗಿರಬೇಕೆಂದು ತೋರುತ್ತದೆ. ಆ ಭ್ರಾಂತಿಗೆ "ಆನಂದಗಿರಿ' ಎಂಬ ಹೆಸರೇ ಅಲ್ಲದೆ ಮತ್ತೊಂದು ಕಾರಣವೂ ಇರುತ್ತದೆ. ಅದೇನೆಂದರೆ ಮಾಧ

ವೀಯದ ಡಿಂಡಿಮವ್ಯಾಖ್ಯಾನಕಾರನಾದ ಧನಪತಿಸೂರಿಯು ತನ್ನ ವ್ಯಾಖ್ಯಾನದಲ್ಲಿ ಬರೆದುಕೊಂಡಿರುವ ಅನೇಕಸಂಗ್ರಹವಾಕ್ಯಗಳು ಸ್ವಲ್ಪಹೆಚ್ಚುಕಡಿಮೆಯಾಗಿ ಈ ಅನಂತಾನಂದಗಿರೀಯದಲ್ಲಿ ಕಾಣಬರುತ್ತಿವೆ. ಉದಾಹರಣೆಗೆ ಮಾಧವೀಯದ ೧೫-೧ರಲ್ಲಿ ಕಾಣುವ 'ಅಥ ಶಿಷ್ಯವರ್ಯೈರ್ಯುತಃ' (ಆಮೇಲೆ ಶಿಷ್ಯಶ್ರೇಷ್ಠರಿಂದ ಕೂಡಿದ)ಎಂಬ ಮಾತಿಗೆ 'ಅಥಾನನ್ತರಂ ಪದ್ಮಪಾದ-ಹಸ್ತಾಮಲಕ-ಸಮಿತ್ಪಾಣಿ-ಚಿದ್ವಿಲಾಸ- ವಿಜ್ಞಾನಕನ್ದ-ವಿಷ್ಣುಗುಪ್ತ- ಶುದ್ಧಕೀರ್ತಿ- ಭಾನುಮರೀಚಿ- ಕೃಷ್ಣದರ್ಶನ- ಬುದ್ಧಿವೃದ್ಧಿ- ವಿರಿಞ್ಚಿಪಾದಾನನ್ತಾನನ್ದಗಿರಿಪ್ರಮುಖ್ಯೈಃ ಸಹಸ್ರೈಃ ಶಿಷ್ಯವರ್ಯೈರ್ಯುತಃ' ಎಂಬ ವ್ಯಾಖ್ಯಾನವಿದೆ. ಆನಂದಗಿರೀಯದಲ್ಲಿಯೂ ಆಚಾರ್ಯರ ಶಿಷ್ಯರನ್ನು ಇದೇ ಅನುಕ್ರಮದಿಂದ ಹೇಳಿರುವದು ಕಾಣುತ್ತದೆ: 'ಪದ್ಮಪಾದ- ಹಸ್ತಾಮಲಕ- ಸಮಿತ್ಪಾಣಿ- ಚಿದ್ವಿಲಾಸ- (ವಿ)ಜ್ಞಾನಕಂದ- ವಿಷ್ಣುಗುಪ್ತ-(ಶುದ್ಧ?) ಕೀರ್ತಿ- ಭಾನುಮರೀಚಿ-ಕೃಷ್ಣದರ್ಶನ-ಬುದ್ಧಿವೃದ್ಧಿ-ವಿರಿಞ್ಚಿಪಾದ- ಶುದ್ಧಾನನ್ತಾನನ್ದಗಿರಿಪ್ರಮುಖ್ಯೈಃ ಶಿಷ್ಯವರ್ಯೈಃ ಸೇವ್ಯಮಾನಃ' (ಆ. ಶಂ. ೪-ಪು. ೧೮). ಇದರಂತೆ ಅದೇ ಸರ್ಗದ ೩ನೆಯ ಶ್ಲೋಕವ್ಯಾಖ್ಯಾನದಲ್ಲಿ ಡಿಂಡಿಮಕಾರನು 'ತಥಾ ಹಿ ಶ್ರೀಶಙ್ಕರಾಚಾರ್ಯೋ ಮಧ್ಯಾರ್ಜುನಂ ನಾಮ ಶಿವಾವಿರ್ಭೂತಸ್ಥಲವಿಶೇಷಂ ಪ್ರಾಪ | ಮಧ್ಯಾರ್ಜುನೇಶಾನಮದೃಷ್ಟಪೂರ್ವಂ ವಿದ್ಯಾದಿಭಿಃ ಪೂಜಿತಪಾದಪದ್ಮಮ್ | ಷೋಡಶೋಪಚಾರೈರಭಜತ್ಪರೇಶಂ ನಿಷ್ಠಾಪತಾಂ ಪ್ರಾಪ ಫಲೈಕಪಾತ್ರಮ್"ಎಂದು ಮುಂತಾಗಿ 'ಶುದ್ಧಾದ್ವೈತಪರಾಯಣಾ ಬಭೂವುಃ' ಎಂಬವರೆಗಿನ ಭಾಗವು ಆನಂದಗಿರೀಯದ ಪಙ್ಕ್ತಿಗಳೇ ಆಗಿವೆ. ಇದರಂತೆ ಅದೇ ಸರ್ಗದ ನಾಲ್ಕನೆಯ ಶ್ಲೋಕ, ಆರನೆಯ ಶ್ಲೋಕ-ಇವುಗಳ ವ್ಯಾಖ್ಯಾನದಲ್ಲಿಯೂ ಆನಂದಗಿರೀಯದ ಪಙ್ಕ್ತಿಗಳೇ ಕಾಣಬರುತ್ತವೆ. ಡಿಂಡಿಮಕಾರನು 'ಅತ್ರ ಪ್ರಾಚೀನಾನುರೋಧೇನ ಮಧ್ಯಾರ್ಜುನಂ ಪ್ರಾಪ್ಯ ತತಃ ಸರ್ವಾನ್ ಕಕುಭೋ ವಿಜಿಗೀಷುಃ ಪ್ರಥಮಂ ಸೇತುಂ ಪ್ರತಿ ಪ್ರತಸ್ಥೇ ಇತಿ-ವ್ಯಾಖ್ಯೇಯಮ್' ಪ್ರಾಚೀನಮತಕ್ಕನುಗುಣವಾಗಿ ಇಲ್ಲಿ ಬಿಟ್ಟಿರುವದನ್ನು ಸೇರಿಸಿಕೊಂಡು ವ್ಯಾಖ್ಯಾನಮಾಡಬೇಕು- ಎಂದು ಬರೆದಿರುವದರಿಂದ ಆನಂದಗಿರೀಯವೇ ಆ ವ್ಯಾಖ್ಯಾನಕ್ಕಿಂತ ಹಿಂದಿನದೆಂದೂ ಅದೇ ಮಾಧವೀಯಕ್ಕೆ ಮೂಲವಾದ 'ಪ್ರಾಚೀನಶಂಕರಜಯ'ವೆಂದೂ, ಜನರು ಕಲ್ಪಿಸಿರಬಹುದು. ಸರಿಯಾಗಿ ನೋಡಿದರೆ ಮಾಧವೀಯಕ್ಕಿಂತ ದೊಡ್ಡದಾಗಿರುವ ಪ್ರಾಚೀನಶಂಕರವಿಜಯವು ಎಂದಿಗೂ ಈಗ ನಮ್ಮ ಮುಂದಿರುವ ಅಲ್ಪಕಾಯದ ಆನಂದಗರೀಯವಾಗಲಾರದೆಂಬುದು ಸ್ಪಷ್ಟವೇ ಆಗಿದೆ. ಇದೂ ಅಲ್ಲದೆ ಡಿಂಡಿಮಕಾರನು ಇದೇ ಸರ್ಗದ ೩ನೆಯ ಶ್ಲೋಕದ ವ್ಯಾಖ್ಯಾನದಲ್ಲಿ ೫೮೧ ಶ್ಲೋಕಗಳನ್ನು ಉದಾಹರಿಸಿರುತ್ತಾನೆ. ಅವುಗಳು ಯಾವವೂ ಈಗಿನ ಆನಂದಗಿರೀಯದಲ್ಲಿಲ್ಲ. ಇದರಂತೆ ೧ನೆಯ ಶ್ಲೋಕಕ್ಕೆ ೧, ೪ನೆಯ ಶ್ಲೋಕಕ್ಕೆ (೪೯ ÷ ೫೫೫) ೪೦೩; ೩೮ನೆಯ ಶ್ಲೋಕದ ಕೊನೆಯಲ್ಲಿ

೭೯ನೆಯ ಶ್ಲೋಕಕ್ಕೆ ಅವತರಣಿಕೆಯಾಗಿ ೩೫೧ ಶ್ಲೋಕಗಳನ್ನೂ ಉದಾಹರಿಸಿರುತ್ತಾನೆ; ಆತ್ಮಬೋಧರು ಉದಾಹರಿಸಿರುವ ಪ್ರಾಚೀನಶಂಕರವಿಜಯದ ಶ್ಲೋಕಗಳಲ್ಲಿ ಯಾವುದೊಂದನ್ನೂ ಟೀಕಾಕಾರನು ಉದಾಹರಿಸಿಲ್ಲ; ಆ ವಿಜಯಕ್ಕೆ ವಿರುದ್ಧವಾಗಿಯೇ ಮಾಧವೀಯದಲ್ಲಿ ಕಥೆಯ ವಿವರಗಳು ಕಾಣಿಸುತ್ತವೆ. ಆದ್ದರಿಂದಲೂ ಈವರೆಗೆ ನಾವು ಹೇಳಿಟ್ಟಿರುವ ಕಾರಣಗಳಿಂದಲೂ ಅನಂತಾನಂದಗಿರೀಯಕ್ಕಿಂತ ಬೇರೆಯಾದ ಒಂದು ಆನಂದಗಿರೀಯಶಂಕರವಿಜಯವು ಇತ್ತೆಂತಲೂ ಅದನ್ನೇ ಮಾಧವಕವಿಯು ಸಂಗ್ರಹಿಸಿರುತ್ತಾನೆಂಬ ಅಭಿಪ್ರಾಯದಿಂದ ಡಿಂಡಿಮಕಾರನು ಈ ಶ್ಲೋಕಗಳನ್ನು ಉದಾಹರಿಸಿರುತ್ತಾನೆಂತಲೂ ಕಲ್ಪಿಸಬಹುದಾಗಿದೆ. ಕುಂಭಕೋಣದಲ್ಲಿ ಆ ಆನಂದಗಿರೀಯದ ಕೈಬರಹದ ಪ್ರತಿ ಇರುವದಾಗಿಯೂ ಅದರಿಂದಲೇ ಡಿಂಡಿಮಕಾರನು ಈ ಶ್ಲೋಕಗಳನ್ನು ಉದಾಹರಿಸಿರುತ್ತಾನೆಂದೂ ಎನ್. ವೆಂಕಟರಾಮನ್‌ರವರು (NVSK. Appendix) ಹೇಳುತ್ತಾರೆ. ಇದು ನಿಜವಾದರೆ ಅನಂತಾನಂದಗಿರಿಯ ಗ್ರಂಥವು ಕೃತಕವೆಂದೂ ಅವನೇ ಡಿಂಡಿಮವಾಕ್ಯಗಳನ್ನು ಬಳಸಿಕೊಂಡು ತನ್ನ ಗ್ರಂಥವನ್ನು ಬರೆದಿರುತ್ತಾನೆಂದೂ ಹೇಳಬಹುದಾಗುತ್ತದೆ. ಅನಂತಾನಂದಗಿರಿ ಎಂಬ ಹೆಸರಿನ ಶಿಷ್ಯನನ್ನು ಡಿಂಡಿಮಕಾರನೂ ಉಲ್ಲೇಖಿಸಿರುವದರಿಂದ ಆ ಹೆಸರು ಪ್ರಾಚೀನಶಂಕರಜಯದಲ್ಲಿಯೇ ಇತ್ತೆಂದೂ ಅದನ್ನು ತನ್ನ ಹೆಸರೆಂದು ತೋರಿಸಿಕೊಳ್ಳುವದಕ್ಕೆ ಈ ಕೃತ್ರಿಮಗ್ರಂಥಕಾರನು ಪ್ರಯತ್ನಿಸಿರಬಹುದೆಂದೂ ನಿರ್ಧಾರವಾಗುತ್ತದೆ; ಏಕೆಂದರೆ ಅಲ್ಲಲ್ಲೇ ಆ ಹೆಸರನು ಇವನು ಮತ್ತೆಮತ್ತೆ ಹೊಗಳಿರುವದು ಈ ಚಿಕ್ಕಗ್ರಂಥದಲ್ಲಿ ಕಾಣುತ್ತದೆ. ಅನಂತಾನಂದಗಿರಿಯೇ ಆಗಲಿ, ಇನ್ನೊಬ್ಬ ಆನಂದಗಿರಿಯೇ ಆಗಲಿ, ಆಚಾರ್ಯರ ಸಮಕಾಲಿಕರೆಂಬುವದಕ್ಕೆ ಪ್ರಮಾಣವಿಲ್ಲವೆಂಬುದು ನಿಶ್ಚಿತ. ಈ ವಿಷಯವನ್ನು ಯಥಾಸ್ಥಾನದಲ್ಲಿ ಮತ್ತೆಮತ್ತೆ ಪ್ರಸ್ತಾಪಿಸುವೆವು.

ಈ ಸಂದರ್ಭದಲ್ಲಿ ಇನ್ನೊಂದು ಊಹೆಯನ್ನು ಮಾಡುವದಕ್ಕೆ ಅವಕಾಶವಿದೆ. ಆತ್ಮಬೋಧರು ಆಗಾಗ್ಗೆ ಉದಾಹರಿಸಿರುವ ಪ್ರಾಚೀನಶಂಕರವಿಜಯವನ್ನು ಯಾರೋ ಕಾಂಚೀಸಂಪ್ರದಾಯಾಭಿಮಾನಿಗಳು ಮಾಧವೀಯ ಶಂಕರವಿಜಯದ ರಚನೆಯಾದ ಮೇಲೆ ಬರೆದಿರಬಹುದು. ಆಗ್ಗೆ ಆನಂದಗಿರೀಯವು ಕಣ್ಮರೆಯಾಗಿದ್ದುದರಿಂದ 'ಪ್ರಾಚೀನಶಂಕರಜಯ' ಎಂಬುದೇ ಗ್ರಂಥದ ಹೆಸರೆಂದು ತೋರಿಸುವದಕ್ಕೆ ಆ ಗ್ರಂಥಕರ್ತನು ಪ್ರಯತ್ನಿಸಿಯೂ ಇರಬಹುದು. ಏಕೆಂದರೆ ಯಾವನೂ ನಿಜವಾಗಿ ತನ್ನ ಗ್ರಂಥಕ್ಕೆ 'ಪ್ರಾಚೀನ'ಶಂಕರವಿಜಯ ಎಂದು ನಾಮಕರಣ ಮಾಡುವ ಸಂಭವವಿಲ್ಲ.

## ಶಂಕರವಿಜಯಗಳ ಅನುಕ್ರಮದ ತರ್ಕ

೭. ನಾವು ಮೇಲೆ ಉದಾಹರಿಸಿರುವ ಡಿಂಡಿಮಾನಂತಾನಂದಗಿರೀಯಗಳ ಶಿಷ್ಯನಾಮಾವಳಿಯ ಕೀರ್ತನೆಯಿಂದ ಇನ್ನೊಂದು ಉಪಸಿದ್ಧಾಂತವು ಹೊರಡು

ತ್ತದೆ. ಆ ಶಿಷ್ಯರೊಳಗೆ ಚಿದ್ವಿಲಾಸ, ವಿಜ್ಞಾನಕಂದ- ಎಂಬ ಹೆಸರುಗಳೂ ಇವೆಯೆಂಬುದನ್ನೂ ಆ ಹೆಸರುಗಳು ಚಿದ್ವಿಲಾಸೀಯದ ಗ್ರಂಥಕ್ಕೆ ಬೇಕಾದ ಗುರು ಶಿಷ್ಯರಾಗಿದ್ದಾರೆಂಬುದನ್ನೂ ವಾಚಕರು ಲಕ್ಷಿಸಬೇಕು. ಅನಂತಾನಂದಗಿರಿಯು ಚಿದ್ವಿಲಾಸೀಯದ ಈಚೆಗೆ ತನ್ನ ಗ್ರಂಥವನ್ನು ಬರೆದಿರಬಹುದು; ಪ್ರಾಚೀನ ಶಂಕರವಿಜಯದ ಕರ್ತೃವಾದ ಆನಂದಗಿರಿಯೂ ಚಿದ್ವಿಲಾಸೀಯವು ಹುಟ್ಟಿದ ವೇಳೆಯೇ ಬರೆದಿರಲೂಬಹುದು. ಇದು ನಿಜವಾದರೆ ತಮ್ಮ ಗ್ರಂಥಕ್ಕಾಗಿ ಚಿದ್ವಿ ಲಾಸರು ಕಲ್ಪಿಸಿದ್ದ ಆ ಎರಡು ಹೆಸರುಗಳು ಶಂಕರರ ನೇರಾದ ಶಿಷ್ಯರವೇ ಎಂದು ಈಚೆಗೆ ಭ್ರಾಂತಿಯುಂಟಾಗಿರಬಹುದೆಂದಾಗುತ್ತದೆ. ಈ ಕಲ್ಪನೆಯನ್ನು ಇಟ್ಟು ಕೊಂಡರೆ ಆನಂದಗಿರೀಯ, ಚಿದ್ವಿಲಾಸೀಯ, ಆತ್ಮಬೋಧರ ಪ್ರಾಚೀನಶಂಕರ ವಿಜಯ, ವ್ಯಾಸಾಚಲೀಯ, ಮಾಧವೀಯ, ಅನಂತಾನಂದಗಿರೀಯ-ಈ ಅನು ಕ್ರಮದಲ್ಲಿ ಶಂಕರವಿಜಯಗಳು ರಚಿತವಾಗಿರಬಹುದೆಂದು ಹೇಳಬೇಕಾಗುತ್ತದೆ.

ಮಾಧವನು ತನ್ನದು ಅಲ್ಪಸಂಗ್ರಹವೆಂದದ್ದರಿಂದ ಬೃಹಚ್ಛಂಕರವಿಜಯ ವೊಂದು ಆ ಮೊದಲೇ ಇದ್ದಿರಬೇಕೆಂಬ ಕಲ್ಪನೆಯೂ ಉಂಟಾಗುವದಷ್ಟೆ? ಚಿತ್ಸುಖಾಚಾರ್ಯರ ಬೃಹಚ್ಛಂಕರವಿಜಯವೆಂಬುದು ಈ ಕಲ್ಪನೆಯುಂಟಾ ದಾಗ ಯಾರಿಂದಲೋ ರಚನೆಯಾಗಿರಬಹುದೆ? ಹಾಗಿಲ್ಲದಿದ್ದರೆ ಯಾರುತಾನೆ ತಮ್ಮ ಗ್ರಂಥಕ್ಕೆ 'ಬೃಹತ್'ಶಂಕರವಿಜಯವೆಂದು ಹೆಸರಿಟ್ಟುಕೊಂಡಾರು? ಇದು ಹೇಗೇ ಆಗಲಿ, **ಚಿತ್ಸುಖಾಚಾರ್ಯರ ಬೃಹಚ್ಛಂಕರವಿಜಯವು** ಚಿದ್ವಿ ಲಾಸೀಯಕ್ಕಿಂತ ಮೊದಲು ಇರಬೇಕು; ಅಥವಾ ಅದಾದಮೇಲಾದರೂ ನಿರ್ಮಿತ ವಾಗಿರಬೇಕು. ಏಕೆಂದರೆ ಈ ಎರಡಕ್ಕೂ ಬಹಳ ನಿಕಟವಾದ ಹೋಲಿಕೆಗಳು ಇರುತ್ತವೆ. ಇದನ್ನು ಪ್ರಮಾಣಾನುಸಾರವಾಗಿ ಮುಂದೆ ತಿಳಿಸುವೆವು.

## ಕಾಂಚೀಪೀಠಸಂಪ್ರದಾಯದ ಗ್ರಂಥಗಳು

೮. ಕಾಮಕೋಟಿಪೀಠಸಂಪ್ರದಾಯಾನುಸಾರವಾಗಿ ಮಾಧವೀಯಶಂಕರ ವಿಜಯಕ್ಕೆ ಯಾವ ಪ್ರಾಮಾಣ್ಯವೂ ಇಲ್ಲ. ಅವರು ಸರ್ವಜ್ಞಸದಾಶಿವಬೋಧರ **ಪುಣ್ಯಶ್ಲೋಕಮಂಜರೀ**, ಸದಾಶಿವಬ್ರಹ್ಮೇಂದ್ರರಚಿತ **ಗುರುರತ್ನಮಾಲಿಕಾ** ಮತ್ತು ಅದರಮೇಲೆ ಆತ್ಮಬೋಧರು ಬರೆದಿರುವ **ಸುಷಮಾ**- ಎಂಬೀ ಮೂರು ಗ್ರಂಥಗಳನ್ನು ಪ್ರಾಮಾಣಿಕವೆಂದು ಎಣಿಸಿರುತ್ತಾರೆ. ಈ ಮೂರರೊಳಗೆ **ಸುಷಮಾಸಹಿತ ಗುರುರತ್ನಮಾಲಿಕಾ** ಎಂಬ ಗ್ರಂಥದ ಮೂಲವನ್ನು ಬರೆ ದಿರುವ ಪುಸ್ತಕವೊಂದು ನಮ್ಮಲ್ಲಿದೆ. ಸುಷಮಾವ್ಯಾಖ್ಯಾನದ ಭಾಗಗಳನ್ನು ಮಾತ್ರ ಇದರಲ್ಲಿ ಬರೆದುಕೊಂಡಿದೆ. ಆತ್ಮಬೋಧರು ಮಾಧವಕವಿಗಿಂತ ಈಚಿನವರಾದರೂ ಕೆಲವು ಪ್ರಾಚೀನಗ್ರಂಥಗಳನ್ನು ತಮ್ಮ ಸುಷಮಾಖ್ಯ

ವ್ಯಾಖ್ಯಾನದಲ್ಲಿ ಉದಾಹರಿಸಿರುತ್ತಾರೆ. ಅವರಿಗೆ ಕಾಂಚೀಪೀಠದ ಅಭಿಮಾನವು ಸ್ವಾಭಾವಿಕವಾಗಿರುತ್ತದೆಯಾದರೂ ನಾವು ಈವರೆಗೆ ಉದಾಹರಿಸಿರುವ ಶಂಕರ ವಿಜಯಗಳ ಬೆಲೆಯನ್ನು ಕಟ್ಟುವಾಗ ತುಲನಾತ್ಮಕವಿಮರ್ಶೆಗೆ ಅವರ ಗ್ರಂಥವು ಬಹಳ ಪ್ರಯೋಜನಕರವಾಗಿದೆ ಎಂಬುದನ್ನು ವಾಚಕರು ಅಗಲೆ ಕಂಡುಕೊಂಡಿರ ಬೇಕು. ನಮಗೆ ಸಿಕ್ಕದೆ ಇರುವ ಪ್ರಾಚೀನಶಂಕರವಿಜಯ, ಬೃಹಚ್ಛಂಕರ ವಿಜಯ, ಕೇರಳೀಯಶಂಕರವಿಜಯ– ಮುಂತಾದ ಅನೇಕ ಗ್ರಂಥಗಳ ಶ್ಲೋಕ ಗಳನ್ನು ಅವರು ಉದಾಹರಿಸಿರುತ್ತಾರೆ. ಮಠಗಳ ವಿಚಾರಕ್ಕೆ ಆ ಗ್ರಂಥವೇ ಅಲ್ಲದೆ ಇನ್ನೂ ಕೆಲವು ಸಣ್ಣಪುಟ್ಟ ಗ್ರಂಥಗಳನ್ನು ನಾವು ಉಪಯೋಗಿಸುವೆವು. ಅವುಗಳಿಗೆ ಐತಿಹಾಸಿಕದೃಷ್ಟಿಯಿಂದ ಎಷ್ಟು ಬೆಲೆಯನ್ನು ಕೊಡಬಹುದೆಂಬುದನ್ನು ಅಲ್ಲಲ್ಲಿಯೇ ತಿಳಿಸುತ್ತಾ ಹೋಗುವೆವು.

## ಪುರಾಣಗಳು

೯. ಮೇಲೆ ಹೇಳಿದ ಶಂಕರವಿಜಯಗಳಲ್ಲದೆ ಕೆಲವು ಪುರಾಣವಚನಗಳಲ್ಲಿ ಯೂ ಶಂಕರಾಚಾರ್ಯರ ಪರಾಮರ್ಶವು ಕಂಡುಬರುತ್ತದೆ. ಲಿಂಗಪುರಾಣ, ಕೂರ್ಮಪುರಾಣ, ವಾಯುಪುರಾಣ, ಭವಿಷ್ಯೋತ್ತರ, ಮಾರ್ಕಂಡೇಯ ಸಂಹಿತಾ, ಸೌರಪುರಾಣ, ಇವೆಲ್ಲಕ್ಕಿಂತಲೂ ಮುಖ್ಯವಾಗಿ ಶಿವರಹಸ್ಯ–ಇಷ್ಟು ಆಚಾರ್ಯರ ವಿಷಯವನ್ನು ಪರಾಮರ್ಶಿಸಿರುವ ಪುರಾಣಭಾಗಗಳು ನಮಗೆ ಸಿಕ್ಕಿ ರುತ್ತವೆ. ಇವುಗಳನ್ನೆಲ್ಲ ೧ನೆಯ ಪರಿಶಿಷ್ಟದಲ್ಲಿ ಕೊಟ್ಟಿರುವೆವು

ಪುರಾಣಗಳಲ್ಲಿ ಕಲಿಯುಗದಲ್ಲಿ ಹೀಗೆಹೀಗೆ ನಡೆಯುವದೆಂಬುದನ್ನು ದೇವತೆ ಗಳೋ ಋಷಿಗಳೋ ಹೇಳಿದಂತೆ ಬರೆಯುವದೊಂದು ಪದ್ಧತಿಯಾಗಿದೆ. ಆಧುನಿಕ ವಿಮರ್ಶಕಬುದ್ಧಿಯ ವಾಚಕರಿಗೆ ಇಂಥ ಗ್ರಂಥಗಳಲ್ಲಿ ಯಾವ ಶ್ರದ್ಧೆಯೂ ಇರುವ ದಿಲ್ಲ. ಅವರ ವಿಚಾರಸರಣಿಯು ಹೇಗಿರುವದೆಂದರೆ : ಆಯಾ ಮತದ ಅಭಿಮಾನಿ ಗಳು ಪುರಾಣಗಳಲ್ಲಿ ತಮ್ಮತಮ್ಮ ಆಚಾರ್ಯರನ್ನು ಹೊಗಳುವ ಶ್ಲೋಕಗಳನ್ನು ದೇವತಾವಾಕ್ಯಗಳು, ಋಷಿವಾಕ್ಯಗಳು– ಎಂಬ ಭಾವವು ಬರುವಂತೆ ರಚಿಸಿ ಅಲ್ಲಲ್ಲ ತೋರಿಸುವದಕ್ಕೆ ಅವಕಾಶವಿರುತ್ತದೆ ; ಏಕೆಂದರೆ ಪುರಾಣಗಳು ಇಂತಿಷ್ಟೇ ಪ್ರಮಾಣವಾಗಿರುವವೆಂದಾಗಲಿ[1] ಇಂಥ ವಾಕ್ಯಗಳು ಪ್ರಕ್ಷಿಪ್ತವಾದವುಗಳೆಂದಾಗಲಿ ನಿರ್ಣಯಿಸುವದು ಎಂಥವರಿಗೂ ಕಷ್ಟವಾಗಿರುತ್ತದೆ. ಇದಲ್ಲದೆ ಶಂಕರಾಚಾರ್ಯ ಮಧ್ವಾಚಾರ್ಯರುಗಳ ಚರಿತ್ರೆಯನ್ನು ಸೇರಿಸಿ ಅವರನ್ನು ಹೊಗಳಿರುವ

1. ಪಂಡಿತ ಜ್ವಾಲಾಪ್ರಸಾದಮಿಶ್ರ ಎಂಬುವರು ಹಿಂದೀಭಾಷೆಯಲ್ಲಿ ಬರೆದಿರುವ ಅಷ್ಟಾದಶಪುರಾಣದರ್ಪಣದ ಪು. ೫೧ರಲ್ಲಿ ಭಿನ್ನಭಿನ್ನ ಮತಗಳ ಪ್ರಕಾರ ಪುರಾಣಗಳ ಶ್ಲೋಕ ಸಂಖ್ಯಾಪ್ರಮಾಣವನ್ನು ಕೊಟ್ಟಿರುವದನ್ನು ನೋಡಿರಿ.

ಅಥವಾ ನಿಂದಿಸಿರುವ ಭಾಗಗಳೂ ಪುರಾಣಾದಿಗಳಲ್ಲಿ ಕಂಡುಬರುತ್ತವೆ. ಇಂಥ ಕೆಲವು ಉದಾಹರಣೆಗಳನ್ನು ೨ನೆಯ ಪರಿಶಿಷ್ಟದಲ್ಲಿ ಕೊಟ್ಟಿರುತ್ತೇವೆ ; ಅವುಗಳಲ್ಲಿ ಶಿವನು ಕಲಿಯುಗದಲ್ಲಿ ತಾನೇ ಅವತರಿಸಿ ಜಗತ್ತನ್ನು ಕೆಡಿಸುವ ಕಾರಣದಿಂದ ಮಾಯಾವಾದವೆಂಬ ಅವೈದಿಕವಾದ ಅಸಚ್ಛಾಸ್ತ್ರವನ್ನು ರಚಿಸುವೆನೆಂದು ಹೇಳಿಕೊಂಡಂತೆ ಅರ್ಥವಾಗುವ ಪದ್ಮಪುರಾಣದ ಕೆಲವು ಶ್ಲೋಕಗಳೂ ಇವೆ ; ಲೋಕಕಲ್ಯಾಣಕ್ಕಾಗಿ ಶಂಕರಾಚಾರ್ಯರಾಗಿ ಹುಟ್ಟುವೆನೆಂದು ಪುರಾಣಗಳಲ್ಲಿ ಹೇಳಿಕೊಂಡಿರುವ ಶಿವನೇ ಲೋಕನಾಶಕ್ಕಾಗಿ ತಾನು ಅವತರಿಸುವನೆಂದು ಹೇಳಿಕೊಂಡಿರುವನೆಂದು ಹೇಳುವ ಪುರಾಣವಾಕ್ಯಗಳ ಪ್ರಮಾಣದಿಂದ ಏನನ್ನು ತಾನೆ ನಿರ್ಧರಿಸಲಾದೀತು ?

## ಪರಮತದವರ ಗ್ರಂಥಗಳು

೧೦. ಆಚಾರ್ಯರನ್ನು ಹೊಗಳಿ ಬರೆದಿರುವ ಪರಮತದವರು ಇರುವಂತೆ ಅವರನ್ನು ತೆಗಳಿ ಅವರ ವಿಷಯಕ್ಕೆ ಅಪಪ್ರಚಾರವನ್ನು ಮಾಡಿರುವವರೂ ಏನೂ ಕಡಿಮೆಯಾಗಿಲ್ಲ. ಅಂಣ ನಮ್ಮ ದೇಶದ ವೇದಾಂತಿಗಳಲ್ಲಿ ಶಂಕರಾಚಾರ್ಯರ ನಿಕರ್ಷವನ್ನೂ ಮಧ್ವಾಚಾರ್ಯರ ಉತ್ಕರ್ಷವನ್ನೂ ತೋರಿಸುವದಕ್ಕೆಂದು ಬರೆದಿರುವ **ಮಣಿಮಂಜರಿ ಮಧ್ವವಿಜಜಯ**-ಎಂಬ ಗ್ರಂಥಗಳ ನಿರ್ಮಾಪಕರೂ ಸೇರಿರುತ್ತಾರೆ. ಮತದ್ವೇಷವೂ ಅನ್ಯಮತನಿಂದೆಯೂ ಹೆಮ್ಮೆಗೆ ಕಾರಣವೆಂದು ಭಾವಿಸಿದ್ದ ಕಾಲದಲ್ಲಿ ಬರೆದ ಇಂಥ ಗ್ರಂಥಗಳಿಗೆ ಪ್ರತ್ಯುತ್ತರವಾಗಿ ಬೇರೆಗ್ರಂಥಗಳು ಹುಟ್ಟುವವೆಂಬುದು ನಿರೀಕ್ಷಣೀಯವೇ ಅಷ್ಟೆ ? **ಮಣಿಮಂಜರಿಭೇದಿನಿ**ಯಂತಾದ ಗ್ರಂಥಗಳು ಆ ಜಾತಿಗೆ ಸೇರಿದವುಗಳಾಗಿವೆ. ಐತಿಹಾಸಿಕದೃಷ್ಟಿಯಿಂದ ಆ ಬಗೆಯ ಗ್ರಂಥಗಳಿಗೂ ಒಂದು ಸ್ಥಾನವಿರುತ್ತದೆ. ಆದ್ದರಿಂದ ಅವುಗಳನ್ನೂ ಅಲ್ಲಲ್ಲಿ ವಿಮರ್ಶೆಗೆ ತೆಗೆದುಕೊಳ್ಳುವೆವು. ಪರಮತದವರ ಅಭಿಪ್ರಾಯಗಳನ್ನು ೩ನೆಯ ಪರಿಶಿಷ್ಟದಲ್ಲಿ ಕೊಟ್ಟಿರುತ್ತದೆ.

## ಸಾಮಗ್ರಿಗಳ ಉಪಯೋಗ

೧೧. ಈವರೆಗೆ ನಾವು ಹೇಳಿರುವ ಮುಖ್ಯಶಂಕರವಿಜಯಗಳನ್ನು ಅಲ್ಲಲ್ಲಿ ಉದಾಹರಿಸಿಕೊಂಡು ವಿಮರ್ಶಿಸುತ್ತಾ ಹೋಗುವೆವು. **ಮಾಧವೀಯ ಶಂಕರವಿಜಯ**ವೇ ಎಲ್ಲಕ್ಕಿಂತಲೂ ಪ್ರಸಿದ್ಧತರವೂ ಜನಾನುರಾಗಕ್ಕೆ ಪಾತ್ರವೂ ಆಗಿರುವದರಿಂದ ಬಹಳಮಟ್ಟಿಗೆ ಕಥೆಯನ್ನು ಅದರ ಅನುಕ್ರಮವನ್ನನುಸರಿಸಿಯೇ ಹೇಳುವೆವು. ಮಿಕ್ಕ ವಿಜಯಗಳಲ್ಲಿರುವ ವೈಲಕ್ಷಣ್ಯವನ್ನು ಅಲ್ಲಲ್ಲಿಯೇ ಹೇಳುತ್ತಾ ವಿಮರ್ಶಿಸುತ್ತಾ ಹೋಗುವೆವು. ಈಗಿನ ವಿಮರ್ಶಕರ ಅಭಿಪ್ರಾಯಗಳನ್ನೂ ಅಲ್ಲಲ್ಲಿ

ಕೊಡುತ್ತಾ ಅವಕ್ಕೆ ನಮ್ಮ ಸಮ್ಮತಿಯನ್ನು ಅಥವಾ ವಿಮತಿಯನ್ನು ಸಕಾರಣ ವಾಗಿ ಸೂಚಿಸುತ್ತಾ ಹೋಗುವೆವು. ಶಾಂಕರವೇದಾಂತಸಿದ್ಧಾಂತಕ್ಕೆ ವಿರುದ್ಧ ವಾದ ಯಾವ ಅಭಿಪ್ರಾಯವೂ ಸ್ವೀಕಾರ್ಯವಲ್ಲವಾದ್ದರಿಂದ ನಮ್ಮ ಅಸಾಧಾರಣ ಅಭಿಪ್ರಾಯಗಳಿಗೆ ಆಚಾರ್ಯರ ಪ್ರಮಾಣವಾಕ್ಯಗಳನ್ನು ತಪ್ಪದೆ ಉದಾಹರಿಸು ವೆವು. ಈ ಕಾರ್ಯವು ಸ್ವಲ್ಪಮಟ್ಟಿಗಾದರೂ ಸಫಲವಾಗುವಂತೆ ನಮಗೆ ಆಚಾರ್ಯರ ಅನುಗ್ರಹವಾದರೆ, ವಾಚಕರೂ ಅದರಿಂದ ತುಷ್ಟರಾದರೆ, ನಾವು ಧನ್ಯರು.

# ೨. ಶಂಕರಾಚಾರ್ಯರ ಆವಿರ್ಭಾವಕಾಲ

## ಶಂಕರಾಚಾರ್ಯರು ಅವತಾರಪುರುಷರೆ ?

೧೨. ಒಂದನೆಯ ಪರಿಶಿಷ್ಟದಲ್ಲಿ ಕೊಟ್ಟಿರುವ ಪುರಾಣವಾಕ್ಯಗಳ ಆಧಾರ ದಿಂದ ಶಂಕರವಿಜಯಕಾರರೂ ಮತಸಂಪ್ರದಾಯದ ಅನುಯಾಯಿಗಳೂ ನಮ್ಮ ದೇಶದ ಆಸ್ತಿಕರಲ್ಲಿ ಬಹಳ ಜನರೂ ಶಂಕರಾಚಾರ್ಯರು ಶಿವಾವತಾರವೆಂದೇ ನಂಬುತ್ತಾರೆ. ಈ ಅವತಾರವಾದವು ಆಚಾರ್ಯರಿಗೆ ಸಂಮತವೆ ?– ಎಂದು ವಿಚಾರಮಾಡುವದಕ್ಕೆ ಹೊರಟರೆ, ಆಚಾರ್ಯರ ಪ್ರಸ್ಥಾನತ್ರಯಭಾಷ್ಯಗಳಲ್ಲಿ 'ಅವತಾರ'ವೆಂಬ ಶಬ್ದವೇ ಕಾಣಿಸುವದಿಲ್ಲ. ಆದರೂ **'ಸ್ಯಾತ್ ಪರಮೇಶ್ವರ ಸ್ಯಾಪಿ ಇಚ್ಛಾವಶಾನ್ಮಾಯಾಮಯಂ ರೂಪಂ ಸಾಧಕಾನುಗ್ರಹಾ ರ್ಥಮ್'** (ಸೂ. ಭಾ. ೧-೧-೨೦) ಪರಮೇಶ್ವರನೂ ಸಾಧಕರನ್ನು ಅನುಗ್ರಹಿಸು ವದಕ್ಕೋಸ್ಕರ ಮಾಯಾಮಯವಾದ ರೂಪವನ್ನು ಇಚ್ಛಾಮಾತ್ರದಿಂದ ಧರಿಸ ಬಹುದು– ಎಂದು ಸೂತ್ರಭಾಷ್ಯದಲ್ಲಿ ಆಚಾರ್ಯರು ಬರೆದಿರುತ್ತಾರೆ. ಮಹಾ ಭಾರತದಲ್ಲಿ ಮಹಾವಿಷ್ಣುವು ಮತ್ಸ್ಯಾದಿರೂಪಗಳನ್ನು ಧರಿಸಿ ಲೋಕಾನುಗ್ರಹ ವನ್ನು ಮಾಡಿದನೆಂದು ಭೀಷ್ಮಸ್ತವರಾಜಾದಿಗಳಲ್ಲಿ ಬರೆದಿದೆ; ಆಚಾರ್ಯರು ಭೀಷ್ಮಸ್ತವರಾಜದಿಂದ ಶ್ಲೋಕಗಳನ್ನು ಆರಿಸಿ ಸೂತ್ರಭಾಷ್ಯದಲ್ಲಿ ಉದಾಹರಿಸಿರು ವದು ಕಂಡುಬರುತ್ತದೆ. ಭಾಗವತದಲ್ಲಿ ಭಗವಂತನ 'ಅವತಾರಗಳು' ಅನಂತ ವಾಗಿರುತ್ತವೆಯೆಂದು('ಅವತಾರಾ ಹ್ಯಸಂಖ್ಯೇಯಾ ಹರೇಃ ಸತ್ತ್ವನಿಧೇರ್ದ್ವಿಜಾಃ' ಭಾಗ. ೧-೩-೨೬)ವರ್ಣಿಸಿದೆ. ಆಚಾರ್ಯರೂ **'ಸ ಆದಿಕರ್ತಾ ನಾರಾಯಣಾ ಖ್ಯೋ ವಿಷ್ಣುರ್ಭೌಮಸ್ಯ ಬ್ರಹ್ಮಣೋ ಬ್ರಾಹ್ಮಣತ್ವಸ್ಯ ರಕ್ಷಣಾರ್ಥಂ ದೇವಕ್ಯಾಂ ವಸುದೇವಾದಂಶೇನ ಕೃಷ್ಣಃ ಕಿಲ ಸಂಬಭೂವ'** (ಗೀ. ಭಾ. ಅವ.) ಆದಿಕರ್ತನಾದ ನಾರಾಯಣನೆಂಬ ಹೆಸರಿನ ಆ ವಿಷ್ಣುವು ಭೂಮಿಯ ಬ್ರಹ್ಮವಾದ ಬ್ರಾಹ್ಮಣ್ಯವನ್ನು ರಕ್ಷಿಸುವದಕ್ಕಾಗಿ ದೇವಕಿಯಲ್ಲಿ ವಸುದೇವನಿಂದ ಅಂಶದಿಂದ ಕೃಷ್ಣನಾದನು– ಎಂದು ಬರೆದಿರುತ್ತಾರೆ. ಆದ್ದರಿಂದ ಸನಾತನಾರ್ಯ ಧರ್ಮದಲ್ಲಿ ವಿಶ್ವಾಸವಿರುವವರಿಗೆ ಅವತಾರದಲ್ಲಿ ನಂಬಿಕೆಯಿರುವದು ಸಹಜ ವಾಗಿದೆ.

ಸರ್ವಶಕ್ತನಾದ ಈಶ್ವರನು ಭೂಮಿಯಮೇಲೆ ಅವತರಿಸಿಯೇ ಧರ್ಮ ಸಂಸ್ಥಾಪನೆಮಾಡಬೇಕಾದ ಆವಶ್ಯಕತೆಯೇನೂ ಇಲ್ಲ. ಅವತಾರಪುರುಷರು

ಗಳೆಂಬವರಲ್ಲಿಯೂ ನ್ಯೂನಾತಿರೇಕಗಳು ಕಂಡುಬರುತ್ತಿರುವವಾದ್ದರಿಂದ ಅವರನ್ನು ಸರ್ವಜ್ಞನಾದ ಈಶ್ವರನ ಅವತಾರವೆಂದು ಕರೆಯಲಾಗದು– ಎಂದು ಕೆಲವರು ಅವತಾರವಾದವನ್ನು ಆಕ್ಷೇಪಿಸುತ್ತಾರೆ. ಮಹಾಕಾರ್ಯಗಳನ್ನು ಮಾಡುವ ಮಹಾತ್ಮರಲ್ಲಿ ತತ್ಕಾಲಕ್ಕೆ ಪರಮೇಶ್ವರನ ಆವೇಶವುಂಟಾಗಿರುತ್ತದೆ ; ಆದ್ದರಿಂದ ಅವರನ್ನು ಅವತಾರಪುರುಷರೆಂದು ಮಹಾಜನರು ನಂಬುತ್ತಾರೆ– ಎಂದು ಕೆಲವರು ಕಲ್ಪಿಸಿರುತ್ತಾರೆ. 'ಅಜಾಯಮಾನೋ ಬಹುಧಾ ವಿಜಾಯತೇ' (ತೈ. ಆ. ೩–೧೩) ಎಂಬ ಶ್ರುತಿಯನ್ನೂ 'ಅಜೋಽಪಿ ಸನ್ನವ್ಯಯಾತ್ಮಾ' (ಗೀ. ೪–೬) ಎಂಬ ಗೀತೋಕ್ತಿಯನ್ನೂ ಅನುಸರಿಸಿ ಶಂಕರಭಗವತ್ಪಾದರು "ಸ ಚ ಭಗವಾನ್ ಜ್ಞಾನೈಶ್ವರ್ಯಶಕ್ತಿಬಲವೀರ್ಯತೇಜೋಭಿಃ ಸದಾ ಸಂಪನ್ನಸ್ತ್ರಿಗುಣಾತ್ಮಿಕಾಂ ವೈಷ್ಣವೀಂ ಸ್ವಾಂ ಮಾಯಾಂ ಪ್ರಕೃತಿಂ ವಶೀಕೃತ್ಯ ಅಜೋಽವ್ಯಯೋ ಭೂತಾನಾಮೀಶ್ವರೋ ನಿತ್ಯಶುದ್ಧಬುದ್ಧಮುಕ್ತಸ್ವಭಾವೋಽಪಿ ಸನ್ ಸ್ವಮಾಯಯಾ ದೇಹವಾನಿವ ಜಾತ ಇವ ಚ ಲೋಕಾನುಗ್ರಹಂ ಕುರ್ವನ್ ಲಕ್ಷ್ಯತೇ" ಎಂದು ಗೀತಾವತರಣಿಕೆಯ ಭಾಷ್ಯದಲ್ಲಿ ಬರೆದಿರುತ್ತಾರೆ 'ಆ ಭಗವಂತನು ಜ್ಞಾನ, ಐಶ್ವರ್ಯ, , ಬಲ, ವೀರ್ಯ, ತೇಜಸ್ಸು– ಇವುಗಳಿಂದ ಯಾವಾಗಲೂ ಕೂಡಿರುವವನು ; ತ್ರಿಗುಣಾತ್ಮಕವಾದ ಮಾಯೆಯೆಂಬ ಮೂಲಪ್ರಕೃತಿಯನ್ನು ಅಳವಡಿಸಿಕೊಂಡೇ– ಅಜನೂ ಅವ್ಯಯನೂ ಭೂತಗಳಿಗೆಲ್ಲ ಒಡೆಯನೂ ನಿತ್ಯಶುದ್ಧಬುದ್ಧಮುಕ್ತಸ್ವಭಾವನೂ ಆಗಿದ್ದರೂ– ತನ್ನ ಮಾಯೆಯಿಂದ ದೇಹವಂತನಾದಂತೆಯೂ ಹುಟ್ಟಿದವನಂತೆಯೂ ಕಾಣಿಸಿಕೊಂಡು ಲೋಕಾನುಗ್ರಹವನ್ನು ಮಾಡುತ್ತಿರುತ್ತಾನೆ' ಎಂಬ ಈ ಭಾಷ್ಯವಾಕ್ಯವು ಅವತಾರಕ್ಕೆ ಎಲ್ಲಾ ಉಪಪತ್ತಿಗಳನ್ನೂ ಒದಗಿಸಿಕೊಡುತ್ತಿದೆ ಎಂದು ಹೇಳಬಹುದು. ಆದ್ದರಿಂದ ಅದ್ವೈತಸಿದ್ಧಾಂತದಲ್ಲಿ ವಿಶ್ವಾಸವಿರುವವರು ಅವತಾರವಾದದಲ್ಲಿ ಶ್ರದ್ಧೆಯಿಡುವದೇನೂ ಅಸಂಗತವೆನಿಸಲಾರದು. 'ಸರ್ವಶಕ್ತನಾಗಿರುವ ಪರಮೇಶ್ವರನು ಏತಕ್ಕೆ ಅವತರಿಸಬೇಕು ?- ಎಂಬ ಆಕ್ಷೇಪವನ್ನು ಒಡ್ಡುವವರು ನಿತ್ಯತೃಪ್ತನಾದ ಪರಮೇಶ್ವರನು ಜಗತ್ತನ್ನೇಕೆ ಸೃಷ್ಟಿಸಬೇಕು ? ಆ ಸರ್ವಶಕ್ತನು ಭಕ್ತರಿಗೆ ಜ್ಞಾನಭಕ್ತಿವೈರಾಗ್ಯಾದಿಸಾಧನಗಳ ಮೂಲಕವೇ ಮುಕ್ತಿಯಾಗಬೇಕೆಂದೇಕೆ ಸಂಕಲ್ಪಿಸಬೇಕು ?– ಎಂಬ ಆಕ್ಷೇಪಗಳಿಗೂ ಪರಿಹಾರವನ್ನು ಕಂಡುಕೊಳ್ಳಲಾರರೆಂಬುದು ಸ್ಪಷ್ಟವಾಗಿದೆ. ಶಿವರಹಸ್ಯದಲ್ಲಿ ಆಚಾರ್ಯರನ್ನು ಅಂಶಾವತಾರವೆಂದೇ ಒತ್ತಿ ಹೇಳಿದಂತೆ ಕಾಣುತ್ತದೆ. ಪರಮೇಶ್ವರನು ಒಂದು ಕಾಲದಲ್ಲಿ ಒಂದು ದೇಶದಲ್ಲಿ ತೋರಿಕೊಂಡರೆ ಅದು ಅಂಶವೆಂದು ಹೇಳುವದೇ ಯುಕ್ತ. ಆದರೂ 'ವ್ಯಾವೃತ್ತಕೃತ್ಸ್ನೋಪಾಧಿಭೇದಾಪೇಕ್ಷಯಾ ತು ಸರ್ವಃ ಪರತ್ವೇನಾಭಿಧೀಯತೇ ಶ್ರುತಿಸ್ಮೃತಿವಾಕ್ಯೈಃ' ಉಪಾಧಿರಹಿತವಾದ ರೂಪದಿಂದ ಪ್ರತಿಯೊಬ್ಬನೂ ಪರಮಾತ್ಮನೇ ಎಂಬ (ಬೃ. ಭಾ. ೧–೪–೬) ಭಾಷ್ಯಕಾರರ

ಉಕ್ತಿಯಂತ ಬ್ರಹ್ಮಾತ್ಮೈಕತ್ವವನ್ನು ಮನಗಂಡು ಸರ್ವರಿಗೂ ಬೋಧಿಸಿದ ಆಚಾರ್ಯರು ಪರಮಾತ್ಮನೇ ಎಂದರೂ ತಪ್ಪಾಗುವದಿಲ್ಲವೆಂದು ನಮ್ಮ ಭಾವನೆ.

## ಶಂಕರಾಚಾರ್ಯರ ಕಾಲ

೧೩. ಆಚಾರ್ಯರು ಕಾಲಾತೀತನಾದ ಪರಮಶಿವನೇ ಆದ್ದರಿಂದಲೇ ಏನೋ ಎಂಬಂತೆ ಅವರ ಆವಿರ್ಭಾವತಿರೋಧಾನಕಾಲಗಳ ನಿರ್ಣಯವನ್ನು ಮಾಡುವದು ಅತ್ಯಂತಕಷ್ಟವಾಗಿರುತ್ತದೆ. ಪ್ರಚಲಿತಶಾಂಕರಪೀಠಗಳ ಸಂಪ್ರದಾಯದವರು ಒಬ್ಬೊಬ್ಬರು ಒಂದೊಂದು ಕಾಲವನ್ನು ಕೊಟ್ಟಿರುತ್ತಾರೆ :

(೧) ಕಾಮಕೋಟಿಪೀಠದ ಸಂಪ್ರದಾಯದಂತೆ ; ಆತ್ಮಬೋಧರು ಉದಾಹರಿಸಿರುವ ಪ್ರಾಚೀನಶಂಕರವಿಜಯದಲ್ಲಿ (ಗು. ಸ. ೩-೪೬) ಈ ಶ್ಲೋಕವಿದೆ :

ತಿಷ್ಯೇ ಪ್ರಯಾತ್ಯನಲಶೇವಧಿಬಾಣನೇತ್ರೇ
ಯೋ ನನ್ದನೇ ದಿನಮಣಾವುದಗಧ್ವಭಾಜಿ ।
ರಾಧೇಽದಿತೇರುಡುನಿ ನಿರ್ಗತಮಸ್ತಲಗ್ನೇ[1]
ಪ್ಯಾಹೂತವಾನ್ ಶಿವಗುರುಃ ಸ ಚ ಶಙ್ಕರೇತಿ ॥

'ಕಲಿಪ್ರಾರಂಭವಾದಮೇಲೆ ೨೫೯೩ನೆಯ ಸಂವತ್ಸರವಾದ ನಂದನ ಸಂವತ್ಸರದ ಉತ್ತರಾಯಣ ವೈಶಾಖ (ಶುದ್ಧ ಪಂಚಮಿ) ಪುನರ್ವಸುನಕ್ಷತ್ರದಲ್ಲಿ ಕರ್ಕಾಟಕಲಗ್ನದಲ್ಲಿ (ವಿದ್ಯಾಧಿಪತಿ ಎಂಬ ಹೆಸರುಳ್ಳ ಶಿವಗುರುವಿನಿಂದ ಹುಟ್ಟಿದನು). ಶಿವಗುರುವು ಶಂಕರನೆಂದು ಆತನನ್ನು ಕರೆದನು'. ಈ ಮತದಲ್ಲಿ ಆಚಾರ್ಯರು ಕ್ರಿ. ಪೂ. 509ರಲ್ಲಿ ಜನಿಸಿದರೆಂದು ಒಪ್ಪಿದೆ.

### ವ್ಯಾಸಾಚಲೀಯದಲ್ಲಿ

ಅಬ್ದೇ ಕಲೇರನಲವರ್ಷಶರಾಕ್ಷಿಸಂಖ್ಯೇ
ಶ್ರೀನನ್ದನೇ ದಿನಮಣಾವುದಗಧ್ವಭಾಜಿ ।
ರಾಧೇಽಧಿಪಞ್ಚಮಿತಿಥಾವಸಿತೇತರಾಯಾಮ್
ವಾರೇ ರವೇರದಿತಿಭೇ ಸುಭಯೋಗಯುಕ್ತೇ ॥
ಲಗ್ನೇ ಶುಭೇ ಶುಭಯುತೇ ಸುಷುವೇ ಕುಮಾರಂ
ಶ್ರೀಪಾರ್ವತೀವ ಸುಖಿನೀ ಶುಭವೀಕ್ಷಿತೇ ಚ
ಜಾಯಾ ಸತೀ ಶಿವಗುರೋರ್ನಿಜತುಙ್ಗಸಂಸ್ಥೇ
ಸೂರ್ಯೇ ಕುಜೇ ರವಿಸುತೇ ಚ ಗುರೌ ಚ ಕೇನ್ದ್ರೇ ॥

1. ಶ್ರೀ. ಶಂ. ದಲ್ಲಿ 'ಅಜ್ಗಲಗ್ನೇ' ಎಂದಿದೆ; ನಮ್ಮಲ್ಲಿರುವ ಸುಷಮಾಗ್ರಂಥದಲ್ಲಿ ಕೈಪ್ರತಿಯಲ್ಲಿ ಅಸ್ತಲಗ್ನೇ ಎಂದಿದೆ. ಇದು 'ಅಂಬುಲಗ್ನೇ' ಎಂದಿರಬೇಕೆ? ಜ್ಯೋತಿಷ್ಕರು ಇದನ್ನು ನಿರ್ಣಯಮಾಡಬೇಕು.

.ಶಂ. ೪–೨೦,೨೧) ಎಂದಿದೆಯಂತೆ (ಶ್ರೀ.ಶಂ.ಅನು. ೨ ಪು. ·1). ನಮ್ಮಲ್ಲಿರುವ ಪುಸ್ತಕದಲ್ಲಿ ಮೊದಲನೆಯ ಶ್ಲೋಕವಿಲ್ಲ; ಎರಡನೆಯ ಶ್ಲೋಕವು ಮಾತ್ರ ಮಾಧವಕವಿಕೃತಶಂಕರವಿಜಯದಲ್ಲಿದೆ (ಮಾ.ಶಂ. ೨–೭೧). ಯುಧಿಷ್ಠಿರ ಶಕ ೨೬೩೧ನೆಯ ನಂದನಸಂವತ್ಸರದ ವೈಶಾಖ ಶುದ್ಧ ೫ ಭಾನುವಾರ, ಪುನರ್ವಸು ನಕ್ಷತ್ರದಲಿ ಅಭಿಜಿನ್ಮುಹೂರ್ತದಲ್ಲಿ ಕರ್ಕಾಟಕಲಗ್ನದಲ್ಲಿ ರವಿಕುಜಗುರುಶನಿಗಳು ಉಚ್ಚಸ್ಥರಾಗಿ ಕೇಂದ್ರದಲ್ಲಿರಲು ಶುಕ್ರನು ಉಚ್ಚಸ್ಥಾನದಲ್ಲಿದ್ದು ಬುಧನು ರವಿಯೊಡನೆ ಸೇರಿರಲು ಇಂಥ ಶುಭಮುಹೂರ್ತದಲ್ಲಿ ಆರ್ಯಾಂಬೆಯು ಮಗನನ್ನು ಪಡೆದಳು –ಎಂಬುದು ಶ್ಲೋಕದ ಒಟ್ಟರ್ಥ. ಇಲ್ಲಿಯೂ ಪ್ರಾಚೀನಶಂಕರವಿಜಯದಲ್ಲಿರುವ ವಿವರಗಳೇ ಇವೆ. ಕರ್ಕಾಟಕಲಗ್ನದ ವಿಚಾರವುಮಾತ್ರ ಇಲ್ಲಿಲ್ಲ; ವೈಶಾಖ ಶು. ೫ ರವಿವಾರ ಜನನವೆಂದು ಬರೆದಿದೆ. ಇದೂ ಕಾಂಚೀಪೀಠದ ಸಂಪ್ರದಾಯಕ್ಕೆ ಅನುಸಾರವಾಗಿದೆ.

ಇದೇ ಗ್ರಂಥದಲ್ಲಿ ಆಚಾರ್ಯರು ಸಿದ್ಧಿ ಹೊಂದಿದ ವಿವರಗಳು ಹೀಗಿವೆಯಂತೆ:

ವರ್ಷೇ ಕಲೇಃ ಶರವಿಲೋಚನಶಾಸ್ತ್ರನೇತ್ರೇ
ರಕ್ತಾಕ್ಷಿನಾಮ್ನಿ ವೃಷಶುಕ್ಲಮುಕುನ್ದತಿಥ್ಯಾಮ್ ।
ಗಚ್ಛನ್ ಸ ಜಾತು ಸವಿಧೇ ಪರದೇವತಾಯಾಃ
ತ್ಯಕ್ತುಂ ಸಮೃಚ್ಛದಥ ಭೌತಿಕಮಾತ್ಮದೇಹಮ್ ॥

'ಕಲಿ ೨೬೨೫ನೆಯ ರಕ್ತಾಕ್ಷಿಸಂವತ್ಸರದ (ಕ್ರಿ.ಪೂ. 477) ವೈಶಾಖ ಶುದ್ಧ ದ್ವಾದಶೀ ದಿನ ಪರದೇವತೆಯ ಸಮೀಪಕ್ಕೆ ಹೋಗಿ ಭೌತಿಕದೇಹವನ್ನು ಬಿಡುವುದ ಕ್ಕಿಚ್ಛಿಸಿದರು' (ಶ್ರೀ.ಶಂ. ೨ ಪು. 22).ಈ ಶ್ಲೋಕವೂ ನಮ್ಮ ವ್ಯಾಸಾಚಲೀಯದಲ್ಲಿಲ್ಲ. ಇದಕ್ಕನುಗುಣವಾಗಿಯೇ ಪ್ರಾಚೀನಶಂಕರವಿಜಯದಲ್ಲಿಯೂ

ಕಲ್ಯಬ್ದೈಶ್ಚ ಶರೇಕ್ಷಣಾಧ್ವನಯನೈಃ ಸತ್ಕಾಮಕೋಟಿಪ್ರಥೇ
ಪೀಠೇ ನ್ಯಸ್ಯ ಸುರೇಶ್ವರಂ ಸಮುಚಿತಂ ಸರ್ವಜ್ಞಸಂಜ್ಞಂ ಮುನಿಮ್ ।
ಕಾಮಾಕ್ಷ್ಯಾಃ ಸವಿಧೇ ಸ ಜಾತು ನಿವಿಶನ್ನುನ್ಮುಕ್ತಲೋಕಸ್ಪೃಹೋ
ದೇಹಂ ಸ್ವಂ ವ್ಯಪಹಾಯ ದೇಹ್ಯಸುಗಮಂ ಧಾಮ ಪ್ರಪೇದೇ ಪರಮ್ ॥

ಎಂದಿದೆಯೆಂದು ಆತ್ಮಬೋಧರು ಹೇಳುತ್ತಾರೆ. ಶ್ರೀಚಿತ್ಸುಖಾಚಾರ್ಯರು ಬರೆದಿರುವ ಬೃಹಚ್ಛಂಕರವಿಜಯದಲ್ಲಿಯೂ ಇದಕ್ಕನುಗುಣವಾಗಿಯೇ ಜನನ ಕಾಲವಿದೆ. ಇದನ್ನು ೪ನೆಯ ಮತ್ತು ೫ನೆಯ ಪರಿಶಿಷ್ಟದಲ್ಲಿ ಕೊಟ್ಟಿದೆ.

ಆಚಾರ್ಯರು ಸಿದ್ಧಿಯನ್ನು ಹೊಂದಿದ ಕಾಲವನ್ನು ಬೃಹಚ್ಛಂಕರವಿಜಯದಲ್ಲಿ ಹೀಗೆ ಬರೆದಿದೆಯಂತೆ ;

ಷಡ್ವಿಂಶ(?) ವಹ್ನ್ಯಬ್ಧಿಶಾಸ್ತ್ರನಯುನಾಜ್ಯಯುಧಿಷ್ಠಿರಾಬ್ದೇ
ದ್ವಾತ್ರಿಂಶತಂ ಹಿ ಶರದೋ ಧರಣೀಂ ವಿಭೂಷ್ಯ ।
ಶ್ರೀಶಙ್ಕರೇನ್ದ್ರಗುರುರಾಟ್ಕೃತರಾಜಸೇನಃ
ಸಂಶಿಷ್ಯ ಧರ್ಮಮಖಿಲಂ ಶಿವತಾಂ ಪ್ರಪೇದೇ ॥

—(ಶ್ರೀ. ಶಂ. ಅನು. ಪು ೨೭)

ಯುಧಿಷ್ಠಿರಶಕ ೨೬೬೩ (ಕ್ರಿ.ಪೂ. 477ರಲ್ಲಿ) ಮೂವತ್ತೆರಡು ವರ್ಷಗಳು ಭೂಮಿಯನ್ನಲಂಕರಿಸಿದ ಮೇಲೆ ರಾಜಸೇನನಿಂದ ಸೇವೆಗೊಂಡ ಶ್ರೀಶಂಕರೇಂದ್ರ ಗುರುರಾಜನು ಶಿವತ್ವವನ್ನು ಹೊಂದಿದನು– ಎಂದು ಶ್ಲೋಕಾರ್ಥ.

(೨) ದ್ವಾರಕಾಮಠದ ಬಳಿಯಲ್ಲಿರುವ ಒಂದು ಶಾಸನದಲ್ಲಿ ಯುಧಿಷ್ಠಿರಶಕ ೨೬೩೧ ನೆಯ ವೈಶಾಖ ಶುದ್ಧ ಪಂಚಮಿಯಲ್ಲಿ ಅವತರಿಸಿ ೨೬೬೩ನೆಯ ಕಾರ್ತಿಕ ಹುಣ್ಣಿಮೆಯಲ್ಲಿ ಬ್ರಹ್ಮೀಭೂತರಾದರೆಂದು ಇದೆಯಂತೆ. ಇದು ಚಿತ್ಸುಖರ ಹೇಳಿಕೆಯೇ ಆಗಿದೆ.

ಇಲ್ಲಿಯವರೆಗೆ ಕ್ರಿಸ್ತಪೂರ್ವ ಐದನೆಯ ಶತಮಾನವೇ ಆಚಾರ್ಯರ ಜನನಕಾಲವೆಂದು ಹೇಳುವವರ ಮತವನ್ನು ತಿಳಿಸಿದಂತಾಯಿತು.

(೩) ಶೃಂಗೇರೀಪೀಠದ ಸಂಪ್ರದಾಯದಂತೆ ವಿಕ್ರಮಶಕೆ ೧೪ನೆಯ ಈಶ್ವರಸಂವತ್ಸರದ ವೈಶಾಖ ಶುದ್ಧ ೫ ಆರ್ದ್ರಾನಕ್ಷತ್ರ ಮಿಥುನಲಗ್ನದಲ್ಲಿಯೇ ಆಚಾರ್ಯರ ಅವತಾರವು ವಿಕ್ರಮಶಕೆಯ ೪೬ನೆಯ ಜ್ಯೇಷ್ಠ ಶುದ್ಧ ದ್ವಾದಶಿಯ ದಿನ ಕೈಲಾಸಗಮನವೆಂದು ಹೇಳುತ್ತಾರೆ. ಈ ಸಂಪ್ರದಾಯದಲ್ಲಿ ಕ್ರಿ.ಪೂ. 44ರಿಂದ ಕ್ರಿ.ಪೂ. 12ರವರೆಗೆ ಆಚಾರ್ಯರ ಕಾಲವಾಗಿದೆ. ಕೂಡಲಿಮಠದ ಪರಂಪರೆಯ ಪಟ್ಟಿಯಲ್ಲಿ ವಿಕ್ರಮಶಕೆ ೭೫ನೆಯ ವರ್ಷದಲ್ಲಿ (ಕ್ರಿ.ಪೂ. 18( ಆಚಾರ್ಯರ ಅವತಾರವಾಗಿ ವಿಕ್ರಮಶಕೆ ೧೦೭ನೆಯ ವರ್ಷ (ಕ್ರಿ.ಶ.50) ದಲ್ಲಿ ಕೈಲಾಸವನ್ನು ಸೇರಿದರೆಂದು ಸೂಚಿಸಿದೆ ಎಂದು ಸಂಸ್ಥಾನದ ಪೀಠಾಧಿಪರ ಉಪನ್ಯಾಸದಲ್ಲಿ (ಪು. ೯) ಇವೆ. ಇಲ್ಲಿ ಕ್ರಿಸ್ತಪೂರ್ವ, ಮತ್ತು ಕ್ರಿಸ್ತಾನಂತರದ ಒಂದನೆಯ ಶತಮಾನವನ್ನು ಆಚಾರ್ಯರ ಕಾಲವೆಂದು ಅಂಗೀಕರಿಸದಂತೆ ಆಗಿದೆ.4

1. ಯುಧಿಷ್ಠಿರಶಕಾರಂಭದ ವಿಷಯಕ್ಕೆ ವಿವಿಧಾಭಿಪ್ರಾಯಗಳಿವೆ. (ಶ್ರೀ.ಶಂ.ಅನು ೨ ಪು. ೨೮. ೩೨). ಇಲ್ಲಿ ಕಲ್ಯಾರಂಭದಿಂದ ೨೬೩೧ಕ್ಕೇ ಆಚಾರ್ಯರ ಜನನವೆಂದಿಟ್ಟುಕೊಂಡಿದೆ.

2. ಶೃಂಗೇರಿಯಲ್ಲಿ ಅಂಗೀಕರಿಸಿದ ವಿಕ್ರಮಶಕೆಯು ಉತ್ತರದೇಶದ ಮಾಲವ ಶಕೆಯಲ್ಲವೆಂದೂ ಚಾಲುಕ್ಯವಿಕ್ರಮವನ್ನು ತೆಗೆದುಕೊಳ್ಳಬೇಕೆಂದೂ ಸರ್ವಪ್ರಥಮವಿಕ್ರಮನು ಕ್ರಿ. ಶ. 670ರಲ್ಲಿ ಸಿಂಹಾಸನಾಧಿರೋಹಣಮಾಡಿದ್ದರಿಂದ ಶಂಕರರ ಜನನವು ಕ್ರಿ ಶ. 684 ತಿರೋಧಾನ ಕ್ರಿ.ಶ. 716 ಎಂದಾಗುವದೆಂದೂ ಕಲ್ಪಿಸಿದವರು ಲೋಕಮಾನ್ಯತಿಲಕರು (?) (ಬಲ. ಶಂ. ಪು. ೩೯–೪೦.)

2. ಶ್ರೀ. ಶಂ. ಅನು. ೨ ಪು. ೨೯ ನೋಡಿರಿ.

4. ಬಾಳೆಕುದುರುಮಠದಲ್ಲಿ ಕೂಡಲಿ ಪೀಠಾಧ್ಯಕ್ಷರು ಮಾಡಿದ ಭಾಷಣ (ಕೂ.ಶಂ. ಪು. ೯)

(೪) ಆಚಾರ್ಯರ ಜನ್ಮಕಾಲವು ವೈಶಾಖ ಶು. ೫ ಎಂದು ಬಹುಮತ ವಿದ್ದರೂ ದಶಮಿಯೆನ್ನುವವರೂ ಇದಾರೆ; ಹಾಗೆಯೇ ಬ್ರಹ್ಮೀಭೂತರಾದ ದಿನ ದ್ವಾದಶಿ ಎನ್ನುವವರಂತೆ ಹುಣ್ಣಿಮೆಯೆನ್ನುವವರೂ ಇದಾರೆ. ಉದಾಹರಣೆಗೆ ನೀಲಕಂಠಭಟ್ಟಕೃತ ಶಂಕರಮಂದಾರಸೌರಭದಲ್ಲಿ ಹೀಗಿದೆ :

ಪ್ರಾಸೂತತಿಷ್ಯಶರದಾಮತಿಯಾತವತ್ಯಾ-
ಮೇಕಾದಶಾಧಿಕಶತೋನ ಚತುಃಸಹಸ್ರ್ಯಾಮ್ ।
ಸಂವತ್ಸರೇ ವಿಭವನಾಮ್ನಿ ಶುಭೇ ಮುಹೂರ್ತೇ
ರಾಧೇ ಸಿತೇ ಶಿವಗುರೋರ್ಗೃಹಿಣೀ ದಶಮ್ಯಾಮ್ ॥

ಕಲಿ (೪೦೦೦ಕ್ಕೆ ೧೧೧ ಕಡಿಮೆ ಅಂದರೆ) ೩೮೮೯ನೆಯ ವಿಭವಸಂವತ್ಸರದ ವೈಶಾಖ ಶುದ್ಧ ದಶಮಿಯದಿನ ಶಿವಗುರುವಿನ ಪತ್ನಿಯು ಶಂಕರರನ್ನು ಹಡೆದಳು ಎಂದರ್ಥ. ಇದಕ್ಕನುಗುಣವಾಗಿ ಶಂಕರಜಯಂತಿಯನ್ನು ಈಗಲೂ ದಶಮಿಯ ದಿನ ಆಚರಿಸುವವರು ಉತ್ತರಕರ್ನಾಟಕದಲ್ಲಿರುತ್ತಾರೆ.

ಮಾಧವೀಯಶಂಕರವಿಜಯದಲ್ಲಿ ಕಾಲವನ್ನು ಕೊಟ್ಟಿರುವದಿಲ್ಲ. ಹಿಂದೆ (ಪು. ೧೯) ಹೇಳಿರುವ ವ್ಯಾಸಾಚಲೀಯದ ಎರಡನೆಯ ಶ್ಲೋಕವೇ ಇಲ್ಲಿಯೂ ಕಾಣಬರುತ್ತದೆ. ಲಗ್ನೇ ಶುಭೇ ಶುಭಯುತೇ ಸುಷುವೇ ಕುಮಾರಂ| ಶ್ರೀಪಾರ್ವತೀವ ಸುಖಿನೀ ಶುಭವೀಕ್ಷಿತೇ ಚ|| ಜಾಯಾ (ಆರ್ಯಾ) ಸತೀ ಶಿವಗುರೋರ್ನಿಜತುಙ್ಗಸಂಸ್ಥೇ | ಸೂರ್ಯೇ ಕುಜೇ ರವಿಸುತೇ ಗುರುಣಾ ಚ ಕೇನ್ದ್ರೇ|| (ಮಾ.ಶಂ. ೨–೭೧). ಮಾಧವ, ವ್ಯಾಸಾಚಲ– ಇವರಿಬ್ಬರಲ್ಲಿ ಒಬ್ಬರು ಒಬ್ಬರಿಂದ ಶ್ಲೋಕವನ್ನು ತೆಗೆದುಕೊಂಡಿರುವರೆಂಬುದು ಖಂಡಿತ.

## ಚಿದ್ವಿಲಾಸೀಯ(೫ನೆಯ ಸರ್ಗ)ದಲ್ಲಿ :

ದಿವಸೇ ಮಾಧವರ್ತೌ ಚ ಸ್ವೋಚ್ಚಸ್ಥೇ ಗ್ರಹಪಞ್ಚಕೇ
ಮಧ್ಯಾಹ್ನೇ ಚಾಭಿಜಿನ್ನಾಮಮುಹೂರ್ತೇ ಚಾರ್ದ್ರಯಾ ಯುತೇ||೩೮||
ಉದಯಾಚಲವೇಲೇವ ಭಾನುಮನ್ತಂ ಮಹೌಜಸಮ್ ।
ಪ್ರಾಸೂತ ತನಯಂ ಸಾಧ್ವೀ ಗಿರಿಜೇವ ಷಡಾನನಮ್ ||೩೯||

ಇಲ್ಲಿ ಆಚಾರ್ಯರ ಹೆಸರನ್ನು ಹೇಳಿಲ್ಲ. ಹಿಂದೆ ಹೇಳಿದ 'ಬೃಹಚ್ಛಂಕರ ವಿಜಯ'ದಲ್ಲಿ ಹೇಳಿರುವ ಜನ್ಮಕಾಲವೇ ಸ್ವಲ್ಪಹೆಚ್ಚುಕಡಿಮೆಯಾಗಿ ಅದೇ ಮಾತುಗಳಲ್ಲಿ ವರ್ಣಿತವಾಗಿರುವದನ್ನು ವಾಚಕರು ಲಕ್ಷಿಸಬೇಕು. ಬೃಹಚ್ಛಂಕರವಿಜಯವನ್ನು ಆತ್ಮಬೋಧೇಂದ್ರರು ಪ್ರಮಾಣಗ್ರಂಥವೆಂದು ಪರಿಗಣಿಸಿರುತ್ತಾರೆ ; ಅದರ ಶ್ಲೋಕಗಳೇ ಇದರಲ್ಲಿಯೂ ಇರುವವೆಂಬುದರಿಂದ ಈ ಗ್ರಂಥದ ಕಾಲವನ್ನು

ನಿರ್ಣಯಿಸುವವರಿಗೆ ಪ್ರಯೋಜನಕರವಾಗಬಹುದೆಂದು ೫ನೆಯ ಪರಿಶಿಷ್ಟದಲ್ಲಿ ಆ ಶ್ಲೋಕಗಳನ್ನು ಕೊಟ್ಟಿರುತ್ತೇವೆ. ಕೇರಳೀಯಶಂಕರವಿಜಯದಲ್ಲಿ (ಅ. ೩-೫೩) ಹೀಗಿದೆಯಂತೆ (ಶ್ರೀ. ಶಂ. ಅನು. ಪು. ೨೦) :

> ಪ್ರವೃದ್ಧೇ ತತ್ರ ಚಾಸೂತ ನನ್ದನಂ ನನ್ದನೇ ಶುಭೇ ।
> ವೈಶಾಖೇ ಮಾಸಿ ಪಞ್ಚಮ್ಯಾಂ ಶುಕ್ಲಪಕ್ಷೇ ಪುನರ್ವಸೌ ॥

'ನಂದನಸಂವತ್ಸರದ ವೈಶಾಖಮಾಸ ಶುದ್ಧ ಪಂಚಮಿಯಲ್ಲಿ ಪುನರ್ವಸು ನಕ್ಷತ್ರದಲ್ಲಿ ಆರ್ಯಾಂಬೆ ಮಗನನ್ನು ಹಡೆದಳು'. ಇಲ್ಲಿ ಶಕೆಯ ವಿಚಾರವಿಲ್ಲ.

'ಕೇರಳೋತ್ಪತ್ತಿ' ಎಂಬ ಗ್ರಂಥದಲ್ಲಿ ಕಲಿ ೩೫೦೧ (ಕ್ರಿ.ಶ. 400) ಎಂದೂ ಅವರು ೩೮ ವರ್ಷಗಳ ಕಾಲ ಬದುಕಿದ್ದರೆಂದೂ ಇದೆಯಂತೆ. (Indian Antiquary VII p. 282, ಬಲ, ಪು. ೩೧) ಇದರಲ್ಲಿರುವ ಒಂದು ಕಥೆಯ ವಿಷಯಕ್ಕೆ ೪ನೆಯ ಪರಿಶಿಷ್ಟವನ್ನು ನೋಡಿ.

## ಸಾಂಪ್ರದಾಯಿಕಕಾಲನಿರ್ಣಯದ ಉಪಸಂಹಾರ :

೧೪. ಶಂಕರವಿಜಯಗಳ ಮತ್ತು ಮಠದ ಸಂಪ್ರದಾಯಗಳ ಅಭಿಪ್ರಾಯವನ್ನು ಹೊಂದಿಸಿಕೊಳ್ಳುವದು ಹೇಗೂ ಸಾಧ್ಯವಿಲ್ಲವೆಂಬುದು ನಿಶ್ಚಿತವಾಗಿದೆ. ಕ್ರಿ. ಪೂ. ಐದನೆಯ ಶತಮಾನದಿಂದ ಹಿಡಿದು ಕ್ರಿ. ಶ. ಒಂದನೆಯ ಶತಮಾನದ ಆದಿಯವರೆಗೂ ತಮತಮಗೆ ತೋಚಿದ ಕಾಲಗಳನ್ನು ಅವರವರು ಬರೆದಿರುತ್ತಾರೆ. ಇವರಲ್ಲಿ ಯಾರೊಬ್ಬರೂ ಆಚಾರ್ಯರ ಕಾಲದವರಲ್ಲ; ಕೆಲವರು ವರ್ಷ, ತಿಂಗಳು, ವಾರ, ನಕ್ಷತ್ರ, ಲಗ್ನ- ಮುಂತಾದವುಗಳನ್ನು ಕೊಟ್ಟಿದ್ದರೂ ಅವರು ಕೊಟ್ಟಿರುವ ಕಾಲಕ್ಕೆ ಆಧಾರವೇನೆಂಬುದು ಸ್ಪಷ್ಟವಾಗಿರುವದಿಲ್ಲ ; ಅವು ಯಾವ ಶಕೆ ಎಂಬುದು ಸ್ಪಷ್ಟವಾಗುವದಿಲ್ಲ. ಶಕೆಯಿದ್ದ ಕಡೆಯಲ್ಲಿಯೂ ಸಂಶಯಕ್ಕೆ ಅವಕಾಶವಿದೆ. ಈಗಿನ ಐತಿಹಾಸಿಕರು ಕೆಲಕೆಲವು ಬಾಹ್ಯಸಾಕ್ಷ್ಯಗಳಿಂದ ತರ್ಕಿಸಿ ಸಿದ್ಧಾಂತ ಮಾಡಿರುವ ಕಾಲಗಳೂ ಒಮ್ಮತವಾಗಿರುವದಿಲ್ಲ; ತರ್ಕಕ್ಕೆ ನಿಲುಗಡೆ ಎಲ್ಲಿಂದ ಬರಬೇಕು ? ಈ ಕಾಲವಿಷಯಕವಾದ ಅಭಿಪ್ರಾಯಗಳನ್ನು ೪ನೆಯ ಪರಿಶಿಷ್ಟದಲ್ಲಿ ತೋರಿಸಿರುತ್ತೇವೆ. ಶಂಕರಭಗವತ್ಪಾದರು ವೈಶಾಖ ಶುದ್ಧ ಪಂಚಮಿಯ ದಿನ ಹುಟ್ಟಿದರೆಂದು ಹೇಳುವವರಿಗೆ ಬಹುಮತವಿದೆ ; ದಶಮಿ ಎಂದು ಹೇಳುವವರ ಮತವು ಬಹಳ ಕಡಿಮೆಯ ಸಂಖ್ಯೆಯುಳ್ಳದು. ಆದರೆ ಪಂಚಮಿಯ ಪಕ್ಷವು ಕೂಡ ಸಾಧಾರವೆಂದು ನಂಬುವಹಾಗಿಲ್ಲ. 'ಶಂಕರ' ಎಂಬ ನಾಮಾಕ್ಷರಗಳ (೫,೧,೨ ಎಂಬ) ಅಂಕೆಗಳನ್ನು ಎಡಗಡೆಯಿಂದ ಎಣಿಸಿ ವೈಶಾಖ ಶುದ್ಧ ಪಂಚಮಿ ಎಂದು ತರ್ಕಿಸಿರಲೂಬಹುದು. ಇದರ ನಿಜವನ್ನು ಕಾಲಾತೀತನಾದ ಶಂಕರನೇ ಬಲ್ಲನೆಂದು ಹೇಳಬೇಕಾಗಿದೆ.

## ಬೃಹದಾರಣ್ಯಕಸೂತ್ರಭಾಷ್ಯಗಳ ಹೋಲಿಕೆ:

೧೫. ಆಚಾರ್ಯರ ಕಾಲನಿರ್ಣಯಕ್ಕೆ ಅವರ ಗ್ರಂಥಗಳ ಅಂತರಂಗ ಪರೀಕ್ಷೆಯು ಬಹುಮುಖ್ಯವಷ್ಟೆ? ಆದರೆ ಆಚಾರ್ಯರ ನಿಶ್ಚಿತಗ್ರಂಥಗಳು ಯಾವ ವೆಂಬುದನ್ನು ನಿಶ್ಚಯಿಸುವದೂ ಕಷ್ಟವಾಗಿದೆ ಎಂಬುದೊಂದು ದೌರ್ಭಾಗ್ಯವಾಗಿದೆ. ಪ್ರಸ್ಥಾನತ್ರಯಭಾಷ್ಯಗಳು ನಿಃಸಂಶಯವಾಗಿ ಆಚಾರ್ಯಕೃತವೆಂಬುದಕ್ಕೆ ಬಹು ಜನರ ಸಮ್ಮತಿ ಇದೆ. ಇವನ್ನು ಮುಂದೆ ಗ್ರಂಥಗಳ ವಿಚಾರವಾಗಿ ಬರೆಯುವಾಗ ವಿಚಾರಕ್ಕಿಟ್ಟುಕೊಳ್ಳಬೇಕಾಗಿದೆಯಾದರೂ ಸದ್ಯಕ್ಕೆ ಈ ವಿಷಯಕ್ಕೆಕೂಡ ಇರುವ ಒಂದು ತೊಡಕನ್ನು ಇಲ್ಲಿ ಹೇಳಲೇಬೇಕಾಗಿದೆ. ಈಗ ಸೂತ್ರಭಾಷ್ಯಕ್ಕೆ ಎಲ್ಲರೂ ಅಗ್ರಸ್ಥಾನವನ್ನು ಕೊಟ್ಟಿರುತ್ತಾರೆ. ನೈಷ್ಕರ್ಮ್ಯಸಿದ್ಧಿಯನ್ನು ಬರೆದ ಸುರೇಶ್ವರಾ ಚಾರ್ಯರು ಶ್ರೀಶಂಕರಪಾದಪದ್ಮಯುಗಲವನ್ನು ಸೇವೆಮಾಡಿ (ಶ್ರೀಮಚ್ಛಙ್ಕರ ಪಾದಪದ್ಮಯುಗಲಂ ಸಂಸೇವ್ಯ, ನೈ. ಸಿ. ೪-೭೪) ತಾವು ಗ್ರಂಥವನ್ನು ಬರೆದಿರುವೆ ನೆಂದು ಬಾಯಿಬಿಟ್ಟು ಹೇಳಿಕೊಂಡಿರುವರಾದರೂ ಸೂತ್ರಭಾಷ್ಯದಿಂದ ಯಾವ ವಾಕ್ಯವನ್ನೂ ಅಲ್ಲಿ ಅವತರಿಸಿರುವದಿಲ್ಲ; ಇದರಂತೆ '**ಶಂಕರಭಾನು**'ವೆಂದು ಗುರು ಗಳನ್ನು ಕೊಂಡಾಡಿರುವ (ತಸ್ಮೈ ಶಙ್ಕರಭಾನವೇ ಬೃ.ವಾ. ೬-೨೫) ಬೃಹ ದಾರಣ್ಯಕವಾರ್ತಿಕದದಲ್ಲಿಯೂ ಸೂತ್ರಭಾಷ್ಯದ ವಾಕ್ಯಗಳ ಪರಾಮರ್ಶವಿರು ವದಿಲ್ಲ. ಆದ್ದರಿಂದ ದೃಷ್ಟವಾದ ಆಧಾರದ ಮೇಲೆಯೇ ವಿಷಯವನ್ನು ನಂಬುವವ ರಾದ ಈಗಿನ ಗ್ರಂಥಶೋಧಕರಿಗೆ ಸೂತ್ರಭಾಷ್ಯ,ಬೃಹದಾರಣ್ಯಕಭಾಷ್ಯ- ಇವೆರಡೂ ಒಬ್ಬ ಶಂಕರಾಚಾರ್ಯರೇ ಬರೆದಿದ್ದಾರೆಂದು ತೋರಿಸಿಕೊಡುವದಕ್ಕೆ ನಮಗೆ ಸಾಧನ ವಿಲ್ಲವಾಗಿದೆ. ಶಂಕರರು ತಮ್ಮ ಗ್ರಂಥಗಳಲ್ಲಿ ಒಂದರಲ್ಲೊಂದನ್ನು ಹೆಸರಿಟ್ಟು ಪರಾಮರ್ಶಿಸುವ ಸ್ವಭಾವದವರಲ್ಲವಾದ್ದರಿಂದ ವಿಚಾರವು ಇನ್ನಷ್ಟು ದುಸ್ತರ ವಾಗಿರುತ್ತದೆ. ಇದರ ಜೊತೆಗೆ ಬೃಹದಾರಣ್ಯಕಭಾಷ್ಯದ ಶೈಲಿಯೂ ಸೂತ್ರಭಾಷ್ಯದ ಶೈಲಿಯೂ ಕೆಲವು ಸಂದರ್ಭಗಳಲ್ಲಿ ಬೇರೆಬೇರೆಯಾಗಿರುವಂತೆ ಕಾಣುತ್ತವೆ.

ಇಷ್ಟೇ ಅಲ್ಲ. ಒಂದು ಭಾಷ್ಯದಲ್ಲಿ ಮತ್ತೊಂದರಲ್ಲಿರುವ ಕೆಲವು ವಿಚಾರ ಗಳನ್ನು ಖಂಡಿಸಿರುವದೂ ಕಾಣಬರುತ್ತಿದೆ?[1] ಉದಾಹರಣೆಗೆ ಸ್ವಭಾವದಿಂದ ಸರ್ವಗತವಾಗಿರುವ ಅನಂತವಾದ ಪ್ರಾಣಗಳಿಗೆ ಕರ್ಮಜ್ಞಾನವಾಸನೆಗಳಿಗೆ ತಕ್ಕಂತೆ ದೇಹಾಂತರವಾಗುವ ವೃತ್ತಿಯು ಸಂಕೋಚವಿಕಾಸಗಳನ್ನು ಪಡೆಯು ತ್ತದೆ (ಅತಸ್ತದ್ವಶಾತ್ಸ್ವಭಾವತಃ ಸರ್ವಗತಾನಾಮನನ್ತಾನಾಮಪಿ ಪ್ರಾಣಾನಾಂ ಕರ್ಮಜ್ಞಾನವಾಸನಾನುರೂಪೇಣೈವ ದೇಹಾರಮ್ಭವಶಾತ್ **ಪ್ರಾಣಾನಾಂ ವೃತ್ತಿಃ ಸಂಕುಚತಿ ವಿಕಸತಿ ಚ** ಬೃ. ೪-೪-೩, ಪು. ೯೧೨) ಎಂದು ಹೇಳಿರುವ

1. ಈ ವಿಷಯವಾಗಿ ಇದೇ ಗ್ರಂಥಕರ್ತರು ಬೃಹದಾರಣ್ಯಕಭಾಷ್ಯದ ಪೀಠಿಕೆ ಯಲ್ಲಿ ವಿಸ್ತಾರವಾಗಿ ಬರೆದಿರುವದನ್ನು ನೋಡಿರಿ.

ಮತವನ್ನೇ ಸೂತ್ರಭಾಷ್ಯದಲ್ಲಿ 'ಏವಂ ಶ್ರುತ್ಯುಕ್ತೇ ದೇಹಾನ್ತರಪ್ರತಿಪತ್ತಿ ಪ್ರಕಾರೇ ಸತಿ ಯಾಃ ಪುರುಷಮತಿಪ್ರಭವಾಃ ಕಲ್ಪನಾಃ ವ್ಯಾಪಿನಾಂ ಕರಣಾನಾಮಾತ್ಮನಶ್ಚ ದೇಹಾನ್ತರಪ್ರತಿಪತ್ತೌ ಕರ್ಮವಶಾದ್ ವೃತ್ತಿ ಲಾಭಸ್ತತ್ರ ಭವತಿ....ಇತ್ಯೇವಮಾದ್ಯಾಃ ಸರ್ವಾ ಏವಾನಾದರ್ತವ್ಯಾಃ । ಶ್ರುತಿವಿರೋಧಾತ್ ||" (ಸೂ. ಭಾ. ೩-೧-೧) ಎಂದು ಖಂಡಿಸಿರುತ್ತದೆ. ಬೃಹದಾರಣ್ಯಕಭಾಷ್ಯದಲ್ಲಿ 'ಪುತ್ತಿಕಾದಿಶರೀರೇಷು ಗೋತ್ವಾದಿವತ್ ಕಾರ್ತ್ಸ್ನ್ಯೇನ ಪರಿಸಮಾಪ್ತ ಇತಿ ಸಮತ್ವಂ ಪ್ರಾಣಸ್ಯ । ನ ಪುನಃ ಶರೀರಪರಿಮಾಣೇನೈವ ಅಮೂರ್ತತ್ವಾತ್ಸರ್ವಗತತ್ವಾಚ್ಚ।.... ತೇ ಏತೇ ಸರ್ವ ಏವ ಸಮಾಃ ಸರ್ವೇ ಅನನ್ತಾಃ ಇತಿ ಶ್ರುತೇಃ ।' 'ಪುತ್ತಿಕಾದಿಪ್ರಾಣಿಗಳ ಶರೀರದಲ್ಲಿ ಗೋತ್ವವೇ ಮುಂತಾದವುಗಳಂತೆ ಸಂಪೂರ್ಣವಾಗಿ ತುಂಬಿಕೊಂಡಿರುತ್ತಾನೆಂಬುದೇ ಪ್ರಾಣನ ಸಮತ್ವವು; ಇಷ್ಟೇ ಹೊರತು ಶರೀರದ ಪರಿಮಾಣವೇ ಉಳ್ಳವನು ಎಂಬ ಕಾರಣ ದಿಂದ ಸಮನಲ್ಲ. ಏಕೆಂದರೆ ಪ್ರಾಣನು ಅಮೂರ್ತನೂ ಸರ್ವಗತನೂ ಆಗಿರು ತ್ತಾನೆ ...'ಇವರೆಲ್ಲರೂ....ಸಮರು, ಎಲ್ಲರೂ ಅನಂತರು' ಎಂಬ ಶ್ರುತಿ ಇದಕ್ಕೆ ಪ್ರಮಾಣವು' ಎಂದು ಸೂತ್ರಭಾಷ್ಯದಲ್ಲಿ ಖಂಡಿಸಿರುವ ಈ ಪಕ್ಷವನ್ನೇ ಅವಲಂಬಿಸಿ 'ಸರ್ವಗತಸ್ಯ ತು ಶರೀರಪರಿಮಾಣವೃತ್ತಿಲಾಭೋ ನ ವಿರುಧ್ಯತೇ ।' (ಸರ್ವಗತನಾದರೂ ಶರೀರಪರಿಮಾಣಕ್ಕೆ ತಕ್ಕಂತೆ ವೃತ್ತಿಲಾಭವಾಗುವದೇನೂ ವಿರುದ್ಧವಲ್ಲ) ಎಂದು ಬರೆದಿದೆ. ಸೂತ್ರಭಾಷ್ಯದಲ್ಲಿ 'ಸಮಃ ಪ್ಲುಷಿಣಾ' ಮುಂತಾದ ಶ್ರುತಿಗಳಲ್ಲಿ ಪ್ರಾಣನು ವಿಭುವೆಂದೂ ಹೇಳಿವೆಯಲ್ಲಾ!- ಎಂಬ ಶಂಕೆಯನ್ನು ಎಬ್ಬಿಸಿ 'ಆಧಿದೈವಿಕೇನ ಸಮಷ್ಟಿವ್ಯಷ್ಟಿರೂಪೇಣ ಹೈರಣ್ಯಗರ್ಭೇಣ ಪ್ರಾಣಾತ್ಮನೈವೈತದ್ವಿಭುತ್ವಮಾಮ್ನಾಯತೇ ನಾಧ್ಯಾತ್ಮಿಕೇನ। ಅಪಿ ಚ 'ಸಮಃ ಪ್ಲುಷಿಣಾ' ಇತ್ಯಾದಿನಾ ಸಾಮ್ಯವಚನೇನ ಪ್ರತಿಪ್ರಾಣಿವರ್ತಿನಾ ಪ್ರಾಣಸ್ಯ ಪರಿಚ್ಛೇದ ಏವ ಪ್ರದರ್ಶ್ಯತೇ। ತಸ್ಮಾದದೋಷಃ ।' (ಸೂ. ಭಾ. ೨-೪-೧೩)ಎಂದು ಬರೆದಿದೆ. ಇಲ್ಲಿ 'ಪ್ರಾಣನು ಸರ್ವಗತನಾಗಿರುವ ನಾದರೂ ಶರೀರಪರಿಮಾಣಕ್ಕೆ ತಕ್ಕಂತೆ ವೃತ್ತಿಲಾಭವಾಗುವದೇನೂ 'ವಿರುದ್ಧ ವಲ್ಲ' – ಎಂಬ ಬೃಹದಾರಣ್ಯಕವಾಕ್ಯದ ಅಭಿಪ್ರಾಯವನ್ನು ಮನದಂದರೆ ಶ್ರುತಿಗೆ ಅಥವಾ ಯುಕ್ತಿಗೆ ವಿರುದ್ಧವೆಂದು ಯಾರೋ ಆಕ್ಷೇಪಿಸಿದ್ದಕ್ಕೆ ಇದು ಸಮಾಧಾನವಾಗಿರಬೇಕೆಂದು ತರ್ಕಿಸುವದಕ್ಕೆ ಅವಕಾಶವಿದೆ; ಸೂತ್ರಭಾಷ್ಯದಲ್ಲಿ "ಸಮಃ ಪ್ಲುಷಿಣಾ" ಎಂಬ ಶ್ರುತಿಯು ಮುಖ್ಯಪ್ರಾಣನಿಗೆ ವ್ಯಾಪಕತ್ವವನ್ನೇ ಹೇಳುತ್ತದೆಯಲ್ಲ!- ಎಂಬ ಶಂಕೆಯನ್ನು ಯಾರೋ ಮಾಡಿದ್ದಕ್ಕೆ ಆ ಶ್ರುತಿಯೂ ಪರಿಚ್ಛೇದವನ್ನೇ ಹೇಳುತ್ತದೆಯೆಂದು ವ್ಯಾಖ್ಯಾನಮಾಡಬಹುದಾಗಿದೆಯಾದ್ದ ರಿಂದ ನಮ್ಮ ಪಕ್ಷದಲ್ಲಿ ಶ್ರುತಿವಿರೋಧದೋಷವಿಲ್ಲ ಎಂದು ಸಮಾಧಾನವನ್ನು ಬರೆದಂತೆ ಕಾಣಿಸುತ್ತದೆ.

ಈ ರೀತಿಯಲ್ಲಿ ಎರಡು ಪಕ್ಷಗಳು ಒಂದೊಂದು ದೃಷ್ಟಿಯಿಂದ ಶ್ರುತಿಗೂ ಯುಕ್ತಿಗೂ ಹೊಂದುಗೆಯಾಗಿಯೇ ಇದೆಯಾದರೂ ಈ ಎರಡರಲ್ಲಿ ಯಾವದನ್ನು ತೆಗೆದುಕೊಳ್ಳಬೇಕೆಂಬ ಬಗ್ಗೆ ವೇದಾಂತಿಗಳಲ್ಲಿ ಮತಭೇದವು ಮೊದಲಿನಿಂದಲೂ ಇತ್ತೆಂದೂ ಅವುಗಳಲ್ಲಿ ಒಂದನ್ನು ಬೃಹದಾರಣ್ಯಕಭಾಷ್ಯವೂ ಇನ್ನೊಂದನ್ನು ಸೂತ್ರಭಾಷ್ಯವೂ ಸ್ವೀಕರಿಸಿರುವವೆಂದೂ 'ನ ವಿರುಧ್ಯತೇ' ( ಬೃ. ಭಾ. ), "ಅದೋಷಃ" (ಸೂ. ಭಾ.)ಎಂಬ ಮಾತುಗಳಿಂದ ಸೂಚಿತವಾಗಿದೆ ಎಂಬುದನ್ನು ವಿಮರ್ಶಕರು ಒಪ್ಪಬೇಕಾಗುತ್ತದೆ. ಇದು ಸರಿಯಾದರೆ ಈ ಎರಡು ಭಾಷ್ಯಗಳಿಗೂ ಕರ್ತೃಗಳು ಒಬ್ಬರೇ ಶಂಕರಾಚಾರ್ಯರಲ್ಲ ಎಂದು ವಾದಿಸುವವರಿಗೆ ಇಲ್ಲಿ ಅವಕಾಶವಿರುತ್ತದೆ. ಈ ಇಬ್ಬರು ಸಮಕಾಲಿಕರಾಗಿದ್ದರೂ ಇರಬಹುದು ; ಒಬ್ಬರಿಗಿಂತ ಒಬ್ಬರು ಬೇರೆಯಾಗಿದ್ದರೂ ಇರಬಹುದು ; ಎನ್. ವೆಂಕಟರಾಮನ್‌ರವರು ಬರೆದಿರುವ ಕಾಮಕೋಟಿಪೀಠದ ಗುರುಪರಂಪರೆಯ ಕಾಲಕೋಷ್ಟಕದಲ್ಲಿ (Chronological Table) ಆದ್ಯಶಂಕರ, ಕೃಪಾಶಂಕರ, ಉಜ್ಜ್ವಲಶಂಕರ, ಮೂಕಶಂಕರ ಮತ್ತು ಅಭಿನವಶಂಕರ- ಎಂದ ಐದುಜನ ಶಂಕರರನ್ನು ತೋರಿಸಿರುತ್ತದೆ. ಆ ಕೋಷ್ಟಕವು ವಿಶ್ವಸನೀಯವಾಗಿದ್ದರೆ ಅವರೊಳಗೆ ಸೂತ್ರಭಾಷ್ಯವನ್ನು ಬರೆದವರು ಯಾರೆಂಬುದನ್ನು ಯಾವದಾದರೊಂದು ಸ್ವತಂತ್ರಪ್ರಮಾಣದಿಂದ ಸಿದ್ಧಿಪಡಿಸಬೇಕಾದದ್ದು ಆವಶ್ಯವಾಗುತ್ತದೆ. ಬೃಹದಾರಣ್ಯಕಭಾಷ್ಯವನ್ನು ಬರೆದಿರುವವರು ವಾರ್ತಿಕಕಾರರಾದ ಸುರೇಶ್ವರಾಚಾರ್ಯರ ಗುರುಗಳು ಎಂಬುದಕ್ಕಂತೂ ಯಾವ ಅಡ್ಡಿಯೂ ಈ ತೊಡಕಿನಿಂದ ಬರುವಹಾಗಿಲ್ಲ ; ಏಕೆಂದರೆ ಬೃಹದಾರಣ್ಯಕಭಾಷ್ಯಕಾರರು ತಮ್ಮ ಗುರುಗಳೆಂದು ಸುರೇಶ್ವರರೇ ಹೇಳಿಕೊಂಡುಬಿಟ್ಟಿರುತ್ತಾರೆ. ಈ ವಿಷಯದ ಸಾರಾಸಾರತೆಯನ್ನೂ ತತ್ತ್ವನಿರ್ಣಯದ ಕಾರ್ಯವನ್ನೂ ಪುರಾತತ್ತ್ವವಿಮರ್ಶಕರಿಗೆ ಬಿಟ್ಟು ಪ್ರಕೃತ ಸೂತ್ರಭಾಷ್ಯಕಾರರ ಕಾಲವಿಮರ್ಶೆಗೆ ಈಗ ಕೈಹಾಕುವೆವು.

## ಸೂತ್ರಭಾಷ್ಯದ ಕಾಲ

೧೫. ಸೂತ್ರಭಾಷ್ಯದಲ್ಲಿ **ಸ್ರುಘ್ನ, ಮಥುರಾ, ಪಾಟಲಿಪುತ್ರ**-ಇವುಗಳ ಪರಾಮರ್ಶವನ್ನು ( ಸೂ. ಭಾ. ೨-೧-೮, ೪-೨-೫ ) ಮಾಡಿರುತ್ತದೆ ; ಆ ದೃಷ್ಟಾಂತಗಳಿಂದ ಅವು ಆಚಾರ್ಯರ ಕಾಲಕ್ಕೆ ಇದ್ದವೆಂದು ತಿಳಿಯಬೇಕಾಗುತ್ತದೆ. ಆದರೆ ಪಾಟಲಿಪುತ್ರವು ಕ್ರಿ.ಶ. 756ರಲ್ಲಿ ನದಿಯ ಪ್ರವಾಹದಲ್ಲಿ ಮುಳುಗಿ ಹೋಯಿತೆಂದು ಇತಿಹಾಸದಿಂದ ತಿಳಿಯುತ್ತದೆ. ಆದ್ದರಿಂದ ಆ ಕಾಲಕ್ಕಿಂತ ಆಚಾರ್ಯರು ಮೊದಲು ಇದ್ದರೆಂದಾಯಿತು. ಇದರಂತೆ **ಪೂರ್ಣವರ್ಮನೆಂಬ** ರಾಜನ ಪರಾಮರ್ಶವೂ ( ಸೂ. ಭಾ. ೨-೧-೧೮ ) ಭಾಷ್ಯದಲ್ಲಿ ಕಾಣುತ್ತದೆ. ಪೂರ್ಣವರ್ಮನೆಂಬ ರಾಜನ ಹೆಸರು ಜಾವಾತಾಮ್ರಪಟ್ಟದಲ್ಲೊಂದು ಇದೆ.

ಯನಾದರೂ ಅವಕ್ಕೂ ಆಚಾರ್ಯರಿಗೂ ಸಂಬಂಧವಿಲ್ಲ ; ಇನ್ನೊಬ್ಬ ಪೂರ್ಣ ವರ್ಮನು ಪಶ್ಚಿಮಮಗಧದೇಶದ ರಾಜನಾಗಿದ್ದನು ; ಆಚಾರ್ಯರು ಕಾಶಿಯಲ್ಲಿ ಭಾಷ್ಯವನ್ನು ಬರೆದಾಗ ಪೂರ್ಣವರ್ಮನ ಅಭಿಷೇಕವಾಗಿಹೋಗಿರಬೇಕು. ಅವನು ರಾಜ್ಯವಾಳುತ್ತಿದ್ದಾಗಲೇ ಆಚಾರ್ಯರು ಭಾಷ್ಯದಿಂದ ಪ್ರಖ್ಯಾತರಾಗಿರಬೇಕು. ಚೀನಾದೇಶದ ಹ್ಯೂಯನ್ತ್ಸಾಂಗ್ ಎಂಬಾತನು 637-38ರಲ್ಲಿ ಮಗಧದೇಶದಲ್ಲಿ ಪೂರ್ಣವರ್ಮನ ಪರಾಮರ್ಶವನ್ನು ಮಾಡಿರುತ್ತಾನೆ ; ಆದರೆ ಅವನನ್ನು ನೋಡಲಿಲ್ಲ. ಅಷ್ಟರಲ್ಲಿ ಆ ರಾಜನ ಆಳ್ವಿಕೆ ಮುಗಿದಿರಬೇಕು. ಆದ್ದರಿಂದ ಆ ರಾಜನು ಕ್ರಿ.ಶ. 6ನೆಯ ಶತಮಾನದ ಅಂತ್ಯಭಾಗದಲ್ಲಿದ್ದನು. ಆಚಾರ್ಯರೂ ಆ ಕಾಲದವರೇ ಆಗಿರಬೇಕು. ಹೀಗೆಂದು ಬೊಂಬಾಯಿ ಹೈಕೋರ್ಟಿನ ಜಡ್ಜಿ ಗಳಾಗಿದ್ದ ಕಾಶಿನಾಥ ತ್ರ್ಯಂಬಕ ತೆಲಂಗ- ಎಂಬವರು ಕಲ್ಪಿಸಿರುತ್ತಾರೆ.[1]

ಇಲ್ಲಿ ಸ್ರುಘ್ನಪಾಟಲಿಪುತ್ರಗಳ ಉದಾಹರಣೆಗಳನ್ನು (ಸೂ.ಭಾ.೨-೧-೧೮, ೪-೨-೫) ಆಚಾರ್ಯರು ಆ ಪಟ್ಟಣಗಳನ್ನು ನೋಡಿಯೇ ಬರೆದರೆ ? ಅಥವಾ ಸಂಸ್ಕೃತದಲ್ಲಿ ಬರೆಯುವ ವಾಡಿಕೆಯನ್ನು ನೋಡಿ ಬರೆದರೆ ? ಬೃಹದಾರಣ್ಯಕದಲ್ಲಿ ಜನಕನ ಯಜ್ಞಕ್ಕೆ ಕುರುಪಾಞ್ಚಾಲದೇಶದ ಬ್ರಾಹ್ಮಣರು ಬಂದಿದ್ದರು (ಕುರು ಪಞ್ಚಾಲಾನಾಂ ಬ್ರಾಹ್ಮಣಾ ಅಭಿಸಮೇತಾಃ ಬೃ. ೩-೧-೧) ಎಂದಿದೆ. ಭಾಷ್ಯ ಕಾರರು '**ತೇಷು ಹಿ ವಿದುಷಾಂ ಬಾಹುಲ್ಯಂ ಪ್ರಸಿದ್ಧಮ್**' (ಆ ದೇಶಗಳಲ್ಲಲ್ಲವೆ, ವಿದ್ವಾಂಸರು ಹೆಚ್ಚಾಗಿರುವರೆಂದು ಪ್ರಸಿದ್ಧಿ ?) ಎಂದು ಬರೆದಿದ್ದಾರೆ. ಇಷ್ಟರಿಂದಲೇ ಆಚಾರ್ಯರು ಆ ದೇಶಗಳಲ್ಲಿದ್ದ ವಿದ್ವಾಂಸರನ್ನು ನೋಡಿದ್ದರೆಂದು ಹೇಳಬಹುದೆ ? 'ಸಮಸ್ತ ಭೂಮಿಗೂ ಒಡೆಯನನ್ನು ಅಯೋಧ್ಯಾಧಿಪತಿ ಎನ್ನುತ್ತಾರೆ' (ಸೂ.ಭಾ. ೧-೨-೭) ಎಂಬ ಉದಾಹರಣೆಯಿಂದ ಒಬ್ಬ ಅಯೋಧ್ಯಾರಾಜನು ಚಕ್ರವರ್ತಿ ಯಾಗಿದ್ದ ಕಾಲದಲ್ಲಿ ಆಚಾರ್ಯರು ಇದ್ದರೆಂದು ಕಲ್ಪಿಸಬಹುದೆ ? ಆಚಾರ್ಯರು ಪೂರ್ಣವರ್ಮನ ಕಾಲದಲ್ಲಿ ಮಗಧದೇಶಕ್ಕೆ ಹೋಗಿದ್ದರೆಂಬುದಕ್ಕೆ ಐತಿಹಾಸಿಕ ವಾದ ಆಧಾರವೇನಾದರೂ ಇದೆಯೆ ? ಪೂರ್ಣವರ್ಮನೆಂಬ ರಾಜನು ಇನ್ನು ಯಾರೂ ಇರಲಿಲ್ಲವೆ ? ಪೂರ್ಣವರ್ಮನ ಅಭಿಷೇಕಕ್ಕಿಂತ ಮೊದಲು ವಂಧ್ಯಾ ಪುತ್ರನು ರಾಜನಾಗಿದ್ದನು ಎಂದು ಕಾಲದ ಗಡಿಯನ್ನು ಹಾಕಿದರೆ ಬಂಜೆಯ ಮಗನು ರಾಜನಾಗಿದ್ದನೆಂದು ಹೇಳಲಾಗುವದಿಲ್ಲ' (ಸೂ. ಭಾ. ೨-೧-೧೮) ಎಂಬ ಭಾಷ್ಯವಾಕ್ಯದಿಂದ ಪೂರ್ಣವರ್ಮನ ಅಭಿಷೇಕಕಾಲದಲ್ಲಿ ಆಚಾರ್ಯ ರಿದ್ದರು ಎಂದಾದರೆ 'ಪೂರ್ಣವರ್ಮನ ಸೇವೆಯು ಅನ್ನವಸ್ತ್ರಗಳ ಫಲವನ್ನು ಮಾತ್ರ ಕೊಡುತ್ತದೆ, ರಾಜವರ್ಮನ ಸೇವೆ ರಾಜ್ಯಸಮಾನವಾದ ಫಲವನ್ನು ಕೊಡುತ್ತದೆ' (ಛಾಂ. ಭಾ. ೨-೨೩-೧) ಎಂಬ ವಾಕ್ಯದಿಂದ ರಾಜವರ್ಮನ ಮಹಿಮೆಯನ್ನು

1, ಭಾಗವತಚೂರ್ಣಿಕಾ ಪೂರ್ವಪೀಠಿಕಾ.

ಕೊಂಡಾಡಿದೆಯಾಗಿ ಆಚಾರ್ಯರು ಅವನ ಹೆಚ್ಚುಗಾರಿಕೆಯನ್ನು ನೋಡಿ ಬರೆದರೆಂದೇ ಆಗುತ್ತದೆಯೆ?–ಎಂಬ ಪ್ರಶ್ನೆಗಳು ಹಾಗೆಯೇ ಉಳಿದುಕೊಳ್ಳುತ್ತವೆ. ಆಚಾರ್ಯರು ಜಯಸಿಂಹ, ಕೃಷ್ಣಗುಪ್ತ– ಇವರನ್ನೂ (ಸೂ. ಭಾ. ೪–೩–೫) ಪರಾಮರ್ಶಿಸಿರುತ್ತಾರೆ; ಅವರೆಲ್ಲ ಆಚಾರ್ಯರ ಸಮಕಾಲಿಕರೆ?–ಎಂಬ ಪ್ರಶ್ನೆಯೂ ಏಳುತ್ತದೆ.

## ಭಾಷ್ಯದಲ್ಲಿ ಧರ್ಮಕೀರ್ತಿಯ ಪರಾಮರ್ಶೆ

೧೬. ಸುರೇಶ್ವರಾಚಾರ್ಯರು ಬೃಹದಾರಣ್ಯಕಭಾಷ್ಯದಲ್ಲಿ

ತ್ರಿಷ್ವೇವ ತ್ವವಿನಾಭಾವಾದಿತಿ ಯದ್ಧರ್ಮಕೀರ್ತಿನಾ ।
ಪ್ರತ್ಯಜ್ಞಾಯಿ ಪ್ರತಿಜ್ಞೇಯಂ ಹೀಯೇತಾಸೌ ನ ಸಂಶಯಃ ॥
–(ಬೃ. ವಾ. ೪–೩–೫೩)

'ಮೂರರಲ್ಲಿಯೇ ಅವಿನಾಭಾವವಿರುವದರಿಂದ (ಹೇತುವು ಮೂರು ವಿಧ)– ಎಂದು ಧರ್ಮಕೀರ್ತಿ ಹೇಳಿರುವ ಪ್ರತಿಜ್ಞೆಯನ್ನು ಬಿಡಲೇಬೇಕಾಗುವದು' ಎಂದು ಬರೆದಿರುತ್ತಾರೆ. ('ತ್ರಿರೂಪಾಣಿ ತ್ರೀಣ್ಯೇವ ಲಿಙ್ಗಾನಿ । ಅನುಪಲಬ್ಧಿಃ ಸ್ವಭಾವಃ ಕಾರ್ಯಂ ಚ' ಎಂಬ ಧರ್ಮಕೀರ್ತಿಯ ನ್ಯಾಯಬಿಂದುವಾಕ್ಯಗಳನ್ನು ನೋಡಿ.)

ಅಭಿನ್ನೋಽಪಿ[1] ಹಿ ಬುದ್ಧ್ಯಾತ್ಮಾ ವಿಪರ್ಯಾಸಿತದರ್ಶನೈಃ ।
ಗ್ರಾಹ್ಯಗ್ರಾಹಕಸಂವಿತ್ತಿಭೇದವಾನಿವ ಲಕ್ಷ್ಯತೇ ॥

ವಿಜ್ಞಾನವು ನಿಜವಾಗಿ ಭೇದರಹಿತವಾಗಿದ್ದರೂ ತಪ್ಪುತಿಳಿವಳಿಕೆಯವರಿಗೆ ಗ್ರಾಹ್ಯಗ್ರಾಹಕಸಂವಿತ್ತಿ– ಎಂಬ ಭೇದಗಳುಳ್ಳದ್ದರಂತೆ ಕಾಣುತ್ತದೆ- ಎಂಬ ಅರ್ಥವುಳ್ಳ ಈ ಶ್ಲೋಕವು ಬೃಹದಾರಣ್ಯಕವಾರ್ತಿಕ (ಬೃ.ವಾ. ೪–೩–೪೭೬)ರಲ್ಲಿಯೂ ಉಪದೇಶಸಾಹಸ್ರಿ (ಉಪ. ೧೮–೧೪೨)ರಲ್ಲಿಯೂ ಉದಾಹೃತವಾಗಿದೆ. ಧರ್ಮಕೀರ್ತಿಯ (ಪ್ರ. ವಾ. ೩–೩೫೪) ಈ ಶ್ಲೋಕವು ಬೃಹದಾರಣ್ಯಕಭಾಷ್ಯಕಾರರಿಗೆ ಪರಿಚಿತವಾಗಿತ್ತೆಂಬುದಕೆ, ಇದು ಸಾಕಾಗಿದೆಯಾದರೂ ನಾವು ಆಗಲೆ ಒಡ್ಡಿರುವ ಭಾಷ್ಯದ್ವಯವಿರೋಧಾಭಾಸವನ್ನು ಕಂಡವರು ಸೂತ್ರಭಾಷ್ಯದಲ್ಲಿಯೂ ಧರ್ಮಕೀರ್ತಿಪರಾಮರ್ಶವು ಇದೆಯೆ ?– ಎಂಬ ಪ್ರಶ್ರೆಯನ್ನು ಕೇಳಬಹುದಾಗಿದೆ. ನಮ್ಮ ಸುದೈವದಿಂದ ಸೂತ್ರಭಾಷ್ಯದಲ್ಲಿಯೇ ಈ ವಾಕ್ಯವಿದೆ : 'ಅಪಿ ಚ **ಸಹೋಪಲಮ್ಭನಿಯಮಾದಭೇದೋ ವಿಷಯವಿಜ್ಞಾನಯೋರಾಪತತಿ**' (ಇದಲ್ಲದೆ ವಿಷಯ, ಅದರ ವಿಜ್ಞಾನ– ಇವೆರಡೂ ಜೊತೆಯಲ್ಲಿಯೇ ನಿಯಮದಿಂದ ಕಾಣುತ್ತಿರುವದರಿಂದ ಅವೆರಡಕ್ಕೂ ಅಭೇದವೇ ಎಂದಾಗುತ್ತದೆ (ಸೂ. ಭಾ.

1. 'ಅವಿಭಾಗೋಽಪಿ' ಎಂದು ಅಚ್ಚಾಗಿರುವ ಪ್ರಮಾಣವಾರ್ತಿಕದ ಪಾಠ. ಉಪದೇಶಸಾಹಸ್ರಿಯಲ್ಲಿಯೂ 'ಅಭಿನ್ನೋಽಪಿ' ಎಂದೇ ಇದೆ.

೨-೨-೨೮). ವಿಜ್ಞಾನಕ್ಕಿಂತ ಬೇರೆಯಾಗಿ ವಿಷಯುವೆಂಬುದು ಇಲ್ಲ- ಎಂಬ ವಿಜ್ಞಾನವಾದಿಗಳ ಮತವನ್ನು ಖಂಡಿಸುವದಕ್ಕಾಗಿ ಈ ವಾಕ್ಯವನ್ನು ಆಚಾರ್ಯರು ಅನುವಾದಮಾಡಿಕೊಂಡಿರುತ್ತಾರೆ. ಇದು 'ಸಹೋಪಲಮ್ಭನಿಯಮಾದ ಭೇದೋ ನೀಲತದ್ಧಿಯೋಃ' (ನಿಯಮದಿಂದ ಜೊತೆಜೊತೆಯಾಗಿಯೇ ಕಾಣುವ ದರಿಂದ ನೀಲ, ನೀಲಜ್ಞಾನ-ಎರಡೂ ಒಂದೇ ಎಂಬ ರೂಪದಲ್ಲಿ ಧರ್ಮಕೀರ್ತಿಯ ಪ್ರಮಾಣವಿನಿಶ್ಚಯದಲ್ಲಿದೆಯಂತೆ[1]; ಇದರ ಜೊತೆಗೆ 'ಭೇದಶ್ಚ ಭ್ರಾಂತಿವಿಜ್ಞಾನೈರ್ದೃಶ್ಯೇತೇನ್ದಾವಿವಾದ್ವಯೇ' (ಪ್ರ. ವಾ. ३-३८೯) ಒಬ್ಬನೇ ಆಗಿರುವ ಚಂದ್ರನಲ್ಲಿ ಭೇದವನ್ನು ಕಾಣುವಂತೆ ಭ್ರಾಂತರ ತಿಳಿವಳಿಕೆಗೆ ಇವುಗಳ ಭೇದವು ಕಾಣಬಹುದು ಎಂಬ ಶ್ಲೋಕಾರ್ಥವನ್ನು ವೈದಿಕರು ಉದಾಹರಿಸುತ್ತಿರುತ್ತಾರೆ. ಧರ್ಮಕೀರ್ತಿಯ ಕಾಲವು ಕ್ರಿ. ಶ. 635 ರಿಂದ ಕ್ರಿ, ಶ. 650ರವರೆಗೆ ಎಂದು ನಿಶ್ಚಿತವಾಗಿರುವದರಿಂದ ಸೂತ್ರಭಾಷ್ಯಕಾರರಾದ ಆಚಾರ್ಯರು ಅದಕ್ಕಿಂತ ಮುಂಚೆ ಇರುವ ಸಂಭವವಿಲ್ಲವೆಂದು ಗೊತ್ತಾಗುತ್ತದೆ.

## ದಿಙ್ನಾಗನ ಪರಾಮರ್ಶ

೧೭. ಇದಲ್ಲದೆ ಸೂತ್ರಭಾಷ್ಯದ ಇದೇ ಸೂತ್ರದಲ್ಲಿರುವ ವಿಜ್ಞಾನವಾದದ ಖಂಡನೆಯಲ್ಲಿ ಈ ವಾಕ್ಯಗಳಿವೆ :

> ಉಪಲಬ್ಧಿವ್ಯತಿರೇಕೋಽಪಿ ಬಲಾದರ್ಥಸ್ಯಾಭ್ಯುಪಗನ್ತವ್ಯಃ ಉಪಲಬ್ಧೇರೇವ। ನ ಹಿ ಕಶ್ಚಿದುಪಲಬ್ಧಿಮೇವ ಸ್ತಮ್ಭಃ ಕುಡ್ಯಂ ಚ ಇತ್ಯುಪಲಭತೇ। ಉಪಲಬ್ಧಿವಿಷಯತ್ವೇನೈವ ತು ಸ್ತಮ್ಭಕುಡ್ಯಾದೀನ್ ಸರ್ವೇ ಲೌಕಿಕಾ ಉಪಲಭನ್ತೇ। ಅತಶ್ಚ ಏವಮೇವ ಸರ್ವೇ ಲೌಕಿಕಾ ಉಪಲಭನ್ತೇ ಯತ್ಪ್ರತ್ಯಾಚಕ್ಷಾಣಾ ಅಪಿ ಬಾಹ್ಯಾರ್ಥಮೇವ ವ್ಯಾಚಕ್ಷತೇ "ಯದನ್ತರ್ಜ್ಞೇಯರೂಪಂ ತದ್ಬಹಿರ್ವದವಭಾಸತೇ" ಇತಿ। ತೇಽಪಿ ಸರ್ವಲೋಕಪ್ರಸಿದ್ಧಾಂ ಬಹಿರವಭಾಸಮಾನಾಂ ಸಂವಿದಂ ಪ್ರತಿಲಭಮಾನಾಃ ಪ್ರತ್ಯಾಖ್ಯಾತುಕಾಮಾಶ್ಚ ಬಾಹ್ಯಮರ್ಥಂ 'ಬಹಿರ್ವತ್' ಇತಿ ವತ್ಕಾರಂ ಕುರ್ವನ್ತಿ। ಇತರಥಾ ಹಿ ಕಸ್ಮಾದ್ಬಹಿರ್ವದಿತಿ ಬ್ರೂಯುಃ ?। ನ ಹಿ ವಿಷ್ಣುಮಿತ್ರೋ ವನ್ಧ್ಯಾಪುತ್ರವದವಭಾಸತ ಇತಿ ಕಶ್ಚಿದಾಚಕ್ಷೀತ। ತಸ್ಮಾದ್ ಯಥಾನುಭವಂ ತತ್ತ್ವಮಭ್ಯುಪಗಚ್ಛದ್ಭಿಃ ಬಹಿರೇವಾವಭಾಸತ ಇತಿ ಯುಕ್ತಮಭ್ಯುಪಗನ್ತುಂ ನ ತು ಬಹಿರ್ವದವಭಾಸತ ಇತಿ ॥
>
> —ಸೂ. ಭಾ. ೨-೨-೨೮

ಅರಿವಿಗಿಂತ ವ್ಯತಿರಿಕ್ತವಾಗಿಯೇ ಹೊರಗಿನ ಅರ್ಥವಿದೆಯೆಂದೂ ಹಾಗೆ ಕಾಣಿಸುವದರಿಂದಲೇ ಒಪ್ಪಬೇಕು; ಯಾರೂ ಅರಿವನ್ನೇ 'ಕಂಬ. ಗೋಡೆ', 'ಎಂದು' ಅರಿಯುವದಿಲ್ಲವಷ್ಟೆ ? ಮತ್ತೇನೆಂದರೆ ಅರಿವಿಗೆ ವಿಷಯವಾಗಿಯೇ ಎಲ್ಲಾ ಲೌಕಿಕರೂ ಕಂಬ, ಗೋಡೆ-ಮುಂತಾದವುಗಳನ್ನು ಅರಿಯುತ್ತಾರೆ. ಅದ್ದರಿಂದ ಹೀಗೆಯೇ ಎಲ್ಲಾ ಲೌಕಿಕರೂ ಅನು

1. ಈ ಗ್ರಂಥವು ತಿಬೆಟ್ಟಿನ ಭಾಷೆಯಲ್ಲಿ ಮಾತ್ರವೇ ಸಿಕ್ಕುತ್ತದೆ.

ಭಾವಿಸುತ್ತಾರೆ; ಅದನ್ನು ನಿರಾಕರಿಸುವವರುಕೂಡ ಹೊರಗಿನ ವಿಷಯವನ್ನೇ 'ಯದನ್ತರ್ಜ್ಞೇಯರೂಪಂ ತದ್ಬಹಿರ್ವದವಭಾಸತೇ' (ಒಳಗೆ ಇರುವ ಜ್ಞೇಯರೂಪವಿದೆಯಲ್ಲ, ಅದೇ ಹೊರಗಿರುವಂತೆ ತೋರುತ್ತದೆ) ಎನ್ನುತ್ತಿದ್ದಾರೆ. ಅವರೂ ಎಲ್ಲಾ ಜನರಿಗೂ ಪ್ರಸಿದ್ಧವಾಗಿರುವ ಹೊರಗೆ ತೋರುವ ಅನುಭವವನ್ನು ಕಂಡೇ ಹೊರಗಿನ ವಿಷಯವನ್ನು ನಿರಾಕರಿಸಬೇಕೆಂದು 'ಹೊರಗಿರುವಂತೆ' ಎಂದು ಅಂತೆಶಬ್ದವನ್ನು ಪ್ರಯೋಗಿಸುತ್ತಾರೆ. ಹಾಗಿಲ್ಲದಿದ್ದರೆ ಏತಕ್ಕೆ ಹೊರಗಿರುವಂತೆ-ಎಂದು ಹೇಳಿಯಾರು? ವಿಷ್ಣುಮಿತ್ರನು ಬಂಜೆಯ ಮಗನಂತೆ ತೋರುತ್ತಾನೆ-ಎಂದು ಯಾವನೂ ಹೇಳಲಾರನಷ್ಟೆ? ಅದ್ದರಿಂದ 'ಅನುಭವಕ್ಕೆ ತಕ್ಕಂತೆ ವಸ್ತುತತ್ತ್ವವಿದೆ ಎಂದು ಒಪ್ಪತಕ್ಕವರು ಹೊರಗೇ ಕಾಣಿಸುತ್ತದೆ ಎಂದು ಒಪ್ಪುವುದೇ ಯುಕ್ತವೇ ಹೊರತು ಹೊರಗಿರುವಂತೆ ಎಂದು (ಹೇಳತಕ್ಕ)ದ್ದಲ್ಲ.

ಇಲ್ಲಿ ಅರಿವಿಗಿಂತ ಬೇರೆಯಾಗಿ ಅದರ ವಿಷಯವಾದ ಕಂಬ, ಗೋಡೆ-ಮುಂತಾದ ವಿಷಯಗಳು ಇರುವುದಿಲ್ಲವೆಂದು ಹೇಳುವ ವಿಜ್ಞಾನವಾದಿಯ ಪೂರ್ವಪಕ್ಷವನ್ನು ಖಂಡಿಸುವುದಕ್ಕಾಗಿ "ಯದನ್ತರ್ಜ್ಞೇಯರೂಪಂ ತದ್ಬಹಿರ್ವದವಭಾಸತೇ' ಎಂಬ ದಿಙ್ನಾಗನ ಕಾರಿಕೆಯನ್ನು ಉದಾಹರಿಸಿದೆ. ಈ ಕಾರಿಕೆಯು ಆಲಂಬನಪರೀಕ್ಷಾ ಎಂಬ ಅಷ್ಟಶ್ಲೋಕಾತ್ಮಕವಾದ ಪ್ರಕರಣದಲ್ಲಿದೆ. ಅದರಲ್ಲಿ ಇದು ಆರನೆಯ ಕಾರಿಕೆ. ಇದನ್ನು ಮದರಾಸಿನಲ್ಲಿ ಅಡಿಯಾರ್ ಬುಲೆಟಿನ್ನಿನಲ್ಲಿ ಕ್ರಿ. ಶ. 1942ರಲ್ಲಿ ಅಚ್ಚುಮಾಡಿಸಿರುತ್ತಾರೆ. ದಿಙ್ನಾಗನು ವಸುಬಂಧುವಿನ ಶಿಷ್ಯನು; ಆದ್ದರಿಂದ ಅವನ ಕಾಲವು ಕ್ರಿ.ಶ. ಐದನೆಯ ಶತಮಾನವಾಗಿದೆ. ಆದ್ದರಿಂದ ಸೂತ್ರಭಾಷ್ಯಕಾಲವು ಅದಕ್ಕಿಂತ ಹಿಂದೆ ಇರುವ ಹಾಗಿಲ್ಲವೆಂದು ಇದರಿಂದ ಸಿದ್ಧವಾಯಿತು.

**ಗುಣಮತಿಯ ಪರಾಮರ್ಶ**

೧೮. ಸೂತ್ರಭಾಷ್ಯದಲ್ಲಿ (೨-೨-೨೨) 'ಬುದ್ಧಿಬೋಧ್ಯಂ ತ್ರಯಾದನ್ಯತ್ ಸಂಸ್ಕೃತಂ ಕ್ಷಣಿಕಂ ಚ' ಪ್ರತಿಸಂಖ್ಯಾನಿರೋಧ, ಅಪ್ರತಿಸಂಖ್ಯಾನಿರೋಧ, ಆಕಾಶ –ಈ ಮೂರನ್ನು ಬಿಟ್ಟರೆ ಉಳಿದದ್ದೆಲ್ಲವೂ ಸಂಸ್ಕೃತವು (ಕಾರ್ಯವು), ಕ್ಷಣಿಕವೂ ಆಗಿದೆ-ಎಂಬರ್ಥದ ವಾಕ್ಯವನ್ನು ಉದಾಹರಿಸಿರುತ್ತದೆ. ಇದು **ಗುಣಮತಿ** ಎಂಬಾತನ ಅಭಿಧರ್ಮಕೋಶವ್ಯಾಖ್ಯಾನದಲ್ಲಿದೆಯಂತೆ. ಗುಣಮತಿಯ ಕಾಲವು (ಕ್ರಿ. ಶ. ೬೩೦ ರಿಂದ ೬೪೦) ಏಳನೆಯ ಶತಕದ ಮಧ್ಯಭಾಗವಾಗಿರುವದರಿಂದ ಸೂತ್ರಭಾಷ್ಯದ ಕಾಲವು ಅದಕ್ಕಿಂತ ಹಿಂದೆ ಇರಲಾರದೆಂದಾಗುತ್ತದೆ-ಎಂದು **ಬಲದೇವ ಉಪಾಧ್ಯಾಯರು** (ಬಲ. ಶಂ. ಪು. ೩೪) ಹೇಳುತ್ತಾರೆ.

**ಭಾಮತೀಕಾರನ ಸಾಕ್ಷ್ಯ**

೧೯. ವಾಚಸ್ಪತಿಮಿಶ್ರನು ಬರೆದಿರುವ ಭಾಮತೀವ್ಯಾಖ್ಯಾನವೇ ಆಚಾರ್ಯರ ಸೂತ್ರಭಾಷ್ಯಕ್ಕೆ ಪೂರ್ಣವಾಗಿ ಬರೆದದ್ದೆಂದು ನಮಗೆ ಸಿಕ್ಕಿರುವ

---

1. "ಯದನ್ತರ್ಜ್ಞೇಯರೂಪಂ ತು' ಎಂದು ಅಚ್ಚಾಗಿರುವ ಆಲಂಬನಪರೀಕ್ಷೆಯ ಪಾಠ.

ಪ್ರಾಚೀನವ್ಯಾಖ್ಯಾನ. (ಇದಕ್ಕಿಂತ ಹಿಂದಿನದಾದ ಪಂಚಪಾದಿಕೆ ಎಂಬ ಖಂಡ ವ್ಯಾಖ್ಯಾನದ ವಿಷಯವನ್ನು ಯಥಾಸ್ಥಾನದಲ್ಲಿ ಮುಂದೆ ವಿಮರ್ಶೆಗೆತೆಗೆದುಕೊಳ್ಳುವೆವು). ಆತನೇ ಬರೆದಿರುವ **ನ್ಯಾಯಸೂಚೀನಿಬಂಧದಲ್ಲಿ** ಈ ಶ್ಲೋಕವಿದೆ : 'ನ್ಯಾಯಸೂಚೀನಿಬನ್ಧೋಽಯಮಕಾರಿ ವಿದುಷಾಂ ಮುದೇ | ಶ್ರೀವಾಚಸ್ಪತಿಮಿಶ್ರೇಣ ವಸ್ವಙ್ಕವಸುವತ್ಸರೇ ||' ಇದರಂತೆ ಗ್ರಂಥವು ೮೯೮ನೆಯ ವತ್ಸರದಲ್ಲಿ ರಚಿತವಾದದ್ದೆಂದಾಗುತ್ತದೆ. ಅವರೇ ಬರೆದಿರುವ ವಾರ್ತಿಕನ್ಯಾಯತಾತ್ಪರ್ಯಟೀಕೆಗೆ ವ್ಯಾಖ್ಯಾನವಾಗಿ **ಪರಿಶುದ್ಧಿಯನ್ನು** ಬರೆದಿರುವ ಉದಯನಾಚಾರ್ಯರು **ಲಕ್ಷಣಾವಲಿ**: ಎಂಬ ಗ್ರಂಥವನ್ನು 'ತರ್ಕಾಮ್ಬರಾಙ್ಕಪ್ರಮಿತೇಷ್ವತೀತೇಷು ಶಕಾನ್ತತಃ | ವರ್ಷೇಷೂದಯನಶ್ಚಕ್ರೇ ಸುಬೋಧಾಂ ಲಕ್ಷಣಾವಲೀಮ್ ||' ೯೦೬ನೆಯ ಶಕಾಬ್ದದಲ್ಲಿ ಬರೆದಿರುವೆನೆಂದು ಹೇಳಿರುವದರಿಂದ ನ್ಯಾಯಸೂಚೀನಿಬಂಧದಲ್ಲಿ ಹೇಳಿರುವದು ಶಕವರ್ಷವೆಂದೇ ಹಿಡಿದರೆ ಮೂಲಕ್ಕೂ ವ್ಯಾಖ್ಯಾನಕ್ಕೂ ಎಂಟೇ ವರ್ಷಗಳ ಅಂತರವಾಗುವದು. ಆದರೆ ಈ ಇಬ್ಬರೂ ಸಮಕಾಲಿಕರಲ್ಲವೆಂದು ಐತಿಹಾಸಿಕರು ನಿರ್ಣಯಿಸಿರುತ್ತಾರೆ. ಆದ್ದರಿಂದ ವಾಚಸ್ಪತಿಯು ವಿಕ್ರಮವರ್ಷವನ್ನೇ ಹೇಳಿರಬೇಕು. ಹೀಗೆ ನೋಡಿದರೆ ನಿಬಂಧದ ಕಾಲವು (ಕ್ರಿ. ಶ. 841) ಒಂಬತ್ತನೆಯ ಶತಕದ ಮಧ್ಯಭಾಗವಾಗುತ್ತದೆ. ಆದ್ದರಿಂದ ಆಚಾರ್ಯರು ಸೂತ್ರಭಾಷ್ಯವನ್ನು ಅದಕ್ಕಿಂತ ಮೊದಲೇ ಬರೆದಿರಬೇಕಾಯಿತು– ಎಂಬುದು **ಬಲದೇವ ಉಪಾಧ್ಯಾಯರ** (ಬಲ. ಶಂ. ಪು. ೨೯) ಮತವಾಗಿದೆ. ಇದು ಯುಕ್ತವೆಂದೇ ನಮಗೆ ತೋರುತ್ತಿದೆ. ಏಕೆಂದರೆ ವಾಚಸ್ಪತಿಮಿಶ್ರನ ಭಾಮತಿಯಲ್ಲಿ[1] ಭಾಸ್ಕರಾಚಾರ್ಯರು ಶಂಕರಭಾಷ್ಯದ ಮೇಲೆ ಎತ್ತಿರುವ ಆಕ್ಷೇಪಗಳಿಗೆ ಸಮಾಧಾನವನ್ನು ಬರೆದಿರುವದು ಕಂಡುಬರುತ್ತದೆ. ಆದ್ದರಿಂದ ಭಾಸ್ಕರಾಚಾರ್ಯರಿಗಿಂತ ಹಿಂದೆ ಇದ್ದ ಆಚಾರ್ಯರು ಕ್ರಿ. ಶ. ಏಳನೆಯ ಶತಕದ ಅಂತ್ಯದಲ್ಲಿ ಅಥವಾ ಎಂಟನೆಯ ಶತಕದ ಆದಿಯಲ್ಲಿ ತಮ್ಮ ಸೂತ್ರಭಾಷ್ಯವನ್ನು ಬರೆದಿರಬೇಕೆಂದು ಕಲ್ಪಿಸುವದು ಸಾಧಾರವಾಗಿರುತ್ತದೆ ಎಂದಾಯಿತು.

1. ಭಾಮತಿಯ ಕೊನೆಯಲ್ಲಿ 'ನರೇಶ್ವರಾ ಯಚ್ಚರಿತಾನುಕಾರಮಿಚ್ಛನ್ತಿ ಕರ್ತುಂ ನ ಚ ಪಾರಯನ್ತಿ | ತಸ್ಮಿನ್ ಮಹೀಪೇ ಮಹನೀಯಕೀರ್ತೌ ಶ್ರೀಮನ್ನೃಗೇಽಕಾರಿ ಮಯಾ ನಿಬಂಧಃ ||೬||' ಮಿಕ್ಕ ದೊರೆಗಳು ಅನುಕರಿಸುವದಕ್ಕೆ ಯತ್ನಿಸಿದರೂ ಆಗದಿರುವ ಮಹಾಕೀರ್ತಿಯ ನೃಗನೆಂಬ ರಾಜನ ಕಾಲದಲ್ಲಿ ತಾನು ಇದನ್ನು ಬರೆದಿರುವದಾಗಿ ವಾಚಸ್ಪತಿ ಹೇಳಿಕೊಂಡಿರುತ್ತಾನೆ. ಆ ನೃಗನು ಯಾರೆಂಬುದನ್ನು ನಿಶ್ಚಯಿಸುವದೂ ಇಲ್ಲಿ ಅನಶ್ಯ. ಆತನು ನಾನ್ಯದೇವನಿಗಿಂತ ಮೊದಲು ಸುಮಾರು ಕ್ರಿ.ಶ. 962ರಲ್ಲಿ ಆಳುತ್ತಿದ್ದ ಮಿಥಿಲಾಧಿಪತಿ ಎಂದು ಸೂರ್ಯನಾರಾಯಣರಾವ್ ಮತ್ತು ಕೂಹ್ನನ್ ರಾಜ– ಇವರು ಕಲ್ಪಿಸಿರುತ್ತಾರೆ. ಅವರ ಆಂಗ್ಲಭಾಷಾಂತರಸಹಿತಭಾಮತಿಯ ಪೀಠಿಕೆಯನ್ನು ನೋಡಿ. ಈ ಗ್ರಂಥವು ಮದರಾಸ್ ಅಡಿಯಾರ್‌ನಲ್ಲಿ ಪ್ರಕಾಶಿತವಾಗಿದೆ.

# ೩. ಆಚಾರ್ಯರ ಜನ್ಮ, ತಂದೆತಾಯಿಗಳು

೨೦. ಆಚಾರ್ಯರ ಜನನಕಾಲದ ವಿಷಯಕ್ಕೆ ಇರುವಷ್ಟು ಮತಭೇದವು ಹುಟ್ಟಿದ ಸ್ಥಳದ ವಿಷಯಕ್ಕೆ ಇಲ್ಲದಿರುವದೊಂದು ಸೌಭಾಗ್ಯವು. ಎಲ್ಲಾ ಶಂಕರ ವಿಜಯಗಳಲ್ಲಿಯೂ ಶಿವರಹಸ್ಯಾನುಗುಣವಾಗಿ ಕೇರಳದೇಶದಲ್ಲಿಯೇ ಆಚಾರ್ಯರ ಜನನವಾಯಿತೆಂದು ಒಪ್ಪಿರುತ್ತದೆ. ಶಿವರಹಸ್ಯದಲ್ಲಿ **'ಕೇರಲದಲ್ಲಿರುವ ಶಕಲ** ಗ್ರಾಮದಲ್ಲಿ **ಶಂಕರನೆಂಬ** ಹೆಸರಿನಿಂದ ದ್ವಿಜೋತ್ತಮನು ವಿಪ್ರಪತ್ನಿಯಲ್ಲಿ ನನ್ನ ಅಂಶದಿಂದ ಜನಿಸುವನು' (ಶಿ. ರ. ೧೬-೫) ಎಂದಿದೆ. ಕೇರಲವು ಈಗಿನ ತಿರುವಾಂಕೂರು, ಕೊಚಿನ್, ಮತ್ತು ಮಲಬಾರು –ಎಂಬ ದೇಶಗಳಾಗಿದೆ. ಶಂಕರವಿಜಯಗಳಲ್ಲಿ **ಕಾಲಟಿ** ಎಂಬ ಹೆಸರು ಇರುವದರಿಂದ ಆ ವೂರಿಗೇ **'ಶಶಲ'** ಗ್ರಾಮವೆಂಬ ಹೆಸರು ಸ್ಥಲಪುರಾಣದಲ್ಲಿತ್ತೆಂದು ಊಹಿಸಬೇಕಾಗಿದೆ.

## ಹುಟ್ಟಿದ ಸಂದರ್ಭ

೨೧. **ಮಾಧವೀಯದಲ್ಲಿ** ಆಚಾರ್ಯರ ಜನ್ಮದ ವಿಷಯವಾಗಿ ಹೀಗೆಂದು ಹೇಳಿದೆ: ದೇವತೆಗಳು ಕೈಲಾಸಕ್ಕೆ ಹೋಗಿ 'ಭೂಲೋಕದಲ್ಲಿ ಬೌದ್ಧರ ವ್ಯಾಪ್ತಿಯಿಂದ ಜನರು ವರ್ಣಾಶ್ರಮಧರ್ಮಗಳನ್ನು ಬಿಟ್ಟು ಅನೇಕ ಅನಾಚಾರಗಳನ್ನು ಅವಲಂಬಿಸಿರುವರು. ಕೆಲವರು ಶೈವವೈಷ್ಣವಾದ್ಯಾಗಮಗಳನ್ನು ಆಶ್ರಯಿಸಿ ಕರ್ಮವನ್ನು ಬಿಟ್ಟು ಕೆಟ್ಟುಹೋಗುತ್ತಿದಾರೆ. ಧರ್ಮವನ್ನು ಸ್ಥಾಪನೆಮಾಡಿ ಎಲ್ಲರನ್ನೂ ಉದ್ಧಾರಮಾಡಬೇಕು' ಎಂದು ಬೇಡಿಕೊಳ್ಳಲು ಈಶ್ವರನು ಸ್ಕಂದನನ್ನು ಕುರಿತು ನೀನು ಲೋಕದಲ್ಲಿ ಅವತರಿಸಿ **ಕರ್ಮಕಾಂಡವನ್ನು** ಉದ್ಧಾರಮಾಡು. ವಿಷ್ಣು ಮತ್ತು ಆದಿಶೇಷ– ಇವರಿಗೆ **ಉಪಾಸನಾಕಾಂಡವನ್ನು** ಉದ್ಧರಿಸುವಂತೆ ಅಪ್ಪಣೆಮಾಡಿರುತ್ತೇನೆ. ಬ್ರಹ್ಮನು ನಿನಗೆ ಸಹಾಯಕನಾಗಿ **ಮಂಡನನಾಗಿ** ಅವತರಿಸುವನು. ಸ್ವಯಂ ನಾನು ಶಂಕರಯತೀಂದ್ರನಾಗಿ ಹುಟ್ಟಿ **ಬ್ರಹ್ಮಸೂತ್ರಗಳಿಗೆ** ಅದ್ವೈತಪರವಾದ ಭಾಷ್ಯವನ್ನು ರಚಿಸಿ ಜನರ ಮೋಹವನ್ನು ಕಳೆಯುವೆನು' ಎಂದು (ಮಾ.ಶಂ. ೧–೪೦ರಿಂದ ೫೬) ತಿಳಿಸಿದನು. ಅದರಂತೆ ಇಂದ್ರಾದಿಗಳು ಬೇರೆಬೇರೆಯ ರೂಪದಿಂದ ಅವತರಿಸಿದರು. **ಚಿದ್ವಿಲಾಸೀಯದಲ್ಲಿ** ಬ್ರಹ್ಮನು ನಾರದರೊಡನೆ ಕೈಲಾಸಕ್ಕೆ ಹೋಗಿ ಪ್ರಾರ್ಥಿಸಿಕೊಂಡನೆಂದಿದೆ; **ಆನಂದಗಿರೀಯದಲ್ಲಿಯೂ** ಬ್ರಹ್ಮನು ಪ್ರಾರ್ಥಿಸಿಕೊಂಡನೆಂದಿದೆ.

ಈ ಕಥೆಯಲ್ಲಿ ದೇವತೆಗಳು ಶಿವನನ್ನು ಪ್ರಾರ್ಥಿಸಿಕೊಂಡರೆಂಬುದೂ ದೇವತೆಗಳು ಬೇರೆಬೇರೆಯ ಅಂಶಗಳಿಂದ ಅವತರಿಸಿದರೆಂಬುದೂ ಪುರಾಣೇತಿಹಾಸಗಳಲ್ಲಿ ಬಹಳ ಕಡೆ ವರ್ಣಿಸಿರುವದರ ಪ್ರತಿಧ್ವನಿಯಾಗಿದೆ. ಇದಲ್ಲನೆ **ಆತ್ಮಬೋಧರು** ಉದಾಹರಿಸಿರುವ **ಪ್ರಾಚೀನಶಂಕರವಿಜಯದಲ್ಲಿ** ಹೀಗಿದೆ :

ಶ್ರೀಶೋಽಭೂತ್ಸ ಸನನ್ದನಃ ಕಮಲಭೂರ್ಜಜ್ಞೇ ತಥಾ ಮಣ್ಡನಃ
ಸನ್ ಹಸ್ತಾಮಲಕೋ ಬಭೂವ ಪವನೋಽಪ್ಯಾಸೀದುದಙ್ಕೋಽನಲಃ ।
ಸೋಽಪ್ಯಾನನ್ದಗಿರಿತ್ವಮಾಪ ಧಿಷಣೋ ಭೇಜೇ ಗುಹೋ ಭಟ್ಟತಾ-
ಮಾಶಾದೇಶವಶಾತ್ ಸ ಚಿತ್ಸುಖವಪುರ್ಜಾತಃ ಪ್ರಚೇತಾ ಅಪಿ ॥

ಮೃತ್ಯುಃ ಪೃಥ್ವೀಧವ(ರ) ಇತಿ ಯಮೋಽಪ್ಯಾಬಭೌ ವಿಶ್ವರೂಪೋ
ದಧ್ರೇ ಯೇನಾಖಿಲಜನಜಿತಾ ತತ್ಸ್ವತಾಪಾಖ್ಯಧಾಮ ।
ಲೇಖಾಶ್ಚಾನ್ಯೇ ನಿಗಮಪದವೀಮಿನ್ದುಸೂರ್ಯೇನ್ದ್ರಶೇಷ
ಪ್ರಖ್ಯಾಃ ಪ್ರಖ್ಯಾಪಯಿತುಮುದಿತಾಃ ಖಣ್ಡನೈರ್ಮಣ್ಡನೈಶ್ಚ ॥

ನಾರಾಯಣನು ಸನಂದನನಾದನು, ಬ್ರಹ್ಮನು ಮಂಡನನಾದನು, ವಾಯುವು ಹಸ್ತಾಮಲಕನಾಗಿ, ಅಗ್ನಿಯು ಉದಂಕನಾಗಿ; ಬೃಹಸ್ಪತಿಯು ಆನಂದಗಿರಿಯಾಗಿ, ಗುಹನು ಭಟ್ಟನಾಗಿ, ವರುಣನು ಚಿತ್ಸುಖನಾಗಿ ಮೃತ್ಯುವು ಪೃಥ್ವೀಧವ(ಧರ)ನಾಗಿ, ಯಮನು ವಿಶ್ವರೂಪನಾಗಿ ಆದರು. ಹೀಗೆಯೇ ಚಂದ್ರ, ಸೂರ್ಯ, ಇಂದ್ರ, ಶೇಷ– ಮುಂತಾದ ದೇವತೆಗಳೂ ಬೇರೆಬೇರೆಯವರಾಗಿ ಅವತರಿಸಿ ವೈದಿಕಮಾರ್ಗವನ್ನು ಖಂಡನೆಗಳಿಂದಲೂ ಮಂಡನಗಳಿಂದಲೂ ಪ್ರಖ್ಯಾತಗೊಳಿಸಿದರು.

ಇದರಂತೆ **ಮಾಧವೀಯದಲ್ಲಿ** (೩–೧ರಿಂದ ೯ನೆಯ ಶ್ಲೋಕದವರೆಗೆ) ಪದ್ಮಪಾದಾದಿಗಳು ದೇವತೆಗಳ ಅಂಶಾವತಾರವಾಗಿ ಜನಿಸಿದ ವೃತ್ತಾಂತವಿದೆ. ಮಹಾಕಾರ್ಯಗಳನ್ನು ಮಾಡುವವರೆಲ್ಲ ದೈವಸಂಪತ್ತಿನಿಂದೊಡಗೂಡಿರುವದರಿಂದ ಅವರನ್ನು ದೇವಾಂಶಸಂಭೂತರೆಂದು ಭಾವಿಸುವದು ನಮ್ಮ ದೇಶಕ್ಕೆ ಹೊಸದಲ್ಲ. ಮೇಲಿನ ಪ್ರಾಚೀನಶಂಕರವಿಜಯದ ಶ್ಲೋಕಗಳ ಅರ್ಥದಲ್ಲಿ ಕಪ್ಪಕ್ಷರದಲ್ಲಿಟ್ಟಿರುವ ಹೆಸರುಗಳನ್ನು ಮತ್ತೆ ವಿಚಾರಕ್ಕೆ ತೆಗೆದುಕೊಳ್ಳಬೇಕಾಗುವದರಿಂದ ಸದ್ಯಕ್ಕೆ ಆ ವಿಷಯಕ್ಕೆ ಇಲ್ಲಿ ನಾವು ಏನನ್ನೂ ಹೇಳಿಲ್ಲ.

## ಆಚಾರ್ಯರ ತಾಯಿ, ತಂದೆ, ಅಜ್ಜ

೨೨. **ಮಾಧವೀಯದ** ಎರಡನೆಯ ಸರ್ಗದಲ್ಲಿ ಮಹೇಶ್ವರನು ಕೇರಳದಲ್ಲಿರುವ ಪೂರ್ಣಾನದಿಯ ದಡದಲ್ಲಿ **ವೃಷಭಾದ್ರಿ**ಯೆಂಬ ಪರ್ವತದಲ್ಲಿ ಅವತರಿಸಿದನೆಂದೂ **ರಾಜಶೇಖರ**ನೆಂಬ ಆ ದೇಶದ ಅರಸು ಸ್ವಪ್ನದಲ್ಲಾದ ಪರಮೇಶ್ವರ ಪ್ರೇರಣೆಯಂತೆ ಅಲ್ಲಿ ಒಂದು ದೇವಾಲಯವನ್ನು ಕಟ್ಟಿಸಿದನೆಂದೂ ಅದರ ಬಳಿಯಲ್ಲಿರುವ **ಕಾಲಡಿ**ಯೆಂಬ ಅಗ್ರಹಾರದಲ್ಲಿ **ವಿದ್ಯಾಧಿರಾಜ**ನೆಂಬ ಪಂಡಿತನೊಬ್ಬನಿದ್ದನೆಂದೂ ವರ್ಣಿಸಿದೆ. ಆ ಪಂಡಿತನಿಗೆ **ಶಿವಗುರು** ಎಂಬ ಒಬ್ಬ ಮಗನಿದ್ದನು ; ಅವನು ಜ್ಞಾನದಲ್ಲಿ ಶಿವನೂ ವಚನದಲ್ಲಿ ಗುರುವೂ (೨–೫) ಆಗಿದ್ದದ್ದರಿಂದ ಆ ಹೆಸರು ಅವನಿಗೆ ಅನ್ವರ್ಥವಾಗಿತ್ತು ಎಂದು (ಮಾ. ಶಂ. ೨–೧ರಿಂದ ೫) ಹೇಳಿರುತ್ತದೆ.

ಇಲ್ಲಿ ಕಷ್ಟಕ್ಷರವಲ್ಲಿ ಅಚ್ಚುಮಾಡಿಸಿರುವ ಸಂಜ್ಞಾನಾಮಗಳನ್ನು ಕುರಿತು ಸ್ವಲ್ಪ ವಿಮರ್ಶೆಮಾಡತಕ್ಕದ್ದಿದೆ. ಆ ಕಾಲದಲ್ಲಿ ಕೇರಳದಲ್ಲಿ ರಾಜಶೇಖರ ನೆಂಬ ಹೆಸರಿನ ಅರಸನಿದ್ದನೊ, ಅಥವಾ ಇದು ರಾಜಶ್ರೇಷ್ಠನು ಎಂಬರ್ಥದಲ್ಲಿ ಪ್ರಯೋಗಿಸಿರುವ ಅನ್ವರ್ಥನಾಮಮಾತ್ರವೊ ? ಶಂಕರರ ಅಜ್ಜನ ಹೆಸರು **ವಿದ್ಯಾಧಿರಾಜ** ; ಇದೂ ಶ್ರೇಷ್ಠ ಪಂಡಿತನು ಎಂಬರ್ಥದ ಅನ್ವರ್ಥನಾಮವಾಗಿರು ವದಕ್ಕೆ ಸಾಕು. **ಪ್ರಾಚೀನಶಂಕರವಿಜಯ**ದಲ್ಲಿ ಈ ಪದ್ಯವಿದೆ :

ಈಶೋಽಪ್ಯಭೂತ್ಸಮದವಿದ್ವದಭೇದ್ಯದರ್ಪ
ಸರ್ಪಾಹಿತುಣ್ಡಿಕವಿದಗ್ಧಸಹಸ್ರಸೇವ್ಯೇ ।
ವಿದ್ಯಾಧಿಪತ್ಯಪರನಾಮ್ನಿ ಕುಲೇ ಶಿವಾಖ್ಯಾ-
ದಾರ್ಯಾಪತೇಃ ರವಿಸಹಸ್ರರುಚಿಃ ಕುಮಾರಃ ॥ (೬–೬೫)
ಶಿಷ್ಯೇ ಪ್ರಯಾತ್ಯನಲಶೇವಧಿಬಾಣನೇತ್ರೇ ॥ ಇತ್ಯಾದಿ (೧೯ನೆಯ ಪುಟ)

ಮಹಾಹಂಕಾರವುಳ್ಳ ಮದಿಸಿದ ವಿದ್ವಾಂಸರೆಂಬ ಸರ್ಪಗಳಿಗೆ ಹಾವಾಡಿಗ ನಂತಿರುವ ಸಾವಿರಾರು ಜನರುಳ್ಳ ವಿದ್ಯಾಧಿಪತಿ ಎಂಬ ಹೆಸರುಳ್ಳ ಕುಲದಲ್ಲಿ ಶಿವನೆಂಬಾತನಿಂದ ಆರ್ಯಾಪತಿಯಿಂದ ಸಾವಿರ ಸೂರ್ಯರ ಪ್ರಕಾಶವುಳ್ಳ ಕುಮಾರನು ಹುಟ್ಟಿದನು ಎಂದಿದೆ. ಆ ಶ್ಲೋಕಕ್ಕೆ 'ವಿದ್ಯಾಧಿಪತಿ' ಎಂಬ ಹೆಸರುಳ್ಳ ಕುಲದಲ್ಲಿ ಎಂದೂ ಅರ್ಥವನ್ನು ಮಾಡಬಹುದಾಗಿದೆ. ಇನ್ನು ಶಂಕರರ ತಂದೆಯ ಹೆಸರು **ಶಿವಗುರು** ; ಇದಕ್ಕೆ ಶಿವನ ಗುರು ಎಂದರೆ ಶಿವನ ತಂದೆ ಎಂಬರ್ಥವೂ ಆಗುವಂತಿದೆ. ಶಿವನು ಇವನ ಹೊಟ್ಟೆಯಲ್ಲಿ ಹುಟ್ಟಿದನು ಎಂದಿಷ್ಟೇ ಅರ್ಥವಾದರೆ ಇದು ಸಂಜ್ಞಾನಾಮವಾಗುವದಿಲ್ಲ. ಆದರೂ ಶಿವಾಖ್ಯಾತ್, ಶಿವಶರ್ಮಣಃ (ಗು.ರ. ೧೬) ಮುಂತಾದ ಪ್ರಾಚೀನಪ್ರಯೋಗಗಳಿಂದ ಶಿವಗುರು ಎಂಬ ಹೆಸರು ಮಾಧವನ ಕಲ್ಪನೆಯಲ್ಲವೆಂದು ಧಾರಾಳವಾಗಿ ನಂಬಬಹುದು. ಇನ್ನು ತಾಯಿಯ ಹೆಸರು. ಶಂಕರರ ಕಾಲವನ್ನು ವಿಚಾರಿಸುವಾಗ ನಾವು ಆಗಲೆ (ಪು. ೧೯) ಉದಾಹರಿಸಿರುವ 'ಲಗ್ನೇ ಶುಭೇ' ಎಂಬ ಶ್ಲೋಕದಲಿ 'ಜಾಯಾ ಸತೀ' (ಮಾ.ಶಂ ೩–೭೧) ಎಂದಿದೆ. ಡಿಂಡಿಮವ್ಯಾಖ್ಯಾನದಲ್ಲಿ 'ಶಿವಗುರೋರ್ಭಾರ್ಯಾ ಸತೀ' ಎಂದೇ ಇದೆ. ಮಾಧವೀಯವನ್ನೇ ಅನುಸರಿಸುವ **ಸದಾನಂದೀಯ**ದಲ್ಲಿ 'ಸಾ ಸತೀ ಸುಷುವೇ', (ಶಂ.ವಿ.ಸಾ.೨–೩೩)ಎಂದೇ ಇದೆ. ವ್ಯಾಸಾಚಲೀಯದಲ್ಲಿಯೂ 'ಜಾಯಾ ಸತೀ'ಎಂದೇ ಇದೆ(ವ್ಯಾ.ಶಂ. ೪–೨೧)ಎಂದು ಆಗಲೆ ಹೇಳಿದ್ದೇವೆ. ಆದರೆ ಮೇಲೆ ಉದಾಹರಿಸಿರುವ ಪ್ರಾಚೀನಶಂಕರವಿಜಯದಲ್ಲಿ 'ಶಿವಾಖ್ಯಾದಾರ್ಯಾ ಪತೇಃ' ಎಂದಿರುವದನ್ನು ನೋಡಿಯೊ ಏನೊ, ಇಲ್ಲಿಯೂ 'ಆರ್ಯಾ ಸತೀ'ಎಂಬ ಪಾಠಾಂತರವನ್ನು ಕೆಲವರು ಕಲ್ಪಿಸಿರುತ್ತಾರೆ. ಆಕೆಯು '**ಮಘ**'ನೆಂಬ ಪಂಡಿತನ ಮಗಳೆಂದು ಹೇಳಿರುವ (ಮಾ. ಶಂ. ೩–೩೨) ಮಾಧವೀಯಶ್ಲೋಕದಲ್ಲಿ ಆಕೆಯ ಹೆಸರಿಲ್ಲ. ವ್ಯಾಸಾಚಲೀಯದ ಹೋಲಿಕೆಯಿಂದ 'ಸತೀ' ಎಂಬುದೇ ಆಕೆಯ

ಹೆಸರೆಂಬುದು ಇಬ್ಬರಿಗೂ ಸಂಮತವೆಂದು ಕಾಣುತ್ತದೆ. ವ್ಯಾಸಾಚಲೀಯದಲ್ಲಿ(ವ್ಯಾ. ಶಂ. ೧-೨೯) 'ವಿದ್ಯಾಧಿರಾಜಮಖಪಣ್ಡಿತನಾಮಧೇಯೌ'-ಎಂದಿದೆ ತಮಿಳರು ಕ ಖ ಗಳನ್ನು ಗ ಘ ಎಂದೂ ಉಚ್ಚರಿಸುವದರಿಂದ ಮಘ ಎಂಬ ಶಬ್ದವು ಮಖಶಬ್ದದಿಂದ ಹುಟ್ಟಿರುವದಕ್ಕೆ ಸಾಕು. ಚಿದ್ವಿಲಾಸೀಯದಲ್ಲಿ ಅಜ್ಜನ ಹೆಸರನ್ನು ಕೊಟ್ಟಿಲ್ಲ ; ಶಿವಗುರುವನ್ನು ಮಖೀ (ಶಿವಗುರುರ್ಮಖೀ ಚಿ. ಶಂ. ೬-೨೬) ಯಜ್ವಾ (ಶಿವಗುರುರ್ಯಜ್ವಾ ಚಿ. ಶಂ. ೭-೧) ಎಂದು ಕರೆದಿರುವದರಿಂದ ದೀಕ್ಷಿತನೆಂದು ಕಾಣುತ್ತದೆ. ಮಖಪಂಡಿತನೂ ಯಜ್ಞದೀಕ್ಷಿತನೇ ಆಗಿರಬಹುದು. ಹೇಗೇ ಆಗಲಿ, "ಆರ್ಯಾ", "ಸತೀ"- ಇವುಗಳು ಕ್ರಮವಾಗಿ ಪೂಜ್ಯಳು, ಸಾಧ್ವೀಮಣಿ-ಎಂಬರ್ಥದ ಅನ್ವರ್ಥದ ನಾಮಗಳೆಂದೂ ಕಲ್ಪಿಸುವದಕ್ಕೆ ಬರುವಂತಿದೆಯೆಂಬುದನ್ನು ನೆನಪಿಡಬೇಕು. ಅಂತೂ ಹೀಗೆ ಶಂಕರರ ತಾಯಿ, ತಂದೆ, ಅಜ್ಜ-ಇವರಿಗೆ ಈಗ ಪ್ರಖ್ಯಾತವಾಗಿರುವ ಸತೀ, ಶಿವಗುರು, ವಿದ್ಯಾಧಿರಾಜ-ಎಂಬ ಹೆಸರುಗಳೇ ಅಂಕಿತನಾಮಗಳೋ ಅಥವಾ ಕವಿಗಳು ಕಲ್ಪಿಸಿದವುಗಳೋ ಹೇಳುವದಕ್ಕೆ ಬರುವಹಾಗಿಲ್ಲ.

## ಶಂಕರಾಚಾರ್ಯರ ಜನ್ಮವೃತ್ತಾಂತ, ಹೆಸರು

೨೩. ಮಾಧವೀಯದಲ್ಲಿ ಹೀಗಿದೆ : ಸತೀದೇವಿಯ ಸೂಚನೆಯಂತೆ ಶಿವಗುರುವೂ ಆವನ ಪತ್ನಿಯೂ ಪುತ್ರಾರ್ಥವಾಗಿ ಶಿವನನ್ನು ಕುರಿತು ತಪಸ್ಸು ಮಾಡಿದರು. ಮನೆಯ ಬಳಿ ಇರುವ ಒಂದು ಹೊಳೆಯಲ್ಲಿ ನಿಂದು ಕುಂದಮೂಲಾಶನರಾಗಿ ಶಿವನ ಸೇವೆಮಾಡುತ್ತಿರುವಾಗ ಕನಸಿನಲ್ಲಿ ಶಿವನು ಬ್ರಾಹ್ಮಣವೇಷದಿಂದ (ದ್ವಿಜವೇಷಧಾರೀ ಪ್ರತ್ಯಕ್ಷತಾಂ ಶಿವಗುರುಂ ಗತ ಆತ್ತನಿದ್ರಮ್, ೨-೫೧) ಬಂದು ಏತಕ್ಕೆ ತಪಸ್ಸುಮಾಡುತ್ತಿದ್ದೀಯೆ ? ನಿನಗೇನು ಬೇಕು ?- ಎಂದು ಕೇಳಿದನು. ಪುತ್ರೇಚ್ಛೆಯಿಂದ ತಪಸ್ಸುಮಾಡುತ್ತಿದೇನೆ ಎಂದು ಶಿವಗುರು ಹೇಳಿದನು. ಆಗ ಶಿವನು ಸರ್ವಜ್ಞನಾದ ಸರ್ವಗುಣೋಪೇತನಾದ ಒಬ್ಬನೇ ಮಗನು ಬೇಕೊ, ಅಥವಾ ಅದಕ್ಕೆ ವಿಪರೀತವಾಗಿರುವ ದೀರ್ಘಾಯುಸ್ಸುಳ್ಳ ಸ್ವಲ್ಪಗುಣವುಳ್ಳ ಬಹಳ ಪುತ್ರರು ಬೇಕೊ ? (ದೇವೋಽಪ್ಯಪೃಚ್ಛದಥ ತಂ ದ್ವಿಜ ವಿದ್ಧಿ ಸತ್ಯಂ ಸರ್ವಜ್ಞಮೇವಮಪಿ ಸರ್ವಗುಣೋಪಪನ್ನಮ್| ಪುತ್ರಂ ದದಾಮ್ಯಥ ಬಹೂನ್ ವಿಪರೀತಕಾಂಸ್ತೇ ಭೂಯಾಯುಷಸ್ತನುಗುಣಾನವದದ್ದ್ವಿಜೇಶಃ || ೨-೫೨) ಎನ್ನಲು 'ಆ ಬ್ರಾಹ್ಮಣನು ಸರ್ವಜ್ಞನಾದ ಒಬ್ಬ ಮಗನೇ ಇರಲಿ' ಎಂದನು. ಶಿವನು 'ಆಗಲಿ, ನಿನ್ನ ತಪಸ್ಸು ಪೂರ್ಣವಾಯಿತು, ಹೆಂಡತಿಯೊಡನೆ ಮನೆಗೆ ಹೋಗು' ಎಂದನು. ಶಿವಗುರು ಎಚ್ಚತ್ತಬಳಿಕ ಕನಸಿನ ಸುದ್ದಿಯನ್ನು ಹೆಂಡತಿಗೆ ಹೇಳಿದನು. ಆಕೆಯು ಅದನ್ನು ಕೇಳಿ ಸಂತೋಷಪಟ್ಟಳು. ಬಳಿಕ ಅವರಿಬ್ಬರೂ ಆತನನ್ನೇ ಸ್ಮರಿಸಿಕೊಳ್ಳುತ್ತಾ ಬ್ರಾಹ್ಮಣರಿಗೆ ಸಮಾರಾಧನೆಮಾಡಿ ಭೂರಿದಕ್ಷಿಣೆ

ಯನ್ನು ಕೊಟ್ಟು ಆತನ ಆಶೀರ್ವಾದವನ್ನು ಪಡೆದು ಅವರುಂಡು ಮಿಕ್ಕ ಅನ್ನ ವನ್ನು ಉಂಡರು. ಆ ಅನ್ನದಲ್ಲಿ ಶೈವತೇಜಸ್ಸು ಸೇರಿಕೊಂಡಿತು. (ಭುಕ್ತೇ ಪ್ರವಿಷ್ಟಮಭವತ್ಕಿಲ ಶೈವತೇಜಃ || ೨-೫೬) ಸತೀದೇವಿಯು ಗರ್ಭಿಣಿಯಾಗಿ ಸುಮುಹೂರ್ತದಲ್ಲಿ ಮಗನನ್ನು ಹಡೆದಳು. ನೋಡಿದವರಿಗೆ ಸುಖವಾಗುತ್ತದೆ ಯೆಂಬ ಕಾರಣದಿಂದ ಅಥವಾ ಬಹುದಿನಕ್ಕೆ ಶಂಕರನ ಪ್ರಸಾದದಿಂದ ಹುಟ್ಟಿದ ವನು- ಎಂಬ ಕಾರಣದಿಂದ (೨-೮೩) ತಂದೆಯು ಮಗುವಿಗೆ **ಶಂಕರ**ನೆಂಬ ಹೆಸರನ್ನಿಟ್ಟನು (ಮಾ. ಶಂ. ೨-೮೬ ರಿಂದ ೮೩).

**ವ್ಯಾಸಾಚಲೀಯದ ಕೈಬರಹದ ಪ್ರತಿಯಲ್ಲಿಯೂ** ಹೀಗೆಯೇ ವಿವರ ವಿದೆ. ಮಾಧವೀಯದಲ್ಲಿ ಶಿವಗುರುವು ಪುತ್ರಸಂತತಿಯಾಗಲಿಲ್ಲವಲ್ಲ! ಎಂದು ಹಲುಬಿದಾಗ ಆತನ ಪತ್ನಿಯು 'ಶಿವನಿಗೆ ಶರಣುಹೋಗೋಣ ; ಅವನಿಂದ ಸಕಲಾರ್ಥಗಳೂ ಸಿದ್ಧಿಯಾಗುವವೆಂಬುದಕ್ಕೆ ಉಪಮನ್ಯುವೇ ಪ್ರಮಾಣ' (ತತ್ರೋಪಮನ್ಯುಮಹಿಮಾ ಪರಮಂ ಪ್ರಮಾಣಮ್ ಮಾ.ಶಂ. ೨-೪೮) ಎಂದು ಹೇಳಿರುವ ಶ್ಲೋಕವನ್ನು-ಎರಡನೆಯ ಮೂರನೆಯ ಸರ್ಗಗಳಲ್ಲಿ ವಿಸ್ತಾರವಾಗಿ ವರ್ಣಿಸಿದ ಬಳಿಕ-ಸ್ವಲ್ಪ ಮಾರ್ಪಡಿಸಿ ಹಾಕಿದೆ. (ಏವಂ ಫಲಪ್ರದಮನೀಶ್ವರ ಮೀಶ್ವರಾಣಾಮೀಶಂ ಭಜಾಮ; ವ್ಯಾ.ಶಂ. ೪-೧), ವ್ಯಾಸಾಚಲೀಯದಲ್ಲಿ ಶಿವ ಗುರುವಿನ ಮನೆಯ ಬಳಿ ಇದ್ದ ನದಿಯ ಹೆಸರನ್ನು ಹೇಳಿಲ್ಲ ; ಆದ್ದರಿಂದ 'ತಸ್ಯೋಪಧಾಮ ಕಿಲ ಸಂನಿಹಿತಾಪಗೈಕಾ" ಆತನ ಮನೆಯ ಹತ್ತಿರ ಒಂದು ಹೊಳೆಯಿತ್ತು ಎಂದು ಬರೆದಿರುವದು ಅಲ್ಲಿ ಸಹಜವಾಗಿ ತೋರುತ್ತಿದೆ ; ಆದರೆ ಸರ್ಗದ ಆದಿಯಲ್ಲಿಯೇ 'ತತೋ ಮಹೇಶಃ ಕಿಲ ಕೇರಳೇಷು ಶ್ರೀಮದ್ವೃಷಾದ್ರೌ ಕರುಣಾಸಮುದ್ರಃ । ಪೂರ್ಣಾನದೀಪುಣ್ಯತಟೇಸ್ವಯಮ್ಭೂರ್ಲಿಂಗಾತ್ಮನಾನಙ್ಗ ಧಗಾವಿರಾಸೀತ್|| (ಮಾ.ಶಂ. ೨-೧) ಆಮೇಲೆ ಕಾಮದಹನನೂ ಕರುಣಾಸಾಗ ರನೂ ಆದ ಮಹೇಶ್ವರನು ವೃಷಾದ್ರಿಯಲ್ಲಿ ಪೂರ್ಣಾನದಿಯ ದಡದಲ್ಲಿ ಸ್ವಯಂಭು ವಾದರೂ ಲಿಂಗರೂಪದಿಂದ ಆವಿರ್ಭವಿಸಿದನು-ಎಂದು ಹೇಳಿರುವ ಮಾಧವನು ಸಂನಿಹಿತಾಪಗೈಕಾ (ಒಂದು ನದಿಯು ಮನೆಯ ಹತ್ತಿರವಿತ್ತು) ಎಂದು ಹೇಳು ವದು ಹೇಗೆ ಸಮಂಜಸವಾದೀತು? ಆದ್ದರಿಂದ ಈ ಪದ್ಯವನ್ನು ವ್ಯಾಸಾಚಲೀಯ ದಿಂದಲೇ ಮಾಧವನು ಪೂರ್ವೋತ್ತರವಿರೋಧವಾಗುವದೆಂಬುದನ್ನು ಲಕ್ಷಿಸದೆ ಬರೆದುಕೊಂಡುಹಾಕಿರಬಹುದೆ ? ಇದು ವಿಚಾರಣೀಯವಾಗಿದೆ.

**ಚಿದ್ವಿಲಾಸೀಯದಲ್ಲಿ :** ಬ್ರಹ್ಮನಿಗೆ ಲೋಕೋದ್ಧಾರವನ್ನು ಮಾಡುವೆ ನೆಂದು ಶಿವನು ವಾಗ್ದಾನಮಾಡುವಾಗ 'ಶಿವಗುರುವು ಪೌಂಡರೀಕ, ವಾಜ ಪೇಯ - ಮುಂತಾದ ಯಜ್ಞಗಳನ್ನು ಮಾಡಿ ಸರ್ವಶಾಸ್ತ್ರವಿಶಾರದನಾಗಿ ಉಪ ನಿಷದರ್ಥವನ್ನು ಅವಲೋಕನಮಾಡಿ ಶಿವಾಖ್ಯವಾದ ಬ್ರಹ್ಮವೇ ಸರ್ವರ ಆತ್ಮವು

ಎಂದು ಅರಿತುಕೊಂಡು ನನ್ನನ್ನೇ ಶರಣುಹೊಂದಿರುತ್ತಾನೆ. ಹಗಲೂ ಇರುಳೂ ತನ್ನ ಭಾರ್ಯೆ ಆರ್ಯೆಯೊಡನೆ ಶಿವಗೌರಿಯರ ನಿವಾಸವನ್ನೇ ನೋಡುತ್ತಾ ಎಲ್ಲವನ್ನೂ ಮರೆತು ನನ್ನನ್ನೇ ಸ್ಮರಿಸುತ್ತಾ ಘೋರತಪಸ್ಸನ್ನು ಮಾಡುತ್ತಿರುತ್ತಾನೆ; ವೃಷಾಚಲವಾಸಿಯಾದ ನನ್ನನ್ನೇ ಭಜಿಸುತ್ತಿರುತ್ತಾನೆ. ಇದನ್ನು ನನಗೆ ಸರಸ್ವತಿ ಹೇಳಿರುವಳು. ಅವನ ಅಭೀಷ್ಟವನ್ನು ಸಲ್ಲಿಸಿ ಅವನ ಮಗನಾಗಿ ಶಂಕರನೆಂಬ ಹೆಸರಿನಿಂದ ಭೂತಲದಲ್ಲಿ ಸಂಚರಿಸುವೆನು' (ಚಿ. ಶಂ. ೪-೩೭ ರಿಂದ ೪೯) ಎಂದು ಹೇಳಿ ಶ್ರುತಿಸ್ಮೃತಿವಿರುದ್ಧಮತಗಳನ್ನು ಪರಿಹರಿಸಿ, ತಪಸ್ಸನ್ನು ಮಾಡುತ್ತಿರುವ ಶಿವಗುರುವಿಗೆ ಪುತ್ರದಾನವನ್ನು ಮಾಡಿ, ಭೇದವಾದಿತಮಸ್ಸಿನಿಂದ ಗ್ರಸ್ತರಾದ ಜನರನ್ನು ಉದ್ಧಾರಮಾಡಿ ತನ್ನ ಲೀಲೆಗಳನ್ನು ತೋರಿಸಬೇಕೆಂದು-ಕೇರಳಜನರ ವಿದ್ವತ್ತೆಯನ್ನು ಪಾವನಗೊಳಿಸಿ.ದಕ್ಷಿಣಕೈಲಾಸವೆನಿಸುವ ವೃಷಾಚಲಕ್ಕೆ ಬಂದನು; ಚೂರ್ಣೀ ಎಂಬ ಗಂಗೆಯಂತಿರುವ ಪಾಪವಿನಾಶಿನಿಯಾದ ನದಿಯು ಹರಿಯುತ್ತಿದೆ....ಅಳಕಾಪುರಿಯಂತಿರುವ ಕಾಲಟಿನಗರಿಯು ವಿರಾಜಿಸುತ್ತಿದೆ.... ಆ ವೃಷಭಾಚಲೇಶ್ವರನು ಆ ದಂಪತಿಗಳಿಬ್ಬರೂ ಸ್ವಪ್ನದಲ್ಲಿ ವಿಪ್ರರೂಪದಿಂದ ಕಾಣಿಸಿಕೊಂಡು 'ವರವನ್ನು ಬೇಡಿರಿ, ನೆರವೇರಿಸಿಕೊಡುವೆನು' ಎಂದು ಹೇಳಿದನು. ಅವರು ಭಕ್ತಿಭರರಾಗಿ ಇವನು ವೃಷಾಚಲೇಶ್ವರನೇ ಎಂದು ನಿಶ್ಚಯಿಸಿ ನಮಸ್ಕಾರಪೂರ್ವಕವಾಗಿ ತಮ್ಮ ವೃತ್ತಾಂತವನ್ನು ತಿಳಿಸಿದರು. (ತತಸ್ತೇನಾಭ್ಯವಾದೀತ್ಥಂ ಸರ್ವಶಾಸ್ತ್ರವಿಶಾರದಮ್ ॥೨೧॥ ದಾಸ್ಯಾಮಿ ಪುತ್ರಮೇಕಂ ವಾ ಚಿರೇತರವಯೋಯುತಮ್। ಅಥವಾ ಸುಚಿರಾಯುಷ್ಕಾನ್ ಬಹೂನ್ ಪುತ್ರಾಂಸ್ತು ಬಾಲಿಶಾನ್ ॥೨೨॥ ಸ್ವಲ್ಪಾಯುಸ್ಸಿನ ಸರ್ವಶಾಸ್ತ್ರವಿಶಾರದನಾದ ಮಗನನ್ನು ಕೊಡಲೊ? ಚಿರಾಯುಗಳಾದ ಮೂರ್ಖರಾದ ಅನೇಕ ಪುತ್ರರನ್ನು ಕೊಡಲೊ?- ಎಂದು ಕೇಳಿದನು. 'ಮೂರ್ಖರಾದ ಬಹುಮಕ್ಕಳಿಂದೇನು? ಸ್ವಲ್ಪಾಯುವಾದರೂ ವೇದವೇದಾಂಗತತ್ತ್ವವಿದನಾದವನೊಬ್ಬನೇ ಮಗನಾದರೂ ತನ್ನ ವಂಶವನ್ನು ಉದ್ಧಾರಮಾಡುತ್ತಾನೆ. ಆದ್ದರಿಂದ ಇಂಥ ಒಬ್ಬನೇ ಸಾಕು" ಎಂದು ಆಕೆ ಹೇಳಿದಳು. "ಹಾಗೇ ಆಗಲಿ!' ಎಂದು ಶಿವನು ಹೊರಟುಹೋದನು. ಹೀಗೆ ಅವರಿಬ್ಬರೂ ಒಬ್ಬರನ್ನೊಬ್ಬರು ನೋಡಿದರು, ಬೆಳಗ್ಗೆ ಎದ್ದು ಸುಪುತ್ರನನ್ನು ಕೊಟ್ಟೇ ಇರುವ ಗಿರಿಜಾಪತಿಯಾದ ವೃಷಾಚಲೇಶ್ವರನು ಮಾರ್ಕಂಡೇಯನನ್ನು ಚಿರಾಯುಷ್ಕನನ್ನಾಗಿ ಮಾಡಿದಂತೆ ಇವನನ್ನೂ ಮಾಡುತ್ತೇನೆ ಎಂದು ನಿಶ್ಚಯಿಸಿದರು, (ಸುಪುತ್ರಂ ದತ್ತವಾನೇವ ವೃಷಾಚಲಕೃತಾಶ್ರಯಃ ಚಿರಾಯುಷ್ಯಂ ಕರೋತ್ಯೇವ ಮೃಕಣ್ಡೋರಿವ ಬಾಲಕಮ್॥) ಸ್ವಪ್ನದರ್ಶನವು ಸಫಲವಾಯಿತೆಂದೇ ನೆನೆದುಕೊಂಡು ಶಿವಭಜನೆಯನ್ನು ನಿಲ್ಲಿಸಿ ಮನೆಗೆ ಹೋಗಿ ಬ್ರಾಹ್ಮಣಸಂತರ್ಪಣೆಯನ್ನು ಮಾಡಿ ಅವರ ಆಶೀರ್ವಾದವನ್ನು ಪಡೆದು ಅವರ ಭುಕ್ತಶೇಷವನ್ನು ಭುಂಜಿಸಿದರು. ಆ ಅನ್ನದಲ್ಲಿ ಈಶ್ವರನ

ಜ್ಯೋತಿಯು ಪ್ರವೇಶಿಸಿತು. ಆರ್ಯಾಂಬೆಯು ಗರ್ಭವನ್ನು ಧರಿಸಿ ಹತ್ತನೆಯ ಮಾಸದ ಶುಭದಿನದಲ್ಲಿ ಮಗನನ್ನು ಹೆತ್ತಳು (ಚಿ. ಶಂ. ೫-೧ ರಿಂದ ೧೩, ೩೭).

ಈ ವಿವರವೂ ಮಾಧವೀಯದಲ್ಲಿರುವಂತೆಯೇ ಇದೆ. ವಿಶೇಷವೇನೆಂದರೆ, ಇಬ್ಬರೂ ಅಲ್ಲಿ ಒಬ್ಬರನ್ನೊಬ್ಬರು ನೋಡಿದರು. ಇಬ್ಬರೂ ತಮ್ಮ ವೃತ್ತಾಂತವನ್ನು ಶಿವನಲ್ಲಿ ಹೇಳಿಕೊಂಡರು. (ಏಕೋಽಲಮಯಮಿತ್ಯೇವಮುವಾದೀತ್ಸಾ ತಥಾಗ್ರತಃ ||) ಶಿವನು ಕೇಳಿದ ಪ್ರಶ್ನೆಗೆ ಹೇಳಬೇಕಾದ ಉತ್ತರವನ್ನು ಆಲೋಚಿಸುತ್ತಿರುವಲ್ಲಿ ಹೆಂಡತಿಯೇ ವೇದವೇದಾಂಗತತ್ತ್ವಜ್ಞನಾದ ಒಬ್ಬ ಮಗನೇ ಸಾಕೆಂದು ಹೇಳಿದಳು. ಆಕೆಯ ಹೆಸರು ಆರ್ಯಾ, ಸತೀ ಅಲ್ಲ. ನದಿಯ ಹೆಸರು ಇಲ್ಲಿ "ಚೂರ್ಣೀ" ಎಂದಿದೆ. ಪೂರ್ಣಾ ಅಲ್ಲ. 'ಚೂರ್ಣೀ ಸ್ರೋತಸ್ವಿನೀ ಯತ್ರ ಗಙ್ಗೇವಾಘೌಘನಾಶಿನೀ' (ಚಿ.ಶಂ.೫-೬). ಈ ಶಂಕರವಿಜಯದ ವಿಷಯಕ್ಕೆ ಇನ್ನೊಂದು ಮಾತನ್ನು ಹೇಳತಕ್ಕದ್ದು ಅವಶ್ಯವಿದೆ. ಇದರಲ್ಲಿರುವ ಶಂಕರರ ಜನ್ಮಕಾಲವು ಬೃಹಚ್ಛಂಕರವಿಜಯದಲ್ಲಿರುವ ಶ್ಲೋಕದಲ್ಲಿ ಇರುವ ಕಾಲವೇ ಆಗಿದೆ ಎಂದು ಆಗಲೆ (ಪು ೨೭) ಹೇಳಿರುವೆವಷ್ಟೆ? ಚಿತ್ಸುಖಾಚಾರ್ಯಕೃತವೆಂದು ಪ್ರಸಿದ್ಧವಾಗಿರುವ ಬೃಹಚ್ಛಂಕರವಿಜಯದ ಶ್ರೀಶಂಕರಪ್ರಾದುರ್ಭಾವದ ಪ್ರಕರಣವೊಂದು ಸುದೈವದಿಂದ ಪೂರಲಬ್ಧವಾಗಿದೆ. ಅದನ್ನೂ ಚಿದ್ವಿಲಾಸೀಯದ ಸಮಾನಪ್ರಕರಣವನ್ನೂ ಹೋಲಿಸಿದ್ದರಲ್ಲಿ ಈ ಎರಡು ಗ್ರಂಥಗಳಿಗೂ ಅತ್ಯಂತನಿಕಟಸಂಬಂಧವಿದೆಯೆಂದು ಗೊತ್ತಾಗುತ್ತದೆ. ಚಿದ್ವಿಲಾಸೀಯಪ್ರಕರಣವು ಆ ಗ್ರಂಥದ ಬಹ್ವಂಶವನ್ನು ಅನುಕರಿಸಿರಬಹುದೆಂಬ ಸೂಚನೆಯೂ ಇದರಿಂದ ಹೊರಡುತ್ತದೆ. ತತ್ತ್ವಾನ್ವೇಷಕರಾದ ವಾಚಕರ ಕುತೂಹಲನಿವೃತ್ತಿಗಾಗಿ ಆ ಪ್ರಕರಣವನ್ನು ೫ನೆಯ ಪರಿಶಿಷ್ಟದಲ್ಲಿ ಕೊಟ್ಟಿರುತ್ತೇವೆ. ಇದರಿಂದ ಪಾಠಕರೇ ತಮ್ಮ ತಮ್ಮ ನಿರ್ಣಯಕ್ಕೆ ಬರಬೇಕಾಗಿದೆ.

## ಅನಂತಾನಂದಗಿರೀಯ ಶಂಕರವಿಜಯ

೨೮. ಮೇಲೆ ಕೊಟ್ಟಿರುವ ಶಂಕರವಿಜಯಗಳ ವಿವರಗಳು ಬಲುಮಟ್ಟಿಗೆ ಹೊಂದುಗಡೆಯಾಗುತ್ತವೆ. ಆಚಾರ್ಯರು ಕೇರಳದಲ್ಲಿ ಕಾಲಡಿಯಲ್ಲಿಯೇ ಹುಟ್ಟಿದರೆಂಬ ವಿಷಯಕ್ಕೆ ಎಲ್ಲಾ ವಿಜಯಗಳಿಗೂ ಸಂಮತಿಯಿದೆ. ಆದರೆ ಅನಂತಾನಂದಗಿರಿಕೃತವಾದ ಶಂಕರವಿಜಯದಲ್ಲಿ ಮಾತ್ರ ಆಚಾರ್ಯರ ಜನ್ಮಸ್ಥಲ ತಂದೆತಾಯಿಗಳ ಹೆಸರು, ಹುಟ್ಟಿದ ಪ್ರಕಾರ- ಇವುಗಳ ವಿವರಗಳು ಭಿನ್ನವಾಗಿ ಕಾಣಬರುತ್ತಿವೆ. ಅದು ಹೇಗೆಂದರೆ :

'ಆ ಬಳಿಕ ಸರ್ವಾತ್ಮಕನಾದ ಶಿವನು ಚಿದಂಬರಪುರದಲ್ಲಿ ಆಕಾಶಲಿಂಗವೆಂಬ ಹೆಸರಿನಿಂದ ಪ್ರಖ್ಯಾತನಾಗಿದ್ದನು. ಅದ **ಸರ್ವಜ್ಞ**ನೆಂಬ ಬ್ರಾಹ್ಮಣನೂ

ಕಾಮಾಕ್ಷೀ ಎಂಬ ಅವನ ಹೆಂಡತಿಯೂ ಚಿರಕಾಲ ಶಿವನನ್ನು
ಫಲವಾಗಿ ವಿಶಿಷ್ಟಾ ಎಂಬ ಮಗಳನ್ನು ಪಡೆದರು. ಅವಳನ್ನು ಎಂಟನೆಯ ವರ್ಷದಲ್ಲಿ ವಿಶ್ವಜಿತ್ತು ಎಂಬ ವರನಿಗೆ ಕೊಟ್ಟು ಮದುವೆಮಾಡಿದರು. ಪತಿಸೇವಾನಿರತಳಾಗಿದ್ದರೂ ಆಕೆಯನ್ನು ಬಿಟ್ಟು ಗಂಡನು ತಪಸ್ಸುಮಾಡುವದಕ್ಕೆ ಅರಣ್ಯಕ್ಕೆ ಹೋದನು. (ತಾದೃಶೀಮಪಿ ಸಂತ್ಯಕ್ತ್ವಾ ಯಯೌ ವಿಶ್ವಜಿದದ್ಭುತಮ್|ಅರಣ್ಯೇ ತಪಸೇ ಕೃತ್ವಾ ಮನೋನಿಶ್ಚಯತಾಂ ಗತಃ ||). ಅಲ್ಲಿಂದ ಮುಂದಕ್ಕೆ ಆಕೆಯು ಚಿದಂಬರಮಹೇಶ್ವರನನ್ನೇ ಆರಾಧಿಸುತ್ತಿದ್ದಳು. ಆ ದೇವನು ಎಲ್ಲಾ ಕಡೆಯಲ್ಲಿಯೂ ಪೂರ್ಣನಾದರೂ ಆಕೆಯ ಮುಖಕಮಲವನ್ನು ಹೊಕ್ಕದ್ದನ್ನು ಕಂಡು ಅಲ್ಲಿಗೆ ಬಂದಿದ್ದ ಜನರು ವಿಸ್ಮಿತರಾದರು. ಆ ತೇಜಸ್ಸಿನಿಂದ ಕೂಡಿದ ವಿಶಿಷ್ಟೆಯು ಪಾರ್ವತಿಯಂತೆ ಮಹಾತೇಜಸ್ವಿನಿಯಾದಳು, ತಂದೆತಾಯಿಗಳೇ ಮುಂತಾಗಿ ಎಲ್ಲರಿಂದಲೂ ಗೌರವಿಸಲ್ಪಟ್ಟು ಗರ್ಭವತಿಯಾದಳು. ದಿನದಿನಕ್ಕೂ ಗರ್ಭವು ಬೆಳೆಯಿತು. ಬ್ರಾಹ್ಮಣರು ಚಿದಂಬರನನ್ನೇ ಯಜಮಾನನನ್ನಾಗಿ ಮಾಡಿಕೊಂಡು ಮೂರನೆಯ ತಿಂಗಳಿಂದಲೂ ಆಕೆಗೆ ವೇದೋಕ್ತಸಂಸ್ಕಾರಗಳನ್ನು ಮಾಡಿದರು. ಹತ್ತನೆಯ ತಿಂಗಳಲ್ಲಿ ವಿಶಿಷ್ಟೆಯು ಗರ್ಭದಿಂದ ಮಹಾದೇವನು ಶಂಕರಾಚಾರ್ಯನೆಂಬ ನಾಮದಿಂದ ಜನಿಸಿದನು' (ಆ. ಶಂ. ಪ್ರ. ೨ ಪು. ೮–೯) ಮೂಲಶ್ಲೋಕಗಳನ್ನು ೫ನೆಯ ಪರಿಶಿಷ್ಟದಲ್ಲಿ ಕೊಟ್ಟಿದೆ.

ಈ ಅನಂತಾನಂದಗಿರಿಯು ಶಂಕರಾಚಾರ್ಯರ ಸಾಕ್ಷಾಚ್ಛಿಷ್ಯನೆಂದು ತನ್ನನ್ನು ಕರೆದುಕೊಂಡಿರುತ್ತಾನೆ. ಆದರೂ ಶಂಕರರ ತಾಯಿಯ ಹೆಸರು ವಿಶಿಷ್ಟೆಯೆಂದೂ ತಂದೆಯ ಹೆಸರು ವಿಶ್ವಜಿತ್ತೆಂದೂ ಮಾತಾಮಹನ ಹೆಸರು ಸರ್ವಜ್ಞನೆಂದೂ ಹೇಳುತ್ತಾನೆ. ಇದು ನಿಜವಾಗಿದ್ದರೆ ಮಿಕ್ಕವರು ಈ ಹೆಸರುಗಳನ್ನು ಬಿಟ್ಟು ತಾಯಿಯನ್ನು ಆರ್ಯಾಂಬೆ ಅಥವಾ ಸತಿ ಎಂದೂ ತಂದೆಯನ್ನು ಶಿವಗುರುವೆಂದೂ ಮಾತಾಮಹನು ಮಘ(ಅಥವಾ ಮಖ)ಪಂಡಿತನೆಂದೂ ಕರೆಯುವ ಧೈರ್ಯವನ್ನು ಹೇಗೆ ಮಾಡಿಕೊಂಡರೆಂದು ಮೊದಲನೆಯ ಆಕ್ಷೇಪವು ಎದ್ದುಕೊಳ್ಳುತ್ತದೆ. ಇದಲ್ಲದೆ ಶಂಕರರು ಪುರುಷಬೀಜದ ಹಂಗಿಲ್ಲದೆ ಶಿವನ ತೇಜಸ್ಸು ವಿಶಿಷ್ಟೆಯ ಮುಖವನ್ನು ಪ್ರವೇಶಿಸಿದ ಕಾರಣದಿಂದಲೇ ಆಕೆಯ ಗರ್ಭದಿಂದ ಹುಟ್ಟಿದರೆಂದು ಈತನು ಅತ್ಯಂತ ಅಸ್ವಾಭಾವಿಕಕಥೆಯನ್ನು ಕಲ್ಪಿಸಿರುತ್ತಾನೆ. ತೇಜಸ್ಸು ಪ್ರವೇಶಿಸಿದಾಗ ದೇವಾಲಯಕ್ಕೆ ಬಂದಿದ್ದ ಜನರು ನೋಡಿ ವಿಸ್ಮಿತರಾದರೆಂದು ಕಲ್ಪಿಸಿರುವದು ಮುಂದೆ ತಂದೆತಾಯಿಗಳೇ ಮುಂತಾದವರು ಆಕೆಯನ್ನು ಸಂಶಯಚಿತ್ತದಿಂದ ಕಾಣದೆ ಗೌರವಿಸಿದರು– ಎಂಬುದನ್ನು ಪುಷ್ಟಿಗೊಳಿಸುವದಕ್ಕಿರಬೇಕು. ಆದರೆ ದೇವಸ್ಥಾನದಲ್ಲಿದ್ದ ಜನರ ಹೇಳಿಕೆಯನ್ನೇ ನಂಬಿ ತಂದೆತಾಯಿಗಳೂ ಮಿಕ್ಕವರೂ ಹೇಗೆ ಆಕೆಯನ್ನು ಗೌರವಿಸಿದರು? ಕೆಲವರು ನಂಬಿದವರು, ಕೆಲವರು

ಸಂಬದೆ ಇಪ್ಪವರು- ಹೀಗೆ ಎರಡು ತಂಡದವರಾಗಿ ಒಬ್ಬರು ಆಕೆಯನ್ನು ಗೌರವಿಸುವದು, ಮತ್ತೊಂದು ಪಂಗಡದವರು ಆಕೆಯನ್ನು ಬಹಿಷ್ಕರಿಸುವದು-ಹೀಗಾಗಬೇಕಾದದ್ದು ಸ್ವಾಭಾವಿಕವಲ್ಲವೆ? ಮುಂದೆ ಆಚಾರ್ಯರ ಗೌರವಕ್ಕೂ ಎಲ್ಲಿಯಾದರೂ ಕುಂದುಬರಬೇಕಾಗಿತ್ತಲ್ಲವೆ? ಹಾಗೆ ಆಗಲಿಲ್ಲವಾದ್ದರಿಂದ ಇದು ವಿಶ್ವಸನೀಯವಾದ ಕಥೆಯಲ್ಲ ಎಂದು **ಸೋಮನಾಥಯ್ಯನವರು** (ಸೋ. ಶಂ. ೩೨) ಶಂಕೆಯನ್ನೊಡ್ಡಿರುತ್ತಾರೆ. ಇದು ಯುಕ್ತಿಯುಕ್ತವಾಗಿದೆ. ಆಚಾರ್ಯರ ಜನ್ಮಸ್ಥಲವು ಕೇರಲದೇಶದ ಕಾಲಟಿ ಎಂದು ಮಿಕ್ಕವರೆಲ್ಲರೂ ಹೇಳಿರುವಲ್ಲಿ ಈ ಗ್ರಂಥಕರ್ತನು ಮಾತ್ರ **ಚಿದಂಬರವನ್ನು** ಹೇಳಿರುವದೇಕೆ? ಮಾಧವಾದಿಗಳು ಶಿವನು ವೃಷಾದ್ರಿಯಲ್ಲಿ ಲಿಂಗರೂಪದಿಂದ ಆವಿರ್ಭವಿಸಿದನೆಂದು ಹೇಳುತ್ತಿರುವಲ್ಲಿ ಈತನು ಚಿದಂಬರದಲ್ಲಿ ಆಕಾಶಲಿಂಗರೂಪದಿಂದ ಆವಿರ್ಭವಿಸಿದನೆಂದು ಹೇಳುವದನ್ನು ನೋಡಿದರೆ ಈತನಿಗೆ ಚಿದಂಬರದಲ್ಲಿ ಬಹಳ ಶ್ರದ್ಧೆಯಿತ್ತೆಂಬುದು ಹೊರತು ಮತ್ತೇನೂ ಸಿದ್ಧವಾಗುವದಿಲ್ಲ. ಮುಂದೆ ಶಂಕರಾಚಾರ್ಯರು ತಮ್ಮ ದೇಹತ್ಯಾಗದ ಕಾಲಕ್ಕೆ ಸುರೇಶ್ವರಾಚಾರ್ಯರ ಮೂಲಕ ಮೋಕ್ಷಲಿಂಗವನ್ನು ಚಿದಂಬರಕ್ಕೆ ಕಳುಹಿಸಿಕೊಟ್ಟರೆಂದು (ಆ. ಶಂ. ೭೩. ಪು. ೧೨೩೪) ಹೇಳಿರುವದೂ ಈ ಶ್ರದ್ಧೆಯನ್ನೇ ಪ್ರಕಟಿಸುತ್ತದೆ ಎನ್ನಬಹುದು ಎಂತ ಕಾಣಿಸುತ್ತದೆ. ತಾಯಿತಂದೆಗಳು, ಹುಟ್ಟಿದ ಸ್ಥಲ- ಮುಂತಾದವುಗಳ ಹೆಸರುಗಳನ್ನು ಮತ್ತೆ ಯಾರೂ ಹೇಳದೆ ಇರುವದನ್ನೇ ಬರೆದಿರುವದನ್ನು ನೋಡಿದರೆ ಈತನ ಕಾಲದಲ್ಲಿ ಆ ದೇಶದವರಿಗೆ ಈ ವಿವರಗಳು ಯಾವವೂ ನಿಶ್ಚಿತವಾಗಿ ತಿಳಿದಿರಲಿಲ್ಲವೆಂದು ಹೇಳಬೇಕಾಗುತ್ತದೆ.

ಆನಂತಾನಂದಗಿರಿಯು ಹೇಳುವ ವಿವರಗಳು **ಧೀರಶಂಕರ, ಅಭಿನವ ಶಂಕರ**- ಎಂಬ ಹೆಸರಿನ ಕಾಂಚೀಪೀಠದ ಗುರುಪರಂಪರೆಯಲ್ಲಿ ಮೂವತ್ತಾರನೆಯ ಪೀಠಾಧೀಶರಿಗೆ ಹೊಂದುತ್ತವೆಯೆಂದೂ ಅವರ ಚರಿತ್ರೆಯನ್ನು ಕಾಶ್ಮೀರದ ರಾಜನಾದ ಜಯಾಪೀಡನ ಆಸ್ಥಾನಕವಿಯಾದ ವಾಕ್ಪತಿಯೆಂಬಾತನು **ಶಂಕರೇಂದ್ರವಿಲಾಸದಲ್ಲಿ** ಬರೆದಿರುತ್ತಾನೆಂದೂ ಎನ್. ವೆಂಕಟರಾಮನ್‌ರವರು NVSK. pp18,82-85)ಹೇಳಿರುತ್ತಾರೆ. **ಅಭಿನವಶಂಕರಾಚಾರ್ಯರು** ವಿಶ್ವಜಿತ್ತಿನ ಮಕ್ಕಳು. ತಂದೆಯು ಸ್ವರ್ಗಸ್ಥನಾಗಲು ಆತನ ಚಿಕ್ಕವಯಸ್ಸಿನ ಹೆಂಡತಿಯೂ ಸಹಗಮನಮಾಡಲು ಉದ್ಯುಕ್ತಳಾದಳು, ಆದರೆ ಆಕೆಯು ಗರ್ಭಿಣಿಯಾಗಿರುವ ಚಿಹ್ನೆಗಳು ಕಂಡದ್ದರಿಂದ ಆದನ್ನು ಬಾಂಧವರು ತಪ್ಪಿಸಿದರು. ಆಕೆಯು ಗರ್ಭಿಣಿಯಾಗಿ ಒಂಬತ್ತು ತಿಂಗಳು ತುಂಬಿದರೂ ಪ್ರಸವವಾಗಲಿಲ್ಲ. ಇನ್ನೊಂದು ವರ್ಷವಾದರೂ ಪ್ರಸವವಾಗದೆ ಇದ್ದದ್ದರಿಂದ ಆಕೆಗೆ ಏನೋ ರೋಗವಿರಬೇಕೆಂದು ಜನರು ಸಂಶಯಪಡುವದಕ್ಕಾರಂಭಿಸಿದರು. ಆದರೆ ತಂದೆ ಸತ್ತ

ಮೂರು ವರ್ಷಗಳಾದ ಬಳಿಕ ಆಕೆ ಒಬ್ಬ ಮಗನನ್ನು ಹಡೆದಳು ; ಆವಳು ಜನರ ಅಪವಾದಕ್ಕೆ ಅಂಜಿ ಮಗುವನ್ನು ಕಾಡಿನಲ್ಲಿ ಬಿಟ್ಟುಬಿಟ್ಟಳು. ಅಲ್ಲಿ ವ್ಯಾಘ್ರಪಾದಋಷಿಗಳ ಪತ್ನಿಯಾದ ಒಂದು ಹೆಣ್ಣು ಹುಲಿಯು ಅವನ್ನು ಪೋಷಿಸಿತು. ಐದು ವರ್ಷಕ್ಕೆ ಋಷಿಯೇ ಉಪನಯನವನ್ನು ಮಾಡಿ ವೇದಾಭ್ಯಾಸವನ್ನು ಮಾಡಿಸಿದನು. ವಿದ್ಯಾಘನರು ಚಿದಂಬರದಲ್ಲಿದ್ದಾಗ ಶಿವನು ಶಂಕರರ ಮಹಿಮೆಯನ್ನು ಅವರಿಗೆ ತಿಳಿಸಿದನು ; ಆದರಿಂದಲೇ ವಿದ್ಯಾಘನರು ಅವರನ್ನು ಪೀಠದಲ್ಲಿ ಅಭಿಷಿಕ್ತರನ್ನಾಗಿ ಮಾಡಿದರು.' ಇಲ್ಲಿ ಕೊಟ್ಟಿರುವ ಶಂಕರರ ತಂದೆತಾಯಿಗಳ ಹೆಸರನ್ನೂ ಜನ್ಮಕ್ರಮವನ್ನೂ ವಾಕ್ಪತಿಭಟ್ಟನ "ಶಂಕರೇಂದ್ರವಿಜಯವಿಲಾಸ"ಎಂಬ ಗ್ರಂಥದಿಂದ (೨ನೆಯ ಅಂಕದಿಂದ) ತೆಗೆದುಕೊಂಡಿದೆ ಎಂದು ವೆಂಕಟರಾಮನ್ನರು ಬರೆದಿದ್ದಾರೆ (NVSK p. 82). ಆದೇ ಶಂಕರೇಂದ್ರವಿಜಯವಿಲಾಸದಲ್ಲಿ

ಹಾಯನೇಽಥ ವಿಭವೇ ವೃಷ ಮಾಸೇ ಶುಕ್ಲ ಪಕ್ಷದಶಮೀದಿನಮಧ್ಯೇ ।
ಶೇವಧಿದ್ವಿಪದಿಶಾನಲವರ್ಷೇ ತಿಷ್ಯ ಏನಮುದಸೋಷ್ಟ ವಿಶಿಷ್ಟಾ ॥

ಕಲಿಸಂವತ್ಸರ ೩೮೮೯ನೆಯ ವಿಭವಸಂವತ್ಸರದ (ಕ್ರಿ. ಶ. 788)–ವೃಷಭಮಾಸದ ೧೦ ದಿನ ವಿಶಿಷ್ಟಾದೇವಿಯು ಈತನನ್ನು ಹಡೆದಳು– ಎಂದು ಇದೆಯಂತೆ. ಹೀಗೆ ಹೇಳುವದಕ್ಕೆ ವಂಕಟರಾಮನ್ನರಿಗೆ ಆತ್ಮಬೋಧರ **ಗುರುರತ್ನಮಾಲಿಕೆಯ** ವ್ಯಾಖ್ಯಾನವೇ ಆಧಾರ. ರತ್ನಮಾಲಿಕೆಯಲ್ಲಿ ಈ ಶ್ಲೋಕಗಳಿವೆ :

ನಿಜತಾತಸ್ಮೃತೇಃ ಪರಂ ಪ್ರಕಾಶೇ
  ಗಜಗರ್ಭೇ ತ್ರಿಶರದ್ವಿಪಚ್ಯ ಕೋಶೇ ।
ಗಮಯನ್ನಮಿಮೋಲ್ಬವಾಸಶೇಷಂ
  ಗಣಯೇ ವಿಶ್ವಜಿತಃ ಸುತಂ ವಿಶೇಷಾತ್ ॥೬೧॥

ಪರಿವಾದಭಯಾತ್ಪ್ರಸೂವಿಸೃಷ್ಟಂ
  ವಿಪಿನೇ ವ್ಯಾಘ್ರವಧೂಭಿರೇವ ಪುಷ್ಟಮ್ ।
ನವಶಙ್ಕರಮಾದಿಮಾಚ್ಚ ಧೃಷ್ಟಂ
  ನಮ ಮಾಧ್ಯಂದಿನಿನೈವ ಬಾಲ್ಯಶಿಷ್ಟದಾ ॥೬೨॥

ಪರಮಭ್ರತನೋರ್ಗಿರೈವ ಶರ್ವೋ-
  ರ್ವರವಿದ್ಯಾಘನವಿಷ್ಟರೋಪಲಬ್ಧೇ ।
ಅಧಿಕಾಞ್ಚಿಪುರೀಮಠಂ ಶುಭಂ ಭೋ
  ಸ್ತ್ರ್ಯಧಿಕಶ್ಚಿತ್ತ ತನೋತು ತೇ ವಿದಮ್ಬುಃ ॥೬೩॥

(ಮೊದಲನೆಯ ಶ್ಲೋಕದಲ್ಲಿ, ವಿಶ್ವಜಿತ್ತಿನ ಮಕ್ಕಳು ಗರ್ಭವಾಸವಿಶೇಷವನ್ನು ಮುಗಿಸಿಬಿಡಬೇಕೆಂತಲೋ ಎಂಬಂತೆ ಮೂರು ವರ್ಷ ಗಜಗರ್ಭವಾಸವನ್ನು ಮಾಡಿದರೆಂದು ಹೇಳಿದೆ. ಎರಡನೆಯದರಲ್ಲಿ, ಹೆಣ್ಣುಹುಲಿಗಳು ಅವರನ್ನು ಸಾಕಿದ

ವೆಂದಿದೆ ; ವ್ಯಾಸಪ್ರಸಾದದಿಂ ಶಾಸ್ತ್ರಾಭ್ಯಾಸವನ್ನು ಮುಗಿಸಿದರೆಂದಿದೆ. ಮೂರ ನೆಯವರಲ್ಲಿ ಶಿವನ ಆಕಾಶವಾಣಿಯಂತೆ ಕಾಂಚೀಪುರಿಯ ವಿದ್ಯಾಘನಪೀಠಸ್ಥರಾದ ರೆಂದಿದೆ. ಆವರು ಮೂವರಿಗಿಂತಲೂ ಅಧಿಕರು, ಎಂದರೆ ಶ್ರೀಶಂಕರಭಗವತ್ಪಾದ, ಶ್ರೀಮದುಜ್ಜ್ವಲಶಂಕರ, ಮೂಕಶಂಕರ–ಇವರಿಗಿಂತ ಹೆಚ್ಚಿನವರು ಎಂಬರ್ಥವನ್ನು ಆತ್ಮಬೋಧರು ತೆಗೆದಿರುತ್ತಾರೆ.) ಈ ಕಥೆಯನ್ನೆಲ್ಲ ಎಷ್ಟರಮಟ್ಟಿಗೆ ನಂಬ ಬಹುದೆಂಬುವನ್ನು ತತ್ತ್ವಶೋಧಕರು ನಿರ್ಣಯಿಸಬೇಕಾದದ್ದು ಅತ್ಯವಶ್ಯ. ನಮ್ಮ ಅಭಿಪ್ರಾಯದಂತೆ ಆದ್ಯಶಂಕರರ ಕಾಲವು ಕ್ರಿ.ಪೂ. ಅಥವಾ ಕ್ರಿ.ಶ. ಒಂದ ನೆಯ ಶತಮಾನವೆಂಬುದು ಸೂತ್ರಭಾಷ್ಯದ ಅಂತರಂಗಪರೀಕ್ಷೆಯಿಂದ ಹೊರಡುವ ದೆಂಬ ಸಿದ್ಧಾಂತಕ್ಕೆ ಇದು ವಿರುದ್ಧವಾಗುವದೆಂಬುವನ್ನು ಹೇಳಬೇಕಾದದ್ದೇ ಇಲ್ಲ.

ಇದುವರೆಗೆ ತೆಲುಗಿನ ಪುಸ್ತಕದಲ್ಲಿ ಅಚ್ಚಾಗಿರುವ (ಆ. ಶಂ. ಪು. ೮–೯) ಶ್ಲೋಕಗಳು ಆನಂದಗಿರೀಯವೇ ಎಂದಿಟ್ಟುಕೊಂಡು ವಿಮರ್ಶೆಮಾಡಿದ್ದಾಗಿದೆ. ಆದರೆ ಈ ಭಾಗವು ಆನಂದಗಿರಿಯ ಪ್ರಾಚೀನಕೋಶಗಳಲ್ಲಿಲ್ಲವೆಂದೂ ಆ ಹಸ್ತ ಲಿಖಿತಪ್ರತಿಗಳಲ್ಲಿ ಆಚಾರ್ಯರು ಸ್ವಾಭಾವಿಕರೀತಿಯಿಂದಲೇ ಜನಿಸಿದರೆಂದೇ ಇದೆಯೆಂದೂ ಶ್ರೀಶಂಕರಪೀಠತತ್ತ್ವದರ್ಶನ ಎಂಬ ಸಂಸ್ಕೃತಪುಸ್ತಿಕೆಯ ಪರಿಶಿಷ್ಟದಲ್ಲಿರುವ ಇಂಗ್ಲಿಷು ಲೇಖನದಲ್ಲಿ ಮದರಾಸಿನಲ್ಲಿರುವ ರಿಟೈರ್ಡ್ ಡೆಪ್ಯುಟಿ ಕಲೆಕ್ಟರ್ ಕೆ. ಕುಪ್ಪಸ್ವಾಮಯ್ಯನವರು ತಿಳಿಸಿರುತ್ತಾರೆ. ಈಗ ಅಚ್ಚಿನಲ್ಲಿ ಕಾಣು ತ್ತಿರುವ ಪಾಠವು ಅದ್ವೈತದ್ವೇಷಿಗಳ, ಅಥವಾ ಕಾಮಕೋಟಿಪೀಠವಿದ್ವೇಷಿಗಳ, ಕೈವಾಡದಿಂದ ಆಗಿರಬೇಕೆಂದು ಕೆಲವರ ನಂಬಿಕೆಯಿದೆ ಎಂದು ಅವರ ಹೇಳಿಕೆ ; ಆ 'ಪ್ರಾಚೀನಪಾಠ'ವನ್ನು ೬ನೆಯ ಪರಿಶಿಷ್ಟದಲ್ಲಿ ಕೊಟ್ಟಿರುತ್ತೇವೆ. ಅದು ನಿಜವಾದರೆ ಶಂಕರಜನ್ಮಸ್ಥಲವು ಕಾಲಟಿ ಎಂಬುದು ಸರ್ವಸಮ್ಮತವೆಂದಾಗು ತ್ತದೆ ; ಆದರೆ ದೌರ್ಭಾಗ್ಯದಿಂದ ಅದೂ ಸಂಶಯಾಸ್ಪದವಾಗಿಯೇ ಇದೆ.

## ಕೂಷ್ಮಾಂಡಶಂಕರವಿಜಯ

೨೫. ಕೂಷ್ಮಾಂಡಶಂಕರವಿಜಯವೆಂಬ ಹೆಸರಿನ ಒಂದು ಕುಗ್ರಂಥ ವುಂಟು. ಅದರ ಭಾಗವನ್ನು ಬೆಳ್ಳಾವೆ ಸೋಮನಾಥಯ್ಯನವರು ತಮ್ಮ ಶಂಕರ ಚರಿತ್ರಕಾಲವಿಚಾರ ಎಂಬ ಗ್ರಂಥದ (ಪು. ೨೯೧) ಒಂದನೆಯ ಅನುಬಂಧ ವಾಗಿ ಉದಾಹರಿಸಿರುತ್ತಾರೆ. ಅದರಲ್ಲಿರುವದರ ಸಾರವೇನೆಂದರೆ : ಕೇರಳವೆಂಬ ದೇಶದಲ್ಲಿ ಇಳಾ, ಮರುದ್ವೃಧಾ, ಚೂರ್ಣಾ ಎಂಬ ನದಿಗಳು ಹರಿಯುತ್ತಿವೆ. ಚೂರ್ಣಾನದಿಯ ದಡದಲ್ಲಿ ಪದ್ಮನಾಭನ (!) ಮಂದಿರವಿದೆ. ಅಲ್ಲಿ ಕಾಲಟಿ ಎಂಬ ಮಹಾಕ್ಷೇತ್ರವಿದೆ. ಈಶ್ವರನು ಒಮ್ಮೆ ಭಿಕ್ಷುರೂಪದಿಂದ ಬಂದಾಗ ಆ ಗ್ರಾಮದ ಒಬ್ಬ ಭಕ್ತಿಪರಾಯಣಳಾದ ವಿಧವೆಗೆ ಒಂದು ಕುಂಬಳಕಾಯಿಯ

ಬೀಜವನ್ನು ಕೊಟ್ಟು 'ಇದನ್ನು ಕಂಬದ ಬುಡದಲ್ಲಿರುವ ಬಿಲದಲ್ಲಿ ಹಾಕು, ಅಲ್ಲಿ ಬಳ್ಳಿ ಬೆಳೆದು ಹಣ್ಣುಬಿಟ್ಟಮೇಲೆ ಹಣ್ಣು ತಾನೇ ತೊಟ್ಟುಕಳಚಿಕೊಳ್ಳುವದು. ನೀನೇನೂ ಅದನ್ನು ಕುಯ್ಯಬೇಡ' ಎಂದು ಹೇಳಿ ಅಂತರ್ಧಾನನಾದನು. ಅದರಂತೆ ಬಳ್ಳಿಯು ಹಬ್ಬಿ ಬಿಟ್ಟ ಒಂದು ಹಣ್ಣು ಕಂಬದಮೇಲಿನಿಂದ ಬಿದ್ದಿತು. ಅದರಲ್ಲಿ ಒಂದು ಮಗುವಿತ್ತು. ಅದನ್ನು ತಂದು ನಡೆದ ವೃತ್ತಾಂತವನ್ನೆಲ್ಲ ಜನರಿಗೆ ಹೇಳಲು ಅವರು ಅವಳನ್ನು ಗದರಿಸಿ ಹೊರಟು ಹೋದರು. ಆ ಬಳಿಕ ಅವಳು ಸಾಕಿದ ಮಗುವಿಗೆ ಬೃಹಸ್ಪತಿಯು ವೇದಶಾಸ್ತ್ರಗಳನ್ನು ಹೇಳಿಕೊಟ್ಟನು. ಬಾಲಶಂಕರನು ಕರ್ಮಸಂನ್ಯಾಸವನ್ನು ಮಾಡಿ ಗುರುಸನ್ನಿಧಿಗೆ ಹೋದನು. ಷಣ್ಮತಸ್ಥಾಪನವನ್ನು ಮಾಡಿದಬಳಿಕ ವೃಷಾದ್ರೀಶನ (!) ಬಳಿಗೆ ಹೋಗಿ ಆತನ ಸ್ತೋತ್ರವನ್ನು ಮಾಡುತ್ತಿದ್ದು ಶಿವಲೋಕಕ್ಕೆ ತೆರಳಿದನು !

ಇದು ಕಟ್ಟುಕಥೆಯೆಂದು ಹೇಳಬೇಕಾದದ್ದೇ ಇಲ್ಲವಷ್ಟೆ ? ಇದಕ್ಕೆ ಶ್ಲೋಕಗಳು ಮತ್ತೆಮತ್ತೆ ಸೇರಿ ಅನೇಕ ಅವತಾರಗಳಾಗಿವೆ ಎಂದು ಸೋಮನಾಥಯ್ಯನವರು ತಿಳಿಸಿರುತ್ತಾರೆ. ನಾವು ಗ್ರಂಥವನ್ನು ನೋಡಿಲ್ಲವಾದರೂ ಕುತೂಹಲಿಗಳಾದ ವಾಚಕರ ವಿನೋದಾರ್ಥವಾಗಿ ೭ನೆಯ ಪರಿಶಿಷ್ಟದಲ್ಲಿ ನಮಗೆ ದೊರಕಿರುವಷ್ಟು ಶ್ಲೋಕಗಳನ್ನೇ ಹಾಕಿರುತ್ತೇವೆ. ಗ್ರಂಥಕರ್ತನು ಅನಂತಾನಂದಗಿರಿಗಿಂತಲೂ ಅದ್ಭುತಕಥೆಯನ್ನು ಕಟ್ಟಬೇಕೆಂಬ ಆ ಶೆ ಯಿಂ ದ ಶಂಕರರು ಅಯೋನಿಜರೆಂದು ತೋರಿಸುವದಕ್ಕಾಗಿ ಕುಂಬಳಕಾಯಿಯ ಗರ್ಭದಿಂದ ಆಚಾರ್ಯರಿಗೆ ಅವತಾರವನ್ನು ಮಾಡಿಸಿರುತ್ತಾನೆ ! ಆತನಿಗೆ ಚೂರ್ಣಾ (ಪೂರ್ಣಾ ? ನದಿಯ ದಡದಲ್ಲಿ ಪದ್ಮನಾಭದೇವಾಲಯವಿದೆ ಎನ್ನುವಷ್ಟು ಭೂಗೋಳದ ಜ್ಞಾನವಿದೆ ! ಹೇಗೇ ಆಗಲಿ, ಶಂಕರರ ಜನ್ಮಸ್ಥಾನವು ಕಾಲಟಿಯೆಂಬುದು ಅವನ ಕಿವಿಗೂ ಬಿದ್ದಿತ್ತು.

### ಕೇರಳದ ಐತಿಹ್ಯವೂ ಮಧ್ವವಿಜಯಾದಿಗ್ರಂಥಗಳೂ

೨೬. ಕೇರಳದಲ್ಲಿ ಒಂದು ಐತಿಹ್ಯವಿದೆ. ಕಾಲಡಿಯಲ್ಲಿ ಒಬ್ಬ ವಿಧವೆಯು ತನ್ನ ಜೊತೆಯ ಹುಡುಗಿಯರೊಡನೆ ಶಿವಾಲಯಕ್ಕೆ ಹೋಗಿರುವಲ್ಲಿ ಅವರಲ್ಲಿ ಕೆಲವರು ಪುತ್ರಾರ್ಥಿಗಳಾಗಿ ಶಿವನನ್ನು ಪ್ರಾರ್ಥಿಸಿದರಂತೆ. ಈ ಬಾಲವಿಧವೆಯೂ ಹಾಗೆಯೇ ಪ್ರಾರ್ಥಿಸಿಕೊಂಡದ್ದರ ಫಲವಾಗಿ ಗರ್ಭಿಣಿಯಾಗಿ ಶಂಕರನನ್ನು ಹಡೆದಳಂತೆ. ( NKS, p 14 ) ಈ ಕಥೆಯೂ ಕೂಷ್ಮಾಂಡವಿಜಯವೂ ಮೊದಲೇ ಹುಟ್ಟಿದ್ದು ಅವುಗಳ ಆಧಾರವನ್ನಿಟ್ಟುಕೊಂಡು ಅನಂತಾನಂದಗಿರಿಯ ಶಂಕರವಿಜಯದ ಕಥೆ ಹುಟ್ಟಿತೋ, ಅಥವಾ ಅದೇ ಹಳೆಯದಾಗಿದ್ದು ಈ ಕಥೆಗಾರರು ಅದಕ್ಕೆ ಉಪ್ಪುಕಾರವನ್ನು ಹಾಕಿ ಹೀಗೆ ಹೊಸಕಲ್ಪನೆಯನ್ನು ಮಾಡಿದರೋ ಹೇಳುವದಕ್ಕೆ ಬರುವಂತಿಲ್ಲ.

ಇದನ್ನು ನೆಪಮಾಡಿಕೊಂಡು ತ್ರಿವಿಕ್ರಮಪಂಡಿತನೆಂಬ ಮಧ್ವಾಚಾರ್ಯರ ಶಿಷ್ಯನೊಬ್ಬನ ಮಗನಾದ **ನಾರಾಯಣಪಂಡಿತನು ಮಧ್ವವಿಜಯ, ಮಣಿಮಂಜರಿ**–ಎಂಬೆರಡು ಗ್ರಂಥಗಳಲ್ಲಿ ಆಚಾರ್ಯರ ವಿಷಯದ ಅಪಪ್ರಚಾರವನ್ನು ಪ್ರಯತ್ನಪೂರ್ವಕವಾಗಿ ಮಾಡಿರುತ್ತಾನೆ. ಆತನ ಕೆಲವು ವಾಕ್ಯಗಳನ್ನು ೩ನೆಯ ಪರಿಶಿಷ್ಟದಲ್ಲಿ ಕಾಣಬಹುದು. ಪ್ರಕೃತಕ್ಕೆ **ಮಧ್ವವಿಜಯ**ದಲ್ಲಿರುವ ಒಂದು ಶ್ಲೋಕದಲ್ಲಿ ಅವನು ಬರೆದಿರುವದನ್ನು ವಾಚಕರ ಲಕ್ಷ್ಯಕ್ಕೆ ತರಬೇಕಾಗಿದೆ :

ಯೋ ಭೂರಿವೈರೋ ಮಣಿಮಾನ್ ಮೃತಃ ಪ್ರಾಗ್ ।
ವಾಗ್ಮೀ ಬುಭೂಷು: ಪರಿತೋಷಿತೇಶಃ ।
ಸ ಸಙ್ಕರಾಖ್ಯೋಽಙ್ಘ್ರಿತಲೇಷು ಜಜ್ಞೇ !
ಸ್ಪೃಧಾ ಪರೇಷ್ವ್ಯಾಸುರಿಹಾಸುರೇನ್ದ್ರಾಃ ॥

'ಹಿಂದೆ ಭೀಮನಿಂದ ಹತನಾಗಿ ಯಾವ **ಮಣಿಮಂತ**ನೆಂಬ ದೈತ್ಯನು ಸತ್ತನೋ, ಅವನು ವಾಗ್ಮಿಯಾಗಬೇಕೆಂಬ ಆಶೆಯಿಂದ ಈಶ್ವರನನ್ನು ಸಂತೋಷಗೊಳಿಸಿ **ಕಾಲಡಿ**ಯಲ್ಲಿ **ಸಂಕರ**ನೆಂಬ ಹೆಸರಿನಿಂದ ಸ್ಪರ್ಧೆಯಿಂದ ಹುಟ್ಟಿದನು. ಇತರ ದೈತ್ಯಶ್ರೇಷ್ಠರೂ ಇಲ್ಲಿ ಹುಟ್ಟಿದರು.' ಶಂಕರ ಎಂಬ ಹೆಸರನ್ನು 'ಸಂಕರ' ಎಂದು ಬರೆದಿರುವದು ವಿಧವಾಪುತ್ರತ್ವವನ್ನು ತಿಳಿಸುವದಕ್ಕೇ ಎಂಬುದು **ಮಣಿಮಂಜರಿ**ಯಲ್ಲಿಯೂ (೬-೬, ೭) ಸ್ಪಷ್ಟವಾಗಿದೆ.

ತದೇವ ಸಮಯಂ ದೈತ್ಯೋ ಮಣಿಮಾನಪ್ಯಜಾಯತ ।
ಮನೋರಥೇನ ಮಹತಾ ಬ್ರಾಹ್ಮಣ್ಯಾಂ ಜಾರತಃ ಖಲಾತ್ ।
ಉತ್ಪನ್ನಃ ಸಙ್ಕರಾತ್ಮಾಯಂ ಸರ್ವಕರ್ಮಬಹಿಷ್ಕೃತಃ ।
ಇತ್ಯುಕ್ತೈಃ ಸ್ವಜನೈರ್ಮಾತಾ ಸಙ್ಕರೇತ್ಯಾಜುಹಾವ ತಮ್ ॥೭॥

ಅದೇ ಕಾಲದಲ್ಲಿ ಮಣಿಮಂತನೆಂಬ ದೈತ್ಯನೂ ಬ್ರಾಹ್ಮಣಿಯಲ್ಲಿ ದುಷ್ಟನಾದ ಜಾರನಿಂದ ಹುಟ್ಟಿದನು. ಸಂಕರಾತ್ಮನಾಗಿ ಹುಟ್ಟಿದ ಇವನು ಸರ್ವಕರ್ಮಬಹಿಷ್ಕೃತನೆಂದು ನಂಟರು ಹೇಳಿದ್ದರಿಂದ ತಾಯಿ ಅವನಿಗೆ 'ಸಂಕರ' ಎಂದೇ ಹೆಸರಿಟ್ಟಳು–ಎಂದು ಶ್ಲೋಕದ ಅರ್ಥ.

ಇಲ್ಲಿ ತಾಯಿ ಮಗುವಿಗೆ ಸಂಕರನೆಂದು ಹೆಸರನ್ನಿಟ್ಟಿದ್ದಕ್ಕೆ ಗ್ರಂಥಕರ್ತನು ಹೇಳಿದ ಕಾರಣ ವಿಚಿತ್ರವಾಗಿದೆ. ತಾನು ಹಾದರಗಿತ್ತಿ ಎಂಬುದನ್ನು ಪ್ರತಿಕ್ಷಣವೂ ನೆನಪಿಗೆ ತರುವಂತೆ ಯಾವ ತಾಯಿಯಾದರೂ ಮಗನಿಗೆ ಇಂಥ ಹೆಸರನ್ನಿಟ್ಟುಕೊಂಡಾಳೆ ?–ಎಂಬುದನ್ನು ಇವನು ಯೋಚಿಸಲಿಲ್ಲ ! ಇದಂತಿರಲಿ. ಆಚಾರ್ಯರ ಹೆಸರು 'ಶಂಕರ', ಅವರು ಹುಟ್ಟಿದ ಊರು "ಕಾಲಡಿ" (ಅಙ್ಘ್ರಿತಲೇಷು

ಎಂಬುದಕ್ಕೆ ಇದೂ ಒಂದು ಪ್ರಮಾಣವಾಯಿತು. ಸಂಕರರ ತಾಯಿ 'ಪಜುರ ಪನ್ನೈ ಇಲ್ಲಮ್' ಎಂಬ ನಂಬೂದಿರಿ ಬ್ರಾಹ್ಮಣಕುಟುಂಬದವಳೆಂದೂ ಆ ಕುಲದವರೆಂದು ಹೇಳಿಕೊಳ್ಳುವವರು ಈಗಲೂ ತಿರುಚೂರಿನ ಹತ್ತಿರ ವಾಸವಾಗಿರುತ್ತಾರೆಂದೂ ಕೇರಳಪ್ರಾಂತದವರೆಲ್ಲ ಒಪ್ಪಿರುತ್ತಾರೆಂದು **ಬಲದೇವ ಉಪಾಧ್ಯಾಯರು** (ಬಲ.ಶಂ.ಪ್ರ.೪೦) ಹೇಳಿರುತ್ತಾರೆ. ಶಿವಗುರು 'ಕೈಪಿಲ್ಲಿ ಇಲ್ಲಮ್'ಗೆ ಸೇರಿದ ನಂಬೂದಿರಿ ಬ್ರಾಹ್ಮಣನು, ಆರ್ಯಾಂಬೆ 'ವೇಲಾಪಲೂರ್' ಅಥವಾ 'ಪಾಲೂಪನ್ನೈ ಇಲ್ಲಮ್'ಗೆ ಸೇರಿದಾಕೆ-ಎಂದು ಕೆ.ಆರ್. ವೆಂಕಟರಾಮನ್ನರವರು (KRVTTWq.9) ಬರೆದಿದಾರೆ. ಆದರೆ ಈ ಇಬ್ಬರೂ ತಮ್ಮ ಮತಕ್ಕೆ ಆಧಾರವನ್ನೇನೂ ಬರೆದಿಲ್ಲ. ಈ ಹೇಳಿದ ಕುಟುಂಬದವರು ಕೇರಳದವರಾದ್ದರಿಂದ ಕೇರಳದ ಕಿಂವದಂತಿಯಿಂದಲೂ ಶಂಕರಾಚಾರ್ಯರು ಕೇರಳೀಯರೇ ಎಂದು ನಿಶ್ಚಯವಾಗುತ್ತದೆ.

### ಬದರಿಯ ಸಾಕ್ಷ್ಯ

೨೭. ಆಚಾರ್ಯರು ಕೇರಳದವರೇ ಎಂಬುದಕ್ಕೆ ಇನ್ನೊಂದು ಗಮಕವಿದೆ. ಬದರಿಕಾಶ್ರಮದಲ್ಲಿ ಸ್ಥಾಪಿತವಾಗಿರುವ ಬದರೀನಾಥ ಅಥವಾ ಪಶುಪತಿನಾಥ ದೇವಾಲಯಗಳ ಪ್ರಧಾನಪೂಜಾರಿಗಳು ಬಹುಕಾಲದಿಂದ ನಂಬೂದಿರಿ ಬ್ರಾಹ್ಮಣರೇ ಆಗುತ್ತಾ ಬಂದಿರುತ್ತಾರೆ. ಅಲ್ಲಿರುವ ಮಂದಿರವನ್ನು ಆಚಾರ್ಯರೇ ಪ್ರತಿಷ್ಠೆಮಾಡಿಸಿದರೆಂದು ಐತಿಹ್ಯವಿದೆ. ಇದು ನಿಜವಾದರೆ ಅಲ್ಲಿಯ ಪೂಜೆಯು ವಿಧಿವತ್ತಾಗಿ ಆಗಬೇಕೆಂಬ ಉದ್ದೇಶದಿಂದ ಆಚಾರ್ಯರು ತಮ್ಮ ದೇಶದವರೇ ಆದ ವೈದಿಕರನ್ನು ಅಗ್ಗೆ ಕರೆಯಿಸಿಕೊಂಡಿರಬೇಕೆಂದು ನಂಬಬಹುದಾಗುತ್ತದೆ. ಈ ವಿಷಯವನ್ನು ಆಚಾರ್ಯರು ಸ್ಥಾಪಿಸಿದ ಮಠಗಳ ವಿಷಯವನ್ನು ಪ್ರಸ್ತಾಪಿಸುವಾಗ ಮತ್ತೊಮ್ಮೆ

### ಕೇರಳೀಯರ ವಿಲಕ್ಷಣಾಚಾರ

೨೮. ಕೇರಳದೇಶದಲ್ಲಿ ಮೂಲನಿವಾಸಿಗಳೆಲ್ಲ ಬ್ರಾಹ್ಮಣರು. ಅವರು ಪಂಚದ್ರಾವಿಡರೊಳಗೇ ಸೇರಿದವರಾದರೂ ಅವರ ಆಚಾರಗಳು ಕೆಲವು ಮಿಕ್ಕ ದ್ರಾವಿಡರಿಗಿಂತ ಅತಿವಿಲಕ್ಷಣವಾಗಿವೆ. ಆ ಜನರು ಬಾಲ್ಯದಲ್ಲಿ ಮದುವೆಮಾಡಿಕೊಳ್ಳುವದಿಲ್ಲ. ಸ್ತ್ರೀಯರಿಗೆ ಘೋಷಾಪದ್ಧತಿಯನ್ನಿಟ್ಟುಕೊಂಡಿದಾರೆ. ಸ್ತ್ರೀಯರು ಮಿಕ್ಕ ದ್ರಾವಿಡಬ್ರಾಹ್ಮಣರು ಅಡಿಗೆಮಾಡಿದ ಅನ್ನವನ್ನು ಉಣ್ಣುವದಿಲ್ಲ. ಬಲುಮಟ್ಟಿಗೆ ಶುದ್ಧರು, ಪತಿವ್ರತೆಯರು. ಅವರು ಚಿನ್ನಬೆಳ್ಳಿಯ ಒಡವೆಗಳನ್ನು ಕೈಗೆ ಹಾಕಿಕೊಳ್ಳುವದಿಲ್ಲ, ಕೊರಳಿಗೆ ಮಾತ್ರ ಹಾಕಿಕೊಳ್ಳುತ್ತಾರೆ. ಗಂಡಸರು ಮುಂದಲೆಯ ಮೇಲುಗಡೆಗೆ ಜುಟ್ಟನ್ನು ಬಿಡುತ್ತಾರೆ. ಬಲುಮಟ್ಟಿಗೆ

ಎಲ್ಲರೂ ವೇದಾಧ್ಯಯನಸಂಪನ್ನರು, ಆಚಾರಸಂಪನ್ನರು, ಕರ್ಮನಿಷ್ಠರು. ಅಲ್ಲಿ ಹಿರಿಯವನೊಬ್ಬನಿಗೆ ಮಾತ್ರ ಮದುವೆ, ಮಿಕ್ಕವರು ನಾಯರ ಸ್ತ್ರೀಯರ ಕೂಟವನ್ನು ಮಾಡಿಕೊಳ್ಳುವರು. ಇವರು ತಮ್ಮತಮ್ಮ ತೋಟಗಳ ನಡುವೆ ಇಲ್ಲಮ್ ಎಂಬ ಮನೆಗಳಲ್ಲಿ ವಾಸಮಾಡುತ್ತಾರೆ; ಇಲ್ಲಮಿಗೊಂದು ದೇವಾಲಯವಿರುತ್ತದೆ. ಹಿಂದಿನ ಕಾಲದಲ್ಲಿ ಹೆಣಗಳನ್ನು ಕತ್ತರಿಸಿ ಸುಡುತ್ತಿದ್ದರಂತೆ; ಈಗ ಹೆಣಕ್ಕೆ ಕತ್ತಿಯಿಂದ ಅಲ್ಲಲ್ಲಿ ಮುಟ್ಟಿಸಿಯೇ ಅದನ್ನು ಸ್ಮಶಾನಕ್ಕೆ ಒಯ್ಯುತ್ತಾರೆ. ಮನೆಯ ಸುತ್ತಲೂ ಇರುವ ವಿಸ್ತಾರವಾದ ಒಂದು ಭಾಗವೇ ರುದ್ರಭೂಮಿ.

ಮೇಲೆ ನಾವು ಕೊಟ್ಟಿರುವುದು ಸೋಮನಾಥಯ್ಯನವರ ಗ್ರಂಥದಿಂದ (ಸೋ. ಶಂ. ಪು. ೩೫-೩೬) ಸಂಗ್ರಹಿಸಿದ್ದು. ಕೇರಳದಲ್ಲಿರುವ ವಿವಿಧನಂಬಿಕೆಗಳ ಮತ್ತು ಆಚಾರಗಳ ವಿಷಯವಾಗಿ ಕರ್ಣಪರಂಪರೆಯಿಂದ ಹಬ್ಬಿರುವ ಸುದ್ದಿಗಳಲ್ಲಿ ಒಂದನ್ನು ತಿಳಿಸುವ ಅಭಿಲಾಷೆಯಿಂದ ಅಧ್ಯಾತ್ಮಪ್ರಕಾಶಪತ್ರಿಕೆಯ ಜಯಸಂವತ್ಸರದ (೩೩ನೆಯ ಸಂಪುಟದ) ವೈಶಾಖಸಂಚಿಕೆಗೆ ಶ್ರೀಶಿವಪ್ರಕಾಶಾನಂದಸರಸ್ವತೀಸ್ವಾಮಿಗಳವರು ಬರೆದಿದ್ದ ಎರಡು ಪತ್ರಗಳ ಸಂಗ್ರಹದ ಲೇಖನವೊಂದರ ಪ್ರತಿಲಿಪಿಯನ್ನು ವಾಚಕರ ಕುತೂಹಲಕ್ಕಾಗಿ ಈ ಕೆಳಗೆ ಕೊಟ್ಟಿರುತ್ತೇವೆ.

## ಅತ್ತಂಗಲ್

[ಕನ್ಯಾಕುಮಾರಿ, ತ್ರಿವೇಂದ್ರ (ತಿರುವನಂತಪುರ), ಅನಂತಪದ್ಮನಾಭ -ಇವರ ದರ್ಶನವನ್ನು ತೆಗೆದುಕೊಂಡು ಕಾಲಡಿಯ ದಾರಿಯಲ್ಲಿರುವೆ. ಈ ಮಲಯಾಳಿಸೀಮೆಯಲ್ಲಿ ಬ್ರಾಹ್ಮಣ ಸಂನ್ಯಾಸಿಗಳ ವಿಷಯ ಏನೂ ತಿಳಿಯದು. ಸಂನ್ಯಾಸಿಗಳು 'ಅತಿವರ್ಣಾಶ್ರಮಿ' (ಸ್ವೇಚ್ಛಾಚಾರಿ) ಎಂದು ನಂಬಿಕೆ. ಮಲೆಯಾಳಿ ಬ್ರಾಹ್ಮಣೇತರಸಂನ್ಯಾಸಿಗಳೇ ಬಹಳ. ಅವರಲ್ಲಿ ಮಂತ್ರ, ಯಂತ್ರ, ಔಷಧಿ-ಇವು ಹೇರಳವಾಗಿವೆ. ಇದರಿಂದಾಗಿ ಜನರು ಕಾಷಾಯವಸ್ತ್ರಕ್ಕೆ ತುಂಬ ಅಂಜುತ್ತಾರೆ. ಶೃಂಗೇರಿ ಅಥವಾ ಕಾಮಕೋಟಿಪೀಠಗಳ ಪ್ರಭಾವ ಇಲ್ಲಿ ಇಲ್ಲ. ಕೆಲವರು ವೃದ್ಧರು ಮಾತ್ರ ಆ ಮಠಗಳಿವೆಯೆಂಬುದನ್ನು ಅರಿತಿದ್ದಾರೆ. ಲೋಕಗುರುಗಳಾದ ಆದ್ಯಶಂಕರಾಚಾರ್ಯರು ಇದ್ದರೆಂಬುದು ಎಲ್ಲಿಯೋ ಕೆಲವರಿಗೆ ಮಾತ್ರ ಗೊತ್ತಿದೆ. ತ್ರಿವೇಂದ್ರಂಗೆ ೧೬೦ ಮೈಲು ಕಾಲಡಿ, ಒಳದಾರಿ ೧೫೦ ಮೈಲು. ಶಂಕರಾಚಾರ್ಯರು ಇಲ್ಲಿಯವರೇ ಇದ್ದು ಇಲ್ಲಿಯ ಬ್ರಾಹ್ಮಣರಲ್ಲಿಯೂ ಅವರ ಹೆಸರು ಪ್ರಸಿದ್ಧವಿಲ್ಲದಿರುವದು ತುಂಬ ಆಶ್ಚರ್ಯಕರ. ಕೆಲ **ನಾಯರ್ ನಾಡರ್** ಜನರು 'ಪರಕಾಯಪ್ರವೇಶ', 'ಭಗಂದರರೋಗ' - ಇವನ್ನು ಆಚಾರ್ಯರಲ್ಲಿ ಆರೋಪಿಸಿ 'ಸರ್ವಂ ಖಲ್ವಿದಂ ಬ್ರಹ್ಮ', 'ಕರತಲಭಿಕ್ಷಸ್ತರು

ತಲವಾಸಃ' ಈ ಮಟ್ಟದವರಿಗೆ ಆ ರೋಗವು ಬರಲು ಕಾರಣವೇನುಃ?–ಎಂದು ಆಕ್ಷೇಪಿಸುತ್ತಾರೆ! ಈವರೆಗೂ ಒಬ್ಬ ಬ್ರಾಹ್ಮಣಯತಿಯೂ ಈ ಮಾರ್ಗವಾಗಿ ಬಂದಿಲ್ಲ. ಕಾರಣವೇನೆಂದರೆ ಪರ್ವತಗಳ ಸಾಲು, ಆಹಾರದ ಅನನುಕೂಲತೆ ಬಹಳ. ಶ್ರೀಶೃಂಗಗಿರಿಯ ಜಗದ್ಗುರುಗಳು ತ್ರಿವೇಂಡ್ರಂಗೆ ಭೇಟಿಕೊಟ್ಟಿದ್ದ ರೆಂಬುದು ಅರಮನೆಯ ರಿಟೈರ್ಡ್ ಅಧಿಕಾರಿಗಳಿಗೆಮಟ್ಟಿಗೆ ಗೊತ್ತಿದೆ. ಇಲ್ಲಿಯ ಅನುಭವವನ್ನು ಬಿಡಿ ಸಂನ್ಯಾಸಿಗಳು ಬಂದು ನೋಡುವಹಾಗಿದೆ.

## ಕಾಲಡಿ

ಕನ್ಯಾಕುಮಾರಿಯಿಂದ ವರ್ಕಲೆ, ಕ್ವೈಲೋನ್ (ಕೊಲ್ಲಂ Quilon ದ್ವಾರಾ ಕಾಲಡಿ 240 ಮೈಲುಗಳು. ಕನ್ಯಾಕುಮಾರಿಯಿಂದ ಕ್ವೈಲೋನ್ ವರೆಗೂ 113 ಮೈಲು ಪಶ್ಚಿಮಸಮುದ್ರತೀರಪ್ರದೇಶ. ವರ್ಕಲೆ[1], ಕ್ವೈಲೋನ್ ಸಮುದ್ರದ ಅಂಚಿನಲ್ಲಿಯೇ ಇದೆ. ಇದ್ದಕ್ಕೆ ಮುಂದೆ ಎರ್ನಾಕುಳಂ (ಕೊಚಿನ್ ಹಾರ್ಬರ್) 140 ಮೈಲುಗಳವರೆಗೂ ತೀರಪ್ರದೇಶದಲ್ಲಿಯೇ ರಾಜಮಾರ್ಗ ವುಂಟು. ಮಾರ್ಗದಲ್ಲಿ ಕ್ರೈಸ್ತ, ಮಾಪಿಳೆ ಜನಾಂಗ. ಬೆಟ್ಟಗಳು. ಸರೋವರ (?) ಹಿಂದಕ್ಕೆ ನುಗ್ಗಿರುವ ಜಲಭಾಗವು ನಾವೆ (ಬೋಟು)ಗಳ ಸಾಧನವಿಲ್ಲದೆ ಮುಂದು ವರಿಯಲಾಗುವದಿಲ್ಲವಾದ್ದರಿಂದ ಈ ದಾರಿಯನ್ನು ಬಿಟ್ಟು ಪೂರ್ವದಿಕ್ಕಿಗೆ 20 ಮೈಲು ಬಂದು ಭೂಮಾರ್ಗವಾಗಿ ಉತ್ತರಕ್ಕೆ 107 ಮೈಲು ಇರುವ ಕಾಲಡಿಗೆ ಬಂದದ್ದಾಯಿತು.

ಕಾಲಡಿ ಟ್ರಾವಂಕೋರ್ ಸಂಸ್ಥಾನದ ಉತ್ತರದ ಗಡಿಗೆ 16 ಮೈಲು ಇದೆ. ಕರ್ಣಾಟಕದವರು ಜೋಲಾರುಪೇಟೆ, ಈರೋಡ್, ಷೋರನೂರ್; ಷೋರ ನೂರಿನಿಂದ ಕಾಲಡಿರೋಡ್ (ಅಂಗಮಾಲಿ)– ಈ ಮಾರ್ಗವಾಗಿ ರೈಲಿನಲ್ಲಿ ಬರ ಬಹುದು. ಅಲ್ಲಿಂದ ದಕ್ಷಿಣಕ್ಕೆ ಐದು ಮೈಲುಗಳ ದೂರದಲ್ಲಿ ಕಾಲಡಿಯಿದೆ. ನಿಮ್ಮಲ್ಲಿಂದ ಚಾಮರಾಜನಗರ, ಕೊಯಮುತ್ತೂರು– ಮಾರ್ಗವಾಗಿ ಬಸ್ಸಿ ನಿಂದಲೂ ಬರಬಹುದು.

ಕಾಲಡಿಕ್ಷೇತ್ರವು 'ತ್ರಾವನ್ಕೂರ್-ಕೊಚ್ಚಿ ಸಂಸ್ಥಾನದ ಕೋಟೆಯ ಡಿವಿ ಜನ್ನಿನ ಕುನ್ನತನಾಡು ತಾಲ್ಲೂಕಿನಲ್ಲಿದೆ' (ಸಂಸ್ಥಾನಗಳ ಕೂಡುವಿಕೆಯ ಮೊದಲು

1. ಇಲ್ಲಿ ಶ್ರೀಜನಾರ್ದನಸ್ವಾಮಿಯ ದೇವಸ್ಥಾನವಿದೆ. ವಸುಂಧರಾದೇವಿಯ ಸೌ ಭಾಗ್ಯದ ನೆಲೆವೀಡು. ಬೆಟ್ಟಕ್ಕೆ ಧುಮುಕುವ ಅದ್ಭುತಸಮುದ್ರದ ಸೊಬಗು. ಮೂವತ್ತು ಅಡಿಗಳ ಮೇಲುಮಟ್ಟದಲ್ಲಿ ರಂಗೂನ್‌ಮಾದರಿಯ ಭವ್ಯದೇವಾಲಯ' ದೇವಾಲಯದ ಮಧ್ಯರಂಗದಲ್ಲಿ ವಿಶಾಲವಾದ ಮನೋಹರವಾದ ಅಶ್ವತ್ಥವೃಕ್ಷವಿದೆ. ನಾಡಿನ ಸೊಬಗು ಕವಿ ವರ್ಣಿಸಬಲ್ಲ ಮಟ್ಟಕ್ಕೆ ಮೀರಿದೆ.

ಕೋಟೆಯಂ ಜಿಲ್ಲೆ, ಕುನ್ನತ್ತುನಾಡು ತಾಲ್ಲೂಕು). ಪೂರ್ಣಾನದಿಯು ಇಲ್ಲಿ ಪಶ್ಚಿಮವಾಹಿನಿ. ಭೂಭಾಗದ ಮಟ್ಟಕ್ಕೆ ಸುಮಾರು ೩೦–೩೫ ಅಡಿ ಕೆಳಭಾಗದಲ್ಲಿ ಪೂರ್ಣಾನದಿ ಹರಿಯುವ ಪ್ರದೇಶದಲ್ಲಿ ಭವ್ಯಸೋಪಾನಗಳನ್ನು ಕಟ್ಟಿ, ದಡದ ಅಂಚಿಗೆ ಇಸವಿ ಸನ್ 1860ರಿಂದ 1912ರವರೆಗೂ ಶ್ರೀಶೃಂಗಗಿರಿಜಗದ್ಗುರು ಪೀಠದಲ್ಲಿ ವಿರಾಜಮಾನವಾಗಿದ್ದ ಶ್ರೀಶ್ರೀಸಚ್ಚಿದಾನಂದಶಿವಾಭಿನವನೃಸಿಂಹ ಭಾರತೀಗುರುಸಾರ್ವಭೌಮರು ಶಂಕರಭಗವತ್ಪಾದರ ತಾಯಿಯ ವೃಂದಾವನ ವನ್ನೂ ಶ್ರೀಶಾರದಾಶ್ರೀಶಂಕರ ಆಲಯಗಳನ್ನೂ ನಿರ್ಮಿಸಿದರು.

ಆಲಯಗಳು ನಿರ್ಮಾಣವಾಗುವ ಮುನ್ನ ಇದೆಲ್ಲ ಕಾಡಾಗಿತ್ತು. ಶೋಧ ಕರು ಶಂಕರರ ಜನ್ಮಸ್ಥಲವನ್ನು ಕಂಡುಹಿಡಿಯುವದಕ್ಕೆ ಬಂದಾಗ ಇಲ್ಲಿ ಗಿಡ ಗಂಟೆಗಳ ನಡುವೆ ಒಂದು ಗಜ ಅಗಲ, ಎರಡು ಗಜ ಎತ್ತರದ ಚಿಕ್ಕ ಗುಡಿಯಲ್ಲಿ ಮಿನಿಮಿನಿ ಮಿನುಗುವ ದೀಪವನ್ನು ಕಂಡು ವಿಚಾರಿಸಲು ಈ ಸ್ಥಲವೇ ಶಂಕರಾ ಚಾರ್ಯರ ಮನೆಯೆಂದೂ ಮನೆಯ ಆವರಣದ ಒಳಭಾಗದಲ್ಲಿ ಅವರ ತಾಯಿಯ ದಹನಸ್ಥಲವೆಂದೂ ಆಕೆಯ ಅಂತ್ಯಕ್ರಿಯೆಗಳಿಗೆ ಸಹಾಯಮಾಡಿದ ತಮ್ಮ ಪೂರ್ವಜರಿಗೆ ಸುಮಾರು ೫೦–೬೦ ಎಕರೆಯ ಆ ಪ್ರದೇಶವನ್ನು ದಾನವಾಗಿ ಕೊಟ್ಟು ಅಲ್ಲಿ ಪೂಜೆಮಾಡಿಕೊಂಡಿರಬೇಕೆಂದು ಹೇಳಿದರೆಂದೂ ಅಲ್ಲಿಯ ಕಾವಲು ಗಾರರೂ ಅರ್ಚಕನೂ ನುಡಿದರಂತೆ. ಸರ್ಕಾರದ ಸಹಾಯದಿಂದ ಪ್ರದೇಶವನ್ನು ಪಡೆದುಕೊಂಡು ಕಾವಲುಗಾರನಿಗೆ ಬೇರೆಯ ಭೂಮಿಯನ್ನೂ ಪರಿಹಾರದ್ರವ್ಯ ವನ್ನೂ ಕೊಡಿಸಿ ಬಳಿಕ ಅಲ್ಲಿ ಎರಡು ಬಂಗಲೆಗಳನ್ನೂ ೧೪ ಹೊಸಮಾದರಿಯ ಗೃಹಗಳನ್ನೂ ನಿರ್ಮಿಸಲಾಯಿತೆಂದೂ ತಿಳಿಯಬರುತ್ತದೆ.[1]

ಇಲ್ಲಿ ಶಂಕರರ ತಾಯಿಯ ದಹನದ ವಿಷಯದಲ್ಲಿ ಜನವಾರ್ತೆಯೇನೆಂದರೆ ಆಚಾರ್ಯರು ತಾಯಿಯ ದೇಹವನ್ನು ತುಂಡುತುಂಡಮಾಡಿ ಚಿತೆಯಲ್ಲಿ ಹಾಕಿದರಂತೆ. ಚಿತೆಯನ್ನು ಬಾಳೆಪಟ್ಟೆ, ತೆಂಗು, ಅಡಿಕೆಪಟ್ಟೆಗಳಿಂದಲೇ ಮಾಡಿ ತ್ತಂತೆ. ಈ ಪಟ್ಟೆಯನ್ನು ಒದಗಿಸಿದವರು ಸೀದಾಜಾತಿಯವರಂತೆ. ಇಂದಿಗೂ ನಂಬೂದ್ರಿ (ಮಲೆಯಾಳಿ) ಬ್ರಾಹ್ಮಣರಿಗೆ ಪ್ರತ್ಯೇಕ ದಹನಸ್ಥಳವಿಲ್ಲ. ತಮ್ಮ ಮನೆಯ ಹಿಂಭಾಗದಲ್ಲಿಯೋ ಮುಂಭಾಗದಲ್ಲಿಯೋ ಒಳ ಆವರಣದಲ್ಲಿ ಕೆಲ ವೊಂದು ಬಾಳೆಯಪಟ್ಟೆಗಳನ್ನು ಶಾಸ್ತ್ರವಾಗಿ ಹಾಕಿ ದಹನಕ್ರಿಯೆಮಾಡುತ್ತಾರೆ. ಸೀದಾಜಾತಿಯವರು ಒಂದು ಬಾಳೆಪಟ್ಟೆ ಕೊಡುವವರೆಗೂ ಕಾದಿರಬೇಕಾಗುತ್ತದೆ.

---

1. ಕಾಲಡಿಯಿಂದ ಪಶ್ಚಿಮಕ್ಕೆ ೬ ಮೈಲು ದೂರದಲ್ಲಿ 'ಪೊನ್ನರ್ ತೋಡತ' ಎಂಬ ಊರು ಇದೆ. ಆ ಊರಲ್ಲಿ ಆಚಾರ್ಯರು ಭಿಕ್ಷೆಗೆ ಹೋದಾಗ ನೆಲ್ಲಿಕಾಯಿ ಹಾಕಿದ ಮನೆ ಯಿದೆ. ಕನಕಧಾರಾಸ್ತೋತ್ರಮಾಡಿದ್ದು ಇಲ್ಲಿಯೇ ಎನ್ನುತ್ತಾರೆ. ಇಂದಿಗೂ ಅಲ್ಲಿ ಎರಡು ಮನೆಗಳು ಶ್ರೀಮಂತತನದಲ್ಲಿವೆ. 'ಪ್ವರ್ಣತ್ತಿಲ್ಲಂ' ಎಂದು ಅವುಗಳ ಹೆಸರು.

ಆ ಜನರೇ ಬ್ರಾಹ್ಮಣರ ಪಿತೃಕರ್ಮಗಳಲ್ಲಿ ಪೌರೋಹಿತ್ಯವನ್ನುವಹಿಸಿ ತಿಲ,ದರ್ಭೆ, ಅಕ್ಷತೆ- ಇವನ್ನು ಕೊಡುತ್ತಾರೆ. ಅವರಿಲ್ಲದೆ ಪಿತೃಕರ್ಮಗಳು ನಡೆಯುವವೇ ಇಲ್ಲ. ಸೀದಿಯನ್ ಜಾತಿಗೆ 'ಎಳೆಯದಿ', 'ನಂಬಿಯಾದಿ' ಜಾತಿಯೆಂದೂ ಹೆಸರಿದೆ. ಈಗಲೂ ಈ ಬ್ರಾಹ್ಮಣರು ಮೃತಕಳೇಬರಕ್ಕೆ ಕತ್ತಿಯಿಂದ ಅಲ್ಲಲ್ಲಿ ಮುಟ್ಟಿಸುತ್ತಾರೆ; ಪರಂಪರೆಯನ್ನು ಅನುಸರಿಸುವವರು ತುಂಡುಮಾಡುತ್ತಾರೆ; ಆಮೇಲೆ ಬಾಳೆಪಟ್ಟೆ ಸುತ್ತಿ ದಹನಕ್ಕೆ ಹಾಕುತ್ತಾರೆ.

ನಂಬೂದ್ರಿಯವರಿಗೆ ಮಂತ್ರವಿಲ್ಲ. ಬರಿಯ ಕೈತಿರುಗಿಸುವಿಕೆಯ ಹಾವ ಭಾವದ ತಂತ್ರ; ಕಣ್ಣು ಕಿವಿ ಮುಂತಾದ ದೇಹೇಂದ್ರಿಯಸ್ಥಾನಗಳನ್ನು ಮುಟ್ಟಿ ಕೊಳ್ಳುವುದು, ಮೂರು ಆಚಮನಮಾಡುವುದು; ಕೇಶವಾದಿನಾಮೋಚ್ಚಾರಣೆ ಯಿಲ್ಲ. ಅವರಲ್ಲಿ ಬೃಹಚ್ಚರಣ, ವಡಮ- ಎಂಬ ಎರಡು ಒಳಪಂಗಡಗಳಿವೆ; ವಡಮರಿಗೆ ಗೌರವ ಕಡಿಮೆ. ನಂಬೂದ್ರಿಗಳಲ್ಲಿ ತೀರ ಹಿರಿಯನು ಯಾವಾಗಲೂ ಓಲೆಯ ಛತ್ರಿಯನ್ನು ಹಿಡಿದುಕೊಂಡಿರುತ್ತಾನೆ; ದೇವಾಲಯಗಳಲ್ಲಿಯೂ ದೇವತಾದರ್ಶನಸಮಯಕಾಲದಲ್ಲಿಯೂ ಅದರೊಡನೆಯೇ ಇರುತ್ತಾನೆ. ಈ ಜನರಿಗೆ ತ್ರಿಚೂರಿನಲ್ಲಿ ಗುರುಮಠವಿದೆ. ಮಠಾಧೀಶರಾದ ಸಂನ್ಯಾಸಿಗಳು ಇವರ ಕೈಯಿಂದ ಏನನ್ನೂ ತೆಗೆದುಕೊಳ್ಳುವದಿಲ್ಲ, ತಮ್ಮ ವಸ್ತ್ರಗಳನ್ನು ಇವರು ಮುಟ್ಟಗೊಡಿಸುವದಿಲ್ಲ. ಮಠಾಧೀಶರ ಉಪಚಾರಕ್ಕೆ ತಮಿಳುಜನರಿದ್ದಾರೆ. ತ್ರಿಚೂರಿನ ಮಠದಲ್ಲಿಯೇ ಶಂಕರರ ಪ್ರಥಮ ವಿದ್ಯಾಭ್ಯಾಸ ಜರುಗಿತಂತೆ

ಶ್ರೀಶಂಕರರು ಯಜುರ್ವೇದಿಗಳು. ಮನೆಯ ಹೆಸರು 'ಕೈಪಳ್ಳಿ ಇಲ್ಲಮ್' ಎಂದು (ಇಲ್ಲಂ ಎಂದರೆ ಮನೆ). ಇಲ್ಲಿ 'ಕಾಪಳ್ಳಿ ಇಲ್ಲಂ', 'ತಲೆ ಯಾತ್ತಂ ಪಳ್ಳಿಯಿಲ್ಲಂ' ಎಂಬ ಎರಡು ಮನೆಗಳಿವೆ. ಶ್ರೀಶಂಕರಾಚಾರ್ಯರ ತಾಯಿಯ ಅವಸಾನಕಾಲದಲ್ಲಿ ತಲೆಯಕಡೆ ಒಬ್ಬ, ಕಾಲ್ಕಡೆ ಒಬ್ಬ- ಹೀಗೆ ನಿಂತದ್ದರಿಂದ ಅವರ ಮನೆಗಳಿಗೆ ಈ ಹೆಸರುಗಳು ಬಂದಿವೆ ಎಂದು ಹೇಳುತ್ತಾರೆ.

ನಂಬೂದ್ರಿಗಳು ಶ್ರೀಭಗವತ್ಪಾದಾಚಾರ್ಯರ ಬಗ್ಗೆ ಪರಂಪರೆಯಿಂದ ಕರ್ಣ ಧಾರೆಯಾಗಿ ಬಂದ ವಾರ್ತೆಯನ್ನು ನಂಬಿ ಶ್ರೀ ಆಚಾರ್ಯರಿಗೆ ಈ ಕಾರಣಗಳಿಂದ ತಾವು ಎದುರಾಳಿಗಳಾಗಿರುತ್ತೇವೆಂದು ಹೇಳಿಕೊಳ್ಳುತ್ತಾರೆ: (೧) ಶಿವಗುರುವೆಂಬ ತಂದೆಯು ಕಾಲವಾಗಿ ಒಂಬತ್ತು ತಿಂಗಳಾದಮೇಲೆ ಶಂಕರರು ಜನಿಸಿದರು. (೨) ಕಲಿಯುಗದಲ್ಲಿ ಸಂನ್ಯಾಸವು ನಿಷಿದ್ಧವಾದರೂ ಸಂನ್ಯಾಸಿಗಳಾದರು. (೩) ಅವರು ಕರ್ಮಗಳನ್ನು ಬಿಟ್ಟಿದ್ದಲ್ಲದೆ ಕರ್ಮಕಾಂಡವನ್ನು ಹಳಿದು ದೂಷಿ ಸಿದರು. (೪) ದೂರದಲ್ಲಿರುವ ಬೇರೆಬೇರೆಯ ಪ್ರಾಂತಗಳಿಗೆ ಹೋಗಿದ್ದರು; ಯಾರುಯಾರಲ್ಲಿ ಏನೇನು ಆಹಾರವನ್ನು ಸೇವಿಸಿದರೊ! (೫) ಪರಮಹಂಸನು

ಕುಲಜಾತಿಗಳಿಲ್ಲದವನು, ವಿಧಿನಿಷೇಧಗಳಿಲ್ಲದವನು, ಕರ್ಮಬಾಹಿರನು. (೬) ಶಂಕರರು ಜ್ಯೇಷ್ಠಪುತ್ರನೊಬ್ಬನಿಗೇ ಪಿತೃವಿನ ಆಸ್ತಿ, ಇತರರು ಗೃಹತ್ಯಾಗವನ್ನು ಮಾಡಿ ಸಂನ್ಯಾಸಿಗಳಾಗಿರಬೇಕೆಂದು ನಿಯಮಿಸಿದರು. (೭) ಮಾತೃಕಳೇಬರವನ್ನು ತಾವೇ ತುಂಡುತುಂಡುಮಾಡಿ ದಹನಕ್ರಿಯೆಯನ್ನು ಜರುಗಿಸಿದರು.

ಈ ಕಾರಣಗಳಿಗೆಲ್ಲ ಯಾವ ಗ್ರಂಥಾಧಾರವೂ ಇಲ್ಲದಿದ್ದರೂ ಈ ಜನರು ಇಂಥ ಕಲ್ಪಿತಕಥೆಗಳನ್ನೇ ನಂಬಿಕೊಂಡಿರುತ್ತಾರೆ! ಇವರ ತಲೆಯಿಂದ ಈ ನಂಬಿಕೆಯನ್ನು ಓಡಿಸಿ ಅದರಲ್ಲಿ ಶಂಕರಾಚಾರ್ಯರ ನಿಜತತ್ತ್ವವನ್ನು ತುಂಬುವ ಮಹನೀಯರೋರ್ವರ ಅವತಾರವು ಅತ್ಯವಶ್ಯವಾಗಿದೆ. ಇಲ್ಲಿ ಮಲೆಯಾಳಿಭಾಷಾಭಿಜ್ಞರೇ ಬೇಕು. ಯಾವ ಮಹಾತ್ಮನಿಂದ ಈ ದಿವ್ಯಕಾರ್ಯವು ಜರುಗುವದೋ ನೋಡಬೇಕಾಗಿದೆ. ನನಗೆ ಭಾಷೆಯು ಬಾರದಿದ್ದರೂ ಶ್ರೀಶ್ರೀಸಚ್ಚಿದಾನಂದ ಸರಸ್ವತೀಸ್ವಾಮಿಗಳವರು 'ಹೃದಯಕ್ಕೆ ಹೃದಯವು ಉತ್ತರಕೊಡುತ್ತದೆ' ಎಂದು ಹೇಳಿರುವದು ಅನುಭವಸತ್ಯವೆಂದು ಕಂಡುಬಂದಿತು. ಇಂಗ್ಲಿಷು, ಸ್ವಲ್ಪ ಮುಸಲ್ಮಾನಿ (ಉರ್ದು)– ಈ ಭಾಷೆಗಳ ಸಹಾಯದಿಂದಲೂ ತೆಲುಗುಬಲ್ಲ ಮಧ್ಯಸ್ಥರಿಂದಲೂ ಇದೆಲ್ಲವನ್ನೂ ನಾನು ತಿಳಿದುಕೊಳ್ಳಲು ಸಮರ್ಥನಾದೆನು.]

## ೪. ಬಾಲ್ಯ, ವಿದ್ಯಾಭ್ಯಾಸ, ಆತುರಸಂನ್ಯಾಸ

### ಚುರುಕುಬುದ್ಧಿಯ ಮಗು

೫೦. ಶಂಕರಾಚಾರ್ಯರ ಬಾಲ್ಯದ ವಿಷಯವೂ ನಮಗೆ ತಿಳಿದಿರುವದು ಅತ್ಯಲ್ಪವೇ. ಮಾಧವೀಯದಲ್ಲಿ ಹೀಗಿದೆ: ಒಂದನೆಯ ವರ್ಷದಲ್ಲಿ ಸ್ವಭಾಷೆಯನ್ನೂ ವರ್ಣಾಭ್ಯಾಸವನ್ನೂ ಪೂರೈಸಿದರು ; ಎರಡನೆಯ ವರ್ಷದಲ್ಲಿ ಬರೆಹ ಅಕ್ಷರಗಳನ್ನು ಓದಿದರು. ಆಮೇಲೆ ಕಾವ್ಯಪುರಾಣಗಳ ಅರ್ಥವನ್ನು ಶ್ರವಣವಿಲ್ಲದೆ ತಿಳಿದುಕೊಂಡರು, ಇವರಿಗೆ ಹೇಳಿಕೊಡುವದು ಗುರುಗಳಿಗೇನೂ ಕಷ್ಟವಾಗಲಿಲ್ಲ ; ಜೊತೆಯಲ್ಲಿರುವ ಹುಡುಗರಿಗೂ ಪಾಠವನ್ನು ಹೇಳುತ್ತಿದ್ದರು. ಮಿಕ್ಕ ಮಕ್ಕಳು ಮಣ್ಣಿನ ಧೂಳಿಯಲ್ಲಿ ಆಡುತ್ತಿರುವ ವಯಸ್ಸಿನಲ್ಲಿಯೇ ಸಕಲಲಿಪಿಗಳನ್ನೂ ಕಲಿತು ಕೊಂಡರು (ಮಾ.ಶಂ. ೪-೧ರಿಂದ ೪). **ವ್ಯಾಸಾಚಲೀಯ**ದಲ್ಲಿಯೂ (ವ್ಯಾ.ಶಂ. ೪-೩೧) ಹೀಗೆಯೇ ಸಂಕ್ಷೇಪವಾಗಿ ಹೇಳಿದೆ. **ಚಿದ್ವಿಲಾಸೀಯ**ದಲ್ಲಿಯೂ ಐದು ವರ್ಷದೊಳಗೇ ಕೋಶ, ಸ್ತೋತ್ರ, ಕಾವ್ಯ, ಛಂದಸ್ಸು, ಅಲಂಕಾರ, ಗೀತ ವಾದಿತ್ರನೃತ್ತಾದಿಗಳನ್ನು ಕಲಿತನು (ಚಿ.ಶಂ. ೬-೩೬,೩೭) ಎಂದಿದೆ. **ಅನಂತಾನಂದಗಿರೀಯ**ದಲ್ಲಿಯೂ (ಪು. ೧) ಪ್ರಾಕೃತ, ಮಾಗಧಗೀರ್ವಾಣಾದಿಭಾಷೆಗಳಲ್ಲಿ ಕುಶಲನಾದನು ಎಂದಿದೆ. ಆದ್ದರಿಂದ ಬಾಲ್ಯದಲ್ಲಿಯೇ ಬುದ್ಧಿಯು ಬಹಳ ಚುರುಕಾಗಿತ್ತು ಎಂದು ಎಲ್ಲರೂ ಹೇಳಿದಂತೆ ಆಯಿತು.

### ಉಪನಯನ

೫೧. ಮೂರನೆಯ ವರ್ಷದಲ್ಲಿ ಚೌಲವೂ ಐದನೆಯ ವರ್ಷದಲ್ಲಿ ಉಪನಯನವೂ ಆದವೆಂಬುದಕ್ಕೆ ಎಲ್ಲರ ಸಂಮತಿಯೂ ಇದೆ. ಆದರೆ ವ್ಯಾಸಾಚಲೀಯ ಮಾಧವೀಯ- ಇವುಗಳಲ್ಲಿ ನಾವು ಆಗಲೆ ಹೇಳಿರುವಂತೆ (ಪು. ೭) ಮಗನಿಗೆ ಉಪನಯನವನ್ನು ಮಾಡುವಷ್ಟರಲ್ಲಿಯೇ ಶಿವಗುರು ಮೃತನಾದನು ; ಅವನ ಹೆಂಡತಿಯು ಬ್ರಾಹ್ಮಣರ ಮೂಲಕ ಉಪನಯನವನ್ನು ಮಾಡಿಸಿದಳು ಎಂದು (ಮಾ. ಶಂ. ೪-೧೧, ೧೫ ; ವ್ಯಾ. ಶಂ. ೪-೩೨) ಹೇಳಿದೆ. **ಕೇರಳೀಯ ಶಂಕರವಿಜಯ**ದಲ್ಲಿಯೂ 'ಪಞ್ಚಮಾಬ್ದೇ ನಿಜಂ ಪುತ್ರಮುಪನೇತುಮನಾ ದ್ವಿಜಃ | ಪಞ್ಚತ್ವಮಗಮತ್ಸದ್ಯಃ ಕಾಲೋ ಹಿ ದುರತಿಕ್ರಮಃ ||' ಎಂದು ಇದೆ ಎಂತ (ಗು.ರ.ಶ್ಲೋ. ೧೮) ಆತ್ಮಬೋಧರು ಬರೆದಿರುತ್ತಾರೆ. ಆದರೆ ಈ ಕಥಾಕ್ರಮವು ನಿಜಕ್ಕೆ ಸರಿಯಲ್ಲವೆಂದೂ **ಗುರುರತ್ನಮಾಲಿಕೆ**ಯಲ್ಲಿ ಹೇಳಿರುವಂತೆ ಉಪನಯನವನ್ನು ಮಾಡಿಯೇ ಶಿವಗುರುವು ಮೃತನಾದನೆಂದೂ ಅವರು ಪ್ರತಿಪಾದಿಸಿರುತ್ತಾರೆ (ಗು.ರ. ೧೮). ಈ ತಮ್ಮ ಮತವು ಶಿವರಹಸ್ಯಕ್ಕೆ ವಿರುದ್ಧವಲ್ಲ

ವೆಂದು ತೋರಿಸುವದಕ್ಕಾಗಿ ಆತ್ಮಬೋಧರು 'ಉಪನೀತಸ್ತಥಾ ಮಾತ್ರಾ' (ಶಿ. ರ. ೧೬-೧೫) ಎಂಬ ವಾಕ್ಯಕ್ಕೆ 'ಶಿವರಹಸ್ಯವಚನಸ್ಯಾಪಿ....ಮಾತ್ರಾ ಗುರುಕುಲಂ ಪ್ರಾಪಿತ ಇತ್ಯರ್ಥಸ್ಯ ಸುವಚತ್ವಾಚ್ಚ' ತಾಯಿಯು ಗುರುಕುಲಕ್ಕೆ ಕಳುಹಿಸಿದಳು ಎಂಮೂ ವ್ಯಾಖ್ಯಾನವಾಡಬಹುದೆಂದು ಬರೆದಿದ್ದಾರೆ. ಚಿದ್ವಿಲಾಸೀಯದಲ್ಲಿ; ಐದನೆಯ ವರ್ಷದಲ್ಲಿ ಉಪನಯನವಾಡಿದರೆ ಬ್ರಹ್ಮವರ್ಚಸ್ಸನ್ನು ಹೊಂದುತ್ತಾನೆ-ಎಂಬ ಸೂತ್ರವನ್ನು ಅವಲಂಬಿಸಿ ಸ್ವಭಾವದಿಂದಲೇ ಇದ್ದ ತೇಜಸ್ಸನ್ನು ಬ್ರಹ್ಮತೇಜಸ್ಸಿನಿಂದ ಹೆಚ್ಚಿಸುವದಕ್ಕೆ ಇಷ್ಟಪಟ್ಟು ಬಂಧುಗಳೊಡನೆ ಸೇರಿಕೊಂಡು ಉಪನಯನವಾಡಿಸಿದನು. 'ಪಞ್ಚಮಾಬ್ದೋಪನೀತಶ್ಚೇದ್ಬ್ರಹ್ಮವರ್ಚಸಮೃಚ್ಛತಿ । ಇತಿ ಸೂತ್ರಂ ಸಮಾಲಮ್ಬ್ಯ ನಿಜತೇಜಃಸಮುಜ್ಜ್ವಲಮ್ । ಬ್ರಾಹ್ಮೇಣ ತೇಜಸಾ ಭೂಯೋಽಪಿಯೋಕ್ತುಂ ಮ್ರುತವೈಪತ ॥ 'ಅತಸಿಷ್ಟೋಪನೀತಿಂ ಸ ಸಮಸ್ತೈರ್ಬನ್ಧುಭಿರ್ಯುತಃ ॥' (ಚಿ. ಶಂ. ೭-೩, ೯). ಚಿದ್ವಿಲಾಸೀಯವು ಮಾಧವೀಯಕ್ಕಿಂತ ಈಚಿನ ಗ್ರಂಥವಾದ್ದರಿಂದ ಉಪನಯನಕ್ಕೆ ಮುಂಚೆಯೇ ಶಿವಗುರುವು ಮೃತನಾಗಿರಬೇಕು- ಎಂದು (ಸೋ. ಶ. ಪು. ೪೦) ಸೋಮನಾಥಯ್ಯನವರು ಕಲ್ಪಿಸಿರುತ್ತಾರೆ. ಆದರೆ ಈ ವಿಷಯದಲ್ಲಿ ಗುರುರತ್ನಮಾಲಿಕೆಯು 'ಉಪನೀಯ ದಿವ ೧೧ ಸ್ವತಾತೇ' (ತಂದೆಯು ಉಪನಯನವನ್ನು ಮಾಡಿ ಸ್ವರ್ಗಸ್ಥನಾಗಲು ಗು. ರ. ಶ್ಲೋ. ೧೮) ಎಂದು ಹೇಳಿರುವದನ್ನು ಊರ್ಜಿತಗೊಳಿಸುವದಕ್ಕಾಗಿ ಆತ್ಮಬೋಧರು 'ಚೌಲಂ ಕರ್ಮ ಸಮಾಪ್ಯ ಚೋಪನಯನಂ ತಾತೇ ದಿವಂ ಪ್ರಸ್ಥಿತೇ' ಎಂಬ ಪ್ರಾಚೀನಶಂಕರವಿಜಯವಾಕ್ಯವನ್ನೂ 'ಶಿವಗುರುರುಪನೀಯ ಶಙ್ಕರಾರ್ಯಂ ನಿಗಮಮಶೇಷಮಥಾಧ್ಯಜೀಗಪತ್ತಮ್' ಎಂಬ ಬೃಹಚ್ಛಂಕರವಿಜಯವಾಕ್ಯವನ್ನೂ ಪ್ರಮಾಣವಾಗಿ ಉದಾಹರಿಸಿರುತ್ತಾರೆ. ಆದ್ದರಿಂದ ಈ ವಿಷಯದಲ್ಲಿ ದ್ವಿಲಾಸೀಯ ವರ್ಣನೆಯ ವಿಷಯಕ್ಕೆ ಸಂಶಯಪಡುವ ಕಾರಣವಿಲ್ಲ. ಈ ವಿಷಯದಲ್ಲಿ ಎರಡು ಮತಗಳಿವೆ ಎಂದು ಮಾತ್ರ ಇಲ್ಲಿ ಸಿದ್ಧವಾಗುತ್ತದೆ. ಆದರೆ ಈ ಗ್ರಂಥದಲ್ಲಿ 'ಅನೇಹಸಿ ಮಹೋದಾರೇ ದ್ರಾವಿಡಾಚಾರಸಮ್ಮತಮ್ । ಪೌರೈಃ ಸ್ನಿಗ್ಧೈರ್ವಿದಗ್ಧೈಶ್ಚ ವೃದ್ಧೈರ್ಬನ್ಧುಭಿರನ್ವಿತಃ । ಚೌಲೋತ್ಸವಮಥಾಕಾರ್ಷೀತ್ ॥' (ಚಿ ಶಂ. ೬-೨೫, ೨೬) ಎಂದು ಚೌಲದ ಸಂಬಂಧದಿಂದಲೂ 'ದ್ರಾವಿಡಾಚಾರಪಾರಗಾನ್' (ಚಿ. ಶಂ. ೭-೫) ಎಂದು ಉಪನಯನಸಂಬಂಧದಿಂದಲೂ ಮುಂದೆ 'ಪತ್ಯುಃ ಸಾಧ್ವ್ಯೌರ್ಧ್ವದೇಹಿಕಮ್ । ದ್ರಾವಿಡಾಚಾರವಿಧಿನಾ' (ಚಿ-ಶಂ. ೮-೯) ಎಂದು ಶಿವಗುರುವಿನ ಅಂತ್ಯಕ್ರಿಯೆಯ ಸಂಬಂಧದಿಂದಲೂ ಕರ್ಮಗಳು ದ್ರಾವಿಡಾಚಾರಕ್ಕೆ ಅನುಗುಣವಾಗಿ ಆದವೆಂದು ವರ್ಣಿಸಿರುವದು ಆಚಾರ್ಯರು ಕೇರಳೀಯರಾದ್ದರಿಂದ ಸರಿಯಾದ ಆಚಾರದ ಕರ್ಮಗಳಾಗಲಿಲ್ಲವೆಂಬ ಶಂಕೆ ಬರಬಾರದೆಂದೋ ಅಥವಾ ಅವರು ಶುದ್ಧದ್ರಾವಿಡರು (ತಮಿಳರು) ಎಂಬ

ಅಭಿನಿವೇಶದಿಂದಲೋ ಆಗಿರಬೇಕೆಂದು ಸೋಮನಾಥಯ್ಯನವರು ಕಲ್ಪಿಸಿರುವದು (ಸೋ.ಶಂ ೪೧) ನಮಗೂ ಯುಕ್ತಿಯುಕ್ತವಾಗಿ ತೋರುತ್ತದೆ. ಚಿದ್ವಿಲಾಸರಿಗೆ ಶಾಸ್ತ್ರವೂ ಈಚಿನ ಶಿಷ್ಟಾಚಾರಗಳೂ ಬಹಳ ಇಷ್ಟವಾಗಿರುತ್ತವೆ. ಆದ್ದರಿಂದಲೇ ಅವರು ಅಲ್ಲಲ್ಲಿ ಸೂತ್ರಗಳನ್ನೂ ಸ್ಮೃತಿಗಳನ್ನೂ ಉದಾಹರಿಸುತ್ತಿರುತ್ತಾರೆ; ಈಚಿನ ಆಚಾರಗಳನ್ನು ಆಚಾರ್ಯರಿಗೂ ಗಂಟುಹಾಕುವದಕ್ಕೆ ಪ್ರಯತ್ನಿಸುತ್ತಿರುತ್ತಾರೆ. ಈ ವಿಷಯವನ್ನು ಸಮಯವು ಬಂದಹಾಗೆ ಅಲ್ಲಲ್ಲಿ ವಾಚಕರ ಲಕ್ಷ್ಯಕ್ಕೆ ತರುವೆವು.

ಆನಂದಗಿರೀಯದಲ್ಲಿ ಅಚ್ಚಿನ ತೆಲುಗುಪುಸ್ತಕದಲ್ಲಿ 'ತೃತೀಯೇ ವರ್ಷೇ ಚೌಲಕರ್ಮ, ಪಞ್ಚಮೇ ವರ್ಷೇ ಮೌಞ್ಜೀಬನ್ಧಂ ವಿಧ್ಯುಕ್ತಿತಃ ಕುರ್ವನ್ತಿ ವಿಪ್ರಾಃ' (ಬ್ರಾಹ್ಮಣರುಗಳು ಮೂರನೆಯ ವರ್ಷದಲ್ಲಿ ಚೌಲಕರ್ಮವನ್ನೂ ಐದನೆಯ ವರ್ಷದಲ್ಲಿ ವಿಧ್ಯುಕ್ತವಾಗಿ ಮೌಞ್ಜೀಬಂಧವನ್ನೂ ಅಂದರೆ ಉಪನಯನವನ್ನೂ ಮಾಡಿದರು ಆ.ಶಂ.ಪು. ೧೦) ಎಂದಿದೆ. ಪ್ರಾಚೀನಪಾಠವೆಂದು ಈಚೆಗೆ ಹೊರಕ್ಕೆ ತಂದಿರುವ ಪಾಠದಲ್ಲಿ 'ಪಞ್ಚವರ್ಷಸ್ಯ ವರ್ಣಾದಿಗ್ರಹಣೇ ನಾಸ್ಯ ಧೀಮತಃ | ಉಪನೀತಿಮಕೃತ್ವೈವ ಮಮಾರ ಮಹಿತಃ ಪಿತಾಃ" (ರಾಂ. ಪೀ. ತ. ೧೫) ಎಂದು ಹೇಳಲಾಗಿದೆ. ಆದರೆ ಈ ಪ್ರಾಚೀನಪಾಠವೂ ಸಂಶಯಾಸ್ಪದವಾಗಿದೆ ಎಂಬುದನ್ನು ನಾವು ೭ನೆಯ ಪರಿಶಿಷ್ಟದಲ್ಲಿ ತೋರಿಸಿರುತ್ತೇವೆ. ಇದೂ ಅಲ್ಲದೆ ಆತ್ಮಬೋಧರ ಸುಷಮಾಗ್ರಂಥದಲ್ಲಿ ಆಚಾರ್ಯವಿಜಯೇ ಚ 'ತೃತೀಯೇ ವರ್ಷೇ ಚೌಲಕರ್ಮ ಪಞ್ಚಮೇ ಮೌಞ್ಜೀಬನ್ಧನಂ ವಿಧ್ಯುಕ್ತಿತಶ್ಚಕ್ರುರ್ವಿಪ್ರಾಃ' ಎಂಬ ವಾಕ್ಯವನ್ನು ಆಚಾರ್ಯವಿಜಯದ್ದೆಂದು ಉದಾಹರಿಸಿದೆ ; ಆ ಗ್ರಂಥವೇ ಈ ಆನಂದಗಿರೀಯವೆಂದಾದರಂತೂ ಪ್ರಾಚೀನಪಾಠವೆಂಬುದೇ ಅರ್ವಾಚೀನವೆಂದಾಗುತ್ತದೆ. ಅಚ್ಚಿನ ಆನಂದಗಿರೀಯದಲ್ಲಿ ಆಚಾರ್ಯರ ಅವಯವಗಳನ್ನು ವರ್ಣಿಸುವಾಗ 'ಅರ್ಧೇನ್ದುಲಲಾಟಃ, ಪೂರ್ಣೇನ್ದುಮುಖಃ . ಸಾಕ್ಷಾಚ್ಚಿದಮ್ಬರೇಶ ಇವ ವಿರಾಜಮಾನಃ' ಎಂದು ವರ್ಣಿಸಿರುವ ಅನಂತಾನಂದಗಿರಿಯು ಚಿದಂಬರದಲ್ಲಿ ಆಚಾರ್ಯರು ಹುಟ್ಟಿದರೆಂಬುದರಲ್ಲಿಯೇ ಅಭಿನಿವೇಶವುಳ್ಳವನಂತೆ ಕಾಣಿಸುತ್ತಾನೆ ; ಅದು ನಿಜವಾದರೆ ಈಗ ಹೊರಕ್ಕೆ ಬಂದಿರುವ 'ಪ್ರಾಚೀನಪಾಠವೇ ಅರ್ವಾಚೀನರು ಯಾರೋ ಕಲ್ಪಿಸಿರಬಹುದಾದದ್ದು—ಎಂದು ಊಹಿಸುವದಕ್ಕೂ ಎಡೆಯಿರುತ್ತದೆ. ಆದ್ದರಿಂದ ಆನಂದಗಿರಿಯು ಮ ಉಪನಯನವನ್ನು ಬ್ರಾಹ್ಮಣರೇ ಮಾಡಿಸಿದರೆಂಬ ಕಡೆಗೆ ಎಂದು ಹೇಳುವದೇ ಯುಕ್ತವೆಂದು ತೋರುತ್ತದೆ.

### ವಿದ್ಯಾಭ್ಯಾಸದಲ್ಲಿ ಮುನ್ನಡೆ

೫೨. ಉಪನಯನವಾದ ಬಳಿಕ ಬ್ರಹ್ಮಚಾರಿಶಂಕರನು ಕ್ರಮವಾಗಿ ನಾಲ್ಕು ವೇದಗಳನ್ನೂ ವೇದಾಂತಗಳನ್ನೂ ಕಲಿತನು. ಸಹಪಾಠಿಗಳಿಗೆ ಅವನ ಜೊತೆಗೆ

ಅಷ್ಟು ವೇಗವಾಗಿ ಓದುವದಾಗಲಿಲ್ಲ. 'ಇಷ್ಟು ಬೇಗನೆ ಹೇಳಿಕೊಡುವದೆಂತು ? ಎಂದು ಗುರುಗಳಿಗೂ ಸಂಶಯುವಾಯಿತು. ಶಂಕರನು ಎರಡು ಮೂರು ತಿಂಗಳಲ್ಲಿ ಗುರುವಿಗೆ ಸಮಾನನಾದನು'- ಎಂದು ಬಣ್ಣಿಸಿದ್ದರಿಂದಲೂ (ಮಾ. ಶಂ. ೪-೧೬ರಿಂದ ೧೮) ಮಾಧವನಿಗೆ ತೃಪ್ತಿಯಾಗಲಿಲ್ಲ. ಕವಿತಾ ಕಲ್ಪನೆಯು ಲೋಕವಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತೆ

ವೇದೇ ಬ್ರಹ್ಮಸಮಸ್ತದಙ್ಗನಿಚಯೇ ಗಾರ್ಗ್ಯೋಪಮಸ್ತತ್ಕಥಾ
ತಾತ್ಪರ್ಯಾರ್ಥವಿವೇಚನೇ ಗುರುಸಮಸ್ತತ್ಕರ್ಮಸಂವರ್ಣನೇ ।
ಆಸೀಜ್ಜೈಮಿನಿವತ್ತದ್ವಚನಜಪ್ರೋದ್ಬೋಧಕನ್ದೇ ಸಮೋ
ವ್ಯಾಸೇನೈವ ಸ ಸೂಕ್ತಿಮಾನಿವ ನವೋ ವಾಣೀವಿಲಾಸೈರ್ವೃತಃ ॥೧೯॥

ಆನ್ವೀಕ್ಷಿಕ್ಯೈಕ್ಷಿ ತನ್ತ್ರೇ ಪರಿಚಿತಿರತುಲಾ ಕಾಪಿಲೇ ಕಾಪಿ ಲೇಭೇ
ಪೀತಂ ಪಾತಞ್ಜಲಾಮ್ಭಃ ಪರಮಪಿ ವಿದಿತಂ ಭಾಟ್ಟಘಟ್ಟಾರ್ಥತತ್ತ್ವಮ್
ಯತ್ತೈಃ ಸೌಖ್ಯಂ ತದಸ್ಯಾಸ್ತ್ವಭವದಮಲಾದ್ವೈತವಿದ್ಯಾಸುಖೇಽಸ್ಮಿನ್
ಕೂಪೇ ಯೋಽರ್ಥಃ ಸ ತೀರ್ಥೇ ಸುಪಯಸಿ ವಿತತೇ ಹನ್ತ ನಾನ್ತರ್ಭವೇತ್ಕಿಮ್ ॥

"ವೇದವಲ್ಲಿ ಬ್ರಹ್ಮನಿಗೆ ಸಮನು, ವೇದಾಂಗಗಳಲ್ಲಿ ಗಾರ್ಗ್ಯನೇ. ವೇದಾರ್ಥತಾತ್ಪರ್ಯವನ್ನು ವಿವೇಚನೆಮಾಡುವದರಲ್ಲಿ ಬೃಹಸ್ಪತಿಸಮನು, ಆವರಲ್ಲಿರುವ ಕರ್ಮವನ್ನು ವರ್ಣಿಸುವದರಲ್ಲಿ ಜೈಮಿನಿಯೇ, ವೇದವಾಕ್ಯತತ್ತ್ವ ಜ್ಞಾನವಮೂಲದ ವಿಷಯುವಲ್ಲಿ ವ್ಯಾಸರಿಗೇ ಸಮನು. ಹೊಸದಾಗಿ ಅವತರಿಸಿದ ವ್ಯಾಸನೋ ಎಂಬಂತೆ ವಾಗ್ವಿಲಾಸಗಳಿಂದ ಕೂಡಿದ್ದನು. ತರ್ಕವಿದ್ಯೆಯನ್ನು ನೋಡಿದ್ದಾಯಿತು. ತಂತ್ರದ ಅಸಮಾನಪರಿಚಯುವಾಯಿತು. ಕಪಿಲರ ಸಾಂಖ್ಯವೂ ದೊರಕಿತು. ಪಾತಂಜಲಸಮುದ್ರವನ್ನು ಕುಡಿದದ್ದಾಯಿತು, ಭಟ್ಟರ ಘಟ್ಟಾರ್ಥತತ್ತ್ವವನ್ನು ತಿಳಿದದ್ದಾಯಿತು. (ಮುಂದೆ ಭಟ್ಟರ ದರ್ಶನವನ್ನು ವರ್ಣಿಸುವ ಸಂದರ್ಭವನ್ನು ಕವಿ ಇಲ್ಲಿ ಮರೆತು ಭಟ್ಟರನ್ನು ಆಚಾರ್ಯರ ಪೂರ್ವಜರನ್ನಾಗಿ ಮಾಡಿರುತ್ತಾನೆ!) ಆ ಶಾಸ್ತ್ರಗಳಿಂದ ಬರುವ ಸೌಖ್ಯವು ನಿರ್ಮಲವಾದ ಅದ್ವೈತಾನಂದದಲ್ಲಿಯೇ ಅಡಕವಾಯಿತು ; ಭಾವಿಯಿಂದಾಗುವ ಪ್ರಯೋಜನವು ಮಹಾಜಲವುಳ್ಳ ಸುತೀರ್ಥದಲ್ಲಿ ಅಂತರ್ಗತವಾಗುವದಿಲ್ಲವೆ ?' ಎಂದು ಯುಮಕಾನುಪ್ರಾಸಗಳ ಸುರಿಮಳೆಯ ವೃತ್ತಗಳಿಂದ ಆಚಾರ್ಯರನ್ನು ವರ್ಣಿಸಿರುತ್ತಾನೆ.

ಈ ಸಂದರ್ಭದಲ್ಲಿ **ಅನಂತಾನಂದಗಿರಿಯು** "ಷಡ್ದರ್ಶನಮೂಲಃ, ಇತಿಹಾಸಸ್ಥಾಣುಃ, ನಿಗಮಶಾಖಃ, ಷಡಙ್ಗಪಲ್ಲವಃ, ಸೂತ್ರಪುಷ್ಪಃ, ಮನ್ತ್ರ ಶಲಾಟುಃ, ಜ್ಞಾನಪಕ್ವಫಲಃ, ಶ್ರೀಶಙ್ಕರಕಲ್ಪವೃಕ್ಷ ಆಸೀತ್" (ಆ.ಶಂ.ಪು. ೧೦) -ಎಂದು ಆಚಾರ್ಯರನ್ನು ಕಲ್ಪವೃಕ್ಷವಾಗಿ ವರ್ಣಿಸಿ 'ವೇದೇ ಬ್ರಹ್ಮಸಮಃ' ಎಂಬ

ಮೇಲೆ ಉದಾಹರಿಸಿರುವ ಪದ್ಯವನ್ನೇ ಅಕ್ಷರಶಃ ಇಟ್ಟಿದ್ದಾನೆ ; 'ವ್ಯಾಸೇನೈವ' ಆದಮೇಲೆ 'ಮದೀಯ ಸದ್ಗುರುರಸೌ ಶ್ರೀಶಙ್ಕರಾರ್ಯಃ ಕ್ಷಿತೌ' ಎಂದು ಮಾರ್ಪಡಿಸಿದ್ದಾನೆ. ಆನಂದಗಿರಿಯು ಹಿಂದಿನವನಾದರೆ ಮಾಧವನು ಈ ಶ್ಲೋಕವನ್ನು ಆವನಿಂದಲೇ ತೆಗೆದುಕೊಂಡನೆನ್ನಬೇಕಾಗುತ್ತದೆ ; ಇಲ್ಲದಿದ್ದರೆ ಇಬ್ಬರೂ ಮತ್ತೊಂದು ಕಡೆಯಿಂದ ಈ ಪದ್ಯವನ್ನು ಆರಿಸಿಕೊಂಡಿರಬೇಕೆನ್ನಿಸುತ್ತದೆ. **ವ್ಯಾಸಾಚಲೀಯದಲ್ಲಂತೂ** ಈ ಪದ್ಯವಿಲ್ಲ. **ಅನಂತಾನಂದಗಿರಿಯು** ಕೊಟ್ಟಿರುವ ಮತ್ತೊಂದು ಪದ್ಯವನ್ನು ಇಲ್ಲಿ ಉದಾಹರಿಸುವೆವು. ಅದನ್ನು ಪರೀಕ್ಷಿಸುವವರಿಗೆ ಮತ್ತೇನಾದರೂ ಹೊಳೆದೀತೆಂದು ನಮ್ಮ ಆಶೆ ;

ಅದ್ವೈತಾರ್ಣವಪೂರ್ಣಚನ್ದ್ರಮಭಿದಾಪದ್ಮಾಟವೀಭಾಸ್ಕರಂ
ವಿದ್ವತ್ಕೋಟಿಸಮರ್ಚಿತಾಙ್ಘ್ರಿಯುಗಲಂ ಪ್ರದ್ವೇಷಿಕಕ್ಷಾನಲಮ್ ।
ಹೃದ್ಯಾಬದ್ಧಸಮಸ್ತವೇದಜನಿತಪ್ರೋದ್ಯದ್ವಿವೇಕಂ ಪರಂ
ಸ್ವಿದ್ಯದ್ವಾಗಮೃತಂ ಪರಾಪರಗುರುಂ ಶ್ರೀಶಙ್ಕರಂ ತಂ ಭಜೇ ॥

—(ಆ. ಶಂ. ಪು. ೧೦–೧೧)

ಇಲ್ಲಿರುವ 'ಶ್ರೀಶಙ್ಕರಂ ತಂ ಭಜೇ' ಎಂಬಲ್ಲಿ ದ್ಯ ಅಥವಾ ದ್ವ ಇರುವ ಯಾವದೋ ಒಂದು ಪದವನ್ನು ತೆಗೆದುಹಾಕಿ 'ಶ್ರೀಶಙ್ಕರಂ' ಎಂದು ಇಟ್ಟಿರುವಂತೆ ಭಾಸವಾಗುತ್ತಿದೆ.

**ವ್ಯಾಸಾಚಲೀಯದಲ್ಲಿ** ಆರ್ಯಾಂಬೆಯು ಪತಿಯ ಅಂತ್ಯಕರ್ಮವನ್ನು ಮಾಡಿದಳೆಂದೂ

ಸುಬ್ರಹ್ಮಚರ್ಯಮನುರುಧ್ಯ ನಿಜಂ ಸವೇದ
ಮಧ್ಯೈಷ್ಟ ವೇದಮಪರಂ ತಮನುಕ್ರಮೇಣ ।
ಏವಂ ಗುಣೈಃ(ರೋಃ ?) ಪಠಿತವಾಂಶ್ಚತುರೋಽಪಿ ವೇದಾಂ-
ಸ್ತನ್ಮೂಲಮಸ್ಯ ಕಥಯನ್ತಿ ಯಜುಃಸಮಾಖ್ಯಮ್ ॥— (ವ್ಯಾ. ಶಂ. ೪–೩೯)

ಎಂದಿಷ್ಟೇ ಇದೆ. ಬ್ರಹ್ಮಚರ್ಯವನ್ನು ಅನುಸರಿಸಿಕೊಂಡು ಯಜುರ್ವೇದಾದಿಯಾಗಿ ನಾಲ್ಕು ವೇದಗಳನ್ನೂ ಕ್ರಮವಾಗಿ ಆಚಾರ್ಯರು ಅಧ್ಯಯನಮಾಡಿದರು ; ಆದ್ದರಿಂದ ಯಜುಃಶಾಖೆಯು ಅವರ ಸ್ವಶಾಖೆ–ಎಂದು ಈ ಗ್ರಂಥಕಾರರ ಅಭಿಪ್ರಾಯ.

**ಚಿದ್ವಿಲಾಸೀಯದಲ್ಲಿ** ತಂದೆಯೇ ಉಪನಯನವನ್ನು ಮಾಡಿ ವೇದಗಳನ್ನು ಅಧ್ಯಯನಮಾಡಿಸಿದನು, ಜೈಮಿನಿಸೂತ್ರವ್ಯಾಸಸೂತ್ರಗಳು, ಉಪನಿಷತ್ತುಗಳು– ಇವನ್ನು ಹೇಳಿಕೊಟ್ಟನು (ಚಿ. ಶಂ. ೭–೨೪,೨೫), ವೇದಾಂತಾರ್ಥಪರಿಜ್ಞಾನದಿಂದ ಮತಿಯು ನಿರ್ಮಲವಾಯಿತು (೭–೨೭), ಮಿಕ್ಕ ಶಾಸ್ತ್ರ

ಗಳನ್ನು ಬಹು ದಿನ ಅಭ್ಯಾಸಮಾಡಿದವನಂತೆ ಬಾಲಕನು ವೇಗದಿಂದ ಗ್ರಹಿಸಿದನು (೭-೨೮). ಕಾಮಕಲಾಶಾಸ್ತ್ರವನ್ನು ನೋಡುವದಕ್ಕೆ ಹೊರಡುವಷ್ಟರಲ್ಲಿಯೇ-ಶಿವಮನ್ಮಥರಿಗೆ ವಿರೋಧವಿರುವದರಿಂದ-ಆತನು ಬ್ರಹ್ಮಸತ್ಯತ್ವವನ್ನೂ ಮಿಕ್ಕದ್ದೆಲ್ಲವೂ ವಿನಶ್ವರವೆಂಬುವನ್ನೂ ನಿಶ್ಚಯಿಸಿಕೊಂಡನು. ಸರ್ವರಲ್ಲಿಯೂ ವೈರಾಗ್ಯವನ್ನೂ ಸರ್ವಜಂತುಗಳಲ್ಲಿಯೂ ಸಮತ್ವವನ್ನೂ ಪರಮಾತ್ಮನಲ್ಲಿ ಚಿತ್ತನಿಷ್ಠೆಯನ್ನೂ ಪಡೆದುಕೊಂಡನು (೮-೩೨)- ಎಂದು ಬರೆದಿದೆ. ಈ ಗ್ರಂಥಕಾರರ ಮತದಂತೆ ಶಂಕರರಿಗೆ ಆಗ ವೇದಾಂತಜ್ಞಾನಪಾರೀಣತ್ವವೇ ಬಂದುಬಿಟ್ಟಿತ್ತು !

## ಶಂಕರಾಚಾರ್ಯರಿಗೆ ಬಾಲ್ಯದಲ್ಲಿಯೇ ಉತ್ಕೃಷ್ಟಜ್ಞಾನವುಂಟಾದದ್ದು

೫೩. ಆಚಾರ್ಯರಿಗೆ ಅಷ್ಟು ಚಿಕ್ಕವಯಸ್ಸಿನಲ್ಲಿ ಇಂಥ ವಿದ್ವತ್ತು ನಿಜವಾಗಿ ಬಂದಿರಬಹುದೆ ?- ಎಂದು ಸಂಶಯಪಡುವವರ ಸಮಾಧಾನಕ್ಕಾಗಿ ಸೋಮನಾಥಯ್ಯನವರು (ಸೋ. ಶಂ. ಪು. ೪೩ರಿಂದ ೪೫) ಕೌಲಿ ಎಂಬ ಇಂಗ್ಲಿಷು ಹುಡುಗನು ಹದಿನೈದನೆಯ ವರ್ಷದಲ್ಲಿ ಕವಿತೆಯನ್ನು ಮಾಡಿದ್ದು, ಫ್ರಾನ್ಸುದೇಶದ ರಾಜಮಂತ್ರಿ ಟಿಗೋರ್ ಎಂಬಾತನು ಬಾಲ್ಯದಲ್ಲಿಯೇ ವಿದ್ವಾಂಸನಾದದ್ದು, ಸ್ಕಾಟ್ಲೆಂಡಿನ ಥಾಮಸ್ ಬ್ರೌನ್ ಎಂಬಾತನು ತನ್ನ ನಾಲ್ಕನೆಯ ವರ್ಷದಲ್ಲಿಯೇ ಬೈಬಲ್‌ಕಥೆಗಳ ಪೂರ್ವಾಪರವಿರೋಧವನ್ನು ಹೊರಗೆಡಹಿದ್ದು, ಇಂಗ್ಲಿಷು ಕವಿ ಕೋಲ್‌ರಿಡ್ಜ್ ಎಂಬಾತನು ಹದಿನಾರನೆಯ ವರ್ಷದಲ್ಲಿಯೇ ಆಧ್ಯಾತ್ಮಶಾಸ್ತ್ರದಲ್ಲಿ ಮುಳುಗಿದ್ದದ್ದು, ಪಿಟ್ ಎಂಬ ಮಂತ್ರಿ ಇಪ್ಪತ್ತೆರಡನೆಯ ವರ್ಷದಲ್ಲಿಯೇ ಮಂತ್ರಿತ್ವವನ್ನು ನಿರ್ವಹಿಸಿದ್ದು, ಜಾನ್ ಸ್ಟೂಅರ್ಟ್ ಮಿಲ್ ಎಂಭಾತನು ಮೂರನೆಯ ವರ್ಷದಲ್ಲಿಯೇ ಗ್ರೀಕು ಮುಂತಾದ ಭಾಷೆಗಳನ್ನು ಕಲಿತದ್ದು, ಲುಬೆಕ್ ಗ್ರಾಮದ ಹೀನಿಕರ್ ಎಂಬ ಹುಡುಗನು ಮತ್ತೊಬ್ಬರು ಆಡಿದ ಪ್ರತಿಯೊಂದು ವಾಕ್ಯವನ್ನೂ ಮರುನುಡಿದದ್ದು, ಅಮೆರಿಕದ ಹಾರ್ವರ್ಡ್ ಸಕಲ ವಿದ್ಯಾನಿಲಯದಲ್ಲಿ ವಿಲಿಯಂ ಜೇಮ್ಸ್ ಸಿಡಿಸ್ ಎಂಬವನು ಹನ್ನೊಂದನೆಯ ವರ್ಷದಲ್ಲಿಯೇ ಗಣಿತಶಾಸ್ತ್ರದಲ್ಲಿ ಉಪನ್ಯಾಸಮಾಡಿದ್ದು-ಈಉದಾಹರಣೆಗಳನ್ನು ಕೊಟ್ಟಿರುತ್ತಾರೆ. ನಮ್ಮ ದೇಶದಲ್ಲಿಯೂ ಇಂಥ ಉದಾಹರಣೆಗಳಿವೆ. ಹಿತವಾದಿ (Hitabadi 207 ಮಂಡಪುರ, ಕಾಶಿ) ಎಂಬ ಪತ್ರಿಕೆಯಲ್ಲಿ (ಬಂಗಾಳಿವರ್ಷ ೧೩೧೫ ವೈಶಾಖ ಏಕಾದಶೀ ದಿನಾಂಕದ ಸಂಚಿಕೆಯಲ್ಲಿ) ಅಸಾಧಾರಣಮೇಧಾಶಕ್ತಿ (Extra-ordinary memory) ಎಂಬ ತಲೆಬರಹದ ಕೆಳಗೆ ಒಬ್ಬ ಹುಡುಗನ ಬುದ್ಧಿಶಕ್ತಿಯನ್ನು ವರ್ಣಿಸಿತ್ತು. ಹಿಂದಿ, ಬಂಗಾಳಿ, ಇಂಗ್ಲಿಷು, ಸಂಸ್ಕೃತ-ಈ ಭಾಷೆಯ ಗ್ರಂಥಗಳು ಮತ್ತು ಪಾಣಿನಿಯ ವ್ಯಾಕರಣ-ಇವುಗಳನ್ನು

ಅವನು ಐದು ವರ್ಷದೊಳಗೆ ಓದಿದ್ದನು. ಅವನು ಎಂಟನೆಯ ವರ್ಷಕ್ಕೆ ಉಪನೀತನಾಗಿ ಸಾಮವೇದವನ್ನು ನಿಯಮಾಧ್ಯಯನಮಾಡುತ್ತಿರುವನೆಂದೂ ಅವನ ತಮ್ಮನು ಐವನೆಯ ವರ್ಷದಲ್ಲಿಯೇ ಗಣಿತಜ್ಞನಾಗಿರುವನೆಂದೂ ಶ್ರೀಮ **ಧ್ವಂಶಧರಸರಸ್ವತಿ** ಎಂಬ ಬಂಗಾಳಿ ವೈದಿಕಬ್ರಾಹ್ಮಣನು ಅವರ ತಂದೆಯೆಂದೂ ಪ್ರಕಟವಾಗಿದೆ ಎಂತ ಒಂದು ನೋಟುಬುಕ್ಕಿನಲ್ಲಿ ನಾವು ಬರೆದುಕೊಂಡಿದೇವೆ. ಇದನ್ನು ಬಹಳಮಟ್ಟಿಗೆ 'Shankara the Sublime' ಎಂಬ ಮಹಾ ಶಂಕರಚರಿತ್ರೆ ಧೀರೇಂದ್ರನಾಥ (Dhirendra Nath) ಎಂಬವರು 1912 ರಲ್ಲಿ ಬರೆದು The Eastern Publishing Company. Calcutta. ಇವರು ಪ್ರಕಟಿಸಿದ ಪುಸ್ತಕದಿಂದ ನಾವು ತೆಗೆದುಕೊಂಡಿರಬೇಕು ; ಏಕೆಂದರೆ ಆ ಹೆಸರನ್ನು ಈ ನೋಟುಬುಕ್ಕಿನಲ್ಲಿ ಗುರುತುಮಾಡಿಕೊಂಡಿದೆ. ಈ ವೃತ್ತಾಂತಗಳೆಲ್ಲ ಎಷ್ಟರಮಟ್ಟಿಗಾದರೂ ನಿಜವಾಗಿರಲಿ, ಲೋಕದಲ್ಲಿ ಒಬ್ಬನ ಶಕ್ತಿಯಷ್ಟೇ ಇನ್ನೊಬ್ಬನದೂ ಇರಬೇಕೆಂಬ ನಿಯಮವೇನೂ ಇಲ್ಲವಷ್ಟೆ? ಹೀಗಿರುವಲ್ಲಿ ಶಂಕರರಿಗೆ ಚಿಕ್ಕವಯಸ್ಸಿನಲ್ಲಿಯೇ ಧರ್ಮಜ್ಞಾನವೈರಾಗ್ಯಗಳ ಅರಿವು ಆಯಿತೆಂಬುದು ನಿಜವಾಗಿರಲಾರದೆಂದು ನಾವೇಕೆ ಬಗೆಯಬೇಕು? ಶಂಕರ ವಿಜಯಗಳು ಎಷ್ಟಾದರೂ ಕಾವ್ಯಗಳು; ಶಂಕರರಲ್ಲಿ ಹೆಚ್ಚಿನ ಭಕ್ತಿಯ ಆವೇಶದಲ್ಲಿ ಕವಿಗಳು ಬರೆದ ಗ್ರಂಥಗಳು. ಆದ್ದರಿಂದ ಅವುಗಳಲ್ಲಿ ಅತಿಶಯೋಕ್ತಿಯಿರುವದು ಸ್ವಾಭಾವಿಕ. ಆದರೆ ಶಂಕರಕೃತವೆಂಬ ಭಾಷ್ಯಗ್ರಂಥಗಳ ಅವಲೋಕನದ ಆಧಾರದಿಂದ ನೋಡಿದರೂ ಆ ಗ್ರಂಥಕರ್ತರು ಅನಿತರಸಾಧಾರಣವಾದ ಅದ್ಭುತ ಜ್ಞಾನಶಕ್ತಿಯುಳ್ಳವರಾಗಿದ್ದರೆಂದು ನಾವು ಒಪ್ಪಲೇಬೇಕಾಗುತ್ತದೆ. ಹೀಗಿರುವಲ್ಲಿ **ಮಣಿಮಂಜರೀಕಾರನು** ವರ್ಣಿಸಿರುವ (ಪರಿ. ೩ರಲ್ಲಿ) ತಾಮಸತ್ವವು ಯಾವದೋ ಬೇರೆಯ ಸಂಕರನದಾಗಿರಬೇಕು; ಲೋಕಪ್ರಸಿದ್ಧಶಂಕರರಲ್ಲಿ ಅದನ್ನು ಶಂಕಿಸುವವರೇ ತಾಮಸರಾಗುವರು.

## ಬಾಲ್ಯದಲ್ಲಿ ಆಚಾರ್ಯರು ಪ್ರದರ್ಶಿಸಿದ ಅದ್ಭುತಗಳು

೫೪. ಆಚಾರ್ಯರ ಚರಿತ್ರೆಯಲ್ಲಿ ಕೆಲವು ಅದ್ಭುತಘಟನೆಗಳು ಬರುತ್ತವೆ. ಅವು ನಮ್ಮ ಕಣ್ಣಿಗೆ ಅದ್ಭುತವೆಂದು ಕಂಡರೂ ಯೋಗಶಕ್ತಿಯುಳ್ಳ ಮಹಾತ್ಮರಿಗೂ ಅವು ಅಸಾಧ್ಯವೇ ಎನ್ನುವದಕ್ಕೆ ಬರುವದಿಲ್ಲ. ಆದರೂ ಇಂಥ ಘಟನೆಗಳು ನಿಜವಾಗಿ ನಡೆದವೆ? ಅಥವಾ ಅವು ಆಚಾರ್ಯರಲ್ಲಿರುವ ಅಪರಿಮಿತ ಶ್ರದ್ಧಾಭಕ್ತಿಗಳಿಂದ ಜನರು ಕಲ್ಪಿಸಿದವುಗಳೆ?— ಎಂಬುದನ್ನು ಪುರಾತತ್ತ್ವ ಶೋಧಕರು ನಿಶ್ಚಯಿಸಬೇಕಾಗಿರುತ್ತದೆ ; ಅಂಥವುಗಳಲ್ಲಿ ಕೆಲವನ್ನು ಇಲ್ಲಿ ತಿಳಿಸುವೆವು :

(1) ಒಮ್ಮೆ ಬ್ರಹ್ಮಚಾರಿ ಶಂಕರನು ತನ್ನ ಸ್ನೇಹಿತರೊಡನೆ ಭಿಕ್ಷಾರ್ಥ ವಾಗಿ ಒಬ್ಬ ಬಡಬ್ರಾಹ್ಮಣನ ಮನೆಯನ್ನು ಹೊಕ್ಕನು. ಬ್ರಾಹ್ಮಣಿಯು 'ಇಂಥ ವಟುವಿಗೆ ಕೊಡುವದಕ್ಕೆ ನಮಗೇನೂ ಅದೃಷ್ಟದಲ್ಲಿ ಬರೆಯಲಿಲ್ಲವಲ್ಲ!'– ಎಂದು ಕೊಂಡು ಚಿಂತಿಸುತ್ತಾ ಒಂದು ನೆಲ್ಲಿಕಾಯಿಯನ್ನು ಕೊಟ್ಟಳು. ಶಂಕರನು ಆಕೆಯ ದೀನವಚನವನ್ನು ಕೇಳಿ ಆಕೆಯಲ್ಲಿ ದಯಾರ್ದ್ರಚಿತ್ತನಾಗಿ ಆಕೆಯ ಬಡತನವನ್ನು ನೀಗುವಂತೆ ಲಕ್ಷ್ಮೀದೇವಿಯನ್ನು ಪ್ರಾರ್ಥಿಸಿದನು. ಲಕ್ಷ್ಮೀ ದೇವಿಯು ಪ್ರಸನ್ನಳಾಗಿ 'ಇವರು ಪೂರ್ವದಲ್ಲಿ ಯಾವ ಪುಣ್ಯವನ್ನೂ ಮಾಡಿಲ್ಲ ವಲ್ಲ! ಇವರಿಗೆ ಏನು ಕೊಡಲಿ?' ಎಂದು ಕೇಳಿದಳು. 'ತಾಯೆ, ನನಗೆ ಈ ನೆಲ್ಲಿಕಾಯನ್ನು ಕೊಟ್ಟಿರುತ್ತಾಳಲ್ಲ, ಈ ಪುಣ್ಯಕ್ಕೇನು ಕೊಡುತ್ತೀಯೋ ಕೊಡು' ಎಂದು ಶಂಕರನೆನ್ನಲು ಸಂತುಷ್ಟಳಾದ ದೇವಿಯು ಚಿನ್ನದ ನೆಲ್ಲಿಕಾಯನ್ನು ಆ ಮನೆಯೊಳಗೆಲ್ಲ ಮಳೆಗರೆದು ತುಂಬಿದಳು (ಮಾ. ಶಂ. ೪–೨೧ರಿಂದ ೩೧).

ಈ ಕಥೆಯು ವ್ಯಾಸಾಚಲೀಯಾದಿ ಪೂರ್ವತನಶಂಕರವಿಜಯಗಳಲ್ಲಿ ಕಾಣುವದಿಲ್ಲ. ಆಚಾರ್ಯರ ಹೆಸರಿನಲ್ಲಿ ಪ್ರಸಿದ್ಧವಾಗಿರುವ 'ಕನಕಲಕ್ಷ್ಮೀಸ್ತವ' ಅಥವಾ "ಕನಕಧಾರಾಸ್ತುತಿ" ಎಂಬ ಸ್ತೋತ್ರವನ್ನು ಮನಸ್ಸಿನಲ್ಲಿಟ್ಟು ಕೊಂಡು ಕವಿಯು ಈ ಕಥೆಯನ್ನು ಕಲ್ಪಿಸಿರಬಹುದು. ವಾಚಕರ ಉಪಯೋಗ ಕ್ಕಾಗಿ ಆ ಸ್ತೋತ್ರವನ್ನು ೮ನೆಯ ಪರಿಶಿಷ್ಟದಲ್ಲಿ ಕೊಟ್ಟಿರುತ್ತೇವೆ.

(2) ಏಳನೆಯ ವರ್ಷದಲ್ಲಿಯೇ ಆಚಾರ್ಯರು ಗುರುಕುಲವಾಸವನು ಮುಗಿಯಿಸಿ ಮನೆಗೆ ಬಂದು ತಾಯಿಯ ಶುಶ್ರೂಷೆಯಲ್ಲಿ ನಿರತರಾದರು.[೨] ಮುದುಕಿಯಾದ ಆರ್ಯಾಂಬೆಯು ಒಮ್ಮೆ ನದಿಗೆ ಹೋಗಿ ಬಿಸಿಲಿನಲ್ಲಿ ಬಳಲಿ ನಡೆಯಲಾರದೆ ಇರಲು ಶಂಕರಬಾಲಕನು ತಾಯಿಗೆ ಶೈತ್ಯೋಪಚಾರಗಳನ್ನು ಮಾಡಿ ಸ್ವಜನರ ಸಹಾಯದಿಂದ ಆಕೆಯನ್ನು ಮನೆಗೆ ಕರೆದುಕೊಂಡುಬಂದನು.

ಬಳಿಕ ಆ ನದಿದೇವತೆಯನ್ನು ಭಕ್ತಿಯಿಂದ ಹೃದ್ಯವಾದ ಪದ್ಯಗಳಿಂದ ಸ್ತೋತ್ರಮಾಡಿದಾಗ ಸಂತುಷ್ಟಳಾದ ನದಿಯು 'ನಾಳೆ ಬೆಳಗ್ಗೆ ನಿನ್ನ ಇಷ್ಟಾರ್ಥವು ನೆರವೇರುವದು' ಎಂದು ವರವನ್ನು ಕೊಟ್ಟಳು. ಮಾರನೆಯ ದಿನವೇ ಕೃಷ್ಣಮಂದಿರದ ಬಳಿಯವರೆಗೂ ನದಿಯು ಹರಿದುಬಂದದ್ದನ್ನು ಕಂಡರು. (ಮಾ. ೫–೫ರಿಂದ ೯) ವ್ಯಾಸಾಚಲೀಯದಲ್ಲಿಯೂ ಈ ಕಥೆಯಿದೆ.

ಅದ್ಯಾಪಿ ಕೇರಳಜರಾಃ ಸಮುದೀರಯನ್ತಿ ।
ಸ್ರೋತಸ್ವಿನೀಂ ಬಹುಜಲಾಂ ವಿಧುತೌಘಪುಞ್ಜಾಮ್ ॥
ಅಮ್ಬೋಪಗೇತಿ ಯದಿಯಂ ತನಯೇನ ಮಾತುಃ ।
ಸೌಖ್ಯಾರ್ಥಮಾತ್ಮನಿಲಯಾನ್ತಿಕಗಾಂ ವ್ಯಧತ್ತ ॥ –(ವ್ಯಾ. ಶಂ. ೪–೪೧)

ಈ ನದಿಯನ್ನು ಕೇರಳದವರು ಈಗಲೂ ಅಮ್ಬಾನದೀ (ಅಮ್ಮನಹೊಳೆ) ಎನ್ನುತ್ತಾರೆ ಎಂದಿದೆ. "ಅಮ್ಬಾರ್ಥಂ ಯದಿಯಂ ನೀತಾ ತಟಿನೀ ಸದ್ಮ ಸಂನಿಧಿಮ್, ಅಮ್ಬಾತರಙ್ಗಿಣೀತ್ಯೇವ ಕಥ್ಯತೇಽದ್ಯಾಪಿ ಸಾ ಖಲು" ಎಂಬ ಶ್ಲೋಕವು ಚಿದ್ವಿಲಾಸೀಯದಲ್ಲಿದೆಯೆಂದೂ ಆಚಾರ್ಯರು ನದಿಯನ್ನು ಸ್ತುತಿಸಿದ 'ಮಹಾಪಗಾಸ್ತವ'ವೆಂಬ ಸ್ತೋತ್ರವೊಂದು ಇದೆಯೆಂದೂ ಸಂಕ್ಷೇಪಶಂಕರದಿಗ್ವಿಜಯದ ಆಧಾರದಿಂದ ಒಂದು ಟಿಪ್ಪಣಿಯನ್ನು 'ಭಗವತ್ಪಾದಾಭ್ಯುದಯ'ದ (ಪು. ೨೯) ಟಿಪ್ಪಣಿಯಲ್ಲಿ ಬರೆದಿದೆ, ನಮ್ಮಲ್ಲಿರುವ ಚಿದ್ವಿಲಾಸೀಯದಲ್ಲಿ ನದಿಯನ್ನು ತಿರುಗಿಸಿದ ಪ್ರಸ್ತಾವವೇ ಇಲ್ಲ. ಆದರ ಬದಲು 'ಶಿವಗುರು ಸಾಯುವ ಕಾಲಕ್ಕೆ ಆಚಾರ್ಯರು ಅವನಿಗೆ ಸಾಕ್ಷಾತ್ಕಾರವನ್ನು ಕೊಟ್ಟರು ; ಎಲ್ಲೆಲ್ಲಿಯೂ ಶಿವನನ್ನೇ ನೋಡುತ್ತಾ ಶಿವಗುರು ಆತ್ಮನಿಷ್ಠನಾಗಿ ಲೋಕಾಂತರವನ್ನೈದಿದನು' (ಚಿ. ಶಂ. ೮-೩, ೪) ಎಂಬ ಕಥೆಯೊಂದಿದೆ.

(3) ಅತಿಮಾನುಷಚರಿತ್ರನಾದ ಈ ಬಾಲಕನನ್ನು ನೋಡಬೇಕೆಂಬ ಕುತೂಹಲದಿಂದ ಕೇರಳರಾಜನು ತನ್ನ ಮಂತ್ರಿಯಮೂಲಕ ಹೇಳಿಕಳುಹಿಸಲು ಆಚಾರ್ಯರು ತಮ್ಮ ಆಶ್ರಮಧರ್ಮವನ್ನು ಬಿಟ್ಟು ರಾಜನ ದರ್ಶನಕ್ಕೆ ಬರುವದು ಆಗಲಾರದೆಂದು ತಿಳಿಸಿದರು. ರಾಜನು ಆಶ್ಚರ್ಯದಿಂದ ಈ ಬ್ರಹ್ಮಚಾರಿಯ ಬಳಿಗೆ ತಾನೇ ಬಂದು ನಮಸ್ಕರಿಸಿ ಹತ್ತುಸಾವಿರ ಚಿನ್ನದ ನಾಣ್ಯಗಳನ್ನು ಸಮರ್ಪಿಸಿ ತಾನು ಮಾಡಿದ ಮೂರು ನಾಟಕಗಳನ್ನು ತೋರಿಸಿ ಆಚಾರ್ಯರ ಮೆಚ್ಚಿಕೆಯನ್ನು ಪಡೆದನು ; ತನಗೆ ಸದೃಶನಾದ ಪುತ್ರನಾಗಬೇಕೆಂಬ ಅಭೀಷ್ಟವನ್ನು ಸೂಚಿಸಿದನು. ಆಚಾರ್ಯರು 'ಈ ಹಣವನ್ನು ಗೃಹಸ್ಥರಿಗೆ ದಾನ ಮಾಡು, ನಿನ್ನ ಅಭಿಲಾಷೆಯು ನೆರವೇರುವದು' ಎಂದು ಹೇಳಿಕಳುಹಿಸಿದರು. ಎಷ್ಟೋ ಜನ ವೇದಶಾಸ್ತ್ರಜ್ಞರು ಬಂದು ಆಚಾರ್ಯರಿಂದ ಮಹಾದರ್ಶನಗಳನ್ನು ಕಲಿತುಕೊಂಡರು (ಮಾ. ಶಂ. ೫-೧೦ ರಿಂದ ೩೨). ಈ ವೃತ್ತಾಂತವು ಮಿಕ್ಕ ಶಂಕರವಿಜಯಗಳಲ್ಲಿ ಕಾಣುವದಿಲ್ಲ.

## ಪ್ರಾಚೀನಶಂಕರವಿಜಯದಲ್ಲಿ

ಇತ್ಯಾಚಾರ್ಯಕುಲಂ ವಿಸೃಜ್ಯ ಜನನೀಮಾಪ್ತಾಷ್ಟಮಾಬ್ದಃ ಸ್ವಯಂ
ಪ್ರಾಪ್ತಃ ಸಂಯಮವದಾಜ್ಞಯಾ ವ್ಯರಚಯತ್ತನ್ತ್ರಂ ಕಿಮಪ್ಯಾಜ್ಞಸಾ ॥
ಚೂರ್ಣೀಮನ್ತ್ರಿಕಮಾನಿನಾಯ ಜನನೀಧಾಮ್ನಃ ಸ್ವರಾಜಃ ಪ್ರಭೋಃ
ಕಿಂ ವಾ ದುಷ್ಕರಮತ್ರ ಸರ್ವಜಗತೀಜಾಲಕ್ರಿಯಾಶೀಲಿನಃ ॥
—(ಗು. ರ. ೧೧ರ ಸುಷಮಾ)

'ಎಂಟನೆಯ ವರ್ಷವಾಗುತ್ತಲೂ ಆಚಾರ್ಯರು ಮನೆಯನ್ನು ಬಿಟ್ಟು ತಾಯಿಯ ಬಳಿಗೆ ಬಂದು ಸಂನ್ಯಾಸೇಚ್ಛೆಯಿಂದ ಒಂದು ತಂತ್ರವನ್ನು

ಮಾಡಿದರು. **ಚೂರ್ಣೀನದಿಯನ್ನು** ತಾಯಿಯ ಮನೆಯ ಹತ್ತಿರಕ್ಕೆ ಕರೆ ತಂದರು. ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವ ಪ್ರಭುವಿಗೆ ಯಾವದುತಾನೆ ದುಷ್ಕರವು ?" ಎಂದಿದೆ.

ಅಂತೂ ನದಿಯನ್ನು ತಿರುಗಿಸಿದ ಕಥೆಯು ಹಿಂದಿನಿಂದಲೂ ಇದೆಯೆಂದಾಯಿತು. ಈಗಲೂ ನದಿಗಳು ಆಗಿಂದಾಗ್ಗೆ ತಮ್ಮ ಪಾತ್ರವನ್ನು ಬದಲಾಯಿಸುತ್ತಿರುವದು ಕಾಣುತ್ತಲೇ ಇದೆ. ಶಂಕರರು ತಾಯಿಯ ಮನೆಗೆ ಬಂದ ಕಾಲಕ್ಕೆ ಹೀಗೆ ನದಿಯು ಪಾತ್ರವನ್ನು ಬದಲಾಯಿಸಿರಬಹುದು.

## ಅಗಸ್ತ್ಯರು ಶಂಕರರ ಆಯುಸ್ಸನ್ನು ಹೇಳಿದ್ದು

೫೫. ಆಚಾರ್ಯರು ಬಹುದಿವಸ ತಾಯಿಯ ಬಳಿಯಲ್ಲಿರಲಿಲ್ಲ. ಅವರು ಆದಷ್ಟು ಬೇಗನೆ ಸಂನ್ಯಾಸಾಶ್ರಮವನ್ನು ಸ್ವೀಕರಿಸುವದಕ್ಕೆ ಅಭಿಲಾಷೆಯನ್ನು ತೋರಿಸಿದರು. ಈ ಅಭಿಪ್ರಾಯವನ್ನು **ವ್ಯಾಸಾಚಲನೂ** (ವ್ಯಾ.ಶಂ. ೪–೪೨) **ಮಾಧವನೂ** (ಮಾಂ. ಶಂ. ೫–೩೪) ಒಂದು ಪದ್ಯದಿಂದ ವರ್ಣಿಸಿರುತ್ತಾರೆ ;

> ಸಾ ಶಙ್ಕರಸ್ಯ ಶರಣಂ ಸ ಚ ತಜ್ಜನನ್ಯಾ
>   ಹ್ಯನ್ಯೋಽನ್ಯಯೋಗವಿರಹಸ್ತ್ವನಯೋರಸಹ್ಯಃ ।
> ನೋ ವೋಢುಮಿಚ್ಛತಿ ತಥಾಪ್ಯಮನುಷ್ಯಭಾವಾ–
>   ನ್ಮೇರುಂ ಗತಃ ಕಿಮಭಿವಾಞ್ಛತಿ ದುಷ್ಪ್ರದೇಶಮ್ ॥

"ಶಂಕರನಿಗೆ ಆಕೆಯೇ ಶರಣು, ತಾಯಿಗೆ ಆತನೇ ಶರಣು ; ಅವರು ಒಬ್ಬರನ್ನೊಬ್ಬರು ಅಗಲಿರಲಾರದೆ ಇದ್ದರು. ಆದರೆ ಅಮಾನವಪುರುಷನಾದ ಆತನು ವಿವಾಹವಾಗಲು ಇಚ್ಛಿಸಲಿಲ್ಲ. ಮೇರುಪರ್ವತವನ್ನು ಸೇರಿದವನು ಕೀಳು ಪ್ರದೇಶಕ್ಕೆ ಇಳಿಯಲು ಇಚ್ಛಿಸುವನೆ ?" ಮಾಧವನು ಇದರ ಜೊತೆಗೆ ಬೇರೊಂದು ಕಲ್ಪನೆಯನ್ನೂ ಸೇರಿಸಿಕೊಂಡಿರುತ್ತಾನೆ. ತಾಯಿಯು ಮಗನಿಗೆ ಸತ್ಕುಲಪ್ರಸೂತಳಾದ ಕನ್ನಿಕೆಯನ್ನು ತಂದು ಮದುವೆಮಾಡಬೇಕೆಂದು ಸೂಚಿಸುತ್ತಿದ್ದಳು. ಒಮ್ಮೆ **ಉಪಮನ್ಯು, ದಧೀಚಿ, ಗೌತಮ, ತ್ರಿತಲ, ಅಗಸ್ತ್ಯ**–ಮುಂತಾದ ಮುನಿಗಳು ಕಲಿಯುಗದಲ್ಲಿ ಅವತರಿಸಿದ ಶಿವನನ್ನು ನೋಡುವದಕ್ಕೆ ಬಂದರು. ಶಂಕರನು ತಾಯಿಯೊಡನೆ ಅವರನ್ನು ಸತ್ಕರಿಸಿ ಸುಖಾಸನದಲ್ಲಿ ಕುಳ್ಳಿರಿಸಿದನು. ಅವರು ಆತನೊಡನೆ ಪರಮಾರ್ಥವಿಚಾರವನ್ನು ಮಾಡುತ್ತಿರುವಲ್ಲಿ ತಾಯಿಯು 'ಈ ಅದ್ಭುತಮಹಿಮೆಯ ಬಾಲಕನ ವೃತ್ತಾಂತವನ್ನು ನನಗೆ ಹೇಳಬಹುದಾದರೆ ತಿಳಿಸಬೇಕು' ಎಂದು ಕೇಳಿದಳು ; ಅವರು ಶಿವಗುರು ಈಶ್ವರನಲ್ಲಿ ಬೇಡಿ ಅಲ್ಪಾಯುಷ್ಕನಾದ ಸರ್ವಜ್ಞಪುತ್ರನನ್ನು ಕೇಳಿಕೊಂಡ ವೃತ್ತಾಂತವನ್ನು ತಿಳಿಸಿದರು. 'ನಿನ್ನ ಭಾಗ್ಯದಿಂದ ಶಿವನೇ ನಿನ್ನ ಮಗನಾಗಿ

ಹುಟ್ಟಿದ್ದಾನೆ, ಇನ್ನು ಅವನಿಗಿಂತ ಸರ್ವಜ್ಞನು ಎಲ್ಲಿರುತ್ತಾನೆ? ಎಂದು ಅಗಸ್ತ್ಯರು ಹೇಳಿದರು. 'ಇವನಿಗೆ ಆಯುಸ್ಸು ಎಷ್ಟು?' ಎಂದು ಆಕೆ ಕೇಳಲು ಅಗಸ್ತ್ಯರು 'ಎಂಟೂ ಮೇಲೆಂಟು, ಇವನ ಆಯುಸ್ಸು, ಕಾರಣಾಂತರದಿಂದ ಮತ್ತೂ ಹದಿನಾರು ವರ್ಷಗಳು ಬದುಕಿರುತ್ತಾನೆ' ಎಂದರು. ಋಷಿಗಳು ಹೊರಟುಹೋದರು. ಇದನ್ನು ಕೇಳಿ ಆಕೆಯು ದುಃಖದಿಂದ ಹಲುಬುತ್ತಿರಲು ಶಂಕರರು 'ತಾಯೆ, ಏತಕ್ಕೆ ನಿಷ್ಕಾರಣವಾಗಿ ದುಃಖಪಡುತ್ತಿರುವೆ? ಈ ದೇಹವೇನು ಸ್ಥಿರವೆ? ಇಂಥ ಎಷ್ಟು ಜನ ಮಕ್ಕಳನ್ನು ನೀನು ಈವರೆಗೆ ಅನುಭವಿಸಿದ್ದಾಗಿದೆ? ಈಗ ಅವರೆಲ್ಲಿದ್ದಾರೆ? ನೀನೆಲ್ಲಿ, ನಾನೆಲ್ಲಿ? ಸಂಸಾರದಲ್ಲಿ ಜನರು ಕೂಡುವದು ಹಾದಿಹೋಕರು ಒಂದು ಕಡೆ ಸೇರಿ ಅಗಲುವಂತೆ. ಆದ್ದರಿಂದ ನಾನು ಚತುರ್ಥಾಶ್ರಮವನ್ನೇ ಸ್ವೀಕಾರಮಾಡಿ ಈ ಸಂಸಾರಬಂಧದಿಂದ ಬಿಡುಗಡೆಯಾಗುವದಕ್ಕೆ ಪ್ರಯತ್ನಿಸುವೆನು' ಎಂದು ಸಮಾಧಾನೋಕ್ತಿಗಳನ್ನು ಹೇಳಿದರು. ಈ ಕರ್ಣಕಠೋರವಾದ ಮಾತನ್ನು ಕೇಳಿ, ಆಕೆಗೆ ಇನ್ನಷ್ಟು ದುಃಖವಾಯಿತು. 'ಅಪ್ಪ, ಈ ಬುದ್ಧಿಯನ್ನು ಬಿಡು. ಮೊದಲು ಗೃಹಸ್ಥನಾಗಿ ಯಜ್ಞಾದಿಗಳನ್ನು ಮಾಡಿ ಆಮೇಲೆ ಯತಿಯಾಗು; ಏಕಪುತ್ರಳಾದ ನಾನು ನಿನ್ನನ್ನು ಬಿಟ್ಟು ಹೇಗೆ ಇರಲಿ? ನೀನೂ ಬಿಟ್ಟುಹೋದರೆ ನನ್ನ ಔರ್ಧ್ವದೇಹಿಕಕರ್ಮವನ್ನು ಮಾಡುವವರು ಯಾರು? ನಿನ್ನ ಹೃದಯವು ಏಕೆ ಕರಗದೆ ಇದೆ? ನನ್ನಲ್ಲಿ ದಯೆಯಿಡು' ಎಂದು ಬಗೆಬಗೆಯಾಗಿ ಹಲುಬಿದಳು. ಅದನ್ನು ಕಂಡು ಶಂಕರರು 'ಸಂನ್ಯಾಸಕ್ಕೆ ತಾಯಿಯ ಅನುಜ್ಞೆಯೇನೋ ಬೇಕು. ಇದಕ್ಕೇನುಮಾಡಲಿ?' ಎಂದು ಯೋಚಿಸುವದಕ್ಕೆ ತೊಡಗಿದರು (ಮಾ. ಶಂ. ೫-೩೬ರಿಂದ ೫೯).

ಈ ವಿವರವು ವ್ಯಾಸಾಚಲೀಯದಲ್ಲಾಗಲಿ, ಚಿದ್ವಿಲಾಸೀಯದಲ್ಲಾಗಲಿ ಇಲ್ಲ. ಇಲ್ಲಿ ಪರಿಶೀಲಿಸಿ ನೋಡಬೇಕಾದ ವಿಷಯಗಳು ಯಾವವೆಂಕರೆ :

(೧) ಶಂಕರರಿಗೆ ಬೇಗನೆ ವಿವಾಹಮಾಡಿಬಿಡಬೇಕೆಂದು ತಾಯಿ ಯೋಚಿಸಿಕೊಂಡಳು ಎಂಬ ಮಾತು ಕೇರಳೀಯರ ಆಚಾರಕ್ಕೆ ವಿರುದ್ಧವಾಗಿದೆ. ಏಕೆಂದರೆ ಆ ದೇಶದಲ್ಲಿ ಬಾಲವಿವಾಹದ ಪದ್ಧತಿಯೇ ಇಲ್ಲ. ವಿದ್ಯಾಧಿರಾಜನ ಮಗನಾದ ಶಿವಗುರುವು ಗುರುಕುಲವಾಸವನ್ನು ಮುಗಿಸಿಕೊಂಡು ಹಿಂತಿರುಗುವ ಸಮಯದಲ್ಲಿ ಗುರುವು 'ನೀನು ಹೋಗಿ ಮದುವೆಮಾಡಿಕೊಂಡು ನಿನ್ನ ತಂದೆತಾಯಿಗಳ ಅಭಿಲಾಷೆಯನ್ನು ಪರಿಪೂರ್ತಿಮಾಡು' ಎಂದು (ಮಾ. ಶಂ. ೨-೮ರಿಂದ ೧೪) ಹೇಳಿದಾಗ ಶಿವಗುರುವು ಸಂನ್ಯಾಸಾಶ್ರಮವನ್ನು ತೆಗೆದುಕೊಳ್ಳುವ ಕುತೂಹಲವನ್ನು ತೋರಿಸಿದನೆಂದು ಕವಿಯು ಹೀಗೆಯೇ ವರ್ಣಿಸುತ್ತಾನೆ. ಮತ್ತೆ ಶಿವಗುರುವು ಮನೆಗೆ ಬರುತ್ತಲೂ ಅನೇಕರು ನಾನು ಮುಂದು, ತಾನು ಮುಂದೆಂದು ಕನ್ಯಾದಾನಕ್ಕೆ ಹಾತುವರಿದರೆಂದು ಹೇಳಿ ಶಿವಗುರುವಿನ ವಿವಾಹಕ್ಕೆ (ಮಾ. ಶಂ. ೨-೨೭

ರಿಂದ ೩೨) ಅವತರಣಿಕೆಯನ್ನು ಹಾಕಿರುತ್ತಾನೆ. ಈ ವಿವರವು ವ್ಯಾಸಾಚಲೀಯ ದಲ್ಲಿಯೂ ಇದೆ. ಇವರಿಬ್ಬರೂ ಕೇರಳೀಯರು ಪದ್ಧತಿಯನ್ನೇಕೆ ಲೆಕ್ಕಕ್ಕೆ ತೆಗೆದು ಕೊಳ್ಳಲಿಲ್ಲವೆಂಬುದು ಗೊತ್ತಾಗುವಂತಿಲ್ಲ. ಆಚಾರ್ಯರ ವಿವಾಹವನ್ನು ಶಿವ ಗುರುವೇ ಯೋಚನೆಮಾಡಿದ್ದನೆಂದೂ ಆಚಾರ್ಯರು 'ಅಯ್ಯೋ! ನನ್ನ ತತ್ತ್ವವು ಇವನಿಗೆ ತಿಳಿಯದು ; ನನ್ನ ಆಯುಸ್ಸು ಸ್ವಲ್ಪವೇ ಉಳಿದಿದೆ ಎಂಬುದೂ ತಿಳಿಯ ದಲ್ಲ! ಏನುಮಾಡಲಿ!' ಎಂದು ಯೋಚಿಸಿಕೊಂಡರು' (ಚಿ.ಶಂ. ೭-೩೪ರಿಂದ ೪೬) ಎಂದು ಚಿದ್ವಿಲಾಸೀಯದಲ್ಲಿ ಬರೆದಿರುವದು ಇನ್ನೂ ಸಾಹಸ. ಏಕೆಂದರೆ ಆಗ ಅವರಿಗೆ ಇನ್ನೂ ಐದು ವರ್ಷವಾಗಿತ್ತು !

(೨) ಋಷಿಗಳು ಬಂದಾಗ 'ಇವನ ಆಯುಸ್ಸು ಎಷ್ಟು ?'– ಎಂದು ತಾಯಿಯು ಕೇಳಿದಂತೆ ಮಾಧವನು ವರ್ಣಿಸಿರುತ್ತಾನೆ. ಆದರೆ ಮಗು ಹುಟ್ಟಿದಾಗ ಶಿವಗುರು ಜಾತಕವನ್ನು ಬರೆದು ಜ್ಯೋತಿಷ್ಕರನ್ನು ಆಯುಸ್ಸಿನ ವಿಚಾರದಲ್ಲಿ ಕೇಳಲೂ ಇಲ್ಲ, ಅವರು ಹೇಳಲೂ ಇಲ್ಲ ; ಅಶುಭವಾದದ್ದನ್ನು ತಿಳಿದರೂ ಬಲ್ಲವರು ಪ್ರಾಯಶಃ ಹೇಳುವದಿಲ್ಲ (ನಾಪೃಚ್ಛಿ ಜೀವಿತಮನೇನ ಚ ತೈರ್ನ ಚೋಕ್ತಂ ಪ್ರಾಯೋ ವಿದನ್ನಪಿ ನ ವಕ್ತ್ಯಶುಭಂ ಶುಭಜ್ಞಃ || ಮಾ.ಶಂ. ೨–೭೦, ವ್ಯಾ.ಶಂ. ೪–೨೬) ಎಂದು ಮಾಧವವ್ಯಾಸಾಚಲರಿಬ್ಬರೂ ಹೇಳಿರುತ್ತಾರೆ. ಅದ್ಭುತಕಥಾ ಪ್ರಿಯನಾದ ಮಾಧವನು ತಾಯಿಯು ಅಗಸ್ತ್ಯರನ್ನು ಮಗುವಿನ ಆಯುಸ್ಸನ್ನು ಕೇಳಿದಳೆಂದು ಇಲ್ಲಿ ಬರೆದವನು ಹಿಂದೆ ಏಕೆ ಜೋಯಿಸರನ್ನು ಕೇಳಿರಲಿಲ್ಲವೆಂಬು ದನ್ನು ತಿಳಿಸಲಿಲ್ಲ.

## ಆತುರಸಂನ್ಯಾಸದ ಸಂದರ್ಭ

೫೬. ಶಂಕರರು ಒಮ್ಮೆ ಸ್ನಾನಕ್ಕಾಗಿ ಹೋಗಿ ನೀರಿನಲ್ಲಿ ಮುಳುಗುವ ಹೊತ್ತಿಗೆ ಒಂದು ಮೊಸಳೆ ಅವರ ಕಾಲನ್ನು ಹಿಡಿದುಕೊಂಡಿತು. ಆಗ ಹುಡುಗನು 'ಅಮ್ಮ, ಮೊಸಳೆ ಕಾಲನ್ನು ಎಳೆಯುತ್ತಿದೆ'' ಎಂದು ಗಟ್ಟಿಯಾಗಿ ಕಿರಿಚಿಕೊಂ ಡನು. ಮನೆಯಲ್ಲಿದ್ದ ತಾಯಿ ಮಗನ ಆರ್ತಧ್ವನಿಯನ್ನು ಕೇಳಿ ಓಡಿಬಂದು ಎಲ್ಲ ವನ್ನೂ ತಿಳಿದು 'ಅಯ್ಯೋ! ನನಗೆ ಕೊನೆಯ ಗತಿಯಾಗಿರುವ ಈ ಏಕಪುತ್ರನು ಸಾಯುತ್ತಾನಲ್ಲ!' ಎಂದು ಚಿಂತಿಸುತ್ತಿದ್ದಳು. 'ಅಮ್ಮ, ನೀನು ನನ್ನ ಸಂನ್ಯಾಸಕ್ಕೆ ಅನುಮತಿಕೊಟ್ಟರೆ ಈ ಪ್ರಾಣಿ ನನ್ನನ್ನು ಬಿಟ್ಟರೂ ಬಿಟ್ಟೀತು. ನೀನು ಅಪ್ಪಣೆ ಕೊಡುವದಾದರೆ ಸಂನ್ಯಾಸಸಂಕಲ್ಪವನ್ನು ಮಾಡುವೆನು' ಎಂದರು. ಆಗ ಇವನು ಹೇಗೂ ಸಾಯುತ್ತಾನೆ; ಒಂದುವೇಳೆ ಹೀಗೆ ಬದುಕಿದರೆ ಎಂದಾದರೂ ನನಗೆ ಇವನ ದರ್ಶನವಾದರೂ ಆಗಬಹುದು' ಎಂದು ಯೋಚಿಸಿಕೊಂಡು ಸಂಕಲ್ಪಕ್ಕೆ ಅನುಮತಿಯನ್ನು ಕೊಟ್ಟಳು' (ಮಾ. ಶಂ. ೫–೬೧ರಿಂದ ೬೭, ವ್ಯಾ. ಶಂ. ೪೭– ೪೪ರಿಂದ ೪೮) ಎಂದು ಮಾಧವೀಯವ್ಯಾಸಾಚಲೀಯಗಳಲ್ಲಿ ವರ್ಣಿಸಿದೆ.

**ಚಿದ್ವಿಲಾಸೀಯದಲ್ಲಿ** ಕಥೆಯು ಹೀಗೆಯೇ ಇದೆ. ಅವರೆ ಆಚಾರ್ಯರು ಸಂನ್ಯಾಸಸಂಕಲ್ಪವನ್ನು ಮಾಡಿದಕೂಡಲೆ ಮೊಸಳೆಯು ಶಂಕರರನ್ನು ಬಿಟ್ಟು ಗಂಧರ್ವಾಕಾರವನ್ನು ಧರಿಸಿ ಅವರನ್ನು ನಮಸ್ಕರಿಸಿ 'ನಾನು ಪುಷ್ಪರಥನೆಂಬ ಗಂಧರ್ವನು. ಬ್ರಹ್ಮನ ಆಜ್ಞೆಯನ್ನು ಉಲ್ಲಂಘಿಸಿದ ಕಾರಣದಿಂದ ಆತನು ಮೊಸಳೆಯಾಗೆಂದು ಶಪಿಸಿದನು. ಮತ್ತೆ ನಾನು ಅವನನ್ನು ಬಹುನಾಗಿ ಪ್ರಾರ್ಥಿಸಿ ಕೊಂಡಕೂಡಲೆ 'ಶಿವನು ಶಂಕರಾಚಾರ್ಯನಾಗಿ ಅವತರಿಸುತ್ತಾನೆ; ಆತನ ಪಾದ ಧೂಳಿಯ ಸೋಂಕಿನಿಂದ ನಿನಗೆ ಶಾಪಮೋಕ್ಷವಾಗುವದು' ಎಂದು ಹೇಳಿದ್ದನು. ಅದರಂತೆ ಈ ದಿನ ತಮ್ಮ ಅನುಗ್ರಹದಿಂದ ನಾನು ಕೃತಾರ್ಥನಾದೆನು ; ಅನುಜ್ಞೆ ಯನ್ನು ಕೊಟ್ಟರೆ ಸ್ವರ್ಗಕ್ಕೆ ಹೋಗುವೆನು ಎಂದು ಹೇಳಿ ಹೊರಟುಹೋದನು. ದಡದಲ್ಲಿ ನಿಂತಿದ್ದ ಆರ್ಯಾಂಬೆಗೆ ಇದನ್ನೆಲ್ಲ ನೋಡಿ ಆಶ್ಚರ್ಯವೂ ಸಂತೋಷವೂ ಆಯಿತು ; ಆಕೆಯು ಯಾವ ಮಾತನ್ನೂ ಆಡಲಾರದೆ ಇದ್ದಳು– ಎಂದು (ಚಿ. ಶಂ. ೮–೩೨ರಿಂದ ೩೨) ಹೆಚ್ಚಿಗೆಯ ವಿಷಯವೊಂದನ್ನು ತಿಳಿಸಿದೆ. ಈ ವಿಚಾರವು ಚಿದ್ವಿಲಾಸರ ಕಲ್ಪನೆಯಲ್ಲ, ಹಿಂದಿನವರೇ ಹೀಗೆಂದು ಆಗಲೆ ಹೇಳಿದ್ದರು. **ಪ್ರಾಚೀನಶಂಕರವಿಜಯಕಾರರು** ಹಿಂದೆ (ಪು. ೫೯) ನಾವು ಉದಾಹರಿಸಿದ ಶ್ಲೋಕದಲ್ಲಿ 'ಸಂಯಮವಾಞ್ಛಯಾ ವ್ಯರಚಯತ್ತನ್ತ್ರಂ ಕಿಮಪ್ಯಞ್ಜಸಾ' ಸಂನ್ಯಾಸೇಚ್ಛೆಯಿಂದ ಒಂದಾನೊಂದು ಸರಿಯಾದ ತಂತ್ರವನ್ನು ಹೂಡಿದರು– ಎಂದು ಹೇಳಿದ್ದಾರಷ್ಟೆ ? ಅಲ್ಲಿ ಅವರು ಅದರ ವಿವರವನ್ನು ಮತ್ತೊಂದು ಶ್ಲೋಕ ದಲ್ಲಿ ಹೀಗೆ ಕೊಟ್ಟಿರುತ್ತಾರೆ :

ಸ್ನಾನಾಯೇವ ಗತೋऽವಗಾಹನವಿಧೌ ಗ್ರಾಹಗ್ರಹಾರ್ತಿಂ ಪದೇ
ಮಾತ್ರೇ ಕಾಞ್ಚಿದಿಪೋಪದರ್ಶ್ಯ ಮಧುರಂ ಲಬ್ಧ್ವಾಭ್ಯನುಜ್ಞಾಂ ತತಃ ||
ಪ್ರೈಷೋಚ್ಚಾರಣಪೂರ್ವಕಂ ಸನಿಯಮಂ ಜಗ್ರಾಹ ದೃಷ್ಟಾನ್ತರೋ
ನಕ್ರಃ ಸೋऽಪ್ಯಮುಚತ್ (?) ಸ್ವಶಾಪವಿಕೃತಿಂ ಪಾದಾವಮರ್ಶಾತ್ಪ್ರಭೋಃ ||

ಸ್ನಾನಕ್ಕೋ ಎಂಬಂತೆ ಹೋಗಿ ಮುಳುಗುತ್ತಿರುವಲ್ಲಿ ಮೊಸಳೆಯು ಕಾಲು ಹಿಡಿದ ಸಂಕಟವೊಂದನ್ನು ತಾಯಿಗೆ ತೋರಿಸಿ ಆಕೆಯ ಅನುಜ್ಞೆಯನ್ನು ಮಧುರ ವಾಗಿಯೇ ಪಡೆದು ಅದೇ ಸಂಧಿಯನ್ನುಪಯೋಗಿಸಿಕೊಂಡು ಪ್ರೈಷೋಚ್ಚಾರ ಪೂರ್ವಕವಾಗಿ ಸಂನ್ಯಾಸವನ್ನು ಗ್ರಹಣಮಾಡಿದರು. ಮೊಸಳೆಯೂ ಆ ಪ್ರಭು ವಿನ ಪಾದಸ್ಪರ್ಶದಿಂದ ಶಾಪದಿಂದಾಗಿದ್ದ ತನ್ನ ವೇಷವನ್ನು ಬಿಟ್ಟಿತು– ಎಂದು ಶ್ಲೋಕದ ಅರ್ಥ.

**ಪೂರ್ಣಾ**–ಅಥವಾ **ಚೂರ್ಣೀ**–ನದಿಯಲ್ಲಿ ಮೊಸಳೆಗಳಿರುವದೇನೋ ನಿಜ. ಶೃಂಗೇರಿಯ ಜಗದ್ಗುರು **ಶ್ರೀಸಚ್ಚಿದಾನಂದಶಿವಾಭಿನವನೃಸಿಂಹ ಭಾರತೀಸ್ವಾಮಿಗಳವರಿಂದ** ಕಾಲಟಿಯಲ್ಲಿ ಶಂಕರಪ್ರತಿಷ್ಠೆಯಾದ ಕಾಲಕ್ಕೆ ಈ

ಗ್ರಂಥಕರ್ತನೂ ಅಲ್ಲಿಗೆ ಹೋಗಿದ್ದನು. ಬೇಸಗೆಯ ಕಾಲವಾಗಿದ್ದರೂ ಆಗಲೂ ಪೂರ್ಣಾನದಿಯಲ್ಲಿ ದೋಣಿಗಳು ಓಡಾಡುತ್ತಿದ್ದವು. ಶಿವಗಂಗಾಮಠದ ಸ್ವಾಮಿಗಳ ಬೋಯಿಯೊಬ್ಬನನ್ನು ಮೊಸಳೆ ಹಿಡಿಯಿತೆಂಬ ಸುದ್ದಿ ಹುಟ್ಟಿ ಜನರಲ್ಲಿ ಕಲಕಲವೆದ್ದದ್ದನ್ನು ಪ್ರತ್ಯಕ್ಷವಾಗಿ ಕಂಡದ್ದಾಯಿತು. ಆದ್ದರಿಂದ ಶಂಕರರ ಕಾಲನ್ನು ಮೊಸಳೆ ಹಿಡಿದದ್ದು ಅಸಂಭವವಲ್ಲ. ಅವರು ಇನ್ನೂ ಎಂಟನೆಯ ವರ್ಷದವರಾಗಿದ್ದಾಗಲೆ ಈ ಘಟನೆಯು ನಡೆಯಿತೆಂಬುದಕ್ಕೆ ಎಲ್ಲಾ ಶಂಕರವಿಜಯಗಳ ಸಂಮತಿಯೂ ಇದೆ. ವಿರಕ್ತರಾದವರು ಬ್ರಹ್ಮಚರ್ಯದಿಂದಲೇ ಪಾರಿವ್ರಾಜ್ಯವನ್ನು ಸ್ವೀಕರಿಸಬಹುದೆಂಬುದಕ್ಕೆ ಜಾಬಾಲಶ್ರುತಿಯ ಪ್ರಾಮಾಣ್ಯವನ್ನು ಆಚಾರ್ಯರು ತಮ್ಮ ಭಾಷ್ಯಗಳಲ್ಲಿ ಅನೇಕ ಕಡೆಗಳಲ್ಲಿ ಉದಾಹರಿಸಿಯೂ ಇರುತ್ತಾರೆ. ಆ ಮಹಾನುಭಾವರಿಗೆ ಬ್ರಹ್ಮಚರ್ಯದಲ್ಲಿಯೇ ಅಂಥ ವೈರಾಗ್ಯವು ಬಂತೆಂಬುದೂ ಅದ್ಭುತಘಟನೆಯಲ್ಲ. ಅದು ಎಲ್ಲರಿಗೂ ಸಾಮಾನ್ಯವಾಗಿ ಬರತಕ್ಕದ್ದಲ್ಲವೆಂಬುದೇನೋ ನಿಜ.

## ಸಂನ್ಯಾಸಾಶ್ರಮವಿಷಯಕ್ಕೆ ಶಂಕಾಸಮಾಧಾನಗಳು

೫೭. ಸಂನ್ಯಾಸಾಶ್ರಮವು ಶಾಸ್ತ್ರವಿಹಿತವೆ? ಶಾಸ್ತ್ರವಿಹಿತವಾದರೂ ಕಲಿವರ್ಜ್ಯವೆಂದು ಕೆಲವು ಸ್ಮೃತಿಗಳಲ್ಲಿ ಹೇಳಿಲ್ಲವೆ? ಒಂದು ವೇಳೆ ಅದು ಶಾಸ್ತ್ರಸಂಮತವೆಂದು ಹೇಗೋ ಸಾಧಿಸಿದರೂ ಈಗಿನ ಕಾಲದ ದೃಷ್ಟಿಯಿಂದ ಪರಿಶೀಲಿಸಿದರೆ ವ್ಯವಹಾರದಲ್ಲಿ ತೊಡಗಿ ಲೋಕೋದ್ಧಾರವನ್ನು ಮಾಡುವದನ್ನು ಬಿಟ್ಟು ಪ್ರಪಂಚವ್ಯವಹಾರಕ್ಕೆ ಅಂಜಿ ಕರ್ಮಸಂನ್ಯಾಸವನ್ನು ಮಾಡಿ ಭಿಕ್ಷಾಚರ್ಯೆಗೆ ಪ್ರೋತ್ಸಾಹವನ್ನು ಕೊಡುವದು ಸಾಮಾಜಿಕನೀತಿಗೆ ಒಪ್ಪಾದೀತೆ? ಸಾಧುಸಂನ್ಯಾಸಿಗಳೆಂಬ ಹೆಸರಿನಿಂದ ಸೋಮಾರಿಗಳು ಹೆಚ್ಚುವ ಸಮಾಜದಲ್ಲಿ ಅಭ್ಯುದಯಕ್ಕೆ ಕುಂದು ಬರುವದಿಲ್ಲವೆ? ಇನ್ನೂ ವಿವೇಕವು ಬಲಿತುಕೊಳ್ಳದಿರುವ ಬಾಲ್ಯದಲ್ಲಿಯೇ ಸಂನ್ಯಾಸವನ್ನು ಗ್ರಹಣಮಾಡುವ ಪದ್ಧತಿಯು ಒಪ್ಪತಕ್ಕದ್ದೆ ?—ಎಂದು ಮುಂತಾದ ಎಷ್ಟೋ ಶಂಕೆಗಳು ಈ ಸಂದರ್ಭದಲ್ಲಿ ಓದುಗರ ಮನದಲ್ಲಿ ಮೊಳೆತುಕೊಳ್ಳುವದು ಸ್ವಾಭಾವಿಕವಾಗಿದೆ. ಇದಕ್ಕೆಲ್ಲ ವಿವರವಾಗಿ ಉತ್ತರವನ್ನು ಕೊಡುವದು ಪ್ರಕೃತಗ್ರಂಥಕ್ಕೆ ಸಂಬಂಧಿಸಿದ್ದಲ್ಲವಾದರೂ ಈ ವಿಷಯದಲ್ಲಿ ನಮ್ಮ ಅಭಿಪ್ರಾಯದ ರೂಪರೇಷೆಯನ್ನಾದರೂ ಇಲ್ಲಿ ಸ್ವಲ್ಪಮಟ್ಟಿಗೆ ಒಪ್ಪಿಸುವದು ಅವಶ್ಯವೆಂದು ತೋರಿದ್ದರಿಂದ ಈ ಶಂಕೆಗಳನ್ನು ಇಲ್ಲಿ ಪರಾಮರ್ಶಿಸಿರುತ್ತೇವೆ.

**ಸಂನ್ಯಾಸಾಶ್ರಮವು ಶಾಸ್ತ್ರವಿಹಿತವೆ ?** ಕಲಿವರ್ಜ್ಯವಲ್ಲವೆ? ಎಂಬ ಪ್ರಶ್ನೆಗಳನ್ನು ಮುಂದೆ ಶಂಕರಮಂಡನಮಿಶ್ರಸಂವಾದದ ಪ್ರಕರಣದಲ್ಲಿ ಚರ್ಚಿಸುವೆವು. ಅದು ಶಾಸ್ತ್ರಸಂಮತವೆಂಬುದೇ ನಮ್ಮ ಅಭಿಪ್ರಾಯವೆಂಬುದಷ್ಟನ್ನು ಈಗ್ಗೆ

ಹೇಳಿಟ್ಟಿರುತ್ತೇವೆ. ಪ್ರಪಂಚವ್ಯವಹಾರಕ್ಕೆ ಅಂಜಿಕೊಂಡು ಸಂನ್ಯಾಸಮಾಡಬಹುದೆ ?–ಎಂಬ ಪ್ರಶ್ನೆಗೆ ನಮ್ಮ ಉತ್ತರವಿದು. ಪ್ರಪಂಚದ ವ್ಯವಹಾರವೆಂದು ನಾವು ನಂಬಿಕೊಂಡಿರುವದಕ್ಕಿಂತಲೂ ಉತ್ತಮವಾದ ವ್ಯವಹಾರವೊಂದಿದ್ದರೆ ಈ ಸಂಸಾರವ್ಯವಹಾರದ ನಿಃಸಾರತೆಯನ್ನು ಕಂಡವರು ಇದನ್ನು ತ್ಯಜಿಸಿಯೇ ತೀರುವರು. ತಮ್ಮ ವರ್ತನೆಯು ಮಿಕ್ಕವರಿಗೆ ಒಪ್ಪಾಗಲಿ ಬಿಡಲಿ, ವಿರಕ್ತರಾದವರು ಮಿಕ್ಕವರ ಒಪ್ಪಿಗೆಯನ್ನು ಕಾಯುತ್ತಾ ತಮ್ಮ ಧ್ಯೇಯವನ್ನು ಎಂದಿಗೂ ಕಡೆಗಣಿಸಲಾರರೆಂಬುದು ಸ್ಪಷ್ಟವಾಗಿದೆ.

ಲೋಕೋದ್ಧಾರದ ವಿಷಯವನ್ನು ಮನಸ್ಸಿಗೆ ತಂದುಕೊಳ್ಳದೆ, ತಮ್ಮ ತಮ್ಮ ಕುಟುಂಬದ ಪೋಷಣೆಯ ಯೋಜನೆಯಲ್ಲಿಯೇ ಮಗ್ನರಾಗಿರುವವರಿಗಿಂತ ವಿರಕ್ತರಾಗಿ "ವಸುಧೈವ ಕುಟುಂಬಕಮ್" ಭೂಮಂಡಲದವರೆಲ್ಲ ನಮ್ಮ ಕುಟುಂಬದವರೇ ಎಂಬ ಉದಾರಚರಿತರಿಗೇ ಲೋಕೋಪಕಾರವನ್ನು ಮಾಡುವದಕ್ಕೆ ಹೆಚ್ಚು ಅವಕಾಶವಿರುತ್ತದೆ ಎಂಬುದನ್ನು ವಿಚಾರಶೀಲರೆಲ್ಲರೂ ಒಪ್ಪಬೇಕು. ಧನಸಂಪಾದನೆಯನ್ನು ಮಾಡುವದನ್ನು ಬಿಟ್ಟು ಭಿಕ್ಷಾಚರ್ಯೆಗೆ ಪ್ರೋತ್ಸಾಹವನ್ನು ಕೊಡಬಹುದೆ ?– ಎಂಬ ಆಕ್ಷೇಪವು ಸಂಸಾರದಲ್ಲಿ ವಿರಕ್ತರಾದವರಿಗೆ ಸರ್ವಥಾ ಅನ್ವಯಿಸತಕ್ಕದ್ದಲ್ಲ. ಯಾರು ಸ್ವಾರ್ಥವನ್ನು ಸ್ವಲ್ಪವೂ ಲೆಕ್ಕಿಸದೆ ಸಮಾಜದ ಹಿತಕ್ಕಾಗಿಯೇ ದುಡಿಯುತ್ತಿರುವರೋ ಅಂಥವರು ಭಿಕ್ಷಾಮಾತ್ರದಿಂದ ಜೀವನಮಾಡುತ್ತಿದ್ದರೆ ಅಷ್ಟನ್ನಾದರೂ ಅವರಿಗೆ ಒದಗಿಸಿಕೊಡುವದು ಸಮಾಜದ ಕರ್ತವ್ಯವೇ ಆಗಿರುತ್ತದೆ. ಅಂಥ ಮಹನೀಯರು ಭಿಕ್ಷಾಚರ್ಯೆಯು ಅನಾಯಾಸದ ವೃತ್ತಿಯೆಂದೇನೂ ಅದನ್ನು ಅನುಸರಿಸಿರುವದಿಲ್ಲ. ಭಿಕ್ಷೆಯು ಸಿಕ್ಕಲಿ, ಸಿಕ್ಕದಿರಲಿ, ನಾಲಗೆಯ ಸವಿಗೆ ಜೋಲುಬೀಳದೆ ಸಿಕ್ಕಿದಷ್ಟು ಅಲ್ಪ ಆಹಾರದಿಂದಲೇ ತೃಪ್ತರಾಗಿ ತಮ್ಮ ಉದಾತ್ತಧ್ಯೇಯವನ್ನೇ ಚಿಂತಿಸುತ್ತಾ ಜನರನ್ನು ಸರಿಯಾದ ಮಾರ್ಗಕ್ಕೆ ತರುವದಕ್ಕೆ ಹವಣಿಸುವವರನ್ನು ಭಿಕ್ಷಾವೃತ್ತಿಯ ಪ್ರೋತ್ಸಾಹಕರೆಂದು ಭಾವಿಸುವದಕ್ಕೇನೂ ಕಾರಣವಿರುವದಿಲ್ಲ. ಲೋಕದೃಷ್ಟಿಯಿಂದ ಮತ್ತೊಬ್ಬರಿಗೆ ಯಾವ ಐಹಿಕಪ್ರಯೋಜನಗಳನ್ನೂ ಉಂಟುಮಾಡದೆ ಇದ್ದರೂ ಏಕಾಂತವಾಸವನ್ನು ಮಾಡುತ್ತಾ ಪರಮಪುರುಷಾರ್ಥಕ್ಕೆಂದೇ ಜೀವನವನ್ನು ಮೀಸಲಾಗಿಡುವವರುಕೂಡ ತಮ್ಮ ಶಾಂತಿದಾಂತಿ ಮುಂತಾದವುಗಳಿಂದ ಈ ಲೋಕಕ್ಕೆ ಮೇಲುಪಜ್ಙ್ಞ ಯಾಗಿರುವದರಿಂದ ಅಂಥವರನ್ನು ಭಿಕ್ಷಾವೃತ್ತಿಯ ಪ್ರೋತ್ಸಾಹಕರೆಂದು ಹಳಿಯುವದು ಎಂದಿಗೂ ಯುಕ್ತವೆನಿಸಲಾರದು. ಇನ್ನು ಪರಮಾರ್ಥಕ್ಕೇ ಜೀವನವನ್ನು ಧಾರೆಯೆರೆದಿರುವ ಮಹಾತ್ಮರ ಮನಸ್ಸಿನ ಮಟ್ಟವನ್ನು ಅರಿತುಕೊಳ್ಳಲಾರದೆ ಅವರ ಬಾಹ್ಯವೇಷವೃತ್ತ್ಯಾದಿಗಳನ್ನು ಮಾತ್ರ ಅನುಕರಿಸುವ ಸಾಧುಸಂನ್ಯಾಸಿಗಳು ಹೆಚ್ಚುವದು ಸಮಾಜಕ್ಕೆ ಒಳ್ಳೆಯದಲ್ಲವೆಂಬ ಮಾತಿಗೆ ಎರಡಿಲ್ಲ. ಬರಿಯ ವೇಷದ ಕಪಟಸಾಧುಸಂತರಿಗೆ ಗೌರವ

ವನ್ನು ಕೊಡದೆ ಇರುವದೇ ಸಮಾಜದ ಕರ್ತವ್ಯವೆಂಬುದನ್ನು ಹೇಳಬೇಕಾದದ್ದೇ ಇಲ್ಲ. ಸಮಾಜವು ತನ್ನನ್ನು ಅನಾದರದಿಂದ ಕಾಣುತ್ತಿದೆ ಎಂಬುದನ್ನು ಕಂಡಕೂಡಲೆ ಅಂಥವರು ಅವಶ್ಯವಾಗಿ ತಮ್ಮ ವೇಷವನ್ನು ಬದಲಿಸಬೇಕಾಗುವದು. ಸರಕಾರದವರು ಜನರಿಗೆ ಸರಿಯಾದ ಜೀವನಮಾರ್ಗವನ್ನು ಕಲ್ಪಿಸಿ ಅವರವರ ಯೋಗ್ಯತೆಗೆ ತಕ್ಕಂತೆ ಕಾಯಿಕಮಾನಸಿಕರೂಪದ ಉದ್ಯೋಗಗಳನ್ನು ಏರ್ಪಡಿಸಿಕೊಟ್ಟರೆ ವೇಷದ ಸಾಧುಗಳ ಸಂಖ್ಯೆ ಅವಶ್ಯವಾಗಿ ಕಡಿಮೆಯಾಗುವದು ಅನಧಿಕಾರಿಗಳು ಸಂನ್ಯಾಸವನ್ನು ಸ್ವೀಕರಿಸಿದರೆ ಅವರನ್ನು ದಂಡಿಸಿ ಬಿಟ್ಟಿಯ ಕೆಲಸಕ್ಕೆ ರಾಜನು ವಿನಿಯೋಗಿಸಬೇಕೆಂದು ನಮ್ಮ ಸ್ಮೃತಿಗಳಲ್ಲಿಯೂ ಹೇಳಿರುತ್ತದೆ. ಆದ್ದರಿಂದ ಸೋಮಾರಿಗಳ ಸಂಖ್ಯೆ ಬೆಳೆಯದಂತೆ ನೋಡಿಕೊಳ್ಳುವ ಭಾರವು ತಮ್ಮ ತಲೆಯಮೇಲೆ ಬಿದ್ದಿದೆ ಎಂಬುದನ್ನು ಮರೆತು ನಿಜವಾದ ವಿರಕ್ತರಾದ ಸಾಧುಸಂನ್ಯಾಸಿಗಳನ್ನು ಹೀಯಾಳಿಸುವದೂ ಅವರ ವರ್ತನೆಗೆ ಅನುಕೂಲ್ಯಗಳನ್ನು ಕಲ್ಪಿಸಿಕೊಡದೆ ಇರುವದೂ ಸಮಾಜಕ್ಕೂ ಸರಕಾರಕ್ಕೂ ಪಾಪಸಂಘಟನೆಗೇ ಕಾರಣವಾಗುವದು.

ಈಗ ಬಾಲ್ಯಸಂನ್ಯಾಸದ ವಿಚಾರ. ಸಂನ್ಯಾಸವೆಂದರೆ ವಿರಕ್ತಿಯಿಂದ ಮಾಡತಕ್ಕ ಕೃತಿವಿಶೇಷವಾದ್ದರಿಂದ ಅದನ್ನು ಯಾವಾಗ ಮಾಡಬೇಕು ಎಂಬುದನ್ನು ವಿಧಿಸುವದಕ್ಕೆ ಬರುವದಿಲ್ಲ. "ಎಂದು ವಿರಕ್ತಿಯಾಗುವದೋ ಅಂದೇ ಮನೆಯನ್ನು ಬಿಟ್ಟು ಹೊರಡಬೇಕು" ಎಂದು ಶ್ರುತಿ ಹೇಳುತ್ತಿದೆ. ಆದ್ದರಿಂದ ವಿರಕ್ತರಾದ ಬಾಲಬ್ರಹ್ಮಚಾರಿಗಳೂ ಪಾರಿವ್ರಾಜ್ಯವನ್ನು ಪಡೆಯುವದು ಅಶಾಸ್ತ್ರೀಯವಲ್ಲ. ಆದರೆ ಕೇವಲ ಅಸ್ಖಲಿತವೀರ್ಯರೆಂಬ ಕಾರಣದಿಂದ ಏನೂ ಅರಿಯದ ಹುಡುಗರನ್ನು ಸಂನ್ಯಾಸಿಗಳಾಗಿ ಮಾಡುವದು ಶಾಸ್ತ್ರೀಯವಲ್ಲವೆಂದೇ ನಮಗೆ ತೋರುತ್ತಿದೆ. ಇದನ್ನು ಯುಕ್ತಾಯುಕ್ತವಿಮರ್ಶನವಿಚಕ್ಷಣರಾದವರು ಪರಿಶೀಲಿಸಿ ನಿರ್ಣಯಿಸಬೇಕು.

ಈ ಚರ್ಚೆಯನ್ನು ಇಷ್ಟು ಸಂಗ್ರಹವಾಗಿಯಾದರೂ ನಾವು ಇಲ್ಲಿ ಮಾಡಿರುವದು ಶಾಸ್ತ್ರೀಯವಿಷಯಗಳನ್ನು ಯುಕ್ತಿಪ್ರಧಾನವಾಗಿ ವಿಮರ್ಶಿಸಲೆಳಸುತ್ತಿರುವ ಆಧುನಿಕರ ತೃಪ್ತ್ಯರ್ಥವಾಗಿಯೇ ಹೊರತು ಆಚಾರ್ಯರಂಥ ಅಮಾನುಷ ವ್ಯಕ್ತಿಗಳ ಸಂನ್ಯಾಸದ ಯುಕ್ತಾಯುಕ್ತತೆಯನ್ನು ಪರಿಶೀಲಿಸುವದಕ್ಕಲ್ಲವೆಂಬುದನ್ನು ಹೇಳಬೇಕಾದದ್ದೇ ಇಲ್ಲ. ಆಚಾರ್ಯರಿಂದಾಗಿರುವ ಲೋಕೋಪಕಾರವು ಅಖಿಲಭೂಮಂಡಲದಲ್ಲಿಯೂ ವಿಶ್ರುತವಾಗಿರುವದರಿಂದ ಅದರ ವಿಷಯದಲ್ಲಿ ಒಂದು ಚಕಾರತುಕಾರವನ್ನು ಆಡುವದಕ್ಕೂ ನಾವು ಅಧಿಕಾರಿಗಳಲ್ಲವೆಂಬುದು ಸ್ಪಷ್ಟವೇ ಆಗಿದೆ.

## ೫. ಗೋವಿಂದಭಗವತ್ಪಾದರಲ್ಲಿ ವೇದಾಂತಾಭ್ಯಾಸ

**ಶಂಕರರು ತಾಯಿಗೆ ಕೊಟ್ಟ ವಾಗ್ದಾನ :**

೫೮. ಹೀಗೆ ಮಾನಸಸಂನ್ಯಾಸವನ್ನು ಮಾಡಿದ ಬಳಿಕ ಆಚಾರ್ಯರು ನದಿಯ ದಡಕ್ಕೆ ಬಂದು ತಾಯಿಯಲ್ಲಿದ್ದ ಅಮಿತಭಕ್ತಿಯಿಂದ ಇಂತೆಂದರು : 'ತಾಯಿಯೆ, ನಾನು ಏನು ಮಾಡಬೇಕು, ಅಪ್ಪಣೆಕೊಡು; ಸಂನ್ಯಾಸಿಯಾಗಿರುವ ನಾನು ಏನೇನು ಮಾಡಬಹುದೋ ಅದೆಲ್ಲವನ್ನೂ ಅವಶ್ಯವಾಗಿ ಮಾಡುವೆನು ; ಆ ವಿಷಯಕ್ಕೆ ಸ್ವಲ್ಪವೂ ಹಿಂದುಮುಂದು ನೋಡುವದಿಲ್ಲ. ಅನ್ನಬಟ್ಟೆಗಳನ್ನಂತೂ ನನ್ನ ಪಿತ್ರಾರ್ಜಿತಧನವನ್ನು ತೆಗೆದುಕೊಳ್ಳುವ ಈ ಬಂಧುಗಳು ನಿನಗೆ ಕೊಟ್ಟೇ ಕೊಡುವರು ; ಅದರಂತೆ ನಿನಗೆ ರೋಗಾದಿಗಳು ಬಂದರೂ ನೋಡಿಕೊಳ್ಳುವರು. ಪೈತೃಕಧನವನ್ನು ತೆಗೆದುಕೊಂಡಿರುವದರಿಂದಲೂ ಮಹಾಜನರ ಭೀತಿಯಿಂದಲೂ ಮೃತಿಸಂಸ್ಕಾರವನ್ನು ಮಾಡಿಯೇತೀರುವರು. ಆದ್ದರಿಂದ ನೀನು ಏತಕ್ಕೂ ಅಂಜಬೇಡ'. ಇದನ್ನು ಕೇಳಿ ತಾಯಿಯು 'ಅಪ್ಪ, ನೀನು ಹೇಗಾದರೂ ಮೊಸಳೆಯ ಬಾಯಿಂದ ಮುಕ್ತನಾಗಲಿ ಎಂದು ನಾನು ಸಂನ್ಯಾಸಕ್ಕೆ ಒಪ್ಪಿದೆನು. ನಾನು ಸತ್ತಾಗ ಮಾತ್ರ ನೀನು ಬಂದು ನನಗೆ ಸಂಸ್ಕಾರವನ್ನು ಮಾಡಬೇಕು ; ಹಾಗಿಲ್ಲದಿದ್ದರೆ ನಿನ್ನನ್ನು ನಾನು ಹಡೆದು ಫಲವೇನು ? ಹೇಳು !' ಎಂದಳು. ಅದಕ್ಕೆ ಶಂಕರರು 'ಅಮ್ಮ, ಹಗಲಲ್ಲೇ ಆಗಲಿ, ರಾತ್ರಿಯಲ್ಲೇ ಆಗಲಿ, ನೀನು ಸ್ವವಶಳಾಗಿ ಅಥವಾ ರೋಗಾದಿಗಳಿಂದ ಪರವಶಳಾಗಿ ಯಾವಾಗ ನನ್ನನ್ನು ಸ್ಮರಿಸುವೆಯೋ, ಆಗಲೇ ಎಲ್ಲವನ್ನೂ ಬಿಟ್ಟು ನಿನ್ನ ಬಳಿಗೆ ಬರುವೆನು, ಸಂಸ್ಕಾರವನ್ನೂ ಮಾಡುವೆನು. ಅನಾಥಳಾದ ನನ್ನನ್ನು ಬಿಟ್ಟು ಈ ಹುಡುಗನು ಸಂನ್ಯಾಸಮಾಡಿದನಲ್ಲ ! -ಎಂದು ಮಾತ್ರ ಚಿಂತಿಸಬೇಡ' ಎಂದು ಸಮಾಧಾನಗೊಳಿಸಿ ಬಂಧುಜನರನ್ನು ಕುರಿತು 'ನಾನು ಸಂನ್ಯಾಸಕ್ಕಾಗಿ ದೂರದೇಶಕ್ಕೆ ಹೋಗುವೆನು ; ಇಗೊ, ಈಕೆಯನ್ನು ನಿಮ್ಮ ವಶಕ್ಕೆ ಒಪ್ಪಿಸಿರುತ್ತೇನೆ'- ಎಂದು ಹೇಳಿ ಆಕೆಯ ಕಣ್ಣೀರನ್ನೊರಸಿದನು. (ಮಾ. ಶಂ. ೫-೬೭ರಿಂದ ೭೪) ವ್ಯಾಸಾಚಲೀಯದಲ್ಲಿಯೂ (ವ್ಯಾ ಶಂ. ೪-೪೮ರಿಂದ ೫೫) ಹೀಗೆಯೇ ಇದೆ. ಅಲ್ಲಿ 'ತಾಯಿಯು ಸಂನ್ಯಾಸಕ್ಕೆ ಅನುಮತಿಯನ್ನು ಕೊಟ್ಟು ದುಃಖದಿಂದ ಮೂರ್ಛೆಹೋದಳು; ಆಚಾರ್ಯರು ಬಂದು ಶೈತ್ಯೋಪಚಾರವನ್ನು ಮಾಡಿದರು' (ವ್ಯಾ.ಶಂ. ೪-೪೮) ಎಂದಿರುವದೊಂದು ವಿಶೇಷ.

## ಕೃಷ್ಣಮೂರ್ತಿಯ ಪುನಃಪ್ರತಿಷ್ಠೆ, ಆಚಾರ್ಯರು ಮನೆಯಿಂದ ಹೊರಟಿದ್ದು :

೫೯. ಶಂಕರಾಚಾರ್ಯರು ನದಿಯನ್ನು ಮನೆಯ ಕಡೆಗೆ ತಿರುಗಿಸಿದ್ದರಷ್ಟೆ? ಆ ನದಿಯು ಕೃಷ್ಣಮಂದಿರದವರೆಗೂ ಬಂದಿತ್ತು. ಕೃಷ್ಣನು ಅಶರೀರವಾಣಿಯಿಂದ 'ಅಪ್ಪ, ತಾಯಿಗಾಗಿ ದೂರದಲ್ಲಿ ಹರಿಯುತ್ತಿದ್ದ ನದಿಯನ್ನು ಹತ್ತಿರಕ್ಕೆ ತಂದೆ ; ಈಗ ಅದರ ತೆರೆಗಳು ನನ್ನ ದೇವಾಲಯದ ಗೋಡೆಯನ್ನು ಕೆಡಹಿ ನನ್ನನ್ನು ಹೊಡೆಯುತ್ತಿವೆ. ಈಗ ನೀನೂ ಹೋಗುತ್ತೀಯಲ್ಲ! ನನಗೇನು ಹೇಳುತ್ತೀಯೆ?' ಎಂದು ಕೇಳಿದನು. ಶಂಕರರು ಆ ಕೃಷ್ಣಮೂರ್ತಿಯನ್ನು ಹೆಗಲಮೇಲೆ ಇರಿಸಿಕೊಂಡುಬಂದು ನೀರಿನ ಬಾಧೆಯಿಲ್ಲದ ಸ್ಥಲಕ್ಕೆ ತಂದು ಪ್ರತಿಷ್ಠೆಮಾಡಿದರು. ಹೀಗೆ ತಾಯಿ, ಶ್ರೀಕೃಷ್ಣ—ಇಬ್ಬರ ಅಪ್ಪಣೆಯನ್ನೂ ಪಡೆದುಕೊಂಡು ಶಂಕರರು ಕ್ರಮಸಂನ್ಯಾಸಕ್ಕಾಗಿ ಹೊರಟರು (ಮಾ. ಶಂ. ೫–೭೫ರಿಂದ ೮೦ ; ವ್ಯಾ. ಶಂ. ೪–೫೮ರಿಂದ ೬೧).

ಚಿದ್ವಿಲಾಸೀಯದಲ್ಲಿ ಕೃಷ್ಣಮೂರ್ತಿಯ ಸಮಾಚಾರವಿಲ್ಲ. ಇಲ್ಲಿ ಈ ವಿಷಯವನ್ನು ಅತಿಸಂಕ್ಷೇಪದಿಂದ ಹೀಗೆಂದು ಹೇಳಿದೆ : ಚೂರ್ಣೀನದಿಯ ದಡಕ್ಕೆ ಬಂದೊಡನೆ ತಾಯಿಯನ್ನು ಹೊರಡುವದಕ್ಕೆ ಅನುಜ್ಞೆ ಕೇಳಿದನು. 'ಮನೆಯಲ್ಲಿದ್ದುಕೊಂಡು ಯಾವಾಗಲೂ ಪರಮಾತ್ಮನನ್ನು ಧ್ಯಾನಿಸುತ್ತಿರು. ನೀನು ಯಾವಾಗ ಸ್ಮರಿಸುವೆಯೋ ಆಗ ನಿನ್ನ ಬಳಿಗೆ ಬಂದೆನೆಂದು ತಿಳಿದುಕೊ' ಎಂದು ಹೇಳಿ ನಮಸ್ಕರಿಸಿ ಕ್ರಮಸಂನ್ಯಾಸಕ್ಕಾಗಿ ಹೊರಟರು (ಚಿ.ಶಂ. ೮–೩೪ರಿಂದ ೩೭).

## ಶಂಕರರು ಗೋವಿಂದಭಗವತ್ಪಾದರನ್ನು ಕಂಡೇ ಸ್ತುತಿಸಿದ್ದು

೬೦. ಇಷ್ಟುಹೊತ್ತಿಗೆ ಆಚಾರ್ಯರಿಗೆ ಸಾಧನಸಂಪತ್ತಿಯೆಲ್ಲವೂ ಒದಗಿತ್ತೆಂದು ಮಾಧವಕವಿಯು ವರ್ಣಿಸಿರುತ್ತಾನೆ (ಮಾ. ಶಂ. ೫–೮೩ರಿಂದ ೮೬): ಅರಣ್ಯಗಳು, ನದಿಗಳು, ನಗರಗಳು, ಪರ್ವತಗಳು, ಹಳ್ಳಿಗಳು, ಜನರು, ಪಶುಗಳು— ಇವನ್ನು ಒಂದೊಂದಾಗಿ ಕಾಣುತ್ತಾ 'ಮಾಯಾವಿಯು ತೋರಿಸುವ ಮಾಯೆಯಂತೆ ಬ್ರಹ್ಮವೇ ಇವೆಲ್ಲವನ್ನೂ ಹೀಗೆ ತೋರಿಸುತ್ತದೆ' (ಮಾ. ಶಂ. ೫–೮೭) ಎಂದುಕೊಳ್ಳುತ್ತಿದ್ದರಂತೆ! 'ಏಕದಂಡಿಯಾಗಿ ಕಾಷಾಯಾಂಬರಧಾರಿಯಾಗಿ[1]' ನಡೆಯುತ್ತಾ ಆಶ್ರಮಚಿಹ್ನೆಗಳಿಂದ ಗೋವಿಂದಭಗವತ್ಪಾದರಿಂದ್ದ

1. ಅಚ್ಯುತರು ಶಂಕರರಿಗೆ ಗೋವಿಂದಭಗವತ್ಪಾದರಲ್ಲಿ ಕ್ರಮಸಂನ್ಯಾಸವನ್ನು ತೆಗೆದುಕೊ—ಎಂದು ಕನಸಿನಲ್ಲಿ ಹೇಳಿದ್ದನೆಂದು ಶ್ರೀಕೃಷ್ಣಸ್ವಾಮಿ ಅಯ್ಯರ್ (ಶ್ರೀ.ಶಂ. ಪು. ೯) ಹೇಳುತ್ತಾರೆ. ಅದಕ್ಕೆ ಆಧಾರವು ಯಾವದೊ! ಆಚಾರ್ಯರು ಅಚ್ಯುತಾಷ್ಟಕವನ್ನು ಪಠಿಸುತ್ತಾ ಕಾಲಡಿಯಿಂದ ಹೊರಟರೆಂದು ಅವರು ಹೇಳುತ್ತಾರೆ.

ಸ್ಥಾನವನ್ನು ಗೊತ್ತುಮಾಡಿಕೊಂಡು ಚೋಟಿಗಲದ ಬಿಲದಬಾಯುಳ್ಳ ಗುಹೆಯನ್ನು (ಪ್ರಾದೇಶಮಾತ್ರವಿವರಪ್ರತಿಹಾರಭಾಜಮ್) ಕಂಡು ಇದು ಗೋವಿಂದ ದೇಶಿಕರ ಗುಹೆ ಎಂದು ಜನರು ಹೇಳಿದ್ದನ್ನು ಕೇಳಿ ಬಾಗಿಲಿಗೇ ನಮಸ್ಕರಿಸಿ ಹೀಗೆಂದು ಸ್ತೋತ್ರವನ್ನು ಮಾಡಿದರು (ಮಾಂ. ಶಂ. ೫–೮೮ ರಿಂದ ೯೩) :—

ಪರ್ಯಙ್ಕತಾಂ ಭಜತಿ ಯಃ ಪತಗೇನ್ದ್ರಕೇತೋಃ
 ಪಾದಾಙ್ಗದತ್ವಮಥವಾ ಪರಮೇಶ್ವರಸ್ಯ ।
ತಸ್ಯೈವ ಮೂರ್ಧ್ನಿ ಧೃತಸಾಬ್ಧಿಮಹೀಧ್ರಭೂಮೇಃ
 ಶೇಷಸ್ಯ ವಿಗ್ರಹಮಶೇಷಮಹಂ ನಮಾಮಿ ॥೫–೯೪॥

ಗರುಡಧ್ವಜನ ಹಾಸಿಗೆಯಾದ, ಅಥವಾ ಪರಮೇಶ್ವರನ ಕಾಲುಂದುಗೆಯಾದ, ಸಮುದ್ರಪರ್ವತಗಳೊಡಗೂಡಿದ ಭೂಮಿಯನ್ನು ಹೊತ್ತಿರುವ ಶೇಷನ ವಿಗ್ರಹವಾಗಿರುವ ನಿನ್ನನ್ನು ನಮಸ್ಕರಿಸುತ್ತೇನೆ.

ದೃಷ್ಟ್ವಾ ಪುರಾ ನಿಜಸಹಸ್ರಮುಖೀಮಭೀಷು-
 ರನ್ತೇವಸನ್ತ ಇತಿ ತಾಮುಪಹಾಯ ಶಾನ್ತಃ ।
ಏಕಾನನೇನ ಭುವಿ ಯಸ್ತ್ವವತೀರ್ಯ ಶಿಷ್ಯಾ-
 ನನ್ವಗ್ರಹೀನ್ನನು ಸ ಏವ ಪತಞ್ಜಲಿಸ್ತ್ವಮ್ ॥೯೫॥

ಪೂರ್ವದಲ್ಲಿ ನಿನ್ನ ಸಾವಿರ ಹೆಡೆಗಳನ್ನು ಕಂಡು ಶಿಷ್ಯರು ಅಂಜಿಕೊಂಡರೆಂದು ಆ ವೇಷವನ್ನು ಬಿಟ್ಟು ಶಾಂತವಾದ ಒಂದೇ ಮುಖವುಳ್ಳವನಾಗಿ ಶಿಷ್ಯರನ್ನು ಅನುಗ್ರಹಿಸಿದ ಆ ಪತಂಜಲಿಯೇ ನೀನಲ್ಲವೆ ?

ಉರಗಪತಿಮುಖಾದಧೀತ್ಯ ಸಾಕ್ಷಾತ್
 ಸ್ವಯಮವನೇರ್ವಿವರಂ ಪ್ರವಿಶ್ಯ ಯೇನ ।
ಪ್ರಕಟಿತಮಚಲಾತಟೇ ಸ ಯೋಗಂ
 ಜಗದುಪಕಾರಪರೇಣ ಶಬ್ದಭಾಷ್ಯಮ್

ತಮಖಿಲಗುಣಪೂರ್ಣಂ ವ್ಯಾಸಪುತ್ರಸ್ಯ ಶಿಷ್ಯಾ-
 ದಧಿಗತಪರಮಾರ್ಥಂ ಗೌಡಪಾದಾನ್ಮಹರ್ಷೇಃ ।
ಅಧಿಜಿಗಮಿಷುರೇಷ ಬ್ರಹ್ಮಸಂಸ್ಥಾಮಹಂ ತ್ವಾಂ
 ಪ್ರಸೃಮರಮಹಿಮಾನಂ ಪ್ರಾಪಮೇಕಾನ್ತಭಕ್ತ್ಯಾ

ಪಾತಾಳವನ್ನು ಹೊಕ್ಕು ಸಾಕ್ಷಾತ್ ಶೇಷನಿಂದ ಅಧ್ಯಯನವನ್ನು ಮಾಡಿ ಭೂಲೋಕದಲ್ಲಿ ಯೋಗಶಾಸ್ತ್ರವನ್ನೂ ವ್ಯಾಕರಣಭಾಷ್ಯವನ್ನೂ ಲೋಕೋಪಕಾರಕ್ಕಾಗಿ ಪ್ರಕಟಿಸಿದೆಯಲ್ಲ, ಅಂಥ ಅಖಿಲಗುಣಪೂರ್ಣನಾದ, ಶುಕಶಿಷ್ಯ ಗೌಡಪಾದಮಹರ್ಷಿಗಳಿಂದ ಪರಮಾರ್ಥವನ್ನು ಅರಿತುಕೊಂಡಿರುವ ನಿನ್ನ

ಸಮೀಪಕ್ಕೆ ಬ್ರಹ್ಮಸಂಸ್ಥನಾಗುವ ಪರಿಯನ್ನು ಅರಿತುಕೊಳ್ಳುವದಕ್ಕೆಂದು ನಾನು ಬಂದಿರುತ್ತೇನೆ.

**ಈ ಮೇಲಿನ ಶ್ಲೋಕಗಳಲ್ಲಿ ಗೋವಿಂದಭಗವತ್ಪಾದರು ಆದಿಶೇಷನ ಅವತಾರವೇ,** ವ್ಯಾಕರಣಶಾಸ್ತ್ರವನ್ನೂ ಯೋಗಶಾಸ್ತ್ರವನ್ನೂ ರಚಿಸಿರುವ **ಪತಂಜಲಿಗಳೇ,** ಶುಕಶಿಷ್ಯರಾದ **ಶ್ರೀಗೌಡಪಾದರ** ಶಿಷ್ಯರೇ- ಎಂದು ವರ್ಣಿಸಿರುವವನ್ನು ವಾಚಕರು ಲಕ್ಷಿಸಬೇಕು. **ವ್ಯಾಸಾಚಲೀಯದಲ್ಲಿಯೂ**

ಶುಶ್ರಾವ ತಸ್ಯ ನಿಕಟೇ ಕಿಲ ಶಾಸ್ತ್ರಜಾಲಂ
ಯಶ್ಚಾಶೃಣೋದ್ಭುಜಗಸದ್ಮಗತಸ್ತ್ವನನ್ತಾತ್ ।
ಶಬ್ದಾಮ್ಬುರಾಶಿಮಖಿಲಂ ಸಮಯಂ ನಿಧಾಯ
ಯಶ್ಚಾಖಿಲಾನಿ ಭುವನಾನಿ ಬಿಭರ್ತಿ ಮೂರ್ಧ್ನಾ ॥ (ವ್ಯಾ. ಶಂ ೪–೬೪)

ಯಾವಾತನು ಪಾತಾಳಲೋಕದಲ್ಲಿ ಶಬ್ದಶಾಸ್ತ್ರವನ್ನೆಲ್ಲ ಶಪಥಪೂರ್ವಕವಾಗಿ ಶ್ರವಣಮಾಡಿದನೋ, ಯಾವನು ಭೂಮಿಯನ್ನೆಲ್ಲ ತಲೆಯಮೇಲೆ ಹೊತ್ತಿರುವನೋ, ಆ ಗೋವಿಂದನ ಸಮೀಪದಲ್ಲಿ (ಶಂಕರನು) ಶಾಸ್ತ್ರಗಳನ್ನೆಲ್ಲ ಶ್ರವಣ ಮಾಡಿದನು–ಎಂದಿದೆ. ಅಲ್ಲಿ ಯೋಗದ ವಿವರವಿಲ್ಲ.

**ಪ್ರಾಚೀನಶಂಕರವಿಜಯದಲ್ಲಿ**

ಗೋವಿನ್ದಮಾಶ್ರಯದಹೀನ್ದ್ರಮಹಾವತಾರ–
ಮಾರಾತ್ತುಷಾರಕರದೇಹಧುವಸ್ತಟಿನ್ಯಾಃ ।
(ಆಪ್ಯಾತ್ಮಜೇನ ಗಳಿತಾತ್ಮಭವಾಭಿಮಾನೇ–
ನಾಂರಾಧಿತಂ ಚ ಪರಿಣಾ ನಿಯಮಂ ಶ್ರಿತೇನ ॥)

ಎಂಬ ಶ್ಲೋಕದಲ್ಲಿ ನರ್ಮದಾತೀರದಲ್ಲಿದ್ದ ಗೋವಿಂದಭಗವತ್ಪಾದರು ಆದಿ**ಶೇಷನ** ಅವತಾರವೆಂದಿದೆ. (ಇಲ್ಲಿ ಕಂಸದಲ್ಲಿಟ್ಟಿರುವ ಭಾಗವನ್ನು ನಾವು ಕನ್ನಡಿಸಿಲ್ಲ. ಅದನ್ನು ಇಷ್ಟರಲ್ಲಿಯೇ ಪ್ರಸ್ತಾಪಿಸಲಿರುವೆವು).

**ಗುರುರತ್ನಮಾಲಿಕೆಯಲ್ಲಿ :**

ಹರಿತಲ್ಪಹರಾಙ್ಘ್ರಿನೂಪುರಕ್ಷ್ಮಾಭೃತ್ । ಧರಸೌಮಿತ್ರಿಬಲಾತ್ರಿಪುತ್ರಲಕ್ಷ್ಮಾಭೃತ್ ॥
ಜಯತಾದುಪರೇವಮಾತ್ತಧರ್ಮಾ । ಜಯಗೋವಿನ್ದಮುನಿಃ ಸ ಚನ್ದ್ರನಾಮಾ ॥

ವಿಷ್ಣುವಿನ ಹಾಸಿಗೆ, ಶಿವನ ಕಾಲಂದುಗೆ, ಭೂಧರ, ಲಕ್ಷ್ಮಣ, ಬಲರಾಮ, ಪತಂಜಲಿ- ಎಂಬ ಉಪಾಧಿಗಳುಳ್ಳ, ರೇವಾತೀರದಲ್ಲಿ ಆಶ್ರಮವನ್ನು ಮಾಡಿಕೊಂಡಿದ್ದ 'ಜಯಗೋವಿಂದಮುನಿಯು' ಜಯಶೀಲನಾಗಲಿ !–ಎಂದಿದೆ; ನಾವು ಉದಾಹರಿಸಿರುವ ಮಾಧವೀಯದ ೬೪ನೆಯ ಶ್ಲೋಕದಲ್ಲಿ ಈ ಅಭಿಪ್ರಾಯವೇ

ಇದೆ. ಈ ಅಭಿಪ್ರಾಯಕ್ಕೆ ಪತಂಜಲಿಚರಿತವೋ ಅಥವಾ ಮತ್ತೆ ಯಾವದೋ ಒಂದು ಮೂಲವಿರಬೇಕು.

## ಗೋವಿಂದಭಗವತ್ಪಾದರಿಗೆ ಚಂದ್ರನೆಂಬ ಹೆಸರು

೭೧. ಗುರುರತ್ನಮಾಲಿಕೆಯಲ್ಲಿ ಗೋವಿಂದಭಗವತ್ಪಾದರಿಗೆ ಚಂದ್ರನೆಂಬ ಹೆಸರೂ ಉಂಟೆಂದು ಹೇಳಿದೆಯಷ್ಟೆ ? ಗೌಡಪಾದರಿಗೂ ಈ ಚಂದ್ರನಿಗೂ ಇರುವ ಸಂಬಂಧವನ್ನು ತಿಳಿಸುವ ಒಂದು ಕಥೆಯು ರಾಮಭದ್ರದೀಕ್ಷಿತವಿರಚಿತ ಪತಂಜಲಚರಿತ್ರೆಯಲ್ಲಿದೆಯೆಂದು ಎನ್. ವೆಂಕಟರಾಮನ್‌ರವರು (NVSN p- 24) ಬರೆದಿರುತ್ತಾರೆ. ಅದರ ಸಾರವೇನೆಂದರೆ :

ಒಮ್ಮೆ ಪತಂಜಲಿಗಳು ಒಂದು ತೆರೆಯ ಹಿಂದೆ ಇದ್ದುಕೊಂಡು ತಮ್ಮ ಶಿಷ್ಯರಿಗೆಲ್ಲ ಮಹಾಭಾಷ್ಯವನ್ನು ಹೇಳಿಕೊಡುತ್ತಿದ್ದರು. ಇಷ್ಟು ಜನರಿಗೆ ಏಕಕಾಲಕ್ಕೆ ಇವರು ಹೇಳಿಕೊಡುವದರ ಗುಟ್ಟೇನೆಂಬುದನ್ನು ತಿಳಿಸುಕೊಳ್ಳಬೇಕೆಂದು ಶಿಷ್ಯರು ತೆರೆಯನ್ನೆತ್ತಿ ನೋಡಲು ಸಹಸ್ರಫಣಾಯುಕ್ತನಾದ ಎರಡು ಸಾವಿರ ನಾಲಗೆಗಳ ಆದಿಶೇಷನೇ ಕಾಣಿಸಿದನು. ತನ್ನ ಮಾತನ್ನು ಮೀರಿ ಅನವಶ್ಯವಾದ ಕುತೂಹಲವನ್ನು ಪ್ರಕಟಿಸಿದ ಶಿಷ್ಯರನ್ನು ಆತನು ಕ್ರೋಧಯುಕ್ತನಾಗಿ ನೋಡಿದ್ದರಿಂದ ಆ ವಿಷಾನಲದಿಂದ ಅವರೆಲ್ಲ ಸುಟ್ಟು ಬೂದಿಯಾದರು. ಆ ಸ್ಥಲವನ್ನು ಬಿಟ್ಟು ಎಲ್ಲಿಗೋ ಹೋಗಿದ್ದ ಒಬ್ಬನುಮಾತ್ರ (ಇವರೇ ಗೌಡಪಾದರು) ಬಂದು ಕ್ಷಮೆಬೇಡಿದನು. ಪಾಠದ ನಡುವೆ ಹೊರಗೆ ಹೋಗಿದ್ದ ತಪ್ಪಿಗಾಗಿ ಬ್ರಹ್ಮರಾಕ್ಷಸನಾಗೆಂಬ ಶಾಪವು ಅವನಿಗೆ ಬಂದಿತು. ವ್ಯಾಕರಣಕ್ಕೆ ತಕ್ಕ ಅಧಿಕಾರಿಯು ನಿನಗೆ ದೊರಕುವವರೆಗೆ ಈ ಶಾಪವಿರುವದು ಎಂದು ಶಾಪಾವಧಿಯನ್ನು ಗುರುಗಳು ಹೇಳಿದ್ದರು ( ಮಾ. ಶಂ. ೫-೯ನ್ನು ನೋಡಿ ).[1] ಪತಂಜಲಿಗಳು ಈ ಲೋಕವನ್ನು ಬಿಟ್ಟರು. ಉಳಿದುಕೊಂಡ ಆ ಶಿಷ್ಯನು ಬ್ರಹ್ಮರಾಕ್ಷಸನಾಗಿ ಮಹಾಭಾಷ್ಯಕ್ಕೆ ಆಚಾರ್ಯನಾದನು. 'ಪಚ್‌ಧಾತುವಿಗೆ ನಿಷ್ಠಾಪ್ರತ್ಯಯವು ಸೇರಿದರೆ ಯಾವ ರೂಪವಾಗುವದು ?' ಎಂದು ಕೇಳಿದಾಗ 'ಪಚಿತವಮ್' ಎಂದು ಹೇಳುವ ಶಿಷ್ಯರನ್ನೆಲ್ಲ ಅವನು ತಿಂದುಹಾಕುತ್ತಿದ್ದನು. ಕೊನೆಗೆ ಒಬ್ಬ ಶಿಷ್ಯನು 'ಪಕ್ವಮ್' ಎಂದಾಗುತ್ತದೆ ಎಂದು ಉತ್ತರವನ್ನೀಯಲು ಅವನೇ ಮಹಾಭಾಷ್ಯಪಾಠಕ್ಕೆ ಯೋಗ್ಯನೆಂದು ಗೊತ್ತಾಯಿತು.

ಆ ಶಿಷ್ಯನೇ ಚಂದ್ರನೆಂಬ ಹೆಸರಿನ ಉಜ್ಜಯಿನಿಯ ಬ್ರಾಹ್ಮಣನು. ಅವನಿಗೆ ಆ ಪತಂಜಲಿಶಿಷ್ಯನು ಮಹಾಭಾಷ್ಯವನ್ನೆಲ್ಲ ಹೇಳಿಕೊಟ್ಟನು. ಬ್ರಹ್ಮ

---

1. ಕಂಸವಲ್ಲಿಟ್ಟಿರುವ ಅಭಿಪ್ರಾಯಗಳು ನಮ್ಮವು. ಕೆಲವಂಶಗಳನ್ನು ಗುರುರತ್ನಮಾಲಿಕೆಯ (ಶ್ಲೋ. ೧೦) ವ್ಯಾಖ್ಯಾನದಂತೆ ನಾವು ತಿದ್ದಿಕೊಂಡಿರುತ್ತೇವೆ.

ರಾಕ್ಷಸನು ವಾಸವಾಗಿದ್ದ ಆಲದಮರದ ಎಲೆಗಳಮೇಲೆಯೇ ಚಂದ್ರನು ಪಾಠವನ್ನು ಬರೆದುಕೊಳ್ಳುತ್ತಿದ್ದನು. ಕೊನೆಗೆ ಆ ಎಲೆಗಳನ್ನೆಲ್ಲ ಪಂಚೆಯಲ್ಲಿ ಮೂಟೆ ಕಟ್ಟಿಕೊಂಡು ಉಜ್ಜಯಿನಿಗೆ ಬಂದನು. ಅವನು ನಾಲ್ಕು ಜಾತಿಯ ನಾಲ್ಕು ಸ್ತ್ರೀಯರನ್ನು ಮದುವೆಯಾದನು. ಅವರಲ್ಲಿ ಅವನಿಗೆ ಕ್ರಮವಾಗಿ **ವರರುಚಿ, ವಿಕ್ರಮ, ಭಟ್ಟಿ, ಭರ್ತೃಹರಿ**-ಎಂಬ ಮಕ್ಕಳಾದರು. ಅವರೊಳಗೆ ಭರ್ತೃಹರಿಯು ಮಹಾವಿದ್ವಾಂಸನು; ಚಂದ್ರನಿಂದ ಮಹಾಭಾಷ್ಯವನ್ನೆಲ್ಲ ಕಲಿತುಕೊಂಡು ಮಹಾವೈಯಾಕರಣ ಎನಿಸಿಕೊಂಡನು. ಆದರೆ ಅವನ ಅಪರಿಮಿತ ಗರ್ವದ ಫಲವಾಗಿ ಸಪಾದಲಕ್ಷಮಿತವಾದ ಅವನ ಗ್ರಂಥವು ನಷ್ಟವಾಯಿತು. (ಮೇಲೆ ನಾವು ಉದಾಹರಿಸಿರುವ 'ಅಪ್ಯಾತ್ಮಜೇನ' ಎಂಬ ಶ್ಲೋಕಾರ್ಧದಲ್ಲಿ ಪರಾಮೃಷ್ಟನಾಗಿರುವ ಹರಿಯು ಇವನೇ ಎಂದು ಕಾಣುತ್ತದೆ).

ಅಪರಾಧಿಯಾಗಿದ್ದ ಪತಂಜಲಿಶಿಷ್ಯನಿಗೆ ಈಗ ವಿಶಾಪವಾದ್ದರಿಂದ ಅವನು ವ್ಯಾಸಪುತ್ರರಾದ ಶುಕರನ್ನು ಕಂಡು ಅವರಿಂದ ಸಂನ್ಯಾಸವನ್ನು ತೆಗೆದುಕೊಂಡನು. ಬಳಿಕ ಅವನು ಹಿಮಾಲಯದಲ್ಲಿಯೇ ಇದ್ದುಕೊಂಡು ತಕ್ಷಶಿಲೆಯ ಶಾಕ್ಯರಾಜನಾದ ಪ್ರಾಕೃತಿಯೇ ಮುಂತಾದವರಿಂದಲೂ ಅಪಲೂನ್ಯ, ದಾಮೀಷ ಮೊದಲಾದ ಅಪರಾಂತ್ಯಯೋಗಿಗಳಿಂದ ಸೇವಿತರಾಗಿದ್ದ ಅಯಹಾರ್ಚ್ಯನೆಂಬ ಬೌದ್ಧಶ್ರೇಷ್ಠನನ್ನು ಆ ಮತದಿಂದ ಬಿಡುಗಡೆಮಾಡಿದನು. ಮತ್ತೆ ಹತ್ತಿರಕ್ಕೆ ಬಂದ **ಚಾಂದ್ರನಿಗೆ** ಸಂನ್ಯಾಸವನ್ನು ಕೊಟ್ಟು ಗೋವಿಂದನೆಂಬ ಹೆಸರನ್ನು ಕೊಟ್ಟನು. ಅವರೆಲ್ಲರಿಗೂ ಅದ್ವೈತವನ್ನು ಉಪದೇಶಿಸುತ್ತಾ ಇದ್ದನು. (ಮಾ.ಶಂ. ೯೬-೯೭ನೆಯ ಶ್ಲೋಕಗಳಲ್ಲಿ ಈ ಅರ್ಥವು ಪರಾಮೃಷ್ಟವಾಗಿರಬಹುದು).

ಮೇಲೆ ಕೊಟ್ಟಿರುವ ಕಥೆಯಿಂದ ಗೋವಿಂದಭಗವತ್ಪಾದರು ಶೇಷನ **ಅವತಾರವೆಂದೂ** ಅವರೇ **ಚಂದ್ರನೆಂಬ** ವೈಯಾಕರಣನೆಂದೂ ದಂತಕಥೆಯೊಂದು ಹೇಗೋ ಪ್ರಾಚೀನಕಾಲದಿಂದಲೂ ಜನರಲ್ಲಿ ಹರಡಿತ್ತೆಂದೂ ಅದನ್ನೇ ಮಾಧವಕವಿಯೂ ಅನುಸರಿಸಿರುತ್ತಾನೆಂದೂ ಹೇಳಬೇಕಾಗುವದು. ವ್ಯಾಸಾಚಲೀಯದಲ್ಲೇನೋ ಈ ಕಥೆಯಿಲ್ಲ. ಈ ವಿವರವು ಹರಿಮಿಶ್ರೀಯ, ಗೌಡಪಾದೋಲ್ಲಾಸ, ಪತಂಜಲಿವಿಜಯಾದಿಗಳಲ್ಲಿದೆ (ಹರಿಮಿಶ್ರೀಯ ಗೌಡಪಾದೋಲ್ಲಾಸ, ಪತಞ್ಜಲಿವಿಜಯಾದಿಷು ನಿರೂಪ್ಯಮಾಣಾ ಕಥಾ) ಎಂದು ಆತ್ಮಬೋಧರು (ಗು. ರ. ಶ್ಲೋ. ೧೦) ಬರೆದಿರುತ್ತಾರೆ.

## ಗೋವಿಂದಭಗವತ್ಪಾದರಿಗೆ ಜಯಗೋವಿಂದರೆಂಬ ಹೆಸರು

೬೨. ನಾವು ಉದಾಹರಿಸಿರುವ **ಗುರುರತ್ನಮಾಲಿಕೆಯ** ಶ್ಲೋಕದಲ್ಲಿ 'ಜಯಗೋವಿಂದಮುನಿಃ' ಎಂಬ ವಿಶೇಷಣವೂ ಇದೆಯಲ್ಲವೆ? ಅದರ ಬಗ್ಗೆ **ಪ್ರಾಚೀನಶಂಕರವಿಜಯದಲ್ಲಿ** ಹೀಗಿದೆಯಂತೆ :

ಸತತಂ ನಿಗದನ್ಪ್ರಸೇನ ಯೋऽಸೌ
ಜಯಗೋವಿನ್ದ ಜಯೇತಿ ಸೂಕ್ತಿಮೇಕಾಮ್ |
ಶ್ರಿತಮೌನಮುಭೂದ್ವ (ವ್ಯತೋऽವಿ) ವಾದೇ
ಜಯಗೋವಿನ್ದಮುನಿಂ ತದಾಹುರೇನಮ್ ||

'ಜಯ ಗೋವಿಂದ ಜಯ!' ಎಂದು ಬಾರಿಬಾರಿಗೂ ಹೇಳುತ್ತಾ ವಾದದಲ್ಲಿ ಮೌನವನ್ನೇ ಧರಿಸಿದ್ದದ್ದರಿಂದ ಜಯಗೋವಿಂದರೆಂದೇ ಇವರನ್ನು ಕರೆಯುತ್ತಾರೆ– ಎಂದರ್ಥ. (ಗೋವಿಂದನೆಂಬ ಹೆಸರನ್ನು ಗೌಡಪಾದರು ಕೊಟ್ಟರೆಂಬ ಕಥೆಯ ಗತಿಯೇನು?) ಗುರುರತ್ನಮಾಲಿಕೆಯ ಮುಂದಿನ (೧೨) ಶ್ಲೋಕದಲ್ಲಿ ಗೋವಿಂದರ ಶಿಷ್ಯನು 'ಹರಿ' ಎಂದಿದೆ. 'ಚನ್ದ್ರಶರ್ಮಣ ಏವ ಸುತಾ ಭರ್ತೃಹರಿವಿಕ್ರಮಭಟ್ಟವರರುಚಯಃ ಇತಿ ವೃದ್ಧಾಃ' ಎಂದು ಆತ್ಮಬೋಧರ ವ್ಯಾಖ್ಯಾನವಿದೆ. ಇದರ ಜೊತೆಗೆ 'ಹರಿಃ ಭರ್ತೃಪ್ರಪಞ್ಚಃ | ವಾಕ್ಯಪದೀಯಾದಿ ಮಹಾಪ್ರಬನ್ಧನಿರ್ಮಾತಾ ಇತಿ ಯಾವತ್ |' ಎಂದೂ ಇದೆ. ಅಲ್ಲಿ ಭರ್ತೃಪ್ರಪಞ್ಚಃ ಎಂಬುದು ಭರ್ತೃಹರಿಃ ಎಂಬುದಕ್ಕೆ ಬದಲು ಬಿದ್ದಿದೆ ಎಂದು ಕಲ್ಪಿಸಬೇಕು; ಇಲ್ಲದಿದ್ದರೆ ಆತ್ಮಬೋಧರಿಗೆ 'ಭರ್ತೃಪ್ರಪಂಚ'ರೆಂಬ ಭೇದಾಭೇದವಾದಿಗಳಾದ ವೇದಾಂತಿಗಳೊಬ್ಬರು ಇದ್ದರೆಂಬುದು ತಿಳಿದಿರಲಿಲ್ಲವೆಂದೇ ಹೇಳಬೇಕಾಗುವದು.

## ಗೋವಿಂದಭಗವತ್ಪಾದರ ವಿಷಯಕ್ಕೆ ಕಲ್ಪನಾಕಥೆಗಳು

೬೩. ಈವರೆಗೆ ಹೇಳಿದ ಕಥೆಗಳಲ್ಲಿ ಯೋಗಶಾಸ್ತ್ರಪ್ರವರ್ತಕ ಪತಂಜಲಿ, ವ್ಯಾಕರಣಭಾಷ್ಯಕಾರ ಪತಂಜಲಿ, ಗೋವಿಂದಭಗವತ್ಪಾದರು– ಇವರನ್ನೆಲ್ಲ ಒಂದಾಗಿ ಭಾವಿಸಿರುವದು ಉಪಚಾರಕ್ಕೆಂದು ಹೇಳಬಹುದೇ ಹೊರತು ಅವೆಲ್ಲ ಒಬ್ಬ ವ್ಯಕ್ತಿಯ ಹೆಸರುಗಳೆಂದಾಗಲಿ, ಅವರುಗಳು ಏಕಕಾಲದಲ್ಲಿದ್ದರೆಂದಾಗಲಿ ಭಾವಿಸುವದಕ್ಕೆ ಆಧಾರವಿಲ್ಲ. ಪತಂಜಲಿಮಹಾಭಾಷ್ಯಕಾರರು ಪಾಣಿನಿಯ ವ್ಯಾಕರಣವನ್ನು ಬಹುಮುಖವಾಗಿ ವರ್ಣಿಸಿದ್ದರಿಂದ ಅವರು ಆದಿಶೇಷನೇ ಎಂದು ಯಾರೋ ಮೆಚ್ಚಿಕೆಯನ್ನು ತೋರಿಸಲು, ಅಲ್ಲಿಂದ ಮುಂದಕ್ಕೆ ಕಥಾಕಲ್ಪನೆಯು ಬೆಳೆಯುತ್ತಾ ಬಂದಿರಬೇಕು– ಎಂತ ತೋರುತ್ತದೆ.

ಇದಲ್ಲದೆ 'ಕತೆಗೆ ಕಾಲಿಲ್ಲ' ಎಂಬ ಗಾದೆಯಂತೆ ವ್ಯಾಸರು, ಶುಕರು– ಎಂಬ ದ್ವಾಪರಯುಗದವರಿಬ್ಬರನ್ನೂ ಗೌಡಪಾದರ ಹಿಂದೆ ಇದ್ದ ಅದ್ವೈತಾಚಾರ್ಯರು ಎಂದು ವರ್ಣಿಸಿರುವದೂ ಕಲ್ಪನಾರಾಜ್ಯಕ್ಕೇ ಸೇರಿರುತ್ತದೆ. ಅದು ಶುಕರ ಸಾಕ್ಷಾಚ್ಛಿಷ್ಯರು ಗೌಡಪಾದರು ಎಂಬರ್ಥದಲ್ಲಿರಲಾರದು. ಶುಕರಂತೆ ವಿರಕ್ತರಾಗಿ ಪರಮಾತ್ಮಾನುಸಂಧಾನದಲ್ಲಿದ್ದರೆಂಬುದಕ್ಕೆಮಾತ್ರವೇ ಮೊದಲು ಯಾರೋ ಶುಕಶಿಷ್ಯರೆಂದು ಕರೆದಿದ್ದು ಈಚೆಗೆ ಅವರು ಶುಕರ ಸಾಕ್ಷಾಚ್ಛಿಷ್ಯರೇ ಎಂಬ

ನಂಬಿಕೆಗೆ ಮೂಲವಾಗಿರಬಹುದೆಂತ ತೋರುತ್ತದೆ. ಹಾಗಿಲ್ಲದಿದ್ದರೆ ಶುಕರ ಕಾಲದ ಗೌಡಪಾದರು ಗೋವಿಂದಭಗವತ್ಪಾದರ ಕಾಲದವರೆಗೂ ಜೀವಿಸಿದ್ದರೆಂದು ಅಸಂಭಾವಿತವಾಗಿ ಕಲ್ಪಿಸಬೇಕಾಗಿಬರುತ್ತದೆ. ಇದನ್ನು ಅಸಂಭಾವಿತವಲ್ಲವೆಂದು ತಿಳಿಸುವದಕ್ಕೋ ಏನೊ, ಮಾಧವಕವಿ ಅವರಿಗೆ ಮಹರ್ಷಿಗಳು (ಗೌಡಪಾದಾನ್ಮಹರ್ಷೇಃ ಮಾ. ಶಂ. ೫-೯೭) ಎಂಬ ವಿಶೇಷಣವನ್ನು ಕೊಟ್ಟಿರುತ್ತಾನೆ.

ಇನ್ನೊಂದು ವಿಷಯವನ್ನು ಇಲ್ಲಿ ವಿಚಾರಮಾಡತಕ್ಕದ್ದಿದೆ. ಗೋವಿಂದ ಭಗವತ್ಪಾದರಿಗೂ ಚಂದ್ರಶರ್ಮನೆಂಬ ವೈಯಾಕರಣನಿಗೂ ಏಕತ್ವವನ್ನು ಕಲ್ಪಿಸಿರುವದು, ವರರುಚಿ, ವಿಕ್ರಮ, ಭಟ್ಟಿ, ಭರ್ತೃಹರಿ— ಇವರೆಲ್ಲ ಏಕಕಾಲದವರೆಂದು ಕಲ್ಪಿಸಿರುವದು— ಇವೆರಡೂ ಐ ತಿ ಹಾ ಸಿ ಕ ವಾ ದ ಆಧಾರವಿಲ್ಲದವುಗಳಾಗಿವೆ. ವ್ಯಾಕರಣಮಹಾಭಾಷ್ಯವನ್ನು ಚಂದ್ರನು ಕಾಶ್ಮೀರಕ್ಕೆ ಅಭಿಮನ್ಯುವಿನ ಕಾಲಕ್ಕೆ ತಂದನೆಂದು "ರಾಜತರಂಗಿಣಿ" (೧-೧೭೬) ಯಲ್ಲಿದೆಯಂತೆ (NVSK. p. 27). ಆ ಕಾರಣದಿಂದ ಅವನೂ ಪತಂಜಲಿಯೇ ಎಂದು ಯಾರೋ ಕಲ್ಪಿಸಿರಲೂಬಹುದು. 'ಈ ಅಭಿಮನ್ಯು ಸುಮಾರು ಕಲ್ಯಾದಿ ೩೧೪೧ನೆಯ ವರುಷದ ಸಮಯದಲ್ಲಿದ್ದಂತೆ ಆ ಕಾಲದ ನಾಣ್ಯಗಳಿಂದ ಗೊತ್ತಾಗಿದೆ. ಇದು ನಿಶ್ಚಯವಾಗಿದ್ದಪಕ್ಷದಲ್ಲಿ ಭಟ್ಟಿಯ ಕಾಲಕ್ಕೂ ಭರ್ತೃಹರಿಯ ಕಾಲಕ್ಕೂ ೩೦೦ ವರುಷಗಳ ಅಂತರವಿದ್ದಂತೆ ಆಯಿತು. ಮತ್ತು ಈ ಇಬ್ಬರಲ್ಲಿ ಒಬ್ಬನೂ ಉಜ್ಜಯಿನಿಯಲ್ಲಿಯಾದರೂ ಅಥವಾ ವಿಕ್ರಮಾದಿತ್ಯನ ಪೋಷಣೆಯಲ್ಲಿಯಾದರೂ ಇದ್ದಂತೆ ಕಾಣಬರುವದಿಲ್ಲ' ಎಂದು (ಸೋ. ಶಂ. ಪು. ೬೦) ಸೋಮನಾಥಯ್ಯನವರು ಬರೆಯುತ್ತಾರೆ. ಭಟ್ಟಿಕಾವ್ಯವನ್ನು ಬರೆದ ಭಟ್ಟಿಯು 'ಕಾವ್ಯಮಿದಂ ವಿಹಿತಂ ಮಯಾ ವಲಭ್ಯಾಂ ಶ್ರೀಧರಸೇನನರೇಂದ್ರಪಾಲಿತಾಯಾಮ್' (ಭಟ್ಟಿ. ೨೨-೩೪) ಶ್ರೀಧರಸೇನನು ಆಳುತ್ತಿದ್ದ ವಲಭಿಯಲ್ಲಿ ಕಾವ್ಯದ ರಚನೆಯನ್ನು ಮಾಡಿದೇನೆಂದು ಕಂಠೋಕ್ತವಾಗಿ ಹೇಳಿಕೊಂಡು ಇರುತ್ತಾನೆ!

"ರಸಹೃದಯತಂತ್ರ"ವೆಂಬ ಗ್ರಂಥವನ್ನು ಬರೆದಿದ್ದ ಗೋವಿಂದಭಿಕ್ಷುವೇ ಗೋವಿಂದಭಗವತ್ಪಾದರವರಾಗಿರಬಹುದೆಂಬ ಕಲ್ಪನೆಗೆ ಸೋಮನಾಥಯ್ಯನವರು ಸ್ವಲ್ಪ ಬೆಂಬಲವನ್ನು ಕೊಟ್ಟಿರುತ್ತಾರೆ ಮಾಧವಾಚಾರ್ಯಕೃತ "ಸರ್ವದರ್ಶನ ಸಂಗ್ರಹ"ದಲ್ಲಿ ರಸೇಶ್ವರದರ್ಶನವನ್ನು ಪ್ರತಿಪಾದಿಸುವಾಗ 'ಗೋವಿನ್ದಭಗವತ್ಪಾದಾಚಾರ್ಯೈರಪಿ', 'ತದುಕ್ತಮಾಚಾರ್ಯೈಃ ಎಂಬ ಗೌರವಾರ್ಥವಾದ ವಿಶೇಷಣಗಳನ್ನು ಉಪಯೋಗಿಸಿರುವದು, ರಸೇಶ್ವರಸಿದ್ಧಾಂತವೆಂಬ ಗ್ರಂಥದಲ್ಲಿ

ದೇವಾಃ ಕೇಚಿನ್ಮಹೇಶಾದ್ಯಾಃ ದೈತ್ಯಾಃ ಕಾವ್ಯಪುರಃಸರಾಃ<br>
ಮುನಯೋ ವಾಲಖಿಲ್ಯಾದ್ಯಾ ನೃಪಾಃ ಸೋಮೇಶ್ವರಾದಯಃ ।<br>
ಗೋವಿನ್ದಭಗವತ್ಪಾದಾಚಾರ್ಯೋ ಗೋವಿನ್ದನಾಯಕಃ<br>
ಚರ್ಪಟಿಃ ಕಪಿಲೋ ವ್ಯಾಳಿಃ ಕಾಪಾಲಿಃ ಕನ್ದಲಾಯನಃ ।

ಎಂದು ರಸಸಿದ್ಧರ ಸಾಲಿನಲ್ಲಿ 'ಗೋವಿನ್ದಭಗವತ್ಪಾದಾಚಾರ್ಯ'ರನ್ನು ಸೇರಿಸಿರುವದು–ಇವೇ ಆ ಕಲ್ಪನೆಗೆ ಗಮಕವಾಗಿರುತ್ತವೆ. ರಸಸಿದ್ಧಗೋವಿಂದಭಿಕ್ಷುವು ಹೈಹಯಕುಲದಲ್ಲಿ ಹುಟ್ಟಿದ ಕಿರಾತದೇಶದ ದೊರೆಯಾದ ಮಾದನನೃಪತಿಯಿಂದ ಬಹುಮಾನವನ್ನು ಪಡೆದಿದ್ದನಂತೆ. ಆ ಮಾದನದೇವನೂ ರಸವಾದದಲ್ಲಿ ವ್ಯವಸಾಯಮಾಡಿದ್ದನಂತೆ. ಹೈಹಯಕುಲದ ಕಾಮದೇವನೇ ಈ ಮದನರಾಜನಿರಬಹುದೆಂಬ ಊಹೆಯೂ ಕಿರಾತದೇಶವು 'ತಪ್ತಕುಣ್ಡಂ ಸಮಾರಭ್ಯ ರಾಮಕ್ಷೇತ್ರಾನ್ತರಂ ಶಿವೇ । ಕಿರಾತದೇಶೋ ವಿಜ್ಞೇಯೋ ವಿನ್ಧ್ಯಶೈಲೇಽವತಿಷ್ಠತೇ' ॥ ಎಂಬ ಶಿವಶಕ್ತಿಸಂಗಮತಂತ್ರದ ವಚನದಂತೆ ವಿಂಧ್ಯಪರ್ವತದ ಬಳಿಯಿದ್ದ ಒಂದು ದೇಶವೆಂದಾಗುತ್ತದೆ. ವಿಂಧ್ಯಪರ್ವತಗಳ ಉತ್ತರಕ್ಕೆ ಮಾಳವದೇಶವೂ ಅದರೊಳಗೆ ಉಜ್ಜಯಿನಿಯೂ ಇದ್ದು ಆ ಪರ್ವತದ ದಕ್ಷಿಣಕ್ಕೆ ನರ್ಮದಾನದಿ ಹರಿಯುತ್ತದೆ. ಆದ್ದರಿಂದ 'ಗೋವಿಂದಭಿಕ್ಷುವೇ ಗೋವಿಂದಭಗವತ್ಪಾದರೆಂದು ಇಟ್ಟುಕೊಂಡರೆ ಅವರು ಮಾಳವದೇಶದ ನಿವಾಸಿಗಳೆಂದೂ ಸಂನ್ಯಾಸಾಶ್ರಮಸ್ವೀಕರಿಸಿದಮೇಲೆ ತತ್ಸಮಿಾಪವರ್ತಿ ನರ್ಮದಾತೀರದಲ್ಲಿ ತಪಸ್ಸುಮಾಡುತ್ತಿದ್ದರೆಂದೂ ನಂಬುವದಕ್ಕೆ ಯಾವ ಆಕ್ಷೇಪಣೆಯೂ ಇರುವದಿಲ್ಲ' (ಸೋ.ಶಂ.ಪು. ೬೩) ಎಂಬುದು ಸೋಮನಾಥಯ್ಯನವರ ವಾದ.

ಇದಷ್ಟೂ ಕಲ್ಪನಾರಾಜ್ಯಕ್ಕೆ ಸೇರಿದ್ದೆಂಬುದಕ್ಕೆ ಯಾವ ಸಂಶಯವೂ ಇಲ್ಲ. 'ಗೋವಿಂದಭಗವತ್ಪಾದಾಚಾರ್ಯ'ನೆಂಬ ಒಂದು ಹೆಸರು ರಸಸಿದ್ಧರ ಪರಂಪರೆಯಲ್ಲಿದ್ದರೆ ಅದು ಪ್ರಕೃತ ಗೋವಿಂದಭಗವತ್ಪಾದರ ಹೆಸರೆಂಬುದಕ್ಕೆ ಆಧಾರವೇನೂ ಇಲ್ಲ. ರಸಸಿದ್ಧರಲ್ಲಿ ಅದ್ವೈತಿಗಳು ಹೇಗೆ ಬಂದರು ? ಆ ಸಿದ್ಧರೇ ಗೌಡಪಾದರ ಶಿಷ್ಯರಾಗಿದ್ದರೆಂಬುದಕ್ಕೆ ಆಧಾರವಿದೆಯೆ ? 'ಗೋವಿನ್ದಭಗವತ್ಪಾದಾಚಾರ್ಯೋ ಗೋವಿನ್ದನಾಯಕಃ' ಎಂದು ಸಿದ್ಧಪರಂಪರೆಯಲ್ಲಿ ಗೋವಿನ್ದನಾಯಕನೆಂಬ ಮತ್ತೊಂದು ಹೆಸರೂ ಇರುವದರಿಂದ ಗೋವಿಂದನೆಂಬ ಹೆಸರು ಅನೇಕ ರಸಸಿದ್ಧರಿಗೆ ಇತ್ತೆಂದೇಕೆ ಕಲ್ಪಿಸಬಾರದು? ಮಾಧವಾಚಾರ್ಯರು ಸರ್ವದರ್ಶನಸಂಗ್ರಹದಲ್ಲಿ 'ಗೋವಿನ್ದಭಗವತ್ಪಾದೈರಪಿ' ಎಂದು ಬರೆದಿರುವದು ಆ ರಸತಂತ್ರದ ಸಂಪ್ರದಾಯದವರು ಪರಾಮರ್ಶಿಸುವ ಬಗೆಯನ್ನು ಮಾತ್ರ ಸೂಚಿಸುತ್ತದೆ ಎಂದೇಕೆ ಕಲ್ಪಿಸಬಾರದು ? ಸರ್ವದರ್ಶನಸಂಗ್ರಹದಲ್ಲಿ ಆಯಾ ದರ್ಶನಗಳನ್ನು ವರ್ಣಿಸುವಾಗ ಹೀಗೆಯೇ ಆಯಾ ದರ್ಶನಗಳ ಪೂರ್ವಾಚಾರ್ಯರುಗಳ ಹೆಸರುಗಳನ್ನು ಪರಾಮರ್ಶಿಸಿರುವದು ಕಾಣುತ್ತದೆ. ಅಷ್ಟುಮಾತ್ರದಿಂದ ಮಾಧವಾಚಾರ್ಯರೇ ತಮ್ಮ ದೃಷ್ಟಿಯಿಂದ ಆ ಗೌರವಾರ್ಥದ ವಿಶೇಷಣಗಳನ್ನು ಸೂಚಿಸಿರುವರೆಂಬುದಕ್ಕೇನು ಆಧಾರವಿದೆ ? ಇದೂ ಅಲ್ಲದೆ 'ಗೋವಿನ್ದಭಗವತ್ಪಾದಾಚಾರ್ಯೋ ಗೋವಿನ್ದನಾಯಕಃ'– ಎಂಬ ನಾಮಾವಳಿಯಲ್ಲಿ ಇನ್ನು ಯಾರಿಗೂ ಕೊಡದೆ ಇರುವ ಭಗವತ್ಪಾದರೆಂಬ ಗೌರವಾರ್ಥಕಪದವನ್ನು

ಗೋವಿಂದಭಿಕ್ಷುವಿಗೆ ಕೊಟ್ಟರೆಂದು ಕಲ್ಪಿಸುವದಕ್ಕಿಂತ 'ಗೋವಿಂದಭಗವತ್ಪಾದಾಚಾರ್ಯ'ನೆಂಬ ಸಂಕೇತನಾಮದಿಂದಲೇ ಒಬ್ಬ ರಸಸಿದ್ಧನು ಪ್ರಸಿದ್ಧನಾಗಿದ್ದನೆಂದು ಕಲ್ಪಿಸುವವರಲ್ಲಿ ಲಾಘವವಿದೆಯಲ್ಲವೆ ?– ಎಂಬ ಆಕ್ಷೇಪಪರಂಪರೆಗಳು ಹುಟ್ಟಿಕೊಳ್ಳುತ್ತವೆ.

ಹೀಗೆಯೇ ಮಾಧವಕವಿಯು ಗೋವಿಂದಭಗವತ್ಪಾದರು ಒಂದು ಚೋಟಗಲದ ದ್ವಾರವುಳ್ಳ ಗುಹೆಯೊಳಗೆ ಯೋಗಾಭ್ಯಾಸವನ್ನು ಮಾಡಿಕೊಂಡಿದ್ದರೆಂದು (ಮಾ.ಶಂ. ೫–೯೩) ಕಲ್ಪಿಸಿರುವದಕ್ಕೆ 'ನಾರಾಯಣಂ ಪದ್ಮಭುವಂ....' ಎಂಬ ಗುರುಪರಂಪರೆಯ ಸ್ತೋತ್ರದಲ್ಲಿ ಅವರ ಹೆಸರಿಗೆ 'ಗೋವಿನ್ದಯೋಗೀನ್ದ್ರಮ್' ಎಂದಿರುವ ವಿಶೇಷಣವೇ ಆಧಾರವಾಗಿದ್ದಿರಬಹುದೆಂದು ನಮ್ಮ ತರ್ಕ.

ಚಿದ್ವಿಲಾಸೀಯದಲ್ಲಿ ತಾಯಿಯನ್ನು ಸಮಾಧಾನಗೊಳಿಸಿ ಆಚಾರ್ಯರು ಬೇಗನೆ ಕ್ರಮಸಂನ್ಯಾಸವನ್ನು ಪಡೆದುಕೊಳ್ಳುವ ಅಭಿಲಾಷೆಯಿಂದ ತಮಗೆ ಗುರುವಾಗುವದಕ್ಕೆ ತಕ್ಕವನನ್ನು ಹುಡುಕಿಕೊಂಡು ಎಲ್ಲೆಲ್ಲಿಯೂ ಹುಡುಕುತ್ತಾ ಕ್ರಮವಾಗಿ ವಿಷ್ಣುವು ತಪಸ್ಸುಮಾಡುತ್ತಿರುವ ಬದರಿಗೆ ಹೋದರು (ಚಿ. ಶಂ. ೮–೩೬ರಿಂದ ೩೮) ಎಂದಿಷ್ಟೇ ಬರೆದಿದೆ. ಬದರಿಯ ಹೆಸರನ್ನು ಮತ್ತೆ ಯಾರೂ ಎತ್ತಿಲ್ಲ. ಬಾದರಾಯಣರೂ ಗೌಡಪಾದರೂ ಬದರಿಯಲ್ಲಿದ್ದರೆಂಬ ಐತಿಹ್ಯವನ್ನು ಇಟ್ಟುಕೊಂಡು ಗೋವಿಂದಭಗವತ್ಪಾದರನ್ನು ಅಲ್ಲಿಗೇ ಚಿದ್ವಿಲಾಸರು ಸಾಗಿಸಿರಬಹುತೆಂದು ಕಾಣುತ್ತದೆ.

ಅಂತೂ ಗೌಡಪಾದರಂತೆ ಗೋವಿಂದಭಗವತ್ಪಾದರ ವೃತ್ತಾಂತವೂ ನಿಷ್ಕೃಷ್ಟವಾಗಿ ಯಾರೊಬ್ಬರಿಗೂ ತಿಳಿಯದು. ಎಲ್ಲರೂ ಕಲ್ಪನಾಜಾಲದಲ್ಲಿಯೇ ಒದ್ದಾಡುತ್ತಿರುವದು ಕಾಣಬರುತ್ತಿದೆ. ಒಟ್ಟಿನಲ್ಲಿ ಆಚಾರ್ಯರು ಅವರ ಶಿಷ್ಯರಾದರೆಂಬುದೊಂದು ಸರ್ವಸಂಮತವಾಗಿ ಉಳಿದುಕೊಂಡಿರುವ ವಿಷಯ.

## ಗೋವಿಂದಭಗವತ್ಪಾದರಿಗೂ ಶಂಕರರಿಗೂ ಆದ ಸಂಭಾಷಣೆ

೬೪. ಇನ್ನು ಮುಂದಿನ ವೃತ್ತಾಂತವನ್ನು ಕೇಳೋಣ. ಗೋವಿಂದಭಗವತ್ಪಾದರವರನ್ನು ಕಂಡ ಶಂಕರಾಚಾರ್ಯರವರು ಅವರನ್ನು ಸ್ತೋತ್ರಮಾಡಿದ ಬಳಿಕ ಅವರು ಸಮಾಧಿಯಿಂದೆಚ್ಚೆತ್ತು 'ನೀನು ಯಾರು ?' ಎಂದರು. ಅದಕ್ಕೆ ಶಂಕರಾಚಾರ್ಯರು :

ಸ್ವಾಮಿನ್ನಹಂ ನ ಪೃಥಿವೀ ನ ಜಲಂ ನ ತೇಜೋ
ನ ಸ್ಪರ್ಶನೋ ನ ಗಗನಂ ನ ಚ ತದ್ಗುಣಾ ವಾ ।
ನಾಪೀನ್ದ್ರಿಯಾಣ್ಯಪಿ ತು ವಿದ್ಧಿ ತತೋಽವಶಿಷ್ಟೋ
ಯಃ ಕೇವಲೋಽಸ್ತಿ ಪರಮಃ ಸ ಶಿವೋಽಹಮಸ್ಮಿ ॥

—(ಮಾ. ಶಂ. ೫–೯೯)

'ನಾನು ಪೃಥ್ವಿಯಲ್ಲ, ಅಪ್ಪಲ್ಲ, ತೇಜಸ್ಸಲ್ಲ, ವಾಯುವಲ್ಲ, ಆಕಾಶವಲ್ಲ ; ಅವುಗಳ ಗುಣಗಳೂ ಅಲ್ಲ ; ಇಂದ್ರಿಯಗಳೂ ಅಲ್ಲ. ಅವುಗಳೆಲ್ಲವನ್ನೂ ಕಳೆದುಳಿದ ಪರನು ಶಿವನೇ ನಾನು ಎಂದು ತಿಳಿಯಿರಿ' ಎಂದರೆಂದು ಮಾಧವಕವಿ ಬರೆದಿರುತ್ತಾನೆ. "ನ ಭೂಮಿರ್ನ ತೋಯಂ ನ ತೇಜೋ ನ ವಾಯುಃ | ನ ಖಂ ನೇನ್ದ್ರಿಯಂ ವಾ ನ ತೇಷಾಂ ಸಮೂಹಃ | ಅನೈಕಾನ್ತಿಕತ್ವಾತ್ಸುಷುಪ್ತ್ಯೈಕಸಿದ್ಧಸ್ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ||" ಎಂಬ ನಿರ್ವಾಣದಶಕಸ್ತೋತ್ರದ ಮೊದಲನೆಯ ಶ್ಲೋಕವನ್ನು ಮನಸ್ಸಿನಲ್ಲಿಟ್ಟುಕೊಂಡೇ ಆತನು ಈ ಪದ್ಯವನ್ನು ಬರೆದಿರಬಹುದೆಂದು ತೋರುತ್ತದೆ. ವೇದಾಂತಜಿಜ್ಞಾಸುವಾಗಿ ಕ್ರಮಸಂನ್ಯಾಸಕ್ಕೆ ಬಂದಿರುವ ಶಿಷ್ಯನು ಹೀಗೆ ವೇದಾಂತಸಿದ್ಧಾಂತವನ್ನು ಹೇಳಿಕೊಂಡನೆಂಬುದರ ಔಚಿತ್ಯವೇನೋ, ನಮಗಂತೂ ತಿಳಿಯದು.

ಚಿದ್ವಿಲಾಸೀಯದಲ್ಲಿ ಹೀಗಿದೆ : ಶಂಕರರು ಬದರಿಗೆ ಹೋಗಿ ಅಲ್ಲಿ ಆಶ್ರಮದಲ್ಲಿ ತಪಸ್ಸುಮಾಡುತ್ತಿದ್ದ ತೇಜಸ್ವಿಗಳಾದ ಗೋವಿಂದಭಗವತ್ಪಾದರನ್ನು ಕಂಡು ಅಂಜನೇಚ್ಛೆಯಿಂದ ಮೂಲಿಕೆಗಾಗಿ ನೆಲವನ್ನಗೆಯುತ್ತಿರುವವನಿಗೆ ಸುವರ್ಣನಿಧಿಯೇ ಸಿಕ್ಕಿದಂತೆ ಆಶ್ಚರ್ಯಪಡುತ್ತಾ 'ಇವರು ನನಗೆ ಉಪದೇಶಿಸು ವದಕ್ಕಾಗಿಯೇ ಅವತರಿಸಿರುವ ವಸಿಷ್ಠರೊ, ಶುಕರೊ, ಅಥವಾ ಕಶ್ಯಪರೊ ? ಅಥವಾ ವ್ಯಾಸರೇ ಇಲ್ಲಿರುತ್ತಾರಂತೆ, ಅವರೇ ಆಗಿರಬೇಕು. ಇವರು ಯಾರೇ ಆಗಲಿ, ಸೂರ್ಯನಂತೆ ತೇಜಸ್ವಿಗಳಾಗಿರುವ ಇವರಿಂದಲೇ ಕ್ರಮಸಂನ್ಯಾಸವನ್ನು ತೆಗೆದುಕೊಳ್ಳೋಣ' ಎಂದು ನಿಶ್ಚಯಿಸಿದರು (ಚಿ. ಶಂ. ೮–೪೭ರಿಂದ ೫೨). ಆ ಬಳಿಕ ಪ್ರದಕ್ಷಿಣನಮಸ್ಕಾರವನ್ನು ಮಾಡಿದ ಶ್ರೀಶಂಕರಾಚಾರ್ಯರನ್ನು ಕಂಡು ಗೋವಿಂದಭಗವತ್ಪೂಜ್ಯಪಾದರು 'ನೀನು ಯಾರು ? ಎಲ್ಲಿಂದ ಬಂದೆ ? ಎಲ್ಲಿಯವನು? ನಿನ್ನ ಹೆಸರೇನು? ದೇಶವು ಯಾವದು? ಇಲ್ಲಿಗೆ ಬಂದು ಎಷ್ಟು ದಿನ ಗಳಾದವು ? ಏತಕ್ಕೆ ಇಲ್ಲಿಗೆ ಬಂದೆ ?' ಎಂದು ಕೇಳಿದರು. ಶಂಕರರು 'ನಾನು ಕೇರಳದೇಶದಲ್ಲಿ ಕಾಲಟಿಯಲ್ಲಿ ಶಿವಗುರುವಿನ ಮಗನಾಗಿ ಹುಟ್ಟಿದವನು. ಬಾಲ್ಯ ದಲ್ಲಿಯೇ ತಂದೆ ಪರಲೋಕಕ್ಕೆ ಹೋದದ್ದರಿಂದ ತಾಯಿಯೇ ನನ್ನನ್ನು ಸಾಕಿದಳು. ತಕ್ಕಷ್ಟುಮಟ್ಟಿಗೆ ಶಾಸ್ತ್ರಗಳನ್ನು ಓದಿರುತ್ತೇನೆ. ನದಿಯಲ್ಲಿ ಮೊಸಳೆಯು ಕಾಲು ಹಿಡಿದದ್ದರಿಂದ ತತ್ಕಾಲಕ್ಕೆ ಸಂನ್ಯಾಸವನ್ನು ಸಂಕಲ್ಪಿಸಿದೆನು. ಕ್ರಮಸಂನ್ಯಾಸಕ್ಕೆ ತಕ್ಕ ಗುರುವನ್ನು ಹುಡುಕಿಕೊಂಡು ತಮ್ಮ ಬಳಿಗೆ ಬಂದೆನು. ಸಂನ್ಯಾಸವನ್ನು ಕೊಟ್ಟು ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು' ಎಂದು (ಚಿ. ಶಂ. ೯–೧೦ ರಿಂದ ೧೩) ಸ್ವಾಭಾವಿಕರೀತಿಯಿಂದಲೇ ಉತ್ತರವನ್ನು ಕೊಟ್ಟರು.

ಶಂಕರರು ಶಿವಾವತಾರವಾದ್ದರಿಂದ ಅವರಿಗೆ ವೇದಾಂತವೇನೊ ಮೊದಲೇ ತಿಳಿದಿತ್ತು. ಸಂಪ್ರದಾಯರಕ್ಷಣೆಗಾಗಿ ಗುರುಕುಲವಾಸವನ್ನು ಮಾಡಿ ಜನರಿಗೆ

ಮಾರ್ಗವನ್ನು ತೋರಿಸಿದರು ಎಂದು ತಿಳಿಸುವದೇ ಮಾಧವಕವಿಯ ಉದ್ದೇಶ ವೆಂಬುದು ಸ್ಪಷ್ಟವಾಗಿದೆ. ಏಕೆಂದರೆ 'ಸ ಪ್ರಾಹ, ಶಙ್ಕರ, ಸ ಶಙ್ಕರ ಏವ ಸಾಕ್ಷಾಜ್ಜಾತಸ್ತ್ವಮಿತ್ಯಹಮವೈಮಿ ಸಮಾಧಿದೃಷ್ಟ್ಯಾ' (ಮಾ. ಶಂ. ೫-೧೦೦) ಸಮಾಧಿದೃಷ್ಟಿಯಿಂದ ನೀನು ಸಾಕ್ಷಾಚ್ಛಂಕರನೇ ಎಂಬುದನ್ನು ನಾನು ತಿಳಿದುಕೊಂಡಿದೇನೆ- ಎಂದು ಗೋವಿಂದಭಗವತ್ಪಾದರು ಹೇಳಿದಂತೆ ಮುಂದಿನ ಶ್ಲೋಕದಲ್ಲಿ ಬರೆದಿರುತ್ತಾರೆ.

## ಆಚಾರ್ಯರ ಸಂನ್ಯಾಸಸ್ವೀಕಾರ :

೬೫. ಗೋವಿಂದಭಗವತ್ಪಾದರು ಗುಹಾದ್ವಾರದಿಂದ ತಮ್ಮ ಪಾದಗಳನು ಹೊರಕ್ಕೆ ನೀಡಿದರು. ಶಂಕರಾಚಾರ್ಯರು ಜನರಿಗೆ ಆಚಾರಪ್ರದರ್ಶನವನ್ನು ಮಾಡುವದಕ್ಕಾಗಿ ಆ ಪಾದಗಳನ್ನು ಪೂಜಿಸಿದರು. ಗುರುಗಳನ್ನು ಸೇವಾದ್ಯುಪ ಚಾರಗಳಿಂದ ತುಷ್ಟಿಗೊಳಿಸಿ ಸಂಪ್ರದಾಯಪರಿಪಾಲನಬುದ್ಧಿಯಿಂದ ಅವರಿಂದ ಬ್ರಹ್ಮತತ್ತ್ವದ ಉಪದೇಶವನ್ನು ಬಯಸಿದರು. ಆ ಗೋವಿಂದಯತಿವರ್ಯರು ಅವರ ಪರಿಚರ್ಯೆಯಿಂದ ಸಂತುಷ್ಟರಾಗಿ ನಾಲ್ಕು ವೇದಗಳಿಂದಲೂ ಅರಿಸಿದ ವೇದಾಂತಮಹಾವಾಕ್ಯಗಳಿಂದ (ಚತುರ್ಭಿರ್ವೇದಶೇಖರವಚೋಭಿಃ) ನೀನೇ ಬ್ರಹ್ಮವು ಎಂದು ಉಪದೇಶಿಸಿದರು. ಸೂಕ್ಷ್ಮಬುದ್ಧಿಯುಳ್ಳ ಶಂಕರಾಚಾರ್ಯರು ದಯಾಳುವಾದ ಗುರುವಿನಿಂದ ಶಾಸ್ತ್ರರಹಸ್ಯವೆಲ್ಲವನ್ನೂ ಅರಿತುಕೊಂಡರು. ಪರಾಶರಸತ್ಯವತೀಸುತರಾದ ವ್ಯಾಸರು, ಅವರ ಮಗ ಶುಕಮುನಿ, ಅವರ ಶಿಷ್ಯರಾದ ಗೌಡಪಾದರು, ಅವರ ಶಿಷ್ಯರು ಗೋವಿಂದಭಗವತ್ಪಾದರು- ಇದು ಗುರುಪರಂಪರೆ. ಆ ಪರಂಪರೆಯ ಗೋವಿಂದಭಗವತ್ಪಾದರಲ್ಲಿ ಶಂಕರಾಚಾರ್ಯರು ಶ್ರವಣಮಾಡಿ ದರು (ಮಾ. ಶಂ. ೫-೧೦೧ರಿಂದ ೧೦೬) ಎಂದು ಮಾಧವೀಯದಲ್ಲಿದೆ. ಇಲ್ಲಿ ಕೊನೆಯಲ್ಲಿರುವ 'ವ್ಯಾಸಃ ಪರಾಶರಸುತಃ' ಮತ್ತು 'ಶುಶ್ರಾವ ತಸ್ಯ ನಿಕಟೇ' ಎಂಬ ಮಾಧವೀಯದ ಎರಡು ಶ್ಲೋಕಗಳೇ ವ್ಯಾಸಾಚಲೀಯದಲ್ಲಿ (ವ್ಯಾ. ಶಂ. ೪-೬೩,೬೪) ಕಾಣುತ್ತವೆ. ಅಲ್ಲಿ ಮಿಕ್ಕ ವಿವರಗಳಿಲ್ಲ. 'ಶ್ರೀಶಙ್ಕರೋಽಷ್ಟ ಸಮುಚ್ಚತುರೋಽಪಿ ವೇದಾನ್ । ಸ ದ್ವಾದಶೇ ಸಕಲಶಾಸ್ತ್ರಕಲಾ ಮವಾಪ ॥' (ವ್ಯಾ. ಶಂ. ೯-೬೫) ಎಂಬ ಶ್ಲೋಕಾರ್ಧದಲ್ಲಿ ಆಗ ಅವರಿಗೆ ಹನ್ನೆರಡು ವರ್ಷವಯಸ್ಸಾಗಿತ್ತೆಂದು ಮಾತ್ರ ತಿಳಿಸಿದೆ.

ಚಿದ್ವಿಲಾಸೀಯದಲ್ಲಿರುವದೇನೆಂದರೆ : ಇಹಾಮುತ್ರಾರ್ಥಫಲತ್ಯಾಗ, ನಿತ್ಯಾನಿತ್ಯವಿವೇಕ, ಶಮಾದಿಗುಣಸಂಪತ್ತಿ, ಮುಮುಕ್ಷುತ್ವ, ಅನಾಲಸ್ಯ, ದೇಹಾಭಿ ಮಾನಾಭಾವ, ಏಷಣಾತ್ರಯರಾಹಿತ್ಯ-ಮುಂತಾದ ಗುಣಗಳನ್ನು ಕಂಡು ಇವನು ಸಂನ್ಯಾಸಾಶ್ರಮಕ್ಕೆ ಯೋಗ್ಯನೆಂದರಿತು ಹತ್ತಿರಕ್ಕೆ ಕರೆದು, ಅವನು ನಮಸ್ಕರಿಸಿದ ಮೇಲೆ ಅವನನ್ನು ಆಲಂಗಿಸಿ ತೊಡೆಯಮೇಲೆ ಕುಳ್ಳಿರಿಸಿಕೊಂಡು ತತ್ತ್ವಮಸಿ

ಮುಂತಾದ ಮಹಾವಾಕ್ಯಗಳನ್ನೂ ಮುಮುಕ್ಷುಗಳು ನಿತ್ಯವೂ ಧ್ಯಾನಮಾಡ ತಕ್ಕ ರಹಸ್ಯವನ್ನೂ, ಸಂನ್ಯಾಸಿಗಳು ಆಚರಿಸತಕ್ಕದ್ದೆಂದು ವಿಶ್ವೇಶಸ್ಮೃತಿಯಲ್ಲಿ ಹೇಳಿರುವ ಧರ್ಮಗಳನ್ನೂ ಉಪದೇಶಿಸಿ ಕ್ರಮಸಂನ್ಯಾಸವನ್ನು ಕೊಟ್ಟು ತತ್ತ್ವೋಪದೇಶವನ್ನು ಮಾಡಿದರು. "ಆ ಪರಮಾತ್ಮನೇ ನಾನೆಂದು ತಿಳಿದು ಎಲ್ಲೆಲ್ಲಿಯೂ ಸಮದರ್ಶನನಾಗಿರು. ಮಿಕ್ಕ ಮಾತುಗಳನ್ನಾಡದಿರು, ಸ್ತ್ರೀಯರನ್ನು ನೋಡಬೇಡ. ಪುತ್ರ, ಮಿತ್ರ, ಸುವಸ್ತ್ರ, ಧನಧಾನ್ಯ, ರತ್ನ, ಮಣ್ಣು, ಕಲ್ಲು, ಕಟ್ಟಿಗೆ–ಇವುಗಳಲ್ಲಿ ಸಮದರ್ಶಿಯಾಗಿರು. ಅತ್ಯಾಹಾರ, ಅನಾಹಾರ, ಹಿಂಸಾ, ಅನೃತ, ಪ್ರತಿಗ್ರಹ, ಅಸೂಯೆ, ಮಾನಾಪಮಾನ–ಇವುಗಳನ್ನು ಬಿಟ್ಟು ಯಾವಾಗಲೂ ನಡೆದುಕೊಳ್ಳುವನಾಗು. ಜೀವನ್ಮುಕ್ತನಾಗಿ ಶರೀರವನ್ನು ಸುಟ್ಟಬೀಜ ಯಂತೆ ಮಾಡಿಕೊಂಡಿರು. ಕೌಪೀನಕಟಿಸೂತ್ರದಂಡಕಮಂಡಲುಗಳ ನ್ನಿಟ್ಟುಕೊ. ಕಾಷಾಯ ಅಥವಾ ನಾರುಬಟ್ಟೆ– ಇವುಗಳನ್ನುಟ್ಟುಕೊ. ಒಂದೇ ನಗರದಲ್ಲಿರಬೇಡ, ಒಂದೇ ಮನೆಯಲ್ಲಿ ಭಿಕ್ಷೆಯನ್ನು ಮಾಡದಿರು. ವಿಹಿತ ವಾದದ್ದನ್ನು ಬಿಟ್ಟು ಭಿಕ್ಷೆಯನ್ನುಂಡು ಧನಸಂಪಾದನೆಯಲ್ಲಿ ಉದ್ಯುಕ್ತನಾಗುವ ಯತಿಯು ನಿಂದಿತನಾಗುವನು. ನಿರ್ಗುಣ, ನಿಷ್ಕಲ, ನಿರ್ವಿಕಲ್ಪ, ನಿರಂಜನ ಬ್ರಹ್ಮವೇ ನಾನೆಂದು ಯಥಾಸುಖವಾಗಿ ವಿಹರಿಸುತ್ತಿರು' ಎಂದು ಅಪ್ಪಣೆ ಕೊಟ್ಟರು (ಚಿ. ಶಂ. ೯–೧೪ ರಿಂದ ೩೪). ಗುರುಪರಂಪರೆಯನ್ನು ಕೇಳುವ ಕುತೂಹಲವನ್ನು ಶಂಕರರು ಪ್ರಕಟಿಸಲು ಸರ್ವವಿದ್ಯೆಗಳಿಗೂ ಈಶನಾದ ಶಿವನು ವಿಷ್ಣುವಿಗೆ ಉಪದೇಶಿಸಿದನು : ವಿಷ್ಣುವು ಬ್ರಹ್ಮನಿಗೆ, ಬ್ರಹ್ಮನು ವಸಿಷ್ಠನಿಗೆ, ವಸಿಷ್ಠನು ಶಕ್ತಿಗೆ, ಶಕ್ತಿಯು ಪರಾಶರನಿಗೆ, ಆತನು ವ್ಯಾಸನಿಗೆ, ವ್ಯಾಸನು ಶುಕನಿಗೆ, ಶುಕನು ಗೌಡಪಾದನಿಗೆ–ಹೀಗೆ ಬೋಧಿಸಿದರು. ಆ ಗೌಡಪಾದರೇ ನಮ್ಮ ಗುರುಗಳು–ಎಂದು ಹೇಳಿ ಗೌಡಪಾದರನ್ನು ಹೊಗಳಿದೆ (ಚಿ.ಶಂ. ೯–೩೬ ರಿಂದ ೪೮),

## ಆಚಾರ್ಯರ ಸಂನ್ಯಾಸದ ಬಗ್ಗೆ ವಿಚಾರ

೭೬. ಈಗ ಮೂರೂ ಶಂಕರವಿಜಯಗಳ ಹೋಲಿಕೆಯಿಂದ ವಿಮರ್ಶಿಸಿ ತಿಳಿಯತಕ್ಕ ವಿಷಯಗಳು ಕೆಲವಿವೆ :

ಮೊದಲನೆಯದಾಗಿ ಶಂಕರಾಚಾರ್ಯರು ಮೊಸಳೆ ಹಿಡಿದಾಗ ಮನಸ್ಸಿನಲ್ಲಿ ಸಂನ್ಯಾಸವನ್ನು ಮಾಡಿದರು (ಸಂನ್ಯಸನಂ ಮನಸಾ ವ್ಯಧಾತ್ ಮಾ. ಶಂ. ೫–೯೭) ಎಂದು ಹೇಳಿದ್ದ ಮಾಧವನು ಗೋವಿಂದಭಗವತ್ಪಾದರನ್ನು ಅವರು ಕಂಡಾಗ ದಂಡಕಾಷಾಯವಸ್ತ್ರಗಳನ್ನಿಟ್ಟುಕೊಂಡಿದ್ದರೆಂದಿದಾನೆ (ದಣ್ಡಾನ್ವಿತೇನ ಧೃತರಾಗನವಾಮ್ಬರೇಣ ಮಾ. ಶಂ. ೫–೯೦). ದಂಡಕಾಷಾಯವಸ್ತ್ರಗಳ ಧಾರಣೆ ಯಾವಾಗ ಆಯಿತು ? ಗುರುಗಳು 'ನಾಲ್ಕು ಮಹಾವಾಕ್ಯಗಳನ್ನು'

ಉಪದೇಶಿಸಿದರು (ಮಾ. ಶಂ. ೫–೧೦೩) ಎಂದಿಷ್ಟೇ ಹೇಳಿದಾನೆಯೇ ಹೊರತು ಯಾವ ಸಂಸ್ಕಾರವನ್ನಾದರೂ ಅವರು ಮಾಡಿಸಿದರೆಂದು ಬರೆದಿಲ್ಲ. ಆ ಗುರೂಪದೇಶವೇ ಕ್ರಮಸಂನ್ಯಾಸವೆಂದು ಮಾಧವಕವಿಯ ಅಭಿಪ್ರಾಯವೆ ? ಚಿದ್ವಿಲಾಸೀಯದಲ್ಲಿ ಕ್ರಮಸಂನ್ಯಾಸಪ್ರಾಪ್ತಿಗಾಗಿ (ಕ್ರಮಸಂನ್ಯಾಸೋಪಲಬ್ಧಯೇ ೮–೩೭) ಗುರುವನ್ನು ಹುಡುಕಿಕೊಂಡು ಹೋದರು ಎಂದಿದೆ ; ಗೋವಿಂದಭಗವತ್ಪಾದರು ಕ್ರಮಸಂನ್ಯಾಸವನ್ನು ಕೊಟ್ಟು (ದತ್ವಾ ಕ್ರಮಸಂನ್ಯಾಸನಮ್ ಚಿ. ಶ ೯–೨೦) ತತ್ತ್ವಬೋಧನೆಯನ್ನು ಮಾಡಿದರು ಎಂದಿದೆ. ಹೀಗೆ ಕ್ರಮಸಂನ್ಯಾಸಶಬ್ದವನ್ನು ಮತ್ತೆಮತ್ತೆ ಪ್ರಯೋಗಿಸಿರುವದರಿಂದ ಆಚಾರಪ್ರಿಯರಾದ ಚಿದ್ವಿಲಾಸರು ಯಾವದೋ ಒಂದು ಅಭಿಪ್ರಾಯದಿಂದಲೇ ಆ ಶಬ್ದವನ್ನು ಉಪಯೋಗಿಸಿದಾರೆಂದು ಹೇಳಬೇಕಾಗುತ್ತದೆ. ಆಗ ಗುರುಗಳ ಉಪದೇಶದಲ್ಲಿ ಕೌಪೀನಕಟಿಸೂತ್ರದಂಡಕಮಣ್ಡಲುಕಾಷಾಯಾದಿಗಳನ್ನು ಧರಿಸು (ಕೌಪೀನಂ ಕಟಿಸೂತ್ರಂ ಚ ಧತ್ಸ್ವ ದಣ್ಡಕಮಣ್ಡಲೂ । ಕಾಷಾಯಂ ವಲ್ಕಲಂ ವಾಪಿ ಚಿ. ಶಂ. ೬–೨೫) ಎಂದಿರುವದರಿಂದ ಕ್ರಮಸಂನ್ಯಾಸವಾದ ಮೇಲೆ ಆಚಾರ್ಯರು ಕಾಷಾಯದಂಡಾದಿಗಳನ್ನು ಧರಿಸಿದರು ಎಂದು ತೋರುತ್ತದೆ. ಶಂಕರಭಗವತ್ಪಾದರವರು ಸಂನ್ಯಾಸವಿಷಯಕ್ಕೆ ಬರೆಯುವಾಗ ಛಾಂದೋಗ್ಯೋಪನಿಷದ್ಭಾಷ್ಯದಲ್ಲಿ "ಬ್ರಹ್ಮಸಂಸ್ಥಶಬ್ದೋ ನಿವೃತ್ತಸರ್ವಕರ್ಮತತ್ಸಾಧನಪರಿವ್ರಾಡೇಕವಿಷಯೇ ಆತ್ಯಾಶ್ರಮಿಣಿ ಪರಮಹಂಸಾಖ್ಯೇ ವೃತ್ತ ಇಹ ಭವಿತುಮರ್ಹತಿ। ಮುಖ್ಯಾಮೃತತ್ವಫಲಶ್ರವಣಾತ" । ಅತಶ್ಚ ಇದಮೇವೈಕಂ ವೇದೋಕ್ತಂ ಪಾರಿವ್ರಾಜ್ಯಮ್ । ನ ಯಜ್ಞೋಪವೀತತ್ರಿದಣ್ಡಕಮಣ್ಡಲ್ವಾದಿಪರಿಗ್ರಹಃ' (ಬ್ರಹ್ಮಸಂಸ್ಥ ಎಂಬ ಶಬ್ದವು ಸರ್ವಕರ್ಮಗಳನ್ನೂ ಕರ್ಮಸಾಧನಗಳನ್ನೂ ಬಿಟ್ಟಿರುವ ಆತ್ಯಾಶ್ರಮಿಯಾದ ಪರಮಹಂಸನೆಂಬ ಪರಿವ್ರಾಜಕನಿಗೇ ಸಲ್ಲತಕ್ಕದ್ದೆಂಬುದು ಯುಕ್ತವು. ಏಕೆಂದರೆ ಮುಖ್ಯವಾದ ಅಮೃತತ್ವ–ಮೋಕ್ಷ–ಎಂಬ ಫಲವನ್ನು ಶ್ರುತಿಯಲ್ಲಿ ಹೇಳಿರುತ್ತದೆ. ಆದ್ದರಿಂದ ಇದೊಂದೇ ನಿಜವಾದ ವೇದೋಕ್ತವಾದ ಪಾರಿವ್ರಾಜ್ಯವೇ ಹೊರತು, ಯಜ್ಞೋಪವೀತತ್ರಿದಣ್ಡಕಮಣ್ಡಲ್ವಾದಿಗಳನ್ನು ಸ್ವೀಕರಿಸುವದಲ್ಲ–ಎಂದು (ಛಾಂ. ಭಾ. ೨–೨೩–೧) ಬರೆದಿರುತ್ತಾರೆ. ಅಲ್ಲಿ ಸಂನ್ಯಾಸಿಯು ಆಶ್ರಮವೇಷ(ಲಿಂಗ)ವಿಲ್ಲದವನಾಗಿರಬೇಕು–ಎಂಬರ್ಥದ ಸ್ಮೃತಿಯನ್ನು ಅವರು ಉದಾಹರಿಸಿರುತ್ತಾರೆ. ಆಚಾರ್ಯರಿಗೆ ಗೋವಿಂದಭಗವತ್ಪಾದರವರು ಕೊಟ್ಟ ಸಂನ್ಯಾಸವು ಪರಮಹಂಸಪಾರಿವ್ರಾಜ್ಯವೆಂಬುದರಲ್ಲಿ ಯಾವ ಸಂಶಯವೂ ಇಲ್ಲ. 'ಪರಮಹಂಸಪರಿವ್ರಾಜಕಾಚಾರ್ಯ' ಎಂಬ ಒಕ್ಕಣೆಯು ಅವರ ಗ್ರಂಥಗಳ ಸಮಾಪ್ತಿವಾಕ್ಯಗಳಲ್ಲೆಲ್ಲ ನಿಯಮವಾಗಿ ಬರುತ್ತದೆ. ಅವರಿಗೆ ದಂಡಕಾಷಾಯಾದಿಗಳು ಇದ್ದವೆ, ಇಲ್ಲವೆ? ಪರಮಹಂಸಸಂನ್ಯಾಸಿಗಳಿಗೆ ದಂ ಡ ಧಾ ರ ಣ ವು ಕೃತಾಕೃತವೆಂದೇ ಈಗಿನ

ನಿಬಂಧಗಳಲ್ಲಿಯೂ ಕಾಣಿಸುತ್ತಿದೆ. ಆದರೆ ಈಗಿನ ಪರಮಹಂಸರೆಂಬವರು 'ದಂಡತರ್ಪಣ'ವೆಂಬ ಕರ್ಮವೊಂದನ್ನು ಇಟ್ಟುಕೊಂಡಿರುತ್ತಾರೆ; ದಂಡಕ್ಕೆ ಬಟ್ಟೆಯಿಂದ ಮುದ್ರಾಂಕವನ್ನು ತೋರಿಸುವ ಬಟ್ಟೆಗಳನ್ನು ಕಟ್ಟಿಕೊಂಡೂ ಇರುತ್ತಾರೆ. ಇದೇನು ಶ್ರೌತವೋ, ಸ್ಮಾರ್ತವೋ ? ಯಾವ ಸ್ಮೃತಿಗಳಲ್ಲಿಯೂ ಈ ಸಂಬಂಧದ ವಾಕ್ಯಗಳು ಕಾಣಿಸುತ್ತಿಲ್ಲವಲ್ಲ! ಚಿದ್ವಿಲಾಸರು ಉದಾಹರಿಸಿರುವ ವಿಶ್ವೇಶ್ವರಸ್ಮೃತಿಯಲ್ಲಿ ಮುದ್ರೆಗಳು ಸಾಂಪ್ರದಾಯಿಕವೆಂದು ಬರೆದಿದೆ[1]; ದಂಡತರ್ಪಣವು ಅಲ್ಲಿಯೂ ಕಾಣಿಸುವದಿಲ್ಲ. ಸೂತ್ರಭಾಷ್ಯದಲ್ಲಿ (೩-೪-೨೦) ಹೇಳಿರುವಂತೆ ಕರ್ಮತತ್ಸಾಧನಗಳನ್ನು ಪರಿತ್ಯಜಿಸಿ ಶಮದಮಾದಿಗಳಿಂದೊಡಗೂಡಿ ಬ್ರಹ್ಮಾನುಸಂಧಾನದಲ್ಲಿರುವದೇ ಪಾರಮಹಂಸ್ಯವಾದರೆ ಪರಮಹಂಸರಿಗೆ ದಂಡವೂ ಅದರ ತರ್ಪಣವೂ ಹೇಗೆ ನಿಯತವಾಗಿ ಪ್ರಾಪ್ತವಾಗುತ್ತವೆ? ದಂಡಗ್ರಹಣವು ಕೃತಾಕೃತವಾದರೆ ಅದು ಪರಮಹಂಸನ ಗುರುತೆಂದು ಭಾವಿಸಬಹುದೆ? ಇದನ್ನು ಶಾಸ್ತ್ರಜ್ಞರು ವಿವೇಚಿಸಿನೋಡಬೇಕಾಗಿದೆ.

## ಮಹಾವಾಕ್ಯಗಳ ಬಗ್ಗೆ ವಿಮರ್ಶೆ

೬೭. ಎರಡನೆಯದಾಗಿ (ಗೋವಿಂದಭಗವತ್ಪಾದರು ಶಂಕರಾಚಾರ್ಯರಿಗೆ ನಾಲ್ಕು ಮಹಾವಾಕ್ಯಗಳನ್ನು (ಚತುರ್ಭಿರ್ವೇದಶಿಖರವಚೋಭಿಃ) ಉಪದೇಶ ಮಾಡಿದರೆಂದು ಮಾಧವೀಯದಲ್ಲಿದೆ : ತತ್ತ್ವಮಸ್ಯಾದಿದಿವ್ಯಮಹಾವಾಕ್ಯಗಳನ್ನು (ಮಹಾವಾಕ್ಯಾನಿ ದಿವ್ಯಾನಿ ತತ್ತ್ವಮಸ್ಯಾದಿಕಾನ್ಯಪಿ ಚಿ.ಶಂ. ೯-೧೮)ಉಪದೇಶಿಸಿದರೆಂದಿದೆ. ಮಹಾವಾಕ್ಯಗಳೆಂದರೇನು? ಜೀವಬ್ರಹ್ಮೈಕ್ಯವನ್ನು ಹೇಳುವ ವಾಕ್ಯಗಳೆಂದು ಅಭಿಪ್ರಾಯವಾದರೆ ಅವು ನಾಲ್ಕೇ ಎಂದು ಗೊತ್ತುಪಡಿಸುವದಕ್ಕೇನು ಪ್ರಮಾಣ? ಸಂನ್ಯಾಸಗ್ರಹಣಕಾಲದಲ್ಲಿ ಈ ವಾಕ್ಯಗಳನ್ನು ಉಪದೇಶಿಸಬೇಕೆಂಬುದಕ್ಕೆ ಶ್ರುತಿಯಲ್ಲಾಗಲಿ ಸ್ಮೃತಿಯಲ್ಲಾಗಲಿ ವಿಧಿಯು ಇರುವದೆ? ಚಿದ್ವಿಲಾಸರು ಉದಾಹರಿಸಿರುವ ವಿಶ್ವೇಶ್ವರರು ನಿಬಂಧಕಾರರೇ ಹೊರತು ಸ್ಮೃತಿಕಾರರಲ್ಲ. ಆದ್ದರಿಂದ ಅವರು ಹೇಳುವ ಮಹಾವಾಕ್ಯೋಪದೇಶಾದಿಗಳನ್ನು ಸ್ಮೃತ್ಯಂತರಕ್ಕೆ ಹೋಲಿಸಿಯೇ ಪ್ರಮಾಣಿಸಬೇಕಾಗಿದೆ ಸಂನ್ಯಾಸಿಗೆ ಓಂಕಾರೋಪಾಸನೆಯೇ ಮುಖ್ಯವೆಂಬುದು 'ಬ್ರಹ್ಮಸಂಸ್ಥೋಽಮೃತತ್ವಮೇತಿ' ಎಂಬ ಉಪನಿಷದ್ವಾಕ್ಯದಿಂದಲೇ ಸಿದ್ಧವಾಗುತ್ತದೆ. ಹೀಗಿರುವಲ್ಲಿ ಉಪಾಸ್ಯವೆಂದೂ ಮೋಕ್ಷಕ್ಕೆ ಸಾಧನವಾಗಿ ಜಿಜ್ಞಾಸ್ಯವೆಂದೂ ಪ್ರತ್ಯಕ್ಷಶ್ರುತಿಯಿಂದ ಚೋದಿತವಾಗಿರುವ ಓಂಕಾರದ

1. ವಿಶ್ವೇಶ್ವರಸ್ಮೃತಿ ಎಂಬುದು ಇತ್ತೀಚಿನ ನಿಬಂಧವಾಗಿರುವದರಿಂದ ಚಿದ್ವಿಲಾಸರು ಬಹಳ ಈಚಿನವರೆಂದೇ ಆಗುತ್ತದೆ. ಅವರ ಕಾಲವನ್ನು ನಿರ್ಧಾರಣೆಮಾಡುವದಕ್ಕೆ ಇದೊಂದು ಸಾಧನವೆಂದು ಬಗೆಯಬಹುದು.

ಉಪದೇಶವನ್ನು ಬಿಡಿಸಿ ಅವಿಹಿತವಾಗಿರುವ ಮಹಾವಾಕ್ಯೋಪದೇಶವು ಹೇಗೆ ಬಂದೀತು ? ಶಂಕರರಹಸ್ಯೋಪನಿಷತ್ತಿನಲ್ಲಿ ಇದರ ಪ್ರತಿಪಾದನೆಯಿರುವದು ನಿಜ ; ಆದರೆ ಆ ಉಪನಿಷತ್ತು ಸರ್ವಸಂಪ್ರತಿಪನ್ನವಾದ ಪ್ರಮಾಣವೆನ್ನುವದಕ್ಕೆ ಆಧಾರವಿಲ್ಲ. ಲಕ್ಷ್ಮಣಸೂರಿಕೃತ ಭಗವತ್ಪಾದಾಭ್ಯುದಯದಲ್ಲಿ 'ಇತಿ ಪ್ರಶಸ್ಯ ಭಗವಾನ್ ಸಂನ್ಯಾಸಂ ತಸ್ಯ ಮಾನಸಮ್ | ಕರ್ಮಣಾ ವಿಶದೀಕೃತ್ಯ ಮಹಾವಾಕ್ಯ ಚತುಷ್ಟಯಮ್ | ಉಪಾದಿಶದ್ಯತೀನ್ದ್ರಾಯ ಧ್ಯಾನನ್ಯಾಸಾದಿಪೂರ್ವಕಮ್ ||' (ಭ. ಅ. ೩-೭೪,೭೫) ಧ್ಯಾನನ್ಯಾಸಾದಿಪೂರ್ವಕವಾಗಿ ನಾಲ್ಕು ಮಹಾವಾಕ್ಯಗಳನ್ನು ಉಪದೇಶಿಸಿದರೆಂದು ಅದೇ ಉಪನಿಷತ್ತಿನ ಆಧಾರದಮೇಲೆ ಬರೆದಿದೆ. ಶ್ರೀಶಂಕರಭಗವತ್ಪಾದರವರು ಆ ಉಪನಿಷತ್ತನ್ನು ಎಲ್ಲಿಯೂ ಪ್ರಮಾಣವಾಗಿ ಹಿಡಿದಿಲ್ಲ. ಇದಲ್ಲದೆ ಈ ವಾಕ್ಯಗಳು ಆಯಾ ಉಪನಿಷತ್ತುಗಳು ಮಹಾತಾತ್ಪರ್ಯದಿಂದ ಬೋಧಿಸುತ್ತಿರುವ ಬ್ರಹ್ಮಾತ್ಮೈಕ್ಯವನ್ನು ಸಂಗ್ರಹಿಸಿ ತಿಳಿಯಿಸುವದರಿಂದ ಮಹಾವಾಕ್ಯಗಳೆನಿಸಿರುವವೇ ಹೊರತು ಜಪಾರ್ಥವಾಗಿ ವಿಧಿಸಿರುವ ಮಂತ್ರಗಳೆಂಬ ಕಾರಣದಿಂದಲ್ಲ. ವೇದಾಂತವಾಕ್ಯಗಳ ಅರ್ಥದ ಜ್ಞಾನವಾದ ಸಮಕಾಲದಲ್ಲಿಯೇ ಕರ್ತವ್ಯವೆಲ್ಲವೂ ಮುಗಿದುಹೋಗಿಬಿಡುತ್ತದೆ (ವಾಕ್ಯಾರ್ಥಜ್ಞಾನಸಮಕಾಲ ಏವ ತು ಪರ್ಯವಸಿತೋ ಭವತಿ । ಮುಂ. ಭಾ. ೧-೧-೬) ಎಂದು ಆಚಾರ್ಯರು ತಮ್ಮ ಭಾಷ್ಯಗಳಲ್ಲಿ ಮತ್ತೆಮತ್ತೆ ಸಾರಿ ಹೇಳಿರುತ್ತಾರೆ. ಆದ್ದರಿಂದ ಈ ಮಹಾವಾಕ್ಯಗಳನ್ನು ಮಂತ್ರಗಳಂತೆ ಉಪದೇಶಿಸುವದೂ ಜಪಕ್ಕೆ ಇಟ್ಟುಕೊಳ್ಳುವದೂ ಶಂಕರಭಗವತ್ಪಾದರ ವೇದಾಂತಸಿದ್ಧಾಂತಕ್ಕೇ ವಿರುದ್ಧವೆಂದಾಯಿತು. ಏಕೆಂದರೆ ಈ ವಾಕ್ಯಗಳು ಬ್ರಹ್ಮಾತ್ಮಸ್ವರೂಪವನ್ನು ತಿಳಿಸಿಕೊಡುವದರಲ್ಲಿಯೇ ಪರ್ಯವಸಾನವಾಗುವವೇ ಹೊರತು ವಿಧಿಶೇಷವಾಗಿರುವ ಬ್ರಹ್ಮವನ್ನು ತಿಳಿಸುವದಿಲ್ಲವೆಂದು ಆಚಾರ್ಯರು ಸಮನ್ವಯಾಧಿಕರಣಭಾಷ್ಯದಲ್ಲಿ ನಿರ್ಣಯಿಸಿರುತ್ತಾರೆ. ಮಹಾವಾಕ್ಯವೆಂಬ ಶಬ್ದವೇ ಶಾಂಕರಭಾಷ್ಯಗಳಲ್ಲಿ ಕಾಣಿಸುವದಿಲ್ಲ.[1] ಆದ್ದರಿಂದ ಆಚಾರ್ಯರಿಗೆ ಗೋವಿಂದಭಗವತ್ಪಾದರವರು ಮಹಾವಾಕ್ಯಗಳ ಉಪದೇಶವನ್ನು ಮಾಡಿದರೆ ? –ಎಂಬುದು ಪರಿಶೀಲನೀಯವಾಗಿರುತ್ತದೆ.

## ಗೋವಿಂದಭಗವತ್ಪಾದರ ಗುರುಪರಂಪರೆಯಲ್ಲಿ ತೊಡಕು

೬೮. ಮೂರನೆಯದಾಗಿ ಮಾಧವೀಯದಲ್ಲಿಯೂ ವ್ಯಾಸಾಚಲೀಯದಲ್ಲಿಯೂ ಗುರುಪರಂಪರೆಯನ್ನು ಹೇಳುವಾಗ 'ವ್ಯಾಸಃ ಪರಾಶರಸುತಃ'(ಮಾ.ಶಂ

---

1. ಐತರೇಯಭಾಷ್ಯದಲ್ಲಿ 'ವೇದಾನ್ತಮಹಾಭೇರ್ಯಾಂ ತತ್ಕರ್ಣಮೂಲೇ ತಾಡ್ಯಮಾನಾಯಾಮ್' ಐ. ಭಾ. ೧-೩ ಎಂದಿರುವ ವಾಕ್ಯವನ್ನು 'ಮಹಾವಾಕ್ಯಭೇರ್ಯಾಮ್' ಎಂದು ಕೆಲವರು 'ಮಹಾವಾಕ್ಯ'ದಲ್ಲಿರುವ ಅಭಿನಿವೇಶದಿಂದ ತಿದ್ದಿಕೊಂಡಿರುವದುಂಟು. ಆದರೆ ಅದು ಸರ್ವಸಂಮತಪಾಠವಲ್ಲ.

೫-೧-೫) ಎಂಬಲ್ಲಿ ವ್ಯಾಸರು, ಶುಕರು, ಗೌಡಪಾದರು, ಗೋವಿಂದಭಗವತ್ಪಾದರು–ಈ ನಾಲ್ವರನ್ನೇ ಉಲ್ಲೇಖಿಸಿದೆ.

ಚಿದ್ವಿಲಾಸೀಯದಲ್ಲಿ ಶಿವ, ವಿಷ್ಣು, ಬ್ರಹ್ಮ, ವಸಿಷ್ಠ, ಶಕ್ತಿ, ಪರಾಶರ–ಇವರನ್ನು ಹಿಂದುಗಡೆಗೆ ಸೇರಿಸಿದೆ. ಈ ದೇಶದಲ್ಲಿ ಶೃಂಗೇರಿಮಠದ ಸಂಪ್ರದಾಯದಂತೆ ಶಾಂತಿಪಾಠವನ್ನು ಮಾಡುವವರು 'ನಾರಾಯಣಂ ಪದ್ಮಭುವಂ ವಸಿಷ್ಠಂ ಶಕ್ತಿಂ ಚ ತತ್ಪುತ್ರಪರಾಶರಂ ಚ | ವ್ಯಾಸಂ ಶುಕಂ ಗೌಡಪದಂ ಮಹಾನ್ತಂ ಗೋವಿನ್ದಯೋಗೀನ್ದ್ರಮಥಾಸ್ಯ ಶಿಷ್ಯಮ್ ||' ಎಂದು ನಾರಾಯಣಾದಿಯಾಗಿಯೇ ಹೇಳುತ್ತಾರೆ ಆನಂತಾನಂದಗಿರೀಯದಲ್ಲಿ ಈ ವಾಕ್ಯವೇ (ಆ.ಶಂ.ಪ್ರ. ೬೦ ಪು. ೨೨೪)[1] ಇದೆ. ಮಾಧವಕವಿ ಪರಾಶರರವರೆಗಿನ ಗುರುಗಳನ್ನು ಬಿಟ್ಟಿದ್ದಕ್ಕೇನು ಕಾರಣ ? ಚಿದ್ವಿಲಾಸೀಯದಲ್ಲಿರುವ ಶಿವನನ್ನೇಕೆ ನಾರಾಯಣಾದಿಶ್ಲೋಕದಲ್ಲಿ ಸಂಗ್ರಹಿಸಲಿಲ್ಲ ?– ಎಂಬುದೂ ಇಲ್ಲಿ ವಿಚಾರಣೀಯವಾಗಿದೆ. ನೀಲಕಂಠಶಾಸ್ತ್ರಿವಿರಚಿತ ಶಂಕರಾಭ್ಯುದಯಕಾವ್ಯದಲ್ಲಿ 'ಹರಿಧಾತೃವಸಿಷ್ಠಶಕ್ತಿತತ್ತನಯವ್ಯಾಸಶುಕೈಃ ಸಗೌಡಪಾದೈಃ | ಗುರುಭಿರ್ಗಮಿತಾಂ ಪರಂಪರಂ ಪರವಿದ್ಯಾಂ ಮಹತೀಮವಾಪ ಸಃ ||' (ಶಂ. ಆ. ೨–೫೦) ಎಂದು ನಾರಾಯಣಾದಿಯಾಗಿಯೇ ಇದೆ. ಈಗ ಶೃಂಗೇರಿಯ ಮಠದ ಸಂಪ್ರದಾಯದವರೂ ಕೆಲವರು 'ಸದಾಶಿವಸಮಾರಮ್ಭಾಂ ಶಙ್ಕರಾಚಾರ್ಯಮಧ್ಯಮಾಮ್ | ಅಸ್ಮದಾಚಾರ್ಯಪರ್ಯನ್ತಾಂ ವನ್ದೇ ಗುರುಪರಮ್ಪರಾಮ್||'ಎಂದು ಹೇಳಿಕೊಳ್ಳುವದು ಕೇಳಬರುತ್ತಿದೆ. ಅಂತೂ ಹೀಗೆ ಅದ್ವೈತಸಂಪ್ರದಾಯವು ಸದಾಶಿವನಿಂದ ಮೊದಲಾಯಿತೊ, ನಾರಾಯಣನಿಂದಲೇ ಬಂದಿತೊ–ಎಂಬುದೊಂದು ತೊಡಕಿನ ಪ್ರಶ್ನೆಯಾಗಿಬಿಟ್ಟಿದೆ.

### ಶಂಕರಾಚಾರ್ಯರು

### ಗುರುಗಳಲ್ಲಿ ಯೋಗಾಭ್ಯಾಸವನ್ನು ಮಾಡಿದರೆ ?

೪೪. ನಾಲ್ಕನೆಯದಾಗಿ ಇಲ್ಲಿ ವಿಮರ್ಶನೀಯವಾಗಿರುವ ವಿಷಯವೇನೆಂದರೆ 'ಗೋವಿಂದಯೋಗೀಂದ್ರ'ರೆಂದೇ ಪ್ರಸಿದ್ಧರಾಗಿದ್ದ ಗೋವಿಂದಭಗವತ್ಪಾದರವರು ಶಂಕರರಿಗೆ ಯೋಗವಿದ್ಯೆಯನ್ನು ಹೇಳಿಕೊಟ್ಟರೆ, ಇಲ್ಲವೆ? ಆವರು ರಸಸಿದ್ಧರೆಂಮ ನಂಬುವವಕ್ಕೆ ಇರುವ ತೊಡಕುಗಳನ್ನು ಆಗಲೆ (ಪು. ೭೫)ರಲ್ಲಿ ಹೇಳಿದ್ದೇವೆ. ಶಂಕರಾಚಾರ್ಯರು ಯೋಗವನ್ನು ಯಾರಲ್ಲಿ ಅಭ್ಯಾಸಮಾಡಿದರೆಂಬುದು ಸ್ಫುಟವಾಗಿ ಎಲ್ಲಿಯೂ ತಿಳಿಯಬರುವದಿಲ್ಲ. ಅವರು ಯೋಗಪ್ರತ್ಯುಕ್ತ್ಯಧಿಕರಣಭಾಷ್ಯದಲ್ಲಿ ಯೋಗದರ್ಶನವನ್ನು ತಿರಸ್ಕರಿಸಿದ್ದರೂ 'ಯೇನ ತ್ವಂಶೇನ ನ

1. ದೇವನಾಗರಿಯ ಆನಂದಗಿರೀಯವು ಈಚೆಗೆ ಸಿಕ್ಕಿದೆ. ಅದರಲ್ಲಿ ಇದು ೬೨ನೆಯ ಪ್ರಕರಣ ಪು. ೧೯೧ ಆಗಿದೆ. ಇನ್ನುಮುಂದೆ ಆ ಸಂಸ್ಕರಣದ ಪ್ರತಿಯನ್ನು 'ದೇ' ಎಂಬ ಅಕ್ಷರದಿಂದ ಸೂಚಿಸುತ್ತಾಹೋಗುವೆವು.

ವಿರುಧ್ಯೇತೇ ತೇನೇಷ್ಟಮೇವ ಸಾಂಖ್ಯಯೋಗಸ್ಮೃತ್ಯೋಃ ಸಾವಕಾಶತ್ವಮ್' (ಸೂ ಭಾ. ೨-೧-೩) ಆದರೆ ಯಾವ ಅಂಶದಲ್ಲಿ ಸಾಂಖ್ಯಯೋಗಸ್ಮೃತಿಗಳು ವೇದವಿರುದ್ಧವಲ್ಲವೋ ಅಷ್ಟರಮಟ್ಟಿಗೆ ಅವಕ್ಕೆ ಅವಕಾಶವಿದೆಯೆಂಬುದು ನಮಗೆ ಇಷ್ಟವೇ –ಎಂದು ಬರೆದಿರುತ್ತಾರೆ. ಇನ್ನೊಂದು ಕಡೆಯಲ್ಲಿ 'ಯೋಗೋಽಪ್ಯಣಿಮಾದ್ಯೈಶ್ವರ್ಯಪ್ರಾಪ್ತಿಫಲೋ ಸ್ಮರ್ಯಮಾಣೋ ನ ಶಕ್ಯತೇ ಸಾಹಸಮಾತ್ರೇಣ ಪ್ರತ್ಯಾಖ್ಯಾತುಮ್' (ಸೂ ಭಾ, ೧-೩-೩೪) ಯೋಗದಿಂದ ಅಣಿಮಾದ್ಯೈಶ್ವರ್ಯರೂಪವಾದ ಫಲವು ಬರುತ್ತದೆಯೆಂದು ಸ್ಮೃತಿಯಲ್ಲಿರುವದನ್ನು ಸಾಹಸಮಾತ್ರದಿಂದ ಅಲ್ಲಗಳೆಯುವದು ಆಗಲಾರದು–ಎಂದು ಬರೆದಿರುತ್ತಾರೆ. ಶಂಕರವಿಜಯಗಳಲ್ಲಿ ಆಚಾರ್ಯರ ಯೋಗಶಕ್ತಿಯನ್ನು ವರ್ಣಿಸಿಯೂ ಇದೆ. ಹೀಗಿರುವಲ್ಲಿ ಗೋವಿಂದಭಗವತ್ಪಾದರು ಯೋಗಶಾಸ್ತ್ರಪ್ರವರ್ತಕರಾದ ಪತಂಜಲಿಗಳ ಅವತಾರವೇ ಎಂದು ವರ್ಣಿಸಿದ್ದರೂ ಅವರಲ್ಲಿ ಶಂಕರರು ಯೋಗವನ್ನು ಅಭ್ಯಾಸ ಮಾಡಿದರೆಂದು ಬರೆಯಲಿಲ್ಲವೇಕೆ ? –ಎಂಬುದು ಪರಿಶೀಲಿಸಬೇಕಾಗಿದೆ.

ಶಂಕರಭಗವತ್ಪಾದರು ಈ ಗುರುಗಳಿಂದಲೇ ಯೋಗವನ್ನು ಕಲಿತಿರಬೇಕೆಂಬುದಕ್ಕೆ ಮಾಧವೀಯದಲ್ಲಿರುವ ಒಂದು ಅದ್ಭುತಘಟನೆಯೂ ಸಾಕ್ಷಿಯಾಗಿದೆ. ಆಚಾರ್ಯರು ಗುರುಸೇವೆಯನ್ನು ಮಾಡಿಕೊಂಡಿರುವಲ್ಲಿ ಮಳೆಗಾಲವು ಬಂದಿತು. ಒಮ್ಮೆ ಐದುದಿನಗಳವರೆಗೂ ಒಂದೇಸಮನೆ ಆನೆಯಸೊಂಡಿಲಗಾತ್ರದ ಧಾರೆಗಳ ಮಳೆ ಸುರಿಯಿತು. ನದಿಯ ನೀರು ಮರಗಳನ್ನು ಕೂಡ ಕೆಡವಿ ಕೊಚ್ಚಿಕೊಂಡು ಉಕ್ಕೇರಿಬಂದಿತು. ಜನರೆಲ್ಲರೂ ಭಯಗ್ರಸ್ತರಾಗಿದ್ದರು. ಗುರುಗಳಾದ ಗೋವಿಂದಭಗವತ್ಪಾದರು ಸಮಾಧಿಸ್ಥರಾಗಿದ್ದರಿಂದ ಅವರನ್ನು ಎಚ್ಚರಗೊಳಿಸಿ ವಿಷಯವನ್ನು ತಿಳಿಸುವದಕ್ಕಾಗದೆ ಶಂಕರರು ತಮ್ಮ ಕರಕಮಂಡಲುವನ್ನೇ ಪ್ರವಾಹದಮುಂದೆ ಇಟ್ಟರು. ನೀರೆಲ್ಲವೂ ಅದರೊಳಗೆ ಹೊಕ್ಕು ಅಡಗಿಕೊಂಡಿತು (ಮಾ. ಶಂ. ೫. ೧೩೫ರಿಂದ ೧೫೯) ಸಮಾಧಿಯಿಂದೆಚ್ಚತ್ತ ಗುರುಗಳು ಇಷ್ಟು ಬೇಗನೆ ಇವನಿಗೆ ಯೋಗಸಿದ್ಧಿಯು ದೊರೆಯಿತಲ್ಲ !– ಎಂದು ಸಂತೋಷಪಟ್ಟರು. (ಯೋಗಸಿದ್ಧಿಮಚಿರಾದಯಮಾಪೇತ್ಯಭ್ಯಪದ್ಯತತರಾಂ ಪರಿತೋಷಮ್ (ಮಾ.ಂ ಶಂ. ೫– ೧೫೯). ಕಥೆಯು ಸಾಮಾನ್ಯರು ಎಂದಿಗೂ ನಂಬಲಾರದಷ್ಟು ಅದ್ಭುತಘಟನೆಯೆಂಬುದು ನಿಜವಾದರೂ ಈ ಗುರುಗಳಲ್ಲಿ ಆಚಾರ್ಯರಿಗೆ ಯೋಗವಿದ್ಯೆಯ ಅಭ್ಯಾಸವೂ ಆಯಿತೆಂದೇ ಮಾಧವಕವಿಯ ಅಭಿಪ್ರಾಯವೆಂತ ಹೇಳಲು ನಂಬುವದಕ್ಕೆ ಅಡ್ಡಿಯಿಲ್ಲವೆಂಬುದು ಸ್ಪಷ್ಟ. ಇದಲ್ಲದೆ ಚಿನ್ನದ ನೆಲ್ಲಿಕಾಯಿಗಳ ಮಳೆಯನ್ನು ಸುರಿಯಿಸಿದ ಅದ್ಭುತವನ್ನು ಇದರ ಹಿಂದೆಯೇ ಮಾಧವೀಯದಲ್ಲಿ ವರ್ಣಿಸಿರುತ್ತದೆ. ಆದರೆ ಈ ವಿಷಯಕ್ಕೆ ಮಿಕ್ಕ ಶಂಕರವಿಜಯಗಳ ಬೆಂಬಲವೇನೂ ಕಾಣಿಸುವದಿಲ್ಲ.

## ಗೋವಿಂದಭಗವತ್ಪಾದರು ಉಪದೇಶಿಸಿದ ವೇದಾಂತಪ್ರಕ್ರಿಯೆ ಯಾವದು ?

೭೦. ಕೊನೆಯದಾಗಿ ಇಲ್ಲಿ ಯಾವ ಶಂಕರವಿಜಯದಲ್ಲಿಯೂ ಪರಾಮರ್ಶಿಸದೆ ಇರುವ ಒಂದು ಮುಖ್ಯವಿಷಯವನ್ನು ಪ್ರಸ್ತಾಪಿಸಬೇಕಾಗಿದೆ. ಗೋವಿಂದಭಗವತ್ಪಾದರು ಶಂಕರರಿಗೆ ಉಪದೇಶಿಸಿದ ವೇದಾಂತಪ್ರಕ್ರಿಯೆಯ ಸ್ವರೂಪವೇನು ? ಅವರು ತಮ್ಮ ಹಿಂದೆ ಅಥವಾ ಸಮಕಾಲದಲ್ಲಿ ಇದ್ದ ಪ್ರಕ್ರಿಯಾಂತರಗಳಲ್ಲಿದ್ದ ದೋಷವನ್ನೇನಾದರೂ ತಿಳಿಸಿದರೆ ? ಇದು ಬಹಳ ಮುಖ್ಯವಾದ ವಿಚಾರ. ಏಕೆಂದರೆ ಇದನ್ನು ಗೊತ್ತುಪಡಿಸಿದರೆ ಆಚಾರ್ಯರ ಭಾಷ್ಯಗಳಲ್ಲಿ ಈಗ ಕಾಣಬರುವ ವೇದಾಂತಪ್ರಕ್ರಿಯೆಯ ಸ್ವರೂಪನಿರ್ಧಾರಣೆಗೆ ಬಹಳ ಸಹಾಯವಾದೀತು ಆಚಾರ್ಯರ ಪ್ರಸ್ಥಾನತ್ರಯಭಾಷ್ಯಗಳಲ್ಲೆಲ್ಲ 'ಶ್ರೀಮದ್ಗೋವಿಂದಭಗವತ್ಪೂಜ್ಯಪಾದಶಿಷ್ಯ' ಎಂಬ ವಿಶೇಷಣವನ್ನು ಹಾಕಿಕೊಂಡೇ ಆಚಾರ್ಯರ ಹೆಸರನ್ನು ಉಲ್ಲೇಖಿಸುವ ಸಮಾಪ್ತಿವಾಕ್ಯಗಳು ಕಾಣಬರುತ್ತಿವೆ. ಇದು ಆಚಾರ್ಯರು ತಮಗೆ ಗೋವಿಂದಭಗವತ್ಪಾದರಲ್ಲಿದ್ದ ಪೂಜ್ಯಬುದ್ಧಿಯನ್ನು ಸೂಚಿಸುವ ವಿಶೇಷಣವೆಂಬುದು ನಿಶ್ಚಯವಾದರೂ ಇದನ್ನು ಆಚಾರ್ಯರೇ ಬರೆದರೋ ಇಲ್ಲವೋ ನಿಶ್ಚಯಿಸುವದಕ್ಕೆ ಬರುವಂತಿಲ್ಲ. ಸುದೈವದಿಂದ ಮಾಂಡೂಕ್ಯೋಪನಿಷತ್ಕಾರಿಕಾಭಾಷ್ಯದ ಕೊನೆಯಲ್ಲಿ ಆಚಾರ್ಯರು ಗುರುಗಳಿಂದ ತಮಗೆ ಆದ ಪರಮೋಪಕಾರವನ್ನು ವರ್ಣಿಸಿ ಬರೆದ ಶ್ಲೋಕವೊಂದಿದೆ ;

> ಯತ್ಪ್ರಜ್ಞಾಲೋಕಭಾಸಾ ಪ್ರತಿಹತಿಮಗಮತ್ಸ್ವಾಂತಮೋಹಾನ್ಧಕಾರೋ
> ಮಜ್ಜೋನ್ಮಜ್ಜಚ್ಚ ಘೋರೇ ಹ್ಯಸಕೃದುಪಜನೋದನ್ವತಿ ತ್ರಾಸನೇ ಮೇ ।
> ಯತ್ಪಾದಾವಾಶ್ರಿತಾನಾಂ ಶ್ರುತಿಶಮವಿನಯಪ್ರಾಪ್ತಿರಗ್ರ್ಯಾ ಹ್ಯಮೋಘಾ
> ತತ್ಪಾದೌ ಪಾವನೀಯೌ ಭವಭಯವಿನುದೌ ಸರ್ವಭಾವೈರ್ನಮಸ್ಯೇ ॥

ಮತ್ತೆಮತ್ತೆ ಹುಟ್ಟುವದೆಂಬ ಭಯಂಕರವಾದ ಸಂಸಾರಸಾಗರದಲ್ಲಿ ಮುಳುಮುಳುಗಿ ಏಳುತ್ತಿದ್ದ ನನ್ನ ಹೃದಯದ ಮೋಹಾಂಧಕಾರವು ಯಾರ ಪ್ರಜ್ಞೆಯೆಂಬ ಬೆಳಕಿನ ಪ್ರಭೆಯಿಂದ ತೊಲಗಿತೋ, ಯಾರ ಪಾದಗಳನ್ನು ಆಶ್ರಯಿಸಿದವರಿಗೆ ಶ್ರುತಿ, ಶಮ, ವಿನಯ-ಇವುಗಳ ಅಮೋಘವಾದ ಅಗ್ರ್ಯಪ್ರಾಪ್ತಿಯಾಗುವದೋ, ಸಂಸಾರಭಯವನ್ನು ತೊಲಗಿಸುವ ಅವರ ಪವಿತ್ರಪಾದಗಳನ್ನು ಸರ್ವಭಾವದಿಂದಲೂ ನಮಸ್ಕರಿಸುತ್ತೇನೆ-ಎಂದು ಶ್ಲೋಕದ ಅರ್ಥ. ಈ ವಾಕ್ಯದ ಆಧಾರದಿಂದ ಆಚಾರ್ಯರಿಗೆ ಗೋವಿಂದಭಗವತ್ಪಾದರು ಬರಿಯ ಕ್ರಮಸಂನ್ಯಾಸದಾತೃಗಳಾದ ಗುರುಗಳೇ ಅಲ್ಲದೆ ಬ್ರಹ್ಮವಿದ್ಯಾಗುರುಗಳೂ ಆಗಿದ್ದರು, ಅವಿದ್ಯೆಯಿಂದಾಗಿರುವ ಸಂಸಾರಭಯವನ್ನು ನೀಗಿಸುವ ಜ್ಞಾನದಾತೃಗಳವರು ; ವಿದ್ಯೆಯಿಂದಾಗುವ ಶಮವಿನಯಾದಿಗಳಾದ ಬ್ರಹ್ಮನಿಷ್ಠರ ಗುಣಗಳನ್ನು ಆಧಾನಮಾಡಿದವರು-ಎಂದು

ನಾವು ಕಲ್ಪಿಸಬಹುದು. ಹೀಗಿದ್ದರೂ ಆ ಗೋವಿಂದಭಗವತ್ಪಾದರು ವೇದಾಂತ ಪ್ರಕ್ರಿಯೆಯ ಅಸಾಧಾರಣಸ್ವರೂಪವನ್ನು ಏನೆಂದು ಉಪದೇಶಿಸಿದ್ದರೆಂಬುವಕ್ಕೆ ನಮಗೆ ಮತ್ತೆ ಯಾವ ಆಧಾರವೂ ಇಲ್ಲದ್ದರಿಂದ ಸದ್ಯಕ್ಕೆ ಸಿಕ್ಕುತ್ತಿರುವ ಆಚಾರ್ಯರ ಭಾಷ್ಯಗ್ರಂಥಗಳಿಂದಲೇ ಅದನ್ನು ಊಹಿಸಿಕೊಳ್ಳಬೇಕಾಗಿರುತ್ತದೆ.

## ಗುರುಗಳಿಂದ ಶಂಕರರಿಗೆ ಭಾಷ್ಯರಚನೆಗೆ ಆಜ್ಞೆ

೭೧. ಮಳೆಗಾಲವು ಕಳೆದಮೇಲೆ ಗುರುಗಳು ಶಿಷ್ಯಾಗ್ರಣಿಯಾದ ಶಂಕರಾಚಾರ್ಯರನ್ನು ಹತ್ತಿರಕ್ಕೆ ಕರೆದು ಹೀಗೆಂದರಂತೆ: 'ಅಪ್ಪ ಧಾರಣಾಧ್ಯಾನ ಸಮಾಧಿಗಳಿಂದ ಮಳೆಗಾಲವನ್ನು ಕಳೆದ ಮಹಾತ್ಮರು ಈಗ ಎಲ್ಲೆಲ್ಲಿಯೂ ಸಂಚರಿಸುತ್ತಾ ಲೋಕವನ್ನು ಪವಿತ್ರಗೊಳಿಸುವರು. ಆದ್ದರಿಂದ ನೀನೂ ಈಗ ಕಾಶಿಯವರೆಗೆ ಹೋಗು. ಹಿಂದಕ್ಕೆ ವ್ಯಾಸರು ನನಗೆ ಹೇಳಿದ ಒಂದು ಕಥೆಯನ್ನು ಹೇಳುವೆನು ಕೇಳು. ಅತ್ರಿಮುನಿಯು ಹಿಮಾಲಯದಲ್ಲಿ ಸತ್ರವನ್ನು ಮಾಡುತ್ತಿರುವಾಗ ವ್ಯಾಸರನ್ನು ಕುರಿತು 'ತಾವು ವೇದವನ್ನು ಶಾಖೆಗಳಾಗಿ ವಿಂಗಡಿಸಿ ಭಾರತಪುರಾಣಾದಿಗಳನ್ನು ರಚಿಸಿ ಯೋಗಭಾಷ್ಯವನ್ನು ಬರೆದು ಬ್ರಹ್ಮಸೂತ್ರವನ್ನು ರಚಿಸಿದಿರಿ. ಆ ಸೂತ್ರಗಳಿಗೆ ಒಬ್ಬೊಬ್ಬರು ಒಂದೊಂದು ಬಗೆಯಾಗಿ ಅರ್ಥವನ್ನು ಮಾಡುತ್ತಿರುತ್ತಾರೆ; ಆದ್ದರಿಂದ ಅದಕ್ಕೊಂದು ಭಾಷ್ಯವನ್ನು ತಾವು ರಚಿಸಬೇಕು' ಎಂದು ನಾನು ಕೇಳಿಕೊಂಡೆನು. ಅವರು 'ಅಪ್ಪ, ನಿನ್ನಬಳಿಗೆ ಕಮಂಡಲುವಿನಲ್ಲಿಯೇ ನದಿಯನ್ನು ಉಪಸಂಹಾರಮಾಡುವ ಶಿಷ್ಯನೊಬ್ಬನು ಬರುತ್ತಾನೆ. ಆತನು ಈ ದುರ್ಮತಗಳನ್ನು ಖಂಡಿಸುತ್ತಾನೆ' ಎಂದು ಹೇಳಿದರು. ಈಗ ಆ ಲಕ್ಷಣಗಳು ನಿನ್ನಲ್ಲಿ ಕಂಡುಬಂದಿವೆ. ಆದ್ದರಿಂದ ನೀನು ಕಾಶಿಗೆ ಹೋಗು' ಎಂದು ತಮ್ಮ ಸೇವೆಯಲ್ಲಿಯೇ ನಿಲ್ಲಬೇಕೆಂದು ಬಯಸಿದ ಶಂಕರನನ್ನು ಒಡಂಬಡಿಸಿ ಕಳುಹಿಸಿದರು (ಮಾ.ಶಂ. ೧೫ರಿಂದ ೧೬೩ರ ಸಾರ). ವ್ಯಾಸಾಚಲೀಯದಲ್ಲಿ ಈ ಕಥೆಯಿಲ್ಲ. ಶಂಕರರು ಗೋವಿಂದಭಗವತ್ಪಾದರಲ್ಲಿಂದ ಬದರಿಗೆ ಹೋದರು ('ತೀರ್ಥಾನಿ ಸೇವಿತುಮನಾಃ ಸ ಯಯಾವುದೀಚೀಂ | ಕಾಷ್ಠಾಂ ಕ್ಷಣೇನ ಬದರೀಂ ಮುನಿಸಙ್ಘಜುಷ್ಟಾಮ್' || ವ್ಯಾ. ಸಂ. ೪-೬೬ ಎಂದಿಷ್ಟೇ ಇದೆ. ಆದ್ದರಿಂದ ಇದು ಮಾಧವನ ಕಲ್ಪನೆಯೇ ಆಗಿರಬೇಕು.

ಗೋವಿಂದಭಗವತ್ಪಾದರು ಶಂಕರರನ್ನು ಸಾಕ್ಷಾಚ್ಛಿವನೇ ಎಂದು ಸಮಾಧಿದೃಷ್ಟಿಯಿಂದ ಅರಿತುಕೊಂಡಿದ್ದರು (ಮಾ. ಶಂ. ೫-೧೦೦) ಎಂದು ಇದೇ ಸರ್ಗದಲ್ಲಿ ಬರೆದ ಕವಿಯು ಇಲ್ಲಿ ವ್ಯಾಸರಿಂದ ಈ ಶಿಷ್ಯನ ಮಹಿಮೆಯನ್ನು ಅರಿತುಕೊಂಡರೆಂದು ಹೇಳಿರುವದು ಸಂಗತವಲ್ಲವೆಂದು ನಮಗೆ ತೋರುತ್ತದೆ. ಭಾರತಾದಿಗಳನ್ನು ಬರೆದ ವ್ಯಾಸರೇ ಬ್ರಹ್ಮಸೂತ್ರಗಳನ್ನು ರಚಿಸಿದರು ಎಂಬುದು ನಮ್ಮ ದೇಶದವರ ಸಾಮಾನ್ಯವಾದ ನಂಬಿಕೆ. ಆದರೆ ಶಂಕರಾಚಾರ್ಯರು ಸೂತ್ರಕಾರ

ರನ್ನು ಬಾದರಾಯಣರೆಂದೇ ಕರೆಯುತ್ತಿರುವದರಿಂದಲೂ ಇವರೇ ಭಾರತಾದಿಗಳ ಕರ್ತೃಗಳೆಂದು ಎಲ್ಲಿಯೂ ಹೇಳದೆಇರುವದರಿಂದಲೂ ಕೃಷ್ಣದ್ವೈಪಾಯನ ವ್ಯಾಸರೂ ಬಾದರಾಯಣವ್ಯಾಸರೂ ಬೇರೆಬೇರೆ– ಎಂದು ಈಗಿನ ಗ್ರಂಥತತ್ತ್ವ ಶೋಧಕರು ಅಭಿಪ್ರಾಯಪಡುತ್ತಿರುತ್ತಾರೆ. ಇನ್ನು 'ಬ್ರಹ್ಮಸೂತ್ರವು' ಎಂದು ಏಕವಚನದಲ್ಲಿ ಇಲ್ಲಿ ಬರೆದಿರುವ ಪ್ರಯೋಗವು ಮಾಧವನಿಗೇ ಅಸಾಧಾರಣ ವಾಗಿದೆ. 'ವೇದಾಂತಸೂತ್ರ'ಗಳೆಂದೇ ಇವನ್ನು ಕರೆಯುವ ರೂಢಿಯಿದೆ; ದರ್ಶನ ವನ್ನು 'ಶಾರೀರಕಮೀಮಾಂಸಾ', 'ವೇದಾಂತಮೀಮಾಂಸಾ' ಎಂದೇ ಆಚಾ ರ್ಯರು ಕರೆದಿದ್ದಾರೆ. ಆಚಾರ್ಯರ ಕಾಲಕ್ಕಿಂತ ಮುಂಚೆಯೇ ಅನೇಕರ ಸೂತ್ರ ಭಾಷ್ಯಗಳು ಆಗಿದ್ದವೆಂಬುದು ನಿಜವಾದರೂ ಮಾಧವನು ಮನಸ್ಸಿನಲ್ಲಿಟ್ಟು ಕೊಂಡಿದ್ದ ಭಾಷ್ಯಕಾರರುಗಳು ಆಗ ಇರಲಿಲ್ಲವೆಂಬುದನ್ನು ಮುಂದೆ ಯಥಾ ಸ್ಥಾನದಲ್ಲಿ ಸ್ಫುಟಗೊಳಿಸುವೆವು.

**ಚಿದ್ವಿಲಾಸೀಯದಲ್ಲಿ** ಈ ಗುರುವಿನಾಜ್ಞೆಯನ್ನು ತಿಳಿಸುವ ಸಂದರ್ಭದಲ್ಲಿ ಗೌಡಪಾದರ ವಿಷಯಕ್ಕೆ ಗೋವಿಂದಭಗವತ್ಪಾದರು ಹೇಳಿರುವದು ವಾಚಕರಿಗೆ ಕುತೂಹಲವನ್ನು ಕೆರಳಿಸುವದಾಗಿದೆಯಾದ್ದರಿಂದ ಅದನ್ನು ಇಲ್ಲಿ ಪ್ರಸಂಗವಶ ದಿಂದ ಮೊದಲು ಹೇಳಬೇಕಾಗಿದೆ. ಗುರುಗಳು ತತ್ತ್ವಾರ್ಥವನ್ನು ಉಪದೇಶಿಸಿದ ಬಳಿಕ ಶಂಕರರು 'ನನಗೆ ಗುರುಪರಂಪರೆಯನ್ನು ದಯವಿಟ್ಟು ಹೇಳಬೇಕು' (೯–೩೪) ಎಂದು ಕೇಳಲು ಈಶ್ವರನಿಂದ ಹಿಡಿದು ಗೌಡಪಾದರವರೆಗಿನ ಗುರು ಗಳನ್ನು ಹೇಳಿದರು. 'ಆ ಭಗವದ್ಗೌಡಪಾದರು ನಮ್ಮ ಗುರುಗಳು. ಅವರು ಎರಡು ತೋಳುಗಳುಳ್ಳ ಬ್ರಹ್ಮನೇ. ವೇದವೇದಾಂತತತ್ತ್ವಜ್ಞರು, ನಿಖಿಲ ಸ್ಮೃತಿಗಳ ನಿರ್ಮಾತೃಗಳು, ಜೈಮಿನಿಸೂತ್ರಗಳನ್ನು ಸಾರ್ಥವಾಗಿ ಮೂರು ಸಲ ಅಧ್ಯಯನಮಾಡಿರುತ್ತಾರೆ. ದಿವ್ಯವಾದ ಉಪನಿಷತ್ತುಗಳನ್ನು ಸಾಭಿಪ್ರಾಯವಾಗಿ ಬಲ್ಲವರು, ಪಾರಾಶರೀಯಸೂತ್ರಗಳ ತತ್ತ್ವಾರ್ಥವನ್ನು ಬಲ್ಲವರು. ಶಾಸ್ತ್ರಸಮುದ್ರವನ್ನು ಯುಕ್ತಿಯ ಕಡಗೋಲಿನಿಂದ ಕಡೆದು ಅದ್ವೈತಾಮೃತವನ್ನು ಪಡೆದು ಜೀವನ್ಮುಕ್ತರಾಗಿ ಸಂಚರಿಸುತ್ತಿರುವರು. ಹೆಚ್ಚಿಗೆ ಹೇಳುವದರಿಂದೇನು? ದುರ್ಮತಗಳಿಂದ ವಿಹ್ವಲರಾಗಿರುವವರನ್ನು ಕಾಪಾಡುವದಕ್ಕೆ ಅವತರಿಸಿದ ಶಿವನೇ ('ನಗಜಾಜಾನಿರೇವ ಸಃ'). ಅಂಥ ಮಹಾತ್ಮರು ಜಗತ್ತಿನ ಮೋಹಧ್ವಾಂತವನ್ನು ಕಳೆಯುವದಕ್ಕಾಗಿಯೇ ಸಂಚರಿಸು ತ್ತಿರುವರು' ಎಂದರಂತೆ. ಇಲ್ಲಿ ಹೇಳಿರುವ ಕೆಲವು ವಿಶೇಷಣಗಳನ್ನು ಚಿದ್ವಿಲಾಸರು ಯಾವ ಆಧಾರದಿಂದ ಬರೆದಿರುವರೋ ನಮಗೆ ತಿಳಿಯದು. ಗೌಡಪಾದರು ಚಿರಜೀವಿಗಳಾಗಿ ಲೋಕದಲ್ಲಿ ಈಗಲೂ ಸಂಚರಿಸುತ್ತಾರೆ ಎಂಬ ಅಭಿಪ್ರಾಯವೂ ಗ್ರಂಥಕರ್ತರಿಗೆ ಇದ್ದಂತೆ ತೋರುತ್ತದೆ.

ಈಗ ಆಚಾರ್ಯರಿಗೆ ಗುರುಗಳು ಹೇಳಿದ್ದೇನೆಂಬುದನ್ನು ಕೇಳೋಣ. 'ಎಲೈ ಶಿಷ್ಯನೆ, ನೀನು ಬುದ್ಧಿವಂತನಾಗಿದ್ದು ಎಲ್ಲಾ ದರ್ಶನಗಳನ್ನೂ ಅರಿತುಕೊಂಡಿದ್ದೀಯೆ. ಪಾರಾಶರೀಯಸೂತ್ರಗಳಿಗೂ ದಶೋಪನಿಷತ್ತುಗಳಿಗೂ ಗೀತಾ ಸಹಸ್ರನಾಮಗಳಿಗೂ ರುದ್ರಾಧ್ಯಾಯಕ್ಕೂ ಅರ್ಥವನ್ನು ಯಾರೂ ಅರಿಯದೆ ಇರುತ್ತಾರೆ, ತಪ್ಪಾಗಿ ಹೇಳುತ್ತಿದಾರೆ. ಅವುಗಳಿಗೆ ಅದ್ವೈತಾರ್ಥಪ್ರಕಾಶಕವಾದ ಭಾಷ್ಯವನ್ನು ನೀನು ಮಾಡು' ಎಂದು ಹೇಳಿ ಶಿವನಿಂದ ಕ್ರಮವಾಗಿ ಬಂದಿದ್ದ ಚಂದ್ರಮೌಳೀಶ್ವರನನ್ನೂ ರತ್ನಗರ್ಭಗಣಪತಿಯನ್ನೂ ಆವನಿಗೆ ಕೊಟ್ಟರು. (ಇತ್ಯುಕ್ತ್ವಾ ಚನ್ದ್ರಮೌಲೀಶಂ ರತ್ನಗರ್ಭಂ ಗಣಾಧಿಪಮ್ | ಶಿವಾತ್ಕ್ರಮಾದಿಹಾಯಾತಂ ಪದೌ ತಸ್ಮೈ ಸ ದೇಶಿಕಃ|| (ಚಿ. ಶಂ. ೯-೪೯ರಿಂದ ೫೨).

ಆಚಾರ್ಯರು ಈಗ ವೇದಾಂತಸಿದ್ಧಾಂತವನ್ನು ಅಳವಡಿಸಿಕೊಂಡು ಜನರ ಅಜ್ಞಾನವನ್ನು ತೊಲಗಿಸುವ ಸ್ಥಿತಿಗೆ ಬಂದಿದ್ದರೆಂದು ಸ್ಪಷ್ಟವಾಗುತ್ತದೆ. ಮಾಧವ ಕವಿಯು ಮುಖ್ಯವಾಗಿ ಬ್ರಹ್ಮಸೂತ್ರಗಳಿಗೇ ಭಾಷ್ಯವನ್ನು ಮಾಡುವಂತೆ ಗುರುಗಳು ಹೇಳಿದರೆಂದು ಬರೆದಿರುತ್ತಾನೆ; ಚಿದ್ವಿಲಾಸರು ಸೂತ್ರಗೀತೆಗಳಿಗೂ 'ಅದ್ವೈತಾರ್ಥ ಪ್ರಕಾಶವಾದ' ಭಾಷ್ಯವನ್ನು ಮಾಡು- ಎಂದು ಗುರುಗಳು ಹೇಳಿದಂತೆ ಬರೆದಿರುವದನ್ನು ನೋಡಿದರೆ ಆಗ ಅದ್ವೈತಪರವಾದ ಭಾಷ್ಯಗಳೇ ಇರಲಿಲ್ಲವೆಂದು ಅವರ ಅಭಿಪ್ರಾಯವೆಂದು ಕಲ್ಪಿಸುವದಕ್ಕೆ ಅವಕಾಶವಿದೆ. ಅದು ನಿಜವಾದರೆ ಆ ಅಭಿಪ್ರಾಯವು ಸರಿಯಲ್ಲವೆಂಬುದನ್ನು ಮುಂದೆ ನಾವು ಸ್ಪಷ್ಟಗೊಳಿಸುವೆವು. ಆಚಾರ್ಯರು ಸಹಸ್ರನಾಮರುದ್ರಾಧ್ಯಾಯಗಳ ಗ್ರಂಥಕರ್ತರೆ?- ಎಂಬುವನ್ನೂ ಯಥಾಸ್ಥಾನವಲ್ಲಿ ವಿಮರ್ಶಿಸುವೆವು.

## ಚಂದ್ರಮೌಳೀಶ್ವರಲಿಂಗದ ವಿಚಾರ

೭೨. ಈ ಸಂದರ್ಭದಲ್ಲಿ ಇನ್ನೊಂದು ಪ್ರಶ್ನೆ ಎದ್ದುಕೊಳ್ಳುತ್ತದೆ. ಗೋವಿಂದ ಭಗವತ್ಪಾದರು 'ಶಿವನಿಂದ ಕ್ರಮವಾಗಿ ಬಂದಿದ್ದ ಚಂದ್ರಮೌಳೀಶ್ವರಲಿಂಗವನ್ನೂ ರತ್ನಗರ್ಭಗಣಪತಿಯನ್ನೂ ಶಂಕರಾಚಾರ್ಯರಿಗೆ ಕೊಟ್ಟರು'- ಎಂಬ ಕಥೆಯು ಚಿದ್ವಿಲಾಸೀಯದಲ್ಲಿ ಮಾತ್ರ ಇದೆ, ಮಾಧವೀಯದಲ್ಲಿಲ್ಲ. ಮಾಧವೀಯವು ಶೃಂಗೇರೀಸಂಪ್ರದಾಯಕ್ಕೆ ಅನುಗುಣವಾದ ಶಂಕರವಿಜಯವೆಂದೇ ಅನೇಕರು ಭಾವಿಸುತ್ತಾರೆ; ಹೀಗಿದ್ದರೂ ಅವರಲ್ಲೇಕೆ ಈ ವಿಚಾರಗಳಿಲ್ಲ ? ಶೃಂಗೇರೀ ಮಠದಲ್ಲಿಯೇ ಈವರೆಗೂ ಚಂದ್ರಮೌಳೀಶ್ವರರತ್ನಗರ್ಭಗಣಪತಿಗಳ ಪೂಜೆ ನಡೆಯುತ್ತಿರುವದಲ್ಲ !-ಎಂಬುದೊಂದು ಶಂಕೆ.

ಇದರ ಜೊತೆಗೆ ಇನ್ನೊಂದು ಶಂಕೆಯಿದೆ : ಶಿವರಹಸ್ಯದಲ್ಲಿ

ತ್ವದರ್ಥೇ ಕೈಲಾಸಾಚಲವರಸುಪಾಲೀಗತಮಹಾ-
ಸಮುದ್ಯಚ್ಛನ್ದ್ರಾಭಂ ಸ್ಫಟಿಕಧವಲಂ ಲಿಙ್ಗಕುಲಕಮ್ |
ಸಮಾನೀತಂ ಸೋಮೋದ್ಧೃತವಿಮಲಮೌಲ್ಯರ್ಚಯಾ ಪರಂ
ಕಲೌ ಲಿಙ್ಗಾರ್ಚಾಯಾಂ ಭವತಿ ಹಿ ವಿಮುಕ್ತಿಃ ಪರತರಾ ||

ಎಂಬ ಶ್ಲೋಕದಲ್ಲಿ ಪಂಚಲಿಂಗಗಳನ್ನು ಶಿವನು ಆಚಾರ್ಯರಿಗೆ ಕೈಲಾಸದಿಂದ ತಂದು ಕೊಟ್ಟನೆಂದಿದೆ; ಚಿದ್ವಿಲಾಸೀಯದಲ್ಲಿರುವಂತೆ ಗೋವಿಂದಭಗವತ್ಪಾದರಿಗೆ ಅದು ಕ್ರಮವಾಗತವಾಗಿ ಬಂದಿತ್ತೆಂಬ ಕಥೆಗೆ ಅಲ್ಲಿ ಅವಕಾಶವಿಲ್ಲ. ರತ್ನಗರ್ಭಗಣಪತಿಯ ವಿಚಾರವೇ ಅಲ್ಲಿಲ್ಲ.

ಇನ್ನೊಂದು ಅವಾಂತರವಿಚಾರ. ಚಂದ್ರಮೌಲೀಶ್ವರಲಿಂಗವು ಶೃಂಗೇರಿಗೆ ಹೇಗೆ ಬಂತೆಂಬ ವಿಷಯಕ್ಕೆ ಶೋಧನೆಯನ್ನು ನಡೆಯಿಸಿ ಕುಮಾರಮಾಧವ **ಪಾ॥ಸಾ॥ ಶ್ರೀಕಂಠಶಾಸ್ತ್ರಿಗಳು** ಬರೆದಿರುವದರ ಸಾರವೇನೆಂದರೆ: ಶೃಂಗೇರಿಯ ಪೀಠಾಧಿಪರಾಗಿದ್ದ ಶ್ರೀಸಚ್ಚಿದಾನಂದಭಾರತೀಸ್ವಾಮಿಗಳವರು ತಮ್ಮ ಆಸ್ಥಾನ ವಿದ್ವಾಂಸರಾಗಿದ್ದ ಕಾಶೀಲಕ್ಷ್ಮಣಶಾಸ್ತ್ರಿಗಳೆಂಬವರಿಂದ ಬರೆಯಿಸಿದ **ಗುರುವಂಶ ಕಾವ್ಯ**ದಲ್ಲಿ ಮೂರನೆಯ ಸರ್ಗದಲ್ಲಿ ಶ್ರೀಶಂಕರಾಚಾರ್ಯರವರು ಸುರೇಶ್ವರಾಚಾರ್ಯರಿಗೆ ಶ್ರೀಶೃಂಗೇರೀಪೀಠದಲ್ಲಿ ಯೋಗಪಟ್ಟವನ್ನು ಕಟ್ಟಿ[1] ತಾವು ಕಾಂಚೀ ಕ್ಷೇತ್ರಕ್ಕೆ ಹೊರಡುವಾಗ :

**ಶ್ರೀಚನ್ದ್ರಮೌಲೀಶ್ವರಲಿಙ್ಗಮಸ್ಮೈ**
**ಸದ್ರತ್ನಗರ್ಭಂ ಗಣನಾಯಕಂ ಚ ।**
**ಸ ವಿಶ್ವರೂಪಾಯ ಸುಸಿದ್ಧದತ್ತಂ**
**ದತ್ವಾ ನ್ಯಗಾದೀಚ್ಚಿರಮರ್ಚಯೇತಿ ॥**

ಎಂಬ ಶ್ಲೋಕವಿದೆ. ಸಿದ್ಧರು ಕೊಟ್ಟಿದ್ದ ಚಂದ್ರಮೌಲೀಶ್ವರನನ್ನೂ ರತ್ನಗರ್ಭ ಗಣಪತಿಯನ್ನೂ ವಿಶ್ವರೂಪನಿಗೆ ಕೊಟ್ಟು ಇವನ್ನು ಯಾವಾಗಲೂ ಪೂಜಿಸುತ್ತಿರು ಎಂದು ಹೇಳಿದರು– ಎಂದು ಶ್ಲೋಕಕ್ಕೆ ಅರ್ಥ. ಗ್ರಂಥಕರ್ತರೇ ಬರೆದದ್ದೆಂಬ ವ್ಯಾಖ್ಯಾನದಲ್ಲಿ **'ರೇವಣಸಿದ್ಧಮಹಾಯೋಗಿದತ್ತಮ್'** ಎಂಬ ವಿವರಣೆಯಿದೆ ಯಂತೆ (!) ಇದರ ಆಧಾರದಮೇಲೆ ಪಂಡಿತ ಕಾಶೀನಾಥಶಾಸ್ತ್ರಿಗಳೆಂಬವರು ರೇಣುಕಾಚಾರ್ಯರು ಶಂಕರಾಚಾರ್ಯರಿಗೆ ಲಿಂಗವನ್ನು ಕೊಟ್ಟರೆಂಬುದಕ್ಕೆ ಆ ಗ್ರಂಥದ ಪೀಠಿಕೆಯಲ್ಲಿ ಕೊಟ್ಟು ಆಧಾರವನ್ನು ಬರೆದಿರುವಂತೆ (!) ಇದೆಲ್ಲದರ ವಿಮರ್ಶೆಯನ್ನು ಮಾಡಿ ಶ್ರೀಕಂಠಶಾಸ್ತ್ರಿಗಳವರು ರೇಣುಕಾಚಾರ್ಯರೂ ಶಂಕರಾಚಾರ್ಯರೂ ಸಮಕಾಲಿಕರಲ್ಲವೆಂದೂ ಗುರುವಂಶಕಾವ್ಯವೇನೂ ಪ್ರಮಾಣವಲ್ಲ ವೆಂದೂ ವಾದಿಸಿರುತ್ತಾರೆ (**ಶ್ರೀಚಂದ್ರಮೌಲೀಶ್ವರಲಿಂಗಾದಿವಿಚಾರಪ್ರಚಾರ** ಪು. ೧೯). ಅವರು ಶೃಂಗೇರಿಯ ಮಠದವರ ಅನುಜ್ಞೆಯಂತೆ ಶಿವರಹಸ್ಯವನ್ನೇ ಪ್ರಮಾಣವಾಗಿ ಹಿಡಿದು ಮೇಲೆ ನಾವು ಉದಾಹರಿಸಿರುವ ಶ್ಲೋಕವನ್ನೇ ಉದಾ

1. ಈ ವಾದಗ್ರಸ್ತವಿಷಯವನ್ನು ಮುಂದೆ ಮಠಗಳ ವಿಷಯವಾಗಿ ಬರೆಯುವಾಗ ಮತ್ತೆ ವಿಚಾರಕ್ಕೆ ತೆಗೆದುಕೊಳ್ಳುವೆವು.

ವಹಿಸಿಕೊಂಡಿರುತ್ತಾರೆ. ಶಿವನು ಕೊಟ್ಟ ಐದು ಲಿಂಗಗಳಿಗೂ ಚಂದ್ರಮೌಳಿ ಎಂದೇ ಹೆಸರೆಂತ ಅವರು ಅರ್ಥವನ್ನು ಮಾಡಿರುತ್ತಾರೆ. ಇದು ನಿಜವಾದರೆ ರತ್ನಗರ್ಭಗಣಪತಿಗೇನು ಗತಿ ? ಲಿಂಗವೂ ಗಣಪತಿಯೂ ಗೋವಿಂದಭಗವತ್ಪಾದರಿಂದ ಆಚಾರ್ಯರಿಗೆ ಬಂದವೆಂಬುವನ್ನು ಅವರು ಪ್ರಮಾಣವಾಗಿ ಹಿಡಿಯುವದಿಲ್ಲವೆ ? 'ಸುಸಿದ್ಧವತ್ತನ್' ಎಂಬ ಗುರುವಂಶಕಾವ್ಯವು ಪ್ರಮಾಣವಲ್ಲದಿದ್ದರೂ ಆ ಐತಿಹ್ಯವು ಹೇಗೆ ಬಂದಿತು ?–ಎಂಬ ಪ್ರಶ್ನೆ ಹಾಗೇ ಉಳಿದುಕೊಳ್ಳುತ್ತದೆ.

ಇದೇ ಶ್ರೀಕಂಠಶಾಸ್ತ್ರಿಗಳು ಮೇಲೆ ಹೇಳಿರುವ ಪುಸ್ತಿಕೆಯಲ್ಲಿ ಈ ವಿಷಯಕ್ಕೆ ಪು. ೧೬) ಬರೆದಿರುವ ಒಂದು ಐತಿಹಾಸಿಕವಿಷಯವು ವಾಚಕರ ಕುತೂಹಲವನ್ನು ಕೆರಳಿಸುವಂತಿದೆ. ಶಾಲಿವಾಹನಶಕ ೧೫೫೨ರಲ್ಲಿ ಕೆಳದಿಯ ರಾಜರಾದ ಸೋಮಶೇಖರನಾಯಕರಯ್ಯರೆಂಬುವರು ಬಾಳೆಹಳ್ಳಿ (ಬಾಳೆಹೊನ್ನೂರು) ಮಠದ ಗುರುಶಾಂತಸ್ವಾಮಿಯವರು ಕೆಳದಿಯ ಸಂಸ್ಥಾನಕ್ಕೆ ಅಪರಾಧವನ್ನು ಮಾಡಿರುವದಕ್ಕಾಗಿ ಅವರಲ್ಲಿದ್ದ ಚಂದ್ರಮೌಳೀಶ್ವರಲಿಂಗ,ಬಲದ ಶಂಖ,ಏಕಬೆತ್ತ-ಮುಂತಾದವುಗಳನ್ನು ಜಪ್ತಿಮಾಡಿಸಿ ತೆಗೆದುಕೊಂಡು ಇವುಗಳನ್ನು ಶೃಂಗೇರಿಯ ಮಠಕ್ಕೆ ಕೊಟ್ಟು ಭೂಚಕ್ರದ ಕೊಡೆ ಮುಂತಾದದ್ದನ್ನು ತಾವೇ ಇಟ್ಟುಕೊಂಡದ್ದಲ್ಲದೆ ೩೦೦ ಗ್ರಾಮಗಳಲ್ಲಿ ಬಾಳೆಹಳ್ಳಿ ಮಠದವರು ಕಪ್ಪಕಾಣಿಕೆ ವಸೂಲುಮಾಡುತ್ತಿದ್ದದ್ದನ್ನು ತಪ್ಪಿಸಿದರೆಂದು ಬಾಳೆಹಳ್ಳಿ ಮಠದಲ್ಲಿಯೇ ಸಿಕ್ಕಿದ ಶಾಸನದಿಂದ ತಿಳಿಯಬಂದಿರುತ್ತದೆ. (ಶಾಸನದ ಇಲಾಖೆಯ 1927ನೆಯ ಇಸವಿ 58ನೆಯ ನಂಬರು ರಿಪೋರ್ಟು). ಇಲ್ಲಿ ಬರೆದಿರುವ ಚಂದ್ರಮೌಳೀಶ್ವರಲಿಂಗವು ಯಾವದು? ಈ ಕಾಲದಲ್ಲಿ ಶೃಂಗೇರಿಯಲ್ಲಿ ಶ್ರೀನೃಸಿಂಹಭಾರತಿಗಳು (೭ನೆಯವರು) ಪೀಠಾಧಿಪತಿಗಳಾಗಿದ್ದರೆಂದು ತಿಳಿಯಬಂದಿದೆ (KRVTTW pp. 66–67(. ಆ ಗುರುಗಳಿಗಿಂತ ಮುಂಚೆ ಶೃಂಗೇರಿಯ ಮಠದಲ್ಲಿ ಚಂದ್ರಮೌಳೀಶ್ವರರತ್ನಗರ್ಭಗಣಪತಿಗಳು ಇದ್ದವೆ? –ಎಂಬುದನ್ನು ಐತಿಹಾಸಿಕಶಾಸನಾದಿಗಳಿಂದ ಶೋಧಿಸುವದು ಅವಶ್ಯವಾಗಿದೆ.

ಗುರುವಂಶಕಾವ್ಯದಲ್ಲಿರುವ 'ಸುಪ್ರಸಿದ್ಧದತ್ತನ್' ಎಂಬ ಶ್ಲೋಕಕ್ಕೆ ಸಿದ್ಧರಾದ ಗೋವಿಂದಭಗವತ್ಪಾದರು ಕೊಟ್ಟದ್ದು ಎಂದೂ ಅರ್ಥಮಾಡುವದಕ್ಕೆ ಬರುತ್ತದೆ; ಏಕೆಂದರೆ ಗೋವಿಂದಭಗವತ್ಪಾದರು ಯೋಗಿಗಳೆಂದೂ ರಸಸಿದ್ಧರೆಂದೂ ಐತಿಹ್ಯಗಳಿವೆಯೆಂದು ಆಗಲೆ ಹೇಳಿರುತ್ತೇವೆ. ಆದರೆ ಶಂಕರಾಚಾರ್ಯರು ಚಂದ್ರಮೌಳೀಶ್ವರಲಿಂಗವನ್ನು ಅರ್ಚಿಸುತ್ತಿದ್ದರೆ ?–ಎಂಬುದೇ ಮೊದಲು ಸಂಶಯಾಸ್ಪದವಾಗಿದೆ. ಆಚಾರ್ಯರು ಕ್ರಮಸಂನ್ಯಾಸವನ್ನು ತೆಗೆದುಕೊಂಡಾಗಲೇ ಮಠಸ್ಥಾಪನೆಯಾಯಿತೆಂಬುದನ್ನು ಯಾರೂ ಒಪ್ಪುವದಿಲ್ಲ. ಸರ್ವಕರ್ಮಸಂನ್ಯಾಸವನ್ನು ಮಾಡುವ ಪರಮಹಂಸರಿಗೆ ದೇವತಾರ್ಚನೆಯು ಎಲ್ಲಿಯೂ ವಿಹಿತವಾಗಿರು

ಸದಿಲ್ಲ; ಅದು ಆಚಾರ್ಯರ ಭಾಷ್ಯಗಳಲ್ಲಿ ಎಲ್ಲಿಯೂ ಅಂಗೀಕೃತವಾಗಿಲ್ಲ. ಗುರು ಗಳು ಕೊಟ್ಟವುಗಳೆಂಬ ಕಾರಣದಿಂದ ಲಿಂಗವನ್ನೂ ಗಣಪತಿಯನ್ನೂ ಆಚಾರ್ಯ ರು ಮತ್ತೊಬ್ಬರಿಂದ ಪೂಜೆಮಾಡಿಸುತ್ತಿದ್ದರೆಂದು ನಿರಾಧಾರವಾಗಿ ಕಲ್ಪಿಸುವದು ಸಾಹಸವಾಗುವದು. ಭಾಷ್ಯಗ್ರಂಥಗಳಲ್ಲಿ ಪ್ರತೀಕೋಪಾಸನೆಗಳಿಗೆ ಉಪಮಾನ ವಾಗಿ 'ವಿಷ್ಣುವಿಗೆ ಸಾಲಗ್ರಾಮದಂತೆ' ಎಂದು ಎಷ್ಟೋ ಸಲ ಬರೆದಿರುತ್ತದೆ; ಆದರೆ ಒಂದೇ ಒಂದು ಕಡೆಯಲ್ಲಾದರೂ ಶಿವಲಿಂಗದ ಉದಾಹರಣೆಯು ಕಾಣುವದಿಲ್ಲ. ಇದೇಕೆ ? ತಾವೇ ಲಿಂಗಾರ್ಚನೆಮಾಡುವವರಾಗಿದ್ದರೆ ಅದನ್ನು ಉದಾಹರಣೆಗೆ ತೆಗೆದುಕೊಳ್ಳುವದನ್ನು ಮರೆತರೆಂದು ಹೇಳುವದು ಸರಿಯಾಗುವದಿಲ್ಲ. ಇಂದಿನ ವರೆಗೂ ಶ್ರೀಶಂಕರಸಂಪ್ರದಾಯದ ಸಂನ್ಯಾಸಿಗಳು 'ನಾರಾಯಣ'ಶಬ್ದೋಚ್ಚಾರಣೆ ಯನ್ನು ಮಾಡುತ್ತಿರುವದೂ ಸುಪ್ರಸಿದ್ಧವಾಗಿದೆ. ಹೀಗಿರುವದರಿಂದ ಚಂದ್ರ ಮೌಳೀಶ್ವರಲಿಂಗವು ಆಚಾರ್ಯರಿಗೆ ನಿಜವಾಗಿಯೂ ಯಾರಿಂದಲಾದರೂ ಬಂದಿದ್ದಿತೆ ? ಎಂಬುದು ಸಂಶಯಗ್ರಸ್ತವಾಗಿಯೇ ಉಳಿಯುತ್ತದೆ. ಎಷ್ಟೋ ಅದ್ಭುತಕಲ್ಪನೆಗಳನ್ನು ಉಲ್ಲೇಖಿಸಿರುವ ಮಾಧವಕವಿಯು ಇದನ್ನು ಪರಾಮರ್ಶಿ ಸದೆ ಬಿಟ್ಟದ್ದೇಕೆ?– ಎಂಬುದೂ ಬಿಚ್ಚಲಾಗದ ಕಗ್ಗಂಟಾಗಿ ಕುಳಿತಿದೆ.

## ಮಣಿಮಂಜರಿಯಲ್ಲಿರುವ ವೃತ್ತಾಂತ

೭೩. ಆಚಾರ್ಯರು ಮಣಿಮಂತನ ಅವತಾರವೆಂದೂ ಸಂಕರಜಾತಿಯವ ರೆಂದೂ ಮಣಿಮಂಜರೀಕಾರನಾದ ನಾರಾಯಣಪಂಡಿತನು ಬರೆದಿರುವದು ಈಗಾಗಲೆ (ಪು. ೪೪ರಲ್ಲಿ) ವಾಚಕರಿಗೆ ತಿಳಿದಿದೆಯಷ್ಟೆ ? ಶಂಕರರ ಬುದ್ಧಿಯು ಸೂಕ್ಷ್ಮವಾಗಿರಲಿಲ್ಲವೆಂದು ತಿಳಿಸುವದಕ್ಕೆಂದು ಈ ಪಂಡಿತನು ತಾಯಿಯು ಅವರಿಗೆ ತಾಮಸಾಹಾರವನ್ನು ತಿನ್ನಿಸುತ್ತಿದ್ದಳೆಂದು ಬರೆದಿರುವದರ ಜೊತೆಗೆ ಗೋವಿಂದ ಭಗವತ್ಪಾದರ ಕಥೆಯನ್ನೂ ಅವರ ವಿಷಯಕ್ಕೆ ಓದುಗರಲ್ಲಿ ಮರಭಿಪ್ರಾಯ ವುಂಟಾಗುವಂತೆಯೇ ಬರೆದಿರುತ್ತಾನೆ. ಆವನು ಬರೆದಿರುವ ಕಥೆಯಲ್ಲಿ ಗೋವಿಂದ ಭಗವತ್ಪಾದರ ಪೂರ್ವಾಶ್ರಮದ ಮಕ್ಕಳುಗಳ ಹೆಸರುಗಳು ಪತಂಜಲಿಚರಿತ್ರೆ ಯಲ್ಲಿರುವದಕ್ಕಿಂತ ಭಿನ್ನವಾಗಿರುತ್ತವೆ. ಕಥೆಯೂ ಮಾರ್ಪಟ್ಟಿದೆ. ಗೋವಿಂದ ಭಗವತ್ಪಾದರ ಗುರುಗಳಾದ ಗೌಡಪಾದರು ಪ್ರಚ್ಛನ್ನಬೌದ್ಧರೆಂಬ ಅಭಿಪ್ರಾಯ ವನ್ನು ಅಜ್ಞರ ಮನಸ್ಸಿನಲ್ಲಿ ಬೇರೂರಿಸುವದಕ್ಕೆಂದು ಆ ಪಂಡಿತವರ್ಯನು ಕಲ್ಪಿಸಿರುವ ಕಥೆಯನ್ನು ಪರಮತಗಳವರ ಅಭಿಪ್ರಾಯವನ್ನು ಸಂಗ್ರಹಿಸಿರುವ ಪರಿಶಿಷ್ಟದಲ್ಲಿ ಕೊಟ್ಟಿರುತ್ತೇವೆ. ಬಕ್ಕಸ್ವಾಮಿ ಎಂಬ ಹೆಸರಿನ ಬೌದ್ಧನೊಬ್ಬನು ಗೌಡಪಾದರನ್ನು ಹೇಗೋ ಮೋಸಪಡಿಸಿ ಅವರಿಗೆ ಸಂನ್ಯಾಸವನ್ನು ಕೊಟ್ಟು 'ಶೂನ್ಯವೇ ಬ್ರಹ್ಮವು' ಎಂದು ಧ್ಯಾನಮಾಡುವಂತೆ ಉಪದೇಶಿಸಿದನಂತೆ. ಮುಂದೆ ಗೋವಿಂದಭಗವತ್ಪಾದರೂ ಅವರ ಶಿಷ್ಯರಾದ ಶಂಕರಾಚಾರ್ಯರೂ ಈ ಮತವನ್ನೇ

ವೈದಿಕವೆಂದು ಜನರಿಗೆ ಬೋಧಿಸಿದ್ದಲ್ಲದೆ ಸನ್ಮಾರ್ಗದಲ್ಲಿದ್ದ ಸಂನ್ಯಾಸಿಗಳನ್ನು ಹಿಂಸಿಸಿ ಬಲಾತ್ಕಾರದಿಂದ ಅವರನ್ನು ಅದ್ವೈತಮತಕ್ಕೆ ತಿರುಗಿಸಿದರಂತೆ! ಅದ್ವೈತಿಗಳು ಹೇಳುವ ನಿರ್ವಿಶೇಷಬ್ರಹ್ಮವೂ ಮಾಧ್ಯಮಿಕರ ಶೂನ್ಯವೂ ಒಂದೇ ಎಂದು ಈ ಘನಪಂಡಿತನ ಅಭಿಪ್ರಾಯ! ಅದ್ವೈತಿಗಳ ವೇದಾಂತಪ್ರಕ್ರಿಯೆಯನ್ನು ಅರಿತುಕೊಳ್ಳಲಾರದೆ, ಅಥವಾ ಅಲ್ಪಸ್ವಲ್ಪ ತಿಳಿದರೂ ಅದರಲ್ಲಿ ಅನಾದರವನ್ನುಂಟು ಮಾಡುವದಕ್ಕೆಂದು ಮತಾಂಧರು ಎಂಥೆಂಥ ಕಲ್ಪನೆಗಳನ್ನು ಮನಃಪೂರ್ವಕವಾಗಿ ಮಾಡಿ ಅಪಪ್ರಚಾರವನ್ನು ಮಾಡಿರುವರೆಂಬುದಕ್ಕೆ ಇದೂ ಒಂದು ನಿದರ್ಶನವಾಗಿರುತ್ತದೆ.

---

# ೬. ಭಾಷ್ಯಾದಿಗಳ ನಿರ್ಮಾಣ

## ಆಚಾರ್ಯರು ಗುರುಗಳಲ್ಲಿಂದ ನೇರಾಗಿ ಕಾಶಿಗೆ ಹೋದರೆ ?

೭೪. ಆಚಾರ್ಯರು ಗುರುವಿನ ಅಪ್ಪಣೆಯಂತೆ ಕಾಶಿಗೆ ಹೋದ ಕಥೆ ವ್ಯಾಸಾಚಲೀಯದಲ್ಲಿಯೂ ಇಲ್ಲ, ಚಿದ್ವಿಲಾಸೀಯದಲ್ಲಿಯೂ ಇಲ್ಲ. ವ್ಯಾಸಾಚಲೀಯದಂತೆ ತೀರ್ಥಾಟನೆಗಾಗಿ ಆಚಾರ್ಯರು ಗೋವಿಂದಭಗವತ್ಪಾದರನ್ನು ಬಿಟ್ಟು ಉತ್ತರಕ್ಕೆ ಹೋಗಿ ಬದರಿಯನ್ನು ತಲುಪಿದರು (ಚಿದ್ವಿಲಾಸೀಯದಂತೆ ಬದರಿಯಲ್ಲಿಯೇ ಇದ್ದರು). ಆದರೆ ಮಾಧವೀಯ, ಶಂಕರದಿಗ್ವಿಜಯಸಾರ, ಶಂಕರಮಂದಾರಸೌರಭ-ಇವು ಮೂರರಲ್ಲಿಯೂ ಆಚಾರ್ಯರು ಕಾಶಿಗೆ ಹೋದದ್ದರ ವಿಚಾರವು ಇದೆ. ಮಾಧವೀಯದ ಕಥೆಯನ್ನು ಅಲ್ಲಲ್ಲಿ ಖಂಡಿಸಿರುವ ಆತ್ಮಬೋಧರ ಸುಷಮಾಗ್ರಂಥದಲ್ಲಿಯೂ ಕಾಶೀಗಮನವಿಚಾರವಿದೆ. ಚಿದ್ವಿಲಾಸೀಯದಲ್ಲಿ ಕೂಡ ಆಚಾರ್ಯರು ಬದರಿಯಿಂದ ಪ್ರಯಾಗಕ್ಕೆ ಹೋಗಿ ಕಾಶಿಗೆ ಹೋದ ವಿಷಯವಿದೆ. ಆದ್ದರಿಂದ ಅವರು ಕಾಶಿಗೆ ಹೋದರೆಂಬುದು ಬಹುಮತಕ್ಕೆ ಒಪ್ಪಾಗಿದೆಯೆಂದು ನಾವು ಇಟ್ಟುಕೊಳ್ಳಬಹುದು.

ಕಾಶೀಕ್ಷೇತ್ರವು ಸುಪ್ರಸಿದ್ಧಪುರಾತನವಿದ್ಯಾಸ್ಥಾನವು. ವರಣಾ, ಅಸಿ-ಎಂಬ ಎರಡು ನದಿಗಳ ನಡುವೆ ಇರುವ ಕಾರಣ ಇದಕ್ಕೆ ವಾರಣಾಸಿ ಎಂಬ ಹೆಸರು ಬಂದಿದೆ. ಕಾಶಿಯಲ್ಲಿ ಮರಣವಾಗುವವರಿಗೆ ಶಿವನೇ ತಾರಕೋಪದೇಶವನ್ನು ಮಾಡುವನೆಂದೂ ಕ್ಷೇತ್ರವು ಬಹಳ ಪವಿತ್ರವಾದದ್ದೆಂದೂ ಪುರಾಣಗಳು ಕೊಂಡಾಡುವವು. ಪ್ರಲಯಕಾಲದಲ್ಲಿಯೂ ರುದ್ರನು ತ್ರಿಶೂಲದಮೇಲೆ ಈ ನಗರವನ್ನು ಎತ್ತಿ ನಿಲ್ಲಿಸಿ ಕಾಪಾಡುವನೆಂದು ಸ್ಥಲಮಾಹಾತ್ಮ್ಯ. ದಕ್ಷಿಣದೇಶದವರು ಮಿಕ್ಕ ನದಿಗಳನ್ನು ಹೊಗಳುವಾಗ ಗಂಗೆಗೆ ಹೋಲಿಸುವದೂ, ಪವಿತ್ರಸ್ಥಲಗಳನ್ನು ದಕ್ಷಿಣಕಾಶಿ ಎಂದು ಸ್ತುತಿಸುತ್ತಿರುವದೂ ಈ ಕ್ಷೇತ್ರದ ಮಹಿಮೆಗೆ ಒಂದು ಹೆಚ್ಚಿನ ಸಂಮತಿಯಾಗಿರುತ್ತದೆಯೆನ್ನಬಹುದು. ಹೀಗೆ ಅನೇಕ ಕಾರಣಗಳಿಂದ ಪ್ರಸಿದ್ಧಿಗೆ ಬಂದ ಈ ಸ್ಥಲವು ಕಾಶೀರಾಜನಿಗೆ ರಾಜಧಾನಿಯಾಗಿದ್ದು ವಿದ್ವಾಂಸರುಗಳಿಗೆ ಆಶ್ರಯವನ್ನಿತ್ತಿತ್ತು ; ಕಾಶಿಯಲ್ಲಿ ವಿದ್ವತ್ತನ್ನು ಪ್ರಕಟಿಸುವವರೇ ವಿದ್ವದ್ವರ್ಯರೆಂದು ಪರಿಗಣಿತರಾದರು. ಗೌತಮಬುದ್ಧನು ತನ್ನ ಧರ್ಮವನ್ನು ಉಪದೇಶಿಸುವದಕ್ಕೆ ಮೊದಲುಮಾಡಿದ್ದು ಇಲ್ಲಿಯೇ; ಅಲ್ಲಿ ಸಾರನಾಥ (ಸಾರಂಗನಾಥ) ಎಂಬ ಬೌದ್ಧರ ಪ್ರಸಿದ್ಧಸ್ಥಾನವಿದೆ. ಬೌದ್ಧರಿಗೂ ಬ್ರಾಹ್ಮಣರಿಗೂ ವಾಗ್ಯುದ್ಧಗಳು ನಡೆದಮೇಲೆ ಬ್ರಾಹ್ಮಣರು ತಾವು ವಾಸವಾಗಿದ್ದ ದಕ್ಷಿಣಭಾಗವನ್ನೇ ಕಾಶೀಕ್ಷೇತ್ರವೆಂದು ಕರೆದುಕೊಂಡರು. ಉತ್ತರಕಾಶಿಯಲ್ಲಿ ಸತ್ತವರು ಮುಂದಿನ ಜನ್ಮದಲ್ಲಿ ಕತ್ತೆಯಾಗಿ ಹುಟ್ಟುವರೆಂಬ ಕಥೆಯೂ ಬೌದ್ಧೇತರರಿಂದ

ಕಲ್ಪಿತವಾಯಿತು. ಆ ಭಾಗವು ಬರುಬರುತ್ತಾ ಕ್ಷೀಣವಾಗಿದ್ದದ್ದು ಬೌದ್ಧರ ಉತ್ಸಾಹದಿಂದಲೂ ಸರಕಾರದವರ ಉತ್ತೇಜನದಿಂದಲೂ ಇತ್ತೀಚೆಗೆ ಉಜ್ಜೀವಿತವಾಗುತ್ತಿದೆ. ಕಾಶೀಕ್ಷೇತ್ರವು ವಿದ್ವಾಂಸರ ಕ್ಷೇತ್ರವಾಗಿದ್ದದ್ದರಿಂದಲೇ ಅಲ್ಲಿಗೆ ಹೋಗಿ ಭಾಷ್ಯರಚನೆಯನ್ನು ಮಾಡಿ ತಮ್ಮ ಅದ್ವೈತಸಿದ್ಧಾಂತವನ್ನು ಪ್ರಚಾರಮಾಡುವಂತೆ ಗೋವಿಂದಭಗವತ್ಪಾದರು ಶಿಷ್ಯನಿಗೆ ಅಪ್ಪಣೆಕೊಡಿಸಿರಬಹುದೆಂದು ತೋರುತ್ತದೆ. ಆದರೆ ಚಿದ್ವಿಲಾಸರ ಹೇಳಿಕೆಯಂತೆ ಆಚಾರ್ಯರು ಮೊದಲು ಬದರಿಯಲ್ಲಿ ಭಾಷ್ಯವನ್ನು ರಚಿಸಿದ ಮೇಲೆಯೇ ಕಾಶಿಗೆ ತಮ್ಮ ವಿಪ್ರತ್ವಪ್ರಕಟನೆಗಾಗಿ ಹೋದರೆಂದು ಕಲ್ಪಿಸಿದರೂ ಅಸಂಭಾವಿತವೆನಿಸುವದಿಲ್ಲ.

## ಪದ್ಮಪಾದನೆಂಬ ಶಿಷ್ಯನ ಸ್ವೀಕಾರ

೭೫. ಶಂಕರಾಚಾರ್ಯರು ಕಾಶಿಯಲ್ಲಿ ನಿಂತಮೇಲೆ ಒಮ್ಮೆ ಒಬ್ಬ ಬ್ರಾಹ್ಮಣವಟು ಅವರ ಬಳಿಗೆ ಬಂದು ನಮಸ್ಕರಿಸಿದನು. ಅವನ ವೃತ್ತಾಂತವನ್ನು ಕೇಳಲಾಗಿ 'ನಾನು ಚೋಳದೇಶದವನು; ಅಲ್ಲಿ ಪರಿಭಕ್ತರಿಗೆ ಪ್ರೋತ್ಸಾಹಕವಾದ ಕಾವೇರೀನದಿಯು ಹರಿಯುತ್ತಿರುತ್ತದೆ. ಅಲ್ಲಿಂದ ದೇಶಾಟನಮಾಡುತ್ತಾ ಬಂದು ಸಂಸಾರದಿಂದ ಪಾರಾಗಬೇಕೆಂದು ತಮ್ಮನ್ನು ಶರಣುಹೊಕ್ಕಿದೇನೆ' ಎನ್ನಲು ಆಚಾರ್ಯರು ಕೃಪಾಪೂರ್ವಕವಾಗಿ ಅವನಿಗೆ ವಿಧಿವತ್ತಾಗಿ ಸಂನ್ಯಾಸವನ್ನು ಕೊಟ್ಟರು. ಅವನೇ ಸನಂದನನೆಂಬ ಮೊದಲನೆಯ ಶಿಷ್ಯನೆಂದು ಹೇಳುತ್ತಾರೆ. ಹೀಗಿಯೇ ಇನ್ನೂ ಅನೇಕರು ಬಂದು ಆಚಾರ್ಯರ ಶಿಷ್ಯರಾದರು (ಮಾ. ಶಂ. ೬-೧ರಿಂದ ೧೬). ಇದು ಮಾಧವೀಯದಲ್ಲಿರುವ ಕಥೆ.

ಚಿದ್ವಿಲಾಸೀಯದಲ್ಲಿ ಈತನು ಅಹೋಬಲಕ್ಷೇತ್ರದಲ್ಲಿ ಲಕ್ಷ್ಮೀ, ಮಾಧವಾಚಾರ್ಯ-ಎಂಬ ಬ್ರಾಹ್ಮಣದಂಪತಿಗಳು ನೃಸಿಂಹನ ಪ್ರಸಾದದಿಂದ ಪಡೆದುಕೊಂಡ ವಿಷ್ಣುಶರ್ಮನೆಂಬ ಮಗನೆಂದೂ ತಂದೆತಾಯಿಗಳು ಸ್ವರ್ಗಸ್ಥರಾದಮೇಲೆ ಸ್ವಪ್ನದಲ್ಲಿ ಆದ ನರಸಿಂಹನ ಅಪ್ಪಣೆಯಂತೆ ಆಚಾರ್ಯರ ಬಳಿಗೆ ಬಂದನೆಂದೂ (ಚಿ. ಶಂ. ೧೯-೧೨ರಿಂದ ೨೪) ಇದೆ. ಈ ವಿವರವನ್ನು ಮತ್ತೆ ಯಾರೂ ಹೇಳಿದಂತೆ ಕಾಣುವದಿಲ್ಲ.

## ಅಂತ್ಯಜನ ವೇಷದಿಂದ ವಿಶ್ವೇಶ್ವರನ ದರ್ಶನ

೭೬. ಆಚಾರ್ಯರು ಕಾಶಿಯಲ್ಲಿ ಯಾವ ಭಾಗದಲ್ಲಿದ್ದರೆಂಬುದುಮಾಧವೀಯದಿಂದ ತಿಳಿಯಬರುವದಿಲ್ಲ. ಚಿದ್ವಿಲಾಸೀಯದಲ್ಲಿ ಆಚಾರ್ಯರು ಪ್ರಯಾಗ, ಗಯೆ- ಇವುಗಳ ಮಾರ್ಗವಾಗಿ ಕಾಶಿಗೆ ಬಂದಮೇಲೆ 'ಸ್ನಾತ್ವೈವ ತೋಯೇ ಮಣಿಕರ್ಣಿಕಾಯಾ ವಿಶ್ವೇಶ್ವರಂ ಪ್ರತ್ಯಹಮರ್ಚತಿ ಸ್ಮ । ವಾಸಂ ಚಕಾರಾನಿಶಮೇಷ ಶಿಷ್ಯೈಃ ಸಾಕಂ ಸ ಘಟ್ಟೇ ಮಣಿಕರ್ಣಿಕಾಯಾಃ॥' (ಚಿ. ೧೨-೨,೩)

ಎಂದಿರುವದರಿಂದ ಮಣಿಕರ್ಣಿಕಾಘಾಟಿನಲ್ಲಿ ಶಿಷ್ಯರೊಡನೆ ವಾಸವಾಗಿದ್ದು ಕೊಂಡು ನಿತ್ಯಸ್ನಾನವನ್ನು ಮಾಡಿ ಪ್ರತಿದಿನವೂ ವಿಶ್ವೇಶ್ವರನನ್ನು ಅರ್ಚಿಸು ತ್ತಿದ್ದರು—ಎಂದು ತಿಳಿಯಬೇಕಾಗಿದೆ. ಅವರ ದರ್ಶನಕ್ಕೆ ಅನೇಕರು ಬರುತ್ತಿದ್ದರು. ಒಂದು ದಿನ ಎಂದಿನಂತೆ ನದಿಗೆ ಶಿಷ್ಯಸಮೇತರಾಗಿ ಸ್ನಾನಾಹ್ನಿಕಾನುಷ್ಠಾನಕ್ಕೆ ಹೋಗುತ್ತಿರುವಲ್ಲಿ ನಾಲ್ಕು ನಾಯಿಗಳಿಂದೊಡಗೂಡಿ ಬರುತ್ತಿದ್ದ ಅಂತ್ಯಜನನ್ನು ಕಂಡು 'ದೂರ ಸರಿ!' ಎಂದರು. ಅವನು 'ಅದ್ವಿತೀಯವಾದ ಶುದ್ಧಾಸಂಗಸತ್ಯ ಚಿತ್ಸುಖರೂಪವಾದ ಅಖಂಡವಸ್ತುವೊಂದೇ ಎಂದು ವೇದಾಂತಗಳು ಹೇಳುತ್ತಿರು ವವು. ಹೀಗಿರುವಲ್ಲಿ ನಿನಗೆ ಇನ್ನೂ ಭೇದಬುದ್ಧಿಯಿದೆಯಲ್ಲ!—ಇದೇ ಆಶ್ಚರ್ಯ ಕರವು. ದಂಡಕಮಂಡಲುಕಾಷಾಯಗಳನ್ನು ಧರಿಸಿ ಬಲವಾಗಿ ಮಾತಾಡುತ್ತಾ ಜ್ಞಾನದ ವಾಸನೆಯೂ ಇಲ್ಲದ ಕೆಲವರು ಗೃಹಸ್ಥರನ್ನು ವಂಚಿಸುತ್ತಿರುತ್ತಾರಲ್ಲವೆ? 'ದೂರ ಹೋಗು'—ಎಂಬ ಮಾತಿನಿಂದ ದೇಹವನ್ನು ದೂರಗೊಳಿಸಲಿಚ್ಛಿಸುವೆಯೊ, ದೇಹಿಯನ್ನೊ? ಒಂದು ಅನ್ನಮಯದಿಂದ ಇನ್ನೊಂದು ಅನ್ನಮಯವು ಬೇರೆ ಎಂದು ಹೀಗೆ ಹೇಳುತ್ತಿರುವೆಯೊ, ಅಥವಾ ಒಂದು ಸಾಕ್ಷಿಗಿಂತ ಇನ್ನೊಂದು ಸಾಕ್ಷಿಯು ಬೇರೆಯೆಂದೊ? ಪ್ರತ್ಯಗಾತ್ಮನಲ್ಲಿ ಬ್ರಾಹ್ಮಣನು, ಶ್ವಪಚನು—ಎಂಬ ಭೇದಬುದ್ಧಿಯು ಹೇಗೆ ಯುಕ್ತವಾದೀತು? ಗಂಗೆಯಲ್ಲಿ ಪ್ರತಿಬಿಂಬಿಸಿದ ಸೂರ್ಯ ನಿಗೂ ಹೆಂಡದಲ್ಲಿ ಪ್ರತಿಬಿಂಬಿಸಿದ ಸೂರ್ಯನಿಗೂ ಅಂತರವುಂಟೆ? ಎಲೈ ಮುನಿ ವರ್ಯನೆ, ಎಲ್ಲಾ ಶರೀರಗಳಲ್ಲಿಯೂ ತಾನೊಬ್ಬನೇ ಇರುವ ಪುರಾಣಪುರುಷನನ್ನು ಕೈಬಿಟ್ಟು, ನಾನು ಶುಚಿಯಾದ ದ್ವಿಜನು, ಶ್ವಪಚನೆ, ಅತ್ತಸರಿ—ಎಂಬುದು ಎಂಥ ಬುದ್ಧಿಯು!' ಎಂದು ಮುಂತಾಗಿ ತತ್ತ್ವದ ಮಾತುಗಳನ್ನಾಡಿಸಿದನು. ಆಗ ಶಂಕರರು 'ನೀನು ಅಂತ್ಯಜನೆಂಬ ಬುದ್ಧಿಯನ್ನು ಈಗ ಬಿಟ್ಟೆನು. ಯಾವನಿಗೆ ಎಲ್ಲವೂ ಆತ್ಮನೇ ಎಂಬ ಬುದ್ಧಿ ಇರುವದೋ ಅವನು ದ್ವಿಜನಾಗಲಿ ಶ್ವಪಚ ನಾಗಲಿ, ವಂದನೀಯನೇ ಎಂದು ನನ್ನ ದೃಢನಿಷ್ಠೆಯು, ಅವನೇ ನನ್ನ ಗುರು' ಎಂಬರ್ಥದ ಶ್ಲೋಕಗಳಿಂದ ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಅಷ್ಟರಲ್ಲಿ ಆ ಅಂತ್ಯಜನು ಮಾಯವಾಗಿದ್ದನು; ಸಾಕ್ಷಾಚ್ಚಂದ್ರಮೌಲಿಯೇ ಎದುರಿಗೆ ನಿಂತಿದ್ದನು (ಮಾ. ಶಂ. ೬—೨೫ರಿಂದ ೩೯).

ಈ ಕಥೆಯಲ್ಲಿ ಎಷ್ಟರಮಟ್ಟಿಗೆ ನಿಜದ ಅಂಶವಿದೆಯೋ ಹೇಳುವದಕ್ಕೆ ಬರುವ ದಿಲ್ಲ. ಆತ್ಮಬೋಧರೂ ತಮ್ಮ ಸುಷಮಾಗ್ರಂಥದಲ್ಲಿ 'ಜಾಹ್ನವೀತೀರಮಾಸಾದ್ಯ ಬೋಧಿತೋಽನ್ತ್ಯಜರೂಪಿಣಾ। ವಿಶ್ವೇಶ್ವರೇಣ ಭಾಷ್ಯಂ ಸ ಬ್ರಹ್ಮಸೂತ್ರಸ್ಯ ನಿರ್ಮಮೇ॥' ಎಂದು ಈ ಕಥೆಯನ್ನು ಸಂಗ್ರಹಿಸಿರುತ್ತಾರೆ.

ಚಿದ್ವಿಲಾಸೀಯದಲ್ಲಿ ಈ ಕಥೆಯಿಲ್ಲ. ಅಲ್ಲಿ ಪದ್ಮಪಾದರ ಕಥೆಯನ್ನು ಹೇಳಿದ ಬಳಿಕ ಶಂಕರಾಚಾರ್ಯರು ಒಂದು ದಿನ ಸ್ನಾನಮಾಡಿಕೊಂಡು ಬಂದು

ವಿಶ್ವೇಶ್ವರನನ್ನು ಅರ್ಚನೆಮಾಡಿ 'ಮಹೇಶ್ವರನೆ' ಅದ್ವೈತವು ಸತ್ಯವೋ, ದ್ವೈತವು ಸತ್ಯವೋ ? ಈ ವಿದ್ವಾಂಸರ ಮುಂದೆ ಶ್ರುತಿಸಾರವನ್ನು ಬಲ್ಲ ನೀನೇ ಹೇಳಿ ಎಲ್ಲರ ಸಂಶಯವನ್ನೂ ತೊಲಗಿಸು' ಎಂದು ಕೇಳಿಕೊಳ್ಳಲು ಪಾರ್ವತೀಸಮೇತನಾದ ಶಿವನು ಲಿಂಗದಿಂದ ಹೊರಕ್ಕೆ ಬಂದು ಕಾಣಿಸಿಕೊಂಡು 'ಅದ್ವೈತವೇ ಶುದ್ಧ ಸತ್ಯವು, ದ್ವೈತವಲ್ಲ' ಎಂದು ಮೂರು ಬಾರಿ ಕೈಯೆತ್ತಿ ಗಟ್ಟಿಯಾಗಿ ಸಾರಿ ಅಂತರ್ಧಾನ ವಾದನು-(ಚಿ. ಶಂ. ೧೨-೩೮ರಿಂದ ೪೧) ಎಂದಿದೆ. **ಅನಂತಾನಂದಗಿರಿಯೂ** ಮಧ್ಯಾರ್ಜುನೇಶ್ವರನು ಹೀಗೆಯೇ ಅದ್ವೈತಕ್ಕೆ ತನ್ನ ಸಮ್ಮತಿಯನ್ನು ಕೊಟ್ಟ ಕಥೆಯನ್ನು ತನ್ನ ಶಂಕರವಿಜಯದಲ್ಲಿ (ಪ್ರ. ೪, ಪು. ೧೯, ದೇ. ಪು. ೧೬)ಬರೆದಿರು ತ್ತಾನೆ. ಮಾಧವೀಯವ್ಯಾಖ್ಯಾನಕಾರನಾದ **ಡಿಂಡಿಮಕಾರನು** (ಮಾ. ಶಂ. ೧೫-೪) ಆನಂದಗಿರಿಯ ಕಥಾಸರಣಿಯನ್ನೇ ಅನುಸರಿಸಿರುತ್ತಾನೆ. ಡಿಂಡಿಮ ವ್ಯಾಖ್ಯಾನವು ನಿರ್ಮಿತವಾದಾಗ ಚಿದ್ವಿಲಾಸೀಯವು ಇನ್ನೂ ಹುಟ್ಟಿರಲಿಲ್ಲವೆ ? ಚಿದ್ವಿಲಾಸರು ಮಧ್ಯಾರ್ಜುನನ ಐತಿಹ್ಯವನ್ನು ಹೀಗೆ ಕಾಶಿಗೆ ಸ್ಥಲಾಂತರಗೊಳಿಸಿ ಕಥೆಯನ್ನು ನಿರ್ಮಿಸಿರಬಹುದೆ ? ಇವರ ನಿಜವನ್ನು ಗ್ರಂಥಕಾಲನಿರ್ಣಯಜ್ಞರು ಶೋಧಿಸಬೇಕಾಗಿದೆ.

ಬೌದ್ಧಮತವು ಪ್ರಬಲವಾದ ಕಾಲದಲ್ಲಿ ದ್ವಿಜರಲ್ಲದವರೂ ವಿದ್ಯಾವಂತರಾಗಿ ಶಾಸ್ತ್ರಜ್ಞರಾಗುತ್ತಿದ್ದದ್ದರಿಂದ ಹೀಗೆ ಒಂದು ಸಂಭಾಷಣೆ ನಡೆದಿರಬಹುದೆಂದೂ (ಸೋ.ಶಂ.ಪು. ೬೯) ಭಗವತ್ಪಾದರು ಚಂಡಾಲನನ್ನು ಗುರು ಎಂದರೆ ಅದ್ವೈತಕ್ಕೆ ಹಾನಿ ಅಥವಾ ಅವಮಾನ ಎಂಬ ಭ್ರಾಂತಿಯಿಂದ ಆ ಚಂಡಾಲನು ಶಿವನೇ ಎಂಬ ಕಥೆಯನ್ನು ಹುಟ್ಟಿಸಿರಬಹುದೆಂದೂ (ಸೋ.ಶಂ. ಪು. ೭೬) **ಸೋಮನಾಥಯ್ಯ** ನವರು ಊಹಿಸಿರುತ್ತಾರೆ. ಆಶುಕವಿತೆಯು ಪ್ರಚುರವಾಗಿರುವ ನಮ್ಮ ದೇಶದಲ್ಲಿ ಚಂಡಾಲನಿಗೂ ಶಂಕರರಿಗೂ ಛಂದೋಬದ್ಧವಾಗಿಯೇ ಸಂಭಾಷಣೆ ನಡೆದಿರ ಬಹುದೆಂದೂ (ಸೋ.ಶಂ. ಪು. ೭೩) ಅವರ ತರ್ಕ. ಹೇಗೇ ಆಗಲಿ, ಶಂಕರಾ ಚಾರ್ಯಕೃತವೆಂದು ಪ್ರಸಿದ್ಧವಾಗಿರುವ **ಮನೀಷಾಪಂಚಕವೆಂಬ** ಶ್ಲೋಕಬದ್ಧ ಪ್ರಕರಣವಿರುವದಂತೂ ನಿಶ್ಚಯ. ಆ ಶ್ಲೋಕಗಳು ಆಚಾರ್ಯಕೃತವೆಂದು ನಮ್ಮ ದೇಶದವರು ಗಟ್ಟಿಮಾಡಿ ಹೇಳಿಕೊಂಡು ನಲಿಯುತ್ತಿರುವದೂ ನಿಶ್ಚಯ.[1] ಈ ಪ್ರಕರಣದ ಆದಿಯಲ್ಲಿ 'ಸತ್ಯಾಚಾರ್ಯಸ್ಯ ಗಮನೇ ಕದಾಚಿನ್ಮುಕ್ತಿದಾಯ ಕಮ್ | ಕಾಶೀಕ್ಷೇತ್ರಂ ಪ್ರತಿ ಸಹ ಗೌರ್ಯಾ ಮಾರ್ಗೇ ತು ಶಙ್ಕರಮ್ || ೧ || ಅನ್ತ್ಯವೇಷಧರಂ ದೃಷ್ಟ್ವಾ ಗಚ್ಛಗಚ್ಛೇತಿ ಚಾಬ್ರವೀತ್ | ಶಙ್ಕರಃ ಸೋಽಪಿ ಚಣ್ಡಾಲಸ್ತಂ ಪುನಃ ಪ್ರಾಹ ಶಙ್ಕರಮ್ || ೨ ||' ಎಂಬ ಎರಡು ಅವತರಣಿಕಾ

1. ಮನೀಷಾಪಂಚಕವನ್ನು ಅರ್ಥಸಮೇತವಾಗಿ ಅ. ಪ್ರ. ಕಾರ್ಯಾಲಯದಲ್ಲಿ ಪ್ರಕಟವಾಗಿರುವ ಪ್ರಕರಣಗಳ ಸಂಗ್ರಹದ ಸಂಪುಟ ೨ರಲ್ಲಿ ಕೊಟ್ಟಿದೆ.

ಶ್ಲೋಕಗಳೂ ಇವೆ. ಇವರಲ್ಲಿ ಅಂತ್ಯಜವೇಷದ ಶಂಕರನು ಪಾರ್ವತೀಸಹಿತ ನಾಗಿಯೇ ಇದ್ದನೆಂದು ಹೇಳಿರುವದನ್ನು ಲಕ್ಷಿಸಬೇಕು : ನಾಲ್ಕು ನಾಯಿಗಳು ಅವನ ಜೊತೆಯಲ್ಲಿದ್ದವೆಂಬ ಮಾಧವೀಯಕಲ್ಪನೆ ಅಲ್ಲಿಲ್ಲ. ಕಾಶೀ ಕ್ಷೇತ್ರಕ್ಕೆ ಶಂಕರಾಚಾರ್ಯರು ಹೋಗುತ್ತಿರುವಾಗ ಮಾರ್ಗವಲ್ಲಿ ಈ ಘಟನೆ ನಡೆಯಿತೆಂದು ವರ್ಣಿಸಿದೆ ಎಂದು ಬರೆದಿರುವದನ್ನು ನೋಡಿದರೆ ಈ 'ಮನೀಷಾಪಂಚಕವು' ಯಾವದಾದರೊಂದು ಹಳೆಯ ಶಂಕರವಿಜಯದಲ್ಲಿಯೇ ಇದ್ದಿತೊ ?- ಎಂಬ ಶಂಕೆಯುಂಟಾಗುತ್ತದೆ. ಚಿತ್ಸುಖಾಚಾರ್ಯರಚಿತವೆಂಬ **ಬೃಹಚ್ಛಂಕರವಿಜಯವು** ಕುಂಭಕೋಣದ ಮಠದಲ್ಲಿರುವದಾಗಿ ಹೇಳುತ್ತಾರೆ, ಅದನ್ನು ಹುಡುಕಿ ಇದರ ನಿಜವನ್ನು ಗೊತ್ತುಪಡಿಸುವದು ಗ್ರಂಥತತ್ತ್ವಾನ್ವೇಷಕರ ಕರ್ತವ್ಯವಾಗಿದೆ. ಇದಂತಿರಲಿ, ಬ್ರಾಹ್ಮಣೇತರರಿಗೂ ವಿದ್ಯಾಭ್ಯಾಸವು ಇತಿಹಾಸ ಪುರಾಣಗಳ ಕಾಲದಿಂದಲೂ ಇತ್ತೆಂಬುದಕ್ಕೆ ವಿದುರ, ಧರ್ಮವ್ಯಾಧ- ಮೊದಲಾದವರ ಕಥೆಗಳು ಸಾಕ್ಷಿಯಾಗಿವೆ. ಲಿಖಿತಾಕ್ಷರಾಭ್ಯಾಸವಿಲ್ಲದಿದ್ದರೂ ತತ್ತ್ವವಿಚಾರದಲ್ಲಿ ಮುಂದುವರಿದು ಪರಮಾರ್ಥವನ್ನು ಅನುಭವಕ್ಕೆ ತಂದುಕೊಂಡ ಸ್ತ್ರೀಯರೂ ಶೂದ್ರಾದಿಗಳೂ ಹಿಂದಿನ ಕಾಲದಲ್ಲಿಯೂ ಇದ್ದರು. ಈಗಲೂ ಅಲ್ಲಲ್ಲಿ ಸಿಕ್ಕುತ್ತಾರೆ. ಆದ್ದರಿಂದ ಕಾಶೀಪಟ್ಟಣದಂಥ ದೊಡ್ಡ ಕ್ಷೇತ್ರದಲ್ಲಿ ವೇದಾಂತದ ತತ್ತ್ವವನ್ನು ತಿಳಿದ ಒಬ್ಬ ಅಂತ್ಯಜನೂ ಇದ್ದನೆಂಬುದಕ್ಕೆ ಯಾವ ಅಡ್ಡಿಯೂ ಕಾಣಿಸುವದಿಲ್ಲ. ಆಗ ನಡೆದ ಸಂಭಾಷಣೆಯೊಂದು ಐತಿಹ್ಯವಿದ್ದದ್ದನ್ನು ಯಾರಾದರೂ ಈ ಮನೀಷಾಪಂಚಕರೂಪದಿಂದ ಕವನಮಾಡಿದ್ದರೂ ಇರಬಹುದು. ಅಂಥ ತತ್ತ್ವಜ್ಞಾನಿಯು ವಿಶ್ವೇಶ್ವರನಂತೆಯೂ ಸದ್ಗುರುವಿನಂತೆಯೂ ಗೌರವಕ್ಕೆ ಅರ್ಹನು ಎಂದು ಆಸ್ತಿಕರಾದ ಅದ್ವೈತಿಗಳು ನಂಬಿದ್ದರೆ ಅದರಲ್ಲಿಯೂ ಆಶ್ಚರ್ಯವೇನೂ ಇಲ್ಲ.

### ಮನೀಷಾಪಂಚಕದಲ್ಲಿ ಜಾತಿಭೇದನಿರಾಸವಾದವಿದೆಯೆ ?

೭೭. ಈ ಸಂದರ್ಭದಲ್ಲಿ ವಿಚಾರಮಾಡತಕ್ಕ ಮತ್ತೊಂದು ವಿಷಯವಿದೆ. ಶಂಕರಾಚಾರ್ಯರು ಚಂಡಾಲನನ್ನು ಗುರುವೆಂದು ತಿಳಿದರು- ಎಂಬ ಈ ಕಥೆಯಿಂದ ಅವರ ದೃಷ್ಟಿಯಲ್ಲಿ ಜಾತಿಭೇದವಿರಲಿಲ್ಲವೆಂದೂ ಅವರ ಅದುಯಾಯಿಗಳೂ ಇತರರೂ ಜಾತಿಭೇದವನ್ನು ಪ್ರಬಲಿಸಿ ಜನರ ಒಗ್ಗಟ್ಟನ್ನು ಒಡೆಯಿಸಿರುತ್ತಾರೆಂದೂ ಕೆಲವರ ಭಾವನೆಯಿದೆ. ಈ ಕಾರಣದಿಂದ ಕೀಳುಜಾತಿಯವರಿಗೂ ವಿದ್ಯಾಭ್ಯಾಸವೇ ಮುಂತಾದವುಗಳನ್ನು ಮಾಡಿಸಿ ಜಾತಿಯನ್ನು ನಿರ್ಮೂಲ ಮಾಡುವದೇ ಯುಕ್ತವೆಂದು ಈಗಿನ ಕೆಲವು ಜನನಾಯಕರುಗಳ ಅಭಿಪ್ರಾಯವಾಗಿರುತ್ತದೆ. ಈಗಿನ ಸರಕಾರವೂ ಈ ಅಭಿಪ್ರಾಯವನ್ನು ಅನುಮೋದಿಸಿ ಅಂತ್ಯಜರು, ಅಸ್ಪೃಶ್ಯರು- ಎಂಬ ಭೇದವನ್ನು ಒಪ್ಪಿ ಆಚರಿಸುವವರಿಗೆ ಶಿಕ್ಷೆ

ಯನ್ನು ವಿಧಿಸುತ್ತೇನೆಂದು ಶಾಸನವನ್ನು ಮಾಡಿ ಅದನ್ನು ರಾಷ್ಟ್ರದ ಸಂಘಟನಾ ಪಟ್ಟಿಯಲ್ಲಿಯೂ ಸೇರಿಸಿರುತ್ತಾರೆ. ಅಂತ್ಯಜರನ್ನು ಹರಿಜನರೆಂದು ಕರೆದು ಅವರಿಗೂ ದೇವಾಲಯಾದಿಗಳಲ್ಲಿ ಪ್ರವೇಶವಿರಬೇಕೆಂದು ಕಾನೂನುಮಾಡಿಸಿ ಅವರ ಬೆಂಬಲದಿಂದ ಸಮಾಜಸುಧಾರಕರು ಆ ಹರಿಜನರನ್ನು ದೇವಾಲಯಗಳ ಒಳಕ್ಕೆ ತೂರಿಸುತ್ತಿರುತ್ತಾರೆ; ಜಾತ್ಯಭಿಮಾನವನ್ನು ಎಬ್ಬಿಸಬೇಕೆನ್ನುವವರು ಅದನ್ನು ಪ್ರತಿಭಟಿಸುತ್ತಲೂ ಇರುತ್ತಾರೆ. ಇದರಿಂದ ಜನರ ಒಗ್ಗಟ್ಟು ಮತ್ತಷ್ಟು ಸಡಿಲವಾಗಿದೆ. ತಿಳಿವಳಿಕೆಸಾಲದವರಿಗೆ ಓದುಬರಹಗಳನ್ನು ಕಲಿಸುವದೂ ಅವರನ್ನು ಸುಸಂಸ್ಕೃತರನ್ನಾಗಿ ಮಾಡುವದೂ ತಪ್ಪೆಂದು ಯಾರೂ ಎಂದಾಗಲೂ ಹೇಳಿಲ್ಲ. ಆದರೆ ಆಹಾರವಿಹಾರಾದಿಗಳಲ್ಲಿ ಜನರ ದುರಭ್ಯಾಸವನ್ನು ಹಾಗೆಯೇ ಇರಗೊಟ್ಟು ಜಾತಿಗಳ ಕಲಬೆರಕೆಮಾಡುವದರಿಂದಲೂ ಸದಾಚಾರಗಳನ್ನು ಲೋಪಗೊಳಿಸುವದರಿಂದಲೂ ಯಾರಿಗಾದರೂ ಪ್ರಯೋಜನವಿದೆಯೆ ?–ಎಂಬುದನ್ನು ಸುಧಾರಕರೆಂಬವರು ವಿಚಾರಮಾಡಬೇಕು. ಜಾತಿಗಳ ಸಂಖ್ಯೆಯು ಹೆಚ್ಚಿದ್ದರಿಂದ ಜನರಲ್ಲಿ ಮೇಲುಕೀಳಿನ ಭಾವನೆಯು ಬಲಿತು ಮನೋವೈಷಮ್ಯಕ್ಕೆ ಕಾರಣವಾಗಿದೆಯೆ ? ಅಥವಾ ಈಗಿನ ನಾಗರಿಕತೆಯ ದುಃಸಹವಾದ ಪೈಪೋಟಿಯಿಂದ ಜನರಲ್ಲಿ ದ್ವೇಷಾಸೂಯೆಗಳು ಬೆಳೆಯುತ್ತಿವೆಯೆ ?– ಎಂಬ ಪ್ರಶ್ನೆಯು ಇನ್ನೂ ಪರಿಶೀಲನೀಯವೇ ಆಗಿರುತ್ತವೆ. ಜಾತಿಗಳೆಲ್ಲ ನಿರ್ಮೂಲನವಾದರೆ ಜನರೆಲ್ಲರೂ ಶುಚಿಯಾಗಿ ಮೇಲಿನಂತಸ್ತಿಗೆ ಏರಿ ಸಮಾನವಾದ ಜೀವನದ ಮಟ್ಟವನ್ನು ಪಡೆದುಕೊಂಡು ಒಬ್ಬರಲ್ಲೊಬ್ಬರು ಮೈತ್ರಿಯಿಂದ ವರ್ತಿಸುವರೆಂಬುದೂ ಸಂಶಯಗ್ರಸ್ತವೇ ಆಗಿದೆ. ಏಕೆಂದರೆ ಜಾತಿಪದ್ಧತಿಯೇ ಇಲ್ಲದ ದೇಶಗಳೇ ಈ ಲೋಕದಲ್ಲಿ ಬಹಳವಾಗಿವೆ. ಆ ದೇಶಗಳಲ್ಲಿ ಜನರೆಲ್ಲರೂ ವಿದ್ಯಾವಂತರಾಗಿ, ನೀತಿವಂತರಾಗಿ, ಒಬ್ಬರಲ್ಲೊಬ್ಬರು ಸ್ನೇಹಭಾವದಿಂದ ಇರುವರೆಂದೇನೂ ಕಾಣಿಸುತ್ತಿಲ್ಲ; ಅಲ್ಲಿರುವ ವರ್ಗಗಳ ಭೇದಗಳೂ ವರ್ಣಭೇದಗಳೂ ಅವುಗಳಿಂದಾಗಿರುವ ಒಳಜಗಳಗಳಿಗೂ ಅಂಧಾನುಕರಣೆಗೆ ಪ್ರಚೋದಕವಾಗಿರುವಂತೆಯೂ ಕಾಣುತ್ತಿವೆ.

ಈ ಸಾಮಾಜಿಕಪ್ರಶ್ನೆ ಹಾಗಿರಲಿ, ಮನೀಷಾಪಂಚಕದಲ್ಲಿ ಈ ವಿಚಾರದ ವಾಸನೆಯೂ ಇಲ್ಲವೆಂಬುದನ್ನು ಮಾತ್ರ ಇಲ್ಲಿ ಸ್ಪಷ್ಟಗೊಳಿಸುವದು ಆವಶ್ಯವಾಗಿರುತ್ತದೆ. ಜಾಗ್ರತ್ಸ್ವಪ್ನಸುಷುಪ್ತಿಗಳಲ್ಲಿರುವ ಚೈತನ್ಯವು ಒಂದೇ, ಬ್ರಹ್ಮಾದಿಪಿಪೀಲಿಕಾಂತವಾಗಿರುವ ಪ್ರಾಣಿಗಳ ಶರೀರದಲ್ಲಿ ಆತ್ಮಚೈತನ್ಯವು ನಿಸ್ತರಂಗವಾದ ಚಿದಾನಂದಸಮುದ್ರವಂತೆ ಇರುತ್ತದೆ. ಆ ಆತ್ಮತತ್ತ್ವಕ್ಕೆ ವಿಪ್ರ, ಶ್ವಪಚ–ಮುಂತಾದ ದೇಹಸಂಬಂಧದ ವೈಲಕ್ಷಣ್ಯವು ಸ್ವಲ್ಪವೂ ಸಂಬಂಧಿಸಿಲ್ಲ; ಈ ಜ್ಞಾನವು ಯಾವನಲ್ಲಿರುವದೋ ಆತನ ಬೋಧೆಯನ್ನು ಸದ್ಗುರುಬೋಧೆಯೆಂದೇ ಎಣಿಸಬೇಕು–ಎಂಬುದು ಪ್ರಕರಣಾರ್ಥದ ಸಾರವು. ಬ್ರಾಹ್ಮಣಾದಿ

ಗಳು ಜಾತಿಭೇದವನ್ನು ಬದಿಗೊತ್ತಿ ಒಬ್ಬರಲ್ಲೊಬ್ಬರು ಭೋಜನವಿವಾಹಾದಿ ಗಳನ್ನು ನಡೆಯಿಸಬೇಕು, ಅಥವಾ ನಡೆಯಿಸಬಾರದು– ಎಂಬಿವರ ಸೊಲ್ಲೂ ಇದರಲ್ಲಿಲ್ಲ. ಅದ್ವೈತವೆಂದರೆ ಜಾತಿನೀತಿಕುಲಾದಿಗಳ ಭೇದವಿಲ್ಲದ ಏಕೀಕರಣದ ಸಮಾಜವನ್ನು ಬೋಧಿಸುವ ಸುಧಾರಕರ ಮತವೆಂದು ಯಾವ ವಿವೇಕಿಯು ಹೇಗೆ ನಿಶ್ಚಯಿಸಿದನೋ ನಮಗಂತೂ ಬಗೆಹರಿಯದಾಗಿದೆ.

## ಆಚಾರ್ಯರ ಭಾಷ್ಯದ ಗುರಿಯೇನು ?

೭೮. ಆಚಾರ್ಯರು ಭಯಭಕ್ತಿಗಳಿಂದ ಶಿವನನ್ನು ಸ್ತುತಿಸಿದರು. ಆ ಮಹಾದೇವನು ಸಂತುಷ್ಟನಾಗಿ 'ಅಪ್ಪ, ನೀನು ಮೇಲಿನ ಮಟ್ಟಕ್ಕೆ ಏರಿದ್ದೀಯೆ, ನಿನ್ನ ತಪೋನಿಷ್ಠೆಯನ್ನು ಪರೀಕ್ಷಿಸಿದ್ದಾಯಿತು. ಬಾದರಾಯಣನಂತೆ ನೀನೂ ನನ್ನ ಅನುಗ್ರಹಕ್ಕೆ ಪಾತ್ರನಾಗಿರುವೆ. ಬಾದರಾಯಣನು ಶ್ರುತಿಗಳನ್ನೆಲ್ಲ ವಿಂಗಡಿಸಿ ಬ್ರಹ್ಮಸೂತ್ರವನ್ನು ರಚಿಸಿ ಕುಮತಗಳನ್ನು ಖಂಡಿಸಿರುತ್ತಾನೆ. ಎಲ್ಲಿಯೋ ಎರಡುಮೂರು ವೇದವಾಕ್ಯಗಳ ಪ್ರಾಮಾಣ್ಯವನ್ನು ಇಟ್ಟುಕೊಂಡು ವಿವೇಕಿಗಳು ಒಪ್ಪದ ಕುಂತ್ಸಿತಭಾಷ್ಯಗಳನ್ನು ಕೆಲವರು ಮಾಡಿರುತ್ತಾರೆ; ನೀನು ಅವರನ್ನೆಲ್ಲ ಖಂಡಿಸುವ ಭಾಷ್ಯವನ್ನು ಮಾಡು. ಅದು ಸರ್ವಮಾನ್ಯವಾಗುವದು. ಭಾಸ್ಕರ, ನೀಲಕಂಠ, ಅಭಿನವಗುಪ್ತ, ಗುರು, ಮಂಡನ– ಮುಂತಾದ ಪಂಡಿತರನ್ನು ಜಯಿಸಿ ಅದ್ವೈತವೇ ಪರತತ್ತ್ವವೆಂಬುದನ್ನು ಖ್ಯಾತಿಗೊಳಿಸು. ಜನರ ಅಜ್ಞಾನವನ್ನು ತೊಲಗಿಸುವ ಶಿಷ್ಯರನ್ನು ಸ್ಥಾಪನೆಮಾಡಿ ಕೃತಕೃತ್ಯನಾಗಿ ನನ್ನನ್ನು ಸೇರುವೆ' ಎಂದು ನುಡಿದು ಅಂತರ್ಧಾನನಾದನು. ವಿಸ್ಮಿತರಾದ ಶಂಕರರು ನದಿಗೆ ಹೋದರು. ತಮ್ಮ ಆಹ್ನಿಕವನ್ನು ಮುಗಿಸಿ ಈಶ್ವರನನ್ನೂ ಗುರುವನ್ನೂ ಧ್ಯಾನಿಸಿ ಭಾಷ್ಯವನ್ನು ಮಾಡುವ ಸಂಕಲ್ಪವನ್ನು ಮಾಡಿದರು (ಮಾ. ಶಂ. ೬–೪೫ರಿಂದ ೩೩).

ಆಚಾರ್ಯರಿಗೆ ಶಿವನ ಸಾಕ್ಷಾತ್ಕಾರವಾಗಿರಲಿ ಆಗದೆ ಇರಲಿ, ಅವರು ಭಾಸ್ಕರ, ಅಭಿನವ, ನೀಲಕಂಠ– ಇವರನ್ನು ಜಯಿಸಿದರೆಂಬುದಕ್ಕೆ ಶಿವನ ಸಂಮತಿ ಯನ್ನು ಕಲ್ಪಿಸಿರುವ ಕವಿಯನ್ನು ಏನೆನ್ನಬೇಕು ? ಈ ವಿಚಾರವು ಇತಿಹಾಸಕ್ಕೆ ಪೂರ ಅಸಂಮತವಾಗಿದೆ. ಏಕೆಂದರೆ ಈ ಭಾಸ್ಕರಾದಿಗಳು ಶಂಕರಾಚಾರ್ಯರಾದ ಮೇಲೆ ಬಂದವರು. ಅವರೆಲ್ಲರೂ ತಮ್ಮತಮ್ಮ ದೃಷ್ಟಿಯಿಂದ ಶಂಕರರ ಅದ್ವೈತ ವನ್ನು ಖಂಡಿಸಿಯೂ ಇರುತ್ತಾರೆ ಎಂಬುದು ಸುವಿದಿತವಾಗಿದೆ. ಚಿದ್ವಿಲಾಸರು ಹೇಳುವಂತೆ ದ್ವೈತವು ಸತ್ಯವಲ್ಲ, ಅದ್ವೈತವೇ ಸತ್ಯ– ಎಂದು ಶಿವನು ಆಚಾರ್ಯ ರಿಗೆ ಪ್ರತ್ಯಕ್ಷನಾಗಿ ಮೂರುಬಾರಿ ಕೈಯೆತ್ತಿ ಸಾರಿರಬಹುದು. ಆದರೆ ಆಚಾರ್ಯರ ಭಾಷ್ಯವು ಮುಖ್ಯವಾಗಿ ದ್ವೈತಖಂಡನೆಗೇ ಬರೆದದ್ದಲ್ಲ; ದ್ವೈತದಂತೆ ಅದ್ವೈತ ಪ್ರಕ್ರಿಯಾಭೇದಗಳನ್ನೂ ಖಂಡಿಸಿ ತಮಗೆ ಒಪ್ಪಾದ ಅಸಾಧಾರಣವಾದ ಅದ್ವೈತ

ವೇದಾಂತಪ್ರಕ್ರಿಯೆಯೊಂದನ್ನೇ ಅವರು ಎತ್ತಿಹಿಡಿದು ಭಾಷ್ಯರಚನೆಯನ್ನು ಮಾಡಿರುತ್ತಾರೆ. ಇದನ್ನು ಯಥಾಸ್ಥಾನವಾಗಿ ತಿಳಿಸುವೆವು.

## ಬದರೀ ಪ್ರಯಾಣ

೭೯. ಆ ಬಳಿಕ ಶಂಕರರು ಬದರಿಗೆ ಹೋದರು. ತಮ್ಮ ಹನ್ನೆರಡನೆಯ ವಯಸ್ಸಿನಲ್ಲಿಯೇ ಅಲ್ಲಿದ್ದ ಬ್ರಹ್ಮನಿಷ್ಠರೊಡನೆ ವಿಚಾರವಿನಿಮಯವನ್ನು ಮಾಡಿ ಸೂತ್ರಭಾಷ್ಯವನ್ನು ರಚಿಸಿದರು. ಆಮೇಲೆ ಭಗವದ್ಗೀತೆಗೂ ಉಪನಿಷತ್ತುಗಳಿಗೂ ಭಾಷ್ಯಗಳನ್ನು ಬರೆದರು. ಸನತ್ಸುಜಾತೀಯಕ್ಕೂ ತಾಪನೀಯಕ್ಕೂ ಭಾಷ್ಯವನ್ನು ಬರೆದ ಬಳಿಕ ಉಪದೇಶಸಾಹಸ್ರಿಯೇ ಮುಂತಾದವುಗಳನ್ನು ಬರೆದರು. ಭಕ್ತಿಯಿಂದ ತಮ್ಮನ್ನು ಭಜಿಸುತ್ತಿದ್ದ ಸನಂದನರಿಗೆ ಮೂರು ಸಲ ಆ ಗ್ರಂಥಗಳನ್ನೆಲ್ಲ ಹೇಳಿದರು. ('ತ್ರಿರಾಪಾಠಯತ್ತಮ್' ಮಾ. ಶಂ. ೬–೬೮) ಆ ಸನಂದನನ ವಿಷಯಕ್ಕೆ ಇತರ ಶಿಷ್ಯರುಗಳು ಈರ್ಷ್ಯೆಯನ್ನು ತೋರಿಸಿದ್ದನ್ನು ಕಂಡು ಆತನ ಭಕ್ತಿಯನ್ನು ಪ್ರಖ್ಯಾತಿಗೊಳಿಸುವ ಒಂದು ಅದ್ಭುತವನ್ನು ಮಾಡಿ ತೋರಿಸಿದರು. ಒಮ್ಮೆ ಗಂಗಾನದಿಯ ಆಚೆಯಿದ್ದ ಸನಂದನನನ್ನು ಬೇಗ ಬಾರೆಂದು ಅವರು ಕೂಗಿ ಕರೆಯಲು ಆತನು 'ಸಂಸಾರಸಾಗರವನ್ನು ದಾಟಿಸುವ ಗುರುಪಾದಭಕ್ತಿಯು ನದಿಯನ್ನು ದಾಟಿಸಲಾರದೆ ?' –ಎಂದುಕೊಂಡು ಆ ನದಿಯನ್ನು ಹೊಕ್ಕು ಮುನ್ನಡೆದನು. ಸನಂದನನ ಪ್ರತಿಯೊಂದು ಹೆಜ್ಜೆಗೂ ಪದ್ಮಗಳು ಉದಯಿಸಿದ್ದನ್ನು ಕಂಡು ಆನಂದಾಶ್ಚರ್ಯಯುತರಾಗಿ ಆತನಿಗೆ ಪದ್ಮಪಾದನೆಂಬ ಹೆಸರನ್ನಿಟ್ಟರು (ಮಾ. ಶಂ. ೬–೬೦ರಿಂದ ೭೧).

ಚಿದ್ವಿಲಾಸೀಯದಂತೆ ಆಚಾರ್ಯರು ಗುರುಗಳ ಬಳಿಯಲ್ಲಿದ್ದುಕೊಂಡೇ ಬದರಿಯಲ್ಲಿ ಸೂತ್ರಭಾಷ್ಯ, ದಶೋಪನಿಷದ್ಭಾಷ್ಯಗಳು, ಗೀತಾಭಾಷ್ಯ, ವಿಷ್ಣುಸಹಸ್ರನಾಮ, ಶ್ರೀರುದ್ರಭಾಷ್ಯ, ಸೌಂದರ್ಯಲಹರಿ– ಮುಂತಾದ ಕೆಲವು ಸ್ತೋತ್ರಗಳು ಇವುಗಳನ್ನು ರಚಿಸಿದರು (ಚಿ. ಶಂ. ೧೦–೧ರಿಂದ ೪). ಅಲ್ಲಿಯೇ ಸನಂದನನು ಬಂದದ್ದು (ಚಿ. ಶಂ. ೧೦–೭ರಿಂದ ೨೪). ಗೋವಿಂದ ಭಗವತ್ಪಾದರು ಇಲ್ಲಿಯೇ ಇರು ಎಂದು ಹೇಳುತ್ತಿರುವಲ್ಲಿ ತಾಯಿಯು ಸ್ಮರಿಸಿಕೊಂಡದ್ದರಿಂದ ಊರಿಗೆ ಹೋದರು ; ಅಲ್ಲಿಂದ ಪ್ರಯಾಗಕ್ಕೆ ಹೋದರು (ಚಿ. ಶಂ. ೧೦–೪೮). ವ್ಯಾಸಾಚಲೀಯದಲ್ಲಿ (ವ್ಯಾ. ಶಂ. ೪–೬೭) ಸೂತ್ರಭಾಷ್ಯವೊಂದರ ವಿಷಯವೇ ಇದೆ.

ಬಲದೇವ ಉಪಾಧ್ಯಾಯರು ಆಚಾರ್ಯರಿಂದ ಬದರಿಯಲ್ಲಿದ್ದಾಗ ಆದ ಬದರೀನಾಥನ ಪುನಃಪ್ರತಿಷ್ಠೆಯ ವಿಚಾರವನ್ನು (ಬಲ. ಶಂ. ಪು ೫೨) ಪರಾಮರ್ಶಿಸಿರುತ್ತಾರೆ. ಚೀನಾದೇಶದವರ ಹಾವಳಿಗೆ ಅಂಜಿ ಆ ಮೂರ್ತಿಯನ್ನು ನಾರದಕುಂಡದಲ್ಲಿ ಹಾಕಿಬಿಟ್ಟಿದ್ದರಂತೆ. ಆಚಾರ್ಯರು ಅದನ್ನು ತೆಗೆಯುವದಕ್ಕೆ

ಪ್ರಯತ್ನಪಟ್ಟರೂ ಪೂಜಾರಿಗಳು ಇದು ತೀರಕೆಳಗೆ ಅಲಕನಂದೆಗೆ ಸಂಬದ್ಧ ವಾಗಿರುವದರಿಂದ ಇಲ್ಲಿ ಮುಳುಗುವವರಿಗೆ ಪ್ರಾಣಾಪಾಯವಿದೆ ಎಂದು ಹೇಳಿದರೂ ಆಚಾರ್ಯರು ಅದಕ್ಕೆ ಅಂಜದೆ ಮುಳುಗಿ ಮೂರ್ತಿಯನ್ನು ಹುಡುಕಿ ತಂದರು, ಅವರು ನೂರು ಸಲ ಮುಳುಗಿನೋಡಿದರೂ ಬಲಭಾಗ ಮುರಿದ ಮೂರ್ತಿಯೇ ಕೈಗೆ ಸಿಕ್ಕಿತಂತೆ ; ಅಶರೀರವಾಣಿಯು 'ಈ ಕಲಿಯುಗದಲ್ಲಿ ಈ ಮೂರ್ತಿಯನ್ನೇ ಪೂಜಿಸತಕ್ಕದ್ದು' ಎಂದು ನುಡಿದದ್ದರಿಂದ ಆಚಾರ್ಯರು ಅದನ್ನೇ ವೈದಿಕ ರೀತಿಯಿಂದ ಪ್ರತಿಷ್ಠೆಮಾಡಿಸಿದರಂತೆ. ಇದಕ್ಕೆ ಬದರಿಕಾಶ್ರಮಮಾಹಾತ್ಮ್ಯ ೨ ಅಧ್ಯಾಯ ೫ ಪು. ೧೨೮ ಆಧಾರವು. ಅಲ್ಲಿ 'ತತೋಽಹಂ ಯತಿರೂಪೇಣ ತೀರ್ಥಾನ್ನಾರದಸಂಜ್ಞಕಾತ್ ॥ ಉದ್ಧೃತ್ಯ ಸ್ಥಾಪಯಿಷ್ಯಾಮಿ ಹರಿಂ ಲೋಕ ಹಿತೇಚ್ಛಯಾ' ॥ ೨೮೫ ॥ ಎಂಬ ಶ್ಲೋಕವಿದೆ ಎಂದು ಉಪಾಧ್ಯಾಯರು ಬರೆದಿರುತ್ತಾರೆ.

ಬಾದರಾಯಣರೂ ಅವರ ಹಿಂದಿನ ಋಷಿಗಳೂ ತಪಸ್ಸುಮಾಡಿಕೊಂಡಿದ್ದ ಬದರಿಗೆ ಆಚಾರ್ಯರು ಹೋಗಿರಬಹುದೆಂದು ಕಲ್ಪಿಸಬಹುದು. ಅಲ್ಲಿ ಅವರಿಗೆ ಜ್ಞಾನನಿಷ್ಠರು ಸಿಕ್ಕುವ ಸಂಭವವೂ ಇತ್ತು. ಚಳಿಮಳೆ, ಕಲ್ಲುಮುಳ್ಳು, ತಗ್ಗುತಿಟ್ಟು—ಯಾವುದನ್ನೂ ಲೆಕ್ಕಿಸದೆ ಸಿಕ್ಕಿದ ಹಣ್ಣುಗಳನ್ನು ತಿನ್ನುತ್ತಾ ನಿದ್ರೆ ಬಂದಲ್ಲಿ ಮಲಗುತ್ತಾ ಎಚ್ಚರವಾಗುತ್ತಲೂ ಮುನ್ನಡೆಯುತ್ತಾ ಆಚಾರ್ಯರು ಹೋದರು (ಮಾ. ಶಂ. ೬-೫೭-೫೮) ಎಂತ ಮಾಧವೀಯದಲ್ಲಿ ವರ್ಣಿಸಿರುವದು ಸ್ವಭಾವೋಕ್ತಿಯೇ ಆಗಿದೆ. ಹನ್ನೆರಡನೆಯ ವಯಸ್ಸಿನಲ್ಲಿಯೇ ಅವರು ಈ ಗ್ರಂಥ ಗಳನ್ನು ಮಾಡಿದರೆಂದು ಮಾಧವೀಯ. ಸೂತ್ರಭಾಷ್ಯವನ್ನು ಬರೆದಾಗ ಆಚಾರ್ಯ ರಿಗೆ ಹದಿನಾರು ವರ್ಷವಾಗಿತ್ತೆಂದು ವ್ಯಾಸಾಚಲೀಯ (ವ್ಯಾ. ಶಂ. ೪-೬೫, ೮೩). ಅವರು ಬದರಿಗೆ ಹೋಗಿದ್ದಾಗ ಹನ್ನೆರಡು ವರ್ಷ, ಅಲ್ಲಿದ್ದದ್ದು ನಾಲ್ಕು ವರ್ಷ ; ಆಮೇಲೆ ಸೂತ್ರಭಾಷ್ಯವನ್ನು ಬರೆದರೆಂದು ಬಲದೇವ ಉಪಾಧ್ಯಾಯರು (ಬಲ. ಶಂ. ಪು. ೫೩) ಕಲ್ಪಿಸಿದ್ದಾರೆ. **ಕೆ. ಬಿ. ಪಾಠಕರವರಿಗೆ ದೊರೆತ** 'ಅಷ್ಟವರ್ಷೇ ಚತುರ್ವೇದೀ ದ್ವಾದಶೇ ಸರ್ವಶಾಸ್ತ್ರವಿತ್। ಷೋಡಶೇ ಕೃತವಾನ್ ಭಾಷ್ಯಂ ದ್ವಾತ್ರಿಂಶೇ ಮುನಿರಭ್ಯಗಾತ್ ॥' ಎಂಬ ಶ್ಲೋಕವನ್ನು ೪ನೆಯ ಪರಿ ಶಿಷ್ಟದಲ್ಲಿ ಉದಾಹರಿಸಿರುತ್ತೇವೆ. ಆಚಾರ್ಯರು ಬರೆದರೆಂದು ಶಂಕರವಿಜಯ ಗಳಲ್ಲಿ ಹೇಳಿರುವ ಗ್ರಂಥಗಳಲ್ಲಿ ನಿಜವಾಗಿ ಯಾವವು ಅವರಿಂದ ರಚಿತವಾಗಿರ ಬಹುದೆಂಬುದನ್ನು ಇಷ್ಟರಲ್ಲಿಯೆ ನಾವು ವಿಮರ್ಶೆಗೆ ತೆಗೆದುಕೊಳ್ಳುವೆವು.

ಈಗ **ಪದ್ಮಪಾದರ** ಕಥೆಯನ್ನು ಸ್ವಲ್ಪ ವಿಮರ್ಶಿಸೋಣ. ಮಾಧವನು ಅವರ ಪೂರ್ವಾಶ್ರಮದ ಹೆಸರನ್ನು ಹೇಳಿಲ್ಲ; **ಸನಂದನನೆಂಬುದು** ಆಚಾ ರ್ಯರು ಕೊಟ್ಟ ಹೆಸರು. ಅವರು ಚೋಳದೇಶದವರೆಂದು ಮಾಧವೀಯ,

ಚಿದ್ವಿಲಾಸೀಯ, ವ್ಯಾಸಾಚಲೀಯ- ಈ ಮೂರು ಶಂಕರವಿಜಯಗಳಲ್ಲಿಯೂ ಇದ್ದಷ್ಟು ವ್ಯಾಸಾಚಲರ ಅಭಿಪ್ರಾಯವನ್ನೇ ಸಂಗ್ರಹಿಸುವೆನೆಂದು ಹೇಳಿಕೊಂಡಿರುವ ಗೋವಿಂದನಾಥನು ಅವರನ್ನು ಕೇರಳದೇಶದವರನ್ನಾಗಿ ಮಾಡಿ (ಗೋ. ೮-೧೩) ಚಿದ್ವಿಲಾಸರಂತೆ ಅವರ ಹೆಸರು ವಿಷ್ಣುಶರ್ಮನೆಂದಿರುತ್ತಾನೆ. ತಂದೆಯ ಹೆಸರನ್ನು ಸೋಮಶರ್ಮನೆಂದು ಕರೆದು ಪೂರ್ವಾಶ್ರಮದಲ್ಲಿ ಅವರು ವೈಶ್ಯವೃತ್ತಿಯಿಂದ ಜೀವಿಸಿ ಸಂಕಟಪಟ್ಟಂತೆ (ಗೋ- ೪-೨೮ರಿಂದ ೩೨) ಕಥೆಯನ್ನು ಕಲ್ಪಿಸುತ್ತಾನೆ. ಈ ಶಿಷ್ಯನು ಮೊಟ್ಟಮೊದಲು ಆಚಾರ್ಯರಬಳಿಗೆ ಬಂದು ಅವರನ್ನು ಎಡೆಬಿಡದೆ ಸೇವೆಮಾಡುತ್ತಿದ್ದದ್ದರಿಂದ ಅವರಲ್ಲಿ ಆಚಾರ್ಯರಿಗೆ ಹೆಚ್ಚಿನ ಪ್ರೇಮವುಂಟಾಯಿತೆಂಬುದು ನಿರೀಕ್ಷಿಸತಕ್ಕದ್ದಾಗಿದೆ. ಆದರೂ ಅವರಲ್ಲಿ ಮಿಕ್ಕವರಿಗೆ ಅಸೂಯೆಯುಂಟಾಯಿತೆಂದೂ ಅವರಿಗೆ ಭಾಷ್ಯವನ್ನು ಮೂರಾವೃತ್ತಿ ಹೇಳಿಕೊಟ್ಟರೆಂದೂ ತಿಳಿಸಿರುವವರಲ್ಲಿ (ಮಾ. ಶಂ. ೬-೬೭, ೬೮) ಏನೋ ರಹಸ್ಯವು ಅಡಗಿರಬಹುದೆಂದು ತೋರುತ್ತದೆ. ಇನ್ನು ಅವರಿಗೆ ಪದ್ಮಪಾದರೆಂಬ ಹೆಸರು ಮೊದಲೇ ಆಚಾರ್ಯರು ಕೊಟ್ಟಿದ್ದು ಅದಕ್ಕೆ ಹೊಂದುಗಡೆಯಾಗುವಂತೆ ಕಥೆಯು ಕಲ್ಪಿತವಾಯಿತೋ ಅಥವಾ ನಿಜವಾಗಿಯೂ ಇಂಥದ್ದೊಂದು ಅದ್ಭುತವೇ ನಡೆಯಿತೋ ನಾವು ಯಾರೂ ಹೇಳಲಾರೆವು. ಉದಯಪುರದ ಉದಯಸಾಗರವೆಂಬ ಕೆರೆಯಲ್ಲಿ ಒಂದು ಮಾರು ವಿಸ್ತಾರದ ಎಲೆಗಳುಳ್ಳ ತಾವರೆಯನ್ನು ತಾವು ನೋಡಿರುವದಾಗಿಯೂ ಆ ಎಲೆಗಳಮೇಲೆ ಹತ್ತುವರುಷದ ಹುಡುಗನು ಕುಳಿತುಕೊಂಡರೂ ಮುಳುಗುವದಿಲ್ಲವೆಂದೂ (ಸೋ. ಶಂ ಪು. ೮೨ ಟಿಪ್ಪಣಿಯಲ್ಲಿ) ಸೋಮನಾಥಯ್ಯನವರು ಬರೆದಿರುತ್ತಾರೆ. ಆದರೆ ಅಷ್ಟು ಅಗಲವಾದ ಎಲೆಗಳ ತಾವರೆಗಳು ಗಂಗಾನದಿಯಲ್ಲಿಲ್ಲ. ಪದ್ಮಪಾದರು ಹೆಜ್ಜೆಯನ್ನಿಟ್ಟಂತೆಲ್ಲ ಕಮಲಗಳು ಹುಟ್ಟುತ್ತಿದ್ದವೆಂಬ ಕಥೆಗೆ ಇದು ಹೇಗೆತಾನೆ ಬೆಂಬಲವಿತ್ತೀತು ?

## ಪಾಶುಪತಮತಖಂಡನ

೮೦. ಶಂಕರರು ಶಿಷ್ಯರಿಗೆ ಪಾಠವನ್ನು ಹೇಳಿಕೊಡುತ್ತಿರುವಲ್ಲಿ ಕೆಲವರು ಪಾಶುಪತರು ಬಂದು ಆಚಾರ್ಯರ ಮತದಲ್ಲಿ ದೋಷವನ್ನು ಎತ್ತಿಣಿಸಿದರು. ಅವರ ವಿಕಲ್ಪಗಳನ್ನು ಶ್ರುತಿದೃಷ್ಟಾಂತಗಳಿಂದ ತಿರಸ್ಕರಿಸಿದ ಮೇಲೆ ಅವರ ಗರ್ವವು ಸ್ವಲ್ಪಮಟ್ಟಿಗೆ ಕಡಿಮೆಯಾಯಿತು. ಬಳಿಕ ಅವರ ಆಗಮವನ್ನು ಖಂಡಿಸಿದರು (ಮಾಧವೀಯ ೬-೨೨,೨೩) ಎಂದು ಪ್ರಾರಂಭಿಸಿದ ಮಾಧವ ಕವಿಯು 'ದ್ವೈತವು ಸತ್ಯವಾಗಿರುವಲ್ಲಿ ಈಶ್ವರಸಮಾನತ್ವವೆಂಬ ಮುಕ್ತಿಯು ಜೀವನಿಗೆ ಹೇಗೆ ಬಂದೀತು ? ಧ್ಯಾನದಿಂದಾಗಿದ್ದರೆ ಅದು ನಾಶವಾಗಬೇಕಲ್ಲವೆ ? ಪಶುಪತಿಯಾದ ಈಶ್ವರನ ಗುಣಗಳು ಪಶುಗಳಾದ ಜೀವರಲ್ಲಿಗೆ ಹೇಗೆ ಬಂದು ಸೇರಿಕೊಂಡಾವು ? ಗುಣಗಳು ನಿರವಯವವಲ್ಲವೆ ? ತಾವರೆಯ ವಾಸನೆಯು

ವಾಯುವಿನಲ್ಲಿ ಸೇರುವಂತೆ ಆ ಗುಣಗಳು ಜೀವರಲ್ಲಿ ಬಂದುಸೇರಿಕೊಳ್ಳುವದಕ್ಕಿಲ್ಲ; ಏಕೆಂದರೆ ಆ ದೃಷ್ಟಾಂತದಲ್ಲಿ ಗಂಧದ ಅವಯವಗಳು ವಾಯುವಿನಲ್ಲಿ ಸೇರಿಕೊಳ್ಳುವದರಿಂದ ವಾಯುವೂ ಗಂಧವುಳ್ಳದ್ದೆಂಬ ಬುದ್ಧಿಯನ್ನುಂಟುಮಾಡಬಹುದು. ಪ್ರಕೃತದಲ್ಲಿ ಹಾಗಿಲ್ಲ. ಪರಮೇಶ್ವರಗುಣಗಳ ಕೆಲವು ಭಾಗವು ಬಂದು ಜೀವನಲ್ಲಿ ಸೇರುವದೊ, ಅಥವಾ ಎಲ್ಲಾ ಗುಣಗಳೂ ಬಂದು ಸೇರಿಕೊಳ್ಳುವವೊ? ಒಂದು ಭಾಗವೆಂದರೆ ಗುಣಗಳು ಸಾವಯವವೆಂದು ಒಪ್ಪಬೇಕಾಗುವದು ; ಎಲ್ಲವೂ ಬಂದುಸೇರುವವೆಂದರೆ ಪರಮೇಶ್ವರನು ಆಗ ಅಜ್ಞನೆಂದೇ ಆಗುವದು' (ಮಾ. ಶಂ. ೬-೨೫, ೭೬, ೭೭) ಎಂದು ಬರೆದಿದಾನೆ.

ಈ ಪಾಶುಪತಖಂಡನೆಗೆ ಭಾಷ್ಯದ ಆಧಾರವು ಯಾವದೂ ಕಾಣಿಸುವದಿಲ್ಲ. ಏಕೆಂದರೆ ಸೂತ್ರಭಾಷ್ಯದಲ್ಲಿ 'ಪತ್ಯುರಸಾಮಂಜಸ್ಯಾತ್' ಎಂಬುದರಿಂದ ಹಿಡಿದು 'ಅನ್ತವತ್ತ್ವಮಸರ್ವಜ್ಞತಾ ವಾ' ಎಂಬವರೆಗಿನ (ವೇ.ಸೂ. ೨-೨-೩೭ ರಿಂದ ೪೧) ಸೂತ್ರಗಳ ವಿವರಣೆಯಲ್ಲಿ ಪರಮೇಶ್ವರನು ಕೇವಲನಿಮಿತ್ತಕಾರಣನಾಗಿ ಪ್ರಧಾನಪುರುಷರನ್ನು ಆಳುತ್ತಾನೆ- ಎಂಬ ಪಾಶುಪತವಾದವನ್ನು ಮಾತ್ರ ದೂಷಿಸಿದೆ. ಪರಮೇಶ್ವರನಿಗೆ ರಾಗದ್ವೇಷಾದಿಗಳು ಬರುವವು, ಪ್ರಧಾನಪುರುಷರಿಗೂ ಈಶ್ವರನಿಗೂ ಯಾವ ಸಂಬಂಧವನ್ನೂ ತೋರಿಸುವದಕ್ಕಾಗುವದಿಲ್ಲ, ಪರಮೇಶ್ವರನಿಗೆ ಶರೀರವೂ ಇದೆಯೆಂದು ಒಪ್ಪಬೇಕಾಗಿಬರುತ್ತದೆ, ಅವನು ಪರಿಚ್ಛಿನ್ನನೆಂದೂ ಅಸರ್ವಜ್ಞನೆಂದೂ ಒಪ್ಪಿಕೊಳ್ಳಬೇಕಾಗುತ್ತದೆ- ಎಂಬ ದೋಷಗಳನ್ನೇ ಅಲ್ಲಿ ತೋರಿಸಿದೆ. ಬೇರೆ ಯಾವ ಭಾಷ್ಯಗಳಲ್ಲಿಯೂ ಪಾಶುಪತ ಮತದ ಪರಾಮರ್ಶವಿಲ್ಲ.

## ಕಾಶೀಪಟ್ಟಣದ ಪರಾಮರ್ಶೆ

೪೧. ಇದೇ ಸರ್ಗದಲ್ಲಿ (೪೧ರಿಂದ ೪೫ನೆಯ ಶ್ಲೋಕದವರೆಗಿನ ಗ್ರಂಥಭಾಗದಲ್ಲಿ) ಮಾಧವನು ತಟ್ಟನೆ ಕಾಶಿಯ ಪರಾಮರ್ಶವನ್ನು ಮಾಡಿರುವದು ಕಂಡುಬರುತ್ತದೆ. "ಆ ಹುಡುಗನ ಅಮಾನುಷಪ್ರಭಾವವನ್ನು ಕಂಡು 'ಕಾಶೀಪುರದವರನೇಕರು' 'ಸರ್ವತಂತ್ರಪ್ರಕಾಶಕನಾದ ಈತನಿಂದ ಭಾಸ್ಕರ, ಗುಪ್ತ, ಮಿಶ್ರ, ಮುರಾರಿ, ವಿದ್ಯೇಂದ್ರಗುರು-ಮುಂತಾದವರು ಪರಾಭವವನ್ನು ಹೊಂದಿದರು' ಎಂದುಕೊಳ್ಳುತ್ತಿದ್ದರು". ಇಲ್ಲಿರುವ 'ಕಾಶೀಪುರಸ್ಥಾಃ' ಎಂಬ ವಿಶೇಷಣದ ಆಧಾರದಿಂದಲೇ ಇರಬಹುದು, ಸೋಮನಾಥಯ್ಯನವರು ಆಚಾರ್ಯರು ಕಾಶಿಗೆ ಬಂದರೆಂದು (ಸೋ. ಶಂ. ಪು. ೪೫) ಕಲ್ಪಿಸಿರುತ್ತಾರೆ; ಸಿ. ಎನ್. ಕೃಷ್ಣಸ್ವಾಮಿ ಅಯ್ಯರವರು (CNKS. q28) ಆಗ ಶಂಕರರು ಕಾಶಿಯಲ್ಲಿ ಬಹಳ ಕಾಲವೂ ಬದರಿಯಲ್ಲಿ ಸ್ವಲ್ಪಕಾಲವೂ ಇದ್ದರೆಂದು ಹೇಳಿದಾರೆ. ಎನ್. ವೆಂಕಟರಾಮನ್

ರವರು ಬದರಿಯ ಮಾತನ್ನೇ ಎತ್ತಿಲ್ಲ. ಬಲದೇವ ಉಪಾಧ್ಯಾಯರು (ಪು ೫೫) ಆಚಾರ್ಯರು ಉತ್ತರಕಾಶಿಯಲ್ಲಿ ಇರುತ್ತಿದ್ದರೆಂದು ಕಲ್ಪಿಸಿರುತ್ತಾರೆ.

ಆಚಾರ್ಯರು ತಮ್ಮಲ್ಲಿಗೆ ಬಂದ ಕೆಲವರು ನೈಯಾಯಿಕರನ್ನು ಖಂಡಿಸಿದರು. ಹೀಗೆ ಪರವಾದಿಗಳ ಆಕ್ಷೇಪಕ್ಕೆ ಆಚಾರ್ಯರು ಸಮಾಧಾನವನ್ನು ಕೊಟ್ಟಹಾಗೆಲ್ಲ ಒರೆಹಚ್ಚಿ ಕತ್ತರಿಸಿ ಕಾಯಿಸಿದ ಚಿನ್ನದಂತೆ ಆಚಾರ್ಯರ ಭಾಷ್ಯವು ಹೆಚ್ಚುಹೆಚ್ಚಾಗಿ ಹೊಳೆಯುತ್ತಿತ್ತು ಎಂದು ಮುಂದೆ ಮಾಧವೀಯದಲ್ಲಿ (ಮಾ. ಶಂ. ೬-೧೦೦, ೧೦೧) ವರ್ಣಿಸಿರುತ್ತದೆ. ಮುಂದೆ ಹೇಳುವ ವ್ಯಾಸದರ್ಶನವು ಉತ್ತರಕಾಶಿಯಲ್ಲಿಯೇ ಆಯಿತೆಂದು ಕಲ್ಪಿಸುವದೇ ಚೆನ್ನಾಗಿ ಹೊಂದಿಕೊಳ್ಳುತ್ತದೆ.

## ವ್ಯಾಸಸಂದರ್ಶನ :

೮೩. ಶ್ರೀಶಂಕರಾಚಾರ್ಯರು ಹೊಸದಾಗಿ ಸೂತ್ರಕ್ಕೆ ಭಾಷ್ಯವನ್ನು ಬರೆದಾಗ ಬದರಿಯಲ್ಲಾಗಲಿ ಕಾಶಿಯಲ್ಲಾಗಲಿ ಅನೇಕರು ಪಂಡಿತರು ಅದರ ವಿಷಯಕ್ಕೆ ಆಕ್ಷೇಪವನ್ನೊಡ್ಡಿರಬೇಕೆಂದು ನಿರೀಕ್ಷಿಸುವದು ಸ್ವಾಭಾವಿಕವೇ ಆಗಿದೆಯಷ್ಟೆ ? ಒಂದು ದಿನ ಮಧ್ಯಾಹ್ನಸಮಯದಲ್ಲಿ ಶಿಷ್ಯರು ಪಾಠವನ್ನು ಮುಗಿಸಿ ಆಯಾಸಗೊಂಡಿದ್ದದ್ದರಿಂದ ಆಚಾರ್ಯರು ಏಳುವ ಹೊತ್ತಿಗೆ ಸರಿಯಾಗಿ ಒಬ್ಬ ವೃದ್ಧಬ್ರಾಹ್ಮಣನು ಬಂದು 'ಇವರಿಗೆ ಏನು ಹೇಳಿಕೊಡುತ್ತಿದ್ದೀಯೆ ?' ಎಂದು ಕೇಳಿದನು. ಶಿಷ್ಯರು "ಇವರು ನಮ್ಮ ಗುರುಗಳು; ಸರ್ವೋಪನಿಷತ್ಸ್ವತಂತ್ರರು. ಇವರು ಶಾರೀರಕಕ್ಕೆ ಅದ್ವೈತಭಾಷ್ಯವನ್ನು ಮಾಡಿರುತ್ತಾರೆ" ಎಂದರು. ಆಗ ಬ್ರಾಹ್ಮಣನು "ಎಲ್ಲಿ, ತಿಳಿದಿದ್ದರೆ ಯಾವದಾದರೊಂದು ಸೂತ್ರದ ಅರ್ಥವನ್ನು ಹೇಳು" ಎಂದನು. ಶಂಕರರ 'ಸೂತ್ರಾರ್ಥಜ್ಞರಿಗೆ ನಮಸ್ಕಾರ ! ನಾನು ಸೂತ್ರಜ್ಞನೆಂಬ ಅಭಿಮಾನವೇನೂ ನನಗಿಲ್ಲ ; ಆದರೂ ತಾವು ಏನಾದರೂ ಕೇಳಿದರೆ ಅದನ್ನು ಹೇಳುವೆನು' ಎಂದರು. ಆಗ ಬ್ರಾಹ್ಮಣನು ತೃತೀಯಾಧ್ಯಾಯದ ಮೊದಲನೆಯ ಸೂತ್ರದ ಅರ್ಥವನ್ನು ಹೇಳೆಂದು ಕೇಳಲು 'ಜೀವನು ಉತ್ಕ್ರಾಂತಿಯ ಕಾಲಕ್ಕೆ ಭೂತಗಳಿಂದ ಪರಿವೇಷ್ಟಿತನಾಗಿ ಹೋಗುತ್ತಾನೆ' ಎಂಬ ಅರ್ಥವನ್ನು ಹೇಳಿದರು. ಬ್ರಾಹ್ಮಣನು ಅದನ್ನು ನೂರುರೀತಿಯಿಂದ ವಿಕಲ್ಪಿಸಿ ಖಂಡಿಸಿದನು ; ಅದನ್ನು ಆಚಾರ್ಯರು ಸಾವಿರಬಗೆಯಲ್ಲಿ ಖಂಡಿಸಿದರು. ಆ ವಾಗ್ಮಿಗಳಿಬ್ಬರಿಗೂ ಎಂಟು ದಿನಗಳವರೆಗೆ ವಾದವಾಯಿತು. ಆಗ ಪದ್ಮಪಾದರು 'ಇವರು ವೇದಾಂತರಹಸ್ಯವನ್ನು ಬಲ್ಲ ವ್ಯಾಸರು ; ತಾವು ಸಾಕ್ಷಾಚ್ಛಂಕರನೇ ಆದ ಶಂಕರರು ; ಇಂಥ ಸಂದರ್ಭದಲ್ಲಿ ಕಿಂಕರನಾದ ನಾನು ಏನು ಮಾಡಲಿ ?' ಎಂದರು. ಆ ಮಾತನ್ನು ಕೇಳಿ ಆಚಾರ್ಯರು ವ್ಯಾಸರ ಸ್ತೋತ್ರವನ್ನು ಮಾಡಲು ವ್ಯಾಸರು ಪ್ರತ್ಯಕ್ಷರಾದರು. ಆಚಾರ್ಯರು ಅವರಿಗೆ ನಮಸ್ಕರಿಸಿ

ಸ್ತುತಿಸಲು ಆವರು 'ನೀನು ಭಾಷ್ಯವನ್ನು ಮಾಡಿದ್ದನ್ನು ಕೇಳಿ ಸಂತೋಷದಿಂದ ನೋಡುವುದಕ್ಕೆಂದು ಬಂದೆನು. ನೀನು ನನಗೆ ಅತ್ಯಂತಪ್ರಿಯನು. ನಿನ್ನ ಭಾಷ್ಯರಚನೆಯು ಸಾಹಸವೆಂದು ತಿಳಿಯದಿರು; ಭೂಮಂಡಲದಲ್ಲೆಲ್ಲ ವೇದಾಂತ ವನ್ನು ಪ್ರಚಾರಮಾಡು' ಎಂದರು. ಶಂಕರಾಚಾರ್ಯರಿಗೆ ಎಂಟುವರ್ಷ ಆಯುಷ್ಯ; ಇನ್ನೆಂಟನ್ನು ಆವರೇ ತಪಸ್ಸಿನಿಂದ ಸಂಪಾದಿಸಿಕೊಂಡಿದ್ದರು; 'ಶಿವನ ಆಜ್ಞೆಯಿಂದ ನಿನಗೆ ಮತ್ತೂ ಹದಿನಾರುವರ್ಷಗಳು ಆಗಲಿ! ಈ ಭಾಷ್ಯವು ಸೂರ್ಯಚಂದ್ರನಕ್ಷತ್ರಗಳಿರುವವರೆಗೂ ಇರಲಿ!' ಎಂದು ಆವರನ್ನು ಆಶೀರ್ವದಿಸಿ ವ್ಯಾಸರು ಅಂತರ್ಧಾನರಾದರು (ಮಾ. ಶಂ. ೭-೧ರಿಂದ ೫೮).

ಇಲ್ಲಿ ಸಂಕ್ಷೇಪವಾಗಿ ನಾವು ಕೊಟ್ಟಿರುವ ವ್ಯಾಸದರ್ಶನದ ವಿಷಯಕ್ಕೆ ವಿಮರ್ಶೆಮಾಡತಕ್ಕ ವಿಷಯಗಳು ಕೆಲವು ಇವೆ :

(೧) ವ್ಯಾಸಾಚಲೀಯದಲ್ಲಿ ಈ ಕಥೆಯಿಲ್ಲ. ಅಲ್ಲಿರುವ ಕಥೆಯೆಲ್ಲ ಇಷ್ಟೆ : ಆಚಾರ್ಯರು ಗುರುಗಳನ್ನು ಬಿಟ್ಟು ತೀರ್ಥಾಟನೆಗೆಂದು ಬದರಿಗೆ ಬಂದು ಸೂತ್ರಭಾಷ್ಯವನ್ನು ರಚಿಸಿದರು (೮-೬೫ರಿಂದ ೬೭). ವ್ಯಾಸರು ಈ ಸುದ್ದಿಯನ್ನು ಕೇಳಿ ಅಲ್ಲಿಗೆ ಬಂದರು (೭೦). ಆಚಾರ್ಯರು ಆವರನ್ನು ಸತ್ಕರಿಸಿ ಸ್ತುತಿಸಿ ಬಂದ ಕಾರಣವನ್ನು ಕೇಳಲು (೭೧ರಿಂದ ೭೭) ಸೂತ್ರಭಾಷ್ಯವನ್ನು ನೋಡುವದಕ್ಕೆ ಬಂದಿದೇನೆ ಎನ್ನಲು ಆಚಾರ್ಯರು ಆದನ್ನು ಆವರ ಕೈಗೆ ಕೊಟ್ಟರು. ವ್ಯಾಸರು ಆದನ್ನು ನೋಡಿ ಬಹಳ ಸಂತೋಷಪಟ್ಟರು (೭೮ರಿಂದ ೮೨). 'ಅದ್ವೈತಪ್ರತಿಷ್ಠೆಯನ್ನು ಮಾಡು' ಎಂದು ವ್ಯಾಸರು ಆವರಿಗೆ ಮತ್ತೆ ಹದಿನಾರುವರ್ಷ ಆಯುಸ್ಸನ್ನು ಕೊಟ್ಟರು; ಸೂತ್ರಕಾರನಷ್ಟೇ ಭಾಷ್ಯಕಾರನಿಗೂ ಗ್ರಂಥನಿರ್ಮಾಣದ ಕ್ಲೇಶವಿದೆ (೮೪) ಎಂದು ವ್ಯಾಸರು ಭಾಷ್ಯವನ್ನು ಹೊಗಳಲು ತಮ್ಮ ಸೂತ್ರಸಂಬಂಧದಿಂದ ನನ್ನ ಭಾಷ್ಯವೂ ಪ್ರಚಾರವಾಗಲಿ (೮೫) ಎಂದು ಆಚಾರ್ಯರು ಆವರಿಗೆ ವಂದಿಸಿದರು. ವ್ಯಾಸರು ಅಂತರ್ಧಾನವಾದರು. ಗೋವಿಂದನಾಥನ ಶಂಕರಾಚಾರ್ಯಚರಿತದಲ್ಲಿಯೂ ಈ ಕಥೆಯನ್ನೇ (ಗೋ. ೩-೫೮ರಿಂದ ೭೩) ಸಂಗ್ರಹಿಸಿದೆ. ಆದ್ದರಿಂದ ಮಿಕ್ಕ ಕಥೆ ವ್ಯಾಸಾಚಲರಿಗಿಂತ ಈಚೆಗೆ ಹುಟ್ಟಿರಬೇಕೆನಿಸುತ್ತದೆ.

(೨) ಚಿದ್ವಿಲಾಸೀಯದಲ್ಲಿ ಸ್ವಲ್ಪ ಹೆಚ್ಚುಕಡಿಮೆ ಕಥೆಯು ಮಾಧವೀಯ ದಂತೆಯೇ ಇದೆ. ಆದರೆ ವಾದವು ಎಂಟು ದಿನವಾಯಿತೆಂಬುದು ಅಲ್ಲಿಲ್ಲ. ತಾವು ಉತ್ತರವನ್ನು ಕೊಟ್ಟಬಳಿಕವೂ ಪೂರ್ವಪಕ್ಷವನ್ನು ಮಾಡುತ್ತಲೇ ಇದ್ದ ಬ್ರಾಹ್ಮಣನನ್ನು ಕಂಡು 'ಪದ್ಮಪಾದನೆ, ಇವನಿಗೆ ಉತ್ತರವನ್ನು ಹೇಳು' ಎಂದು ಆಚಾರ್ಯರೆನ್ನಲು ಪದ್ಮಪಾದರು 'ಸರ್ವಜ್ಞರಾದ ನಮ್ಮ ಗುರುಗಳನ್ನು ಧಿಕ್ಕರಿ ಸುತ್ತಿದ್ದೀಯೆ, ಸರ್ವಜ್ಞನಂತೆ ಮಾತನಾಡುತ್ತಲೂ ಇದ್ದೀಯಲ್ಲ!' ಎಂದರು.

ಮಿಕ್ಕವರು ಕೆಲವರು ಮುಷ್ಟಿಯನ್ನು ಮಾಡಿಕೊಂಡು ಹೊರಟರು, ಮತ್ತೆ ಕೆಲವರು ದೊಣ್ಣೆಯನ್ನು ಹುಡುಕಿದರು. ಆಚಾರ್ಯರು 'ಮುಟ್ಟಿದಮಾತ್ರಕ್ಕೆ ಬೀಳುವ ಹಾಗಿದ್ದಾನೆ, ಮುದುಕ ; ಇವನಿಗೆ ಏನೂ ತಿಳಿಯದು, ಏನಾದರೂ ಹರಟಲಿ ! ಇವರಿಂದ ನಮಗೇನು ಹಾನಿ ?' ಎಂದರು. ಆಗ ವ್ಯಾಸರು ನಗುತ್ತಾ ಪ್ರತ್ಯಕ್ಷರಾದರು. ಶಂಕರರು ಅವರನ್ನು ನಮಸ್ಕರಿಸಿದರು (ಚಿ. ಶಂ. ೧೩–೨೩ರಿಂದ೪೦). ಆಮೇಲೆ ಬ್ರಹ್ಮನು ಪ್ರತ್ಯಕ್ಷನಾಗಿ 'ಇವನು ಸಾಕ್ಷಾಚ್ಛಿವನೇ; ಖಿಲವಾದ ಅದ್ವೈತವನ್ನೂ ಸಂನ್ಯಾಸವನ್ನೂ ಉದ್ಧಾರಮಾಡುವದಕ್ಕೆ ಅವತರಿಸಿದಾನೆ' ಎಂದನು. ಕಾಶೀರಾಜಾದಿಗಳು ಆಶ್ಚರ್ಯದಿಂದ ನೋಡುತ್ತಿದ್ದರು (೧೪–೮). ವ್ಯಾಸರು 'ಇವನಿಗೆ ಆಯುಸ್ಸು ಮಾತ್ರ ಇಷ್ಟೇ ಇದೆ, ಭಾಷ್ಯವನ್ನು ಶಿಷ್ಯರಿಗೆ ಹೇಳುವವರು ಇನ್ನೂ ಯಾರೂ ವಿಚಕ್ಷಣರಿಲ್ಲವಲ್ಲ! ಏನುಮಾಡೋಣ ?' ಎಂದು ಕೇಳಲು ಬ್ರಹ್ಮನು 'ಶಂಕರಾಜ್ಞೆಯಿಂದ ಏನೇನಾಗಿದೆಯೋ ಅದನ್ನು ನಾನು ಬಲ್ಲೆನು ; ಆತನೇ ಲೀಲಾವಿಗ್ರಹವನ್ನು ಸ್ವೀಕರಿಸಿರುತ್ತಾನೆ. ಈತನು ತನ್ನ ಇಷ್ಟಾನುಸಾರಮಾಡಲಿ ; (ಸ್ವಚ್ಛನ್ದಂ ವಿಹರತ್ವೇಷಃ ೪–೨೨). ನಾನಾದರೂ ವಿಷ್ಣುವಾದರೂ ಕೊಡತಕ್ಕದ್ದೇನಿದೆ ? ಆತನಿಗೇ ಎಲ್ಲವೂ ಗೊತ್ತು' (೪–೨೩) ಎಂದು ಸುಚಿರಾಯುಸ್ಸನ್ನು ಕೊಟ್ಟನು (ದದೌ ಸುಚಿರಮಾಯುಶ್ಚ ೪–೨೪)ಎಂದು ಇದೆ. ಹದಿನಾರುವರ್ಷ ಆಯುಸ್ಸು ಹೆಚ್ಚಾಗಿ ಕೊಟ್ಟನು ಎಂಬ ಮಾತು ಅಲ್ಲಿಲ್ಲ.

(೩) ಅನಂತಾನಂದಗಿರೀಯದಲ್ಲಿ ಹೀಗಿದೆ ; ಶಂಕರರು ವಿಸ್ತಾರವಾಗಿ ಸೂತ್ರಾರ್ಥ ಹೇಳಿದಮೇಲೆ ಆ ಮುದುಕನ ಕೆನ್ನೆಗೆ ಏಟುಕೊಟ್ಟು, ಪದ್ಮಪಾದನನ್ನು 'ಈ ಮುದುಕನನ್ನು ನೆಲದಮೇಲೆ ಕೆಡವಿ, ತುದಿಗಾಲಿನಿಂದ ಆಚೆಗೆ ಹಾಕು ! (ವೃದ್ಧಸ್ಯ ಕಪೋಲತಾಡನಮಾಚಕಾರ | ಪರಂ ಚ ಪದ್ಮಪಾದಂ ನಿಜಶಿಷ್ಯಮಾಹ ಏನಂ ಪರಪಕ್ಷಿಶ್ರೇಷ್ಠಂ ವೃದ್ಧಂ ಭೂಮ್ಯುಪರಿ[1] ಅಧೋಮುಖಂ ಪಾತಯಿತ್ವಾ ಪಾದಾಗ್ರಾವಲಮ್ಬನಾದ್ದೂರಮ್ ಅಪವ್ರಜೇತಿ) (ಆ.ಶಂಪ್ರ. ೫೨, ಪು. ೨೦೬ ; ದೇ. ಪು. ೧೭೭) ಎಂದಿದೆ ! ಪದ್ಮಪಾದರು ಗುರುಗಳಿಗೆ ನಮಸ್ಕರಿಸಿ 'ಶಙ್ಕರಃ ಶಙ್ಕರಃ ಸಾಕ್ಷಾದ್ವ್ಯಾಸೋ ನಾರಾಯಣಃ ಸ್ವಯಮ್ | ತಯೋರ್ವಿವಾದೇ ಸಂಪ್ರಾಪ್ತೇ ಕಿಙ್ಕರಃ ಕಿಂ ಕರೋಮ್ಯಹಮ್ || (ಪು. ೨೦೭ ; ದೇ. ಪು. ೧೭೭) ಎಂದರು. ಶಂಕರರು ಸ್ತೋತ್ರಮಾಡಲಾಗಿ ವ್ಯಾಸರು ದರ್ಶನವನ್ನು ಕೊಟ್ಟು ಅನುಗ್ರಹಿಸಿದರು (ಪು. ೨೦೭ ; ದೇ. ೧೭೭). ಸೂತ್ರಭಾಷ್ಯವನ್ನು ನೋಡಿ ಸಂತೋಷಪಟ್ಟು, 'ಹೋಗುವೆನು' ಎಂದು ಹೊರಟ ವ್ಯಾಸರನ್ನು ಕುರಿತ ಶಂಕರರು 'ಸರ್ವಜ್ಞನೆ, ಈಗ ನನ್ನ ಪ್ರಾಣೋತ್ಕ್ರಮಣವಾಗುತ್ತದೆ, ಅದನ್ನು ನೋಡಿ ಹೋಗಬೇಕು ; ತಮ್ಮ ಸಂನಿಧಿಯಲ್ಲಿ ಪ್ರಾಣತ್ಯಾಗಮಾಡಿದರೆ ಮುಕ್ತನೇ

1. ಈ ಮಾತುಗಳು ದೇ. ಪಾಠದಲ್ಲಿಲ್ಲ. 'ನಿಜಶಿಷ್ಯಮಿದಮಾಹ' ಎಂದು ಅಲ್ಲಿಯ ಪಾಠ.

ಆದಂತೆ !' ಎಂದರು. ವ್ಯಾಸರು 'ನೀನು ಹೋದಮೇಲೆ ಭಾಷ್ಯವು ಪ್ರಸಿದ್ಧವಾಗುವದು ಹೇಗೆ ? ಆದ್ದರಿಂದ ನೀನು ಇಲ್ಲಿಯೇ ಇರು' ಎಂದರು. ಶಂಕರರು 'ನನಗೆ ಆಯುಸ್ಸು ಹದಿನಾರೇ ಎನ್ನಲು ಸೃಷ್ಟಿಕರ್ತನಾದ ಬ್ರಹ್ಮನನ್ನು ಮಂತ್ರದಿಂದ ಎಳೆಸರು (ವ್ಯಾಸಸ್ತ್ವಾಕರ್ಷಯಾಮಾಸ ಬ್ರಹ್ಮಾಣಂ ಸೃಷ್ಟಿಕಾರಣಮ್) ಬ್ರಹ್ಮನು ಈ ಶಂಕರಾಚಾರ್ಯನೇ ಕೈಲಾಸನಾಯಕನು ; ಇನ್ನು ಎಂಟು ವರ್ಷಗಳು ಭೂಮಿಯ ಮೇಲೆ ಇದ್ದು ಆಮೇಲೆ ಹೋಗುವನು (ಸ ಏವ ಶಙ್ಕರಾಚಾರ್ಯಃ ಸಾಕ್ಷಾತ್ಕೈಲಾಸನಾಯಕಃ | ಯಾವದಷ್ಟಾಬ್ದಮುರ್ವ್ಯಾಂ[1] ಹಿ ಸ್ಥಿತ್ವಾ ಪಶ್ಚಾದ್ಗಮಿಷ್ಯತಿ ||' (ಪು. ೫೩-೨೦೮? ದೇ. ೧೭೮) ಈ ಬ್ರಹ್ಮವಚನವನ್ನು ಕೇಳಿ ವ್ಯಾಸರು ಗಂಗಾಂಬುವನ್ನು ತಂದು ನೂರುವರ್ಷ ಬದುಕಲಿ ! – ಎಂದು ಶಂಕರರಮೇಲೆ ಪ್ರೋಕ್ಷಿಸಿದರು (ಇತಿ ಬ್ರಹ್ಮವಚಃ ಶ್ರುತ್ವಾ ವ್ಯಾಸಃ ಕಾಶೀಕೃತಾಲಯಃ । ಕರೇಣಾನೀಯ ಗಙ್ಗಾಮ್ಬು ಜೀವೇತ ಶರದಾಂ ಶತಮ್| ಇತ್ಯುಕ್ತ್ವಾ ಪ್ರೋಕ್ಷಯಾಮಾಸ ಶಙ್ಕರಾಚಾರ್ಯಮುತ್ತಮಮ್|| (ಪ್ರ. ೫೮; ಪು. ೨೦೯ ; ದೇ. ಪು. ೧೭೯)ಎ ಂದಿದೆ !

ಆಚಾರ್ಯರಿಗೆ ಆಯುಸ್ಸು ಮೂವತ್ತೆರಡು ಎಂಬುದಕ್ಕೆ ಪ್ರಾಚೀನ ಶಂಕರವಿಜಯ, ಬೃಹಚ್ಛಙ್ಕರವಿಜಯ– ಇವುಗಳ ಸಂಮತಿಯಿರುವದರಿಂದ ಮಾಧವೀಯವು ಆದಕ್ಕೆ ಅನುಗುಣವಾಗಿಯೇ ಇದೆ. ಆದರೆ ಚಿದ್ವಿಲಾಸರು ‹ಆ ಶಿವನಿಗೆ ಇಷ್ಟವಿದ್ದಷ್ಟು ದಿನವಿರಲಿ! ಎಂದು 'ಸಂಚಿರಾಯುಸ್ಸನ್ನು ಕೊಟ್ಟರು' ಎಂದೂ ಅನಂತಾನಂದಗಿರಿಯು ಬ್ರಹ್ಮನು ಎಂಟು ವರ್ಷ ಹೆಚ್ಚಾಗಿ ಎಂದರೆ ಇಪ್ಪತ್ತನಾಲ್ಕು ವರ್ಷಗಳ ಆಯುಸ್ಸುಕೊಟ್ಟನು, ಆದರೆ ವ್ಯಾಸರು 'ನೂರುವರ್ಷ ಬದುಕಲಿ !' ಎಂದು ಹರಸಿದರು –ಎಂದೂ ಬರೆದಿರುವದು ವಿಚಿತ್ರವಾಗಿದೆ. ಚಿದ್ವಿಲಾಸೀಯದಲ್ಲಿ ಬ್ರಹ್ಮನು ತಾನೇ ಪ್ರತ್ಯಕ್ಷನಾದನು, ಆನಂದಗಿರಿಯಲ್ಲಿ ವ್ಯಾಸರೇ ಆವನನ್ನು ಮಂತ್ರಶಕ್ತಿಯಿಂದ ಹಿಡಿದೆಳೆದರು !

ಇನ್ನೊಂದು ವಿಚಿತ್ರವಿಷಯವೂ ಇಲ್ಲಿದೆ. ಆಚಾರ್ಯರು ವೃದ್ಧಬ್ರಾಹ್ಮಣನನ್ನು ಬಯ್ದರೆಂದು ಚಿದ್ವಿಲಾಸೀಯದಲ್ಲಿದೆ, ಕೆನ್ನೆಗೆ ಹೊಡೆದು 'ಅವನನ್ನು ಕಾಲಿಂದ ಒದೆದು ತಳ್ಳು' ಎಂದು ಪದ್ಮಪಾದರಿಗೆ ಹೇಳಿದರೆಂದು ಅನಂತಾನಂದಗಿರೀಯದಲ್ಲಿದೆ ! ಅದು ನಿಜವಾದರೆ ಆಚಾರ್ಯರ ವಿನಯವನ್ನು ಏನೆಂದು ಹೇಳೋಣ !

(೪) ಶಂಕರಾಚಾರ್ಯರಿಗೂ ವೃದ್ಧಬ್ರಾಹ್ಮಣರೂಪದ ವ್ಯಾಸರಿಗೂ ಆದ ವಾದದಲ್ಲಿ ಪದ್ಮಪಾದರು ಹೇಳಿದ 'ಶಙ್ಕರಃ ಶಙ್ಕರಃ ಸಾಕ್ಷಾದ್' ಎಂಬ ಶ್ಲೋಕವು ಅನಂದಗಿರೀಯದಲ್ಲಿದೆಯಷ್ಟೆ ? ಇದೇ ಅರ್ಥದ ಶ್ಲೋಕವೇ ಮಾಧವೀಯದಲ್ಲಿಯೂ ಇದೆ :

1. ದೇ. ಪಾಠದಲ್ಲಿ 'ಯಾವದಿಚ್ಛಾಬ್ಧಮ್' ಎಂದು ತಿದ್ದಿರುತ್ತದೆ !

ತ್ವಂ ಶಙ್ಕರಃ ಶಙ್ಕರ ಏವ ಸಾಕ್ಷಾದ್ವ್ಯಾಸಸ್ತು ನಾರಾಯಣ ಏವ ನೂನಮ್ ।
ತಯೋರ್ವಿವಾದೇ ಸತತಂ ಪ್ರಸಕ್ತೇ ಕಿಂ ಕಿಙ್ಕರೋಽಹಂ ಕರವಾಣಿ ಸನ್ಯಃ ॥
—(ಮಾ. ಶಂ ೭–೧೧)

ಇಲ್ಲಿ ಅಕ್ಷರಗಳ ಛಾಯೆ ಎರಡಕ್ಕೂ ಸಮಾನವಾಗಿದೆಯಾದರೂ ಅನಂತಾನಂದಗಿರಿಯಲ್ಲಿಯೇ 'ಕಿಙ್ಕರಃ ಕಿಂ ಕರೋಮ್ಯಹಮ್' ಎಂಬ ಪ್ರಾಸಬಂಧವು ಹೆಚ್ಚು ಹೊಂದುತ್ತದೆ ಎಂತ ತೋರುತ್ತದೆ. ಇದೇ ಶ್ಲೋಕವು (೧೪–೩೧) ಚಿದ್ವಿಲಾಸೀಯದಲ್ಲಿಯೂ ಇದೆ. ಆದರೆ ಆ ಶ್ಲೋಕವು ಬ್ರಹ್ಮ, ಶಂಕರಾಚಾರ್ಯರು, ವ್ಯಾಸರು– ಮೂವರನ್ನೂ ಕಂಡಾಗ ಪದ್ಮಪಾದರು ಹೇಳಿದರೆಂಬ ಸಂದರ್ಭದಲ್ಲಿ ಬಂದಿದೆಯಾದ್ದರಿಂದ ಇದು ಮೊದಲು ಅನಂತಾನಂದಗಿರೀಯದಲ್ಲಿಯೇ ಇದ್ದದ್ದೆಂದು ತೋರುತ್ತದೆ. ಮಿಕ್ಕ ಕಡೆಗಳಲ್ಲಿ ಡಿಂಡಿಮಕಾರರು ಕೊಟ್ಟಿರುವ ಅನೇಕ ವಾಕ್ಯಗಳು ಅನಂತಾನಂದಗಿರೀಯದಲ್ಲಿಯೇ ಕಂಡುಬರುವದರಿಂದ ಆ ಶಂಕರವಿಜಯವೇ ಮಾಧವೀಯಕ್ಕೆ ಮೂಲವೆಂದು ಊಹಿಸಬೇಕೆ? ಅಥವಾ ಇನ್ನೊಂದು ಅನಂದಗಿರೀಯವು ಕುಂಭಕೋಣಮಠದಲ್ಲಿದೆಯೆಂದು ಕೆಲವರು ಹೇಳುತ್ತಾರಾದ್ದರಿಂದ ಅದರ ವಾಕ್ಯಗಳು ಈ ಎರಡಕ್ಕೂ ಆಧಾರವೆಂದು ಕಲ್ಪಿಸಬೇಕೆ? ಇದು ವಿಚಾರಣೀಯವಾಗಿದೆ.

(೫) ವೇದಾಂತಮೀಮಾಂಸೆಯಲ್ಲಿ ಸಿದ್ಧಾಂತವಿಷಯವಾದ ಎಷ್ಟೋ ಅಮೋಘವಿಚಾರಗಳನ್ನು ಒಳಗೊಂಡಿರುವ ಸಮನ್ವಯಾದಿಸೂತ್ರಗಳನ್ನು ಬಿಟ್ಟು 'ತದನ್ತರಪ್ರತಿಪತ್ತೌ' (ವೇ. ಸೂ. ೩–೧–೧) ಎಂಬ ನಮ್ಮಂಥವರಿಗೆ ಪರೋಕ್ಷವಾಗಿರುವ ಜೀವಗತಿಯನ್ನು ಪ್ರತಿಪಾದಿಸುವ ಸೂತ್ರವನ್ನೇಕೆ ವ್ಯಾಸರು ವಾದಕ್ಕೆ ಆರಿಸಿಕೊಂಡರು? ಅದರಲ್ಲಿ ಅವರು ಶಂಕರರ ಅಭಿಪ್ರಾಯಗಳನ್ನು 'ನೂರು ರೀತಿಗಳಿಂದ' ಖಂಡಿಸುವದಕ್ಕೇನಿತ್ತು? ಅದನ್ನು ಶಂಕರರು 'ಸಾವಿರ ಬಗೆಗಳಿಂದ' ಖಂಡಿಸಿದ್ದೇನಿರಬಹುದು? ಈ ವಿಷಯವನ್ನು ಶಂಕರವಿಜಯಕಾರರಾಗಲಿ ಡಿಂಡಿಮಟೀಕಾಕಾರನಾಗಲಿ ಹೇಳಿಲ್ಲ. ಹೀಗಿರುವದರಿಂದ ವ್ಯಾಸಶಂಕರಸಂವಾದವೆಂಬುದು ಬರಿಯ ಕಲ್ಪನಾಕಥೆಯೆ? ಭಾಷ್ಯವನ್ನು ಆಕ್ಷೇಪಿಸುವದಕ್ಕೆ ಅನೇಕರು ಪಂಡಿತರು ಬರುತ್ತಿದ್ದರೆಂಬುದಕ್ಕೆ ಮಾತ್ರ ಇದು ಪ್ರತೀಕವೆಂದು ಭಾವಿಸಬೇಕೆ? –ಎಂಬ ಪ್ರಶ್ನೆ ಏಳುತ್ತದೆ. ಶಾಂಕರಭಾಷ್ಯದ ವಿಷಯಕ್ಕೆ ಬಹಳ ವಾಕ್ಕಲಹವಾಯಿತೆಂದೂ ಅವರು ಕೆಲವು ಸಂದರ್ಭಗಳಲ್ಲಿ ಸ್ವಲ್ಪಮಟ್ಟಿಗೆ ಪ್ರತಿವಾದಿಗಳ ಅಭಿಪ್ರಾಯವನ್ನು ಒಪ್ಪಿಕೊಳ್ಳಬೇಕಾಗಿಬಂದಿರಬಹುದೆಂದೂ ಈ ಕಥೆಯಿಂದ ತರ್ಕಿಸಬಹುದೆಂತ ಸಿ. ಎನ್. ಕೃಷ್ಣಸ್ವಾಮಿ ಅಯ್ಯರವರು (CNK p.28) ಹೇಳುತ್ತಾರೆ. ಅದೃಷ್ಟವಾದ ಮೃತನ ಗತಿಯ ವಿಷಯಕ್ಕೆ ಇಷ್ಟೊಂದು ವಾಕ್ಕಲಹವಾಯಿತೇಕೆಂಬುದು ಆಗಲೂ ಅಪರಿಹೃತವಾಗಿಯೇ ಉಳಿದುಕೊಳ್ಳುತ್ತದೆ.

(೬) **ಮಾಧವಕನಿಯೂ** ಈ ಸೂತ್ರದ ಅಭಿಪ್ರಾಯವನ್ನು ವರ್ಣಿಸುವಾಗ ಸೂತ್ರಭಾಷ್ಯದ ವಾಕ್ಯಗಳನ್ನೇ ಉದಾಹರಿಸಿರುತ್ತಾನೆ. ಒಂದನೆಯ ಸೂತ್ರದ ಭಾಷ್ಯದ ಕೊನೆಯಲ್ಲಿರುವ 'ಏವಂ ಶ್ರುತ್ಯನ್ತೇ ದೇಹಾನ್ತರಪ್ರತಿಪತ್ತಿಪ್ರಕಾರೇ ಸತಿ ಯಾಃ ಪುರುಷಮತಿಪ್ರಭವಾಃ ಕಲ್ಪನಾಃ....ಇತ್ಯೇವಮಾದ್ಯಾಃ ಸರ್ವಾ ಏವಾನಾದರ್ತವ್ಯಾಃ ಶ್ರುತಿವಿರೋಧಾತ್' ಎಂಬ ವಾಕ್ಯವನ್ನು ಹಿಂದೆಯೇ (ಪು. ೨೫) ನಾವು ಉದಾಹರಿಸಿರುವದನ್ನು ವಾಚಕರು ಇಲ್ಲಿ ಸ್ಮರಿಸಿಕೊಳ್ಳಬೇಕು ಅಲ್ಲಿ ನಾವು ಹೇಳಿಟ್ಟಿರುವಂತೆ ಬೃಹದಾರಣ್ಯಕಶ್ರುತಿಯ ಭಾಷ್ಯದ ಅಭಿಪ್ರಾಯವನ್ನು 'ಪುರುಷಮತಿಪ್ರಭವಕಲ್ಪನೆ' ಎಂದು ಇಲ್ಲಿ ನಿಂದಿಸಿರುವದೇಕೆಂಬುದನ್ನು ಯಾರೊಬ್ಬರೂ ಪರಾಮರ್ಶಿಸಿಲ್ಲ. ಆಗ ಬೃಹದಾರಣ್ಯಕಭಾಷ್ಯವು ಇನ್ನೂ ನಿರ್ಮಿತವಾಗಿರಲಿಲ್ಲವೆನ್ನಬೇಕೋ ಅಥವಾ ಈ ಎರಡು ಅಭಿಪ್ರಾಯಗಳು ಪರಸ್ಪರ ವಿರುದ್ಧವೆಂಬುದು ವ್ಯಾಖ್ಯಾನಕಾರರಿಗೆ ಹೊಳೆಯಲಿಲ್ಲವೆಂದು ಕಲ್ಪಿಸಬೇಕೋ ತಿಳಿಯದು.



# ೭. ಆಚಾರ್ಯ-ಕುಮಾರಿಲಸಮಾಗಮ

---

೮೩.

ದಿಗ್ವಿಜಯಕ್ಕೆ ಹೊರಡುವದಕ್ಕೆ ಮನಸ್ಸುಮಾಡಿದರು. ಚಿದ್ವಿಲಾಸೀಯದಂತೆ ಆಚಾರ್ಯರು ಬದರಿಯಿಂದ ಕಾಶಿಗೆ ಬಂದಾಗಲೆ ಅವರಿಗೆ ಒಬ್ಬರು ಪೀತಾಂಬರಗಳನ್ನೂ ಒಬ್ಬರು ರತ್ನಪಾದುಕೆಗಳನ್ನೂ ಒಬ್ಬರು ಚಿನ್ನದ ಕಮಂಡಲುವನ್ನೂ ಮತ್ತೆ ಕೆಲವರು ನಾರುಬಟ್ಟೆಕಾಷಾಯವಸ್ತ್ರಗಳನ್ನೂ ಇನ್ನು ಕೆಲವರು ಏಕಾಕ್ಷ ರುದ್ರಾಕ್ಷಿಮಾಲೆಗಳನ್ನೂ ಮುತ್ತಿನ ಹಾರಗಳನ್ನೂ ಕೊಟ್ಟರು. ಹೀಗೆ ಜನರು ಕೊಟ್ಟದ್ದೆಲ್ಲವನ್ನೂ ಆಚಾರ್ಯರು ಚಂದ್ರಮೌಳೀಶ್ವರರತ್ನಗರ್ಭಗಣಪತಿಯವರಿಗ ಅರ್ಪಿಸುತ್ತಿದ್ದರು (ಚಿ. ಶಂ. ೧೩-೯ರಿಂದ ೧೧). ಇವರ ಸುದ್ದಿಯನ್ನು ಕೇಳಿದ ಕಾಶೀರಾಜನು ಬೆಲೆಯುಳ್ಳ ಕಿರೀಟವನ್ನೂ ರತ್ನಖಚಿತವಾದ ಚಿನ್ನದ ಕೇಯೂರವನ್ನೂ ಶ್ವೇತಚ್ಛತ್ರವನ್ನೂ ಪಲ್ಲಕ್ಕಿಯನ್ನೂ ಎರಡು ಚಾಮರಗಳನ್ನೂ ಒಪ್ಪಿಸಿ ಪುತ್ರಕಳತ್ರಪರಿವಾರಸಮೇತನಾಗಿ ಅವರನ್ನು ಸೇವಿಸಿದನಂತೆ (ಚಿ. ಶಂ. ೧೩-೧೪ ರಿಂದ ೧೭)). ಈ ರಾಜನ ಹೆಸರು ರಣ್ಸಿಂಹನೆಂದಿತ್ತು ಎಂತ ಸಿ. ಎನ್. ಕೃಷ್ಣಸ್ವಾಮಿ ಅಯ್ಯರ್‌ರು ( CNKS. p. 29 ) ತಿಳಿಸುತ್ತಾರೆ. ನಮ್ಮಲ್ಲಿರುವ ಪುಸ್ತಕದಲ್ಲಿ ಈ ಹೆಸರು ಕಾಣಿಸಲಿಲ್ಲ. ಆಚಾರ್ಯರು ತಮ್ಮ ಬಿರುದುಬಾವಲಿಗಳೊಡನೆ ಸಂಚರಿಸುತ್ತಿದ್ದರೆಂದು ಚಿದ್ವಿಲಾಸೀಯ, ಆನಂದಗಿರೀಯಗಳಲ್ಲಿರುವದರಿಂದ ಆಗಿನ ಕಾಲದ ರಾಜರುಗಳ ಪ್ರೋತ್ಸಾಹವೂ ಶಂಕರದಿಗ್ವಿಜಯವು ಯಶಸ್ವಿಯಾಗುವದಕ್ಕೆ ಕಾರಣವಾಗಿರಬಹುದೆಂದು ಅಯ್ಯರ್‌ರವರ ಕಲ್ಪನೆ. ಆ ಕಲ್ಪನೆಗಿಂತಲೂ ಇತ್ತೀಚಿನ ಮಠಾಧಿಪತಿಗಳು ಬಿರುದುಬಾವಲಿಗಳೊಡನೆ ಸಂಚರಿಸುತ್ತಿರುವದನ್ನು ಮನದಂದು ಆಚಾರ್ಯರಿಗೂ ಅಂಥ ಮಾನಮರ್ಯಾದೆಗಳು ಇರುವದು ಯುಕ್ತವೆಂದು ಆ ಶಂಕರವಿಜಯಕಾರರುಗಳು ಕಲ್ಪಿಸಿರಬಹುದೆಂದು ತರ್ಕಿಸುವದೇ ನಮಗೆ ಯುಕ್ತತರವೆನ್ನಿಸುತ್ತದೆ. ಹೇಗೂ ಆಚಾರ್ಯರ ವಿದ್ವತ್ತಿನಿಂದ ಅನೇಕ ಶಿಷ್ಯರುಗಳು ಅವರನ್ನು ಅನುಸರಿಸಿದ್ದು ಜನರಿಗೆ ಅವರಲ್ಲಿ ಗೌರವವನ್ನು ಹೆಚ್ಚಿಸಿರಬೇಕೆಂಬುದಕ್ಕೆ ಸಂಶಯವಿಲ್ಲ.

**ಶಿವಪಾಷಂಡಿಪರಾಭವ**

೮೪. ಆಚಾರ್ಯರು ಇನ್ನೂ ಕಾಶೀನಗರದಲ್ಲಿರುವಾಗಲೇ ಅವರನ್ನು ವಾದದಲ್ಲಿ ಜಯಿಸುವದಕ್ಕೆ ಅನೇಕ ಶಿವಪಾಷಂಡಿಗಳು ಬಂದರೆಂದೂ ಅವರನ್ನು

ಜಯಿಸಿ ಆಚಾರ್ಯರು ಲಿಂಗ, ತ್ರಿಶೂಲ, ಡಮರು— ಮುಂತಾದ ತಪ್ತಚಿಹ್ನೆಗಳುಳ್ಳವರಾಗಿದ್ದ ಅವರ ದುರಾಚಾರವನ್ನು ಬಿಡಿಸಿ ಅದ್ವೈತಪರರನ್ನಾಗಿ ಮಾಡಿದರೆಂದೂ ಚಿದ್ವಿಲಾಸೀಯದ ೧೫ನೆಯ ಅಧ್ಯಾಯದಲ್ಲಿ ಬರೆದಿದೆ. ಚಿದ್ವಿಲಾಸೀಯದಲ್ಲಿಯೂ ಅನಂತಾನಂದಗಿರೀಯದಲ್ಲಿಯೂ ಹೀಗೆ ವಿವಿಧವಾದ ತಪ್ತಾಂಕನ, ವಿವಿಧತಿಲಕಗಳು, ರುದ್ರಾಕ್ಷಿ, ತುಳಸೀಮಾಲೆ— ಮುಂತಾದವುಗಳ ಧಾರಣೆಯ ಪ್ರತಿವಾದಿಗಳನ್ನು ಆಚಾರ್ಯರು ಗೆದ್ದರೆಂದು ಅಲ್ಲಲ್ಲಿ ಬರೆದಿದೆ. ಈ ವಿಷಯವು ಆನಂದಗಿರೀಯದಲ್ಲಿ ಹೇರಳವಾಗಿ ಕಂಡುಬರುತ್ತಿದೆ. ಅನಂತಾನಂದಗಿರಿಯು ಚಿದಂಬರಾಭಿಮಾನಿಯೆಂದು ಆಗಲೆ ನಮಗೆ ಗೊತ್ತಾಗಿದೆ. ದಕ್ಷಿಣದಲ್ಲಿ ಹೀಗೆ ತಿಲಕಧಾರಣ, ಆಯುಧಾಂಕನ— ಇವುಗಳ ಆಚಾರವು ಬಹಳವಾಗಿ ಇದ್ದಿರಬಹುದು. ಅದನ್ನು ಆಚಾರ್ಯರು ನಿಲ್ಲಿಸಿದರೆಂದು ತಿಳಿಸುವದಕ್ಕೆ ಆನಂದಗಿರಿಯು ಬಹಳ ಶ್ರಮವನ್ನು ವಹಿಸಿರುವಂತೆ ಕಾಣಿಸುತ್ತಿದೆ. ಈ ವಿಷಯವನ್ನು ಇನ್ನೊಮ್ಮೆ ಪ್ರಸ್ತಾಪಿಸಲಿರುವೆವು.

## ಭಟ್ಟರನ್ನು ಕಂಡದ್ದು :

೮೫. ಶಂಕರರಿಗೆ ತಾವು ಬರೆದಿದ್ದ ಭಾಷ್ಯಕ್ಕೆ ಕುಮಾರಿಲಭಟ್ಟರಿಂದ ವಾರ್ತಿಕವನ್ನು ಬರೆಯಿಸಬೇಕೆಂಬ ಅಭಿಲಾಷೆಯುಂಟಾಯಿತು. ಆದ್ದರಿಂದ ಅವರು ದಕ್ಷಿಣದಿಕ್ಕಿನಲ್ಲಿರುವ ವಿಂಧ್ಯಾಚಲದ ಕಡೆಗೆ ಬಂದು, ಆ ಬಳಿಕ ಪ್ರಯಾಗಕ್ಕೆ ಬಂದರು. ಯಮುನಾನದಿಯಲ್ಲಿ ಮಿಂದು ಕುಮರಿಲಭಟ್ಟರ ಸುದ್ಧಿಯನ್ನು ಜನರಿಂದ ತಿಳಿದುಕೊಂಡು ಅವರನ್ನು ಹುಡುಕಿಕೊಂಡು ಹೊರಟರು. ಭಟ್ಟರು ತಾವು ಮಾಡಿದ ದುಷ್ಕೃತ್ಯದ ಪರಿಹಾರಕ್ಕಾಗಿ ಪ್ರಾಯಶ್ಚಿತ್ತರೂಪದಿಂದ ಒಂದು ಆರಣ್ಯದಲ್ಲಿ ಹೊಟ್ಟಿನ ಬೆಂಕಿಯನ್ನು ಹೊಗುತ್ತಿರುವರೆಂದು ತಿಳಿದುಬಂತು. ಅಲ್ಲಿಯೇ ಅವರನ್ನು ಕಂಡರು. ಕುಮಾರಿಲರು ಆದರದಿಂದ ಶಂಕರರನ್ನು ಬರಮಾಡಿಕೊಂಡರು. ಕಮಂಡಲುವಿನ ನೀರಿನಿಂದ ತುಷಾಗ್ನಿಯನ್ನು ಆರಿಸಿ ಅವರ ಅರೆಬೆಂದ ಶರೀರವನ್ನು ಉಜ್ಜೀವನಮಾಡುವದಕ್ಕೆ ಹೊರಟ ಶಂಕರರನ್ನು ತಡೆದು ಕುಮಾರಿಲಭಟ್ಟರು 'ತಾವು ಭಾಷ್ಯವನ್ನು ಮಾಡಿರುತ್ತೀರೆಂದು ಕೇಳಿದೆನು; ಅದಕ್ಕೆ ವಾರ್ತಿಕವನ್ನು ಬರೆಯಬೇಕೆಂದೂ ನನ್ನ ಅಭಿಪ್ರಾಯವಿತ್ತು. ಆದರೆ ಅದು ನನ್ನ ಅದೃಷ್ಟದಲ್ಲಿರಲಿಲ್ಲ, ಬೌದ್ಧರಿಂದ ಅಧ್ಯಯನಮಾಡಿದ ನಾನು ಅವರ ಕುಲವನ್ನೇ ನಾಶಗೊಳಿಸಿದೆನು. ಜೈಮಿನಿಯ ಮತದಲ್ಲಿರುವ ಅಭಿನಿವೇಶದಿಂದ ಕರ್ಮದಿಂದಲೇ ಮುಕ್ತಿಯೆಂಬುದನ್ನು ಸ್ಥಿರಪಡಿಸುವದಕ್ಕಾಗಿ ಪರಮೇಶ್ವರನನ್ನು ನಿರಾಕರಿಸಿದೆನು. ಈ ಎರಡು ದೋಷಗಳಿಗೆ ದೇಹಾಂತಪ್ರಾಯಶ್ಚಿತ್ತವೇ ಆಗಬೇಕು. ಇರಲಿ. ಕರ್ಮಠನಾದ ನನ್ನ ಶಿಷ್ಯ ಮಂಡನನನ್ನು ಜಯಿಸಿದರೆ ಎಲ್ಲರನ್ನೂ ಜಯಿಸಿದಂತೆ ಆಗುವದು' ಎಂದರು. ಆಚಾರ್ಯರು ಅವರಿಗೆ

ಅದ್ವೈತವನ್ನು ಉಪದೇಶಮಾಡಿ ಅಜ್ಞಾನವನ್ನು ಕಳೆದು ಆಕಾಶಮಾರ್ಗದಿಂದ ಮಂಡನನ ಮನೆಯಕಡೆಗೆ ಹೊರಟರು (ಮಾ. ಶಂ. ೭-೭೦ರಿಂದ ೧೩೨ರವರೆಗೆ ಮತ್ತು ಆನೆಯ ಸರ್ಗದ ೧ನೆಯ ಶ್ಲೋಕ).

ಈ ವೃತ್ತಾಂತಸಂಗ್ರಹದಲ್ಲಿರುವ ಅಂಶಗಳನ್ನು ಒಂದೊಂದಾಗಿ ವಿಚಾರಿಸು ವದು ಅವಶ್ಯವಾಗಿರುವದರಿಂದ ಆ ಕಾರ್ಯಕ್ಕೆ ಈಗ ಹೊರಡುವೆವು.

## ಕುಮಾರಿಲರು ಉತ್ತರದೇಶದವರೆ ?

೮೬. ಕುಮಾರಿಲಭಟ್ಟರ ದೇಶವು ಯಾವದು ? –ಎಂಬ ವಿಷಯಕ್ಕೆ ಸರಿಯಾದ ಆಧಾರವು ಸಿಕ್ಕುವದಿಲ್ಲ. ಇವರು ದಕ್ಷಿಣದೇಶದವರೆಂದು ಕೆಲವರು, ಉತ್ತರದೇಶದವರೆಂದು ಕೆಲವರು– ಹೀಗೆ ವಿಮರ್ಶಕರು ಭಿನ್ನಾಭಿಪ್ರಾಯವುಳ್ಳವ ರಾಗಿರುತ್ತಾರೆ. ಡಾಕ್ಟರ್ ವಿದ್ಯಾಭೂಷಣರೆಂಬವರು ಬರೆದಿರುವ ಭಾರತನ್ಯಾಯ ಶಾಸ್ತ್ರದ ಇತಿಹಾಸ (History of Indian Logic p 305) ಆಧಾರ ದಿಂದ **ಬಲದೇವ ಉಪಾಧ್ಯಾಯರು** ಸಂಗ್ರಹಿಸಿರುವ ಟಿಬೆಟ್‌ದೇಶದ **ತಾರಾ ನಾಥನೆಂಬ** ಐತಿಹಾಸಿಕ ಮತ್ತು ಇತರರ ಗ್ರಂಥಗಳಲ್ಲಿ ಕಾಣುವ ಒಂದು ಐತಿಹ್ಯ ವನ್ನು ಇಲ್ಲಿ ಸಮಾಲೋಚಿಸುವದು ಅವಶ್ಯವಾಗಿದೆ. ಕುಮಾರಿಲನು ಧರ್ಮ ಕೀರ್ತಿಯ ಚಿಕ್ಕಪ್ಪನು. ದಕ್ಷಿಣಭಾರತದ ಚೂಡಾಮಣಿ ಎಂಬ ಹೆಸರಿನ ರಾಜ್ಯಕ್ಕೆ ಸೇರಿದ ತ್ರಿಮಲೆಯಲ್ಲಿ ಹುಟ್ಟಿದವನು. ಈತನು ಶ್ರೀಮಂತಗೃಹಸ್ಥನಾಗಿದ್ದು ಚೂಡಾಮಣಿರಾಜನ ಗೌರವಕ್ಕೆ ಪಾತ್ರನಾಗಿದ್ದನು. ಧರ್ಮಕೀರ್ತಿಯು **ಕೋರು ನಂದನೆಂಬ** ಬ್ರಾಹ್ಮಣನ ಮಗನು; ಬೌದ್ಧಮತದಲ್ಲಿ ಆಸ್ಥೆಯಿದ್ದದ್ದರಿಂದ ನಾಳಂದಾ ವಿದ್ಯಾಪೀಠದ ಸ್ಥವಿರಧರ್ಮಪಾಲನಲ್ಲಿ ಬೌದ್ಧಶಾಸ್ತ್ರವನ್ನು ಓದಿ ಬ್ರಾಹ್ಮಣ ದರ್ಶನದ ಪರಿಚಯಕ್ಕಾಗಿ ಕುಮಾರಿಲರಲ್ಲಿ ಪರಿಚಾರಕನಾಗಿ ನಿಂತನು; ಕುಮಾರಿಲನು ತನ್ನ ಪತ್ನಿಯ ಅಭಿಪ್ರಾಯದಂತೆ ಇತರ ಬ್ರಾಹ್ಮಣರೊಡನೆ ಇವ ನಿಗೂ ಅವಕಾಶವನ್ನು ಕೊಟ್ಟನು. ಕೀರ್ತಿಯು ಶಾಸ್ತ್ರಗಳನ್ನು ಕಲಿತು ಅವುಗಳಲ್ಲಿ ಪ್ರವೀಣನಾಗಿ ಅಲ್ಲಿದ್ದ ಪಂಡಿತರೊಡನೆ ವಾದಮಾಡಿ ಅವರನ್ನು ಜಯಿಸಿದ ಬಳಿಕ ಭಟ್ಟರೊಡನೆಯೂ ಶಾಸ್ತ್ರಾರ್ಥವನ್ನು ಮಾಡಿ ಅವರನ್ನು ಸೋಲಿಸಿದನು. ಇದರ ಫಲವಾಗಿ ಭಟ್ಟನು ತನ್ನ ಐನೂರು ಶಿಷ್ಯರೊಡನೆ ಬೌದ್ಧನಾದನು). (History of Indian Logic pp303-306).

ಈ ಕಥೆಗೆ ನಮ್ಮ ದೇಶದಲ್ಲಿ ಬೆಂಬಲವಿಲ್ಲದಿದ್ದರೂ ಭಟ್ಟರು ಬೌದ್ಧರ ದರ್ಶನವನ್ನು ತಿಳಿದುಕೊಳ್ಳುವದಕ್ಕೆಂದು ಬೌದ್ಧಾಚಾರ್ಯರಲ್ಲಿ ಬೌದ್ಧಭಿಕ್ಷುವಿನ ವೇಷದಲ್ಲಿದ್ದುಕೊಂಡು ಶಾಸ್ತ್ರಾಧ್ಯಯನವನ್ನು ಮಾಡಿದರೆಂಬುದು ಮೇಲೆ ನಾವು ಸಂಗ್ರಹವಾಗಿ ಹೇಳಿರುವ ಮಾಧವೀಯಶಂಕರಕಥಾವೃತ್ತಾಂತದಿಂದಲೇ ಗೊತ್ತಾಗು

ತ್ತದೆ. ಭಟ್ಟರ ಆಚಾರ್ಯನು ಧರ್ಮಪಾಲನೇ ಆಗಿರಬೇಕೆಂದು ಬಲದೇವ ಉಪಾಧ್ಯಾಯರ ಅಭಿಪ್ರಾಯ (ಬಲ. ಶಂ. ಪು. ೫೯). ಭಟ್ಟರು ಬೌದ್ಧರಲ್ಲಿ ಓದುತ್ತಿದ್ದಾಗ[1] ಒಂದು ದಿನ ಆ ಗುರುವು ವೈದಿಕಮಾರ್ಗವನ್ನು ನಿಂದಿಸುತ್ತಿರುವಲ್ಲಿ ಅವರ ಕಣ್ಣುಗಳಿಂದ ನೀರಿನ ತೊಟ್ಟುಗಳು ಉದುರಿದ್ದನ್ನು ಮಿಕ್ಕ ಶಿಷ್ಯರು ಕಂಡು ಅವರು ಬ್ರಾಹ್ಮಣರೆಂಬುದನ್ನು ಅರಿತುಕೊಂಡರು. ಸಮಯವನ್ನು ಸಾಧಿಸಿ ಉಪ್ಪರಿಗೆಯ ಮೇಲಿನಿಂದ ಅವರನ್ನು ಕೆಳಕ್ಕೆ ತಳ್ಳಿದರು. 'ವೇದಗಳು ಪ್ರಮಾಣವಾದರೆ ನನಗೆ ಯಾವ ಅಪಾಯವೂ ಆಗದಿರಲಿ!' ಎಂದು ಭಟ್ಟರು ಕೂಗಿಕೊಂಡರಂತೆ. 'ಪ್ರಮಾಣವಾದರೆ' ಎಂದು ಸಂಶಯವನ್ನು ಸೂಚಿಸಿದ್ದರಿಂದಲೂ ಪ್ರಚ್ಛನ್ನವೇಷದಿಂದ ಶಾಸ್ತ್ರಶ್ರವಣವನ್ನು ಮಾಡಿದ್ದರಿಂದಲೂ ಒಂದು ಕಣ್ಣು ಹೋಯಿತು (ಮಾ ಶಂ. ೭-೯೪ರಿಂದ ೯೯) ಎಂದು ಮಾಧವನ ವರ್ಣನೆ

ಈ ಎರಡು ಕಥೆಗಳನ್ನೂ ಒಟ್ಟುಗೂಡಿಸಿದರೆ, ಆಗಿನ ಕಾಲದಲ್ಲಿ ಬೌದ್ಧರೂ ಬ್ರಾಹ್ಮಣರೂ ಒಬ್ಬರ ಶಾಸ್ತ್ರವನ್ನೊಬ್ಬರು ಹೇಗೋ ಕಲಿತುಕೊಂಡು ಪರಸ್ಪರ ಖಂಡನೆಗಳನ್ನು ಮಾಡುತ್ತಿದ್ಧರೆಂದು ಸ್ಪಷ್ಟವಾಗುತ್ತದೆ. ಇದು ಹೇಗಾದರೂ ಕುಮಾರಿಲರು ದಕ್ಷಿಣದವರೆಂಬುದಕ್ಕೆ ಈ ಕಥೆಯೊಂದು ಸಹಾಯಕವಾಗುತ್ತದೆ ಎನ್ನಬಹುದು ಆದರೆ ಅನಂತಾನಂದಗಿರಿಯು ಭಟ್ಟರು ಉತ್ತರದೇಶದಿಂದ ಬಂದು ದುಷ್ಟಮತಾವಲಂಬಿಗಳಾದ ಜೈನಬೌದ್ಧರುಗಳನ್ನು ಜಯಿಸಿದರು, (ಭಟ್ಟಾಚಾರ್ಯಾಖ್ಯೋ ದ್ವಿಜವರಃ ಕಶ್ಚಿತ್ ಉದಗ್ದೇಶಾತ್ ಸಮಾಗತ್ಯ ದುಷ್ಟಮತಾವಲಮ್ಬಿನೋ ಬೌದ್ಧಾನ್ ಜೈನಾನ್ ಅಸಂಖ್ಯಾತಾನ್ ರಾಜಮುಖಾದ್ ಅನೇಕ ವಿದ್ಯಾಪ್ರಸಜ್ಗಭೇದೈರ್ನಿರ್ಜಿತ್ಯ....ನಿರ್ಭಯೋ ವರ್ತತೇ[2] ಪ್ರ. ೫೫, ಪು. ೨೧೦, ೨೧೧ ; ದೇ. ೧೮೦) ಎಂದಿರುವದರಿಂದ ಅವರು ಉತ್ತರದೇಶದವರೆಂದು ತಿಳಿಯಬೇಕಾಗುತ್ತದೆ. ಶಾಲಿಕಾನಾಥನು ಅವರನ್ನು 'ವಾರ್ತಿಕಕಾರಮಿಶ್ರ'ರೆಂದು ಕರೆದಿರುವದರಿಂದಲೂ ಇವರು ಉತ್ತರದೇಶದವರೆನ್ನಬೇಕು ; ಅವರು ಮೈಥಿಲಬ್ರಾಹ್ಮಣರೆಂಬ ಒಂದು ಐತಿಹ್ಯವೂ ಇದೆ ಎಂದು (ಬಲ. ಶಂ. ಪು. ೫೮) ಬಲದೇವ ಉಪಾಧ್ಯಾಯರು ಹೇಳುತ್ತಾರೆ.

ದಕ್ಷಿಣದೇಶದಲ್ಲಿ ಜೈನಬೌದ್ಧರ ಹಾವಳಿಯು ಬಹಳವಾಗಿದ್ದದ್ದು, ಬೌದ್ಧವಿದ್ವಾಂಸರನೇಕರು ದಕ್ಷಿಣದ ಬ್ರಾಹ್ಮಣರಾಗಿದ್ದರೆಂಬ ಕಥೆಗಳು- ಇವುಗಳನ್ನು

1. ಭಟ್ಟರು ಬೌದ್ಧರಲ್ಲಿ ಶಾಸ್ತ್ರಶ್ರವಣವನ್ನು ಮಾಡಿದರೆಂದು ಮಣಿಮಂಜರಿಯಲ್ಲಿಯೂ (೫-೩೭ ರಿಂದ ೪೧) ಹೇಳಿದೆ.

2. ತೆಲುಗುಪ್ರತಿಯಲ್ಲಿ...ಗುರುತುಮಾಡಿರುವ ಶಬ್ದಗಳು ಸ್ಫುಟವಾಗಿಲ್ಲ . ದೇ. ಪಾಠದಲ್ಲಿ 'ತೇಷಾಂ ಶೀರ್ಷಾಣಿ ಪರಶುಭಿಚ್ಛಿತ್ವಾ ಬಹುಷು ಉಲೂಖಲೇಷು ನಿಕ್ಷಿಪ್ಯ ಕಟ (?) ಭ್ರಮಣೈಶ್ಚೂರ್ಣೀಕೃತ್ಯ ಚೈವಂ ದುಷ್ಟಮತಧ್ವಂಸಮಾಚರನ್' ಎಂದಿದೆ,

ಮನೆದಂಪತಿ ಭಟ್ಟರು ದಕ್ಷಿಣದೇಶದವರೆಂದು ನಂಬುವದೇ ಯುಕ್ತವೆಂದು ನಮ್ಮ ಮತ. ಇದರ ಜೊತೆಗೆ ಧರ್ಮಕೀರ್ತಿಗೆ ಸಂಮತವಾದ "ಕಲ್ಪನಾಪೋಢಮಭ್ರಾನ್ತಮ್" ಎಂಬ ಪ್ರತ್ಯಕ್ಷಲಕ್ಷಣವನ್ನು ಶ್ಲೋಕವಾರ್ತಿಕದಲ್ಲಿ ಖಂಡಿಸಿದೆ; ಧರ್ಮಕೀರ್ತಿಯು ಕುಮಾರಿಲರಿಗೆ ಸಂಮತವಾದ ವೇದಪ್ರಾಮಾಣ್ಯವನ್ನು ತನ್ನ ಪ್ರಮಾಣವಾರ್ತಿಕದಲ್ಲಿ ಖಂಡಿಸಿರುತ್ತಾನೆ. ನಮಗೆ ದೊರೆತಿರುವ ಧರ್ಮಕೀರ್ತಿಯ 'ಪ್ರಮಾಣವಾರ್ತಿಕ'ದಮೇಲೆ ಪ್ರಜ್ಞಾಕರಗುಪ್ತನೆಂಬವನು ಬರೆದಿರುವ ಭಾಷ್ಯಪುಸ್ತಕದಲ್ಲಿ ತ್ರಿಪಿಟಕಾಚಾರ್ಯಮಹಾಪಂಡಿತ ರಾಹುಲಸಾಂಕೃತ್ಯಾಯನರು ಬರೆದಿರುವ ಭೂಮಿಕೆಯಲ್ಲಿ ವೇದಪ್ರಾಮಾಣ್ಯವನ್ನು ಖಂಡಿಸುವ ಈ ಶ್ಲೋಕವಿದೆ :

ಅಪೌರುಷೇಯತಾಪೀಷ್ಟಾ ಕರ್ತ್ರೂಣಾಮಸ್ಮೃತೇಃ ಕಿಲ ।
ಸಂತ್ಯಸ್ಯಾಪ್ಯನುವಕ್ತಾರ ಇತಿ ಧಿಗ್ ವ್ಯಾಪಕಂ ತಮಃ ॥

(೨೪೩, ಪ್ರ ವಾ. ಭಾ, ಭೂ. ಪುಟ, ೫)

ಇದರಿಂದ ಧರ್ಮಕೀರ್ತಿಯು ವೇದಾಪೌರುಷೇಯತ್ವವಾದವನ್ನು ಖಂಡನೆ ಮಾಡಿರುವದು ಗೊತ್ತಾಗುತ್ತದೆ. ಈ ಕಾರಣದಿಂದ ಧರ್ಮಕೀರ್ತಿಯೂ ಕುಮಾರಿಲರೂ ಸಮಕಾಲಿಕರೆಂಬ ಕಥೆಗೆ ಪುಷ್ಟಿಬರುತ್ತದೆ. ಕುಮಾರಿಲರಿಗೆ ಕೇವಲ ಮಹಾಯಾನವೇ ಅಲ್ಲದೆ, ಪಾಲಿಭಾಷೆಯಲ್ಲಿದ್ದ ಹೀನಯಾನದ ಬೌದ್ಧರ ಮತದ ಪರಿಚಯವೂ ಇತ್ತೆಂಬುದಕ್ಕೆ ತಂತ್ರವಾರ್ತಿಕದಲ್ಲಿ (ತಂ.ವಾ. ೧-೩-೬ ಪು. ೨೩೦, ೨೩೭) ನಿದರ್ಶನವಿದೆ.[1] ಆದ್ದರಿಂದಲೂ ಅವರು ದಕ್ಷಿಣದೇಶದವರಾಗಿರುವ ಸಂಭವವು ಹೆಚ್ಚಾಗಿದೆ. ಮ್ಲೇಚ್ಛರ ಅಪಶಬ್ದಗಳನ್ನು ಅಗ್ರಾಹ್ಯವೆಂದು ಹೇಳುವ ಪ್ರಸಕ್ತಿಯಿಂದ ಚೋರ್ (ಅನ್ನ), ಅತರ್ (ಮಾರ್ಗ), ಪಾಂಪ್ (ಹಾವು), ಮಾಲ್ (ಸ್ತ್ರೀ), ವಯಿರ್ (ಹೊಟ್ಟೆ)-ಇವನ್ನು ಚೋರ, ಅಂತರ, ಪಾಪ, ಮಾಲಾ, ವೈರಿ- ಎಂದು ತಿರುಗಿಸಿಕೊಂಡು ಆರ್ಯರು ಅರ್ಥಾಂತರ

---

1. 'ಉತ್ಪಾದಾದ್ವಾ ತಥಾಗತಾನಾಮನುತ್ಪಾದಾದ್ವಾ ಸ್ಥಿತೈವೇಯಂ ಧರ್ಮನಿತ್ಯತಾ' ಎಂಬ ಮಹಾಯಾನವಾಕ್ಯವನ್ನು ಇಲ್ಲಿ ಉದಾಹರಿಸಿದೆ. 'ಮಾಮ ವಿಹಿ ಭಿಕ್ಖವೇ ಕಮ್ಮವಚ್ಚ ಇಸೀ ಸವೇ।' ತಥಾ ಉಕಖಿತ್ತೇ ಲೋಡಮ್ಹಿ ಉದ್ವೇ ಅತ್ಥಿ ಕಾರಣಮ್! ಪಡಹೇಣತ್ಥಿ ಕಾರಣಮ್। ಅಣುಭವೇ ಕಾರಣಂ ಇಮೇ ಸಂಕಡಾ ಧಮ್ಮಾ ಸಂಭವನ್ತಿ ಸಕಾರಣಾ ಅಕಾರಣಾ ವಿಣಸನ್ತಿ। (ಮಮಾಪಿ ಭಿಕ್ಷವಃ ಕರ್ಮ ವರ್ತತ ಏವ ಆ ಶರೀರಪಾತಾತ್। ಉತ್ಕ್ಷಿಪ್ತೇ ಲೋಷ್ಟೇ ಉತ್ಕ್ಷೇಪೇ ಅಸ್ತಿ ಕಾರಣಂ ಪತನೇ ನಾಸ್ತಿ ಕಾರಣಮ್। ಅಸ್ತ್ಯುದ್ಭವೇ ಕಾರಣಮ್ ಇಮೇ ಸಂಸ್ಕೃತಾ ಧರ್ಮಾಃ ಸಂಭವನ್ತಿ ಸಕಾರಣಾ ಅಕಾರಣಾ ವಿನಶ್ಯನ್ತಿ।) ಈ ಪಾಳಿಭಾಷೆಯ ವಾಕ್ಯಗಳು ಬುದ್ಧನಿಗೂ ಶರೀರಪಾತದವರೆಗೂ ಕರ್ಮವುಂಟು. ವಸ್ತುಗಳ ಹುಟ್ಟಿಗೆ ಕಾರಣವಿದ್ದರೂ ನಾಶಕ್ಕೆ ಕಾರಣವಿಲ್ಲ ಎಂಬರ್ಥದಲ್ಲಿ ಬಂದಿವೆ.

ವಾಚಕವಾಗಿ ಭಾವಿಸಿಕೊಳ್ಳುತ್ತಿರುವರೆಂದು ವಿವರಿಸಿರುತ್ತಾರೆ (ತಂ .ವಾ. ೧–೩–೫,[1] ಪು, ೨೨೫–೨೨೬), ಇದು ದಕ್ಷಿಣದೇಶದವರಿಗೇ ಹೆಚ್ಚು ಸಾಧ್ಯ. ಮಿಕ್ಕ ಭಾಷೆಗಳನ್ನೂ ಅವರು ಪರಾಮರ್ಶಿಸಿರುವದು ನಿಜ. 'ತದ್ಯದಾ ದ್ರವಿಡಾದಿ ಭಾಷಾಯಾಮೀದೃಶೀ ಸ್ವಚ್ಛನ್ದಕಲ್ಪನಾ, ತದಾ ಪಾರಸೀ–ಬರ್ಬರ– ಯವನ-ರೌಮಕಾದಿಭಾಷಾಸು ಕಿಂ ವಿಕಲ್ಪ್ಯ ಕಿಂ ಪ್ರತಿಪತ್ಸ್ಯನ್ತ ಇತಿ ನ ವಿದ್ಮಃ' (ತಂ. ವಾ. ೧–೩–೫, ಪು. ೨೨೬) ಎಂದಿದಾರೆ. ದ್ರಾವಿಡಾದಿಭಾಷೆಗಳಲ್ಲಿಯೇ ಹೀಗಿರುವಲ್ಲಿ ಪಾರಸೀ, ಬರ್ಬರ, ಯವನ, ರೋಮನ್–ಮುಂತಾದ ಭಾಷೆ ಗಳಲ್ಲಿ ಏನೇನು ಕಲ್ಪಿಸಿಕೊಂಡು ಏನೇನು ತಿಳಿಯುತ್ತಾರೋ ಅರಿಯೆವು ಎಂದು ಬರೆದಿರುವದನ್ನು ನೋಡಿದರೆ ಅವರಿಗೆ ತಮಿಳುಭಾಷೆ ಹೆಚ್ಚುಹತ್ತಿರ, ಪಾರಸ್ಯಾದಿಭಾಷೆಗಳು ದೂರ–ಎಂಬ ಭಾವನೆ ಇತ್ತೆಂದು ಕಲ್ಪಿಸುವದಕ್ಕೆ ಅವಕಾಶ ವಾಗುತ್ತದೆ. ಶಾಲಿಕಾನಾಥನು 'ವಾರ್ತಿಕಕಾರಮಿಶ್ರ' ಎಂಬ ಹೆಸರನ್ನು ಉತ್ತರದೇಶದವರ ಉಪಾಧಿಯನ್ನು ಸೂಚಿಸುವದಕ್ಕೆ ಬರೆದನೆಂಬ ವಾದವು ನಮಗೆ ಅಷ್ಟು ಒಪ್ಪಾಗಿಲ್ಲ. ಏಕೆಂದರೆ 'ಮಿಶ್ರ' ಎಂಬ ಹೆಸರು ಸಂಸ್ಕೃತದಲ್ಲಿ ಗೌರವಸೂಚಕವಾಗಿದೆ ; 'ಗುರುಚರಣಾಃ', ತಾತಪಾದಾಃ' ಎಂಬಂತೆ 'ವಾರ್ತಿಕ ಕಾರಮಿಶ್ರಾಃ' ಎಂದೂ ಗೌರವಾರ್ಥವಾಗಿ ಉಪಯೋಗಿಸುವದರಲ್ಲಿ ಯಾವ ಆತಂಕವೂ ಕಾಣುವದಿಲ್ಲ. ಯಾವದಾದರೊಂದು ಸಂಜ್ಞಾನಾಮದೊಡನೆ ಪ್ರಯೋಗಿಸಿದಾಗ ಮಾತ್ರ ಉದಾಹರಣೆಗೆ 'ವಾಚಸ್ಪತಿಮಿಶ್ರ', 'ಮಣ್ಡನಮಿಶ್ರ' ಎಂಬಲ್ಲಿ 'ರಾಮಭಟ್ಟ', 'ರಾಮಶಾಸ್ತ್ರಿ', ಎಂಬಂತೆ ಆಯಾ ದೇಶದಲ್ಲಿ ಬಳಕೆ ಯಲ್ಲಿರುವ ಉಪಾಧಿಯ ಸಂಕೇತವೆಂದು ಪರಿಗಣಿಸಬಹುದಾಗಿದೆ. ಆದ್ದರಿಂದ ಭಟ್ಟರು ಉತ್ತರದೇಶದವರೆನ್ನುವದಕ್ಕೆ ಇನ್ನೂ ಹೆಚ್ಚಿನ ಉಪಪತ್ತಿಯು ಬೇಕೆಂತ ಹೇಳಬೇಕಾಗಿದೆ.

## ಆಚಾರ್ಯರಿಗೆ ಭಟ್ಟಪಾದರ ಸುದ್ದಿ ತಿಳಿದದ್ದು ಎಲ್ಲಿ ?

೮೭. ಮಾಧವೀಯದಲ್ಲಿ ಆಚಾರ್ಯರು ಭಟ್ಟರನ್ನು ಜಯಿಸುವದಕ್ಕೆಂದು ಮೊದಲು ಪ್ರಯಾಗಕ್ಕೆ ಬಂದರು (ಪ್ರಯಾಗಮಾಗಾತ್ ಪ್ರಥಮಂ ಜಿಗೀಷುಃ ಕುಮಾರಿಲಂ ಸಾಧಿತಕರ್ಮಜಾಲಮ್ ಮಾ. ಶಂ. ೭–೬೨) ಎಂದಿದೆಯಷ್ಟೆ ? ಚಿದ್ವಿಲಾಸೀಯ ಮತ್ತು ಅನಂತಾನಂದಗಿರೀಯ– ಇವುಗಳಲ್ಲಿ ಅವರು ದಕ್ಷಿಣದಲ್ಲಿ ಈ ಪ್ರಾಯಶ್ಚಿತ್ತವನ್ನು ಮಾಡಿಕೊಂಡರು ಎಂದಿದೆ.

ಚಿದ್ವಿಲಾಸೀಯದಲ್ಲಿ ಆಚಾರ್ಯರು ಕಾಶಿಯಲ್ಲಿದ್ದುಕೊಂಡು ದುರ್ಮತ ಗಳನ್ನು ಖಂಡಿಸುತ್ತಾ ವಾದಿಗಳನ್ನು ಅದ್ವೈತಕ್ಕೆ ತಿರುಗಿಸುತ್ತಿರುವಲ್ಲಿ ಒಬ್ಬ

1. ತಂತ್ರವಾರ್ತಿಕ (ಆನಂದಾಶ್ರಮಮುದ್ರಿತ)ದ ಪುಟಗಳಿವು.

ಬ್ರಾಹ್ಮಣನು ಬಂದು 'ಕುಮಾರಿಲಭಟ್ಟನೆಂಬ ಶಾಸ್ತ್ರಜ್ಞನು ಬೌದ್ಧರಲ್ಲಿ ಶಿಕ್ಷಣ ವನ್ನು ಹೊಂದಿ ಅವರ ಮತವನ್ನು ಖಂಡಿಸುತ್ತಿರುತ್ತಾನೆ' ಎಂದು ಹೇಳಲು ಆ ಮಾತನ್ನು ಕೇಳಿದ ಆಚಾರ್ಯರು ಆ ಬ್ರಾಹ್ಮಣನೊಡನೆ ರುದ್ಧನಗರಕ್ಕೆ ಬಂದರು (ಚಿ. ಶಂ. ೧೫–೪೪ರಿಂದ ೫೫) ಎಂದಿದೆ.

**ಅನಂತಾನಂದಗಿರೀಯದಲ್ಲಿ :** ಶ್ರೀಶೈಲದಲ್ಲಿ ಆಚಾರ್ಯರು ಒಂದು ತಿಂಗಳು ಇದ್ದರು. ಒಮ್ಮೆ ರುದ್ಧನಗರದಿಂದ ಬ್ರಾಹ್ಮಣರು ಬಂದು 'ಭಟ್ಟಾಚಾರ್ಯನೆಂಬ ಒಬ್ಬ ಬ್ರಾಹ್ಮಣಶ್ರೇಷ್ಠನು ಉತ್ತರದೇಶದಿಂದ ಬಂದು ದುಷ್ಟಮತಾವಲಂಬಿಗಳಾದ ಅಗಣಿತಜೈನರನ್ನು ಅನೇಕ ವಿದ್ಯಾಪ್ರಸಂಗಗಳಿಂದ ಜಯಿಸಿ ರಾಜನ ಮೂಲಕ ದುಷ್ಟಮತಧ್ವಂಸವನ್ನು ಮಾಡುತ್ತಾ ನಿರ್ಭಯದಿಂದಿರುತ್ತಾನೆ' ಎಂದು ಹೇಳಿದರು. ಆ ಅದ್ಭುತಕರ್ಮದ ಸುದ್ದಿಯನ್ನು ಕೇಳಿದ ಆಚಾರ್ಯರು ಶಿಷ್ಯಸಮೇತರಾಗಿ ರುದ್ಧನಗರಕ್ಕೆ ಬಂದರು (ಆ. ಶಂ. ೫೫, ಪು. ೨೧೦ ; ಜೇ. ಪು. ೨೧೦) ಎಂದಿದೆ. ಹೀಗೆ ಆಚಾರ್ಯರಿಗೆ ಭಟ್ಟರ ತುಷಾಗ್ನಿಪ್ರಾಯಶ್ಚಿತ್ತ ವಿಚಾರವು ತಿಳಿದದ್ದು ವ್ಯಾಸಾಚಲಮಾಧವೀಯಗಳಂತೆ ಪ್ರಯಾಗದಲ್ಲಿ, ಚಿದ್ವಿಲಾಸೀಯದಂತೆ ಕಾಶಿಯಲ್ಲಿ, ಆನಂದಗಿರಿಯಂತೆ ಶ್ರೀಶೈಲದಲ್ಲಿ !

## ಭಟ್ಟರು ಮಾಡಿದ ಯಾವ ಪಾಪಕ್ಕೆ ಪ್ರಾಯಶ್ಚಿತ್ತ ?

೮೮. ಭಟ್ಟಪಾದರು ತಾವು ಮಾಡಿದ ಪಾಪಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡುಕೊಳ್ಳುತ್ತಿರುವದಾಗಿ ಹೇಳಿದ್ದರ ವಿವರವು ಒಂದೊಂದು ಶಂಕರವಿಜಯ ದಲ್ಲಿ ಒಂದೊಂದು ಬಗೆಯಾಗಿದೆ. ಮಾಧವೀಯದಲ್ಲಿರುವ ಆ ವಿವರವನ್ನು ಹಿಂದೆ (೧೧೧) ತಿಳಿಸಿದ್ದೇವಷ್ಟೆ ? ಅಲ್ಲಿ ಹೇಳಿರುವದು ಭಟ್ಟರನ್ನು ಬೌದ್ಧರು ಉಪ್ಪರಿಗೆಯಿಂದ ಕೆಳಕ್ಕೆ ತಳ್ಳಿದರೆಂದು (ಪು. ೧೦೩). ಆದರೆ ಒಂದನೆಯ ಸರ್ಗದಲ್ಲಿ ಇದೇ ವಿಷಯವನ್ನು ಬೇರೊಂದು ಬಗೆಯಲ್ಲಿ ವರ್ಣಿಸಿದೆ. ಭಟ್ಟನು ಸುಧನ್ವನೆಂಬ ರಾಜನ ಬಳಿಗೆ ಬಂದು ವಾದದಲ್ಲಿ ಬೌದ್ಧರನ್ನು ಸೋಲಿಸಿದನು. ರಾಜನು ವೈದಿಕಪಕ್ಷಪಾತಿಯಾಗಿದ್ದರೂ ಬೌದ್ಧರನ್ನೇ ಕೃತ್ರಿಮಶ್ರದ್ಧೆಯಿಂದ ಹಿಂಬಾಲಿಸುತ್ತಿದ್ದನು (ಮಾ. ಶಂ ೧–೫೯). ಅವನು 'ಸೋಲುಗೆಲವುಗಳು ವಿದ್ಯೆಗೆ ಅಧೀನವಾಗಿರುವವು. ಆದ್ದರಿಂದ ನಿಮ್ಮಲ್ಲಿ ಯಾರಿಗೆ ಬೆಟ್ಟದ ಕೋಡುಗಲ್ಲಿನಿಂದ ಬಿದ್ದರೂ ಅಪಾಯವಾಗದೆ ಇರುವದೋ ಅವರ ಮತವೇ ನಿತ್ಯವೆಂದು ನಿಶ್ಚಯಿಸೋಣ' (೧–೬೩) ಎಂದನು. ಅದನ್ನು ಕೇಳಿ ಬೌದ್ಧರು ಒಬ್ಬರ ಮುಖವನ್ನೊಬ್ಬರು ನೋಡಿಕೊಳ್ಳುತ್ತಿದ್ದರು ; ಆದರೆ ಬ್ರಾಹ್ಮಣನು 'ವೇದಗಳು ಪ್ರಮಾಣವಾದರೆ ನನಗೆ ಯಾವ ಕ್ಷತಿಯೂ ಆಗದಿರಲಿ !' ಎಂದು ಕೂಗುತ್ತಾ ಕೆಳಕ್ಕೆ ಬಿದ್ದನು ; ಯಾವ ಗಾಯವೂ ಆಗದೆ ಅರಳೆಯ ಉಂಡೆಯಂತೆ ಕೆಳಕ್ಕೆ

ಬಿದ್ದನು. ವೇದವು ತನ್ನನ್ನು ಶರಣುಹೊಕ್ಕವರ ಕಷ್ಟವನ್ನು ತೊಲಗಿಸದೇನು ? (೧-೭೪ರಿಂದ ೭೭) ಎಂದು ಇದೇ ಕವಿ ವರ್ಣಿಸಿರುವದನ್ನು ಕಂಡು ಯಾರಿಗೆತಾನೆ ಆಶ್ಚರ್ಯವಾಗುವದಿಲ್ಲ ? ಏಳನೆಯ ಸರ್ಗದಲ್ಲಿ ಬೌದ್ಧರು ಭಟ್ಟರನ್ನು ಉಪ್ಪರಿಗೆಯಿಂದ ದೂಡಿದರು ? ಒಂದನೆಯ ಸರ್ಗದಲ್ಲಿ ಅವರೇ ಬಿದ್ದರು : ಏಳನೆಯ ಸರ್ಗದಲ್ಲಿ ಒಂದು ಕಣ್ಣು ಹೋಯಿತು, ಒಂದನೆಯ ಸರ್ಗದಲ್ಲಿ ಅಪಾಯವೇನೂ ಆಗಲೇ ಇಲ್ಲ ! ಈ ವ್ಯಾಹತೋಕ್ತಿಯಿಂದಲೂ ಕವಿ ತೃಪ್ತನಾಗಿಲ್ಲ. ಬೆಟ್ಟದಿಂದ ಬಿದ್ದು ವೇದಪ್ರಾಮಾಣ್ಯವನ್ನು ಸ್ಥಾಪಿಸುವದಕ್ಕೆ ಹೊರಟ ತಪ್ಪುಹಾದಿಯನ್ನು ತುಳಿದ ಅಪಾದನೆಯನ್ನೂ ಭಟ್ಟರ ತಲೆಯಮೇಲೆಯೇ ಹೊರಿಸಿರುತ್ತಾನೆ ! ಭಟ್ಟರು ಇಂಥ ಅದ್ಭುತದರ್ಶನಗಳಿಗೆ ಬೆಲೆಕೊಡುತ್ತಾರೆಂದು ನಂಬುವದಕ್ಕೆ ಯಾವ ಆಧಾರವೂ ಇಲ್ಲ ; ಏಕೆಂದರೆ ಬುದ್ಧನು ಮಾಡಿದನೆಂಬ ಅದ್ಭುತವನ್ನು ಶ್ಲೋಕವಾರ್ತಿಕದಲ್ಲಿ (ಚೋದನಾಸೂತ್ರ ೨, ಪುಟ. ೬೫)[1] ಹಾಸ್ಯಮಾಡಿರುತ್ತಾರೆ. ಬೌದ್ಧರು 'ಇದೇನೂ ಮತನಿರ್ಣಯಕ್ಕೆ ಸರಿಯಾದ ಪ್ರಮಾಣವಲ್ಲ, ಏಕೆಂದರೆ ಮಣಿಮಂತ್ರೌಷಧಿಗಳಿಂದ ಹೀಗೆ ದೇಹರಕ್ಷಣೆಯನ್ನು ಮಾಡಿಕೊಳ್ಳಬಹುದಾಗಿದೆ' (೧–೮೦) ಎಂದು ಹೇಳಿದಮೇಲೂ ರಾಜನು ಒಂದು ಗಡಿಗೆಯಲ್ಲಿ ಸರ್ಪವನ್ನಿಟ್ಟು 'ಇದರಲ್ಲೇನಿದೆ, ಹೇಳಿರಿ ; ನಿಜವನ್ನು ಹೇಳದೆಇದ್ದವರನ್ನು ಕಲ್ಲುಗಾಣದಲ್ಲಿ ಅರೆಯಿಸುವೆನು' (ಮಾ. ಶಂ. ೧–೮೨, ೮೩) ಎಂದು ಹೇಳಿದ್ದು ರಾಜನು ವಿದ್ಯಾಪಕ್ಷಪಾತಿಯಲ್ಲವೆಂದೇ ನಿಶ್ಚಯಮಾಡಿಕೊಟ್ಟಂತೆ ಆಗಿದೆ.

ಈ ಕಥೆಯನ್ನು ಮುಗಿಸಿದ್ದರಲ್ಲಿ ಇನ್ನೊಂದು ಪರಮಾಶ್ಚರ್ಯದ ಘಟನೆಯನ್ನು ಕವಿ ಹೇಳಿರುತ್ತಾನೆ, ಬೌದ್ಧರು ತಪಸ್ಸುಮಾಡಿ 'ಇದರಲ್ಲಿ ಹಾವಿದೆ'

---

1. ಸಾಂನಿಧ್ಯಮಾತ್ರತಸ್ತಸ್ಯ ಪುಂಸಶ್ಚಿನ್ತಾಮಣೇರಿವ ।
ನಿಃಸರನ್ತಿ ಯಥಾಕಾಮಂ ಕುಡ್ಯಾದಿಭ್ಯೋಽಪಿ ದೇಶನಾಃ ॥
ಏವಮಾದ್ಯುಚ್ಯಮಾನಂ ತು ಶ್ರದ್ಧಧಾನಸ್ಯ ಶೋಭತೇ ।
ಕುಡ್ಯಾದಿನಿಃಸೃತತ್ವಾಚ್ಚ ನಾಶ್ವಾಸೋ ದೇಶನಾಸು ನಃ ॥
ಕಿನ್ನು ಬುದ್ಧಪ್ರಣೀತಾಃ ಸ್ಯುಃ ಕಿಮು ಕೈಶ್ಚಿದ್ದುರಾತ್ಮಭಿಃ ।
ಅದೃಶ್ಯೈರ್ವಿಪ್ರಲಮ್ಭಾರ್ಥಂ ಪಿಶಾಚಾದಿಭಿರೀರಿತಾಃ ॥

(ಶ್ಲೋ. ವಾ. ಚೋದನಾಸೂತ್ರ ೧೩--೧೪೦)

ಬುದ್ಧನ ಸಾಂನಿಧ್ಯಮಾತ್ರದಿಂದ ಚಿಂತಾಮಣಿಯಿಂದುಂಟಾಗುವಹಾಗೆ ಗೋಡೆಯೇ ಮುಂತಾದವುಗಳಿಂದಲೂ ಯಥೇಷ್ಟವಾಗಿ ಉಪದೇಶಗಳು ಹೊರಬರುತ್ತವೆ–ಎಂಬ ಬೌದ್ಧರ ಹೇಳಿಕೆಯು ಶ್ರದ್ಧೆಯುಳ್ಳವನಿಗೆ ಒಪ್ಪಾದೀತು. ಆದರೆ ಗೋಡೆಗಳಿಂದ ಬಂದ ಉಪದೇಶಗಳಲ್ಲಿ ನಮಗೆ ವಿಶ್ವಾಸವಿಲ್ಲ. ಅವು ಬುದ್ಧನೇ ಮಾಡಿದವುಗಳೊ, ಅಥವಾ ಅದೃಶ್ಯವಾದ ಕೆಲವು ದುಷ್ಟ ಪಿಶಾಚಿಗಳು ಮೋಸಮಾಡುವದಕ್ಕಾಗಿ ಹೇಳಿದ ಮಾತುಗಳೊ–ಎಂದು (ನಮಗೆ ಸಂದೇಹವಿದೆ). ಆದ್ದರಿಂದ ಆ ಉಪದೇಶಗಳಲ್ಲಿ ನಮಗೆ ನಂಬಿಕೆಯಿಲ್ಲ ಎಂದು ಶ್ಲೋಕಗಳ ಅರ್ಥ.

ಎಂಬರು ; ಭಟ್ಟರು 'ಅವರಲ್ಲಿ ಪಾಪಶಾಲಿಯಾದ ವಿಷ್ಣು ವಿದ್ದಾನೆ' (೧–೮೭) ಎಂಬರು ! ನಾನು ಗುರುಗಳಾದ ಬೌದ್ಧರ ಕುಲವನ್ನೇ ನಾಶಮಾಡಿದ್ದು, ಈಶ್ವರನನ್ನು ನಿರಾಕರಿಸಿದ್ದು– ಈ ಎರಡು ತಪ್ಪುಗಳಿಗಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಿದೇನೆ' (೭–೧೦೦, ೧೦೧, ೧೦೩)–ಎಂದ ಭಟ್ಟರ ಮಾತುಗಳು ಎರಡೂ ಇದರಿಂದ ಸುಳ್ಳಾದವು: ಏಕೆಂದರೆ ಒಂದನೆಯ ಸರ್ಗದಂತೆ ಅವರು ಬೌದ್ಧರನ್ನು ವಾದದಲ್ಲಿ ಜಯಿಸಿದರೇ ಹೊರತು ಗುರುದ್ರೋಹವನ್ನು ಮಾಡಲಿಲ್ಲ, ಈಶ್ವರನನ್ನು ಒಪ್ಪಿ ವಿಷ್ಣುವು ಗಡಿಗೆಯಲ್ಲಿದ್ದಾನೆಂಬರೇ ಹೊರತು ಈಶ್ವರ ನಿರಾಕರಣೆಯನ್ನು ಮಾಡಲಿಲ್ಲ ! ಭಟ್ಟರು ಈಶ್ವರನನ್ನು ನಿರಾಕರಿಸಿದರೆಂಬುದು ಮಾಧವನ ವಾಕ್ಯಕ್ಕೆ ವಿರುದ್ಧವೆಂಬುದೇ ಅಲ್ಲದೆ ವಸ್ತುಸ್ಥಿತಿಗೂ ವಿರುದ್ಧವಾಗಿದೆ. ಏಕೆಂದರೆ ಶ್ಲೋಕವಾರ್ತಿಕದಲ್ಲಿ ಅವರು ಹೀಗೆಂದು ಬರೆದಿದ್ದಾರೆ. "ಪ್ರಾಯೇಣೈವ ಹಿ ಮೀಮಾಂಸಾ ಲೋಕೇ ಲೋಕಾಯತೀಕೃತಾ । ತಾಮಾಸ್ತಿಕಪಥೇ ನೇತುಮಯಂ ಯತ್ನಃ ಕೃತೋ ಮಯಾ॥" (ಶ್ಲೋ. ವಾ. ೧–೧೦) ಲೋಕದಲ್ಲಿ ಒಲುಮಟ್ಟಿಗೆ ಮೀಮಾಂಸಾಶಾಸ್ತ್ರವನ್ನು ಲೋಕಾಯತದರ್ಶನವಾಗಿಸಿಬಿಟ್ಟಿರುತ್ತಾರೆ ; ಅದನ್ನು ಆಸ್ತಿಕಮಾರ್ಗಕ್ಕೆ ತರುವದಕ್ಕೆ ಈ ಪ್ರಯತ್ನವನ್ನು ಮಾಡಿರುತ್ತೇನೆ–ಎಂದು ಶ್ಲೋಕದ ಅರ್ಥ. ಅದೇ ಗ್ರಂಥದಲ್ಲಿ ಮೊಟ್ಟಮೊದಲನೆಯ ಮಂಗಲಶ್ಲೋಕದಲ್ಲಿಯೇ 'ವಿಶುದ್ಧಜ್ಞಾನದೇಹಾಯ ತ್ರಿವೇದೀದಿವ್ಯಚಕ್ಷುಷೇ । ಶ್ರೇಯಃಪ್ರಾಪ್ತಿನಿಮಿತ್ತಾಯ ನಮಃ ಸೋಮಾರ್ಧಧಾರಿಣೇ ॥' ( ಶ್ಲೋ. ವಾ. ೧ ) ಎಂದು ಅವರು ಚಂದ್ರಾರ್ಧಶೇಖರನಾದ ಈಶ್ವರನನ್ನು ಸ್ತುತಿಸಿರುತ್ತಾರೆ

## ಭಟ್ಟರು ಬೌದ್ಧರನ್ನು ಕೊಲ್ಲಿಸಿದರೆ ?

೮೯. ಚಿದ್ವಿಲಾಸೀಯದಲ್ಲಿ ಬೌದ್ಧರಲ್ಲಿ ಗುರುಕುಲವಾಸಮಾಡಿದ ಕಥೆಯೇನೋ ಇದೆ. ಆದರೆ ಅಲ್ಲಿ ಉಪ್ಪರಿಗೆಯಿಂದ ತಳ್ಳಿದ ಮಾತಿಲ್ಲ. 'ನಿನ್ನ ಕಣ್ಣಿನಲ್ಲಿ ನೀರೇಕೆ ಬಂತು ?' ಎಂದು ಕೇಳಿದ್ದಕ್ಕೆ ನಿಮ್ಮ ಗುರುಗಳ ಯುಕ್ತಿಯನ್ನು ಕೇಳಿ ಆನಂದವಾದದ್ದಕ್ಕೆ (ಯುಕ್ತೀರಾಕರ್ಣ್ಯ ನಿರ್ಣಿಕ್ತಾ ಭವದ್ದೇಶಿಕ ನಿರ್ಮಿತಾಃ । ಸಮುದ್ಯನ್ನಿರ್ಭರಾನನ್ದತುನ್ದಿಲಾವಶಚೇತಸಃ । ನಿಸಸ್ರುರಶ್ರುವ್ಯಾಜೇನ ಬಹಿರಾನನ್ದಬಿನ್ದವಃ॥' (ಚಿ. ಶಂ. ೧೬–೧೬, ೧೭) ಎಂದು ಭಟ್ಟರು ಸುಳ್ಳು ಹೇಳಿದರು. ಇವರನ್ನು ಬ್ರಾಹ್ಮಣರೆಂದು ತಿಳಿದ ಬೌದ್ಧರು ತಮ್ಮ ಜೊತೆಗೇ ಸೇರಿಸಿಕೊಳ್ಳದೆ ದೂರಮಾಡಲು ತಾವೇ ಹೊರಕ್ಕೆ ಬಂದರು (ವಿಜ್ಞಾಯ ತದ್ವಿನಿಷ್ಕ್ರಮ್ಯ, ಚಿ. ಶಂ ೧೬–೧೯) ; ಬೌದ್ಧರನ್ನು ವಾದದಲ್ಲಿ ಜಯಿಸಿ ರಾಜನಿಂದ ಅವರ ತಲೆಗಳನ್ನು ಕಡಿಸಿದರು– (ವಿಜ್ಞಾಪ್ಯ ತನ್ಮಹೀಶ್ವರಮ್ । ಶಿರಾಂಸಿ ಚ್ಛೇದಯಾಮಾಸ ಸೌಗತಾನಾಂ ಸಮನ್ತತಃ॥ ೧೬–೨೦)–ಎಂದಿಷ್ಟೇ ಇದೆ.

ಇಲ್ಲಿ ರಾಜನಿಂದ ಬೌದ್ಧರ ತಲೆಗಳನ್ನು ಭಟ್ಟರು ಕಡಿಸಿದರೆಂದು ಬರೆದಿರುವದನ್ನು ಲಕ್ಷಿಸಬೇಕು. ಮಾಧವೀಯದಲ್ಲಿಯೂ ಸರ್ಪಪರೀಕ್ಷೆಯಲ್ಲಿ ಕುಮಾರಿಲರಿಗೇ ಅಶರೀರವಾಣಿಯ ಬಲದಿಂದ ಜಯವಾದ ಮೇಲೆ, 'ಆಸೇತೋರಾತುಷಾರಾದ್ರೇಃ ಬೌದ್ಧಾನಾವೃದ್ಧಬಾಲಕಮ್ | ನ ಹನ್ತಿ ಯಃ ಸ ಹನ್ತವ್ಯೋ ಭೃತ್ಯಾನಿತ್ಯನ್ವಶಾನ್ನೃಪಃ ||' (ಮಾಂ. ಶಂ. ೧-೯೩). 'ಸೇತುವಿನಿಂದ ಹಿಮಾಚಲದವರೆಗಿರುವ ಬೌದ್ಧರನ್ನು, ಮುದುಕರು ಮಕ್ಕಳನ್ನು ಕೂಡ, ಯಾವನು ಕೊಲ್ಲುವದಿಲ್ಲವೋ ಅವನನ್ನು ಕೊಲ್ಲತಕ್ಕದ್ದು- ಎಂದು ಭೃತ್ಯರಿಗೆ ರಾಜನು ಅಪ್ಪಣೆಮಾಡಿದನು'-ಎಂದಿದೆ. ಇದರಂತೆ ಅನಂತಾನಂದಗಿರೀಯದಲ್ಲಿಯೂ 'ರಾಜಮುಖಾದನೇಕವಿದ್ಯಾಪ್ರಸಙ್ಗಪ್ರಭೇದೈರ್ನಿರ್ಜಿತ್ಯ ತೇಷಾಂ ಶೀರ್ಷಾಣಿ ಪರ್ವ (?) ಭಿಶ್ಭಿತ್ವಾ ಝಾವಾನಲೇಷು (ದಾವಾನಲೇಷು ?) ನಿಕ್ಷಿಪ್ಯ ಶಙ್ಖ(?)ಭ್ರಮಣೈಶ್ಚೂರ್ಣೀಕೃತ್ಯ[1] ಚೈವಂ ದುಷ್ಟಮತಧ್ವಂಸಮಾಚರನ್ ನಿರ್ಭಯೋ ವರ್ತತೇ' (ಪ್ರ. ೫೫-ಪು. ೨೧೦, ೨೧೧) ಎಂದು ತಲೆಗಳನ್ನು ಕತ್ತರಿಸಿ ಪುಡಿಮಾಡಿ ಕಾಡುಗಿಚ್ಚಿಗೆ ಹಾಕಿಸಿದನು -ಎಂದಿದೆ. ಇದು ನಿಜವಾದರೆ ರಾಜರ ಸಹಾಯದಿಂದ ಭಟ್ಟರು ಬೌದ್ಧರನ್ನು ಬಹಳವಾಗಿ ಹಿಂಸೆಮಾಡಿದರೆಂದೂ ಲಕ್ಷೋಪಲಕ್ಷಬೌದ್ಧರು ಬ್ರಾಹ್ಮಣಮತದ ಅಭಿಮಾನಿಗಳಿಂದ ಹತರಾದರೆಂದೂ ನಂಬಬೇಕಾಗುವದು. ಹೀಗೆ ಹಿಂದುಗಳ ಹಿಂಸೆಯಿಂದ ಬೌದ್ಧಮತವು ಭರತಖಂಡದಲ್ಲಿ ಖಿಲವಾಯಿತೆಂಬುದಕ್ಕೆ ಬೌದ್ಧರಲ್ಲಿಕೂಡ ಯಾವ ಪ್ರಮಾಣವೂ ಇಲ್ಲ. ಹಿಂದುಗಳು ಕಾಲಕ್ರಮದಲ್ಲಿ ತಮ್ಮ ಮತದಲ್ಲಿ ಸೇರಿಕೊಂಡಿದ್ದ ದೋಷಗಳನ್ನು ನಿವಾರಿಸಿಕೊಳ್ಳುತ್ತಲೂ ಬುದ್ಧನ ಉಪದೇಶಗಳಲ್ಲಿ ಉತ್ತಮವಾದವುಗಳನ್ನು ಸಾರಗ್ರಹಣದೃಷ್ಟಿಯಿಂದ ತಾವೂ ಆಚರಣೆಗೆ ತರುತ್ತಲೂ ಬಂದದ್ದರಿಂದಲೂ ಕೀಳುಜಾತಿಯವರನೇಕರು ಬೌದ್ಧಮತಕ್ಕೆ ಸೇರಿ ಅವರಲ್ಲಿ ದುರಾಚಾರಗಳು ಬೆಳೆದುಕೊಂಡದ್ದರಿಂದಲೂ ಈ ದೇಶದಲ್ಲಿ ಬೌದ್ಧಮತವು ಕಣ್ಮರೆಯಾಯಿತು. ಮುಂದೆ ಮುಸಲ್ಮಾನರ ಹಾವಳಿಯಿಂದಲೂ ಸ್ವಲ್ಪಮಟ್ಟಿಗೆ ಈ ದೇಶದಲ್ಲಿ ಬೌದ್ಧಮತವು ಮಸುಳಿಸಿತು- ಎಂದು ಇತಿಹಾಸದಿಂದ ತಿಳಿಯಬರುತ್ತದೆ. ಸುಧನ್ವರಾಜನು ಹಿಮಾಚಲದವರೆಗಿನ ದೇಶಗಳಿಗೆಲ್ಲ ಸಾರ್ವಭೌಮನಾಗಿದ್ದನೆಂಬುದಕ್ಕೆ ಐತಿಹಾಸಿಕ ಪ್ರಮಾಣವಿಲ್ಲ. ಆದ್ದರಿಂದ ಮಾಧವಾದಿಗಳು ಬರೆದಿರುವದು ಕಾವ್ಯದ ಅತಿಶಯೋಕ್ತಿಮಾತ್ರವೆಂದು ಭಾವಿಸಬೇಕಾಗಿದೆ.

1. ತೆಲುಗುಲಿಪಿಯ ಅಚ್ಚಿನ ಪುಸ್ತಕದಲ್ಲಿ ಅಕ್ಷರಗಳು ಸ್ಫುಟವಾಗಿಲ್ಲ. ನಮಗೆ ಕಂಡ ರೀತಿಯಲ್ಲಿ ಬರೆದುಕೊಂಡಿರುತ್ತೇವೆ, 'ಪರಶುಭಿಶ್ಛಿತ್ವಾ ಬಹುಷು ಉಲೂಖಲೇಷು ನಿಕ್ಷಿಪ್ಯ ಕಟಭ್ರಮಣೈಃ' ಎಂದು ದೇ. ಪ್ರ. ೧೮ರಲ್ಲಿರುವ ಪಾಠ.

## ಆಚಾರ್ಯರು ಭಟ್ಟರನ್ನು ಯಾವ ಸ್ಥಿತಿಯಲ್ಲಿ ಕಂಡರು ?

೯೦. ಆಚಾರ್ಯರು ಬಂದಾಗ ಭಟ್ಟರು ತುಷರಾಶಿ (ಹೊಟ್ಟಿನ ರಾಶಿ) ಯಲ್ಲಿದ್ದರೆಂದೂ **ಪ್ರಭಾಕರನೇ** ಮುಂತಾದ ಶಿಷ್ಯರು[1] ಕಣ್ಣೀರಿಡುತ್ತಾ ನಿಂತಿದ್ದರೆಂದೂ (ಮಾ. ಶಂ. ೭-೭೭) **ಮಾಧವೀಯ**ದಲ್ಲಿದೆ. ಅವರ ಶರೀರವು ಆಗಲೆ ಅರ್ಧ ಸುಟ್ಟುಹೋಗಿತ್ತು (ತಥಾಪ್ಯರ್ಧವಿದಗ್ಧಸ್ಯ ಜೀವನಂ ಸ್ಯಾತ್ಕಥಂ ಪುನಃ ಚಿ. ಶಂ. ೧೬-೩೦) ಎಂದು **ಚಿದ್ವಿಲಾಸೀಯ**ದಲ್ಲಿದೆ. ಅವರು ನೂರೆಂಟು ಖಾರಿಕಾಪ್ರಮಾಣದ ಬೆರಣಿಯ ಒಟ್ಟಿನಮೇಲೆ ಹೋಮಾಗ್ನಿಯನ್ನು ಹಾಕಿ ಕ್ರಮಕ್ರಮವಾಗಿ ಸುಟ್ಟುಹೋಗಬೇಕೆಂದು ನಿಶ್ಚಯಿಸಿದ್ದರು (ಅಷ್ಟೋತ್ತರಶತತೂಲಿಕಾ (ಖಾರಿಕಾ)ಪ್ರಮಾಣಜಾಗ(ಕ ?)ರೀಷೋಪರಿ ಹೋಮಾಗ್ನಿನಾ ಪಾಠತಃ ಕ್ರಮಾದ್ದಗ್ಧೇ ನಿವಸಿತವ್ಯಮ್' (ಪ್ರ. ೫೫-ಪು. ೨೧೧)[2] ಎಂದು **ಆನಂತಾನಂದಗಿರೀಯ**ದಲ್ಲಿದೆ.

ಈ ವಾಕ್ಯಗಳನ್ನೆಲ್ಲ ಹೊಂದಿಸಿ, ಕುಮಾರಿಲಭಟ್ಟರು ಯಾವ ಪ್ರಾಯಶ್ಚಿತ್ತವನ್ನು ಎಲ್ಲಿ ಹೇಗೆ ಮಾಡಿಕೊಂಡರು ? ಅವರು ಯಾವ ಸ್ಥಿತಿಯಲ್ಲಿದ್ದಾಗ ಆಚಾರ್ಯರು ಅವರನ್ನು ಕಂಡರು ? -ಎಂಬಿದನ್ನು ನಿರ್ಣಯಿಸುವದು ನಮ್ಮಂಥವರಿಗೆ ಸಾಧ್ಯವಲ್ಲ.

## ಭಟ್ಟರಿಗೆ ಪ್ರಾಯಶ್ಚಿತ್ತವಾದದ್ದು ಎಲ್ಲಿ ?

೯೧. ಚಿದ್ವಿಲಾಸೀಯದಲ್ಲಿಯೂ ಆನಂದಗಿರೀಯದಲ್ಲಿಯೂ ಹೇಳಿರುವ **'ರುದ್ಧಪುರಿ'** ಯಾವದು ? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವದೂ ಕಷ್ಟ. **ಭದ್ರಸೇನ**ನೆಂಬ ರಾಜನು ಆಳುತ್ತಿದ್ದ **'ರುದ್ಧಪುರ'**ವೇ ಅದು ಎಂದು ಎನ್. ಕೃಷ್ಣಸ್ವಾಮಿ ಅಯ್ಯರವರ (CNKS. p. 38)ಊಹೆ. ಪೆನುಗೊಂಡೆಯ ಹತ್ತಿರವಿದ್ದ **ರೊದ್ದ** ಎಂಬ ಸ್ಥಳವೇ ಅದಾಗಿರಬಹುದು (ಸೋ. ಶಂ. ಪು. ೯೭) ಎಂದು ಸೋಮನಾಥಯ್ಯನವರ ಕಲ್ಪನೆ. ಭಟ್ಟರು ಪ್ರಾಯಶ್ಚಿತ್ತವನ್ನು ಮಾಡಿಕೊಂಡದ್ದು ಪ್ರಯಾಗದಲ್ಲಿಯೆ, ರುದ್ಧಪುರಿಯಲ್ಲಿಯೆ ? -ಎಂಬಿದನ್ನು ನಿಶ್ಚಯಿಸುವದಕ್ಕೆ ನಮಗೆ ಯಾವ ಆಧಾರವೂ ಇಲ್ಲ. ಭಟ್ಟರು ಉತ್ತರದೇಶದಿಂದ ಬಂದವರು ಎಂಬ **ಆನಂದಗಿರೀಯ** ವಚನವು ನಿಜವಾದರೆ ಅವರು ದಕ್ಷಿಣಕ್ಕೆ ಬಂದು ನೆಲಸಿ ಅಲ್ಲಿಯೇ ಬೌದ್ಧಾದಿಗಳನ್ನು ಖಂಡಿಸಿದರೆಂದು ಕಲ್ಪಿಸಬಹುದಾಗುವದು ;

---

1. ಪ್ರಭಾಕರನು ಭಟ್ಟರ ಶಿಷ್ಯನೆಂದು ನಿಶ್ಚಿತವಾಗಿಲ್ಲ, ಪ್ರಭಾಕರನು ಭಟ್ಟರಿಗಿಂತ ಹಿಂದಿನ ಕಾಲದವನೆಂದು ಕೆಲವರ ವಾದ (ಬಲ. ಶಂ. ಪು. ೬೫).

2. 'ಕಾ (ಖಾ ?)ರಿಕಾ ಪ್ರಮಾಣೋಪತ್ಯಕಾಕರೀಪೋಪರಿ....ವಗ್ಧೇನ ವಸಿತವ್ಯಮ್ ।' ಎಂದೇ ದೇ. ಪು. ೧೫-ರ ಪಾಠ.

ತಂತ್ರವಾರ್ತಿಕದಲ್ಲಿ ಕಾಣಬರುವ ಭಟ್ಟರ ದ್ರಾವಿಡಭಾಷೆಯ ಪರಿಚಯವೂ ಆ ಕಲ್ಪನೆಗೆ ಬೆಂಬಲವನ್ನು ಕೊಡುತ್ತದೆ. ಹೇಗೂ ಇದೆಲ್ಲ ಕಲ್ಪನಾಮಾತ್ರವೇ ಎಂಬುದನ್ನು ಮರೆಯುವಂತಿಲ್ಲ. ಪ್ರಯಾಗದಲ್ಲಿ ಆತ್ಮಹತ್ಯೆಮಾಡಿಕೊಂಡರೆ ದೋಷವಿಲ್ಲವೆಂದು ಹೇಳಿಕೆಯಿರುವದರಿಂದ ಭಟ್ಟರು ಪ್ರಯಾಗದಲ್ಲಿಯೇ ತುಷಾಗ್ನಿ ಪ್ರವೇಶವನ್ನು ಮಾಡಿರಬಹುದು ಎಂಬ ಸೋಮನಾಥಯ್ಯನವರ ಕಲ್ಪನೆ (ಸೋ. ಶಂ. ೯೬) ಸರಿಯಲ್ಲ. ಏಕೆಂದರೆ ಪ್ರಾಯಶ್ಚಿತ್ತವೆಂಬುದು ಶಾಸ್ತ್ರವಿಹಿತ ವಾದ್ದರಿಂದ ಅದರಲ್ಲಿ ಆತ್ಮಹತ್ಯೆಯ ಪ್ರಸಕ್ತಿಯೇ ಬರುವದಿಲ್ಲ.

## ಆಚಾರ್ಯರಿಗೂ ಭಟ್ಟರಿಗೂ ನಿಜವಾಗಿ ಸಮಾಗಮವಾಯಿತೆ?

೯೨. ಶಂಕರಾಚಾರ್ಯರು ಭಟ್ಟರನ್ನು ನಿಜವಾಗಿ ಸಂಧಿಸಿದರೆ?–ಎಂಬುದೊಂದು ಸಂಶಯಗ್ರಸ್ತವಾದ ಪ್ರಶ್ನೆ. ಆಚಾರ್ಯರ ಕಾಲವು ಕ್ರಿ. ಶ. 7.8 ಎಂಬವರ ಪಕ್ಷವನ್ನು ಅನುಸರಿಸುವ ಸಿ. ಎನ್. ಕೃಷ್ಣಸ್ವಾಮಿ ಅಯ್ಯರು ಇದು ಅಸಂಭವ (CNKS. p. 39) ಎನ್ನುತ್ತಾರೆ; ಬಲದೇವ ಉಪಾಧ್ಯಾಯರು ಭಟ್ಟರೂ ಆಚಾರ್ಯರೂ ಸಮಕಾಲಿಕರಾಗಿರಬಹುದೆಂಬುದನ್ನು ಒಪ್ಪುತ್ತಾರಾದ್ದರಿಂದ ಇದು ಅಸಂಭಾವಿತವಲ್ಲ (ಬಲ. ಶಂ. ೩೮) ಎನ್ನುತ್ತಾರೆ. ಜಿನವಿಜಯವೆಂಬ ಗ್ರಂಥದಿಂದ ಆರಿಸಿದ ಕೆಲವು ಶ್ಲೋಕಗಳನ್ನು ೩ನೆಯ ಪರಿಶಿಷ್ಟದಲ್ಲಿ ಕೊಟ್ಟಿದೆ. ಅದರಲ್ಲಿ 'ಪಶ್ಚಾತ್ ಪಞ್ಚದಶೇ ವರ್ಷೇ ಶಙ್ಕರಸ್ಯ ಗತೇ ಸತಿ। ಭಟ್ಟಾಚಾರ್ಯಕುಮಾರಸ್ಯ ದರ್ಶನಂ ಕೃತವಾನ್ ಶಿವಃ॥' ಎಂಬ ಶ್ಲೋಕವಿದೆ. ಆಚಾರ್ಯರು ತಮ್ಮ ೧೫ನೆಯ ವಯಸ್ಸಿನಲ್ಲಿ ಭಟ್ಟರನ್ನು ಕಂಡರು ಎಂದು ಅದರ ಅಭಿಪ್ರಾಯ. ಇಲ್ಲಿ ಒಂದು ವಿಷಯವನ್ನು ಮನದಂದುಕೊಳ್ಳುವದು ಅವಶ್ಯ. ಆಚಾರ್ಯರೂ ಅವರ ಶಿಷ್ಯರಾದ ಸುರೇಶ್ವರರೂ ಕುಮಾರಿಲರ ಅಭಿಪ್ರಾಯಗಳನ್ನು ಅಲ್ಲಲ್ಲಿ ಅನುವಾದಮಾಡಿಕೊಂಡು ಅವುಗಳಲ್ಲಿ ಕೆಲವನ್ನು ಒಪ್ಪಿರುತ್ತಾರೆ, ಕೆಲವನ್ನು ಖಂಡಿಸಿರುತ್ತಾರೆ.[1] ಆದರೆ ಕುಮಾರಿಲರ ವಾರ್ತಿಕಗಳಲ್ಲಿ ಆಚಾರ್ಯರಿಗೆ ಸಂಮತವಾಗಿರುವ ವೇದಾಂತಪ್ರಕ್ರಿಯೆಯು ಪರಾಮೃಷ್ಟವಾಗಿರುವಂತೆ ಕಾಣುವದಿಲ್ಲ. ಅವರಿಗೆ ವೇದಾಂತವು ತಿಳಿದಿರಲಿಲ್ಲವೆಂದೇನೂ ಅಭಿಪ್ರಾಯವಲ್ಲ; ಏಕೆಂದರೆ ಶಬರಸ್ವಾಮಿಗಳು ಯುಕ್ತಿಯಿಂದ ಸಾಧಿಸಿರುವ

1. ಉದಾಹರಣೆಗೆ: ಸಮನ್ವಯಾಧಿಕರಣಭಾಷ್ಯದಲ್ಲಿರುವ ಅಭಿಪ್ರಾಯಗಳಲ್ಲಿ ಕುಮಾರಿಲರ ಅಭಿಪ್ರಾಯಗಳ ಅನುವಾದವೂ ಕೆಲವಂಶದಲ್ಲಿ ಖಂಡನೆಯೂ ಕಾಣುತ್ತದೆ ಸುರೇಶ್ವರಾಚಾರ್ಯರ ವಾರ್ತಿಕದಲ್ಲಿ 'ಅಪ್ರಾಮಾಣ್ಯಂ ತ್ರಿಧಾ ಭಿನ್ನಮ್' ಎಂಬ ವಾರ್ತಿಕಗಳ ಅನುವಾದವನ್ನು ಮಾಡಿಕೊಂಡು ಮಿಥ್ಯಾಜ್ಞಾನ, ಅಜ್ಞಾನ, ಸಂಶಯ– ಇವುಗಳಲ್ಲಿ ಅಜ್ಞಾನವು ಮಾತ್ರ ಅಸತ್ತು ಎಂಬ (ಚೋದನಾಸೂತ್ರ ಶ್ಲೋ. ೫೪, ೫೫) ಭಟ್ಟರ ಮತವನ್ನು (ಬೃ. ವಾ. ೧–೪ ೪೨೧, ೪೨೨)ರಲ್ಲಿ ಖಂಡಿಸಿರುತ್ತದೆ.

ಆತ್ಮಾಸ್ತಿತ್ವವು 'ವೇದಾಂತನಿಷೇವಣದಿಂದ ಗಟ್ಟಿಯಾಗುವದು' (ದೃಢತ್ವಮೇತ ದ್ವಿಷಯಪ್ರಬೋಧಃ ಪ್ರಯಾತಿ ವೇದಾನ್ತನಿಷೇವಣೇನ| ಶ್ಲೋ.ವಾ. ಆತ್ಮವಾದ ೧೪೮) ಎಂದು ಅವರು ಬರೆದಿರುತ್ತಾರೆ. ಆದರೆ ಶಾಂಕರವೇದಾಂತಪ್ರಕ್ರಿಯೆಯು ಅವರಿಗೆ ತಿಳಿದಿತ್ತೆ? -ಎಂಬುದು ಸಂಶಯಾಸ್ಪದವಾಗಿದೆ. ಅಧ್ಯಾಸ, ಅವಸ್ಥಾ ತ್ರಯಪ್ರಕ್ರಿಯೆ- ಮುಂತಾದ ಶಂಕರರ ಅಸಾಧಾರಣಪ್ರಕ್ರಿಯೆಗಳನ್ನು ಅವರು ಎಲ್ಲಿಯೂ ಪರಾಮರ್ಶಿಸಿರುವದಿಲ್ಲ. ಭಟ್ಟಪಾದರು 'ಅಕಲಂಕದೇವ'ನೆಂಬ ಜೈನಪಂಡಿತನ ಮೇಲೆ ಕೋಟೆಗಳನ್ನು ಹೇಳುವದರಿಂದಲೂ ಭರ್ತೃಹರಿರಚಿತ ವಾದ ವಾಕ್ಯಪದೀಯದ ಐದು ಶ್ಲೋಕಗಳನ್ನು ಉದಾಹರಿಸಿರುವದರಿಂದಲೂ ಆ ಇಬ್ಬರಿಗಿಂತ ಈಚಿನ ಕಾಲದವರು. ಆದರೆ ಅಕಲಂಕದೇವನ ಶಿಷ್ಯನಾದ ಪ್ರಭಾಚಂದ್ರನು ತಂತ್ರವಾರ್ತಿಕವನ್ನು ಉದಾಹರಿಸಿದ್ದಾನೆ. ಆದಕಾರಣ ಭಟ್ಟಪಾದರು ಪ್ರಭಾಚಂದ್ರನಿಗಿಂತ ಸ್ವಲ್ಪ ಮುಂಚಿನವರು, ಎಂದರೆ ಅಕಲಂಕ ದೇವನಿಗೆ ಸಮಕಾಲಿಕರು. ಈ ಅಕಲಂಕದೇವನು ರಾಷ್ಟ್ರಕೂಟವಂಶದ ೧ನೆಯ ಕೃಷ್ಣರಾಜನೆಂಬ ರಾಜನ ಕಾಲದವನು- ಎಂದು ಈ ವಿಷಯವನ್ನು ಬಹುವಾಗಿ ವಿಚಾರಿಸಿರುವ ಕೆ. ಬಿ. ಪಾಠಕರು ಬರೆದಿದ್ದಾರೆ- ಎಂತ ಸೋಮನಾಥಯ್ಯ ನವರ ಗ್ರಂಥದಿಂದ[1] (ಸೋ. ಶಂ. ಪು. ೮೬-೮೭) ತಿಳಿಯಬರುತ್ತದೆ. ಬಲದೇವ ಉಪಾಧ್ಯಾಯರು ಅಕಲಂಕನ ಶಿಷ್ಯನಾದ ವಿದ್ಯಾನಂದನು ತನ್ನ 'ಅಷ್ಟ ಸಾಹಸ್ರಿ'ಯಲ್ಲಿ ಸುರೇಶ್ವರರ ಬೃಹದಾರಣ್ಯಕವಾರ್ತಿಕವನ್ನು ಪರಾಮರ್ಶಿಸಿರುತ್ತಾ ನೆ. ಆದ್ದರಿಂದ ಶಂಕರಾಚಾರ್ಯರ ಕಾಲವು ಅದಕ್ಕಿಂತ ಸ್ವಲ್ಪ ಮೊದಲೇ ಇರಬೇಕೆಂ ದೂ(ಬಲ.ಶಂ.ಪು. ೩೭)ಊಹಿಸಿ ಎಂಟನೆಯ ಶತಾಬ್ದಿಯ ಮಧ್ಯಭಾಗಕ್ಕಿಂತಲೂ ಪ್ರಾಚೀನವೆಂದಾಗುತ್ತದೆ -ಎಂದು ಕಲ್ಪಿಸಿರುತ್ತಾರೆ. ಹೀಗಿದ್ದರೆ ಆಚಾರ್ಯರ 'ಪಾದಪದ್ಮಯುಗಲವನ್ನು ಸೇವೆಮಾಡಿ' (ನೈ.ಸಿ. ೪-೭೪) ಗ್ರಂಥವನ್ನು ಬರೆದಿ ದೇನೆಂದು ಹೇಳಿಕೊಳ್ಳುವ ನೈಷ್ಕರ್ಮ್ಯಸಿದ್ಧಿಕಾರರಾದ ಸುರೇಶ್ವರರು ಆಚಾರ್ಯರ ಸಮಕಾಲಿಕರೇ ಆಗುವದರಿಂದ ಬಲದೇವ ಉಪಾಧ್ಯಾಯರ ಊಹೆಯಿಂದಲೂ ಆಚಾರ್ಯರು ಕ್ರಿ. ಶ. 750ರ ಸುಮಾರಿನಲ್ಲಿದ್ದವರೆಂದೇ ಹೇಳಬೇಕಾಗುತ್ತದೆ; ಆಗ ಅಕಲಂಕನ ಸಮಕಾಲಿಕರಾದ ಭಟ್ಟಪಾದರನ್ನು ಅವರು ಕಂಡಿರಬೇಕೆಂದು ಕಲ್ಪಿಸುವದು ಯುಕ್ತವೆ? ಧರ್ಮಕೀರ್ತಿ ಮತ್ತು ಕುಮಾರಿಲರ ಸಂಬಂಧವನ್ನು ಆಗಲೆ (ಪು. ೧೧೪) ಹೇಳಿರುತ್ತೇವೆ. ಕುಮಾರಿಲರ ಮತದಂತೆಯೇ ಆಚಾ ರ್ಯರು ಧರ್ಮಕೀರ್ತಿಯ ಅಭಿಪ್ರಾಯಗಳನ್ನೂ ಅನುವಾದಮಾಡಿಕೊಂಡಿರುವದ ರಿಂದಲೂ ಅವರಿಬ್ಬರೂ ಆಚಾರ್ಯರ ವೇದಾಂತಪ್ರಕ್ರಿಯೆಯನ್ನು ಪರಾಮರ್ಶಿ

---

1. Proceedings of the Congress of orientalists 1892 A. C. Vol P. 186. ಎಂಬ ದಾಖಲೆಯ ಆಧಾರವನ್ನು ಸೋಮನಾಥಯ್ಯನವರು ಕೊಟ್ಟಿದ್ದಾರೆ.

ಸಿರುವದು ಕಾಣಬಾರದೆ ಇರುವದರಿಂದಲೂ ಆಚಾರ್ಯರು ಭಟ್ಟರ ಸಮಕಾಲಿಕ ರೆಂದು ಕಲ್ಪಿಸುವದಕ್ಕೆ ಸ್ವಲ್ಪ ಹಿಂಜರಿಯಬೇಕಾಗಿದೆ. ಆಚಾರ್ಯರ ಭಾಷ್ಯವನ್ನು ನೋಡಿದಮೇಲೆ ಅವರು ಬದುಕಿರಲಿಲ್ಲವಾದ್ದರಿಂದ ಅವರ ಭಾಷ್ಯದ ಪರಾಮರ್ಶವು ಭಟ್ಟರ ಗ್ರಂಥದಲ್ಲಿಲ್ಲ- ಎಂದು ಹೇಗೋ ಸಮಾಧಾನಮಾಡಿಕೊಳ್ಳಬೇಕಾಗಿರು ತ್ತದೆ.

ಹೀಗೆ ಭಟ್ಟರ ಮತ್ತು ಆಚಾರ್ಯರ ಸಮಾಗಮವು ಒಂದುಕಡೆ ಆಯಿ ತೆಂಬುದು ಅನಿಶ್ಚಿತವೆಂದಾದರೂ ಕುಮಾರಿಲಭಟ್ಟರು ತುಷಾಗ್ನಿಪ್ರಾಯಶ್ಚಿತ್ತ ವನ್ನು ಮಾಡಿಕೊಂಡರೆಂಬುದೇನೂ ಸುಳ್ಳಾಗಬೇಕಾದದ್ದಿಲ್ಲ. ಸಾಂಪ್ರದಾಯಿಕರ ಕಥನವನ್ನು ನೋಡಿದರೆ ಭಟ್ಟರು ಭಾವನಾಪರವಶಸ್ವಭಾವದವರೆಂದೇ ನಂಬ ಬೇಕಾಗುತ್ತದೆ. 'ನಾನು ಪಾಪವನ್ನು ಮಾಡಿದ್ದೇನೆ; ಇಂಥ ತೀವ್ರ ಪ್ರಾಯ ಶ್ಚಿತ್ತದ ಹೊರತು ಅದಕ್ಕೆ ಪರಿಹಾರವಿಲ್ಲ'- ಎಂದು ಅವರಿಗೆ ಮನದಟ್ಟಾಗಿದ್ದರೆ ಅವರೇನೂ ಪ್ರಾಯಶ್ಚಿತ್ತಕ್ಕೆ ಹಿಂಜರಿಯುವ ವ್ಯಕ್ತಿಯಲ್ಲ ಎಂದು ಕೃಷ್ಣಸ್ವಾಮಿ ಅಯ್ಯರ್ (CNKS. pp. 39-40) ಹೇಳಿರುವದು ನಮಗೂ ಒಪ್ಪಾಗಿದೆ. ಇದರ ನಿಶ್ಚಯವನ್ನು ಮಾತ್ರ ಪರಮೇಶ್ವರನೇ ಬಲ್ಲ.

# ೮. ಮಂಡನಪ್ರಕರಣವಿಮರ್ಶೆ

## ಭಟ್ಟರು ಆಚಾರ್ಯರಿಗೆ ಏನು ಹೇಳಿದರು ?

೯೩. ಕುಮಾರಿಲಭಟ್ಟರಿಗೂ ಆಚಾರ್ಯರಿಗೂ ಆದ ಪರಸ್ಪರಸಂದರ್ಶನವು ಹೀಗೆ ವಿವಾದಗ್ರಸ್ತವಾಗಿದ್ದರೆ ಭಟ್ಟರ ಶಿಷ್ಯನೆಂಬ ಮಂಡನಮಿಶ್ರನ ವಿಚಾರವು ಅದಕ್ಕಿಂತಲೂ ತೊಡಕಿನದಾಗಿದೆ ಎನ್ನಬಹುದು.

ಮೊಟ್ಟಮೊದಲು **ಮಾಧವೀಯದಲ್ಲಿರುವ** ವೃತ್ತಾಂತವನ್ನು ಸಂಗ್ರಹಿಸೋಣ. 'ಮೊದಲೇ ನನಗೆ ತಮ್ಮ ದರ್ಶನವಾಗಿದ್ದರೆ ನಾನು ಈ ಪ್ರಾಯಶ್ಚಿತ್ತವನ್ನು ಮಾಡುತ್ತಿರಲಿಲ್ಲ ; ಶಾಬರಭಾಷ್ಯಕ್ಕೆ ವಾರ್ತಿಕವನ್ನು ಬರೆದಂತೆ ತಮ್ಮ ಭಾಷ್ಯಕ್ಕೂ ಏನಾದರೊಂದಿಷ್ಟು ಬರೆದು ಕೀರ್ತಿಯನ್ನು ಸಂಪಾದಿಸಿಕೊಳ್ಳುವ ಭಾಗ್ಯವಿಲ್ಲವಾಯಿತು' (ಮಾ. ಶಂ. ೭–೧೦೪, ೧೦೫) ಎಂದು ಭಟ್ಟಪಾದರು ಪಶ್ಚಾತ್ತಾಪವನ್ನು ಸೂಚಿಸಲು ಶಂಕರರು ಕಮಂಡುಲುಜಲದ ಪ್ರೋಕ್ಷಣೆಯಿಂದ ನಿಮ್ಮನ್ನು ಉಜ್ಜೀವನಗೊಳಿಸುವೆನು (ಉಜ್ಜೀವಯಾಮಿ ಕರಕಾಮ್ಬುಗಣೋಕ್ಷಣೇನ ೭–೧೦೭) ಎಂದದ್ದಕ್ಕೆ 'ಅದು ಶುದ್ಧವಾದ ರೀತಿಯಾದರೂ ಲೋಕವಿರುದ್ಧವಾದ್ದರಿಂದ ಬೇಡ (೭–೧೦೯) ; ಆದ್ದರಿಂದ ನನಗೆ ತಾರಕವಾದ ಬ್ರಹ್ಮತತ್ತ್ವವನ್ನು ಉಪದೇಶಿಸಿ ಕೃತಾರ್ಥರನ್ನಾಗಿಮಾಡಿರಿ' ಎಂದು ಕೇಳಿಕೊಂಡರು (೭–೧೧೯). "ತಮಗೇನೂ ನಾನು ಹೇಳಬೇಕಾದದ್ದಿಲ್ಲ; ಇದೇ ಮಾರ್ಗದಲ್ಲಿ **ಮಂಡನಮಿಶ್ರಶರ್ಮನೆಂಬ** ವಿಖ್ಯಾತವಿದ್ವಾಂಸನನ್ನು ತಾವು ಜಯಿಸಿದರೆ ಎಲ್ಲರನ್ನೂ ಜಯಿಸಿದಂತೆ. ಯಾವಾಗಲೂ ( ಕರ್ಮ ) ಯೋಗಮಾರ್ಗವನ್ನೇ ಹೊಗಳಿ ವಾದಿಸುತ್ತಾ ವಿಶ್ವರೂಪನೆಂದು ಹೆಸರಾಂತಿದ್ದಾನೆ. ವೈದಿಕಮಾರ್ಗದಲ್ಲಿ ತತ್ಪರನೂ ಪ್ರವೃತ್ತಿಶಾಸ್ತ್ರನಿರತನೂ ನಿವೃತ್ತಿಶಾಸ್ತ್ರವಿಮುಖನೂ ಆಗಿರುತ್ತಾನೆ. ಅವನನ್ನು ಹೇಗಾದರೂ ವಶಗೊಳಿಸಿಕೊಳ್ಳಬೇಕು. **ಉಂಬೇಕ** ನೆಂಬ ಹೆಸರಿನವನಾದ ಆತನ ಹೆಂಡತಿಯನ್ನು **ಉಂಬೇ**–ಎಂದು ಕರೆಯುತ್ತಾರೆ. ಯಾವದೋ ಕಾರಣದಿಂದ **ದೂರ್ವಾಸರಿಂದ ಶಪ್ತಳಾಗಿ ಉಭಯಭಾರತಿ** ಯಾಗಿ ಜನಿಸಿದಾಳೆ. ಅವನು ಸರ್ವಶಾಸ್ತ್ರಗಳಲ್ಲಿಯೂ ನನಗಿಂತ ಅಧಿಕನು, **ನನ್ನ** ಶಿಷ್ಯರಲ್ಲಿ ಪ್ರಿಯತಮನು. ಆತನ ಹೆಂಡತಿಯನ್ನು **ಸಾಕ್ಷ್ಯಕ್ಕೆ ಇಟ್ಟು ಕೊಂಡು** ವಾದದಲ್ಲಿ ಅವನನ್ನು ಜಯಿಸಿ ಅವನಿಂದಲೇ ತಮ್ಮ ಕೃತಿಗಳಿಗೆ **ವಾರ್ತಿಕವನ್ನು** ಮಾಡಿಸಿಕೊಳ್ಳಿರಿ. ನನ್ನ ಭಾಗದ ವಿಶ್ವನಾಥನೇ ಆಗಿ ತಾವು ಸಮಯಕ್ಕೆ ಸರಿಯಾಗಿ ಬಂದಿದೀರಿ ಆದ್ದರಿಂದ ತಾರಕವನ್ನು ಉಪದೇಶಿಸಿ ಕೃತಾರ್ಥನನ್ನಾಗಿ ಮಾಡಿರಿ' ಎಂದರು. ಆಮೇಲೆ ಶಂಕರರು ಮಂಡನಪಂಡಿತನನ್ನು ಜಯಿಸುವದಕ್ಕೆಂದು **ಮಾಹಿಷ್ಮತಿಗೆ ಹೋದರು** (ಮಾ.ಶಂ. ೭-೧೦೦ ರಿಂದ ೧೩೧ ; ೮–೧).

ಇಲ್ಲಿ ಮಾಧವಕವಿಯು ಮಂಡನನ ವಿಷಯದಲ್ಲಿ ತನಗೆ ತಿಳಿದಿದ್ದ ವಿಷಯಗಳನ್ನೆಲ್ಲ ಕ್ರೋಢೀಕರಿಸಿ ಭಟ್ಟರಿಂದ ನುಡಿಯಿಸಿದ್ದಾನೆ. ಕಪ್ಪಕ್ಷರದಲ್ಲಿಟ್ಟಿರುವ ಪದಗಳ ವಿಷಯವಾಗಿ ಇಷ್ಟರಲ್ಲಿಯೇ ಚರ್ಚೆಮಾಡುವೆವು. ಮಂಡನನಿಂದ ವಾರ್ತಿಕವನ್ನು ಮಾಡಿಸಿಕೊಳ್ಳಿರಿ (ಮಾ. ಶಂ. ೭–೧೧೮) ಎಂದು ಇಲ್ಲಿ ಹೇಳಿರುವದನ್ನು ಲಕ್ಷಿಸಬೇಕು. ಶಾಬರಭಾಷ್ಯಕ್ಕೆ ಕುಮಾರಿಲರು ವಾರ್ತಿಕವನ್ನು ಬರೆದಿದ್ದಂತೆ ಸೂತ್ರಭಾಷ್ಯಕ್ಕೂ ಅವರೇ ಬರೆದಿದ್ದರೆ ಚೆನ್ನಾಗಿತ್ತೆಂದು ಸಂಕ್ಷೇಪಶಂಕರಜಯಕಾರನ ಅಭೀಷ್ಟವಾಗಿತ್ತೆಂದು ಇದರಿಂದ ಕಲ್ಪಿಸಬಹುದಾಗಿದೆ. ಈ ಅಭಿಪ್ರಾಯವು ಮಾಧವನದು ಮಾತ್ರವಲ್ಲ, ವ್ಯಾಸಾಚಲೀಯದಲ್ಲಿಯೂ 'ಅಷ್ಟೌ ಸಹಸ್ರಾಣಿ ವಿಭಾನ್ತಿ ವಿದ್ವನ್ ಸದ್ವಾರ್ತಿಕಾನಾಂ ಪ್ರಥಮೇಽತ್ರ ಭಾಷ್ಯೇ । ಅಹಂ ಯದಿ ಸ್ಯಾಮಗೃಹೀತದೀಕ್ಷೋ ಧ್ರುವಂ ವಿಧಾಸ್ಯೇ ಸುನಿಬನ್ಧಮಸ್ಯ' (ಮಾ. ಶಂ. ೭–೮೩ ; ವ್ಯಾ. ಶಂ. ೫–೧೪) ಎಂಬ ಶ್ಲೋಕದಿಂದ ಸ್ಫುಟವಾಗುತ್ತದೆ. ನಿಮ್ಮ ಮೊದಲನೆಯ ಅಧ್ಯಾಸಭಾಷ್ಯಕ್ಕೇ ಎಂಟು ಸಹಸ್ರವಾರ್ತಿಕಗಳನ್ನು ಬರೆಯಬಹುದೆಂದು ನನಗೆ ತೋರುತ್ತಿದೆ ; ಈ ಪ್ರಾಯಶ್ಚಿತ್ತದೀಕ್ಷೆಯನ್ನು ಕೈಕೊಳ್ಳದೆ ಇದ್ದಿದ್ದರೆ ಅವಶ್ಯವಾಗಿ ವಾರ್ತಿಕವನ್ನು ಬರೆಯುತ್ತಿದ್ದೆನು– ಎಂಬುದು ಆ ಶ್ಲೋಕದ ಅರ್ಥ.

ಚಿದ್ವಿಲಾಸೀಯದಲ್ಲಿ : 'ನಾನು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವನ್ನು, ಶಾಸ್ತ್ರವನ್ನು ನೋಡಿ ನಿಶ್ಚಯಿಸಿಕೊಂಡಿರುತ್ತೇನೆ. ಈ ಸಮಯಕ್ಕೆ ನನ್ನ ಪುಣ್ಯದಿಂದ ತಾವು ಸರಿಯಾಗಿ ಬಂದಿರಿ; ಇಷ್ಟರಲ್ಲಿಯೇ ನಾನು ಪ್ರಾಣವನ್ನು ಬಿಡುವೆನು' ಎಂದು ಭಟ್ಟರೆಂದದ್ದಕ್ಕೆ ಆಚಾರ್ಯರು 'ನಿಮಗೆ ಗೀತಾರ್ಥದ ಭಾವವು ಒಂದಿಷ್ಟೂ ಗೊತ್ತಿಲ್ಲವಲ್ಲ ! ಕೊಲ್ಲುವವರು ಯಾರು, ಕೊಲ್ಲಿಸಿಕೊಳ್ಳುವವರು ಯಾರು ? ಇದೆಲ್ಲ ಈಶ್ವರನ ಆಜ್ಞೆಯಂತೆ ನಡೆಯುತ್ತಿದೆ' (೧೬–೫) ಎಂದರು. ಭಟ್ಟರು ಆಶ್ಚರ್ಯದಿಂದ 'ಸರಿ, ಯಾರೋ ಒಬ್ಬ ಯತಿಗಳು ಶ್ರೇಷ್ಠವಾದ ಭಾಷ್ಯವನ್ನು ಮಾಡಿದಾರೆಂದು ಕೇಳಿದೆನು ; ಅವರು ತಾವೇ ಆಗಿರಬೇಕು, ಇದೇ ಭಾಷ್ಯವಿರಬಹುದು. ಭಾಷ್ಯಪುಸ್ತಕವನ್ನು ನೋಡಿಯಲ್ಲವೆ, ಏನಾದರೂ ಹೇಳಬಹುದು. ಅರ್ಧ ಬೆಂದಿರುವ ಶರೀರವುಳ್ಳ ನನ್ನ ಬುದ್ಧಿ ಹೇಗೆ ನಿಶ್ಚಲವಾಗಿದ್ದೀತು ? ಮತ್ತೆ ಬದುಕುವದಾದರೂ ಹೇಗೆ ? ಆದ್ದರಿಂದ ನೀವು ಕಾಶ್ಮೀರಕ್ಕೆ ಹೋಗಿರಿ ; ಅಲ್ಲಿ **ಮಂಡನಮಿಶ್ರನೆಂಬ** ನನ್ನ ಶಿಷ್ಯಶ್ರೇಷ್ಠನಿರುತ್ತಾನೆ. ಅವನಿಗೆ ಸ್ವಲ್ಪ ಹೆಚ್ಚು **ಕಡಿಮೆ ಇಪ್ಪತ್ತುಸಲ ಜೈಮಿನೀಯಸೂತ್ರಗಳ ಅರ್ಥವನ್ನು** ಹೇಳಿರುತ್ತೇನೆ. ಅವನಿಗೆ ಕರ್ಮವೇ ಬ್ರಹ್ಮವು ; ಬ್ರಹ್ಮನ ಅಂಶದಿಂದ ಹುಟ್ಟಿದವನವನು. ಅವನಿಗೆ **ಸರಸವಾಣಿ** ಎಂಬ ಹೆಂಡತಿಯಿರುತ್ತಾಳೆ. ಸ್ವರಸ್ಖಾಲಿತ್ಯವನ್ನು **ಕೇಳಿ ನಕ್ಕ ತಪ್ಪಿಗಾಗಿ 'ಮಾನುಷಿಯಾಗು'** ಎಂದು **ದೂರ್ವಾಸರು** ಶಾಪವನ್ನು **ಕೊಟ್ಟು ಮನುಷ್ಯರೂಪನಾದ ಶಿವನನ್ನು ಕಂಡಮೇಲೆ ಶಾಪಮೋಕ್ಷವಾಗುವದೆಂದು**

ಹೇಳುತ್ತಾರೆ. ಆದ್ದರಿಂದ ಆಕೆ ಭಾರತಿಯಾಗಿ ಜನಿಸಿ ಅವನ ಪತ್ನಿಯಾಗಿರುತ್ತಾಳೆ. ವಾದವನ್ನು ಮಾಡಬೇಕೆಂಬ ಇಚ್ಛೆಯಿದ್ದರೆ ನಿಮ್ಮ ವಾದೇಚ್ಛೆಯು ತಿನಿಸನ್ನು ಅಲ್ಲಿ ತೀರಿಸಿಕೊಳ್ಳಿರಿ; ಅವನನ್ನು ಜಯಿಸಿ ಅವನಿಗೆ ಸಂನ್ಯಾಸವನ್ನು ಕೊಟ್ಟು ಅವನಿಂದ ವಾರ್ತಿಕವನ್ನು ಮಾಡಿಸಿಕೊಳ್ಳಿರಿ' ಎಂದು ಹೇಳಿ ಏಳಲಾರದೆ ಮನಸ್ಸಿನಲ್ಲಿಯೇ ಭಕ್ತಿಯಿಂದ ನಮಸ್ಕರಿಸಿ ಸ್ತುತಿಸುತ್ತಾ ಆಚಾರ್ಯರನ್ನು ಕಳುಹಿಸಿಕೊಟ್ಟರು (ಚಿ. ಶಂ. ೧೬–೩೩ರಿಂದ ೩೬, ೪೧ರಿಂದ ೪೩)– ಎಂದಿದೆ.

ಮಂಡನನು ಮಾಹಿಷ್ಮತೀನಗರದಲ್ಲಿದ್ದನೆಂದು ಮಾಧವೀಯದಲ್ಲಿ (ಮಾ. ಶಂ. ೮–೧) ಸ್ಪಷ್ಟವಾಗಿದೆ; ಆದರೆ ಇಲ್ಲಿ ಅವನು ಕಾಶ್ಮೀರದಲ್ಲಿದ್ದನೆಂದಿದೆ. 'ವಾರ್ತಿಕವನ್ನು ಮಂಡನನಿಂದ ಮಾಡಿಸಿಕೊಳ್ಳಿ' ಎಂದು ಇಲ್ಲಿಯೂ ಹೇಳಿದೆ; ಆದರೆ ಆಚಾರ್ಯರ ಭಾಷ್ಯಕ್ಕೆ ತಾವು ವಾರ್ತಿಕವನ್ನು ಮಾಡಲಿಲ್ಲವೆಂಬ ಪಶ್ಚಾತ್ತಾಪವನ್ನು ಸೂಚಿಸಿದ್ದಾಗಲಿ, ಆಚಾರ್ಯರಿಂದ ತಾರಕೋಪದೇಶವನ್ನು ಪಡೆದದ್ದಾಗಲಿ,ಇಲ್ಲಿಲ್ಲ. ತಾರಕೋಪದೇಶವೃತ್ತಾಂತವು ವ್ಯಾಸಾಚಲೀಯದಲ್ಲಿಯೂ ಇಲ್ಲವಾದ್ದರಿಂದ ಅದು ಮಾಧವನ ಕಲ್ಪನೆಯೇ ಆಗಿರಬೇಕೆಂದು ತೋರುತ್ತದೆ.

ಆನಂದಗಿರೀಯದಲ್ಲಿ ಹೀಗಿದೆ: ಅಜ್ಞಾನದಿಂದ ಈ ಅವಸ್ಥೆಯನ್ನೇಕೆ ಪಡೆದೆ? 'ಕೊಲ್ಲುವೆನೆಂದೂ ಕೊಲ್ಲಲ್ಪಡುವೆನೆಂದೂ ತಿಳಿದವರಿಬ್ಬರೂ ಅರಿಯರು' ಎಂಬ ಸ್ಮೃತಿಯನ್ನರಿಯೆಯ?– ಎನ್ನಲು ಮೊಳಕಾಲದವರೆಗೂ ಸುಟ್ಟುಹೋಗಿದ್ದರೂ ಭಟ್ಟರು 'ಈ ಅಕಾಲದಲ್ಲಿ ಬಂದ ಹೊಸ ಬೌದ್ಧನು ಯಾರು? ಏಕೆ ಬಂದನು?' ಎಂದು ಅಸಮಾಧಾನವನ್ನು ತೋರಿಸಿದರು. ಆಚಾರ್ಯರು 'ನಾನು ಬೌದ್ಧನಲ್ಲ, ಶಂಕರಾಚಾರ್ಯನು, ಶುದ್ಧಾದ್ವೈತಮಾರ್ಗಾವಲಂಬಿ, ನಿಮ್ಮೊಡನೆ ವಾಗ್ವಾದಮಾಡುವದಕ್ಕೆ ಬಂದಿದ್ದೇನು' ಎಂದರು. ಆಗ ಭಟ್ಟರು ಹಾಗಾದರೆ ಉತ್ತರದೇಶದಲ್ಲಿ[1] ನನ್ನ ತಂಗಿಯ ಗಂಡ ಮಂಡನಮಿಶ್ರನಿದಾನೆ; ಅವನು ಸರ್ವಜ್ಞಕಲ್ಪನು, ಸಕಲವಿದ್ಯೆಗಳಿಗೂ ಪಿತಾಮಹನಂತೆ ಇದಾನೆ. ಅವನೊಡನೆ ನಿನ್ನ ನಾಲಗೆಯ ತೀಟೆಯು ಹೋಗುವವರೆಗೂ ವಾದಮಾಡಿಕೊ! ನಾನೇನೋ ಕರ್ಮಸೂತ್ರಬದ್ಧನಾಗಿ ಪರಲೋಕಯಾತ್ರೆಗೆ ಹೊರಟಿದೇನೆ' ಎಂದು ಕಣ್ಣುಮುಚ್ಚಿ ಸರ್ವಾತ್ಮಕವಾದ ಬ್ರಹ್ಮದಲ್ಲಿಟ್ಟ ಬುದ್ಧಿಯುಳ್ಳವರಾದರು (ಆ.ಶಂ. ೫೫– ಪು. ೨೧೨–೨೧೩) ಇಲ್ಲಿ ಮಾಹಿಷ್ಮತಿಯ ಸುದ್ದಿಯಿಲ್ಲ, ಮಂಡನನು ಭಟ್ಟರ ಶಿಷ್ಯನೆಂಬ ಮಾತಿಲ್ಲ, ವಾರ್ತಿಕವಿಚಾರವೂ ಇಲ್ಲ

## ಮಂಡನವಿಶ್ವರೂಪೈಕ್ಯವಿಚಾರ:

೯೪. ಮಂಡನನೇ ವಿಶ್ವರೂಪನೆ, ಅಥವಾ ವಿಶ್ವರೂಪನು ಬೇರೊಬ್ಬ ವ್ಯಕ್ತಿಯೊ? ಮಾಧವೀಯದಲ್ಲಿ ಮಂಡನಮಿಶ್ರನು ವಿಶ್ವರೂಪನೆಂಬ ಹೆಸರಿ

1. ದೇವನಾಗರೀಪ್ರತಿಯಲ್ಲಿ 'ಉದಗ್ದೇಶೇಷು' ಎಂಬ ಮಾತಿಲ್ಲ. (ದೇ.ಪು. ೧೮೧).

ನಿಂದ ಭೂಮಂಡಲದಲ್ಲಿ ಪ್ರಖ್ಯಾತನಾಗಿರುತ್ತಾನೆ (ಸ ವಿಶ್ವರೂಪಃ ಪ್ರಥಿತೋ ಮಹೀತಲೇ ಮಾ. ಶಂ. ೭-೧೧೪) ಎಂದಿರುವದನ್ನು ಆಗಲೆ ಹೇಳಿರುತ್ತೇವೆ. ಆದರೆ ಈ ಎರಡು ಹೆಸರುಗಳೂ ಒಬ್ಬನಿಗೆ ಸೇರಿದವೆ?- ಎಂಬುದು ವಿಚಾರ ಣೀಯವಾಗಿರುತ್ತದೆ.

**ವ್ಯಾಸಾಚಲೀಯದಲ್ಲಿ ಕಥೆ ಹೀಗಿದೆ :**

ಆಚಾರ್ಯರು ತೀರ್ಥಾಟನೆಗೆಂದು ಶಿಷ್ಯರೊಡನೆ ಹೊರಟು ಬ್ರಹ್ಮಾದಿಗಳು (ವ್ಯಾ. ಶಂ. ೫-೧) ಯಾಗಮಾಡಿದ ಸ್ಥಲವೆಂದು ಪ್ರಸಿದ್ಧವಾದ **ಪ್ರಯಾ**ಗಕ್ಕೆ ಬಂದರು (೬-೪); ಅಲ್ಲಿ ತುಷಾಗ್ನಿಯಲ್ಲಿದ್ದ ಭಟ್ಟಪಾದರನ್ನು ಕಂಡರು (೬-೧೦). ಭಟ್ಟರು ಆಚಾರ್ಯರನ್ನು ಶಿಷ್ಯರ ಮೂಲಕ ಸತ್ಕರಿಸಿ ತಾವು ಬೌದ್ಧರಲ್ಲಿ ಶಾಸ್ತ್ರಾಧ್ಯಯನಮಾಡಿದ್ದು, ಬೌದ್ಧರು ಉಪ್ಪರಿಗೆಯಿಂದ ತಮ್ಮನ್ನು ತಳ್ಳಿದ್ದು, ತಾವು ಗುರುತಿರಸ್ಕಾರಮಾಡಿದ ಅಪರಾಧಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡದ್ದು- ಇವೆಲ್ಲವನ್ನೂ (೫-೧೧ರಿಂದ ೩೩) ವಿವರಿಸಿದರು. ಅಲ್ಲಿ ಬೌದ್ಧರನ್ನು ಕೊಲ್ಲಿಸಿದ ಸುದ್ದಿಯಿಲ್ಲ' **ಮಗಧದೇಶದಲ್ಲಿ** ನನ್ನ ಶಿಷ್ಯನೊಬ್ಬನಿದ್ದಾನೆ; ಅವನು ನಿಮ್ಮ ಭಾಷ್ಯದಮೇಲೆ ನಿಬಂಧವನ್ನು ಮಾಡುತ್ತಾನೆ (ಮಗಧೇಷು ವಸನ್ ಮಮಾಸ್ತಿ ಶಿಷ್ಯಃ ಸ ತು ತಸ್ಮೈ ಪ್ರಭವತ್ಯಸಂಶಯಮ್ (೫-೩೪); ಅವನು ವಿಶ್ವರೂಪನೆಂದು ಪ್ರಸಿದ್ಧನಾಗಿದಾನೆ (ಸ ವಿಶ್ವರೂಪಃ ಪ್ರಥಿತೋ ಮಹೀತಲೇ ೫-೩೫); ಮಹಾಗೃಹಸ್ಥನು, ವೈದಿಕಕರ್ಮತತ್ಪರನು. ಅವನಿಗೆ ನಿವೃತ್ತಿಶಾಸ್ತ್ರದಲ್ಲಿ ಆದರವಿಲ್ಲ. ಅವನನ್ನು ವಶಗೊಳಿಸಿಕೊಂಡರೆ ನಿಮ್ಮ ಮನೋರಥವು ಸಿದ್ಧವಾಗುವದು. ಆದ್ದರಿಂದ ತಾವು ತಡಮಾಡದೆ ಅಲ್ಲಿಗೆ ಹೋಗಿರಿ. (ಮಹಾಗೃಹೀ ವೈದಿಕಕರ್ಮತತ್ಪರಃ | ಪ್ರವೃತ್ತಿಶಾಸ್ತ್ರೇ ನಿರತಃ ಸ ಕರ್ಮಠಃ || ನಿವೃತ್ತಿಶಾಸ್ತ್ರೇ ನ ಕೃತಾದರಃ ಸ್ವಯಂ (ಕೇನಾಪ್ಯು) ಪಾಯೇನ ವಶಂ ಸ ನೀಯತಾಮ್ । ವಶಂ ಗತೇ ತತ್ರ ಭವೇನ್ಮನೋರಥಸ್ತದನ್ತಿಕಂ ಗಚ್ಛತು ಮಾ ಚಿರಂ ಭವಾನ್ ||" ವ್ಯಾ. ಶಂ. ೫-೩೫, ೩೬)- ಎಂದಿದೆ. ಇದಿಷ್ಟೂ ವಿಶ್ವರೂಪನೆಂಬ ಭಟ್ಟಶಿಷ್ಯನ ವಿಚಾರ. ಮಾಧವೀಯದ ೭-೧೧೪, ೧೧೫ ಈ ಶ್ಲೋಕಗಳೇ ವ್ಯಾಸಾಚಲೀಯದ ೫-೩೫, ೩೭ ಎಂಬುದನ್ನು ಲಕ್ಷಿಸಬೇಕು.

ಇಲ್ಲಿಂದ ಮುಂದಕ್ಕೆ ವ್ಯಾಸಾಚಲೀಯದಲ್ಲಿ ಮಂಡನಮಿಶ್ರನ ವೃತ್ತಾಂತವು ಪ್ರಾರಂಭ :

> ತತ್ಪಾರ್ಶ್ವವತೀ ವಿದಿತಾರ್ಥಸಙ್ಗ್ರಹಃ ।
> ಸ ಮಣ್ಡನಾಖ್ಯೋಽಭಿಜಗಾಮ ಶಙ್ಕರಮ್ ॥

—(ವ್ಯಾ, ಶಂ. ೫-೩೭).

'ಭಟ್ಟರ ಪಕ್ಷದಲ್ಲಿದ್ದು ವಿಷಯವನ್ನೆಲ್ಲ ತಿಳಿದಿದ್ದ ಮಂಡನನೆಂಬ ಹೆಸರುಳ್ಳವನು ಶಂಕರಾಚಾರ್ಯರ ಬಳಿಗೆ ಬಂದನು'-ಎಂದು ಪ್ರಾರಂಭಿಸಿ ಮಂಡನನು 'ತಮ್ಮ ವಿಷಯವನ್ನು ಈವರೆಗೆ ಕೇಳಿದ್ದೆನು, ಈಗ ತಮ್ಮ ದರ್ಶನವಾಯಿತು, ನನ್ನ ಸೇವೆಯನ್ನು ಸ್ವೀಕರಿಸಿ ನನ್ನನ್ನು ಉದ್ಧಾರಮಾಡಬೇಕು'-ಎಂದು ಕೇಳಿಕೊಂಡನು. ಮಂಡನನಿಗೆ ಆಚಾರ್ಯರು 'ಶ್ರುತಿಚೋದಿತವಾದ ಕರ್ಮವನ್ನೇ ಮಾಡು, ಅದರಿಂದ ಅಂತಃಕರಣಶುದ್ಧಿಯಾಗುವದು ; ಅದು ಶುದ್ಧವಾದರೆ ಕನ್ನಡಿಯಲ್ಲಿ ಮುಖವು ತೋರುವಂತೆ ಆನಂದಸ್ವರೂಪವಾದ ಬ್ರಹ್ಮವು ತೋರಿಕೊಳ್ಳುವದು' (ವ್ಯಾ. ಶಂ. ೫-೪೫) ಎಂದು ಹೇಳಿ—

ತ್ಯಕ್ತ್ವಾ ಮಣ್ಡನ ಭೇದಗೋಚರಧಿಯಂ ಮಿಥ್ಯಾಭಿಮಾನಾತ್ಮಿಕಾ-
ಮದ್ವೈತೇ ಭವ ನಿಷ್ಠಿತೋ ಮಮ ವಚಸ್ತೇ ರೋಚತೇ ಯದ್ಯತಃ ॥
ತೀರ್ತ್ವಾ ಸಂಸೃತಿವಾರಿಧಿಂ ಪರಪವೇ ಜ್ಞಾನಪ್ಲವಾರೋಹಣಾತ್ ।
ಪಾರೇ ಸ್ಥಾಸ್ಯಸಿ ನಿರ್ವೃತಃ ಸುಖಮಯೋ ಸಂಸಾರವಾರ್ತೋಜ್ಝಿತೇ

"ಎಲೈ ಮಂಡನನೆ, ನನ್ನ ಮಾತು ನಿನಗೆ ಸರಿಯೆಂದು ಕಂಡರೆ ಭೇದವಿಷಯಕವಾದ ಮಿಥ್ಯಾಭಿಮಾನರೂಪವಾದ ಬುದ್ಧಿಯನ್ನು ಬಿಟ್ಟು ಅದ್ವೈತದಲ್ಲಿಯೇ ನಿಲ್ಲುವವನಾಗು. ಜ್ಞಾನವೆಂಬ ದೋಣಿಯನ್ನು ಹತ್ತುವದರಿಂದ ಸಂಸಾರಸಾಗರವನ್ನು ದಾಟಿ ಸಂಸಾರದ ಸುದ್ದಿಯೇ ಇಲ್ಲದ ಆಚೆಯ ದಡದಲ್ಲಿ ಸುಖಮಯನಾಗಿ ಉಪರತನಾಗಿ ನಿಲ್ಲುವೆ" ಎಂದರು. 'ಈ ರೀತಿಯಲ್ಲಿ ಬ್ರಹ್ಮವಾದಪರವಾದ ಸದ್ವಾಕ್ಯಗಳಿಂದ ಮಂಡನನನ್ನು ಆತ್ಮಪದದಲ್ಲಿ ಸ್ಥಿರಭಕ್ತಿಯುಳ್ಳವನನ್ನಾಗಿ ಮಾಡಿಬಿಟ್ಟು ಮುಂದಕ್ಕೆ ಹೋಗಲು ಮನಸ್ಸುಮಾಡಿದರು' (ವ್ಯಾ. ಶಂ. ೫-೪೭)-ಎಂದು ಐದನೆಯ ಸರ್ಗವನ್ನು ಮುಗಿಸಿದೆ. ಮಾಧವೀಯದ ಎಂಟನೆಯ ಸರ್ಗದಲ್ಲಿ

ಅಥ ಪ್ರತಸ್ಥೇ ಭಗವಾನ್ ಪ್ರಯಾಗಾತ್ತನ್ಮಣ್ಡನಂ ಪಣ್ಡಿತಮಾಶು ಜೇತುಮ್ ।
ಗಚ್ಛನ್ ಖಸೃತ್ಯಾ ಪುರಮಾಲುಲೋಕೇ ಮಾಹಿಷ್ಮತೀಂ ಮಣ್ಡನಮಣ್ಡಿತಂ ಸಃ ॥೧॥

(ಆ ಬಳಿಕ ಭಗವಂತರಾದ ಆಚಾರ್ಯರು ಪ್ರಯಾಗದಿಂದ ಮಂಡನಪಂಡಿತನನ್ನು ಬೇಗನೆ ಜಯಿಸಬೇಕೆಂದು ಆಕಾಶಮಾರ್ಗದಿಂದ ಹೋಗುತ್ತಾ ಮಂಡನಾಲಂಕೃತವಾಗಿದ್ದ ಮಾಹಿಷ್ಮತಿಯನ್ನು ಕಂಡರು) ಎಂಬ ಶ್ಲೋಕದಿಂದ ಪ್ರಾರಂಭವಾಗಿರುವಂತೆಯೇ ವ್ಯಾಸಾಚಲೀಯದ ಆರನೆಯ ಸರ್ಗವೂ

ಅಥ ಪ್ರತಸ್ಥೇ ಭಗವಾನ್ ಪ್ರಯಾಗಾತ್
ದಿದೃಕ್ಷಮಾಣೋ ಗೃಹಿವಿಶ್ವರೂಪಮ್ ।
ವಿಹಾಯಸಾ ಯೋಗಭವೇನ ಗಚ್ಛ-
ನ್ನವಾತರತ್ತಸ್ಯ ಗೃಹಾಜ್ಗಣಾನ್ತಮ್ ॥ (ವ್ಯಾ. ಶಂ. ೬-೧)

ಎಂಬ ಶ್ಲೋಕದಿಂದ ತೊಡಗಿದೆ. 'ಭಗವಂತರಾದ ಆಚಾರ್ಯರು ಗೃಹಸ್ಥನಾದ ವಿಶ್ವರೂಪನನ್ನು ನೋಡಬೇಕೆಂಬ ಇಚ್ಛೆಯಿಂದ ಆಕಾಶಮಾರ್ಗವಾಗಿ ಯೋಗಬಲದಿಂದ ನಡೆಯುವವರಾಗಿ ಆತನ ಮನೆಯ ಅಂಗಳದಮುಂದೆ ಇಳಿದರು' ಎಂದು ಶ್ಲೋಕದ ಅರ್ಥ. ವ್ಯಾಸಾಚಲೀಯದಲ್ಲಿ ಪ್ರಯಾಗದಲ್ಲಿದ್ದ ಮಂಡನನೇ ಬೇರೆ, ಮಗಧರಾಜ್ಯದಲ್ಲಿದ್ದ ವಿಶ್ವರೂಪನೇ ಬೇರೆ. ಪ್ರಕೃತವಾದ ವಾದವು ಜರುಗಿದ್ದು ಮಂಡನನೊಡನಲ್ಲ, ವಿಶ್ವರೂಪನೊಡನೆ—ಎಂಬುದು ಸ್ಪಷ್ಟವಾಗಿದೆ. ಕಥೆಯನ್ನು ಹೇಳುವದರಲ್ಲಿ ವ್ಯಾಸಾಚಲೀಯವನ್ನೇ ಅನುಸರಿಸಿರುವ ಗೋವಿಂದನಾಥನು ಮಂಡನನ ಹೆಸರನ್ನು ಎತ್ತಿಲ್ಲ. ನನ್ನ ಶಿಷ್ಯನಾದ ವಿಶ್ವರೂಪನೆಂಬುವನು ಮಗಧದಲ್ಲಿದ್ದಾನೆ ಎಂದಿಷ್ಟೇ (ಗೋ. ೫—೨೫) ಭಟ್ಟರಿಂದ ಹೇಳಿಸಿರುತ್ತಾನೆ.

ಮಾಧವಾಚಾರ್ಯನು ವರ್ಣಿಸಿರುವ ವ್ಯಾಸಾಚಲನು ಈ ಗ್ರಂಥದ ಕರ್ತನೊ, ಬೇರೊಬ್ಬನೊ ?— ಎಂಬ ವಿಷಯದಲ್ಲಿ ಸಂಶಯವುಂಟಾಗುವದಕ್ಕೆ ಕಾರಣವನ್ನು ಹಿಂದೆ (ಪು. ೭) ಹೇಳಿರುತ್ತೇವೆ. ಈ ನಮ್ಮ ವ್ಯಾಸಾಚಲೀಯವು ಪುರಾತನ ವ್ಯಾಸಾಚಲೀಯಕ್ಕಿಂತ ಬೇರೆಯೆಂದೂ ಈಚೆಗೆ ಯಾರೋ ಕಲ್ಪಿಸಿದ್ದರೆಂದೂ ಇಟ್ಟುಕೊಂಡರೂ ಮಂಡನ, ವಿಶ್ವರೂಪ—ಇವರಿಬ್ಬರೂ ಬೇರೆಬೇರೆಯ ವ್ಯಕ್ತಿಗಳೆಂಬ ಮತವನ್ನು ಈ ಗ್ರಂಥದ ಕಾಲದಲ್ಲಿಯೇ ಇದ್ದರೆಂಬುದನ್ನು ಅಲ್ಲಗಳೆಯುವದಕ್ಕೆ ಬರುವಂತಿಲ್ಲ. ಯಾಜ್ಞವಲ್ಕ್ಯಸ್ಮೃತಿಗೆ 'ಬಾಲಕ್ರೀಡಾ' ಎಂಬ ವ್ಯಾಖ್ಯಾನವನ್ನು ಬರೆದವರು ವಿಶ್ವರೂಪಾಚಾರ್ಯರೆಂಬ ಪ್ರಸಿದ್ಧಿಯಿದೆ. ಆ ಗ್ರಂಥದ ಶೈಲಿಗೂ ಮಂಡನನ ಶೈಲಿಗೂ ವೈಲಕ್ಷಣ್ಯವಿದೆ. ಆದ್ದರಿಂದಲೂ ಪ್ರಸಿದ್ಧ ಮಂಡನಮಿಶ್ರನೇ ವಿಶ್ವರೂಪನಾಗಿರಲಾರನೆಂದು ತೋರುತ್ತದೆ. ದಕ್ಷಿಣಾಮೂರ್ತಿಸ್ತೋತ್ರಕ್ಕೆ ಮಾನಸೋಲ್ಲಾಸವೆಂಬ ವ್ಯಾಖ್ಯಾನವನ್ನು ಬರೆದವರು ವಿಶ್ವರೂಪಾಚಾರ್ಯರೆಂದು ಆ ವಾರ್ತಿಕದ ವ್ಯಾಖ್ಯಾನಕರ್ತರು ಬರೆದಿರುತ್ತಾರೆ. (ರಾ.ತೀ. ವ್ಯಾಖ್ಯಾ. ಪುಟ ೨೫) ಮಾನಸೋಲ್ಲಾಸವು ಸುರೇಶ್ವರಾಚಾರ್ಯರ ಕೃತಿಯಲ್ಲವೆಂಬುವಕ್ಕೆ ಕಾರಣಗಳಿವೆಯೆಂಬುದನ್ನು ನಾವು ಅದನ್ನು ಕನ್ನಡಿಸಿರುವ ಗ್ರಂಥದ ಪೀಠಿಕೆಯಲ್ಲಿ ತೋರಿಸಿರುವೆವು. ಗೃಹಸ್ಥನಾಗಿದ್ದ ವಿಶ್ವರೂಪನು ಅದನ್ನು ಬರೆದಿರಬಹುದೆ ?—ಎಂಬುದನ್ನು ವಿಮರ್ಶಕರು ಆಲೋಚನೆಮಾಡಬೇಕಾಗಿದೆ. ದಕ್ಷಿಣಾಮೂರ್ತಿಸ್ತೋತ್ರವನ್ನು ಬರೆದವರು ಶಂಕರಾಚಾರ್ಯರೇ ಎಂಬ ಪ್ರತೀತಿಯು ಈ ದೇಶದಲ್ಲಿ ಬಲವಾಗಿದೆ ; ಆದರೆ ಮಾನಸೋಲ್ಲಾಸಕಾರನು ಆಚಾರ್ಯರನ್ನು ಎಲ್ಲಿಯೂ ಹೆಸರಿಸಿಲ್ಲ, ತನ್ನ ಹೆಸರನ್ನೂ ಹೇಳಿಕೊಂಡಿಲ್ಲ. ಹೀಗಿದ್ದರೂ ಮಾನಸೋಲ್ಲಾಸವು ವಿಶ್ವರೂಪಾಚಾರ್ಯಕೃತವೆಂಬ ಕಥೆ ಹೇಗೆ ಬಂದಿತೋ ತಿಳಿಯದು. ಇನ್ನೊಂದು ವಿಚಾರ : ಸಂನ್ಯಾಸಿಗಳು ಚಾತುರ್ಮಾಸ್ಯಸಂಕಲ್ಪವನ್ನು ಮಾಡುವಾಗ 'ಆಚಾರ್ಯಪಂಚಕ'ವನ್ನು ಪೂಜೆಮಾಡುವ ಪದ್ಧತಿ

ಬಿವೆ ; ಅವರಲ್ಲಿ ಸುರೇಶ್ವರಾಚಾರ್ಯರ ಹೆಸರಿಲ್ಲ ; 'ವಿಶ್ವರೂಪಾಚಾರ್ಯ' ರೆಂಬ ಹೆಸರನ್ನೇ ಧರ್ಮಸಿಂಧ್ವಾದಿನಿಬಂಧಗಳು ಉಲ್ಲೇಖಿಸಿವೆ. ವಿಶ್ವರೂಪನು ಗೃಹಸ್ಥನಾದರೆ ಅವನನ್ನು ಆಚಾರ್ಯಪದವಿಯಲ್ಲಿಟ್ಟಿದ್ದು ಹೇಗೆ ಸರಿಯಾದೀತು? ಸಂನ್ಯಾಸಿಯಾಗಿದ್ದರೆ ವಿಶ್ವರೂಪಕೃತಿಗಳಲ್ಲಿ ಹಾಗೆಂಬ ಉಲ್ಲೇಖವೇಕಿಲ್ಲ? ಮಂಡನನೇ ವಿಶ್ವರೂಪನಾಗಿದ್ದರೆ ಆ ಹೆಸರಿನಿಂದ ಮಂಡನನನ್ನು ವ್ಯಾಖ್ಯಾನ ಕಾರರಾದರೂ ಕರೆಯದೆಇರುವದೇಕೆ? ಹೀಗೆ ಮಂಡನವಿಶ್ವರೂಪರು ಒಬ್ಬರೇ ಎಂದು ಒಪ್ಪುವಪಕ್ಕೆ ಅನೇಕ ಅಡ್ಡಿಗಳಿರುತ್ತವೆ ; ವಿಶ್ವರೂಪನೇ ಸುರೇಶ್ವರಾ ಚಾರ್ಯರೆಂಬುವದಕ್ಕೂ ಅಡ್ಡಿಗಳಿವೆ!

**ಮಂಡನನೇ ಸುರೇಶ್ವರಾಚಾರ್ಯರೆಂಬ ಬಗ್ಗೆ ವಿವಾದ :**

೯೫. ಮಂಡನನು ಭಟ್ಟರ ಶಿಷ್ಯನೆಂದು ಮಾಧವಕವಿ ಬರೆದಿರುತ್ತಾನಷ್ಟೆ? ಇದು ನಿಜವಿರಬಹುದೆ? ಅವನೊಡನೆ ಆಚಾರ್ಯರಿಗೆ ವಾದವಾಯಿತೆ? ಅವನು ವಾದದಲ್ಲಿ ಜಿತನಾದಮೇಲೆ ಸುರೇಶ್ವರಾಚಾರ್ಯರೆಂಬ ಹೆಸರಿನಿಂದ ಆಚಾರ್ಯರ ಶಿಷ್ಯನಾದನೆ?– ಎಂಬುದು ಇನ್ನೊಂದು ಕಗ್ಗಂಟಿನ ಪ್ರಶ್ನೆಯಾಗಿದೆ.

ಮದ್ರಾಸಿನಲ್ಲಿ ಪ್ರಾಚ್ಯಲಿಖಿತಪುಸ್ತಕಗ್ರಂಥಾವಳಿಯಲ್ಲಿ (Oriental Manuscript Series No. 4) ಪ್ರಕಟವಾಗಿರುವ ಮಂಡನಕೃತ ಬ್ರಹ್ಮ ಸಿದ್ಧಿಯ ಆಂಗ್ಲ ಪೀಠಿಕೆಯಲ್ಲಿ ಈ ಪ್ರಶ್ನೆಯನ್ನು ವಿವೇಚಿಸಿರುವ ಎಸ್. ಕುಪ್ಪ ಸ್ವಾಮಿಶಾಸ್ತ್ರಿಗಳವರೂ ಮತ್ತು ಮಹಾಮಹೋಪಾಧ್ಯಾಯ ಪಿ. ವಿ. ಸುಬ್ರಹ್ಮಣ್ಯಶಾಸ್ತ್ರಿಗಳವರೂ ಈ ವಿಷಯಕ್ಕೆ ವಿರುದ್ಧಮತದವರಾಗಿರುತ್ತಾರೆ. ಮಂಡನ ಮತ್ತು ಸುರೇಶ್ವರಾಚಾರ್ಯರ ವಾದಗಳಲ್ಲಿ ಕಾಣಬರುವ ಪರಸ್ಪರ ವೈಲಕ್ಷಣ್ಯವನ್ನು, ಶೃಂಗೇರಿಪೀಠದ ಅನುಜ್ಞೆಯಂತೆ ಪ್ರಕಟವಾಗಿರುವ **ಗುರುವಂಶ ಕಾವ್ಯ**ದಲ್ಲಿ ಮಂಡನಸುರೇಶ್ವರಾಚಾರ್ಯರನ್ನು ಬೇರೆಬೇರೆಯ ವ್ಯಕ್ತಿಗಳಾಗಿ ಪರಾಮರ್ಶಿಸಿರುವದನ್ನು ಅವಲಂಬಿಸಿ, ಪ್ರೊ. ಹಿರಿಯಣ್ಣನವರು ಪ್ರಕಟಿಸಿದ ಅಭಿಪ್ರಾಯವನ್ನೇ ಬೆಂಬಿಡಿದು, ಕುಪ್ಪುಸ್ವಾಮಿಶಾಸ್ತ್ರಿಗಳು ಈ ಇಬ್ಬರೂ ಬೇರೆ ಬೇರೆಯ ವ್ಯಕ್ತಿಗಳೆಂದೇ ವಾದಿಸಿರುತ್ತಾರೆ. (1) ಮಂಡನನ ಗ್ರಂಥಗಳಲ್ಲಿ ಆಚಾರ್ಯಮಂಡನಮಿಶ್ರ, ಶ್ರೀಮನ್ಮಂಡನಮಿಶ್ರ, ಮಹಾಮಹೋಪಾಧ್ಯಾಯ ಮಂಡನಮಿಶ್ರ, ಆರ್ಯಮಣ್ಡನ, ಮಣ್ಡನ–ಎಂಬ ಹೆಸರುಗಳು ಕಾಣಿಸುತ್ತಿವೆಯೇ ಹೊರತು ಅವರು ಕುಮಾರಿಲಭಟ್ಟಪಾದಶಿಷ್ಯರೆಂದು ಎಲ್ಲಿಯೂ ಹೇಳಿಲ್ಲವೆಂದು ಶಾಸ್ತ್ರಿಗಳವರು (ಬ್ರ.ಸಿ.ಪೀ. PXXV) ಬರೆದಿರುತ್ತಾರೆ (ವಿವರಣಪ್ರಮೇಯ ಸಂಗ್ರಹ, ಪರಾಶರಮಾಧವೀಯ–ಇವುಗಳಲ್ಲಿ ಬೃಹದಾರಣ್ಯಕವಾರ್ತಿಕಗಳನ್ನು ವಿಶ್ವರೂಪಾಚಾರ್ಯಕೃತವೆಂದು ಪರಾಮರ್ಶಿಸಿರುವದಾಗಿ ಶಾಸ್ತ್ರಿಗಳು ಟಿಪ್ಪಣಿ ಯೊಂದರಲ್ಲಿ ಬರೆದಿರುವದನ್ನು ನೋಡಿದರೆ ಮಾಧವಾಚಾರ್ಯರ ಕಾಲಕ್ಕೇ

ವಿಶ್ವರೂಪಸುರೇಶ್ವರರಿಬ್ಬರನ್ನೂ ಒಬ್ಬನೇ ವ್ಯಕ್ತಿ ಎಂದು ಪರಿಗಣಿಸುವ ಭ್ರಾಂತಿಯು ನೆಲೆನಿಂತಿತ್ತೆಂದು ತಿಳಿಯುತ್ತದೆ. **ನ್ಯಾಯರತ್ನಾವಳೀಕಾರರಾದ ಆನಂದಾನುಭವರು** 'ಗೃಹಸ್ಥಾವಸ್ಥಾಯಾಂ ವಿರಚಿತೇ ವಿಶ್ವರೂಪಗ್ರನ್ಥೇ ದರ್ಶಿತವಾಕ್ಯಸಂಗ್ರಹೋ ದೃಶ್ಯತೇ | ನ ಚಾಸೌ ಗ್ರನ್ಥಃ ಸಂನ್ಯಾಸಿನಾ ವಿರಚಿತಃ| ತಥಾ ಹಿ ಪರಿವ್ರಾಜಕಾಚಾರ್ಯಸುರೇಶ್ವರವಿರಚಿತೇತಿ ಗ್ರನ್ಥೇ ನಾಮ ಲಿಖೇತ್| ಲಿಖಿತಂ ತು ಭಟ್ಟವಿಶ್ವರೂಪೇಣ ವಿರಚಿತೇತಿ||'– ಎಂದು ಬರೆದಿದಾರೆಂದೂ ಶಾಸ್ತ್ರಿಗಳು ಹೇಳುತ್ತಾರೆ. ಆನಂದಾನುಭವರ ಅಭಿಪ್ರಾಯದಲ್ಲಿ ವಿಶ್ವರೂಪ ನೆಂಬುದು ಸಂನ್ಯಾಸಿಯ ಹೆಸರಲ್ಲವೆಂತ ಆಯಿತು. ಇದು ಪ್ರಕೃತವಿಷಯಕ್ಕೆ ಸಂಬಂಧಿಸಿದ್ದಲ್ಲವಾದ್ದರಿಂದ ಇದನ್ನು ಕೈಬಿಡಬಹುದಾಗಿದೆ. (ಆದರೂ ಹಿಂದಿನ ಖಂಡದ ವಿಚಾರಕ್ಕೆ ಇದೊಂದು ಸಾಕ್ಷ್ಯವಾಗಿದೆಯೆಂದು ಪ್ರಸಕ್ತಾನುಪ್ರಸಕ್ತಿಯಿಂದ ಇಲ್ಲಿ ಬರೆದಿದೇವೆ). ಮಂಡನನು ಶಂಕರಾಚಾರ್ಯರ ಶಿಷ್ಯನೆಂದು ಬರೆದುಕೊಂಡಿಲ್ಲವೆಂಬುದನ್ನು ಶಾಸ್ತ್ರಿಗಳು ತೋರಿಸಿದಾರೆ ; ಈ ಗ್ರಂಥಗಳು ಅವನು ಗೃಹಸ್ಥನಾದಾಗ ಬರೆದವುಗಳೆಂದು ಇಟ್ಟುಕೊಂಡರೆ ಮಂಡಸುರೇಶ್ವರೈಕ್ಯಕ್ಕೆ ಇದೇನೂ ಬಾಧಕವಾಗುವದಿಲ್ಲ. ಆದರೆ (2) ಮಂಡನನಿಗೂ ಸುರೇಶ್ವರಾಚಾರ್ಯರಿಗೂ ಇರುವ ತತ್ತ್ವವಿಷಯಕವಾದ ಅಭಿಪ್ರಾಯಭೇದಗಳನ್ನು ಮನದಂದರೆ, ಮತ್ತು (3) ಅದ್ವೈತಗ್ರಂಥಕಾರರು ಮಂಡನಸುರೇಶ್ವರಾಚಾರ್ಯರ ವಚನಗಳನ್ನು ಬೇರೆಬೇರೆಯಾಗಿಯೇ ಆಯಾ ಗ್ರಂಥಕರ್ತರ ಹೆಸರನ್ನು ಉಲ್ಲೇಖಿಸಿ ಪರಾಮರ್ಶಿಸಿರುವದನ್ನೂ ಮನದಂದರೆ, ಮಂಡನಸುರೇಶ್ವರಾಚಾರ್ಯರು ಬೇರೆಬೇರೆಯೇ ಆಗಿರಬೇಕೆಂಬುದು ಸ್ಪಷ್ಟವಾಗುತ್ತದೆ– ಎಂದು ಶಾಸ್ತ್ರಿಗಳು ತೀರ್ಮಾನಿಸಿರುತ್ತಾರೆ. ಕುಪ್ಪುಸ್ವಾಮಿಶಾಸ್ತ್ರಿಗಳವರು ಈ ಸಂದರ್ಭದಲ್ಲಿ ಕೊಟ್ಟಿರುವ ಇನ್ನೊಂದು ಪ್ರಮಾಣವು ವಿಶೇಷವಾಗಿ ಪರಿಶೀಲನೀಯವಾಗಿರುತ್ತದೆ. (4) ಜ್ಞಾನಕರ್ಮಗಳ ಸಂಬಂಧವನ್ನು ವಿಮರ್ಶಿಸುವ ಸಂದರ್ಭದಲ್ಲಿ ಅವುಗಳೆರಡಕ್ಕೂ ವಿರೋಧವಿರುವದರಿಂದ ಅವಕ್ಕೆ ಒಂದಕ್ಕೊಂದಕ್ಕೆ ಯಾವ ಸಂಬಂಧವೂ ಇಲ್ಲ– ಎಂಬ ಶಾಂಕರಮತವನ್ನು ಅನುವಾದಮಾಡುವದಕ್ಕೆ ಹೊರಟು (ಬ್ರ.ಸಿ. ಪು. ೩೨) ಮಂಡನನು 'ತಸ್ಮಾನ್ನಾವಗತಬ್ರಹ್ಮಾತ್ಮಭಾವಃ, ಪ್ರಾಗಿವ ಸಾಂಸಾರಿಕ ಧರ್ಮಭಾಕ್ | ಯಸ್ತು ತಥಾ, ನಾಸಾವವಗತಬ್ರಹ್ಮಾತ್ಮಭಾವ ಇತಿ ||' (ಬ್ರ. ಪು. ೩೪) ಎಂದು ಉಪಸಂಹಾರಮಾಡಿರುತ್ತಾನೆ. ಇದು 'ತಸ್ಮಾನ್ನಾವಗತ ಬ್ರಹ್ಮಾತ್ಮಭಾವಸ್ಯ ಯಥಾಪೂರ್ವಂ ಸಂಸಾರಿತ್ವಮ್ | ಯಸ್ಯ ತು ಯಥಾಪೂರ್ವಂ ಸಂಸಾರಿತ್ವಂ ನಾಸಾವವಗತಬ್ರಹ್ಮಾತ್ಮಭಾವ ಇತ್ಯನವದ್ಯಮ್||' (ಆದ್ದರಿಂದ ಬ್ರಹ್ಮಾತ್ಮಭಾವವನ್ನು ನಿಶ್ಚಯಿಸಿ ಅರಿತುಕೊಂಡಿರುವಾತನಿಗೆ ಮೊದಲಿನಂತೆ ಸಂಸಾರಿತ್ವವಿರುವದಿಲ್ಲ ; ಆದರೆ ಯಾರಿಗೆ ಮೊದಲಿನಂತೆ ಸಂಸಾರಿತ್ವವಿರುವದೋ ಅವನು ಬ್ರಹ್ಮಾತ್ಮಭಾವವನ್ನು ನಿಶ್ಚಯಿಸಿಕೊಂಡಿರುವನಲ್ಲ. ಆದ್ದರಿಂದ ಇಲ್ಲಿ

ಯಾವ ದೋಷವೂ ಇಲ್ಲ) ಎಂಬ ಆಚಾರ್ಯರು ಸಮನ್ವಯಸೂತ್ರಕ್ಕೆ ಬರೆದ ಭಾಷ್ಯವಾಕ್ಯಗಳ ಪ್ರತಿಧ್ವನಿಯಂತೆ ಇರುತ್ತದೆ. ಮಂಡನನು ತನ್ನ ಜ್ಞಾನ ಕರ್ಮಸಮುಚ್ಚಯವಾದದ ಸಿದ್ಧಾಂತಕ್ಕೆ ಪೂರ್ವಪಕ್ಷವಾಗಿ ಇಲ್ಲಿ ಬರೆದುಕೊಂಡಿರುವದು ಶಂಕರಾಚಾರ್ಯರದೇ ಎಂದು ಸೂಚಿಸುವದಕ್ಕೋ ಎಂಬಂತೆ ಸಮನ್ವಯಾಧಿಕರಣಭಾಷ್ಯದಲ್ಲಿರುವ ಎಂದಿಗೂ ಮರೆಯಲಾಗದ ಈ ಎರಡು ವಾಕ್ಯಗಳನ್ನು ಪೂರ್ವಪಕ್ಷದ ಉಪಸಂಹಾರಭಾಗಕ್ಕೆ ಹೆಣೆದುಕೊಂಡಿರುತ್ತಾನೆ ಎಂದು (ಬ್ರ.ಸಿ.ಪೀ. p. xlviii) ಶಾಸ್ತ್ರಿಗಳು ಬರೆದಿರುವದನ್ನು ಎಲ್ಲರೂ ಅನುಮೋದಿಸಬೇಕಾಗಿದೆ; ಮಂಡನಸುರೇಶ್ವರಾಚಾರ್ಯರಿಗಿರುವ ತತ್ತ್ವವಿಷಯಕವಾದ ಅಭಿಪ್ರಾಯಭೇದಗಳನ್ನು ತೋರಿಸುವದು ಅಪ್ರಕೃತವೆಂದೂ ಕಂಡದ್ದರಿಂದ ಅವನ್ನು ಬಿಟ್ಟುಬಿಟ್ಟಿದ್ದೇವೆ. ಈ ವಿಷಯದಲ್ಲಿ ಹೆಚ್ಚಾಗಿ ತಿಳಿಯಬೇಕೆಂಬ ಇಂಗ್ಲಿಷುಪರಿಚಯವುಳ್ಳ ವಾಚಕರು ಬ್ರಹ್ಮಸಿದ್ಧಿಯ ಪೀಠಿಕೆಯನ್ನೇ ಓದಬೇಕು.

ಈವರೆಗೆ ನಾವು ತಿಳಿಸಿರುವದು ಈ ವಾದದ ಒಂದು ಪಕ್ಷ. ಈಗ ಇದರ ಇನ್ನೊಂದು ಪಕ್ಷವನ್ನು ವಾಚಕರಮುಂದೆ ಇಡಬೇಕಾಗಿದೆ. ಪಿ.ವಿ. ಸುಬ್ರಹ್ಮಣ್ಯಶಾಸ್ತ್ರಿಗಳವರು ಇದೇ ಬ್ರಹ್ಮಸಿದ್ಧಿಯ ಮುನ್ನುಡಿಯಲ್ಲಿ ಈ ವಿಷಯಕ್ಕೆ ಬರೆದಿರುವದರ ಸಾರವೇನೆಂದರೆ : (1) ತತ್ತ್ವದ ವಿಷಯಕ್ಕಿರುವ ಮತಭೇದಗಳು ಎಂಥವೇ ಆಗಿರಲಿ, ವ್ಯಕ್ತಿಗಳು ಬೇರೆಬೇರೆ ಎಂಬುದಕ್ಕೇನೂ ಆಧಾರವಾಗಲಾರವು. (2) ಮಂಡನನ ಹೆಸರಿನಲ್ಲಿ ಪ್ರಕಾಶಿತವಾಗಿರುವ ಗ್ರಂಥಗಳು ಪೂರ್ವಮೀಮಾಂಸಾಭಿಮಾನಿಗಳಾದ ವೇದಾಂತಿಗಳ ಪಕ್ಷವನ್ನು ಒಪ್ಪಿದ ಮಂಡನನು ಗೃಹಸ್ಥಾಶ್ರಮದಲ್ಲಿ ಬರೆದವುಗಳೆಂದಿಟ್ಟುಕೊಂಡರೆ ಆಚಾರ್ಯರಿಂದ ಜಿತನಾಗಿ ಶುದ್ಧವೇದಾಂತಪ್ರಕ್ರಿಯೆಯನ್ನು ಅವಲಂಬಿಸಿದ ಸುರೇಶ್ವರಾಚಾರ್ಯರಾಗಿ ಬರೆದ ಗ್ರಂಥಗಳಲ್ಲಿ ಹಿಂದಿನ ಗ್ರಂಥಗಳಲ್ಲಿಲ್ಲದ ಕೆಲವು ವಿಶೇಷಗಳು ಇರಲೇಬೇಕಲ್ಲವೆ ? ಈ ದೃಷ್ಟಿವೈಲಕ್ಷಣ್ಯವುಕೂಡ ಶಾಂಕರಪೂರ್ವತನವೇದಾಂತಿಗಳು, ಶಾಂಕರರು, ಶಂಕರಪಶ್ಚಾತ್ತನವೇದಾಂತಿಗಳು– ಇವರ ದೃಷ್ಟಿವಿಕಾಸದಿಂದ ಆದದ್ದಾಗಿರಬೇಕೆಂಬ ಸಮಾಧಾನಹೇಳುವದಕ್ಕಾಗದಷ್ಟು ಮಹತ್ತರವೂ ವಿರುದ್ಧವೂ ಆಗಿಲ್ಲ. ಮೀಮಾಂಸಕಮಂಡನನು ವಾದಜಿತನಾಗಿ ಸಂನ್ಯಾಸಿಯಾದಮೇಲೆ ಸುರೇಶ್ವರಾಚಾರ್ಯನಾದನೆಂದು ಸಾಂಪ್ರದಾಯಿಕರೆಲ್ಲರೂ ಏಕಕಂಠದಿಂದ ಹೇಳುತ್ತಿದಾರೆ : (3) ಬ್ರಹ್ಮಸಿದ್ಧಿಯನ್ನೂ ಸುರೇಶ್ವರಾಚಾರ್ಯರ ಸಂಬಂಧವಾರ್ತಿಕವನ್ನೂ ಹೋಲಿಸಿದರೆ ಕೆಲವು ಸಮಾನಾರ್ಥಕಶ್ಲೋಕಗಳಿವೆ ; ಕೆಲವು ವಾಕ್ಯಗಳೂ ಸಮಾನವಾಗಿರುತ್ತವೆ. ಇವರಿಬ್ಬರೂ ಒಬ್ಬರೇ ಆಗಿದ್ದರೆ ಮಾತ್ರ ಹೀಗೆ ಸಮಾನವಾಕ್ಯಗಳಿರುವದು ಸಾಧ್ಯ. (4) ಶಂಕರರ ತರುವಾಯ ಬಂದ ಅನತಿದೂರದ ಕಾಲದ ಅದ್ವೈತಿಗಳೂ ಅದ್ವೈತಪ್ರತಿಪಕ್ಷಿಗಳೂ ಮಂಡನಗ್ರಂಥವನ್ನು ಅದ್ವೈತಕ್ಕೆ ಪ್ರಮಾಣವೆಂದು ಒಪ್ಪಿರುವದು ಕಂಡುಬರುತ್ತದೆ. ಕುಪ್ಪುಸ್ವಾಮಿ

ಶಾಸ್ತ್ರಗಳವರು ಕಾಲಕ್ರಮದ ಪಟ್ಟಿಯಲ್ಲಿ ಮಂಡನರಿಗೂ ಸುರೇಶ್ವರರಿಗೂ ಬಹು ಸ್ವಲ್ಪಕಾಲದ (ಐದೇವರ್ಷದ) ಅಂತರವನ್ನು ಕೊಟ್ಟಿರುತ್ತಾರೆ. ಆ ಪಟ್ಟಿಯು ಸರಿಯೆಂದಾದರೆ ಸುರೇಶ್ವರರು ಮಂಡನನ ಗ್ರಂಥದಿಂದ ಅಷ್ಟೊಂದು ವಾಕ್ಯಗಳನ್ನು ಅವರ ಹೆಸರನ್ನುಕೂಡ ಹೇಳದೆ ತಮ್ಮ ಗ್ರಂಥದೊಳಕ್ಕೆ ಸೇರಿಸಿಕೊಳ್ಳುತ್ತಿದ್ದರೆಂದು ಒಪ್ಪುವದಕ್ಕೆ ಆಗುವದಿಲ್ಲ. (5) ವ್ಯಾಸಾಚಲೀಯದಲ್ಲಿ ವಿಶ್ವರೂಪನು ಸಂನ್ಯಾಸವನ್ನು ತೆಗೆದುಕೊಂಡಮೇಲೆ ವಾರ್ತಿಕವನ್ನು ಬರೆಯುವದಕ್ಕೆ ಮಿಕ್ಕ ಶಿಷ್ಯರು ಮಾಡಿದ ಆಕ್ಷೇಪಗಳನ್ನು ಪರಿಹರಿಸುವದಕ್ಕೆ ತಾನು ಮೊದಲು ಕರ್ಮಿಯಾಗಿದ್ದರೂ ಈಗ ತನ್ನ ಮತವು ಬದಲಾಯಿಸಿದೆ ಎಂದು ಹೇಳಿದಂತೆ ಬರುತ್ತದೆ. ಆದ್ದರಿಂದ ವಿಶ್ವರೂಪನ ಅಭಿಪ್ರಾಯಗಳು ಬದಲಾಯಿಸಿದ್ದರೆ ಆಶ್ಚರ್ಯವೇನೂ ಇಲ್ಲ. (6) ಗುರುವಂಶಕಾವ್ಯದಲ್ಲಿ ಹೇಳಿರುವವರು ಇಬ್ಬರೂ ಮಂಡನರೇ; ಅದರಲ್ಲಿ ಒಬ್ಬನು ಗೃಹಸ್ಥನು, ಇನ್ನೊಬ್ಬ ವಿಶ್ವರೂಪನೆಂಬ ಮಂಡನನು ಸಂನ್ಯಾಸಿಯಾಗಿ ಸುರೇಶ್ವರಾಚಾರ್ಯನಾದನು. ಮಂಡನ ಎಂಬುದು ಆಗಿನವರ ಕೆಲವರ ಬಿರುದು. (7) ಶಂಕರವಿಜಯಗಳಲ್ಲಿ ಪ್ರಾಚೀನತಮವಾದ ಆನಂದಗಿರೀಯದಲ್ಲಿ 'ಮಂಡನಮಿಶ್ರ'ನೆಂಬ ಹೆಸರೇ ಇರುವದರಿಂದ ಮಂಡನನೇ ವಾದಜಿತನಾಗಿ ಸುರೇಶ್ವರನಾದನೆಂದು ಒಪ್ಪುವದು ಯುಕ್ತ.

## ಮಂಡನಸುರೇಶ್ವರೈಕ್ಯವಿಷಯಕ್ಕೆ ಈ ಗ್ರಂಥಕರ್ತರ ಅಭಿಪ್ರಾಯ

೯೬. ವಾದಗ್ರಸ್ತವಿಷಯವನ್ನು ವಿಚಾರಶೀಲರಾದವರು ಒಬ್ಬೊಬ್ಬರೂ ನಿಷ್ಪಕ್ಷಪಾತಬುದ್ಧಿಯಿಂದ ವಿಮರ್ಶೆಮಾಡಿ ತಮ್ಮ ತಮ್ಮ ತೀರ್ಮಾನಕ್ಕೆ ಬರಬೇಕಾದದ್ದೇ ಯುಕ್ತವೆಂಬುದನ್ನು ಹೇಳಬೇಕಾದದ್ದಿಲ್ಲವಷ್ಟೆ? ಆದ್ದರಿಂದ ಪ್ರಕೃತ ವಿಷಯಕ್ಕೆ ನಮ್ಮ ತೀರ್ಮಾನವನ್ನು ಸಕಾರಣವಾಗಿ ಇಲ್ಲಿ ಬರೆಯುವೆವು. ವಾಚಕರು ಯುಕ್ತವಾಗಿ ಕಂಡದ್ದನ್ನೇ ಗ್ರಹಿಸಬೇಕು. (1) ಮಂಡನಮಿಶ್ರನು ವೇದಾಂತಿಯಾಗಿದ್ದನೆಂದು ಯಾವ ಶಂಕರವಿಜಯದಲ್ಲಿಯೂ ಬರೆದಿಲ್ಲ; ಆದ್ದರಿಂದ ಅವನು ಮೀಮಾಂಸಾಪಕ್ಷಪಾತಿ ಎಂಬ ಕಾರಣದಿಂದ ಶಂಕರವಿಜಯಕಾರರು ಅವನನ್ನು ಕರ್ಮಠನೆಂದರು ಎಂದು ನಿರ್ಣಯಿಸುವದಕ್ಕೆ ಆಧಾರವಿಲ್ಲ. ಶಂಕರವಿಜಯಗಳಲ್ಲಿ ವಿವೃತವಾಗಿರುವ ವಾದವು ಕರ್ಮಬ್ರಹ್ಮವಾದಗಳನ್ನು ಅವಲಂಬಿಸಿಯೇ ಜರುಗುತ್ತದೆ. ಮಂಡನನು ವೇದಾಂತಪ್ರಾಮಾಣ್ಯವನ್ನು ಒಪ್ಪಲೇ ಇಲ್ಲ. (2) ಗುರುವಂಶಕಾವ್ಯ, ವ್ಯಾಸಾಚಲೀಯ– ಇವೆರಡರಲ್ಲಿಯೂ ಮಂಡನವಿಶ್ವರೂಪರನ್ನು ಬೇರೆಬೇರೆಯ ವ್ಯಕ್ತಿಗಳೆಂದೇ ಭಾವಿಸಲಾಗಿದೆ; ವಿಶ್ವರೂಪನನ್ನು ಮಂಡನನೆಂದು ಕರೆದಿಲ್ಲ. (3) ಮಂಡನನೆಂಬುದು ಬರಿಯ ಬಿರುದು ಎಂದು ಭಾವಿಸುವದಕ್ಕೂ ಬರುವದಿಲ್ಲ. ಏಕೆಂದರೆ ಹಾಗಿದ್ದರೆ ಮಂಡನಮಿಶ್ರನು ತನ್ನ ಗ್ರಂಥಗಳಲ್ಲಿ 'ಆಚಾರ್ಯಮಂಡನ', 'ಮಂಡನಮಿಶ್ರ' ಎಂದು

ಮುಂತಾಗಿ ಮಂಡನನಾಮಮಾತ್ರದಿಂದ ತನ್ನನ್ನು ಕರೆಸಿಕೊಳ್ಳುತ್ತಿರಲಿಲ್ಲ. (4) ಮಂಡನಸುರೇಶ್ವರರ ಗ್ರಂಥಗಳಲ್ಲಿ ವಾಕ್ಯಯುಕ್ತಿಗಳ ಸಾಮ್ಯವಿದೆ ಎಂಬುದು ನಿಜ; ಅಷ್ಟುಮಾತ್ರದಿಂದ ಈ ಇಬ್ಬರೂ ಒಂದೇ ವ್ಯಕ್ತಿ ಎಂದು ಏರ್ಪಡುವದಿಲ್ಲ. ಶಂಕರಾಚಾರ್ಯರೇ ಮುಂತಾದ ಅದ್ವೈತಿಗಳು ತಮಗೆ ಸಂಮತವಾದ ಪಕ್ಷಾಂತರಗಳ ಅದ್ವೈತಪ್ರಕ್ರಿಯೆಗಳನ್ನು ಒಪ್ಪಿ ಉಪಯೋಗಿಸಿಕೊಳ್ಳುತ್ತಲೇಬಂದಿರುತ್ತಾರೆ. ಉದಾಹರಣೆಗೆ ಮಂಡನಮಿಶ್ರನುಕೂಡ 'ಅನಾದಿರಪ್ರಯೋಜನಾ ಅವಿದ್ಯಾ' ಎಂಬ ಅವಿದ್ಯೋಪಾದಾನಭೇದವಾದಿಗಳ ಮತವನ್ನು ತಾನೂ (ಬ್ರ. ಸಿ. ಪು. 10) ಬಳಸಿಕೊಂಡಿದ್ದಾನೆ; ಪ್ರಪಂಚಪ್ರವಿಲಯವಾದಿಗಳ ಮತವನ್ನು (ಬ್ರ. ಸಿ. ಪು. 157) ಸ್ವಲ್ಪಮಟ್ಟಿಗೆ ಮಾರ್ಪಡಿಸಿ ಉಪಯೋಗಿಸಿಕೊಂಡಿರುತ್ತಾನೆ. (5) ಸುರೇಶ್ವರರು ಮಂಡನನಿಂದ ತೆಗೆದುಕೊಂಡಿರುವ ಯುಕ್ತಿಗಳು ಇಬ್ಬರಿಗೂ ಒಪ್ಪಾಗಿರುವವುಗಳಾಗಿರುವವು; ಅವನ್ನೇ ಈ ಇಬ್ಬರಿಗಿಂತಲೂ ಹಿಂದಿನ ಯಾರಾದರೂ ಅದ್ವೈತಿಗಳು ಉಲ್ಲೇಖಿಸಿದ್ದರೋ ಅಥವಾ ಮಂಡನನೇ ಹೊಸದಾಗಿ ಅವನ್ನು ತೆಗೆದನೋ ಈಗ ನಿರ್ಧರಿಸುವದಕ್ಕೆ ಆಗುವಹಾಗಿಲ್ಲ. ಮಂಡನಮಿಶ್ರನ ಬ್ರಹ್ಮಸಿದ್ಧಿಯಲ್ಲಿ ಕಾಣುವ ಭೇದನಿರಾಸಕಯುಕ್ತಿಗಳನ್ನು ಸುರೇಶ್ವರರೂ ಈಚಿನ ವೇದಾಂತಿಗಳೂ ತಮ್ಮದೇ ಎಂಬಂತೆ ಉಪಯೋಗಿಸಿಕೊಳ್ಳುತ್ತಲೇ ಬಂದಿರುತ್ತಾರೆ; ಮಂಡನನ ಸಮುಚ್ಚಯವಾದದ ಯುಕ್ತಿಗಳನ್ನು ಖಂಡಿಸುತ್ತಲೂ ಬಂದಿರುತ್ತಾರೆ. ಇವನ್ನು ನೋಡಿದರೆ ಬೇರೆಬೇರೆಯ ಪಂಗಡದ ಅದ್ವೈತಿಗಳು ತಮ್ಮತಮ್ಮ ಪ್ರಕ್ರಿಯೆಯ ವಿಶೇಷಗಳನ್ನು ಎತ್ತಿತೋರಿಸುತ್ತಲೂ ಸಮಾನವಾದ ಅಭ್ಯುಪಗಮಗಳ ವಿಷಯದಲ್ಲಿ ಒಬ್ಬರನ್ನೊಬ್ಬರು ಅನುಮೋದಿಸುತ್ತಲೂ ಬಂದಿರುತ್ತಾರೆಂದು ಹೇಳಬೇಕಾಗುತ್ತದೆ. ಇಷ್ಟುಮಾತ್ರದಿಂದ ಗ್ರಂಥಕರ್ತೃಐಕ್ಯಕ್ಕೆ ಯಾವ ಬೆಂಬಲವೂ ಬರುವಹಾಗಿಲ್ಲ. ಕುಪ್ಪುಸ್ವಾಮಿಶಾಸ್ತ್ರಿಗಳು ಕಲ್ಪಿಸಿರುವ ಕಾಲಾನುಕ್ರಮಣಿಕೆಯು ಸರ್ವಸಂಮತವಾಗದಿದ್ದರೂ ಈ ಯುಕ್ತಿಗೆ ಎರಡಿಲ್ಲ. (6) ಅನಂತಾನಂದಗಿರಿಯ ಶಂಕರವಿಜಯವು ಸರ್ವಪ್ರಾಚೀನವೆಂದು ಒಪ್ಪುವದಕ್ಕೆ ಅಡ್ಡಿಗಳಿವೆ. ಆ ಗ್ರಂಥದಲ್ಲಿ ಪಾಠಾಂತರಗಳಿರುವದನ್ನೂ ಅದರಲ್ಲಿ ಆಗಾಗ್ಗೆ ತಮ್ಮತಮ್ಮ ಪಕ್ಷಕ್ಕೆ ಬೇಕಾದಂತೆ ವಿಷಯಗಳನ್ನು ಸೇರಿಸಿ ತೆಗೆಯುವ ವಾಡಿಕೆಯಿದೆ ಎಂಬುದನ್ನೂ ನಾವು ಆಗಲೆ ತೋರಿಸಿರುತ್ತೇವೆ. ಇದಲ್ಲದೆ ನಮ್ಮಲ್ಲಿರುವ ತೆಲುಗು ಪುಸ್ತಕದಲ್ಲಿ ಶಂಕರಾಚಾರ್ಯರು ಪದ್ಮಪಾದ, ಸುರೇಶ್ವರ– ಮುಂತಾದವರೊಡನೆ ಮಂಡನಮಿಶ್ರನ ಮನೆಗೆ ಹೋದರೆಂದು ಬರೆದಿದೆ (ಪದ್ಮಪಾದಸುರೇಶ್ವರಾದಿ[1] ಶಿಷ್ಯಕೃತಕರತಾಲೈಃ, ಪ್ರ. ೫೬. ಪು. ೨೧೨)! ಅದನ್ನು ಒಪ್ಪಿದರೆ ಮಂಡನನು ಸುರೇಶ್ವರಾಚಾರ್ಯರಿಗಿಂತ ಭಿನ್ನನೆಂದೇ ಆಗುವದಲ್ಲ! ಇನ್ನೊಂದು ಅನಂದ

1. ದೇ. ಪಾಠದಲ್ಲಿ 'ಪದ್ಮಪಾದಾದಿ' ಎಂದಿಷ್ಟೇ ಇದೆ; ತೆ. ಪಾಠದ 'ತತಃ' ಇಲ್ಲ; 'ಢಕ್ಕಾಕಾಹಲಧ್ವನಿಭಿಃ' ಎಂಬುವದರ ಬದಲು ಢಕ್ಕಾಶಙ್ಖತಾಲಧ್ವನಿಭಿಃ' ಎಂದು ಇದೆ.

ಆನಂದಗಿರೀಯದ ಕೈಬರಹದ ಪ್ರತಿಯು ಕುಂಭಕೋಣಮಠದಲ್ಲಿದೆಯೆಂದೂ ಅದರಿಂದ ಮಾಧವಶಂಕರವಿಜಯದ ಡಿಣ್ಡಿಮವ್ಯಾಖ್ಯಾನಕಾರನು ಅನೇಕ ಶ್ಲೋಕಗಳನ್ನು ಉದಾಹರಿಸಿಕೊಂಡಿರುತ್ತಾನೆಂದೂ ಕೆಲವರ ವಾದವಿದೆ. (NVSK. Appendix) (7) ಪ್ರಾಚೀನಶಂಕರವಿಜಯ, ಬೃಹಚ್ಛಂಕರವಿಜಯ -ಮುಂತಾದವುಗಳನ್ನು ಆತ್ಮಬೋಧರು ಸುಷಮಾಗ್ರಂಥದಲ್ಲಿ ಉಲ್ಲೇಖಿಸಿರುತ್ತಾರೆ. ಅವುಗಳಲ್ಲಿಯೂ ಈ ಮಂಡನವಿಜಯದ ಪ್ರಸ್ತಾಪವು ಇರುವ ಸಂಭವವೂ ಇದೆ. ಗುರುರತ್ನಮಾಲಿಕೆಯಲ್ಲಿಯೇ 'ಪಟುಮಣ್ಡನಮಿಶ್ರಖಣ್ಡನಾರ್ಥಂ ಪ್ರವಿಶನ್ಪದ್ಮವನಂ ನವಂ ಜಯಾರ್ಥಮ್| ತಮಧೃಷ್ಯಗಿರಂ ವಿಧೃಷ್ಯ ವಾದೈರ್ಯತಿಮಾಧಾತ್ ಸ ಚ ಪಾತು ಮಾಂ ಪ್ರಮೋದೀಃ ||' (ಗು.ರ. ೩೨) ಎಂಬಲ್ಲಿ ಮಂಡನಮಿಶ್ರನನ್ನು ಪದ್ಮವನವೆಂಬ ಅಗ್ರಹಾರದಲ್ಲಿ[1] ಆಚಾರ್ಯರು ಜಯಿಸಿದರೆಂದಿದೆ. ಹೀಗಿರುವದರಿಂದ ಆಚಾರ್ಯರಿಂದೀಚೆಗೆ ಎಷ್ಟೋ ಕಾಲದ ಮೇಲೆ ರಚಿತವಾಗಿರುವ ಈ ಶಂಕರವಿಜಯಗಳ ಗ್ರಂಥಗಳಲ್ಲಿ ಅವರವರ ಕಿವಿಗೆ ಬಿದ್ದಿದ್ದ ಕಥೆಗಳನ್ನೇ ಅವರವರು ಬರೆದಿದ್ದಾರೆಂದು ಕಲ್ಪಿಸುವದೇ ಯುಕ್ತತರವಾಗುತ್ತದೆ. (8) ಹೇಗೇ ಆಗಲಿ, ಕುಪ್ಪುಸ್ವಾಮಿಶಾಸ್ತ್ರಿಗಳು ಹೇಳಿರುವಂತೆ ಶಂಕರಭಾಷ್ಯದ ಸಮನ್ವಯಾಧಿಕರಣಭಾಷ್ಯದವಾಕ್ಯಗಳನ್ನು ಮಂಡನನು ಉದಾಹರಿಸಿರುವದರಿಂದ ಅವನ ಬ್ರಹ್ಮಸಿದ್ಧಿಯು ಆ ಭಾಷ್ಯವಾದ ಬಳಿಕವೇ ಬರೆದದ್ದೆಂದು ಒಪ್ಪಬೇಕಾಗತ್ತದೆ ಇದು ನಿಜವಾದರೆ ಆಚಾರ್ಯರು ಒಪ್ಪಿರುವ ವೇದಾಂತಪ್ರಕ್ರಿಯೆಗಿಂತ ವಿಲಕ್ಷಣವಾದ ತನ್ನ ಅಸಾಧಾರಣಪ್ರಕ್ರಿಯೆಯನ್ನು ಮಂಡಿಸುವದಕ್ಕೆಂದೇ ಆ ಗ್ರಂಥವನ್ನು ಅವನುಬರೆದನೆಂದುಹೇಳಬೇಕಾಗುತ್ತದೆ.(9)ಮಂಡನನು ವಿಭ್ರಮವಿವೇಕದಲ್ಲಾಗಲಿ ಬ್ರಹ್ಮಸಿದ್ಧಿಯಲ್ಲಾಗಲಿ ಆಚಾರ್ಯರ ಅಧ್ಯಾಸವಾದವನ್ನು ಪರಾಮರ್ಶಿಸಿರುವದಿಲ್ಲ ; ವಿಪರೀತಖ್ಯಾತಿಯನ್ನು ಸ್ಥಾಪಿಸುವಷ್ಟರಿಂದಲೇ ಸಂತುಷ್ಟನಾಗಿದಾನೆ. ಅವಿದ್ಯೆಯು ಸತ್ತೂ ಅಲ್ಲ, ಅಸತ್ತೂ ಅಲ್ಲ; ಸದಸದ್ವಿಲಕ್ಷಣವಾದ್ದರಿಂದ ಅನಿರ್ವಚನೀಯ- ಎಂಬ ಹೊಸ ವಾದವನ್ನು ಹೊರಕ್ಕೆ ತಂದಿರುತ್ತಾನೆ. ಆ ವಾದವನ್ನು ಈಗಲೂ ವ್ಯಾಖ್ಯಾನಪ್ರಸ್ಥಾನದ ಅದ್ವೈತಿಗಳು ಬಳಸುತ್ತಲೇ ಇರುತ್ತಾರೆ. ವಿಧಿವಿವೇಕಭಾವನಾವಿವೇಕಗಳೆಂಬ ಗ್ರಂಥಗಳಲ್ಲಿ ಮೀಮಾಂಸಕರ ಮತವನ್ನು ಪರಿಷ್ಕರಿಸಿ ವೇದಾಂತಕ್ಕೆ ಹೊಂದಿಸಿರುತ್ತಾನೆ; ಆ ಗ್ರಂಥಗಳನ್ನು ಬ್ರಹ್ಮಸಿದ್ಧಿಯಲ್ಲಿ ಪರಾಮರ್ಶಿಸಿಯೂ ಇರುತ್ತಾನೆ. ಸುರೇಶ್ವರಾಚಾರ್ಯರು ಆ ಗ್ರಂಥಗಳಲ್ಲಿ ತಮಗೆ ಒಪ್ಪಾದಷ್ಟು ಭಾಗವನ್ನು ಇಟ್ಟುಕೊಂಡರೂ ಮಂಡನನು ವಿವೇಚಿಸದೆ ಇರುವ ಹೊಸ ವಾದಗಳನ್ನು ವಾರ್ತಿಕಗಳಲ್ಲಿ ಪ್ರತಿಪಾದಿಸಿರುತ್ತಾರೆ. ಮಂಡನಪಕ್ಷಕ್ಕೆ ಸರಿಹೋಗಲುವ ಅನೇಕ ವಾದಗಳನ್ನು ಖಂಡಿಸಿಯೂ ಇರುತ್ತಾರೆ.

1. ಇದು ಆತ್ಮಬೋಧರ ವ್ಯಾಖ್ಯಾನ ; ಮುಂದೆ ಈ ವಿಷಯವನ್ನು ಮತ್ತೆ ಚರ್ಚಿಸುವೆವು.

ಈ ಎಲ್ಲಾ ಕಾರಣಗಳಿಂದ ಮಂಡನನು ಭಟ್ಟರ ಶಿಷ್ಯನೆಂಬಾಗಲಿ, ಅವನನ್ನು ವಾದದಲ್ಲಿ ಜಯಿಸಿ ಅವನಿಗೆ ಸಂನ್ಯಾಸವನ್ನು ಕೊಟ್ಟು ಸುರೇಶ್ವರಾಚಾರ್ಯರೆಂಬ ಹೆಸರನ್ನು ಆಚಾರ್ಯರು ಕೊಟ್ಟರೆಂಬುದು ಐತಿಹಾಸಿಕಘಟನೆ ಎಂಬಾಗಲಿ, ನಂಬುವದು ಕಷ್ಟವಾಗಿರುತ್ತದೆ.

## ಮಂಡನನೇ ಉಂಬೇಕನೆ ?

೯೭. ಈವರೆಗೆ ಮಾಧವೀಯದಲ್ಲಿರುವ ಮಂಡನ, ವಿಶ್ವರೂಪ ಎಂಬ ಹೆಸರುಗಳನ್ನು ಕುರಿತು ಚರ್ಚಿಸಿದ್ದಾಯಿತು. ಈಗ ಮಾಧವನು ಉಲ್ಲೇಖಿಸಿರುವ ಉಂಬೇಕನೆಂಬ ಮತ್ತೊಂದು ಹೆಸರನ್ನು ಕುರಿತು ವಿವೇಚನೆಮಾಡಬೇಕಾಗಿದೆ. ಪುರಾತತ್ತ್ವಶೋಧಕರು ಹೇಳುತ್ತಿರುವದೇನೆಂದರೆ ಭವಭೂತಿಯು ಪ್ರಖ್ಯಾತ ಮೀಮಾಂಸಕರಾದ ಕುಮಾರಿಲಭಟ್ಟರ ಶಿಷ್ಯನು ; ಅವನೇ ಉಂಬೇಕನು. ಭವಭೂತಿಯ ಮಾಲತೀಮಾಧವದ ಪ್ರಾಚೀನಪ್ರತಿಯೊಂದರಲ್ಲಿ[1] ಮೂರನೆಯ ಅಂಕದ ಕೊನೆಯ ಸಮಾಪ್ತಿವಾಕ್ಯದಲ್ಲಿ 'ಕುಮಾರಿಲಶಿಷ್ಯ(ಭವಭೂತಿ)ವಿರಚಿತ'– ಎಂದಿದೆಯಂತೆ ; ಅದರ ಆರನೆಯ ಅಂಕದ ಕೊನೆಯ ವಾಕ್ಯದಲ್ಲಿ 'ಕುಮಾರಿಲರ ಪ್ರಸಾದದಿಂದ ವಾಗ್ವೈಭವವನ್ನು ಹೊಂದಿದ ಉಮ್ಬೇಕಾಚಾರ್ಯಕೃತಿ' ಎಂದಿದೆಯಂತೆ– (ಬಲ,ಶಂ.ಪು. ೭೫,೭೬) ಉಂಬೇಕನ ಹೆಸರು ಪ್ರಾಚೀನದರ್ಶನಗ್ರಂಥಗಳಲ್ಲಿ ಕಂಡುಬರುತ್ತದೆ. ಚಿತ್ಸುಖಾಚಾರ್ಯರ ತತ್ತ್ವಪ್ರದೀಪಿಕಾಗ್ರಂಥಕ್ಕೆ ನಯನಪ್ರಸಾದಿನೀ ಎಂಬ ವ್ಯಾಖ್ಯಾನವನ್ನು ಬರೆದಿರುವ ಪ್ರತ್ಯಗ್ರೂಪಭಗವಾನ್ ಎಂಬವರು ಉಂಬೇಕನೆಂದರೆ ಭವಭೂತಿಯೇ ಎಂದು(ಪ್ರ ೨೭೫) ಬರೆದಿರುತ್ತಾರೆ. ಈ ಕಾರಣಗಳಿಂದ ಉಂಬೇಕನೆಂದರೆ ಭವಭೂತಿಯೇ ಎಂದು ಈಗಿನ ವಿಮರ್ಶಕರ ಅಭಿಪ್ರಾಯ. ಈ ತತ್ತ್ವಾನ್ವೇಷಣಕ್ರಮವು ನಿರಾಕ್ಷೇಪವಾದದ್ದೆಂದು ನಿರ್ಧರಿಸುವದಕ್ಕಾಗುವಂತಿಲ್ಲ; ಏಕೆಂದರೆ ಈ ಅನ್ವೇಷಕರು ಉದಾಹರಿಸಿರುವ ಪರಾಮರ್ಶಕ ಗ್ರಂಥಗಳ ಕರ್ತರಾದವರೆ ಭಟ್ಟಪಾದರ ಸಮಕಾಲಿಕರಲ್ಲವಾದ್ದರಿಂದ ಅವರೂ ತಮಗೆ ತಿಳಿದಿದ್ದ ಜನಶ್ರುತಿಯನ್ನೇ ನಂಬಿ ಬರೆದಿರಬಹುದಾಗಿದೆ. ಇದು ಹೇಗೇ ಆದರೂ ಮಾಧವೀಯಶಂಕರವಿಜಯದಲ್ಲಿರುವಂತೆ ಮಂಡನಮಿಶ್ರನಿಗೆ ಉಂಬೇಕನೆಂಬ ಹೆಸರಿತ್ತೆಂದು ತಿಳಿಯುವದಕ್ಕೆ ಈ ಭವಭೂತಿಯ ವೃತ್ತಾಂತವೂ ಆಧಾರವಾಗಲಾರದೆಂಬುದಂತೂ ನಿಶ್ಚಯ.

ಹೀಗೆ ಈವರೆಗೆ ಮಾಡಿರುವ ವಿಚಾರಮಥನದಿಂದ ಭಟ್ಟರನ್ನು ಶಂಕರರು ಕಂಡದ್ದು, ಅವರು ತಾವು ವಾರ್ತಿಕವನ್ನು ಮಾಡಬೇಕಾಗಿತ್ತೆಂಬ ಅಭಿಪ್ರಾಯ

1. ಈ ಪ್ರತಿಯು 'ಶ್ರೀಶಂಕರಪಾಂಡುರಂಗಪಂಡಿತ'ರಿಗೆ ದೊರೆಯಿತೆಂದು ಬಲದೇವ ಉಪಾಧ್ಯಾಯರು ಬರೆದಿದ್ದಾರೆ ; ಆ ಗ್ರಂಥವನ್ನೇ ಶೋಧಿಸಿ ನೋಡಿದಹೊರತು ಈ ವಿಷಯಕ್ಕೆ ಹೆಚ್ಚಿನ ಅಭಿಪ್ರಾಯವನ್ನು ಕೊಡುವದಕ್ಕಾಗುವಂತಿಲ್ಲ.

ವನ್ನು ಸೂಚಿಸಿದ್ದು, ಭಟ್ಟರು ಭಾಷ್ಯವನ್ನು ಮೆಚ್ಚಿ ಪ್ರಾಯಶ್ಚಿತ್ತವನ್ನು ಕೈಕೊಳ್ಳದೆ ಇದ್ದಿದ್ದರೆ ವಾರ್ತಿಕವನ್ನು ಬರೆಯುತ್ತಿದ್ದೆನೆಂದು ಹೇಳಿದ್ದು, ತಮ್ಮ ಶಿಷ್ಯನಲ್ಲಿಗೆ ಹೋಗಿ ವಾರ್ತಿಕವನ್ನು ಬರೆಯಿಸಿಕೊಳ್ಳಿರೆಂದು ಸೂಚಿಸಿದ್ದು–ಇವೆಲ್ಲ ಸಂದೇಹದ ಕುಕ್ಷಿಯಲ್ಲಿಯೇ ಇರುತ್ತವೆ ಎಂದಾಯಿತು. ಸುರೇಶ್ವರಾಚಾರ್ಯರು ಬರೆದಿರುವ ವೇದಾಂತವಾರ್ತಿಕಗಳು ಪೂರ್ವಮೀಮಾಂಸಾಶಾಸ್ತ್ರಕ್ಕೆ ಭಟ್ಟಪಾದರು ಬರೆದಿರುವ ವಾರ್ತಿಕಗಳಿಗೇನೂ ಕಡಿಮೆಯಿಲ್ಲ ಎಂಬ ಭಾವವನ್ನು ಮಂಡಿಸುವದೆ ಶಂಕರವಿಜಯಕಾರರ ಅಭಿಪ್ರಾಯವೆಂದು ಕಾಣಿಸುತ್ತಿದೆ. ಅಷ್ಟೇ ಆದರೆ ಆ ಅಭಿಪ್ರಾಯವನ್ನು ನಾವೆಲ್ಲರೂ ಅನುಮೋದಿಸಬಹುದಾಗಿದೆ.

## ಮಂಡನಮಿಶ್ರನಿದ್ದ ಸ್ಥಲದ ವಿಷಯಕ್ಕೆ ತರ್ಕಜಾಲ

೯೮. ಮಂಡನನ ಸ್ಥಲವು ಯಾವದು ?– ಎಂಬುದೂ ವಾದಗ್ರಸ್ತವಾಗಿಯೇ ಇದೆ. ಮಾಧವಕವಿಯು ಮಾಹಿಷ್ಮತಿಗೆ ಆಚಾರ್ಯರು ಹೋದರೆಂದು ಬರೆದ ಪದ್ಯವೇ ರೂಪಾಂತರದಲ್ಲಿ ವ್ಯಾಸಾಚಲೀಯದಲ್ಲಿದ್ದರೂ ಮಂಡನನು ಮಗಧದೇಶದಲ್ಲಿರುವಂತೆ ಭಟ್ಟರು ಹೇಳಿದ್ದಾಗಿ ಅಲ್ಲಿ ವರ್ಣಿಸಿದೆ ಎಂದು (ಪು ೧೨೭) ತಿಳಿಸಿರುತ್ತೇವೆ.

ಚಿದ್ವಿಲಾಸ, ಅನಂತಾನಂದಗಿರಿ–ಇಬ್ಬರೂ ಬಿಜ್ಜಳಬಿಡು ಎಂಬ ಸ್ಥಲದಲ್ಲಿ ಆಚಾರ್ಯರು ಮಂಡನನನ್ನು ಕಂಡರು ಎಂದು ಬರೆದಿದ್ದಾರೆ. ಚಿದ್ವಿಲಾಸೀಯದ ೧೭ನೆಯ ಅಧ್ಯಾಯದಲ್ಲಿ ರುದ್ಧನಗರದಿಂದ ಹೊರಟು ವಿದ್ವಾಂಸರಿಗೆ ಆಧಾರವಾದ ಕಾಶ್ಮೀರಕ್ಕೆ ಬಂದರು (ಕಾಶ್ಮೀರಂ ವಿದ್ವದಾಧಾರಂ ಶುಭಕರಮವಾಪ ಸ||೧೭-೩) ಎಂದು ಹೇಳಿ ಆ ದೇಶವನ್ನು ಕೆಲವು ಶ್ಲೋಕಗಳಿಂದ ವರ್ಣಿಸಿದ ಬಳಿಕ (ಸಮುಲ್ಲಸಲ್ಲತಾಲಾಸ್ಯವಿದ್ಯಾಭ್ಯಾಸೋಚಿತೈಶ್ಶ್ರಿತಂ | ವಿಜ್ವಲದ್ವಿಂಡ್ವರಾಖ್ಯಾತಂ ಪುರಮಾಪ ಸ ದೇಶಿಕಃ|| ೧೭–೧೫ ಎಂದು) ವಿಜ್ಜಲದ್ವಿಂದು ಎಂಬ ಪಟ್ಟಣಕ್ಕೆ ಬಂದರು ಎಂದಿದೆ. ಅನಂತಾನಂದಗಿರೀಯದಲ್ಲಿ ನಮ್ಮಲ್ಲಿರುವ ತೆಲುಗುಪುಸ್ತಕದಲ್ಲಿ 'ಪರಮಗುರುರ್ವಿದ್ಯಾನಿಲಯಮಿತಿ ಪ್ರಸಿದ್ಧಪುರಂ ಪ್ರಾಪ್ತಃ' (ಪರಮಗುರುಗಳು ವಿದ್ಯಾನಿಲಯವೆಂಬ ಪ್ರಸಿದ್ಧವಾದ ಪುರವನ್ನು ಸೇರಿದರು) ಎಂದಿಷ್ಟೇ ಇದೆ. ಸೋಮನಾಥಯ್ಯನವರು : "ಕುಬೇರದಿಙ್ಮಾರ್ಗಮವಲಮ್ಬ್ಯ ಹಸ್ತಿನಾಪುರಾದಾಗ್ನೇಯಭಾಗಸ್ಥಂ ವಿದ್ಯಾನಿಲಯಮಿತಿ ಪ್ರಸಿದ್ಧಂ ತದ್ದೇಶವಾಸಿನಸ್ತು ಬಿಜ್ಜಳಬಿಡುರಿತಿ ವದನ್ತಿ–ತತ್ಪುರಂ ಪ್ರಾಪುಃ||" (ಸೋ. ಶಂ. ಪು. ೯೮) ಉತ್ತರದಿಕ್ಕಿನ ಮಾರ್ಗವನ್ನಾಶ್ರಯಿಸಿ ಹಸ್ತಿನಾಪುರದ ಆಗ್ನೇಯದಲ್ಲಿರುವ ವಿದ್ಯಾನಿಲಯವೆಂದು ಪ್ರಸಿದ್ಧವಾದ–ಆ ದೇಶವಾಸಿಗಳಾದರೋ ಬಿಜ್ಜಳಬಿಡು ಎಂದು ಕರೆಯುತ್ತಾರೆ–ಆ ಪುರವನ್ನು ಸೇರಿದರು–ಎಂದು ವಾಕ್ಯದ ಸರಣಿಯಿದೆ ಎಂದು

ಬರೆದಿದಾರೆ. ಬಲದೇವ ಉಪಾಧ್ಯಾಯರು ನೋಡಿರುವ ಆನಂದಗಿರೀಯದ ಪ್ರತಿ ೧೮೬೮ರಲ್ಲಿ 'ವಿಜ್ವಲಬಿಂದು' ಎಂದಿದೆ (ಬಲ. ಶಂ. ೭೨)ಯಂತೆ ![1] (ಆನಂದ ಗಿರೀಯವು ಗ್ರಂಥಪ್ರಕಾಶಕರ ಕೈವಾಡದಿಂದ ನರಳಿದೆ ಎಂಬುದಕ್ಕೆ ಇದೂ ಒಂದು ಉದಾಹರಣೆ). ಬಿಜ್ಜಳಬಿಡು ಎಂದೇ ಇರಲಿ, ಸಂಸ್ಕೃತರೂಪಕ್ಕೆ ತಿರುಗಿಸಿದ ವಿಜ್ವಲದ್ಬಿಂದು ಎಂಬ ರೂಪದ ಹೆಸರೇ ಇರಲಿ, ಅದು ಮಾಹಿಷ್ಮತೀನಗರವಂತೂ ಅಲ್ಲ; ಅದು ಕಾಶ್ಮೀರದಲ್ಲಿತ್ತೆಂದು ಚಿದ್ವಿಲಾಸ, ಹಸ್ತಿನಾಪುರಕ್ಕೆ ಆಗ್ನೇಯದಲ್ಲಿ ಇತ್ತೆಂದು ಆನಂದಗಿರಿ- ಹೀಗೆ ಹೇಳುತ್ತಿರುವದರಿಂದ ಅದನ್ನು ಪತ್ತೆಮಾಡುವದು ಆಗುವಂತಿಲ್ಲ. 'ಮಣಿಮಂಜರೀಭೇದಿನಿ' ( ಸ. ೩-ಶ್ಲೋ. ೯ )ರಲ್ಲಿಯೂ ವಿದ್ಯಾಲಯವೆಂದು ಹೇಳಿದೆಯಂತೆ (ಸೋ. ಶಂ. ಪು. ೯೯) .[2] 'ವಿಜ್ಜಡಬಿಡು' ಎಂಬಲ್ಲಿ ಗಣಿತಜ್ಯೋತಿಷಶಾಸ್ತ್ರಜ್ಞನಾದ ಭಾಸ್ಕರಾಚಾರ್ಯನು ಇದ್ದನೆಂದು ಸಿದ್ಧಾಂತಶಿರೋಮಣಿಯಲ್ಲಿರುವ—

ಆಸೀತ್ಸಹ್ಯಕುಲಾಚಲಾಶ್ರಿತಪುರೇ ತ್ರೈವಿದ್ಯವಿದ ಜ್ಜನೇ ।
ನಾನಾಸಜ್ಜನಧಾಮ್ನಿ ವಿಜ್ಜಡವಿಡೇ ಶಾಣ್ಡಿಲ್ಯಗೋತ್ರೋ ದ್ವಿಜಃ ॥

ಎಂಬ ಶ್ಲೋಕದಿಂದ (ಸೋ. ಶಂ. ೯೯) ತಿಳಿಯಬರುತ್ತದೆ. 'ಬಿಜ್ಜಳಬಿಡು' ಎಂಬುದು ಕನ್ನಡದ ಹೆಸರಾದರೆ ಬಿಜ್ಜಳಬೀಡು ಎಂದಾಗಿರಬೇಕು. ಆದರೆ ಆ ಸ್ಥಳವುಕೂಡ ಎಲ್ಲಿತ್ತೆಂಬುದು ಪತ್ತೆಯಿಲ್ಲದ್ದರಿಂದ ಅದರ ವಿಷಯದ ಚರ್ಚೆಯನ್ನು ಮುಂದುವರಿಸುವದು ವ್ಯರ್ಥವಾಗಿದೆ.

ಮಾಧವಾಚಾರ್ಯನು ವರ್ಣಿಸಿರುವ ಮಾಹಿಷ್ಮತಿಯು ಮಿಶ್ರನೆಂಬ ಉಪಾಧಿಯುಳ್ಳ ಮಂಡನಮಿಶ್ರನಿರುವದಕ್ಕೆ ತಕ್ಕದ್ದೇನೋ ಹೌದು. ಆವೂರನ್ನು ಈಗ ನರ್ಮದಾತೀರದಲ್ಲಿರುವ 'ಮಾಂಧಾತ'ವೆಂಬ ಹೆಸರಿನ ನಗರಿಯೆಂದು ಹೇಳ್ತಾರೆ. ಮಾಹಿಷ್ಮತೀ ಎಂಬ ಒಂದು ಹೊಳೆಯೂ ನರ್ಮದೆಯೊಡನೆ ಇಲ್ಲಿ ಸಂಗಮವಾಗುತ್ತದೆ. ಆ ಸಂಗಮಸ್ಥಾನದಲ್ಲಿ ಮಂಡನಮಿಶ್ರನ ದೊಡ್ಡ ಉಪ್ಪರಿಗೆ ಮನೆಯಿತ್ತು ; ಇದರ ಅವಶೇಷದ ಚೂರುಗಳು ಈಗಲೂ ಅಲ್ಲಿ ಸಿಕ್ಕುತ್ತವೆ. ಅಲ್ಲಿ ಭೂಮಿಯನ್ನು ಅಗೆದರೆ ಬೂದಿಮಣ್ಣು ಸಿಕ್ಕುತ್ತದೆಯಾದ್ದರಿಂದ ಅಲ್ಲಿ ಯಜ್ಞಯಾಗಾದಿಗಳು ಆಗಿರಬಹುದು. ಮಂಡನಮಿಶ್ರನ ಜನ್ಮವು ಮಿಥಿಲೆಯೇ ಆಗಿದ್ದು ಮಾಹಿಷ್ಮತಿಯು ಪವಿತ್ರಸ್ಥಾನವೆಂಬ ಕಾರಣದಿಂದಲೋ ಅಥವಾ ಯಾವನಾದರೂ ರಾಜನ ಆಶ್ರಯ ದೊರೆತದ್ದರಿಂದಲೋ ಆತನು ಅಲ್ಲಿಯೇ ನೆಲಸಿರಬಹುದೆಂದು ಬಲದೇವ ಉಪಾಧ್ಯಾಯರ ಊಹೆ (ಬಲ. ಶಂ. ೭೨). ಆತನು ಉತ್ತರದೇಶದವನಾಗಿದ್ದು ಬಿಜ್ಜಳಬೀಡು ಎಂಬಲ್ಲಿಗೆ ರಾಜಾಶ್ರಯನಿಮಿತ್ತದಿಂದ ಬಂದಿರಬಹುದೆಂದೂ ಊಹಿಸಬಹುದೆಂದು ಸೋಮನಾಥಯ್ಯ (ಸೋ.ಶಂ.ಪು.

1. ದೇ. ಪುಸ್ತಕದಲ್ಲಿ 'ವಿಜಿಲಬಿನ್ದುರಿತಿ ವದನ್ತಿ' ಎಂದೇ ಇದೆ.

2. ಈಗ ನಮಗೆ ಪುಸ್ತಕವು ಸಿಕ್ಕಿದೆ: 'ವಿದ್ಯಾನಿಲಯಂ ನಾಮ ಪುರಂ ಪ್ರಪೇದೇ' (ಪು. ೨೬) ಎಂದು ಮೂಲಪಾಠವಿದೆ.

೧೧೧)ನವರ ತರ್ಕ. ತರ್ಕಸಾಮ್ರಾಜ್ಯದಲ್ಲಿ ಯಾವ ಕಲ್ಪನೆಗೆತಾನೆ ಪಟ್ಟಾಭಿಷೇಕವಾಗಲಾರದು ? ಇಷ್ಟೆಲ್ಲಾ ಆದರೂ ಮಂಡನಮಿಶ್ರನೊಡನೆ ಆಚಾರ್ಯರಿಗೆ ವಾದವಾಯಿತೆ?– ಎಂಬುದೇ ವಾದಗ್ರಸ್ತವಾಗಿರುವದರಿಂದ ಮಂಡನಮಿಶ್ರನ ಮಿಶ್ರೋಪಾಧಿಯಿಂದ ಮಾಡಿದ ತರ್ಕದಿಂದಾಗಲಿ ಮಾಹಿಷ್ಮತಿಯ ಅಥವಾ ಬಿಜ್ಜಳಬೀಡಿನ ಸ್ಥಾನನಿರ್ಣಯಿಪ್ರಯತ್ನದಿಂದಾಗಲಿ, ಐತಿಹಾಸಿಕರಿಗೆ ಆಗಬೇಕಾದದ್ದಾವರೂ ಏನಿದೆ ?

## ಮಂಡನನ ಭಾರ್ಯೆ ಯಾರು ?

೯೯. ಕಲ್ಪನಾವಲ್ಲಿಯ ಇನ್ನೊಂದು ಹಬ್ಬುಗೆಯನ್ನು ನೋಡಿದಬಳಿಕ ಕಥೆಯನ್ನು ಮುಂದುವರಿಸಬೇಕಾಗಿದೆ. ಮಂಡನನ ಹೆಂಡತಿಯ ವೃತ್ತಾಂತವೇನು? (೧) **ಮಾಧವೀಯದಲ್ಲಿ** ಆಕೆಯು ಸರಸ್ವತಿಯ ಅವತಾರವೇ; ಜನರೂ ಆಕೆಯನ್ನು ಸರಸ್ವತಿಯೆಂದೇ ಹೇಳುತ್ತಿದ್ದರು. (ಸರಸ್ವತೀತಿ ಸಾ ಖಲು ವಸ್ತುವೃತ್ತ್ಯಾ ಲೋಕೋಽಪಿ ತಾಂ ವಕ್ತಿ ಸರಸ್ವತೀತಿ ಮಾ. ಶಂ. ೩–೯) ಹಿಂದಕ್ಕೆ ಋಷಿಗಳು ತಮ್ಮತಮ್ಮ ವೇದವನ್ನು ಬ್ರಹ್ಮನಿಂದ ಅಧ್ಯಯನಮಾಡುತ್ತಿರುವಲ್ಲಿ **ದುರ್ವಾಸರು** ಸ್ವರದಲ್ಲಿ ಎಲ್ಲಿಯೋ ತಪ್ಪಿದ್ದನ್ನು ಕೇಳಿ ನಕ್ಕ ಸರಸ್ವತಿಗೆ'ಮನುಷ್ಯಳಾಗಿ ಹುಟ್ಟು !' ಎಂದು ಶಪಿಸಿದರು. ಆವರ ಕಾಲಿಗೆ ಬಿದ್ದು ಬಹುವಾಗಿ ಬೇಡಿಕೊಂಡಮೇಲೆ ಮಿಕ್ಕ ಋಷಿಗಳ ಪ್ರಾರ್ಥನೆಯಂತೆ ಮನುಷ್ಯಶರೀರನಾದ ಶಂಕರನ ದರ್ಶನವಾದಾಗ ವಿಶಾಪವಾಗುವದೆಂದು ಅನುಗ್ರಹಿಸಿದರು (ಮಾ.ಶಂ. ೩–೧೦ರಿಂದ ೧೫). **ಚಿದ್ವಿಲಾಸೀಯದಂತೆ**[1] ಆಕೆಯ ಹೆಸರು **ಸರಸವಾಣಿ.** ಕಥೆಯು ಮಾಧವೀಯದಂತೆಯೇ ಇದೆ. ಶೋಣಾತೀರದಲ್ಲಿದ್ದ ವಿಷ್ಣುಮಿತ್ರನ ಮಗಳೆಂದು ಚಿದ್ವಿಲಾಸ(ಚಿ.ಶಂ.೧೬–೩೭); **ಮಾಧವ** (ಮಾ.ಶಂ.೩–೧೫,೨೬, ೪೯,೫೭), **ವ್ಯಾಸಾಚಲ** (ವ್ಯಾ.೬–೧೪,೨೬,೨೯); **ಗೋವಿಂದಾನಂದ**(ಗೋ. ೫–೩೧)– ಈ ನಾಲ್ವರೂ ಹೇಳುತ್ತಾರೆ. ಆಕೆಯು ಶೋಣದ ಪಡದಮೇಲಿದ್ದ ಗ್ರಾಮದಲ್ಲಿ ಬ್ರಾಹ್ಮಣನ ಮಗಳಾಗಿ ಹುಟ್ಟಿ ಮಹಾವಿದ್ಯಾವತಿಯಾಗಿದ್ದಳು. ಮಂಡನನು ಹಿಮಮಿತ್ರ(ಶ್ರ?)ನ ಮಗನೆಂಬುದು ಮಾಧವೀಯದ (ಮಾ. ಶಂ. ೩–೫೭) ಒಂದು ವಿಶೇಷ. ಮಂಡನನು ಭಟ್ಟಪಾದರಲ್ಲಿ ಮೀಮಾಂಸವನ್ನು ಕಲಿತುಕೊಂಡು ಪಂಡಿತನಾಗಿ ರಾಜನ ಆಸ್ಥಾನದಲ್ಲಿ ಮರ್ಯಾದೆಯನ್ನು ಹೊಂದಿ

---

1. 'ಶೋಣಾತೀರೇ' ಎಂಬ ಚಿದ್ವಿಲಾಸೀಯದ ಅಚ್ಚಿನ ಪಾಠವು ಸರಿಯಲ್ಲ; ಮಾಧವಾದಿಗಳು ಅನುಸರಿಸಿದ 'ಶೋಣ' ಎಂಬುದೇ ಆ ಹೊಳೆಯ ಹೆಸರು. ಏಕೆಂದರೆ ಅದು ನದಿಯಲ್ಲ, ನದ, ಆಕೆಗೆ ಷಡಂಗಸಮೇತವಾದ ವೇದಗಳೂ ಬರುತ್ತಿದ್ದವೆಂದು ಮಾಧವ ವ್ಯಾಸಾಚಲರಿಬ್ಬರೂ(ಷಡಙ್ಗವೇದಾನ್ ಕಾವ್ಯಾದಿಕಾನ್ ವೇತ್ತಿ ಮಾ. ಶಂ. ೩–೧೬; ವ್ಯಾ. ಶಂ. ೬–೧೫) ಹೇಳುತ್ತಾರೆ. (ಸ್ತ್ರೀಯರಿಗೂ ಆಗ್ಗೆ ವೇದಾಧ್ಯಯನವಿದ್ದಿತೆ ?)

ಪ್ಪನು (೩–೨೫). ಮಂಡನನೂ ಭಾರತಿಯೂ ಒಬ್ಬರ ವಿದ್ಯಾಗುಣಾದಿಗಳನ್ನೊಬ್ಬರು ಕೇಳಿ ಪರಸ್ಪರದರ್ಶನೋತ್ಸುಕರಾಗಿದ್ದರು ; ಸಮಯಬಂದಾಗ ತಾಯಿತಂದೆಗಳಿಗೆ ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಆದರಂತೆ ಇಬ್ಬರಿಗೂ ವಿವಾಹವಾಯಿತು (ಮಾ. ಶಂ. ೩–೧೭ರಿಂದ ೭೭). ಈ ವಿವರವು ವ್ಯಾಸಾಚಲೀಯದಲ್ಲಿಯೂ (ವ್ಯಾ. ಶಂ. ೬–೧೦೨ರಿಂದ ೭೭) ಇದೆ. ಮಂಡನನನ್ನು ವ್ಯಾಸಾಚಲೀಯದಲ್ಲಿ ವಿಶ್ವರೂಪನೆಂದೇ ಕರೆದಿದೆ ; ಮಾಧವೀಯದಲ್ಲಿಯೂ ಆ ಹೆಸರು ಇದ್ದೇ ಇದೆಯೆಂದು ಆಗಲೆ ಹೇಳಿರುತ್ತೇವೆ. ಆದರೆ ಮಾಧವನು ಉಂಬೇಕನೆಂಬ ಹೆಸರನ್ನು ಅವನಿಗೆ ಕೊಟ್ಟು ಅದರ ಕಾರಣದಿಂದ ಅವನ ಹೆಂಡತಿಯಾದ ಭಾರತಿಗೆ 'ಉಂಬೇ' ಎಂಬ ಹೆಸರೂ ಇತ್ತೆಂದು (ಮಾ. ಶಂ. ೭–೧೧೫) ಅವನು ಬರೆದಿರುವದು ಕಲ್ಪನಾಮಾತ್ರವೆಂದು ಆಗಲೆ (ಪು. ೧೩೬) ಹೇಳಿರುತ್ತೇವೆ. ಆಕೆಯು ಶೋಣತೀರದಲ್ಲಿದ್ದ ವಿಷ್ಣುಮಿತ್ರನ ಮಗಳು ಎಂದು ಮಾಧವ, ವ್ಯಾಸಾಚಲ, ಚಿದ್ವಿಲಾಸ– ಎಲ್ಲರೂ ಬರೆಯುತ್ತಾರೆ ; ಮಧ್ಯದೇಶದಲ್ಲಿಯೇ ಶೋಣ ಮತ್ತು ನರ್ಮದಾನದಿಗಳು ಹರಿಯುವದರಿಂದ ಈ ವಿವಾಹಸಂಬಂಧವೇನೂ ಅಸಂಭಾವಿತವೆನ್ನುವದಕ್ಕಿಲ್ಲ. ಆದರೆ ಮಂಡನನಿಗೂ ಆಚಾರ್ಯರಿಗೂ ನಿಜವಾಗಿ ವಾದವಾಯಿತೆಂದು ಇಟ್ಟುಕೊಂಡೇ ಈ ಕಲ್ಪನೆಯನ್ನು ಒಪ್ಪಬೇಕಾಗಿದೆ.

# ೯. ಮಂಡನನೊಡನೆ ವಾದ

## ಮಂಡನನ ಗೃಹ

೧೦೦. ಶಂಕರಾಚಾರ್ಯರು ಮಾಹಿಷ್ಮತೀಪುರದ ಹತ್ತಿರದಲ್ಲಿದ್ದ ಕಮಲ ವನದಲ್ಲಿ[1] (ಪ್ರಫುಲ್ಲರಾಜೀವವನೇ ಮಾ.ಶಂ. ೮-೩) ವಿಶ್ರಮಿಸಿಕೊಂಡು ಆಹ್ನಿಕ ವನ್ನು ಮುಗಿಸಿ ಮುಂದಕ್ಕೆ ನಡೆಯುತ್ತಾ ಮಂಡನನ ಮನೆಯ ದಾಸಿಯರನ್ನು ಕಂಡು 'ಮಂಡನಪಂಡಿತನ ಮನೆ ಎಲ್ಲಿದೆ?' ಎಂದು ಕೇಳಿದರು (ಮಾ. ಶಂ. ೮-೫)- ಎಂದು ಮಾಧವೀಯ. ವಿಜ್ವಲಬಿಂದುಪುರಕ್ಕೆ ಬಂದು ಒಬ್ಬ ಬ್ರಾಹ್ಮಣನನ್ನು ಕೇಳಿದರು (ಚಿ. ಶಂ. ೧೭-೧೫) ಎಂದು ಚಿದ್ವಿಲಾಸೀಯ ದಲ್ಲಿದೆ. ಆಚಾರ್ಯರು ಶಿಷ್ಯರನ್ನೆಲ್ಲ ಆ ಪಟ್ಟಣದ ಪೂರ್ವಭಾಗದ ಉದ್ಯಾನಗಳಲ್ಲಿ ನಿಲ್ಲಿಸಿ ತಾವು ಒಬ್ಬರೇ ಪುರವನ್ನು ಹೊಕ್ಕರು. ಸೂರ್ಯನು ಪಶ್ಚಿಮಕ್ಕೆ ತಿರುಗುವದರಲ್ಲಿರಲು ದಾಸಿಯರ ಸಮೂಹವನ್ನು ಕಂಡು ಮಂಡನಮಿಶ್ರನ ಮನೆ ಎಲ್ಲಿ ಎಂಬುದಾಗಿ ಕೇಳಿದರು ಎಂದು ಆನಂದಗಿರೀಯದಲ್ಲಿದೆ (ಪ್ರ. ೫೬, ಪು. ೨೧೪ ; ದೇ. ಪು. ೧೮೩).

'ಸ್ವತಃಪ್ರಮಾಣ, ಪರತಃಪ್ರಮಾಣ', 'ಕರ್ಮವೇ ಫಲವನ್ನು ಕೊಡ ತಕ್ಕದ್ದು, ಈಶ್ವರನೇ ಫಲವನ್ನು ಕೊಡುವವನು', 'ಜಗತ್ತು ನಿತ್ಯ, ಅದು ಅನಿತ್ಯ' -ಎಂದು ಬಾಗಿಲಿನ ಪಂಜರಗಳಲ್ಲಿ ಹೆಣ್ಣುಗಿಳಿಗಳು ನುಡಿಯುತ್ತಿರುವವಲ್ಲ, ಅದೇ ಮಂಡನಪಂಡಿತನ ಮನೆ- (ಮಾ. ಶಂ. ೮-೬ರಿಂದ ೮) ಎಂಬ ಉತ್ತರವನ್ನು ದಾಸಿಯರು ಕೊಟ್ಟರೆಂದು ಮಾಧವನು ವರ್ಣಿಸಿದ್ದಾನೆ. ಚಿದ್ವಿಲಾಸ ಯತಿಯು ಬ್ರಾಹ್ಮಣನ ಮುಖದಿಂದ ಕೊಟ್ಟ ಉತ್ತರವು ಹೀಗಿದೆ : ಆ ಮನೆಗೆ ವಿದ್ಯಾಲಯವೆಂದು ಹೆಸರು. ಅದು ತಾಳೆಮರದಷ್ಟು ಎತ್ತರವಾಗಿದೆ ; ಅದರ ಸುತ್ತಲೂ ಪೌಳಿಯೂ ಹೆಬ್ಬಾಗಿಲೂ ಇದೆ. ಅದಕ್ಕೆ ನೂರು ಕಲ್ಲುಕಂಬಗಳು ಇವೆ. ಗರ್ಭಾಗಾರ, ಈಶ್ವರಾಗಾರ, ಶಯ್ಯಾಗಾರ-ಇವುಗಳೂ ಇವೆ. ಮುಂದುಗಡೆಯಲ್ಲಿ ವಿಶಾಲವಾದ ಪಾಠಶಾಲೆಗಳಿವೆ. ಹತ್ತುಮೊಳ ಎತ್ತರದ ಒಂದು ದೊಡ್ಡ ಜಗುಲಿ ಯನ್ನು ನಿರ್ಮಾಣಮಾಡಿಸಿ ಅದರಮೇಲೆ ಕುಳಿತು ಶಿಷ್ಯರಿಗೆ ಆತನು ಪಾಠವನ್ನು ಹೇಳುತ್ತಿರುತ್ತಾನೆ. ಮನೆಯ ಎರಡೂ ಕಡೆಗಳಲ್ಲಿ ಬೀದಿಗಳನ್ನು ಮಾಡಿಸಿ ಅದರ ಬಾಗಿಲುಗಳಲ್ಲಿ ವೇದವೇದಾಂಗಗಳು, ಪುರಾಣಗಳು,- ಇವುಗಳನ್ನು ಕಲಿಸುತ್ತಿರು

---

1. ಪದ್ಮವನವೆಂಬುದೊಂದು ಅಗ್ರಹಾರದ ಹೆಸರೆಂದು ಆತ್ಮಬೋಧರು (ಗು.ರ. ಸು. ಶ್ಲೋ. ೨೨) ಬರೆದಿದಾರೆ.

ತ್ತಾನೆ. ಸುತ್ತಲೂ ಕಟ್ಟಿರುವ ಪಂಜರಗಳಲ್ಲಿ ಗಿಳಿಗಳು ಪಂಡಿತರಂತೆ ವಾದ ಮಾಡುತ್ತಿರುತ್ತವೆ. ಪಾತಂಜಲ, ಕಾಪಿಲ, ಜೈಮಿನಿಸೂತ್ರ-ಇವುಗಳಲ್ಲಿ ಪ್ರಸಂಗ ವನ್ನು ಮಾಡುತ್ತಿರುತ್ತವೆ ; ಋಗ್ಯಜುಸ್ಸಾಮಗಳನ್ನು ಗಾನಮಾಡುತ್ತಿರುತ್ತವೆ ; ಕಾವ್ಯಗಳನ್ನು ಪಠಿಸುತ್ತಿರುತ್ತವೆ. ಕರ್ಮವೇ ಸತ್ಯವೆಂದು ಕೆಲವು, ಅದು ಪೂರ್ವಪಕ್ಷವೆಂದು ಕೆಲವು-ಹೀಗೆ ಹೇಳುತ್ತಿರುತ್ತವೆ.

ಆನಂದಗಿರೀಯದಲ್ಲಿ ದಾಸಿಯರು ಕೊಟ್ಟ ಉತ್ತರವೂ (ಪ್ರ. ೫೬-೨೧೪, ೨೧೫, ; ದೇ. ಪು. ೧೪೩, ೧೪೪) ಹೀಗೆಯೇ ಇದೆ. ಆದರೆ ಶ್ಲೋಕಗಳು ಸ್ವಲ್ಪ ಹೆಚ್ಚಾಗಿವೆ. ಮನೆಯ ವರ್ಣನೆಯನ್ನು ಕವಿಯು ತಾನೇ ಬರೆದಿರುತ್ತಾನೆ. '(ವಿದ್ಯಾನಿಲಯ)ಪುರದ ಪಶ್ಚಿಮದಿಕ್ಕಿನಲ್ಲಿ ಮಂಡನಮಿಶ್ರನು ತಾಳೆಯ ಮರ ದಷ್ಟು ಉನ್ನತವಾಗಿರುವ ಶಾಲೆಯನ್ನು ಮಾಡಿ ಅದರ ಮುಂದೆ ಚಚ್ಚೌಕನೆಯ ಭೂಮಿಭಾಗದಲ್ಲಿ ನೂರು ಮೊಳದ ಪ್ರಮಾಣದಲ್ಲಿ ಒಂದರ ಎದುರಿಗೊಂದು ಇರುವ ಎರಡು ವೇದಿಕೆಗಳನ್ನು ನಿರ್ಮಾಣಮಾಡಿಸಿ ಅವುಗಳ ಮೇಲುಭಾಗದಲ್ಲಿ ಕಟ್ಟಿಗೆಯಿಂದ ಮಾಡಿದ ಗಿಳಿಯಪಂಜರಗಳನ್ನು ತೂಗುಹಾಕಿಸಿಟ್ಟು ಅಲ್ಲಿ ಐನೂರರಷ್ಟು ಶಿಷ್ಯರನ್ನು- ಒಬ್ಬೊಬ್ಬರು ಒಂದೊಂದು ಶಾಸ್ತ್ರದಲ್ಲಿ- ಪಾರೀಣ ರನ್ನಾಗಿ ಮಾಡಿಕೊಂಡಿದ್ದನು. ನಾಲ್ಕು ಮುಖಗಳಿಂದ ಬ್ರಹ್ಮನಂತೆ, ಸಾವಿರ ಬಾಯಿಗಳಿಂದ ಶೇಷನಂತೆ, ಐದು ಮುಖಗಳಿಂದ ರುದ್ರನಂತೆ, ಆರು ದರ್ಶನ ಗಳಿಂದ ಷಣ್ಮುಖನಂತೆ ಇದ್ದನು ; ಸಮುದ್ರವನ್ನು ದಾಟಿ ಹಾರುವ ಶಿಷ್ಯರನ್ನು ಸಮಸ್ತದಿಕ್ಕುಗಳನ್ನೂ ಜಯಿಸುವಷ್ಟು ಸಮರ್ಥರನ್ನಾಗಿ ಮಾಡಿದನು. ಆ ಮನೆಯ ಒಳಗೆ ಸೇವಕರಿಂದಲೂ ದಾಸದಾಸೀಜನರಿಂದಲೂ ಬಾವಿಕೆರೆಕಟ್ಟೆ ಗಳನ್ನು ನಿರ್ಮಿಸಿ ಅವುಗಳ ಮೂಲಕ ಪಡೆದ ಆಹಾರ, ಕಾಯಿಪಲ್ಯ ಮುಂತಾ ದವುಗಳಿಂದಲೇ ದಿನದಿನವೂ ಸಕಲ ಶಿಷ್ಯರೊಡನೆ ಷಡ್ರಸೋಪೇತವಾದ ಅನ್ನಭಕ್ಷ್ಯ ಗಳಿಂದ ಪರಿತೃಪ್ತನಾಗಿರುತ್ತಿದ್ದನು'(ಆ.ಶಂ.ಪ್ರ.ಪು. ೨೧೨,೨೧೩ ದೇ.ಪು. ೧೪೨).

ವಿದ್ಯಾಲಯವೆಂಬುದು ಊರ ಹೆಸರೆಂದು ಆನಂದಗಿರಿಯೂ ಮನೆಯ ಹೆಸರೆಂದು ಚಿದ್ವಿಲಾಸಯತಿಯೂ ಹೇಳಿರುವದನ್ನು ಲಕ್ಷಿಸಬೇಕು. ಅವನ ಮನೆಯ ಮುಂದೆ ಒಂದು ಜಗುಲಿ ಇತ್ತೆಂದು ಚಿದ್ವಿಲಾಸರು, ಎರಡು ಜಗುಲಿಗಳಿದ್ದವೆಂದು ಅನಂತಾನಂದಗಿರಿ. ಒಟ್ಟಿನಲ್ಲಿ ಮಂಡನನು ಮಹಾವಿದ್ವಾಂಸನು, ಶ್ರೀಮಂತನು, ಅನೇಕ ಶಿಷ್ಯಪರಿವೃತನು- ಎಂಬುದೊಂದರಲ್ಲಿ ಮಾತ್ರವೇ ಶಂಕರವಿಜಯಕಾರರಿಗೆ ಐಕಕಂಠ್ಯವಿದೆ. ವ್ಯಾಸಾಚಲೀಯದಲ್ಲಿ ಊರ ಅಥವಾ ಮನೆಯ ಹೆಸರಾಗಲಿ ವರ್ಣನೆಯಾಗಲಿ ಇಲ್ಲ. ಆತನು ಭೂಭೃನ್ನಿಕೇತನ (ವ್ಯಾ. ಶಂ. ೬-೨೮), ಅಥವಾ ರಾಜಪುರ (ವ್ಯಾ. ಶಂ. ೬-೭೭) ದಲ್ಲಿದ್ದನೆಂದು ಮಾತ್ರ ಬರೆದಿದೆ. ಭಾರತಿಯೂ ಮಂಡನನೂ ಮದುವೆಯಾದ ಬಳಿಕ ರಾಜಗೃಹಕ್ಕೆ ಹೋದರೆಂದು

(ವಧೂವರೌ ರಾಜಗೃಹಂ ಸಮಾಯತುಃ | ಮಾ. ಶಂ. ೩–೭೭, ವ್ಯಾ. ಶಂ. ೬–೭೭) ಮಾಧವಕವಿಯೂ ಬರೆದಿದ್ದಾನೆ. ಈ ಶ್ಲೋಕವು ವ್ಯಾಸಾಚಲಮಾಧವೀಯಗಳಿಗೆ ಸಮಾನವಾಗಿರುವದರಿಂದ ವಿಶ್ವರೂಪನು ರಾಜಗೃಹದಲ್ಲಿದ್ದನೆಂದೇ ಅರ್ಥವಾಗುತ್ತದೆ. ಹೀಗಿದ್ದರೂ 'ಮಾಹಿಷ್ಮತಿ' ಎಂಬ ಹೆಸರನ್ನು ಮಾಧವನು ಏತಕ್ಕೆ ಬರೆದನೆಂಬುದು ವಿಚಾರಣೀಯವಾಗಿದೆ. ಊರ ಹೊರಗಿನ 'ರಾಜೀವವನ'ದಲ್ಲಿ ಆಚಾರ್ಯರು ವಿಶ್ರಮಿಸಿಕೊಂಡರೆಂದು ಮಾಧವನು ಹೇಳಿರುತ್ತಾನೆ; ಮಂಡನಮಿಶ್ರನನ್ನು ಖಂಡಿಸಿದ್ದು 'ಪದ್ಮವನ'ವೆಂದು ಗುರುರತ್ನಮಾಲಿಕೆಯಲ್ಲಿ ಹೇಳಿದ್ದು, ಪದ್ಮವನವೆಂಬುದು ಆ ಹೆಸರಿನ ಅಗ್ರಹಾರವೆಂದು ಆತ್ಮಬೋಧರು ಬರೆದಿರುವದನ್ನು ಹಿಂದೆ (ಪು. ೧೩೫) ತಿಳಿಸಿರುತ್ತೇವೆ. ಒಟ್ಟಿನಲ್ಲಿ ಈ ವಿವರವೂ ಕಲ್ಪನಾಮಾತ್ರವೆಂದಾಯಿತು.

## ಮಂಡನನ ಮನೆಗೆ ಆಚಾರ್ಯರು ಬಂದ ದಿನ ಮತ್ತು ಪ್ರವೇಶಿಸಿದ ರೀತಿ :

೧೦೧. ಆಚಾರ್ಯರು ಮನೆಯ ಹೊರಭಾಗಕ್ಕೆ ಬಂದರು. ಮನೆಯ ಬಾಗಿಲು ಭದ್ರವಾಗಿ ಹಾಕಿತ್ತು ; ಒಳಕ್ಕೆ ಹೋಗುವದು ಆಗುವಹಾಗಿಲ್ಲವೆಂದು ತಿಳಿದು ಯೋಗಬಲದಿಂದ ಆಕಾಶಮಾರ್ಗವಾಗಿ ಅಂಗಣದೊಳಕ್ಕೆ ಬಂದರು (ಮಾ.ಶಂ.೮–೯). ಮನೆಯನ್ನು ನೋಡುತ್ತಾ ಉಪ್ಪರಿಗೆಯ ಗವಾಕ್ಷದ ಅವಕಾಶದಿಂದ ಇಳಿದು ಮಂಡನನನ್ನು ಕಂಡರು. ಆತನು ತಪೋಮಹಿಮೆಯಿಂದ ಜೈಮಿನಿಯನ್ನೂ ವ್ಯಾಸರನ್ನೂ ಶ್ರಾದ್ಧಕ್ಕೆ ನಿಮಂತ್ರಣಮಾಡಿ ಅವರ ಕಾಲುಗಳನ್ನು ತೊಳೆಯುತ್ತಿದ್ದನು. ಕೆಳಕ್ಕೆ ಇಳಿದ ಆಚಾರ್ಯರನ್ನು ಅವರಿಬ್ಬರೂ ಪ್ರತಿನಂದನೆ ಮಾಡಿದರು. ಮಂಡನನು ಅವರನ್ನು ಕಂಡು ಕೋಪದಿಂದ ಆಕ್ಷೇಪಿಸಿ ಮಾತನಾಡಿದನು. ಮುಂದೆ ಅವರಿಬ್ಬರಿಗೂ ವಿಲಕ್ಷಣವಾದ ವಾಗ್ವಾದವಾಯಿತು (ಮಾ. ಶಂ. ೮–೯ರಿಂದ ೧೫). ಇದು ಮಾಧವೀಯದಲ್ಲಿರುವ ವೃತ್ತಾಂತ. ಚಿದ್ವಿಲಾಸೀಯದಲ್ಲಿ ಹೀಗಿದೆ : ಆ ದಿನ ಆ ಮಂಡನನ ಮನೆಯಲ್ಲಿ ಪಿತೃಕಾರ್ಯವಿತ್ತು. ಬ್ರಾಹ್ಮಣಾರ್ಥವಾಗಿ ವ್ಯಾಸರನ್ನು ಪಿತೃಸ್ಥಾನದಲ್ಲಿ ಕೂಡಿಸಿ ಅವರಿಗೆ ಸಮವಾದ ಬ್ರಾಹ್ಮಣರಿಲ್ಲದ್ದರಿಂದ ವೈಶ್ವದೇವಸ್ಥಲದಲ್ಲಿ ಲಕ್ಷ್ಮೀನಾರಾಯಣ ಸಾಲಿಗ್ರಾಮವನ್ನು ಇರಿಸಿ ಬಾಗಿಲನ್ನು ಭದ್ರವಾಗಿ ಮುಚ್ಚಿಸಿ ಇದ್ದುಕೊಂಡಿದ್ದನು. ಶಂಕರಾಚಾರ್ಯರು ಬಾಗಿಲಿಗೆ ಅಗುಳಿಯನ್ನು ಹಾಕಿದ್ದದ್ದನ್ನು ಕಂಡು ಪಾದುಕಾಘುಟಿಕಾಸಿದ್ಧಿಯೇ ಮುಂತಾದ ಸಕಲಸಿದ್ಧಿಗಳೂ ತಮ್ಮ ಕೈಯಲ್ಲಿಯೇ ಇದ್ದದ್ದರಿಂದ, ಪದ್ಮಪಾದರೇ ಮೊದಲಾದ ಶಿಷ್ಯರನ್ನು ಹೊರಗೆ ಬಿಟ್ಟು ಆ ಮನೆಯ ಅಂಗಳವನ್ನು ಗಗನಮಾರ್ಗದಿಂದ ಪ್ರವೇಶಿಸಿದರು. ಆಗ ಮಂಡನಮಿಶ್ರನು ಬ್ರಾಹ್ಮಣಪಾದಾರ್ಚನಮಾಡುತ್ತಿದ್ದು ವ್ಯಾಸರನ್ನು ಪಿತೃಸ್ಥಾನದಲ್ಲಿಟ್ಟು ಹಿಂತಿರುಗಿ

ನೋಡಲು ವೈಶ್ವದೇವಪ್ರದೇಶದಲ್ಲಿ ಕುಳಿತಿದ್ದ ಯತೀಶ್ವರನನ್ನು ಕಂಡು ಕೋಪ ದಿಂದ ಮುಂದೆ ಹೇಳುವಂತೆ ಅವರೊಡನೆ ವಾದಮಾಡಿದನು(ಚಿ.ಶಂ. ೧೭-೨೯ರಿಂದ ೩೪). ಆನಂದಗಿರೀಯದಲ್ಲಿ ಬಾಗಿಲನ್ನು ಭದ್ರಪಡಿಸಿದ್ದರಿಂದ ಪ್ರಾಣಾಯಾಮ ಬಲದಿಂದ ಒಳಕ್ಕೆ ಹೊಕ್ಕರೆಂದಿದೆ. ಅಲ್ಲಿಯೂ ಶ್ರಾದ್ಧವಿವರವು ಚಿದ್ವಿಲಾಸೀಯ ದಂತೆ ಇದೆ. (ಪ್ರ.- ೫೬ ಪು. ೨೧೩,೨೧೪). ಮಂಡನನು 'ವಿಶ್ವೇದೇವಾನು ಕಲ್ಪಸಾಲಿಗ್ರಾಮುಪೆ, ಸ್ವಾಗತವೆ ?'[1] ಎಂದು ದರ್ಭಾಕ್ಷತೆಗಳನ್ನು ಹಾಕುವ ಹೊತ್ತಿಗೆ ಮಂಡಲದಲ್ಲಿ ಶಂಕರಾಚಾರ್ಯರ ಪಾದದ್ವಯವನ್ನು ಕಂಡು ಕೋಪ ಕೋಲಾಹಲಚಿತ್ತನಾದನು. ಅವರಿಬ್ಬರೂ ಮುಂದೆ ಹೇಳುವಂತೆ ವಾದಿಸಿದರು (ಆ. ಶಂ. ಪ್ರ. ೫೫ ; ಪು. ೨೧೫ ; ದೇ. ಪು ೧೮೪) ಎಂದಿಂದೆ.

ವ್ಯಾಸಾಚಲೀಯದಲ್ಲಿ ಶಾದ್ಧದ ಮಾತೇ ಇಲ್ಲ; ವಿಶ್ವರೂಪನು ಆಹ್ನಿಕ ವನ್ನು ಮಾಡಿ ಅತಿಥಿಯನ್ನು ನಿರೀಕ್ಷಿಸುತ್ತಾ ಇರಲು ಆಚಾರ್ಯರನ್ನು ಕಂಡು ಭಿಕ್ಷೆಯನ್ನು ಮನಸಾ ಸಂಕಲ್ಪಿಸಿ ಅವರ ಪಾದಕ್ಕೆ ಪುಷ್ಪಾಂಜಲಿಯನ್ನು ಹಾಕಿ ಕಾಲುತೊಳೆದು ( ಪ್ರತೀಕ್ಷಮಾಣೋಽತಿಥಿಮಾತಿಥೇಯಃ | ಉದೈಕ್ಷತೈನಮ್ ವ್ಯಾ. ಶಂ ೬-೨; ಸ ಭಿಕ್ಷವೇಽದೃಷ್ಟಚರಾಯ ತಸ್ಮೈ ಸಂಕಲ್ಪ್ಯ ಭಿಕ್ಷಾಂ ಪದಯೋ ರಮುಷ್ಯ | ಚಿಕ್ಷೇಪ ಪುಷ್ಪಮ್ ೬-೩) ಅವರು ಹಸ್ತದಲ್ಲಿ ಭಾರತಿಯು ಹಾಕಿದ ನೀರನ್ನು ಕುಡಿಯದೆಯೂ ಕೆಳಕ್ಕೆ ಹಾಕದೆಯೂ (ನ ಚಾಪಿಬನ್ನಾಪಿ ಮುಮೋಚ ೬-೭) ಇದ್ದರು. ಇದೇಕೆಂದು ವಿಶ್ವರೂಪನು ಕೇಳಿದ್ದಕ್ಕೆ 'ನನ್ನ ಕಾರ್ಯವನ್ನು ಮಾಡಿಕೊಟ್ಟರೆ ನಿಮ್ಮ ಮನೆಯಲ್ಲಿ ಭೋಜನಮಾಡುವೆನು, ಈ ನೀರನ್ನೂ ಕುಡಿಯುವೆನು' ಎಂದರು. 'ಶಕ್ಯವಾದರೆ ಮಾಡುವೆನು, ಅದನ್ನು ಹೇಳಿರಿ' ಎಂದ ವಿಶ್ವರೂಪನಿಗೆ 'ನಿನ್ನೊಡನೆ ವಾದಮಾಡಬೇಕೆಂದು ನನ್ನ ಮನಸ್ಸಿನಲ್ಲಿದೆ ; ಆ ಭಿಕ್ಷೆಯನ್ನು ಕೊಟ್ಟರೆ ನೀರನ್ನು ಕುಡಿಯುತ್ತೇನೆ' (ಸಾರ್ಧಂ ತ್ವಯಾ ವದಿತು ಮಿಚ್ಛತಿ ಮೇ ಮನೋಽರ್ಹನ್ | ತಚ್ಚೇತ್ಪ್ರದಾಸ್ಯತಿ ಭವನ್ ಪ್ರಪಿಬಾಮಿ ಪಾಥಃ |") ಎಂದರು. ಆತನು 'ನೀವು ಹೇಳಿದ್ದು ಇಷ್ಟೇನೆ ? ನನಗೂ ಇದರ ಇಚ್ಛೆಯಿದೆ ; ಆದರೆ ವಾದಮಾಡುವವರೇ ಯಾರೂ ಇಲ್ಲ' ಎಂದು ವಾದಕ್ಕೆ ಆರಂಭಿಸಿದನು. (ವ್ಯಾ. ಶಂ. ೬-೮೪ರಿಂದ ೮೬)-ಎಂದಿದೆ. ಗೋವಿಂದನಾಥನ ಶಂಕರಾಚಾರ್ಯಚರಿತದಲ್ಲಿಯೂ ಹೀಗೇ ಇದೆ ; ಆದರೆ ಅಲ್ಲಿ ವಿಶ್ವರೂಪನೇ ಜಲವನ್ನು ಹಾಕಿದನೆಂದಿದೆ, (ಯತಿಹಸ್ತೇ ಜಲಂ ದತ್ತ್ವಾ ಭೈಕ್ಷಂ ದತ್ತ್ವಾ ಪುನರ್ಜಲಮ್ ಗೋ. ೫-೪೬) ಎಂದಿದೆ. ಭಾರತಿಯು ಜಲವನ್ನು ಕೊಟ್ಟಳೆಂದೂ ಇಲ್ಲ.

---

1. 'ವಿಶ್ವೇದೇವಾನುಕಲ್ಪ' ಎಂಬುದಕ್ಕೆ ಬದಲು ದೇ|| ಪಾಠದಲ್ಲಿ 'ವಿಶ್ವೇದೇವಾನ ಸಂಕಲ್ಪ್ಯ' (ಪು. ೧೮೫) ಎಂದಿದೆ.

ಇಲ್ಲಿ (೧) ಚಿದ್ವಿಲಾಸೀಯದಲ್ಲಿಯೂ ಆನಂದಗಿರೀಯದಲ್ಲಿಯೂ ಆಚಾರ್ಯರು ಶಿಷ್ಯರೊಡನೆ ಬಂದಿದ್ದರೆಂದೂ ಅವರನ್ನು ಹೊರಗೇ ಬಿಟ್ಟು ತಾವೊಬ್ಬರೇ ಮಂಡನನ ಮನೆಯೊಳಕ್ಕೆ ಬಂದರೆಂದೂ ಹೇಳಿರುವದನ್ನು ಲಕ್ಷಿಸಬೇಕು. ಮಾಧವೀಯದಲ್ಲಿ ಹಾಗೆಂದು ಬಾಯಿಬಿಟ್ಟು ಹೇಳದಿದ್ದರೂ ಶಿಷ್ಯರನ್ನು ಪ್ರಯಾಗದಲ್ಲಿ ಬಿಟ್ಟುಬಂದರೆಂದೇನೂ ಹೇಳಿಲ್ಲ. ಶಿಷ್ಯರೂ ಜೊತೆಯಲ್ಲಿದ್ದರೆ ಅವರೂ ಆಕಾಶಮಾರ್ಗದಿಂದ ಬಂದರೆ? ಅವರಿಗೆಲ್ಲ ಯೋಗದ ಈ ಸಿದ್ಧಿಯಾಗಿತ್ತೆ? ಆಗಿದ್ದರೆ ಯಾರಿಂದ ಹೇಗೆ ಆಯಿತು ?–ಎಂಬುದನ್ನು ಯಾವ ಶಂಕರವಿಜಯದಲ್ಲಿಯೂ ಹೇಳಿಲ್ಲ. (೨) ಮಾಧವೀಯದಂತೆ ವ್ಯಾಸಜೈಮಿನಿಗಳಿಬ್ಬರನ್ನೂ ಮಂಡನನು ತಪೋಬಲದಿಂದ ನಿಮಂತ್ರಣಮಾಡಿದ್ದನು. ಆನಂದಗಿರೀಯದಂತೆ ಮಂತ್ರಶಕ್ತಿಯ ಬಲದಿಂದ ವ್ಯಾಸರನ್ನು ಮಾತ್ರ ಕರೆದಿದ್ದನು; ಚಿದ್ವಿಲಾಸೀಯದಂತೆಯೂ ವ್ಯಾಸರೊಬ್ಬರನ್ನೇ ಕರೆದಿದ್ದನು. ವ್ಯಾಸಾಚಲೀಯದಲ್ಲಿ ಕರೆಯಲೇ ಇಲ್ಲ; ಅಲ್ಲಿ ಶ್ರಾದ್ಧವೇ ಇಲ್ಲ, ಬರಿಯ ಆತಿಥಿಸತ್ಕಾರ !

## ಶಂಕರಾಚಾರ್ಯರು ಅನಿರೀಕ್ಷಿತವಾಗಿ ಬಂದಾಗ ಆದದ್ದೆಂಬ ಪ್ರಥಮಸಂಭಾಷಣೆ

೧೦೨. ಶಂಕರಾಚಾರ್ಯರು ಒಳಕ್ಕೆ ಬಂದಾಗ ಮಂಡನನು ಸಿಟ್ಟಿನ ಭರದಲ್ಲಿ ಅವರೊಡನೆ ಮಾಡಿದ ವಾದದ ವಿವರವು (ಮಾ. ಶ. ೮–೧೬ರಿಂದ ೩೧)ಹೀಗಿದೆ. (ಇಲ್ಲಿ ಮಂಡನಶಂಕರವಾಕ್ಯಗಳನ್ನು ಅನುವಾದಸಹಿತವಾಗಿ ಬರೆದಿದ್ದೇವೆ) :

(೧) ಕುತೋ ಮುಣ್ಡೀ (ಎಲ್ಲಿಂದಲೋ, ಬೋಳ ?) ಅಗಲಾನ್ಮುಣ್ಡೀ (ಕತ್ತಿನಿಂದ ಮೇಲಕ್ಕೆ ಬೋಳ( (೨) ಪನ್ಥಾಸ್ತೇ ಪೃಚ್ಛ್ಯತೇ ಮಯಾ (ನಿನ್ನ ದಾರಿಯನ್ನು ಕೇಳುತ್ತಿದೇನೆ). ಕಿಮಾಹ ಪನ್ಥಾಃ (ದಾರಿ ಏನು ಹೇಳಿತು) ? (೩) ತ್ವನ್ಮಾತಾ ಮುಣ್ಡೇತ್ಯಾಹ (ನಿನ್ನ ತಾಯಿ ಮುಂಡೆ ಎಂದಿತು), ತಥೈವ ಹಿ, ಪನ್ಥಾನಂ ತ್ವಮಪೃಚ್ಛಃ, ತ್ವಾಂ ಪನ್ಥಾಃ ಪ್ರತ್ಯಾಹ (ಸರಿ, ನೀನು ದಾರಿಯನ್ನು ಕೇಳಿದೆ; ದಿನಗೆ ದಾರಿ ಉತ್ತರಕೊಟ್ಟಿತು) (೪) ಅಹೋ ಕಿಂ ಸುರಾಪೀತಾ (ಎಲಾ, ಸುರೆಯು ಪೀತವಾಗಿದೆಯೇನು ; ಹೆಂಡವನ್ನು ಕುಡಿದಿದ್ದೀಯೇನು ?–ಎಂದು ಅಭಿಪ್ರಾಯ) ; ನೈವ, ಶ್ವೇತಾ ಯತಃ ಸ್ಮರ (ಅಲ್ಲವೇ ಅಲ್ಲ ಪೀತವಲ್ಲ, ಹಳದಿಯಲ್ಲ ; ಬೆಳ್ಳಗಿದೆ, ನೆನಪಿಸಿಕೊ !) (೫) ಕಿಂ ತ್ವಂ ಜಾನಾಸಿ ತದ್ವರ್ಣಮ್ (ನಿನಗೆ ಅದರ ಬಣ್ಣವು ತಿಳಿದಿದೆಯೇನು) ? ಅಹಂ ವರ್ಣಮ್. ಭವಾನ್ ರಸಮ್ (ನಾನು ಬಣ್ಣವನ್ನು ಬಲ್ಲೆ, ನೀನು ರುಚಿಯನ್ನು) ! (೬) ಮತ್ತೋ ಜಾತಃ ಕಲಞ್ಜಾಶೀಃ (ಕಲಂಜವನ್ನು–ಮೃಗಮಾಂಸವನ್ನು ತಿಂದು ಮತ್ತನಾಗಿದೀಯೆ) . ಸತ್ಯಂ ಬ್ರವೀಷಿ (ಷಿ ?) ಪಿತೃವತ್, ತ್ವತ್ತೋ ಜಾತಃ ಕಲಞ್ಜಭುಕ್ (ನಿಜವನ್ನು ಹೇಳಿದೆ, ಮತ್ತಃ ಎಂಬುದಕ್ಕೆ ನನ್ನಿಂದ ಎಂಬರ್ಥವನ್ನು ಮಾಡಿದರೆ ನಿನ್ನಿಂದ ಹುಟ್ಟಿದವನು ತಂದೆಯಂತೆ ಕಲಂಜವನ್ನು ತಿನ್ನುವವನೇ ಎಂದರ್ಥವಾಗುತ್ತದೆ.) (೭) ಕನ್ಥಾಂ ವಹಸಿ ದುರ್ಬುದ್ಧೇ ಗರ್ದಭೇನಾಪಿ ದುರ್ಭರಾಮ್ । ಶಿಖಾಯಜ್ಞೋಪವೀತಾಭ್ಯಾಂ ಕಸ್ತೇ

ಭಾರೋ ಭವಿಷ್ಯತಿ (ಎಲೈ ದುರ್ಬುದ್ಧಿಯೆ, ಕತ್ತೆಯೂ ಹೊರಲಾರದ ಕಂತೆಯನ್ನು ಹೊದ್ದಿದ್ದೀಯಲ್ಲ ಶಿಖಾಯಜ್ಞೋಪವೀತಗಳಿಂದ ನಿನಗೇನು ಭಾರವಾಗುತ್ತಿತ್ತು) ? ಕನ್ಥಾಂ ವಹಸಿ ದುರ್ಬುದ್ಧೇ ತವ ಪಿತ್ರಾಪಿ ದುರ್ಭರಾಮ್ । ಶಿಖಾಯಜ್ಞೋಪವೀತಾಭ್ಯಾಂ ಶ್ರುತೇರ್ಭಾರೋ ಭವಿಷ್ಯತಿ ॥ (ಬುದ್ಧಿಹೀನನೆ, ನಿನ್ನ ತಂದೆಯೂ ಹೊರಲಾರದ ಕಂತೆಯನ್ನು ಧರಿಸಿದ್ದೀಯೆ. ಶಿಖಾಯಜ್ಞೋಪವೀತಗಳಿಂದ ಶ್ರುತಿಗೆ ಭಾರವಾಗುವದು). (೮) ತ್ಯಕ್ತ್ವಾ ಪಾಣಿಗೃಹೀತೀಂ ಸ್ವಾಮಶಕ್ತ್ಯಾ ಪರಿರಕ್ಷಣೇ । ಶಿಷ್ಯಪುಸ್ತಕಭಾರೇಚ್ಛೋರ್ವ್ಯಾಖ್ಯಾತಾ ಬ್ರಹ್ಮನಿಷ್ಠತಾ । (ಹೆಂಡತಿಯನ್ನು ಕಾಪಾಡಲಾರದೆ ಮದುವೆಯಾದವಳನ್ನು ಬಿಟ್ಟು ಶಿಷ್ಯರ ಪುಸ್ತಕಭಾರವನ್ನು ಬಯಸುವ ನಿನ್ನ ಬ್ರಹ್ಮನಿಷ್ಠೆ ಪ್ರಖ್ಯಾತವಾಯಿತು) ! ಗುರುಶುಶ್ರೂಷಣಾಲಸ್ಯಾತ್ಸಮಾವರ್ತ್ಯ ಗುರೋಃ ಕುಲಾತ್ । ಸ್ತ್ರಿಯಂ ಶುಶ್ರೂಷಮಾಣಸ್ಯ ವ್ಯಾಖ್ಯಾತಾ ಕರ್ಮನಿಷ್ಠತಾ ॥ (ಗುರುವನ್ನು ಶುಶ್ರೂಷೆ ಮಾಡಲಾರದೆ ಆಲಸಿಕೆಯಿಂದ ಮನೆಗೆ ಬಂದು ಹೆಂಡತಿಯ ಸೇವೆಯನ್ನು ಮಾಡುತ್ತಿರುವ ನಿನ್ನ ಕರ್ಮನಿಷ್ಠೆಯು ಪ್ರಖ್ಯಾತವಾಯಿತು) ! (೯) ಸ್ಥಿತೋಽಸಿ ಯೋಷಿತಾಂ ಗರ್ಭೇ ತಾಭಿರೇವ ವಿವರ್ಧಿತಃ । ಅಹೋ ಕೃತಘ್ನತಾ ಮೂರ್ಖ ಕಥಂ ತಾ ಏವ ನಿನ್ದಸಿ ॥ (ಸ್ತ್ರೀಯರ ಗರ್ಭದಲ್ಲಿದ್ದು ಅವರಿಂದಲೇ ಬೆಳೆದು. ಅವರನ್ನೇ ನಿಂದಿಸುತ್ತಿರುವೆಯಲ್ಲ ; ಎಲಾ ಮೂರ್ಖ, ಎಂಥ ಕೃತಘ್ನತೆಯಿದು) ! ಯಾಸಾಂ ಸ್ತನ್ಯಂ ತ್ವಯಾ ಪೀತಂ ಯಾಸಾಂ ಜಾತೋಽಸಿ ಯೋನಿತಃ । ತಾಸು ಮೂರ್ಖತಮ ಸ್ತ್ರೀಷು ಪಶುವದ್ರಮಸೇ ಕಥಮ್ ॥ (ಯಾರ ಸ್ತನ್ಯವನ್ನು ಕುಡಿದಿರುವೆಯೋ, ಯಾರ ಯೋನಿಯಿಂದ ಹುಟ್ಟಿರುವೆಯೋ ಅವರಲ್ಲಿಯೇ ಪಶುವಿನಂತೆ ಹೇಗೆ ರಮಿಸುತ್ತೀಯೊ, ಮೂರ್ಖತಮ !) (೧೦) ವೀರಹತ್ಯಾಮವಾಪ್ತೋಽಸಿ ವಹ್ನೀನುದ್ವಾಸ್ಯ ಯತ್ನತಃ । (ಅಗ್ನಿಗಳನ್ನು ಯತ್ನಪೂರ್ವಕವಾಗಿ ಉದ್ವಾಸನೆಮಾಡಿದ್ದರಿಂದ ನಿನಗೆ ವೀರಹತ್ಯಾದೋಷವು ಬಂದಿದೆ) ; ಆತ್ಮಹತ್ಯಾ-ಮವಾಪ್ತಸ್ತ್ವಮವಿದಿತ್ವಾ ಪರಂ ಪದಮ್ ॥ (ಪರಮಪದವನ್ನು ಅರಿತುಕೊಳ್ಳದೆ ನೀನು ಆತ್ಮಹತ್ಯಾದೋಷವನ್ನು ಪಡೆದುಕೊಂಡೆ) ! (೧೧) ದೌವಾರಿಕಾನ್ ವಞ್ಚಯಿತ್ವಾ ಕಥಂ ಸ್ತೇನವದಾಗತಃ । (ಕಾವಲುಗಾರರನ್ನು ವಂಚಿಸಿ ಕಳ್ಳನಂತೆ ಒಳಕ್ಕೆ ಹೇಗೆ ಬಂದೆ?) ಭಿಕ್ಷುಭ್ಯೋಽನ್ನಮದತ್ವಾ ತ್ವಂ ಸ್ತೇನವದ್ಭೋಕ್ಷ್ಯಸೇ ಕಥಮ್ ॥ (ಭಿಕ್ಷುಗಳಿಗೆ ಅನ್ನವನ್ನು ಕೊಡದೆ ಕಳ್ಳನಂತೆ ಹೇಗೆ ಊಟಮಾಡುತ್ತಿರುವೆ) ? (೧೨) ಕರ್ಮಕಾಲೇ ನ ಸಂಭಾಷ್ಯ ಅಹಂ ಮೂರ್ಖೇಣ ಸಂಪ್ರತಿ (ಕರ್ಮಕಾಲದಲ್ಲಿ ನಾನು ಮೂರ್ಖನೊಡನೆ ಸಂಭಾಷಿಸುವವನಲ್ಲ). ಅಹೋ ಪ್ರಕಟಿತಂ ಜ್ಞಾನಂ ಯತಿಭಙ್ಗೇನ ಭಾಷಿಣಾ । ಆಹಾ ! ನ ಸಂಭಾಷ್ಯ ಅಹಮ್ ಎಂಬಲ್ಲಿ ಯತಿಭಂಗವನ್ನು ಮಾಡಿ ಮಾತನಾಡುವ ನಿನ್ನ ಜ್ಞಾನವು ಪ್ರಕಟವಾಯಿತು ! (೧೩) ಯತಿಭಙ್ಗೇ ಪ್ರವೃತ್ತಸ್ಯ ಯತಿಭಙ್ಗೋ ನ ದೋಷಭಾಕ್ ; ( ಯತಿಭಂಗದಲ್ಲಿ ಪ್ರವೃತ್ತನಾದವನಿಗೆ ಯತಿಭಂಗವನ್ನು ಮಾಡಿದ ದೋಷವಿಲ್ಲ) ; ಯತಿಭಙ್ಗೇ ಪ್ರವೃತ್ತಸ್ಯ ಪಞ್ಚಮ್ಯನ್ತಂ ಸಮಸ್ಯತಾಮ್ । (ಯತಿಭಙ್ಗೇ ಪ್ರವೃತ್ತಸ್ಯ ಎಂಬಲ್ಲಿ ಪಂಚಮ್ಯಂತಸಮಾಸವನ್ನು ಮಾಡಿಕೊ ! ಯತಿಯಿಂದ ಭಂಗ ಎಂದು ಅರ್ಥವು ಸರಿಯಾಗುವದು). (೧೪) ಕ್ವ ಬ್ರಹ್ಮ ಕ್ವ ಚ ದುರ್ಮೇಧಾಃ ಕ್ವಾಯಂ ದೋಷಃ ಕ್ವ ವಾ ಕಲಿಃ !) (ಬ್ರಹ್ಮವೆಲ್ಲಿ; ದುರ್ಬುದ್ಧಿಯಾದವನೆಲ್ಲಿ ! ಈ ದೋಷವೆಲ್ಲಿ, ಕಲಿಯೆಲ್ಲಿ !) . ಕ್ವ ಸ್ವರ್ಗಃ ಕ್ವ ದುರಾಚಾರಃ ಕ್ವಾಗ್ನಿಹೋತ್ರಂ ಕ್ವ ವಾ ಕಲಿಃ ॥ (ಸ್ವರ್ಗವೆಲ್ಲಿ, ದುರಾಚಾರವೆಲ್ಲಿ ? ಅಗ್ನಿಹೋತ್ರವೆಲ್ಲಿ, ಕಲಿಯೆಲ್ಲಿ ?)

ಈ ಮೇಲೆ ಕೊಟ್ಟಿರುವ ಸಂವಾದವು ಇದೇ ವಾಕ್ಯಗಳಿಂದಲ್ಲದಿದ್ದರೂ ಸ್ವಲ್ಪ ಹೆಚ್ಚುಕಡಿಮೆ ಈ ಅಭಿಪ್ರಾಯವೇ ಬರುವ ವಾಕ್ಯಗಳಿಂದ ಚಿದ್ವಿಲಾಸೀಯ (೧೭-೩೪ ರಿಂದ ೪೧), ಆನಂದಗಿರೀಯ (ಪ್ರ. ೫೬ ಪು. ೨೧೫, ೨೧೬ ; ದೇ. ಪು. ೧೮೪), ಸದಾನಂದ (೬-೧೩ರಿಂದ ೨೮)- ಈ ಎಲ್ಲಾ ಶಂಕರವಿಜಯಗಳಲ್ಲಿಯೂ ಇದೆ. ಆದ್ದರಿಂದ 'ಇದು ನಿಶ್ಚಯವೆಂದು ನಂಬಬಹುದು....ಮಂಡನ ಪಂಡಿತನು ಅಜೇಯನಾದ ವಿದ್ವಾಂಸನಾಗಿದ್ದ ಕಾರಣ ಆತನಿಗೆ ತಮ್ಮ ಪ್ರಜ್ಞೆಯನ್ನೂ ಧೈರ್ಯವನ್ನೂ ವ್ಯಕ್ತಪಡಿಸಬೇಕೆಂಬುದು ಒಂದು ಉದ್ದೇಶ; ಆತನ ಮನಸ್ಸಿನ ಶಾಂತತೆಯನ್ನು ನಾಶಮಾಡಿ ಅನಂತರ ಪ್ರಸಂಗಕ್ಕೆ ಎಳೆಯಬೇಕೆಂದು ಎರಡನೆಯ ಉದ್ದೇಶ. ಈ ಉದ್ದೇಶಗಳಿಂದ ಆಚಾರ್ಯರು ಹೀಗೆ ಮಾಡಿರಬಹುದು. ಪ್ರಸಂಗದಲ್ಲಿ ಪ್ರತಿಪಕ್ಷದವರ ವಾಗ್ಬಂಧನೆಮಾಡುವದಕ್ಕೆ ಇದು ರಹಸ್ಯವಾದ ಉಪಾಯ' ಎಂದು ಸೋಮನಾಥಯ್ಯನವರು (ಸೋ.ಶಂ.ಪು.೧೮೦ ಟಿಪ್ಪಣಿಯಲ್ಲಿ) ಬರೆದಿರುತ್ತಾರೆ. ನಮಗೆ ಅದು ಸರಿಯೆಂದು ಕಾಣುವದಿಲ್ಲ. ಒಂದನೆಯದಾಗಿ ಮಂಡನಮಿಶ್ರನು ಮಹಾವಿದ್ವಾಂಸನಾಗಿ ಕರ್ಮನಿಷ್ಠನಾಗಿದ್ದ ಮಹಾತ್ಮನು ; ವ್ಯಾಸಜೈಮಿನಿಗಳಂಥ ಬ್ರಾಹ್ಮಣರನ್ನು ನಿಮಂತ್ರಿಸಿರುವಾತನು. ಶ್ರಾದ್ಧದ ದಿನ 'ಅಕ್ರೋಧನೈಃ ಶೌಚಪರೈಃ' ಎಂಬ ವಚನದಂತೆ ಬ್ರಾಹ್ಮಣರೂ ಯಜಮಾನನೂ ಅತ್ಯಂತಶಾಂತತೆಯಿಂದಿರಬೇಕಾಗಿರುವಲ್ಲಿ ಆವನು ಅಂತರಿಕ್ಷದಿಂದ ಯೋಗಶಕ್ತಿಯಿಂದ ಇಳಿದ ಯತಿಯನ್ನು ಹೀಗೆ ಅವಾಚ್ಯವಾದ ಕ್ರೋಧಪೂರಿತವಚನಗಳಿಂದ ನಿಂದಿಸಿದನೆಂಬುದು ಕಥಾಸಂದರ್ಭಕ್ಕೆ ಹೊಂದುವಹಾಗಿಲ್ಲ. ಆತನು ಇಷ್ಟು ಕ್ರೋಧಾವಿಷ್ಟನಾಗಿ ವಾಗ್ವಾದವನ್ನು ಮಾಡುವವರೆಗೂ ವ್ಯಾಸಜೈಮಿನಿಗಳಂಥ ಮಹಾತ್ಮರೂ ಸುಮ್ಮನೆ ಇದ್ದರೆಂಬುದೂ ಅಸಂಭಾವಿತ. ಎರಡನೆಯದಾಗಿ, ಶಂಕರಾಚಾರ್ಯರು ಅನಿಮಂತ್ರಿತರಾಗಿ ವಿಶ್ವೇದೇವಸ್ಥಾನದಲ್ಲಿ ತಾವೇ ನುಗ್ಗಿ ಕುಳಿತರೆಂಬುದೂ, ಶ್ರಾದ್ಧಕಾಲದಲ್ಲಿ ಹೀಗೆ ವಿಘ್ನವನಾಚರಿಸಿದರೆಂಬುದೂ, ಹೇಗಾದರೂ ಮಾಡಿ ಪ್ರತಿವಾದಿಯ ವಾಕ್ಸ್ತಂಭವನ್ನು ಮಾಡಿ ಗೆದ್ದೆವೆಂದು ಹೇಳಿಕೊಳ್ಳುವಷ್ಟು ಕೀಳಂತಸ್ತಿನವರಾಗಿದ್ದರೆಂಬುದೂ ವಿಶ್ವಸನೀಯವಲ್ಲ ; ವೇದಾಂತದ ರಹಸ್ಯವನ್ನು ಜನರಿಗೆ ತಿಳಿಸಿಕೊಟ್ಟು ತಮ್ಮ ಭಾಷ್ಯಗಳಲ್ಲಿ 'ಶಾಂತದರ್ಪರಾಗಿರುವವರಿಗೇ ಈ ತತ್ತ್ವವು ತಿಳಿಯುತ್ತದೆಯೇ ಹೊರತು ಸ್ವಮತಾಭಿನಿವಿಷ್ಟರಾದ ತಾರ್ಕಿಕರಿಗೆ ತಿಳಿಯುವದಿಲ್ಲ' ಎಂದು ಅಲ್ಲಲ್ಲಿ ಬರೆದಿರುವ ಮಹನೀಯರಲ್ಲವೆ, ಅವರು ? ಅಂಥವರು ಮಂಡನನ ಶಾಂತಿಭಂಗವನ್ನು ಮಾಡಿ ಹೇಗೋ ಉಪಾಯದಿಂದ ಅವನನ್ನು ವಾದದಲ್ಲಿ ಸೋಲಿಸಬೇಕೆಂದು ಹವಣಿಸಿಯಾರೆ ? ಹಾಗೆ ಹವಣಿಸಿದರೆ ಅವರಿಗೂ ಅವರ ವೇದಾಂತಕ್ಕೂ ಕಲಂಕವನ್ನು ತಂದುಕೊಂಡಂತೆ ಆಗುವದಿಲ್ಲವೆ ? ಮೂರನೆಯದಾಗಿ, ಮಂಡನಮಿಶ್ರನು ಬರಿಯ ಕರ್ಮಜಡನಾದ ಮೀಮಾಂಸಕನಲ್ಲ, ಅವನೂ ವೇದಾಂತಿಯೇ ಆಗಿದ್ದನು ; ಅವನ ಗ್ರಂಥಗಳಲ್ಲಿ ಸಂನ್ಯಾಸವನ್ನು ಹಳಿದೂ ಇಲ್ಲ

–ಎಂಬುವನ್ನು ಮನವೆಂಬರಂತೂ ಈ ಸಂಭಾಷಣೆಯು ಆಯಿತೆಂಬುದು ಅತ್ಯಂತ ಅಸಂಭಾವಿತವೆಂದೇ ಹೇಳಬೇಕಾಗುತ್ತದೆ. ಇವಲ್ಲದೆ ಮಂಡನನು ಆಡಿರುವ ಉಪಹಾಸ್ಯದ ವಾಕ್ಯಗಳು ಪರಮಹಂಸಪರಿವ್ರಾಜಕಾಚಾರ್ಯರಾದ ಆಚಾರ್ಯರಿಗೆ ಅನ್ವಯಿಸುವಂತೆಯೇ ಇಲ್ಲ ; ಅವರು ಭಾರವಾದ ಕಂತೆಯನ್ನು ಧರಿಸಿದ್ದರು (ಮಾ. ಶಂ. ೮–೨೦) ಎಂಬ ಮಾಧವೋಕ್ತಿಯಾಗಲಿ ದಂಡಕಮಂಡಲುಗಳನ್ನು ಧರಿಸಿದ್ದರು (ಚಿ.ಶಂ. ೧೭–೩೯) ಎಂಬ ಚಿದ್ವಿಲಾಸೋಕ್ತಿಯಾಗಲಿ ವಿಚಾರಸಹವಲ್ಲ. ಇದನ್ನು ಹಿಂದೆ (ಖಂ. ೬೬)ಹೇಳಿದ್ದೇವೆ. ಮಂಡನನು ಅವರ ಯೋಗ್ಯತೆಯನ್ನು ವಿಚಾರಿಸಿಕೊಳ್ಳದೆ 'ಹೆಂಡತಿಯನ್ನು ಸಲಹಲಾರದೆ ಸಂನ್ಯಾಸಿಯಾದವರು' ಎಂದು ಹಳಿಯುವಷ್ಟು ಪೆದ್ದನಾಗಿರಲಿಲ್ಲ. ಹೀಗೆಯೇ ಮಂಡನನಂಥ ಸದ್ಗೃಹಸ್ಥನಿಗೆ ಅರ್ಹವಾದ ಮಾತುಗಳನ್ನು ಆಚಾರ್ಯರು ಆಡಿದಂತೆ ಮಾಧವನು ಬರೆದಿಲ್ಲ. ಮನೆಗೆ ಬಂದ ಅತಿಥಿಯನ್ನು ಕಳ್ಳನೆಂದು ಮಂಡನನೂ ಶ್ರಾದ್ಧದ ದಿನ ಕರ್ಮನಿಷ್ಠೆಯಲ್ಲಿದ್ದ ಗೃಹಸ್ಥನನ್ನು ಸ್ತೇನನೆಂದು ಶಂಕರರೂ ನಿಂದಿಸಿದರೆಂಬುದು ಉಪಹಾಸ್ಯವು. ಇವೆಲ್ಲ ಸಿಟ್ಟಿನ ಭರದಲ್ಲಿ ಆಡಿದ ಮಾತುಗಳೆಂದು ತರ್ಕಿಸುವದೂ ಯೋಗ್ಯವಲ್ಲ ; ಶಂಕರಮಂಡನರಂಥವರು ಆ ಪವಿತ್ರಕಾಲದಲ್ಲಿ ಸಿಟ್ಟಿಗೆ ವಶರಾಗಿ ಅಂಥ ಕೆಟ್ಟ ಶಬ್ದಗಳ ಪ್ರಯೋಗಕ್ಕೆ ಮನಸ್ಸುಮಾಡುವಷ್ಟು ಕೀಳುಮಟ್ಟಕ್ಕೆ ಇಳಿದರೆಂದು ಕಲ್ಪಿಸುವದೇ ಅಯುಕ್ತವಾಗಿರುತ್ತದೆ. ವ್ಯಾಸರಂಥ ವೇದಾಂತಪ್ರಿಯರನ್ನು ಎದುರಿಗೆ ಇಟ್ಟುಕೊಂಡೇ ಮಂಡನನು ಹೀಗೆಲ್ಲ ವಾದಿಸಿದನೆಂದು ಕಲ್ಪಿಸುವದು ಹೇಗೆತಾನೆ ಸರಿಯಾದಿತು? ಯಾವನೋ ಒಬ್ಬ ಕರ್ಮವಾದಿಯಾದ ಮೀಮಾಂಸಕನನ್ನು ಅಥವಾ ಅನೇಕ ಮೀಮಾಂಸಕರನ್ನು ಆಚಾರ್ಯರು ವಾದದಲ್ಲಿ ಗೆದ್ದಿರಬಹುದು; ಅವನನ್ನು ವೇದಾಂತದ ಕಡೆಗೆ ತಿರುಗಿಸಿರಲೂಬಹುದು. ಅದನ್ನೇ ಹೀಗೆ ಈಚಿನವರು ರೂಪಾಂತರಗೊಳಿಸಿ ಈ ಕಥೆಯನ್ನು ಕಟ್ಟಿರಬಹುದು. ಒಟ್ಟಿನಲ್ಲಿ ಈ ಮೂರು ಶಂಕರವಿಜಯಕಾರರಲ್ಲಿ ಯಾರು ಮೊದಲು ಹೇಯವಾದ ಸಂಭಾಷಣೆಯನ್ನು ಕಲ್ಪಿಸಿದರೋ ತಿಳಿಯದು. ವ್ಯಾಸಾಚಲೀಯವು ಎಷ್ಟೇ ಕೃತ್ರಿಮಗ್ರಂಥವಾಗಿರಲಿ, ವಿಶ್ವರೂಪನಿಗೂ ಆಚಾರ್ಯರಿಗೂ ತಕ್ಕ ಸ್ಥಾನವನ್ನು ಅದರಲ್ಲಿ ಕಲ್ಪಿಸಿ ಬರೆದಿದೆ ಎಂದು ಎಲ್ಲರೂ ಒಪ್ಪಬೇಕಾಗಿದೆ. ಗೋವಿಂದನಾಥನೂ (ಗೋ. ೫–೪೧ರಿಂದಳಿಕ) ವ್ಯಾಸಾಚಲೀಯವನ್ನೇ ಅನುಸರಿಸಿ ಶಂಕರಮಂಡನರಿಬ್ಬರಿಗೂ ಅವರವರ ಆಶ್ರಮಕ್ಕೆ ಯೋಗ್ಯವಾದ ಸ್ಥಾನವನ್ನು ಕೊಟ್ಟೇ ವರ್ಣಿಸಿರುತ್ತಾನೆ.

## ಮಂಡನನು ವಾದಕ್ಕೆ ಒಪ್ಪಿಗೆಯನ್ನಿತ್ತದ್ದು

೧೧೩. ಈಗ ಮುಂದಿನ ಕಥಾಸರಣಿಯನ್ನು ಅನುಸರಿಸೋಣ. ಜೈಮಿನಿಗಳು ಹುಸಿನಗೆನಗುತ್ತಿರಲು ವ್ಯಾಸರು 'ಅಪ್ಪ, ನೀನ್ನು ಅನುಸರಿಸುತ್ತಿರುವದು ಸದಾಚಾರವಲ್ಲ. ಏಷಣಾತ್ಯಾಗವನ್ನು ಮಾಡಿದ ಯತಿಯನ್ನು ನಿಂದಿಸಬಾರದು ;

ಅಭ್ಯಾಗತರಾಗಿ ಬಂದಿರುವ ಇವರು ವಿಷ್ಣುವೇ ಎಂದು ಭಾವಿಸಿ ಕೂಡಲಿ ನಿಮಂತ್ರಣ ಮಾಡು ಎಂದರು. ಮಂಡನನು ಹಾಗೇ ಮಾಡಿದನು. ಆಗ ಶಂಕರರು 'ಅಯ್ಯ, ನನಗೆ ಬರಿಯ ಅನ್ನದ ಭಿಕ್ಷೆಯಲ್ಲಿ ಆದರವಿಲ್ಲ ; ನಾನು ವಾದಭಿಕ್ಷೆಗೆ ಬಂದಿದ್ದೇನೆ; ಸೋತವರು ಗೆದ್ದವರ ಶಿಷ್ಯರಾಗಬೇಕೆಂಬ ಪಣಸಹಿತವಾಗಿ ವಿವಾದವಾಗಲಿ ! ವೇದಾಂತಮಾರ್ಗವನ್ನು ಹರಡುವದಕ್ಕಿಂತ ನನಗೆ ಬೇರೆ ಯಾವದೂ ಬೇಕಿರು ವದಿಲ್ಲ, ನೀನು ಅದನ್ನು ತಿರಸ್ಕರಿಸುತ್ತಿದ್ದೀಯೆ. ಆದ್ದರಿಂದ ನಿನ್ನನ್ನು ಜಯಿಸ ಬೇಕಾಗಿದೆ. ನೀನು ವಿವಾದಮಾಡು, ಇಲ್ಲದಿದ್ದರೆ ಸೋತೆನೆಂದು ಹೇಳು' ಎಂದರು. ಅದನ್ನು ಕೇಳಿ ವಿಸ್ಮಿತನಾದ ಮಂಡನನು 'ಶ್ರುತಿಸಮ್ಮತವಾದ ಮತವನ್ನು ಬಿಟ್ಟು ಮತ್ತೆಯಾವ ಮಾರ್ಗವನ್ನೂ ನಾನು ಅನುಸರಿಸುವವನಲ್ಲ. ಆದಿಶೇಷನೇ ಬಂದರೂ ಸೋತೆನೆನ್ನಲಾರೆನು. ಧನ್ಯನಾದೆನು. ಜಯಮಹೋತ್ಸವಕಾಲವು ಬಂದೊದ ಗಿದ ಇದೇ ಸುದಿನವು. ವಾದವು ಯಾವದು, ಪಣವೇನು, ಮಧ್ಯಸ್ಥರು ಯಾರು? ಇದೆಲ್ಲ ನಿಶ್ಚಿತವಾಗಲಿ ! ನಾಳೆ ವಾದಮಾಡೋಣ. ಈಗ ಮಧ್ಯಾಹ್ನದಲ್ಲಿ ಮಾಡಬೇಕಾದ ಕರ್ಮವನ್ನು ಮಾಡುವೆನು' ಎಂದನು. ಆಗ ಶಂಕರರು 'ಹಾಗೆಯೇ ಆಗಲಿ, ವಾದಕ್ಕೆ ಈ ಮುನಿಗಳಿಬ್ಬರೂ ಸಾಕ್ಷಿಗಳಾಗಿರಲಿ!' ಎಂದರು. ಆ ಋಷಿಗಳಿಬ್ಬರೂ ಭಾರತಿಯು ಸರಸ್ವತಿಯ ಅವತಾರವೆಂದು ಗೊತ್ತಿದ್ದದ್ದ ರಿಂದ 'ನಿನ್ನ ಹೆಂಡತಿಯೇ ಮಧ್ಯಸ್ಥೆಯಾಗಲಿ' ಎಂದರು. ಅದರಂತೆ ಒಪ್ಪಿ ಮಂಡನನು ಆ ದಿನದ ಕರ್ಮವನ್ನು ಮಾಡಿದನು. ಭೋಜನಾನಂತರದಲ್ಲಿ ವ್ಯಾಸಜೈಮಿನಿಶಂಕರರು ಕುಳಿತಿರಲು ಮಂಡನನ ಶಿಷ್ಯರಿಬ್ಬರು ಎರಡೂ ಪಕ್ಕಗಳಲ್ಲಿ ಕುಳಿತು ಅವರಿಗೆ ಆಯಾಸಪರಿಹಾರಕ್ಕಾಗಿ ಚಾಮರದಿಂದ ಗಾಳಿಹಾಕಿದರು. ಸ್ವಲ್ಪಹೊತ್ತು ಸಂಭಾಷಣೆಯಾದಬಳಿಕ ಮುನೀಂದ್ರರಿಬ್ಬರೂ ಅಂತರ್ಧಾನವನ್ನು ಹೊಂದಿದರು. ಶಂಕರಾಚಾರ್ಯರು ನರ್ಮದಾತೀರದಲ್ಲಿದ್ದುಕೊಂಡು ರಾತ್ರೆಯನ್ನು ಕಳೆದರು (ಮಾ. ಶಂ. ೮–೩೪ರಿಂದ ೫೫). ಚಿದ್ವಿಲಾಸೀಯದಲ್ಲಿ ಶ್ರಾದ್ಧವಾದ ಕೂಡಲೆ ವಾಗ್ವಾದವಾಗಬೇಕೆಂದು ಇಬ್ಬರೂ ನಿಶ್ಚಯಿಸಿದರು. (ಶ್ರಾದ್ಧಾನನ್ತರ ಮೇವ ವಾಙ್ಮುಖವಿಧೌ ತೌ ನಿಶ್ಚಯಂ ಚಕ್ರತುಃ ಚಿ. ಶ. ೧೭–೪೭) ಎಂದ ರೆಂಬುದು ವಿಶೇಷ. ಆನಂದಗಿರೀಯದಲ್ಲಿ ಶಂಕರರು 'ಅಭ್ಯಾಗತನಾದ್ದರಿಂದ ನಾನು ವಿಷ್ಣುವೇ' ಎಂದದ್ದನ್ನು ಕೇಳಿ 'ಪಾದ್ಯವನ್ನು ಕೊಡು !' ಎಂದು ವ್ಯಾಸ ರೆಂದರು (ಪು. ೨೧೬) ಎಂದಿದೆ. 'ವಾದಾರ್ಥವಾಗಿ ಬಂದಿದೇನೆ' ಎಂದ ಶಂಕರರಿಗೆ 'ಭೋಜನವಾದ ಬಳಿಕ ಹಾಗೆ ಮಾಡುವೆನು' ಎಂದು ಮಂಡನನು ಉತ್ತರ ವಿತ್ತನು. ಯಥಾವಿಧಿಯಾಗಿ ಪಿತೃಕರ್ಮವನ್ನು ಮಾಡಿದ ಬಳಿಕ ವಾದಪಣ ವನ್ನು ಹೀಗೆ ಹೂಡಿಕೊಂಡರು (ಯಥಾವಿಧಿ ಪಿತೃಕರ್ಮ ನಿರ್ವರ್ತ್ಯ ವಾದ ಪಣಮೇವಮಾಚಕ್ರತುಃ[1] ಪ್ರ. ೫೬, ಪು. ೨೧೬ ; ದೇ. ಪು. ೧೮೪) ಎಂದಿದೆ.

1. 'ವ್ಯಾಚಕ್ರತುಃ' ಎಂದು ದೇ॥.

ಇಲ್ಲಿ ವ್ಯಾಸರು ಸಂನ್ಯಾಸಿಗೆ ಗೌರವವನ್ನು ತೋರಿಸಬೇಕೆಂದು ವಿಷ್ಣುಸ್ಥಾನದಲ್ಲಿ ಅವನನ್ನು ಆರಿಸುನಂತೆ ಹೇಳಿದಕೂಡಲೆ ಮಂಡನನು ಅದರಂತೆ ಮಾಡಿದನೆಂದು ಎಲ್ಲಾ ಶಂಕರವಿಜಯಗಳಲ್ಲಿಯೂ ಇದೆಯಷ್ಟೆ ? ಇದು ಕಥೆಗೆ ಹೇಗೆ ಸಂಗತವಾಗುತ್ತದೆಯೋ ನಮಗೆ ತಿಳಿಯಲಿಲ್ಲ. ಮಂಡನನು ಸಂನ್ಯಾಸಾಶ್ರಮವನ್ನು ಆಗತಾನೆ ಹಳಿದಿದ್ದನು; ವ್ಯಾಸರು ಹೇಳಿದಮಾತ್ರದಿಂದ ಅವನು ಕರ್ಮತ್ಯಾಗವನ್ನು ಮಾಡಿದ್ದ ಶಂಕರರು ಪೂಜ್ಯರೆಂದು ಹೇಗೆ ತಿಳಿದುಕೊಂಡನು ? ಚಿದ್ವಿಲಾಸೀಯದ ಮುಂದಿನ ಅಧ್ಯಾಯದಲ್ಲಿಯೂ ಮಂಡನನು ಸಂನ್ಯಾಸವು ಕಲಿವರ್ಜ್ಯವೆಂದೇ ವಾದಿಸಿರುತ್ತಾನೆ (ಚಿ. ಶಂ. ೧೮–೭ರಿಂದ ೧೫). ಹೀಗಿರುವಲ್ಲಿ ಮಂಡನನು ಆಚಾರ್ಯರನ್ನು ವಿಷ್ಣುಸ್ಥಾನಕ್ಕೆ ಕೂಡಿಸಿದನೆಂಬುದು ಸರಿಯಾಗಿ ಕಾಣುವದಿಲ್ಲ

ಎರಡನೆಯದಾಗಿ 'ಉಭಯಭಾರತಿಯನ್ನು ಮಧ್ಯಸ್ಥಳನ್ನಾಗಿ ಮಾಡಿಕೊ' ಎಂದು ವ್ಯಾಸಜೈಮಿನಿಗಳಿಬ್ಬರೂ ಹೇಳಿದರೆಂದು **ಮಾಧವನೂ** (ಮಾ.೮–೫೫) **ಸದಾನಂದನೂ** (ಸದಾ. ೬–೪೬) ಹೇಳಿರುತ್ತಾರೆ. ಚಿದ್ವಿಲಾಸೀಯದಲ್ಲಿ ಆಚಾರ್ಯರೇ 'ನಿನ್ನ ಹೆಂಡತಿ ಸಾಕ್ಷಿಯಾಗಿರಲಿ' ಎಂದರು (ಚಿ. ಶಂ. ೧೮–೩) ಎಂದಿದೆ. ಇಬ್ಬರೂ ಆಕೆಯು ಮಧ್ಯಸ್ಥಳಾಗಿರಲೆಂದು ಒಪ್ಪಿದರು (ಆ.ಶಂ.ಪ್ರ. ೫೬–ಪು. ೨೧೬, ದೇ. ಪು. ೧೮೪) ಎಂದು ಆನಂದಗಿರೀಯದಲ್ಲಿದೆ. ನಿಜವಾಗಿ ಆಕೆಯನ್ನು ಮಧ್ಯಸ್ಥಳೆಂದು ಗೊತ್ತುಮಾಡಿದವರು ಯಾರು ? ಊರಿನವರು ಈ ವಿಷಯದಲ್ಲಿ ಏನು ಹೇಳಿದರೋ ತಿಳಿಯುವಹಾಗಿಲ್ಲ, ಬೆಳಗ್ಗೆ ಶಂಕರರು ಬಂದು ಪಂಡಿತರ ಸಭೆಯಮುಂದೆ ಕುಳಿತರು ; ಮಂಡನಪಂಡಿತನು ಹೆಂಡತಿಯನ್ನು ಮಧ್ಯಸ್ಥಳಾಗಿ ಮಾಡಿಕೊಂಡು ವಾದಕ್ಕೆ ಸಿದ್ಧನಾದನು (ಮಾ. ಶಂ. ೮–೫೭, ೫೮) ಎಂದೇ **ಮಾಧವನು** ಬರೆದಿರುವದರಿಂದ ಆಕೆಯು ಮಹಾವಿದುಷಿಯೆಂದೂ ಆ ಕಾಲದಲ್ಲಿ ಸ್ತ್ರೀಯರೂ ಸಭೆಯಲ್ಲಿ ಗಾರ್ಗಿ ಮೊದಲಾದವರಂತೆ ಭಾಗವನ್ನು ವಹಿಸುತ್ತಿದ್ದರೆಂದೂ ಇಟ್ಟುಕೊಳ್ಳಬೇಕಾಗುತ್ತದೆ. ಇದು ಆ ಕಾಲಕ್ಕೆ ಒಪ್ಪುವ ಮಾತೆ ?–ಎಂಬುದನ್ನು ಐತಿಹಾಸಿಕರು ನಿಶ್ಚಯಿಸಬೇಕು. ವ್ಯಾಸಾಚಲೀಯದಲ್ಲಿ ವ್ಯಾಸರ ಸಂಬಂಧವೇನೂ ಇಲ್ಲದಿದ್ದರೂ ಮಾಧವೀಯದ ಮಂಡನನಂತೆ ವಿಶ್ವರೂಪನೂ ವಾದಕ್ಕೆ ಒಪ್ಪಿದನು. ವಾದಂ ಕರಿಷ್ಯಾಮಿ (ಮಾ.೮–೪೬), ವಾದೇ ಹಿ (೮–೪೭); ಕಃ ಪಾರ್ಷ್ಣಿಕಃ (೮–೪೮)– ಈ ಶ್ಲೋಕಗಳು ವ್ಯಾಸಾಚಲೀಯದಲ್ಲಿಯೂ ಇವೆ (ವ್ಯಾ. ಶಂ. ೬–೮೬, ೮೭, ೮೮). ಅತ್ಯಲ್ಪಮೇತದ್ಭವತೇರಿತಂ ಮುನೇ । ವಾಸ್ಯಾಮಿ ವಾಥೋ ಯದಿ ವಾದದಿತ್ಸುತ್ । (ವ್ಯಾ. ಶಂ. ೬–೮೫) ಎಂಬ ಶ್ಲೋಕದ ಎರಡನೆಯ ಪಾದವು ಮಾತ್ರ ಅಲ್ಲಿಯ ಕಥೆಗೆ ಹೊಂದುವಂತೆ ಬದಲಾಗಿದೆ. 'ಕಃ ಪಾರ್ಷ್ಣಿಕಃ, ಎಂಬುದು 'ಕಃ ಪ್ರಾಶ್ನಿಕಃ' ಎಂದಿದೆ ; ಅದೇ ಮಾಧವೀಯದ ಸರಿಯಾದ ಪಾಠವಾಗಿದ್ದರೂ ಇರಬಹುದು. ಮುಂದೆ

'ಬಾಷೆಂ ಜಯೇ ಯದಿ' (ಮಾ.ಶಂ. ೮–೬೨ ವ್ಯಾ. ಶಂ. ೯೨ ಎಂಬ ಶ್ಲೋಕವೂ) ಎರಡಕ್ಕೂ ಸಮಾನವಾಗಿದೆ.

## ಆಚಾರ್ಯರ ಮತ್ತು ಮಂಡನನ ಪ್ರತಿಜ್ಞಾವಾಕ್ಯಗಳು

೧೦೪. ಈಗ ಶಂಕರಮಂಡನರ ವಾದದ ಪ್ರತಿಜ್ಞಾವಾಕ್ಯಗಳನ್ನು ಮಾಧವನು ವಿವರಿಸಿರುವಂತೆ ಕೇಳೋಣ. ಶಂಕರರು ಹೇಳಿದ ಮಾತಿದು (ಮಾ. ಶಂ. ೮–೬೧) :

ಬ್ರಹ್ಮೈಕಂ ಪರಮಾರ್ಥಸಚ್ಚಿದಮಲಂ ವಿಶ್ವಪ್ರಪಞ್ಚಾತ್ಮನಾ
ಶುಕ್ತೀ ರೂಪ್ಯಪರಾತ್ಮನೇವ ಬಹುಲಾಜ್ಞಾನಾವೃತಂ ಭಾಸತೇ ।
ತಜ್ಜ್ಞಾನಾನ್ನಿಖಿಲಪ್ರಪಞ್ಚನಿಲಯಾತ್ ಸ್ವಾತ್ಮವ್ಯವಸ್ಥಾ ಪರಂ
ನಿರ್ವಾಣಂ ಜನಿಮುಕ್ತಮಭ್ಯುಪಗತಂ ಮಾನಂ ಶ್ರುತೇರ್ಮಸ್ತಕಮ್ ॥

[ವ್ಯಾಸಾಚಲ ೬–೯೧ರಲ್ಲಿ ಇದೇ ಪದ್ಯವಿದೆ ; 'ಪ್ರಪಞ್ಚವಿಲಯಾತ್ ಸ್ವಾತ್ಮ ಸ್ವವಸ್ಥಾ' ಎಂದು ಅಲ್ಲಿ ಪಾಠ ; ಅದೇ ಮಾಧವೀಯದ ಪಾಠವಾಗಿದ್ದು 'ವ್ಯವಸ್ಥಾ' ಎಂದು ಲೇಖಕರು ಬರೆದುಕೊಂಡಿರಬಹುದು.]

"ಬ್ರಹ್ಮವೊಂದೇ ಪರಮಾರ್ಥವು, ಸಚ್ಚಿದಾತ್ಮಕವಾಗಿ ಶುದ್ಧವಾಗಿದ್ದು ಸಚ್ಚಿದಾತ್ಮಕವಾಗಿಯೂ ಶುದ್ಧವಾಗಿಯೂ ಇದ್ದರೂ ಬಹಳವಾದ ಅಜ್ಞಾನದಿಂದ ಆವೃತವಾಗಿರುವದರಿಂದ. ಶುಕ್ತಿಯು ರಜತರೂಪದಿಂದ ತೋರುವಂತೆ ಪ್ರಪಂಚ ರೂಪದಿಂದ ತೋರುತ್ತಿರುತ್ತದೆ. ಅದರ ಜ್ಞಾನದಿಂದ ಪ್ರಪಂಚವೆಲ್ಲವೂ ವಿಲಯ ವಾಗಲು ತನ್ನ ರೂಪದಲ್ಲಿ ನಿಲ್ಲುವದೇ ಪರಮಮುಕ್ತಿಯೆಂದು ಒಪ್ಪಿರುತ್ತೇನೆ. ಇದಕ್ಕೆ ವೇದಾಂತವಾಕ್ಯವೇ ಪ್ರಮಾಣವು"– ಎಂದು ಹೇಳಿ ನಾನು ವಾದದಲ್ಲಿ ಸೋತರೆ ಸಂನ್ಯಾಸವನ್ನೂ ಕಾಷಾಯವಸ್ತ್ರವನ್ನೂ ಬಿಟ್ಟು ಬಿಳಿಯ ಬಟ್ಟೆಯ ನ್ನುಟ್ಟುಕೊಳ್ಳುವೆನು. ಈ ಉಭಯಭಾರತಿಯು ಇದಕ್ಕೆ ಸಾಕ್ಷಿಯಾಗಿರಲಿ ! (ಮಾ. ಶಂ. ೮–೬೧, ೯೨) ಇವೆ.

ಆಗ ವಿಶ್ವರೂಪನು ಅಂದದ್ದೇನೆಂದರೆ :

ವೇದಾನ್ತಾ ನ ಪ್ರಮಾಣಂ ಚಿತಿವಪುಷಿ ಪದೇ ತತ್ರ ಸಂಗತ್ಯಯೋಗಾತ್
ಪೂರ್ವೋ ಭಾಗಃ ಪ್ರಮಾಣಂ ಪದಚಯಗಮಿತೇ ಕಾರ್ಯವಸ್ತುನ್ಯಶೇಷೇ ।
ಶಬ್ದಾನಾಂ ಕಾರ್ಯಮಾತ್ರಂ ಪ್ರತಿ ಸಮಧಿಗತಾ ಶಕ್ತಿರಭ್ಯುನ್ನತಾನಾಂ
ಕರ್ಮಭ್ಯೋ ಮುಕ್ತಿರಿಷ್ಟಾ ತದಿಹ ತನುಭೃತಾಮಾಯುಷಃ ಸ್ಯಾತ್ಸಮಾಪ್ತೇಃ ॥
ವಾದೇ ಕೃತೇಽಸ್ಮಿನ್ಯದಿ ಮೇ ಜಯಾನ್ಯಸ್ತ್ವಯೋದಿತಾತ್ ಸ್ಯಾದ್ವಿಪರೀತಭಾವಃ ।
ಯೋಯಂ ತ್ವಯಾ ಭೂದ್ಗದಿತಾ ಪ್ರಸಾಕ್ಷ್ಯಜಾನಾತಿ ಚೇತ್ ನಾ ಭವಿತಾವಧೂರ್ಮೇ

ವೇದಾಂತವಾಕ್ಯಗಳು ಚೈತನ್ಯವಸ್ತುವಿನ ವಿಷಯಕ್ಕೆ ಪ್ರಮಾಣವಲ್ಲ ; ಏಕೆಂದರೆ ಶಬ್ದಕ್ಕೆ ವಸ್ತುವಿನಲ್ಲಿ ಶಕ್ತಿಯು ಸಂಬಂಧವಿರುವದಿಲ್ಲ. ವೇದಪೂರ್ವ

ಭಾಗವೇ ಕಾರ್ಯದಲ್ಲಿ ಪ್ರಮಾಣವು ; ಶಬ್ದಗಳಿಗೆ ಕಾರ್ಯಮಾತ್ರದಲ್ಲಿ ಶಕ್ತಿ ಎಂಬುದು ಪ್ರಸಿದ್ಧವಾಗಿದೆ. ಕರ್ಮದಿಂದಲೇ ಮುಕ್ತಿ ಎಂಬುದು ನನ್ನ ಮತವು ಆದು ಜೀವರಿಗೆ ಯಾವಜ್ಜೀವನವೂ ಇರತಕ್ಕದ್ದು. ವಾದದಲ್ಲಿ ನನಗೆ ಸೋಲಾದರೆ ನೀವು ಹೇಳಿದ್ದಕ್ಕೆ ವಿಪರೀತವಾಗಲಿ, ಎಂದರೆ ನಾನು ಸಂನ್ಯಾಸಿಯಾಗಿ ಕಾಷಾಯ ವಸ್ತ್ರವನ್ನು ಧರಿಸುವೆನು. ನನ್ನ ಹೆಂಡತಿಗೆ ಈ ವಿಷಯವು ತಿಳಿದಿದ್ದರೆ ನೀವು ಹೇಳಿದಂತೆ ಆದಳೇ ಸಾಕ್ಷಿಯಾಗಬಹುದು (ಮಾ. ಶಂ. ೮–೬೪, ೬೫). ಇದೇ ಶ್ಲೋಕಗಳು ವ್ಯಾಸಾಚಲೀಯದಲ್ಲಿಯೂ (ವ್ಯಾ. ಶಂ. ೬–೫೪, ೫೫) ಇವೆ. ಈ ಪ್ರತಿಜ್ಞೆಗಳ ವಿಷಯವಲ್ಲಿ ಸ್ವಲ್ಪ ಹೇಳತಕ್ಕದ್ದಿದೆ.

(೧) ಯಾವ ವಿಷಯಕ್ಕೆ ವಿವಾದವಾಯಿತೆಂಬುದನ್ನು ಅನಂತಾನಂದ ಗಿರೀಯದಲ್ಲಿ ಹೇಳಿಲ್ಲ. 'ನಿಗಮಾದಿಸರ್ವವಿದ್ಯಾಪ್ರಸಙ್ಗೇ ಕ್ರಿಯಮಾಣೇ' (ಪ್ರ. ೨೧.೬) ಎಂದಿಷ್ಟೇ ಹೇಳಿದೆ. ಚಿದ್ವಿಲಾಸೀಯದಲ್ಲಿ ಸಂನ್ಯಾಸದ ವಿಷಯಕೆ, ಮಾತ್ರ ಮುಖ್ಯವಾದ ವಿವಾದವಾದಂತೆ ಬರೆದಿದೆ. ಮಾಧವೀಯದಲ್ಲಿ ಮೇಲೆ ಕೊಟ್ಟಿರುವಂತೆ ಸ್ಪಷ್ಟವಾದ ಪ್ರತಿಜ್ಞಾವಾಕ್ಯಗಳೂ ಇವೆ ; ಅವುಗಳ ವಿಸ್ತೃತ ವಾದ ವಾದವೂ ಇದೆ.

(೨) ಬ್ರಹ್ಮಜ್ಞಾನದಿಂದಲೇ ಮುಕ್ತಿ ಎಂಬುದು ಆಚಾರ್ಯರ ಮತವು ; ಕರ್ಮದಿಂದಲೇ ಮುಕ್ತಿ ಎಂಬುದು ವಿಶ್ವರೂಪನು. ಸೋತವರು ಗೆದ್ದವರ ಆಶ್ರಮ ವನ್ನು ಸ್ವೀಕರಿಸಬೇಕೆಂಬ ಪಣವು ಇಬ್ಬರಿಗೂ ಒಪ್ಪಾಯಿತು. ವೇದಾಂತದ ಪ್ರಕಾರ ಸಂನ್ಯಾಸಿಯಾದವನು ಕೆಳಗಿನ ಆಶ್ರಮಕ್ಕೆ ಬರುವದು ಪಾಪ (ವೇ. ಸೂ. ೩–೪–೪೦) ಮಂಡನನಂತೆ ಅಗ್ನಿಯನ್ನು ಉದ್ವಾಸನೆಮಾಡುವದೂ ವೇದವಿಹಿತ ವಾದ ಕರ್ಮವನ್ನು ತ್ಯಾಗಮಾಡುವದೂ ಪಾಪ. ಆದ್ದರಿಂದ ಸೋತರೆ ಇಂಥ ದುಷ್ಕೃತವನ್ನು ಮಾಡಿದವನಾಗುವೆನು– ಎಂಬ ಅಭಿಪ್ರಾಯದಿಂದ ಹೀಗೆ ಪಣ ವನ್ನು ತೊಟ್ಟರೆಂತ ಹೇಳಬೇಕು. ಇಬ್ಬರಿಗೂ ತನ್ನತನ್ನ ಮತವೇ ಜಯಿಸುವ ದೆಂಬ ಭರವಸೆಯಿತ್ತು. ಹೀಗೆ ಆಶ್ರಮಾಂತರಸ್ವೀಕಾರದ ಪಣವನ್ನು ಅವರಿಬ್ಬರೂ ಒಪ್ಪಿದರೆಂದು ಶಂಕರವಿಜಯಗಳಲ್ಲಿದೆ.

(೩) ಬ್ರಹ್ಮವು ಅಜ್ಞಾನದಿಂದ, ಶುಕ್ತಿಯು ಬೆಳ್ಳಿಯಾಗಿ ಕಾಣುವಂತೆ, ಪ್ರಪಂಚಾಕಾರವಾಗಿ ತೋರುತ್ತಿರುತ್ತದೆ ; ಆದರ ಜ್ಞಾನದಿಂದ ಜೀವನು ತನ್ನ ಸ್ವರೂಪದಲ್ಲಿಯೇ ನಿಲ್ಲುವದೇ ಮುಕ್ತಿ–ಎಂಬುದು ಶಾಂಕರವೇದಾಂತದಲ್ಲಿ ಪ್ರಧಾನ ವಾಗಿರುವ ವಾದವೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ಬ್ರಹ್ಮವು ಅಜ್ಞಾನಾವೃತವಾಗಿದೆ ಎಂದು ಹೇಳಿರುವದರಲ್ಲಿ ಕವಿಯ ಆಶಯವೇನೆಂಬುದು ತಿಳಿಯುವಂತಿಲ್ಲ. ಮಾಧವೀಯದ ಸಾರವಾದ ಸದಾನಂದನ ಕೃತಿಯಲ್ಲಿಯೂ ಈ ಶಬ್ದವೇ ಇದೆ. ಈ ಅ ಜ್ಞಾ ನಾ ವ ರ ಣ ದ ವಿಷಯವಾಗಿ ಮತ್ತೊಮ್ಮೆ ಪ್ರಸ್ತಾಪಿಸುವೆವು.

(೪) ವೇದಾಂತಗಳು ಚೈತನ್ಯವಸ್ತುವಿಗೆ ಪ್ರಮಾಣವಲ್ಲ ಎಂಬ ಪ್ರತಿಜ್ಞೆಯೂ ಸರಿಯಾದದ್ದೇ. ಏಕೆಂದರೆ ಆಚಾರ್ಯರು ಸಮನ್ವಯಭಾಷ್ಯಕ್ಕೆ ಪೂರ್ವಮೀಮಾಂಸಕರ ಮತದಂತೆ ಪೂರ್ವಪಕ್ಷವನ್ನು ಒಡ್ಡುವ ಸಂದರ್ಭದಲ್ಲಿ ಉಪನಿಷದ್ವಾಕ್ಯಗಳು ಕರ್ತೃವಾದ ಆತ್ಮ, ದೇವತೆಗಳು- ಮುಂತಾದವುಗಳನ್ನು ಹೇಳುವದರಿಂದ ಕ್ರಿಯಾವಿಧಿಗೆ ಶೇಷವಾಗಿರಬಹುದು ಅಥವಾ ಉಪಾಸನಾದಿ ಕ್ರಿಯಾಂತರವನ್ನು ಹೇಳಬಹುದು ; ವಸ್ತುಮಾತ್ರದಲ್ಲಿ ಅವು ಪ್ರಮಾಣವಾಗಲಾರವು- ಎಂಬ ಪಕ್ಷವನ್ನು ಮಂಡಿಸಿರುತ್ತಾರೆ.

(೫) 'ಶಬ್ದಕ್ಕೆ ಕಾರ್ಯವಸ್ತುವನ್ನು ಹೇಳುವದರಲ್ಲಿಯೇ' - ಎಂಬ ವಾದವು ವ್ಯಾಖ್ಯಾನಗಳಲ್ಲಿದೆಯಾದರೂ ಆಚಾರ್ಯರು ಸ್ಫುಟವಾಗಿ ತಮ್ಮ ಭಾಷ್ಯಗಳಲ್ಲಿ ಎಲ್ಲಿಯೂ ಅದನ್ನು ಅನುವಾದಮಾಡಿಕೊಂಡು ವಿಮರ್ಶಿಸಿರುವಂತೆ ಕಾಣಿಸುವದಿಲ್ಲ. ಅನುಷ್ಠೇಯನಿಷ್ಠವಾದ ವಾಕ್ಯವೇ ಪ್ರಮಾಣವು, ಕಾರ್ಯವನ್ನು ಹೇಳುವ ಕ್ರಿಯಾಪದವಿಲ್ಲದಿದ್ದರೆ ಪದಗಳು ಸಂಹತವಾಗುವದಿಲ್ಲ- ಎಂಬ ಪೂರ್ವಪಕ್ಷವು ಬೃಹದಾರಣ್ಯಕಭಾಷ್ಯದಲ್ಲಿದೆ(ಬೃ. ೩-೧) ; ಶಾಸ್ತ್ರಕ್ಕೆ ಪ್ರವೃತ್ತಿ, ನಿವೃತ್ತಿ (ಮಾಡಿಸುವದು ಅಥವಾ ಬಿಡಿಸುವದು) ಇವೆರಡೇ ಪ್ರಯೋಜನಗಳು ಎಂಬ ಪೂರ್ವಪಕ್ಷವು ಬ್ರಹ್ಮಸೂತ್ರಭಾಷ್ಯ (ಸೂ. ಭಾ. ೧-೧-೪)ದಲ್ಲಿದೆ. 'ಶಬ್ದಕ್ಕೆ ಕಾರ್ಯವಸ್ತುವಿನಲ್ಲಿಯೇ ಶಕ್ತಿ' ಎಂಬ ರೂಪದ ಪೂರ್ವಪಕ್ಷವು ಎಲ್ಲಿಯೂ ಕಾಣುವದಿಲ್ಲ. ಆದ್ದರಿಂದ ವ್ಯಾಖ್ಯಾನಗ್ರಂಥಗಳ ವಾದದ ವಾಸನೆಯಿಂದಲೇ ಈ ಪೂರ್ವಪಕ್ಷವನ್ನು ಮಾಧವವ್ಯಾಸಾಚಲರು ಬರೆದಿರಬೇಕೆಂತ ತೋರುತ್ತದೆ. ಈ ವಿಷಯಕ್ಕೆ ಹೇಗೆ ವಾದವಾಯಿತೆಂಬುದರ ವಿವರವು ಶಂಕರವಿಜಯಗಳಲ್ಲಿ ಕಾಣಬರುವದಿಲ್ಲ.

## ಮಂಡನನೊಡನೆ ಆದ ವಾದ ; ಮಾಧವೀಯದಂತೆ :

೧೦೫. ಈಗ ವಾದವಿಭಾಗಗಳನ್ನು ಕುರಿತ ವಿವರವನ್ನು ನೋಡೋಣ. ಇಲ್ಲಿನ ಶ್ಲೋಕಗಳ ಸಂಖ್ಯೆಯನ್ನು ಅಲ್ಲಲ್ಲಿಯೇ ತೋರಿಸಿದೆ. ನಡುನಡುವೆ ಕಂಸದಲ್ಲಿಟ್ಟಿರುವದು ನಮ್ಮ ಅಭಿಪ್ರಾಯ.

**ಮಂಡನ :** ಜೀವೇಶ್ವರೈಕ್ಯಕ್ಕೆ ಪ್ರಮಾಣವೇನು ? (೮-೭೬)

**ಶಂಕರ :** ಶ್ವೇತಕೇತುವೇ ಮೊದಲಾದವರಿಗೆ ಉದ್ದಾಲಕಾದಿಗಳು ಮಾಡಿದ ಉಪದೇಶವೇ ಪ್ರಮಾಣ (೮-೭೭).

[ಪ್ರತಿಜ್ಞಾವಾಕ್ಯದಲ್ಲಿ ಜೀವೇಶ್ವರೈಕ್ಯವನ್ನು ಶಂಕರರು ಹೇಳಿರಲಿಲ್ಲ ; ಬ್ರಹ್ಮವು ಅಜ್ಞಾನಾವೃತವಾಗಿ ಪ್ರಪಂಚರೂಪದಿಂದ ತೋರಿಕೊಳ್ಳುತ್ತಿದೆ- ಎಂದು ಹೇಳಿದ್ದರು. ಅದರ ಬಲದಿಂದ ಜೀವೇಶ್ವರೈಕ್ಯವೂ ಸಿದ್ಧವಾಗುವದು ನಿಜ; ಆದರೆ ಮಂಡನನು ಅಜ್ಞಾನದ ವಿಚಾರವನ್ನು ಬಿಟ್ಟು ಜೀವೇಶ್ವರೈಕ್ಯವನ್ನೇ ಏಕೆ ಆಕ್ಷೇಪಿಸಿದನು ?]

**ಮಂಡನ :** ತತ್ತ್ವಮಸಿ–ಮುಂತಾದವು ಹುಮ್, ಫಟ್–ಮುಂತಾದವುಗಳಂತೆ ಜಪಕ್ಕಾಗಿ ಹೇಳಲ್ಪಟ್ಟೀವೆ. ಅವುಗಳಿಗೆ ಯಾವ ಅರ್ಥದಲ್ಲಿಯೂ ವಿವಕ್ಷೆಯಿಲ್ಲ (೮–೭೮).

**ಶಂಕರ :** ಅರ್ಥವು ಕಾಣದೆ ಇರುವ ಹುಂಫಡಾದಿಗಳು ಜಪಾರ್ಥಕವೆಂದಾಗಬಹುದು. ಅರ್ಥವು ತೋರುವಲ್ಲಿಯೇ ಹಾಗೆ ಹೇಳುವದು ಹೇಗೆ ಸರಿಯಾದೀತು ? (೭೯)

[ಈ ಪೂರ್ವಪಕ್ಷವಾಗಲಿ ಸಿದ್ಧಾಂತವಾಗಲಿ ಭಾಷ್ಯದಲ್ಲಿಲ್ಲ; ವ್ಯಾಖ್ಯಾನಪ್ರಸ್ಥಾನಗಳಲ್ಲಿದೆ.]

**ಮಂಡನ :** ಜೀವೇಶ್ವರರಿಗೆ ಅಭೇದವು ಈ ವಾಕ್ಯದಿಂದ ತಟ್ಟನೆ ತೋರುತ್ತದೆಯಾದರೂ ಯಜ್ಞಾದಿಕರ್ತೃವನ್ನು ಹೊಗಳುವದರಿಂದ ಅದು ವಿಧಿಶೇಷವೇ (೮೦).

**ಶಂಕರ :** 'ಆದಿತ್ಯೋ ಯೂಪಃ' ಮುಂತಾದ ಕರ್ಮಕಾಂಡವಾಕ್ಯಗಳು ಪ್ರಶಂಸಾರಪರವಾಗಿರುವದರಿಂದ ಕ್ರಿಯಾಶೇಷವಾಗಬಹುದು ; ಬೇರೆಯಾದ ಜ್ಞಾನಕಾಂಡದಲ್ಲಿರುವ ಈ ವಾಕ್ಯವು ಹೇಗೆ ವಿಧಿಶೇಷವಾದೀತು ? (೮೧).

[ಪೂರ್ವಪಕ್ಷದ ಛಾಯೆಯು ವಾಕ್ಯಗಳು ಸೂತ್ರಭಾಷ್ಯದ ನಾಲ್ಕನೆಯ ಸೂತ್ರದ ವ್ಯಾಖ್ಯಾನದಲ್ಲಿ ಕಾಣುತ್ತವೆ.]

**ಮಂಡನ :** ಹಾಗಾದರೆ ಈ ವಾಕ್ಯಗಳಲ್ಲಿ ಜೀವನಲ್ಲಿ ಪರಮಾತ್ಮದೃಷ್ಟಿಯನ್ನು ವಿಧಿಸಿದೆ ಎನ್ನೋಣ. ಮನಸ್ಸು, ಅನ್ನ, ಆದಿತ್ಯ, ಆಕಾಶ–ಮುಂತಾದ ಅಬ್ರಹ್ಮಗಳಲ್ಲಿ ಬ್ರಹ್ಮದೃಷ್ಟಿಯನ್ನು ವಿಧಿಸಿರುವಂತೆಯೇ ಇದು. ಇದರಿಂದ ಕರ್ಮಸಮೃದ್ಧಿಯಾಗುವದು (೮೨).

**ಶಂಕರ :** ಮಿಕ್ಕಕಡೆಗಳಲ್ಲಿ ಕಾಣುತ್ತಿರುವಂತೆ ಲಿಙಾದಿವಿಧಾಯಕಶಬ್ದವಿರುವಂತೆ ಇಲ್ಲಿಲ್ಲವಲ್ಲ ! ಇದು ಹೇಗೆ ವಿಧಿಯಾದೀತು ?

[ಈ ಪೂರ್ವಪಕ್ಷವೂ ಭಾಷ್ಯದಲ್ಲಿದೆ. ಆದರೆ ಸಿದ್ಧಾಂತವನ್ನು ಈ ಮಾತಿನಲ್ಲಿ ಆಚಾರ್ಯರು ಬರೆದಿಲ್ಲ.]

**ಮಂಡನ :** ರಾತ್ರಿಸತ್ರವೆಂಬ ಯಾಗದಲ್ಲಿ ಪ್ರತಿಷ್ಠಾಫಲವು ಕಾಣುವದರಿಂದ ವಿಧಿಯನ್ನು ಹೇಗೆ ಮೀಮಾಂಸಕರು ಕಲ್ಪಿಸುವರೋ ಹಾಗೆ ಫಲಶ್ರುತಿಯಿರುವದರಿಂದ ವಿಧಿಯನ್ನು ಕಲ್ಪಿಸಬಹುದು (೮೪).

**ಶಂಕರ :** ಹಾಗಾದರೆ ಕ್ರಿಯೆಯಿಂದ ಹುಟ್ಟುವ ಮುಕ್ತಿಯು ಸ್ವರ್ಗದಂತೆ ಅನಿತ್ಯವೆಂದಾಗುವದು. ಉಪಾಸನೆ ಎಂಬಿದು ಮಾಡುವದಕ್ಕೂ ಬಿಡುವದಕ್ಕೂ ಬೇರೆಯ ರೀತಿಯಲ್ಲಿಯೇ ಮಾಡುವದಕ್ಕೂ ಒರುವದರಿಂದ ಅದೂ ಕ್ರಿಯೆಯೇ (೮೫).

[ಪೂರ್ವಪಕ್ಷದ ಅನುವಾದವು ಭಾಷ್ಯದಲ್ಲಿ ಕಾಣುವದಿಲ್ಲ. ಸಿದ್ಧಾಂತದ ಯುಕ್ತಿ ಬೇರೆ ಅಲ್ಲಿವೆ.]

**ಮಂಡನ :** ಇದು ಉಪಾಸನಾವಾಕ್ಯವೆನ್ನುವದು ಬೇಡ. ಜೀವನು ಪರಮಾತ್ಮನಿಗೆ ಸಮನಾಗುವನೆಂದು ಹೇಳುವ ವಾಕ್ಯವಾಗಲಿ ! (೮೬).

**ಶಂಕರ :** ಈ ವಾಕ್ಯವು ಚೇತನರೂಪದಿಂದ ಸಾಮ್ಯವನ್ನು ಹೇಳುತ್ತದೆಯೊ, ಸರ್ವಜ್ಞತ್ವಸರ್ವಾತ್ಮತ್ವಾದಿಗುಣಗಳಿಂದ ಸಾಮ್ಯವನ್ನು ಹೇಳುತ್ತದೆಯೊ? ಮೊದಲನೆಯ ಪಕ್ಷವೆಂದರೆ, ಜೀವನು ಪರಮಾತ್ಮಸ್ವರೂಪವೇ ಎಂದಾಗುವದರಿಂದ ನಿಮ್ಮ ಸಿದ್ಧಾಂತಕ್ಕೆ ವಿರೋಧವಾಗುತ್ತದೆ (೮೭).

[ಈ ಪೂರ್ವಪಕ್ಷವಾಗಲಿ ಸಿದ್ಧಾಂತವಾಗಲಿ ಭಾಷ್ಯದಲ್ಲಿಲ್ಲ. ಮೀಮಾಂಸಕನಾದ ಮಂಡನನು ಈ ಪೂರ್ವಪಕ್ಷವನ್ನು ಮಾಡುವದಕ್ಕಾಗಲಿ ಶಂಕರರು ಅದಕ್ಕೆ ಉತ್ತರವನು ಹೇಳುವದಕ್ಕಾಗಲಿ ಅವಸರದಿಲ್ಲ. ರಾಮಾನುಜಾದಿಗಳ ಸಿದ್ಧಾಂತವನ್ನು ಮನಸ್ಸಿನಲ್ಲಿಟ್ಟುಕೊಂಡು ಕವಿಯು ಈ ಪೂರ್ವಪಕ್ಷಸಿದ್ಧಾಂತಗಳನ್ನು ಸೇರಿಸಿರಬಹುದೆ ? ]

**ಮಂಡನ :** ಅವಿದ್ಯೆಯಿಂದ ಮೊದಲು ಕಾಣದೆ ಇದ್ದ ನಿತ್ಯತ್ವಮಾತ್ರದಿಂದಲೂ ಪರಮಾತ್ಮನ ಗುಣದಂಥ ಸುಖಜ್ಞಾನಾದಿಗಳಿಂದಲೂ ಸಾಮ್ಯವಾಗುವದೆಂದುಹೇಳಿದರೆ ದೋಷವಿರುವದಿಲ್ಲವಲ್ಲ ! (೮೮)

**ಶಂಕರ :** ಹಾಗಾದರೆ ಜೀವನ್ಮುಕ್ತಿಯಲ್ಲಿ ಪರಮಾತ್ಮನೇ ಆಗುವನೆಂದೇ ಈ ವಾಕ್ಯವು ಹೇಳಲಿ ; ಆ ವಿಷಯಕ್ಕೆ ದುರಾಗ್ರಹವೇಕೆ ? ಅವಿದ್ಯೆಯ ಆವರಣದಿಂದ ಈ ಸಾಮ್ಯವು ಕಾಣಿಸುವದಿಲ್ಲವೆಂದು ನೀನೇ ಒಪ್ಪಿದ್ದೀಯಷ್ಟೆ ? (೮೯)

[ಹಿಂದಿನ ಪೂರ್ವಪಕ್ಷಸಿದ್ಧಾಂತಗಳಿಗೆ ಕೊಟ್ಟಿರುವ ಟಿಪ್ಪಣಿಯೇ ಈ ಪೂರ್ವಪಕ್ಷಸಿದ್ಧಾಂತಗಳಿಗೂ ಅನ್ವಯಿಸುತ್ತದೆ.]

**ಮಂಡನ :** ಜಗತ್ಕಾರಣನಾದ ಈಶ್ವರನಿಗೆ ಚೇತನತ್ವದಿಂದ ಜೀವಸಾಮ್ಯವನ್ನು ವಾಕ್ಯವು ಹೇಳುತ್ತದೆಯೆನ್ನೋಣ! ಅದರಿಂದ ಪ್ರಧಾನಪರಮಾಣ್ವಾದಿವಾದಗಳನ್ನು ತಿರಸ್ಕರಿಸಿದಂತೆ ಆಗುವದಷ್ಟೆ ? (೯೦)

**ಶಂಕರ :** ಹಾಗಿದ್ದರೆ ಆಸ್ತಿ (ಅಂಥ ಚೇತನವು ಇದೆ) ಎಂಬ ಕ್ರಿಯಾಪದವಿರಬೇಕಾಗಿತ್ತು; ತತ್ತ್ವಮಸಿ (ಅದೇ ನೀನಾಗಿದೀಯೆ) ಎಂದಿರಬಾರದಿತ್ತು. ಇದಲ್ಲದೆ 'ತದೈಕ್ಷತ ಬಹು ಸ್ಯಾಮ್' (ನಾನು ಬಹುವಾಗುವೆನು ಎಂದು ಯೋಚಿಸಿಕೊಂಡಿತು) ಎಂಬಲ್ಲಿ ಚೇತನತ್ವವು ಮೊದಲೇ ಇದ್ದಿತೆಂದು ಹೇಳಿರುವದರಿಂದ ಅದನ್ನು (ತತ್ತ್ವಮಸಿ ಎಂದು ) ಮತ್ತೆ ಹೇಳಬೇಕಾದದ್ದು ಇರುವದಿಲ್ಲ ; ಅಂದರೆ ನಿನ್ನ ಈ ಪಕ್ಷಕ್ಕೆ ಪುನರುಕ್ತಿದೋಷವಿದೆ ಎಂದು ಭಾವ (೯೧).

[ಈ ಆಕ್ಷೇಪಸಮಾಧಾನಗಳು ಭಾಷ್ಯದಲ್ಲಿಲ್ಲ.]

**ಮಂಡನ :** ಹೀಗಿದ್ದರೂ ಈ ಐಕ್ಯವು ಪ್ರತ್ಯಕ್ಷಾದಿವಿರುದ್ಧವಾಗಿರುವದ ರಿಂದ ಜಪಮಂತ್ರಕ್ಕಾಗಿ ಹೇಳಿದ ವಾಕ್ಯವಿದೆಂದಾಗಲಿ ! (೯೨)

**ಶಂಕರ :** ಪ್ರತ್ಯಕ್ಷದಿಂದ ಭೇದವು ಸಿದ್ಧವಾಗುವಂತಿದ್ದರೆ ವಿರೋಧವಾಗು ವಂತಿದ್ದರೆ ವಿರೋಧವಾಗುವದೆನ್ನಬಹುದಾಗಿತ್ತು. ಸಂನಿಕರ್ಷವೇ ಇಲ್ಲದ್ದರಿಂದ ಭೇದವು ಸಿದ್ಧವಾಗುವದೇ ಇಲ್ಲ ; ವಿರೋಧವೆಲ್ಲಿ ಬಂತು ? (೯೩)

[ಭಾಷ್ಯದಲ್ಲಿ ಈ ಬಗೆಯ ಸಿದ್ಧಾಂತವಾದವಿಲ್ಲ.]

**ಮಂಡನ :** 'ನಾನು ಈಶ್ವರನಿಗಿಂತ ಭಿನ್ನನು' ಎಂದು ಜೀವಾತ್ಮನಲ್ಲಿ ವಿಶೇಷಣತಾಸಂಬಂಧವಿದೆ. ಆದ್ದರಿಂದ ಭೇದಕ್ಕೂ ಇಂದ್ರಿಯಕ್ಕೂ ಸಂನಿಕರ್ಷ ವಿಲ್ಲದಿದ್ದರೂ ಅನ್ಯೋನ್ಯಾಭಾವರೂಪವಾದ ಭೇದವು ವಿಶೇಷಣತಾರೂಪವಾದ ಸಂಬಂಧದಿಂದಲೇ ತಿಳಿಯಬರಬಹುದಲ್ಲವೆ ?

**ಶಂಕರ :** ಕೇವಲವಿಶೇಷಣತ್ವಕ್ಕೆ ಈ ಸಂಬಂಧವನ್ನು ಹೇಳುವದಕ್ಕಿಲ್ಲ. ಅದನ್ನೊಪ್ಪುವದಾದರೆ ಎಲ್ಲೆಲ್ಲಿ ವಿಶೇಷಣತ್ವವಿದೆಯೋ ಅಂಥ ವ್ಯವಹಿತಭೂತ ಲಾದಿಯಲ್ಲಿರುವ ಅಭಾವಕ್ಕೂ ವಿಶೇಷಣತಾಸಂಬಂಧದಿಂದ ಪ್ರತ್ಯಕ್ಷತ್ವವುಂಟೆಂ ದಾಗಿ ಅತಿಪ್ರಸಕ್ತಿ ಬರುವದು. ಆದ್ದರಿಂದ ಇಂದ್ರಿಯಸಂನಿಕರ್ಷವಿದ್ದಲ್ಲಿಯೇ ವಿಶೇಷಣತಾಸಂಬಂಧವು ಅಭಾವಜ್ಞಾನಕ್ಕೆ ಕಾರಣವೆನ್ನಬೇಕು. ಆದರೆ ಇಲ್ಲಿ ಆತ್ಮನಿಗೂ ಇಂದ್ರಿಯಕ್ಕೂ ಸಂನಿಕರ್ಷವಿಲ್ಲ (೯೪).

[ಈ ಪೂರ್ವಪಕ್ಷವು ತಾರ್ಕಿಕರ ಪ್ರತ್ಯಕ್ಷಪ್ರಕ್ರಿಯೆಯನ್ನನುಸರಿಸಿ ಮಾಡಿದ್ದು. ಈಚಿನ ಭೇದಧಿಕ್ಕಾರಾದಿಗ್ರಂಥಗಳಲ್ಲಿ ಇಂಥ ಪೂರ್ವಪಕ್ಷಸಿದ್ಧಾಂತಗಳು ಕಾಣಬರುತ್ತಿದೆಯಾದರೂ ಭಾಷ್ಯದಲ್ಲಿ ಇವು ಇಲ್ಲವೆಂಬುದನ್ನು ನೆನಪಿಡಬೇಕು. ]

**ಮಂಡನ :** ಭೇದಾಶ್ರಯನಾದ ಆತ್ಮನಿಗೆ ಇಂದ್ರಿಯಸಂನಿಕರ್ಷವಿಲ್ಲವೆಂದು ಹೇಳಿದ್ದು ಸರಿಯಲ್ಲ. ಚಿತ್ತ, ಆತ್ಮ—ಎರಡೂ ದ್ರವ್ಯಗಳಾಗಿರುವದರಿಂದ ಸಂಯೋ ಗಾಶ್ರಯತ್ವವಿದೆ (೯೫).

**ಶಂಕರ :** ಆತ್ಮನು ವಿಭುವೋ, ಅಣುಪರಿಮಾಣನೊ ? ಎರಡರಲ್ಲಿಯೂ ಸಂಯೋಗಕ್ಕೆ ಕಾರಣವಿರುವದಿಲ್ಲ. ಸಂಯೋಗಿತ್ವವು ಸಾವಯವಗಳಿಗೆ ಇರು ತ್ತದೆಯೇ ಹೊರತು ನಿರವಯವಗಳಿಗೆ ಇರುವದು ಲೋಕದಲ್ಲಿ ಕಂಡಿಲ್ಲ. ಮನಸ್ಸು ಇಂದ್ರಿಯವೆಂದು ಒಪ್ಪಿ ಈ ಸಮಾಧಾನವನ್ನು ಹೇಳಿದೆವು ; ನೇತ್ರಾದೀಂದ್ರಿಯ ಗಳಿಗೆ ಮನಸ್ಸು ಸಹಾಯಕಮಾತ್ರ, ಅದು ಇಂದ್ರಿಯವಲ್ಲ.

[ಈ ಪೂರ್ವಪಕ್ಷವೂ ಹಿಂದಿನ ಪೂರ್ವಪಕ್ಷಕ್ಕೆ ಸೇರಿದ್ದು, ತರ್ಕಶಾಸ್ತ್ರದ ಪರಿಚಯ ವಿಲ್ಲದವರಿಗೆ ಇದು ತಿಳಿಯುವದಿಲ್ಲ. ಈ ಪೂರ್ವಪಕ್ಷಸಿದ್ಧಾಂತಗಳಂತೂ ಭಾಷ್ಯದಲ್ಲಿಲ್ಲ, ಮನಸ್ಸು ಇಂದ್ರಿಯವಲ್ಲವೆಂಬುದು ಸೂತ್ರಭಾಷ್ಯಕ್ಕೆ (ಸೂ. ಭಾ. ೨-೪-೬, ೨-೪-೧೭) ವಿರುದ್ಧ. ]

**ಮಂಡನ :** ಹಾಗಾದರೆ ಭೇದಪ್ರಮೆಯು ಇಂದ್ರಿಯಜನ್ಯವೆಂದು ಒಪ್ಪುವದೇ ಬೇಡ. ಅದು ಸಾಕ್ಷಿರೂಪವಾದದ್ದೇ ಎನ್ನೋಣ ! ಆ ಸಾಕ್ಷಿಪ್ರತ್ಯಕ್ಷಕ್ಕೆ ವಿರುದ್ಧವಾಗಿರುವದರಿಂದ ತತ್ತ್ವಮಸಿವಾಕ್ಯವು ಹೇಗೆತಾನೆ ಅಭೇದವನ್ನು ಹೇಳೀತು ? (೯೯).

**ಶಂಕರ :** ಈ ಸಾಕ್ಷಿರೂಪಪ್ರತ್ಯಕ್ಷವು ಅವಿದ್ಯಾಯುಕ್ತನಾದ ಜೀವನಿಗೂ ಮಾಯಾಯುಕ್ತನಾದ ಈಶ್ವರನಿಗೂ ಇರುವ ಭೇದವನ್ನು ತಿಳಿಸುತ್ತದೆ. ಶ್ರುತಿಯು ಕೇವಲ ಜೀವೇಶ್ವರರಿಗೆ ಅಭೇದವನ್ನು ಹೇಳುತ್ತದೆ. ಆದ್ದರಿಂದ ವಿರೋಧವಿಲ್ಲ. ಒಂದುವೇಳೆ ವಿರೋಧವೇ ಎಂದರೂ ಅಪಚ್ಛೇದನ್ಯಾಯದಿಂದ ಮುಂಚೆ ಬಂದಿದ್ದ ಪ್ರತ್ಯಕ್ಷವೇ ಆಮೇಲೆ ಪ್ರವೃತ್ತವಾದ ಶ್ರುತಿಯು ಬಾಧಕವಾಗುವದು ಯುಕ್ತ (೧೦೦, ೧೦೧).

[ಈ ಪೂರ್ವಪಕ್ಷಸಿದ್ಧಾಂತಗಳು ಭಾಷ್ಯದಲ್ಲಿಲ್ಲ. ಅಪಚ್ಛೇದನ್ಯಾಯವನ್ನು ಮಂಡನ ಮಿಶ್ರವಾಚಸ್ಪತಿಮಿಶ್ರರು ಉಪಯೋಗಿಸಿರುತ್ತಾರಾದರೂ ಆಚಾರ್ಯರು ಉಪಯೋಗಿಸಿಲ್ಲ. ಅವರು ಪ್ರತ್ಯಕ್ಷದಿಂದ ತೋರುವ ಸುಖಿತ್ವದುಃಖಿತ್ವಾದಿಗಳು ಬುದ್ಧ್ಯುಪಾಧಿಜನ್ಯವೆಂದೂ ಕಲ್ಪಿತಾತ್ಮನ ವಿಷಯವೆಂದೂ ಕೆಲವು ಕಡೆಗಳಲ್ಲಿ ಹೇಳಿರುತ್ತಾರೆ. ಶಾಬ್ದಪ್ರತ್ಯಕ್ಷಗಳಿಗೆ ವಿರೋಧವಿದೆ ಎಂಬುದನ್ನೇ ಆಚಾರ್ಯರು ಒಪ್ಪುವದಿಲ್ಲ. ಸಾಕ್ಷಿಪ್ರತ್ಯಕ್ಷಕ್ಕೆ ಮಾಯಾಯುಕ್ತನಾದ ಈಶ್ವರನು ವಿಷಯನೆ?–ಎಂಬುದು ವಿಚಾರಣೀಯವಾಗಿದೆ.]

**ಮಂಡನ :** ಈ ಜೀವನು ಬ್ರಹ್ಮನಿರೂಪಿತಭೇದವುಳ್ಳವನು, ಏಕೆಂದರೆ ಘಟಾದಿಗಳಂತೆ ಅಸರ್ವಜ್ಞನಾಗಿರುತ್ತಾನೆ ; ಘಟಾದಿಗಳೇ ಇಲ್ಲಿ ದೃಷ್ಟಾಂತವು– ಎಂಬ ಅನುಮಾನದಿಂದ ಈ ವಾಕ್ಯಜ್ಞಾನಕ್ಕೆ ಬಾಧೆಯಾಗುವದಿಲ್ಲವೆ ? (೧೦೨).

**ಶಂಕರ :** ಇಲ್ಲಿ ಪರಮಾರ್ಥಭೇದವನ್ನು ಅನುಮಾನದಿಂದ ಸಾಧಿಸಿರುತ್ತೀರೊ ? ಕಲ್ಪಿತಭೇದವನ್ನು ಸಾಧಿಸಿರುತ್ತೀರೊ ? ಪಾರಮಾರ್ಥಿಕಭೇದವನ್ನು ಎನ್ನುವದಾದರೆ ದೃಷ್ಟಾಂತದಲ್ಲಿ ಅದು ಇರುವದಿಲ್ಲ. ಕಾಲ್ಪನಿಕಭೇದವನ್ನು ಎಂದರೆ ಅದನ್ನು ನಾವು ಒಪ್ಪಿಯೇ ಇರುತ್ತೇವಲ್ಲ ! (೧೦೩).

**ಮಂಡನ :** ಸ್ವಜ್ಞಾನಾಬಾಧ್ಯಭೇದಾಶ್ರಯತ್ವವನ್ನೇ ನಾವು ಈ ಅನುಮಾನದಿಂದ ಸಾಧಿಸಿರುತ್ತೇವೆ. ಅದು ಘಟಾದಿಗಳಲ್ಲಿದೆ, ಏಕೆಂದರೆ ಘಟಾದಿಗತ ಭೇದವು ಅದರ ಜ್ಞಾನದಿಂದ ಬಾಧ್ಯವಲ್ಲ. ಆತ್ಮಜ್ಞಾನದಿಂದ ಭೇದವು ಬಾಧ್ಯವಲ್ಲವೆಂದೇನೂ ನೀವು ಒಪ್ಪಿಲ್ಲವಷ್ಟೆ ? ಆದ್ದರಿಂದ ಒಪ್ಪಿದ್ದನ್ನೇ ಸಾಧಿಸಿದಂತೆ ಆಗಲಿಲ್ಲ ; ದೃಷ್ಟಾಂತವಿಲ್ಲವೆಂಬ ದೋಷವೂ ಇಲ್ಲ (೧೦೪).

**ಶಂಕರ :** ಸ್ವಜ್ಞಾನದಿಂದ ಅಬಾಧ್ಯವಾದ ಭೇದವುಳ್ಳವನೆಂದು ನೀವು ಹೇಳುವಲ್ಲಿ ಸ್ವಶಬ್ದದಿಂದ ಸುಖಾದಿಗಳುಳ್ಳ ಆತ್ಮನು ವಿವಕ್ಷಿತನಾಗಿದ್ದಾನೊ, ಅದಿಲ್ಲದವನೊ ? ಮೊದಲಿನ ಅರ್ಥವಾದರೆ ನಮಗೆ ಆ ಭೇದವು ಇಷ್ಟವೇ ಆಗಿರು

ದವರಿಂದ ಸಿದ್ಧಸಾಧನವೇ ಆಯಿತು. ಎರಡನೆಯ ಅರ್ಥವಾದರೆ ಆಗ ಘಟಾದಿಗಳು ದೃಷ್ಟಾಂತವಾಗಲಾರವು ; ಏಕೆಂದರೆ ಘಟವು ದುಃಖಾದಿವಿರಹಿತನಾದ ಆತ್ಮನಲ್ಲಿ ಕಲ್ಪಿತವಾಗಿರುವದರಿಂದ ಆ ಆತ್ಮನ ಜ್ಞಾನದಿಂದ ಬಾಧಿತವಾಗುತ್ತದೆ. (೧೦೫, ೧೦೬).

[ಅನುಮಾನಪ್ರಮಾಣವು ವ್ಯವಹಾರದಲ್ಲಿಯೇ ಹೊರತು ಪರಮಾರ್ಥದಲ್ಲಿಲ್ಲ- ಎಂಬ ಉತ್ತರವನ್ನು ಕೊಡುವದನ್ನು ಬಿಟ್ಟು ಅನುಮಾನದಲ್ಲಿ ದೋಷವನ್ನು ಆಚಾರ್ಯರು ಏಕೆ ಹೇಳಿದರೊ !]

**ಮಂಡನ :** ಅಲ್ಲಯ್ಯ, ನಿರುಪಾಧಿಕಭೇದವನ್ನು ನಾನು ಸಾಧಿಸುವದಕ್ಕೆ ಹೊರಟಿದ್ದೇನೆ. ನೀನು ಔಪಾಧಿಕಭೇದವನ್ನು ಮಾತ್ರ ಒಪ್ಪಿದ್ದೀಯೆ. ದೃಷ್ಟಾಂತವಾದ ಘಟವಲ್ಲಿ ನಿರುಪಾಧಿಕಭೇದವೇ ಇದೆಯಲ್ಲವೆ ? (೧೦೬)

**ಶಂಕರ :** ಘಟೇಶ್ವರಭೇದವೂ ಔಪಾಧಿಕವೇ. ಅಲ್ಲಿ ಅವಿದ್ಯೆ ಎಂಬ ಉಪಾಧಿಯಿದೆ. ಆದ್ದರಿಂದ ದೃಷ್ಟಾಂತಹಾನಿದೋಷವು ಹಾಗೇ ಉಳಿದುಕೊಳ್ಳುತ್ತದೆ. ಇದಲ್ಲದೆ ನೀನು ಉದಾಹರಿಸಿದ ಅನುಮಾನದಲ್ಲಿ ಘಟಕ್ಕೆ ಜಡತ್ವವಿದೆ, ಆತ್ಮನಲ್ಲಿಲ್ಲ. ಆತ್ಮನು ಚಿದ್ರೂಪನಾದ್ದರಿಂದ ಪರಮೇಶ್ವರಾಭಿನ್ನನು, ಪರಮೇಶ್ವರನು- ಎಂಬುದೇ ಇಲ್ಲಿ ಯುಕ್ತವಾದ ಅನುಮಾನ. ಹೀಗೆ ನಿನ್ನ ಅನುಮಾನಕ್ಕೆ ಪ್ರತಿಪಕ್ಷವೂ ಇದೆ. ಆದ್ದರಿಂದ ಹೇತುವು ಸೋಪಾಧಿಕವೂ ಸತ್ಪ್ರತಿಪಕ್ಷವೂ ಆಗಿರುತ್ತದೆ (೧೦೭).

[ಇದೂ ಅನುಮಾನವಿಚಾರವೇ. ಹಿಂದಿನ ಟಿಪ್ಪಣಿ ಇದಕ್ಕೂ ಅನ್ವಯಿಸುತ್ತದೆ.[

**ಮಂಡನ :** ಬ್ರಹ್ಮವು ಜೀವಪ್ರತಿಯೋಗಿಕಧರ್ಮಿಪ್ರಮಾಬಾಧ್ಯವಾದ ಭೇದವುಳ್ಳದ್ದು. ಏಕೆಂದರೆ ಅದು ಸಂಸಾರಿಯಲ್ಲ ; ಘಟಾದಿಗಳೇ ದೃಷ್ಟಾಂತ. ಆತ್ಮಪ್ರತಿಯೋಗಿಕವಾದ ಭೇದವು ಬ್ರಹ್ಮಜ್ಞಾನಬಾಧ್ಯವೆಂಬುದು ನಿಮಗೆ ಇಷ್ಟ. ಹಾಗಿಲ್ಲವೆಂದು ಈ ಅನುಮಾನದಿಂದ ಸಾಧಿಸುತ್ತೇನಾದ್ದರಿಂದ ಸಿದ್ಧಸಾಧನವೆಂಬ ದೋಷವಿಲ್ಲ. ಘಟಾದಿಪ್ರಮೆಯಿಂದ ಜೀವಪ್ರತಿಯೋಗಿಕಭೇದವು ಬಾಧಿತವಾಗುವದಿಲ್ಲವಷ್ಟೆ ? ಆದ್ದರಿಂದ ದೃಷ್ಟಾಂತಹಾನಿಯೂ ಇಲ್ಲ (೧೦೮).

**ಶಂಕರ :** ಆ ಭೇದವು ಎಲ್ಲಾ ಧರ್ಮಿಗಳ ಪ್ರಮೆಯಿಂದ ಅಬಾಧ್ಯವೆನ್ನುತ್ತೀಯೊ, ಅಥವಾ ಯಾವದಾದರೊಂದು ಧರ್ಮಿಯ ಪ್ರಮೆಯಿಂದ ಅಬಾಧ್ಯವೆನ್ನುತ್ತೀಯೊ ? ಘಟಾದಿಯಲ್ಲಿಯೂ ಬ್ರಹ್ಮದಲ್ಲಿಯೂ ಜೀವಪ್ರತಿಯೋಗಿಕ ಭೇದವು ಒಂದೇ ಆಗಿರುವದರಿಂದಲೂ ಘಟಾದಿಪ್ರಮೆಯಿಂದ ಆ ಭೇದವು ಬಾಧವಾಗುವದಿಲ್ಲವೆಂದು ನಾವೂ ಒಪ್ಪುವದರಿಂದಲೂ ಸಿದ್ಧಸಾಧನದೋಷವು ಮತ್ತೂ ಬರುತ್ತದೆ. ಇದಲ್ಲದೆ ಧರ್ಮಿ ಎಂಬ ಪದಕ್ಕೆ ನಿರ್ಗುಣಬ್ರಹ್ಮವು ಅರ್ಥವೊ, ಸಗುಣಬ್ರಹ್ಮವು ಅರ್ಥವೊ ? ಸಗುಣವೆನ್ನುವಹಾಗಿಲ್ಲ ; ಏಕೆಂದರೆ ಅದರ ಜ್ಞಾನ

ದಿಂದ ಭೇದವು ಅಬಾಧ್ಯವೆಂದು ನಾವು ಒಪ್ಪಿಯೇ ಇರುತ್ತೇವೆ. ನಿರ್ಗುಣ ಬ್ರಹ್ಮವೇ ಅರ್ಥವೆನ್ನುವಪಕ್ಕಿಲ್ಲ ; ಏಕೆಂದರೆ ಅದು ಪ್ರಮಿತವೆನ್ನುತ್ತೀಯೊ, ಅಪ್ರಮಿತವೆನ್ನುತ್ತೀಯೊ? ಅಪ್ರಮಿತವೆಂದರೆ ಆಶ್ರಯಾಸಿದ್ಧಿಯು ಬಂದೊದಗುತ್ತದೆ. ಪ್ರಮಿತವೆಂದರೆ ಆಗ ಧರ್ಮಿಗ್ರಾಹಕಮಾನಕ್ಕೆ ವಿರೋಧವಾಗುತ್ತದೆ ; ವೇದಾಂತವೆಂಬ ಧರ್ಮಿಗ್ರಾಹಕಮಾನದಿಂದ ಜೀವಾಭಿನ್ನಪರಮಾತ್ಮನೇ ಸಿದ್ಧನಾಗುತ್ತಾನಷ್ಟೆ ? (೧೧೧)

[ಈವರೆಗೆ ನಾವು ಕೊಟ್ಟಿರುವ ಅನುಮಾನಗಳೂ ಅವುಗಳಲ್ಲಿ ಆಚಾರ್ಯರು ಹೇಳಿರುವ ದೋಷಗಳೂ ತರ್ಕಶಾಸ್ತ್ರದ ಪರಿಚಯವಿದ್ದವರಿಗೆ ಮಾತ್ರ ತಿಳಿಯುವವಾಗಿವೆ. ಆದ್ದರಿಂದ ಅವನ್ನು ವಿವರಿಸುವ ಆಯಾಸವನ್ನು ತೆಗೆದುಕೊಳ್ಳದೆ ವ್ಯಾಖ್ಯಾನದ ಆಧಾರದಿಂದ ಸಂಭಾಷಣೆಯನ್ನು ಇದ್ದದ್ದು ಇದ್ದಂತೆ ಇಟ್ಟಿರುತ್ತೇವೆ. ಹೀಗೆ ಪೂರ್ವಪಕ್ಷದಲ್ಲಿ ವಿಕಲ್ಪಗಳನ್ನು ಮಾಡುವದೂ ಸಿದ್ಧಸಾಧನ, ಸತ್ಪ್ರತಿಪಕ್ಷ– ಮುಂತಾದ ಪಾರಿಭಾಷಿಕಶಬ್ದಗಳನ್ನು ಹೇರಳವಾಗಿ ಉಪಯೋಗಿಸುವದೂ ಆಚಾರ್ಯರ ಭಾಷ್ಯದಲ್ಲಿ ಇಲ್ಲವೇಇಲ್ಲವೆಂಬುದನ್ನು ಹೇಳಬೇಕಾದದ್ದೇ ಇಲ್ಲ. ಕವಿಯು ಈಚಿನವರ ವಾದಕ್ರಮವನ್ನು ಅನುಸರಿಸಿ ಈ ಪೂರ್ವಪಕ್ಷಸಿದ್ಧಾಂತಗಳನ್ನು ಕಲ್ಪಿಸಿರುತ್ತಾನೆ. ಅಷ್ಟೆ.]

**ಮಂಡನ:** 'ದ್ವಾ ಸುಪರ್ಣಾ ಸಯುಜಾ ಸಖಾಯಾ' (ಋ. ೧–೨೨–೧೬೪, ಮುಂ. ೩–೧–೧) ಎಂಬ ಶ್ರುತಿಯಲ್ಲಿ ಜೀವನು ಭೋಕ್ತೃವೆಂದೂ ಈಶ್ವರನು ಅಭೋಕ್ತೃವೆಂದೂ ಹೇಳಿರುತ್ತದೆ. ಇದೇ ಅಭೇದಬಾಧಕವೆಂದಾಗಲಿ ! (೧೧೨)

**ಶಂಕರ :** ಭೇದವು ಪ್ರತ್ಯಕ್ಷಸಿದ್ಧವಾಗಿದೆ, ಅದರ ಜ್ಞಾನಕ್ಕೆ ಫಲವನ್ನು ಹೇಳಿಲ್ಲ. ಆದ್ದರಿಂದ ಶ್ರುತಿಯು ಹೇಳುವ ಅಭೇದಕ್ಕೆ ಇದು ಬಾಧಕವಾಗಲಾರದು. ಹಾಗಿಲ್ಲದಿದ್ದರೆ ಅತತ್ಪರವಾದದ್ದೂ ಸ್ವಾರ್ಥದಲ್ಲಿ ಮಾನವಾಗಬೇಕಾದೀತು(೧೧೩).

[ಅನ್ಯಾರ್ಥವಾದ ಮಂತ್ರಾರ್ಥವಾದಗಳೂ ಕೆಲವು ವಿಷಯದಲ್ಲಿ ಪ್ರಮಾಣವಾಗಬಹುದೆಂದು ಭಾಷ್ಯದಲ್ಲಿ ಒಪ್ಪಿದೆ. ಉದಾಹರಣೆಗೆ ದೇವತಾಧಿಕರಣಭಾಷ್ಯ ೧-೩-೩೩ನ್ನು ನೋಡಿ. ಆದರೆ 'ತತ್ತ್ವಮಸಿ' ಮುಂತಾದ ವಾಕ್ಯಗಳು ನಿರಾಕಾಂಕ್ಷವಾಗಿರುವದರಿಂದ ಅವನ್ನು ಬಾಧಿಸುವ ಶಕ್ತಿ ಭೇದಾನುವಾದಕಶ್ರುತಿಗೆ ಬರಲಾರದು– ಎಂದಿದ್ದರೆ ಭಾಷ್ಯಕಾರರ ಹೃದಯಕ್ಕೆ ಹತ್ತಿರವಾಗುತ್ತಿತ್ತು. ಸೂ.ಭಾ. ೨–೧–೧೪ನ್ನು ನೋಡಿ.]

**ಮಂಡನ :** ಸ್ಮೃತಿಪ್ರಸಿದ್ಧವಾಗಿರುವ ವಿಷಯಕ್ಕೆ ಶ್ರುತಿಯು ಮೂಲವೆಂದು ಒಪ್ಪುವಂತೆ ಪ್ರತ್ಯಕ್ಷಸಿದ್ಧವಾದ ಅರ್ಥಕ್ಕೂ ಶ್ರುತಿಯೇ ಮೂಲವೆಂದಾಗಲಿ ! (೧೧೪)

**ಶಂಕರ :** ಸ್ಮೃತಿಯಲ್ಲಿ ವೇದಜ್ಞರಾದವರು ಹೇಳುವ ಅಪೂರ್ವಾರ್ಥಕ್ಕೆ ಶ್ರುತಿಯು ಮೂಲವಾಗಿರುತ್ತದೆ. ವೇದವಿಚಾರವೇ ಗೊತ್ತಿಲ್ಲದವರಿಗೂ ತಿಳಿದಿರುವ ಭೇದಕ್ಕೆ ಶ್ರುತಿ ಹೇಗೆ ಮೂಲವಾದೀತು ? ಈ ಶ್ರುತಿಯು ಜೀವೇಶ್ವರರನ್ನು ತಿಳಿಸುತ್ತದೆ ಎಂದಿಟ್ಟುಕೊಂಡು ಈ ಉತ್ತರವನ್ನು ಹೇಳಿರುತ್ತೇನೆ. ಆದರೆ

ನಿಜವಾಗಿ ಈ ಶ್ರುತಿಯು ಸತ್ತ್ವದಿಂದ ಪುರುಷನನ್ನು ವಿವೇಚನೆಮಾಡಿ,ಪುರುಷನು ಅಸಂಸಾರಿಯೆಂದೇ ಹೇಳುತ್ತಿದೆ. (೧೧೫, ೧೧೬)

[ಈ ಎರಡನೆಯ ಅರ್ಥವು ಪೈಂಗಿರಹಸ್ಯಬ್ರಾಹ್ಮಣವನ್ನನುಸರಿಸಿ ಹೇಳಿದ್ದು. ಆದರೆ ಮೊದಲನೆಯ ಅರ್ಥವನ್ನು ಭಾಷ್ಯಕಾರರು ಪೂರ್ಣವಾಗಿ ನಿರಾಕರಿಸಿಲ್ಲ. ವಿಯದಧಿಕರಣ (ಸೂ. ಭಾ. ೩-೩-೩೪)ದಲ್ಲಿ 'ದ್ವಾ ಸುಪರ್ಣಾ' ಮತ್ತು 'ಋತಂ ಪಿಬನ್ತೌ' ಇವೆರಡೂ ಒಂದೇ ವಿದ್ಯೆಯನ್ನು ಹೇಳುತ್ತವೆ ಎಂದು ಹೇಳಿದೆ. ಮುಂಡಕಭಾಷ್ಯದಲ್ಲಿ ಇದೇ ಮಂತ್ರಕ್ಕೆ ಜೀವೇಶ್ವರಪರವಾಗಿಯೇ ಅರ್ಥವನ್ನು ಮಾಡಿದೆ]

**ಮಂಡನ :** ಇದು ಸತ್ತ್ವಜೀವರನ್ನೇ ಹೇಳುತ್ತದೆ ಎಂದಾದರೆ ಜಡವಾಗಿರುವ ಸತ್ತ್ವಕ್ಕೆ ಭೋಕ್ತೃತ್ವವು ಹೇಗೆ ಬಂದೀತು ? (೧೧೭)

**ಶಂಕರ :** ಈ ಆಕ್ಷೇಪವನ್ನು ನಮ್ಮಮೇಲೆ ಹಾಕತಕ್ಕದ್ದಲ್ಲ ; ಪೈಂಗಿರಹಸ್ಯಮಂತ್ರವು ತಾನೇ 'ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತೀತಿ ಸತ್ತ್ವಮನಶ್ನನ್ನನ್ಯೋಽಭಿಪಶ್ಯತೀತಿ ಜ್ಞಸ್ತಾವೇತೌ ಸತ್ತ್ವಕ್ಷೇತ್ರಜ್ಞೌ||' ಎಂಬಲ್ಲಿ ಈ ಮಂತ್ರವನ್ನು ಹೀಗೆಯೇ ಸತ್ತ್ವಜೀವಪರವಾಗಿಯೇ ವಿವರಿಸಿದೆ. (೧೧೮)

**ಮಂಡನ :** ಸತ್ತ್ವಶಬ್ದವು ಶಾರೀರವಾಚಕವು, ಕ್ಷೇತ್ರಜ್ಞಶಬ್ದವು ಪರಮಾತ್ಮವಾಚಕವು. ಆದ್ದರಿಂದ ಆ ರಹಸ್ಯಬ್ರಾಹ್ಮಣದಂತೆಯೂ ನಾನು ಹೇಳಿದ್ದೇ ಅರ್ಥವೆಂದಾಯಿತು (೧೧೯)

**ಶಂಕರ :** ಆ ಬ್ರಾಹ್ಮಣದಲ್ಲಿ 'ತದೇತತ್ಸತ್ತ್ವಂ, ಯೇನ ಸ್ವಪ್ನಂ ಪಶ್ಯತಿ| ಅಥ ಯೋಽಯಂ ಶಾರೀರ ಉಪದ್ರಷ್ಟಾ ಸ ಕ್ಷೇತ್ರಜ್ಞಃ || ಯಾವದರಿಂದ ಸ್ವಪ್ನವನ್ನು ಕಾಣುತ್ತಾರೋ ಅದು ಸತ್ತ್ವವು ; ಶಾರೀರನಾದ ನೋಡುವನಿದಾನಲ್ಲ, ಅವನು ಕ್ಷೇತ್ರಜ್ಞನು- ಎಂಬ ವಾಕ್ಯದಿಂದ ಸತ್ತ್ವವೆಂದರೆ ಅಂತಃಕರಣವೇ, ಕ್ಷೇತ್ರಜ್ಞನೆಂದರೆ ಶಾರೀರವೇ- ಎಂದು ಸ್ಪಷ್ಟವಾಗಿ ಹೇಳಿದೆಯಲ್ಲ ! (೧೨೦).

**ಮಂಡನ :** ಈ ವಾಕ್ಯದಲ್ಲಿ 'ಯೇನ' ಎಂದರೆ ಸ್ವಪ್ನವನ್ನು ಕಾಣುವ ಕರ್ತೃವಾದ ಜೀವನಿಂದ ಎಂದೇ ಅರ್ಥ. ಕ್ಷೇತ್ರಜ್ಞನು ಎಂದರೆ ಸರ್ವಜ್ಞನಾದ ಈಶ್ವರನೂ ಆಗಬಹುದು. (೧೨೧)

**ಶಂಕರ :** ಪಶ್ಯತಿ ಎಂಬಲ್ಲಿ ತಿಙ್ (ಕ್ರಿಯಾಪದ) ಪ್ರತ್ಯಯವು ಕರ್ತೃವನ್ನು ಹೇಳುತ್ತದೆ ; ಆದ್ದರಿಂದ 'ಯೇನ' ಎಂಬ ತೃತೀಯೆಯಿಂದ ಉಕ್ತವಾಗಿರುವದು ಕರಣವೇ ಆಗುವದು. ಇದಲ್ಲದೆ ಸ್ವಪ್ನದ್ರಷ್ಟೃವು 'ಶಾರೀರ'ನೆಂದು ಇಲ್ಲಿ ಹೇಳಿರುತ್ತದೆ ; ಆದ್ದರಿಂದ ಅವನು ಈಶ್ವರನಾಗಲಾರನು (೧೨೨).

**ಮಂಡನ :** ಶರೀರದಲ್ಲಿ ಇವನು ಇರುತ್ತಾನೆ ಎಂಬರ್ಥದಲ್ಲಿ ಮಹೇಶ್ವರನೂ ಶಾರೀರನಾಗಬಹುದಲ್ಲ ? (೧೨೩).

**ಶಂಕರ** ; ಶರೀರವನ್ನು ಬಿಟ್ಟು ಬೇರೆಯ ಕಡೆಯಲ್ಲಿಯೂ ಇರುವವನು ಶಾರೀರಶಬ್ದವಾಚ್ಯನೆಂದು ಹೇಗೆ ಆದೀತು ? ಆಕಾಶವು ಶರೀರದಲ್ಲಿಯೂ ಇರುತ್ತದೆ. ಆದರೂ ಅದನ್ನು ಯಾರೂ 'ಶರೀರ'ವೆನ್ನುವದಿಲ್ಲವಷ್ಟೆ ? (೧೨೪).

**ಮಂಡನ** : ಇದು ಸತ್ತ್ವಕ್ಷೇತ್ರಜ್ಞರನ್ನೇ ಹೇಳುತ್ತದೆ. ಎಂದಾದರೆ 'ಅತ್ತಿ' ಎಂದು ಅಚೇತನವಾದ ಬುದ್ಧಿಯು ಭೋಕ್ತೃವೆಂದು ಹೇಳುವ ಶ್ರುತಿ ಹೇಗೆ ಪ್ರಮಾಣವಾದೀತು ? (೧೨೫)

**ಶಂಕರ** : ಸುಡದಿರುವ ಕಬ್ಬಿಣವೂ ಬೆಂಕಿಯ ಸಂಬಂಧದಿಂದ ದಾಹಕವು, ಸುಡುವದು- ಎನ್ನುವಹಾಗೆ ಅಚೇತನವಾದ ಬುದ್ಧಿಗೂ ಚಿತ್ತಿನ ಪ್ರವೇಶದಿಂದ ಭೋಕ್ತೃತ್ವವು ಬರಬಹುದು. (೧೨೬)

[ಮಂಡನನು ಕರ್ಮಮೀಮಾಂಸಕನಾಗಿದ್ದೂ ಜೀವೇಶ್ವರಭೇದವನ್ನು ಹೇಳುವ ವೇದಾಂತಿಯಾಗಿ ಅಥವಾ ನೈಯಾಯಿಕನಾಗಿ ವಾದಿಸಿರುತ್ತಾನೆಂಬುದನ್ನು ಇಲ್ಲಿಯೂ ಲಕ್ಷ್ಯದಲ್ಲಿಡಬೇಕು. ಪ್ರತ್ಯಕ್ಷಕ್ಕೂ ಶ್ರುತಿಯು ಮೂಲವಾಗಲಿ !-ಎಂಬ ಪೂರ್ವಪಕ್ಷವನ್ನು ಮೀಮಾಂಸಕನು ಎಂದಿಗೂ ಒಪ್ಪಲಾರನು. ಸತ್ತ್ವಕ್ಕೆ ಭೋಕ್ತೃತ್ವವೂ ಬರಬಹುದೆಂಬ ಸಿದ್ಧಾಂತವು ಆಚಾರ್ಯರ ಭಾಷ್ಯಕ್ಕೆ ವಿರುದ್ಧ. ಕೇವಲ ಕ್ಷೇತ್ರಜ್ಞನಿಗೂ ಭೋಕ್ತೃತ್ವವು ಹೊಂದುವದಿಲ್ಲ, ಅಚೇತನವಾದ ಅವಿದ್ಯಾಕಲ್ಪಿತವಾದ ಸತ್ತ್ವಕ್ಕಂತೂ ಹೊಂದುವದೇ ಇಲ್ಲ ಕ್ಷೇತ್ರಜ್ಞನಿಗೆ ಭೋಕ್ತೃತ್ವವಿಲ್ಲ, ಅವನು ಬ್ರಹ್ಮಸ್ವಭಾವನೇ ಎಂದು ತಿಳಿಸುವದಕ್ಕಾಗಿ ಸತ್ತ್ವದಲ್ಲಿ ಭೋಕ್ತೃತ್ವವನ್ನು ಅಧ್ಯಾರೋಪಮಾಡಿದೆ- ಎಂದು ಅಲ್ಲಿ (ಸೂ. ಭಾ. ೧-೨-೧೧) ಬರೆದಿದೆ. ]

**ಮಂಡನ** : ನೆರಳುಬಿಸಿಲುಗಳಂತೆ ಜೀವೇಶ್ವರರು ಅತ್ಯಂತಭಿನ್ನರು ಎಂದು ಹೇಳುವ 'ಋತಂ ಪಿಬನ್ತೌ' (ಕಾ.೧-೩-೧) ಎಂಬ ಮಂತ್ರವು ಅಭೇದ ಶ್ರುತಿಗೆ ಬಾಧಕವೆಂದಾಗಲಿ ! (೧೨೭)

**ಶಂಕರ** : ವ್ಯವಹಾರಸಿದ್ಧವಾದ ಭೇದವನ್ನು ಅನುವಾದಮಾಡಿ ಹೇಳುವ ಈ ಶ್ರುತಿ ಅಭೇದಶ್ರುತಿಗೆ ಬಾಧಕವಾಗಲಾರದು. ಶ್ರುತಿಯು ಅಪೂರ್ವಾರ್ಥವನ್ನು ಹೇಳುವ ಈ ಭೇದಶ್ರುತಿಯನ್ನೇ ಬಾಧಿಸುತ್ತದೆ ಎನ್ನಬಹುದು. (೧೨೮)

[ ದ್ವಾ ಸುಪರ್ಣಾ, ಋತಂ ಪಿಬನ್ತೌ- ಇವೆರಡೂ ಒಂದೇ ಅರ್ಥವನ್ನು ಹೇಳುತ್ತವೆ ಎಂದು ಆಗಲೆ ತಿಳಿಸಿದ್ದಾಗಿದೆ. ]

**ಮಂಡನ** : ಪ್ರಮಾಣಾಂತರದ ಬೆಂಬಲವುಳ್ಳ ಶ್ರುತಿಯೇ ಪ್ರಬಲ. ಆದ್ದರಿಂದ ಅದು ಅಭೇದಶ್ರುತಿಯನ್ನು ಬಾಧಿಸುತ್ತದೆ.

**ಶಂಕರ** : ಶ್ರುತಿಗಳಿಗೆ ಪ್ರಮಾಣಾಂತರವು ಪ್ರಾಬಲ್ಯವನ್ನುಂಟುಮಾಡಲಾರದು. ಒಂದೇ ವಿಷಯಕ್ಕೆ ಪ್ರಮಾಣಾಂತರವಿದ್ದರೆ ಶ್ರುತಿಯು ಅಧಿಗತಾರ್ಥವನ್ನೇ ಹೇಳುತ್ತದೆ ಎಂದಾಗಿ ಅದಕ್ಕೆ ದೌರ್ಬಲ್ಯವೇ ಬರುತ್ತದೆ.

[ಪ್ರಕೃತ ದ್ವಾ ಸುಪರ್ಣಾ ಶ್ರುತಿಗೆ ಪ್ರತ್ಯಕ್ಷದ ಬೆಂಬಲವಿದೆಯೆಂಬುದೇ ಸರಿಯಲ್ಲ. ಏಕೆಂದರೆ ಈಶ್ವರನು ಪ್ರತ್ಯಕ್ಷನಲ್ಲ. ]

**ಮಂಡನ :** ಮಾನಾಂತರದ ಬೆಂಬಲವುಳ್ಳ ಶ್ರುತಿಯು ಬಲಿಷ್ಠವಲ್ಲವೆ? ಅದು ಅಭೇದಶ್ರುತಿಯನ್ನು ಹೊಡೆಯಲಿ ! (೧೨೯).

**ಶಂಕರ :** ವಿದ್ವಾಂಸನೆ, ಪ್ರಮಾಣಾಂತರವು ಶ್ರುತಿಗೆ ಪ್ರಾಬಲ್ಯವನ್ನುಂಟು ಮಾಡಲಾರದು. ಗತಾರ್ಥವನ್ನೇ ಹೇಳುವದರಿಂದ ಶ್ರುತಿಗೆ ಅದು ದೌರ್ಬಲ್ಯವನ್ನೇ ಉಂಟುಮಾಡುತ್ತದೆ (೧೩೦).

[ಶ್ರುತಿಯು ಮಾನಾಂತರದಿಂದ ಪ್ರಬಲವಾಗುವದೆಂಬುದನ್ನು ಮೀಮಾಂಸಕರೂ ಒಪ್ಪುವದಿಲ್ಲ. ಅವರು ಪ್ರಮಾಣಕ್ಕೆ ಸ್ವತಃಪ್ರಾಮಾಣ್ಯವನ್ನು ಒಪ್ಪುವವರು.]

ಮಾಧವನು 'ಇತ್ಯಾದ್ಯಾ ದೃಢಯುಕ್ತಿರಸ್ಯ ಶುಶುಭೇ ದತ್ತಾನುಮೋದಾ ಗಿರಾಂ ದೇವ್ಯಾ' (ಮಾ. ಶಂ ೮–೧೩೧) ಎಂಬ ಶ್ಲೋಕದಲ್ಲಿ ಶಂಕರರ ಇದೇ ಮುಂತಾದ ದೃಢಯುಕ್ತಿಯನ್ನು ಭಾರತೀದೇವಿಯು ಅನುಮೋದಿಸಿದಳು ಎಂದಿದೆ. ಗೃಹಕಾರ್ಯಗಳಲ್ಲಿ ನಿರತಳಾಗಿರುತ್ತಿದ್ದ ಉಭಯಭಾರತಿಗೆ ಆಚಾರ್ಯರ ಯುಕ್ತಿಗಳು ಹೇಗೆ ತಿಳಿದವು ? –ಎಂಬುದೊಂದು ಪ್ರಶ್ನೆ ಇಲ್ಲಿ ಎದ್ದುಕೊಳ್ಳುತ್ತದೆ.

ಇಲ್ಲಿ 'ಇತ್ಯಾದ್ಯಾ' ಎಂಬಲ್ಲಿರುವ ಆದ್ಯಪದಕ್ಕೆ ಇನ್ನೂ ಕೆಲವನ್ನು ಸೇರಿಸಿಕೊಳ್ಳಬೇಕೆಂದು ಡಿಂಡಿಮಕಾರನು ಕೆಲವನ್ನು ಶ್ಲೋಕರೂಪದಲ್ಲಿ ಉದಾಹರಿಸಿರುತ್ತಾನೆ. ಹೇಗೆಂದರೆ -

**ಮಂಡನ :** 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ' ಎಂಬ ತೈತ್ತಿರೀಯಶ್ರುತಿಯು ಮುಕ್ತಜೀವನಿಗೂ ಈಶ್ವರನಿಗೂ ಭೇದವನ್ನು ಹೇಳುತ್ತದೆ.

**ಶಂಕರ :** ಹಾಗಲ್ಲ, ಏಕೆಂದರೆ ಅಜ್ಞಾನನಿವೃತ್ತಿಯಾಗಲು ಅನಂತ ಚಿದಾನಂದಭಾವವನ್ನು ಪಡೆದವನಾಗಿ ಆ ಸ್ವರೂಪದಲ್ಲಿರುವ ಸರ್ವಕಾಮಗಳನ್ನೂ ಪಡೆಯುತ್ತಾನೆ ಎಂದೇ ಆ ಶ್ರುತಿ ಹೇಳುತ್ತದೆ.

**ಮಂಡನ :** 'ಆತ್ಮಾ ವಾ ಅರೇ ದ್ರಷ್ಟವ್ಯಃ' ಪರಮಾತ್ಮನನ್ನು ನೋಡಬೇಕು ಎಂದು ಪರಮಾತ್ಮನಿಗೆ ಕರ್ಮತ್ವವನ್ನೂ ಜೀವನಿಗೆ ಕರ್ತೃತ್ವವನ್ನೂ ಶ್ರುತಿ ಹೇಳುತ್ತದೆಯಲ್ಲವೆ ? ಇಲ್ಲದಿದ್ದರೆ ಶ್ರುತಿಯು ಅಪ್ರಮಾಣವಾಗುವದಲ್ಲ !

**ಶಂಕರ :** ಇದು ತಾತ್ತ್ವಿಕಭೇದವನ್ನು ಹೇಳುವದಿಲ್ಲ. ಏಕೆಂದರೆ ಹಾಗೆಂದರೆ ಅದ್ವೈತಶ್ರುತಿಗೆ ವಿರೋಧವಾಗುವದು. ಆದ್ದರಿಂದ ಇದು ಬ್ರಹ್ಮಪರವಾಗಿಯೇ ಪ್ರಮಾಣವಾಗಿದೆ.

**ಮಂಡನ :** ಅಭೇದಶ್ರುತಿಯೇ ಕಲ್ಪಿತವಾದ ಅಭೇದವನ್ನು ಹೇಳುತ್ತದೆ ಎಂದಾಗಲಿ !

**ಶಂಕರ :** ಭೇದವು ವ್ಯವಹಾರಸಿದ್ಧವಾಗಿ ಕೇವಲಪ್ರಾತೀತಿಕವಾಗಿದೆ. ಅಭೇದವು ಹಾಗೆ ಸಿದ್ಧವಾಗಿಲ್ಲವಾದ್ದರಿಂದ ಹಾಗಲ್ಲ.

**ಮಂಡನ :** ಶ್ರುತ್ಯರ್ಥಾಪತ್ತಿಯು ಭೇದಕ್ಕೆ ಪ್ರಮಾಣವೆಂದಾಗಲಿ !

**ಶಂಕರ :** ಉಪಪತ್ತಿಯಿಲ್ಲದೆ ಆ ಅರ್ಥಾಪತ್ತಿಯು ಪ್ರಮಾಣವಾಗಲಾರದು. ಆದ್ದರಿಂದ ಅಭೇದವನ್ನು ಹೇಳುವ ಶ್ರುತಿಯೇ ಪ್ರಬಲ.

**ಮಂಡನ :** ಜೀವನಿಗೂ ಈಶ್ವರನಿಗೂ ಅಭೇದವಿದ್ದರೆ ಉಪಲಬ್ಧವಾಗಬೇಕಾಗಿತ್ತು. ಆದರೆ ಹಾಗೆ ಕಾಣಬರುವದಿಲ್ಲವಾದ್ದರಿಂದ ಅನುಪಲಬ್ಧಿ ಪ್ರಮಾಣದಿಂದ ಅಭೇದವು ಇಲ್ಲವೆಂದೇ ಆಯಿತು.

**ಶಂಕರ :** ಹೇಗೆ ಕತ್ತಲೆಯಿಂದ ಆವೃತವಾಗಿರುವ ಘಟವು ಕಾಣಬರುವದಿಲ್ಲವೋ ಹಾಗೆಯೇ ಅವಿದ್ಯೆಯಿಂದ ಆವೃತವಾಗಿರುವದರಿಂದ ಅಭೇದವು ಕಾಣಿಸುವದಿಲ್ಲ. ಆ ಭೇದವು ಅಂತ್ಯಪ್ರಮಾಣಗಮ್ಯವಲ್ಲ.

[ಡಿಂಡಿಮಕಾರನು 'ಇತ್ಯಾದಿ ದೃಢಯುಕ್ತಿಜಾತಂ ಗ್ರಾಹ್ಯಮ್' ಎನ್ನುವದರಿಂದ ಮಾಧವಿಕವಿ ಹೇಳಿರುವ ಪ್ರಾಚೀನಶಂಕರವಿಜಯದಲ್ಲಿ ಇನ್ನೂ ಇಂಥ ಯುಕ್ತಿಗಳು ಕೆಲವು ಇದ್ದವೆಂದು ಹೇಳಬೇಕಾಗಿದೆ. ಆನಂತಾನಂದಗಿರೀಯದಲ್ಲಾಗಲಿ ವ್ಯಾಸಾಚಲೀಯದಲ್ಲಾಗಲಿ ಈ ಡಿಂಡಿಮಗತಶ್ಲೋಕಗಳು ಕಾಣಬರುವದಿಲ್ಲವಾದ್ದರಿಂದ 'ಪ್ರಾಚೀನಶಂಕರವಿಜಯ'ವೆಂಬುದು ಬೇರೆಯ ಗ್ರಂಥವೇ ಆಗಿರಬೇಕೆಂದು ಇದರಿಂದ ಸಿದ್ಧವಾಗುತ್ತದೆ. ಇದಂತಿರಲಿ. ಆ ಪ್ರಾಚೀನಶಂಕರವಿಜಯದಲ್ಲಿಯೂ ಜೀವೇಶ್ವರಭೇದವನ್ನು ಕುರಿತ ವಿವಾದವೇ ಮಂಡನನಿಗೂ ಆಚಾರ್ಯರಿಗೂ ಆಯಿತೆಂದು ಸಿದ್ಧವಾಗುವದರಿಂದ ಈ'ಕಲ್ಪನೆಯು ಮಾಧವನದಲ್ಲವೆಂದಾಯಿತು. ಇನ್ನೊಂದು ಮಾತು. ಇಲ್ಲಿರುವ ಯಾವ ಯುಕ್ತಿಯೂ ಭಾಷ್ಯದಲ್ಲಿ ಕಾಣಿಸುವದಿಲ್ಲ. ಬ್ರಹ್ಮವು ಅವಿದ್ಯೆಯಿಂದ ಆವೃತವಾಗಿರುವದರಿಂದ ಜೀವೇಶ್ವರಾಭೇದವು ಕಾಣಿಸುತ್ತಿಲ್ಲ ಎಂಬ ವಾದವು ಪ್ರತಿಜ್ಞೆಗೆ ಅನುಗುಣವಾಗಿದ್ದರೂ ಆಚಾರ್ಯರ ಭಾಷ್ಯದಲ್ಲಿ ಎಲ್ಲಿಯೂ ಇಲ್ಲವೆಂಬುದನ್ನು ಇಲ್ಲಿ ನೆನಪಿನಲ್ಲಿಡಬೇಕು. ಅವಿದ್ಯಾರಹಿತನಾದ ಆತ್ಮನಿಗೆ ಅವಿದ್ಯಾನಿವೃತ್ತಿ, ಅದರ ಅನಿವೃತ್ತಿ ಇವುಗಳಿಂದಲಾಗಲಿ, ಅವಿದ್ಯಾಶ್ರಯತ್ವ, ಅದರ ಅನಾಶ್ರಯತ್ವ– ಇವುಗಳಿಂದಲಾಗಲಿ, ಯಾವ ವಿಶೇಷವೂ ಆಗುವ ಹಾಗಿಲ್ಲ. 'ನಾನು ಏನೂ ಅರಿಯೆನು, ಮುಗ್ಧನಾಗಿದೇನೆ' ಎಂಬ ಅನುಭವದಿಂದಕೂಡ ಆತನು ಅವಿದ್ಯಾವಂತನೆಂದಾಗುವದಿಲ್ಲ. ಈ ಅನುಭವದಿಂದ ಆತ್ಮನು ಅವಿದ್ಯಾರಹಿತನೆಂದೇ ಸಿದ್ಧವಾಗುತ್ತದೆ– ಎಂದು ಬೃಹದಾರಣ್ಯಕಭಾಷ್ಯದಲ್ಲಿ ಸುಸ್ಪಷ್ಟವಾಗಿ (ಬೃ. ಭಾ. ೪–೪–೬) ಹೇಳಿರುವದಕ್ಕೆ ಇದು ವಿರುದ್ಧವೂ ಆಗಿರುತ್ತದೆ.]

## ಮಂಡನನೊಡನೆ ವಾದ : ಚಿದ್ವಿಲಾಸೀಯದಂತೆ :

೧೦೬. ಈಗ ಚಿದ್ವಿಲಾಸೀಯದಂತೆ ಆಚಾರ್ಯರಿಗೂ ಮಂಡನನಿಗೂ ಆದ ವಾದದ ವಿವರವು ಹೇಗಿದೆ ಎಂಬುದನ್ನು ವಿಮರ್ಶಿಸೋಣ.

**ಮಂಡನ :** 'ಅಶ್ವಾಲಮ್ಭಂ ಗವಾಲಮ್ಭಂ ಸಂನ್ಯಾಸಂ ಪಲಪೈತೃಕಮ್ |

ದೇವರೇಣ ಸುತೋತ್ಪತ್ತಿಂ ಕಲೌ ಪಞ್ಚ ವಿವರ್ಜಯೇತ್ ||' ಎಂಬ ಸ್ಮೃತಿಯಿದೆ. 'ಈ ನಾಲ್ಕು ಆಶ್ರಮದವರೂ ಯಜ್ಞಾಧ್ಯಯನವಿಲ್ಲದಿದ್ದರೆ, ಎಂಥ ಉಗ್ರ ತಪಸ್ವಿಗಳಾಗಿದ್ದರೂ ಬ್ರಾಹ್ಮಣ್ಯಚ್ಯುತರಾಗುವರು. ಯಜ್ಞೋಪವೀತವು ಸರ್ವ ದ್ವಿಜರಿಗೂ ಮುಕ್ತಿಸಾಧನವು ; ಯಾರು ಅದನ್ನು ಭ್ರಾಂತಿಯಿಂದ ಬಿಟ್ಟುಬಿಡುವರೋ ಅವರು ನರಕಕ್ಕೆ ಹೋಗುವರು. ಶಿಖಾಯಜ್ಞೋಪವೀತಗಳನ್ನು ಬಿಟ್ಟರೆ ಬ್ರಾಹ್ಮಣನಲ್ಲ' 'ಸಂಧ್ಯೆಯನ್ನು ಉಪಾಸನೆಮಾಡದವರು ಬ್ರಾಹ್ಮಣರು ಹೇಗೆ?' 'ವೇದೋಕ್ತವಾದ ಕರ್ಮವನ್ನು ಆಚರಿಸುವವನು ನರಕವನ್ನು ಕಾಣುವದೇ ಇಲ್ಲ.' 'ಎಲೈ ಯತಿಯೆ, ಕರ್ಮದಿಂದಲೇ ಸ್ವರ್ಗ, ರಾಜ್ಯ, ಪುತ್ರ-ಮುಂತಾದವು ಲಭಿಸುವವು ; ಆದ್ದರಿಂದ ವೇದಜ್ಞರಾದ ಬ್ರಾಹ್ಮಣೋತ್ತಮರು ಕರ್ಮವನ್ನು ಮಾಡುತ್ತಾರೆ.' 'ಯಾವನು ಕರ್ಮಕಾಲವನ್ನು ತಿಳಿದುಕೊಂಡಿರುವನೋ, ಕಾಲದಲ್ಲಿ ಕರ್ಮವನ್ನು ಮಾಡುವನೋ ಅವನೇ ಲೋಕದಲ್ಲಿ ಜ್ಞಾನಿಯು- ಎಂದು ವಿದ್ವಾಂಸರು ಹೇಳುತ್ತಾರೆ.' 'ಕಲಿಯಲ್ಲಿ ಸತ್ಕರ್ಮಾಚರಣೆಯಲ್ಲಿ ನಿಷ್ಠನಾದವನೇ ಜ್ಞಾನಿಯು, ಭಕ್ತನು- ಎನ್ನುವರು.' ಇವೇ ಮುಂತಾದ ವಚನಗಳಲ್ಲಿ[1] ಕಲಿಯುಗದಲ್ಲಿ ಸಂನ್ಯಾಸವು ನಿಷಿದ್ಧವಾಗಿರುತ್ತದೆ. ಅದನ್ನೇ ನೀನು ಸ್ವೀಕರಿಸಿರುತ್ತೀಯೆ, ಅದರಲ್ಲಿಯೂ ಬ್ರಹ್ಮಚಾರಿಯಾಗಿಯೇ ಸ್ವೀಕರಿಸಿರುವೆಯಲ್ಲ! (ಚಿ.ಶಂ. ೧೪-೭೨ರಿಂದ ೧೫).

**ಶಂಕರ :** ಬಾಲಕನೆ, ಮತ್ತೊಮ್ಮೆ ಪ್ರಮಾಣವಾಕ್ಯವನ್ನು ಹೇಳುವೆನು, ಕೇಳು. 'ಯಾವದ್ವರ್ಣವಿಭಾಗೋಽಸ್ತಿ ಯಾವದ್ವೇದಃ ಪ್ರವರ್ತತೇ । ಸಂನ್ಯಾಸಶ್ಚಾಗ್ನಿಹೋತ್ರಂ ಚ ತಾವದೇವ ಕಲೌ ಯುಗೇ ||' 'ಕಲಿಯುಗದಲ್ಲಿ ಎಲ್ಲಿಯವರೆಗೆ ವರ್ಣವಿಭಾಗವಿರುವದೋ, ಎಲ್ಲಿಯವರೆಗೇ ವೇದವು ಪಾಠಿತವಾಗುತ್ತದೆಯೋ ಸಂನ್ಯಾಸವೂ ಅಗ್ನಿಹೋತ್ರವೂ ಅಲ್ಲಿಯವರೆಗೇ' 'ಮೊದಲನೆಯ, ಅಥವಾ ಎರಡನೆಯ ಅಥವಾ ವಾನಪ್ರಸ್ಥಾಶ್ರಮದಲ್ಲಿ ಯಾವಾಗ ಬುದ್ಧಿಯು ವಿರಕ್ತವಾಗುವದೋ, ಆಗಲೆ ಅವನು ಉತ್ತಮಾಶ್ರಮವನ್ನು ಸ್ವೀಕರಿಸಬೇಕು.' 'ಸಂತಾನದಿಂದುಂಟಾದ ದೋಷಗಳು ಯಾವವು ಇರುವವೋ, ಕರ್ಮದಿಂದುಂಟಾಗುವ ದೋಷಗಳು ಯಾವವಿರುವವೋ ಅವುಗಳನ್ನೆಲ್ಲ ಹೊಟ್ಟಿನ ಬೆಂಕಿಯು ಚಿನ್ನವನ್ನು ಸುಡುವಂತೆ ಸಂನ್ಯಾಸವು ಸುಟ್ಟುಹಾಕುವದು.' 'ವಿರಕ್ತನು, ಸಂಸಾರಸಾಗರದಿಂದ ಮೋಕ್ಷವನ್ನು ಇಚ್ಛಿಸುವಾತನು, ಪ್ರಥಮಾಶ್ರಮದಿಂದಲಾದರೂ ಸಂಗಗಳನು ತ್ಯಜಿಸಿ ಪರಿವ್ರಾಜಕನಾಗಬೇಕು.' 'ಬ್ರಾಹ್ಮಣನಿಗೆ ನಾಲ್ಕು ಆಶ್ರಮಗಳು ಶ್ರುತಿಚೋದಿತವಾಗಿರುತ್ತವೆಯೆನ್ನುವರು. ಕ್ಷತ್ರಿಯನಿಗೆ ಮೂರು, ವೈಶ್ಯನಿಗೆ ಎರಡು,

---

1. ಇಲ್ಲಿ ಕೊಟ್ಟಿರುವ ವಚನಗಳು ಯಾವ ಸ್ಮೃತಿಯಲ್ಲಿರುವವೆಂಬುದು ನಮಗೆ ನಿಶ್ಚಿತವಾಗಿ ಗೊತ್ತಾಗಿಲ್ಲ ; ಇವನ್ನು ವಿಶ್ವೇಶ್ವರಸ್ಮೃತಿಯೇ ಮುಂತಾದ ನಿಬಂಧಗಳಲ್ಲಿ ಉದಾಹರಿಸಿದೆ. ಕೆಲವು ಬಿಡಿ ಉಪನಿಷತ್ತುಗಳಲ್ಲಿಯೂ ಇವು ಕಾಣುತ್ತವೆ.

ಶೂದ್ರನಿಗೆ ಒಂದು. ಜುಟ್ಟಿನಸಹಿತವಾಗಿ ವಪನವಮಾಡಿಸಿಕೊಂಡು ಹೊರಗೆ ಧರಿಸಿರುವ ಸೂತ್ರವನ್ನು ಬಿಟ್ಟುಬಿಡಬೇಕು.' 'ಬ್ರಹ್ಮವೇ ಸೂತ್ರವೆನಿಸುತ್ತದೆ; ಅಂಥ ಸೂತ್ರವನ್ನು ವಿವೇಕಿಯಾದವನು ಧರಿಸಬೇಕು. ಯಾವದು ಎಲ್ಲವನ್ನೂ ಸೂಚಿಸುತ್ತದೆಯೋ ಅದೇ ಪರಮಪದವೆನಿಸುತ್ತದೆ; ಅಂಥ ಸೂತ್ರವನ್ನರಿತವನೇ ಸೂತ್ರಜ್ಞನೆನಿಸುವನು. ''ಜೀವನ್ಮುಕ್ತಿಪಥದಲ್ಲಿರುವ ಯೋಗಿಯು ಬಹಿಃಸೂತ್ರವನ್ನು ಬಿಡಬೇಕು. ಈ ವಿಷಯವನ್ನರಿತುಕೊಂಡವರು ಜ್ಞಾನೋಪವೀತಿಗಳೆನಿಸುವರು.' ....ಹೀಗೆಶಂಕರಾಚಾರ್ಯರು ಶ್ರುತಿಸ್ಮೃತಿಪುರಾಣಾದಿವಚನಗಳನ್ನು ಹೇಳುತ್ತಿರಲು ಮಂಡನಮಿಶ್ರನು ಆಶ್ಚರ್ಯಾನ್ವಿತನಾಗಿ ಪ್ರತ್ಯುತ್ತರವನ್ನು ಹೇಳಲಾರದೆ ಇದ್ದನು. (ಚಿ. ಶಂ. ೧೮-೧೬ರಿಂದ ೩೫)

ಶಂಕರರು : 'ಎಲೆ ಮೂಢ, ಮೊದಲು ಏನೆಂದು ಸಾರಿಹೇಳಿದೆ ? ಈಗ ಏನು ನೋಡುತ್ತಿದ್ದಿ ? ಅಚೇತನವಾದ ಕರ್ಮವು ಹೇಗೆ ಫಲವನ್ನು ಕೊಟ್ಟೀತು ? ಆದರೆ ಆ ಫಲವನ್ನು ಕೊಡವದಕ್ಕೆ ಕಾರಣವಾದ ಪರಬ್ರಹ್ಮವು ಶ್ರುತಿಸಮ್ಮತವಾಗಿರುತ್ತದೆ. ವೈದಿಕಮಾರ್ಗವನ್ನು ನಿಂದಿಸುವವನು ಪಾಪಿಷ್ಠನು, ಸಂನ್ಯಾಸಾಶ್ರಮಿಗಳನ್ನು ದೂಷಿಸುವವನು ಅವನಿಗಿಂತಲೂ ಪಾಪಿಷ್ಠನು' ಎಂದರು (ಚಿ. ಶಂ. ೧೮-೩೬ರಿಂದ ೩೮).

ಈ ಸಂಭಾಷಣೆಯಲ್ಲಿ ಮುಖ್ಯವಾಗಿ ಸಂನ್ಯಾಸಾಶ್ರಮವಿಷಯದ ಚರ್ಚೆಗೇ ಹೆಚ್ಚಿನ ಸ್ಥಾನವಿದೆ. ಆದ್ದರಿಂದಲೇ ಕರ್ಮಬ್ರಹ್ಮಜ್ಞಾನಗಳ ವಿಷಯವಾಗಿ ಪ್ರಶ್ನೋತ್ತರಗಳ ವಿಷಯಕ್ಕೆ ಇಲ್ಲಿ ಆದರವು ತೋರುತ್ತಿಲ್ಲ. ಇಲ್ಲಿ 'ಸಂನ್ಯಾಸವು ಕಲಿವರ್ಜ್ಯವು, ಬ್ರಹ್ಮಚಾರಿಗಳಂತೂ ಅದನ್ನು ಅನುಷ್ಠಾನಮಾಡತಕ್ಕದ್ದೇ ಅಲ್ಲ' -ಎಂದು ಮಂಡನನಿಗೆ ಅಭಿನಿವೇಶಪೂರ್ವಕವಾದ ಅಭಿಪ್ರಾಯವಿರುವಂತೆ ಕಾಣುತ್ತದೆ. ಮಾಧವೀಯದಲ್ಲಿ 'ಕುತೋ ಮುಣ್ಡೀ' ಎಂದು ಪ್ರಾರಂಭಿಸಿ ವ್ಯಾಸರು ಮಂಡನನನ್ನು ಸಮಾಧಾನಗೊಳಿಸುವವರೆಗಿನ ಸಿಟ್ಟಿನ ಸಂಭಾಷಣೆಯಲ್ಲಿಯೇ ಈ ವಿಚಾರವನ್ನು ಮುಗಿಸಿದಂತಾಯಿತೆಂದು ಭಾವಿಸಿ ಅದನ್ನು ವಾದಕ್ರಮದಲ್ಲಿ ಕೈಬಿಟ್ಟಿರಬಹುದು. ಆಚಾರ್ಯರು ಜ್ಞಾನಕಾಂಡವಾದ ಉಪನಿಷತ್ತುಗಳನ್ನೇ ಮುಖ್ಯಪ್ರಮಾಣವನ್ನಾಗಿ ಹಿಡಿದಿದ್ದವರು ; ಮಂಡನನು ಮಂತ್ರಬ್ರಾಹ್ಮಣಗಳನ್ನೇ ಮುಖ್ಯಪ್ರಮಾಣವಾಗಿ ಹಿಡಿದವನು. ಜ್ಞಾನಕಾಂಡದಲ್ಲಿ ಸಂನ್ಯಾಸವನ್ನು ಜ್ಞಾನಕ್ಕೆ ಅಂಗವಾಗಿ ವಿಧಿಸಿದೆ ; ಕರ್ಮಕಾಂಡದಲ್ಲಿ ಕರ್ಮವನ್ನು ವಿಧಿಸಿ ಅದರ ಪ್ರಶಂಸೆ, ಅದಕ್ಕೆ ಆಗುವ ಫಲ- ಇವುಗಳನ್ನೇ ಹೇಳಿದೆ. ಆದ್ದರಿಂದ ಆ ಇಬ್ಬರು ವಿದ್ವನ್ಮಣಿಗಳಿಗೆ ಕರ್ಮಾನುಷ್ಠಾನ, ಕರ್ಮತ್ಯಾಗಪೂರ್ವಕಜ್ಞಾನಸಂಪಾದನ- ಇವುಗಳ ವಿಷಯವಾಗಿಯೇ ಮುಖ್ಯವಾಗಿ ವಾದವಾಗಿರಬೇಕೆಂದು ಕಲ್ಪಿಸುವದು ಯುಕ್ತತರವಾಗಿರುತ್ತದೆ.

## ಮಂಡನನ ವಾದದ ಪ್ರಾಮುಖ್ಯ

೧೦೭ ಇದೇ ವಾದಕ್ಕೆ ಮುಖ್ಯವಾದ ವಿಷಯವಾಗಿರಬೇಕೆಂಬ ಕಲ್ಪನೆಗೆ ಇನ್ನೊಂದು ಗಮಕವಿದೆ. ಗೌತಮಬುದ್ಧನು ತನ್ನಕಾಲದಲ್ಲಿ ಕಂಡುಬಂದ ಕರ್ಮಾಚರಣೆಯ ಅತಿರೇಕ, ಕಾಮ್ಯತಪಸ್ಸು, ಯಜ್ಞಾದಿಗಳ ಹೆಸರಿನಲ್ಲಿ ಮಿತಿಮೀರಿ ಹೆಚ್ಚಿದ್ದ ಹಿಂಸೆ –ಇವುಗಳನ್ನು ಬಲವಾಗಿ ಖಂಡಿಸಿದ್ದನು. ಅನೇಕರಾಜರುಗಳು ಅವನ ಉಪದೇಶಗಳಿಗೆ ಪ್ರೋತ್ಸಾಹವನ್ನು ಕೊಟ್ಟು ತಾವೂ ಬೌದ್ಧರಾಗಿದ್ದರು. ಅದರ ಫಲವಾಗಿ ಬೌದ್ಧಭಿಕ್ಷುಗಳ ಸಂಖ್ಯೆ ಹೆಚ್ಚಿತ್ತು; ಜನರಿಗೆ ಕರ್ಮಾದಿಗಳಲ್ಲಿ ಶ್ರದ್ಧೆ ಹಾರಿಹೋಗಿತ್ತು. ಇಂಥ ಸಂಧಿಕಾಲದಲ್ಲಿ ಕುಮಾರಿಲಭಟ್ಟರು ತಮ್ಮ ವಿದ್ವತ್ತಿನಿಂದ ಜನರನ್ನು ಮತ್ತೆ ವೈದಿಕಮಾರ್ಗದಕಡೆಗೆ ಹಿಂತಿರುಗಿಸುವದಕ್ಕೆ ಪ್ರಯತ್ನಮಾಡಿ ರಾಜರುಗಳ ಪ್ರೋತ್ಸಾಹವನ್ನು ಪಡೆದಿದ್ದರು. ಬೌದ್ಧರು ಮುಖ್ಯವಾಗಿ ವೇದದ ಅಪೌರುಷೇಯತ್ವ, ವರ್ಣಾಶ್ರಮವಿಭಾಗ, ಯಜ್ಞಯಾಗಾದಿಗಳ ಆಚರಣೆ– ಇವುಗಳನ್ನೇ ವಿರೋಧಿಸುತ್ತಿದ್ದದ್ದರಿಂದ ಕುಮಾರಿಲರು ವೈದಿಕಧರ್ಮದ ಆ ವಿಶೇಷಗಳ ಪುನರುದ್ಧಾರಕ್ಕೇ ಮನಸ್ಸುಹಾಕಿದ್ದು ಸ್ವಾಭಾವಿಕವಾಗಿತ್ತು. ಅವರ ವೀರಪ್ರಯತ್ನದ ಫಲವಾಗಿ ಬೌದ್ಧರ ಹಾವಳಿಯು ಸ್ವಲ್ಪಮಟ್ಟಿಗೆ ಕಡಿಮೆಯಾಯಿತು. ಜಾತಿಕುಲಭೇದವಿಲ್ಲದೆ ಎಲ್ಲರನ್ನೂ ಬೌದ್ಧರು ತಮ್ಮ ಮತಕ್ಕೆ ಸೇರಿಸಿಕೊಂಡದ್ದರಿಂದ ಆ ಮತದ ಪಾರಿಶುದ್ಧತೆಗೆ ಕುಂದಾಯಿತು ತಂತ್ರಗಳು ಮೊಟ್ಟಮೊದಲು ಅವರಲ್ಲಿಯೇ ಹುಟ್ಟಿರಬಹುದು. ಅವರಲ್ಲಿ ಅನೇಕ ನಿಂದನೀಯಾಚಾರಗಳೂ ತಲೆದೋರಿದವು. ವೈದಿಕಧರ್ಮದ ಅಭಿಮಾನಿಗಳು ಬೌದ್ಧಮತದ ಉಪದೇಶಗಳ ಉತ್ತಮಭಾಗವು ತಮಗೂ ಸಮ್ಮತವೇ ಆಗಿದ್ದದ್ದರಿಂದ ಅವುಗಳ ಗುಣಾಂಶವನ್ನು ಸ್ಮೃತಿಪುರಾಣೇತಿಹಾಸಗಳಲ್ಲಿ ಈ ಕಾಲಕ್ಕೇ ಸೇರಿಸಿಕೊಂಡಿರಬಹುದು. ಬುದ್ಧನು ದುಷ್ಟರನ್ನು ವಂಚಿಸುವದಕ್ಕೆ ಅವತರಿಸಿದ ವಿಷ್ಣುವೇ ಎಂಬ ಕಥೆಯು ಈ ಕಾಲದಲ್ಲಿಯೇ ಹುಟ್ಟಿಕೊಂಡಿರಬಹುದೆಂದು ಕಾಣುತ್ತದೆ. ಬೌದ್ಧರೂ ಭಾರತಾದಿಗ್ರಂಥಗಳಿಂದ ಕೆಲವು ಉತ್ತಮೋಪದೇಶಗಳನ್ನು ತಮ್ಮ ಗ್ರಂಥಗಳಲ್ಲಿ ಸೇರಿಸಿಕೊಂಡಿರಬಹುದು. ಬೌದ್ಧರು ಹೀಗೆ ಗ್ರಂಥಚೌರ್ಯವನ್ನು ಮಾಡಿದ್ದಾರೆಂಬ ಆಪಾದನೆಯೂ ನಮ್ಮ ಗ್ರಂಥಗಳಲ್ಲಿ ಅಲ್ಲಲ್ಲಿ ಕಂಡುಬರುತ್ತದೆ. ರಾಜರ ಪ್ರೋತ್ಸಾಹವೂ ಕಡಿಮೆಯಾದಂತೆ ಬೌದ್ಧಮತವೂ ಈ ಹೇಳಿದ ಅನೇಕಕಾರಣಗಳಿಂದ ನಮ್ಮ ದೇಶದಲ್ಲಿ ಕ್ಷೀಣವಾಗುವದಕ್ಕೆ ಮೊದಲಾಯಿತು. ಈ ಸಮಯಕ್ಕೆ ಸರಿಯಾಗಿ ಜ್ಞಾನಕಾಂಡವನ್ನು ಎತ್ತಿಹಿಡಿಯುವ ವಿದ್ವಾಂಸರನೇಕರು ತಲೆಯೆತ್ತಿಕೊಂಡರು. ವೈದಿಕಮತದಲ್ಲಿಯೂ ವರ್ಣಾಶ್ರಮಾಚಾರಪದ್ಧತಿಗನುಗುಣವಾದ ಸಂನ್ಯಾಸಾಶ್ರಮವಿದ್ದದ್ದರಿಂದ ಅನೇಕರು ಬೌದ್ಧರನ್ನನುಕರಿಸಿ ತಾವು ಅರ್ಹರಲ್ಲದಿದ್ದರೂ ಸಂನ್ಯಾಸವನ್ನು ಸ್ವೀಕರಿಸಿರಬಹುದು. ಬ್ರಾಹ್ಮಣ

ವಿದ್ವಾಂಸರು ಬೌದ್ಧರಂತೆಯೇ ತಮ್ಮ ತಮ್ಮ ವಿದ್ಯಾಲಯಗಳಲ್ಲಿ ಮತಪ್ರಚಾರಕರಾದ ತರುಣರನ್ನು ಸಿದ್ಧಗೊಳಿಸಿರಬೇಕು. ಹೀಗೆ ಕರ್ಮಪರರಾದ ಮತ್ತು ಜ್ಞಾನಕಾಂಡಪ್ರಿಯರಾದ ವೈದಿಕರಿಗೂ ಬೌದ್ಧರಿಗೂ ಹಲವು ವಾಗ್ಯುದ್ಧಗಳು ಜರುಗುವದಕ್ಕೆ ಅವಕಾಶತಾಯಿತು. ಇಂಥ ವಿಷಮಸಮಯದಲ್ಲಿ ಆಚಾರ್ಯರು ಅವತರಿಸಿ ಬೌದ್ಧರಂತೆಯೇ ಸಂನ್ಯಾಸವನ್ನು ವಹಿಸಿ ಪರಿಶುದ್ಧವಾದ ಶೀಲಸಂಯಮಗಳ ಉದಾಹರಣೆಯಿಂದಲೂ ಕರ್ಮಕಾಂಡಜ್ಞಾನಕಾಂಡಗಳ ಏಕವಾಕ್ಯತೆಯನ್ನು ಪ್ರತಿಪಾದಿಸುವದರಿಂದಲೂ ಆಸ್ತಿಕಮತವನ್ನು ಉದ್ಧಾರಮಾಡುವ ಮಹಾಕಾರ್ಯವನ್ನು ಕೈಗೊಂಡರು. ಕೇವಲ ಕರ್ಮಪರರಾದವರು 'ಬೌದ್ಧರ ಜೊತೆಗೆ ವೈದಿಕಮತಕ್ಕೆ ಅಡ್ಡಲಾಗಿ ವಾದಿಸುವ ನಮ್ಮವರೇ ಆದ ಭಿಕ್ಷುಗಳೂ ಹುಟ್ಟಿಕೊಂಡರಲ್ಲ!' –ಎಂದು ಅಂಜಿ ವೇದಾಂತವಾದವನ್ನು ಎದುರಿಸಿರುವ ವೀರಕರ್ಮಮೀಮಾಂಸೆವಾದವನ್ನು ಮುಂದಕ್ಕೆ ತಂದಿರಬೇಕು. ವೈದಿಕಮತವೇ ಮುಳುಗಿಹೋಗುವದೆಂಬ ಅಂಜಿಕೆಯಿಂದ ಕರ್ಮದ್ವೇಷಿಗೆ ಬೆಂಬಲವಾಗಬಹುದೆಂದು ತಾವು ನಂಬಿದ್ದ ಹಲವು ಪೂರ್ವಾಚಾರಗಳಿಗೆ ತಡೆಹಾಕುವ ಹೊಸ ಸ್ಮೃತಿಗಳನ್ನು ಕರ್ಮಪಕ್ಷಪಾತಿಗಳು ನಿರ್ದೇಶಿಸಬೇಕಾದದ್ದು ಈಗ ಅವಶ್ಯವಾಯಿತು. ಚಿದ್ವಿಲಾಸರು ಮಂಡನನ ಮೂಲಕ ಉದಾಹರಿಸಿರುವಂಥ ಕಲಿವರ್ಜ್ಯಪ್ರಕರಣದ ವಾಕ್ಯಗಳು ಹಲವು ಆಗಲೇ ಧರ್ಮಶಾಸ್ತ್ರಗಳೊಳಗೆ ಸಮಾವೇಶವಾಗಿರಬಹುದೆಂದು ನಮಗೆ ತೋರುತ್ತದೆ. ಈ ಹೊಸ ಪ್ರಯತ್ನದ ಫಲವಾಗಿ ಕರ್ಮಮಾರ್ಗದ ಪೋಷಕರಾದ ವಿದ್ವಾಂಸರಿಗೂ ಜ್ಞಾನಕಾಂಡದ ವಾದಿಗಳಿಗೂ ಹಲವು ವಾದಗಳು ಜರುಗಿರಬೇಕು. ಅಂಥ ವಾದಗಳಲ್ಲಿ ಅತ್ಯಂತಪ್ರಾಚೀನವಾದ ಐತಿಹಾಸಿಕಮೂಲ್ಯವುಳ್ಳದ್ದು ಈ ಶಂಕರಮಂಡನವಾದ ಎಂದು ಹೇಳುವದಕ್ಕೆ ಅಡ್ಡಿಯಿಲ್ಲ. ಆಚಾರ್ಯರು ವಾದಮಾಡಿದ್ದು ಮಂಡನನೊಡನೆಯೋ, ಮಂಡನನಿಗಿಂತ ಅನ್ಯನಾದ ವಿಶ್ವರೂಪನೊಡನೆಯೋ ಅಥವಾ ಮತ್ತೆ ಯಾವನೋ ಒಬ್ಬ ಆಗಿನ ಪ್ರಸಿದ್ಧನಾದ ಗೃಹಸ್ಥವಿದ್ವಾಂಸನೊಡನೆಯೋ –ಎಂಬುದು ಇಲ್ಲಿ ಮುಖ್ಯವಲ್ಲ, ಶಂಕರವಿಜಯಕಾರರೆಲ್ಲ ಆಚಾರ್ಯರಿಗಿಂತ ಅನೇಕ ಶತಮಾನಗಳ ಈಚೆಗೆ ಬಂದವರಾದ್ದರಿಂದ ಅವರು ತಾವು ಯಾವದೋ ಗ್ರಂಥಗಳಲ್ಲಿ ಓದಿದ್ದ ಅಥವಾ ಜನಶ್ರುತಿಯಿಂದ ಕೇಳಿದ್ದ ವಿಷಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು ತಮ್ಮ ತಮ್ಮ ಶಾಸ್ತ್ರಜ್ಞಾನದ ಮಟ್ಟದಿಂದ ಊಹಿಸಿ ಈ ವಾದವನ್ನು ಬರೆದಿರಬಹುದಾದ್ದರಿಂದ ಹೀಗೆಯೇ ವಾದವು ನಡೆಯಿತೆ, ಇಲ್ಲವೆ ?– ಎಂಬುದೂ ಮುಖ್ಯವಲ್ಲ. ಕೇವಲ ಕರ್ಮಮೀಮಾಂಸಾದರ್ಶನಕ್ಕೆ ಗೆಲವೊ, ಅಥವಾ ಶ್ರುತಿಸ್ಮೃತಿಪುರಾಣಾದಿಗಳಿಗೆ ಏಕವಾಕ್ಯತೆಯನ್ನು ಮಾಡುವ ವೇದಾಂತಕ್ಕೆ ಗೆಲವೊ ?– ಎಂಬುದೇ ಆಗಿನ ಪ್ರಶ್ನೆಯಾಗಿತ್ತು. ಆ ವಾದವನ್ನು ನೋಡುವದಕ್ಕೆ ಹಲವು ದೇಶಗಳಿಂದ ವಿದ್ವಾಂಸರು ಬಂದು ಅಲ್ಲಿ ನೆರೆದಿರಬಹುದು.

ಅನ್ವರಿಂದಲೇ ಮೋಕ್ಷವನ್ನು ಸಾಧಿಸಿದರು ಅವನನ್ನು ಕೇಳುವುದಕ್ಕೆ ಬ್ರಹ್ಮಾದಿಗಳೂ ವಿಮಾನಸ್ಥರಾಗಿ ಮೇಲುಗಡೆ ಇರುತ್ತಿದ್ದರು (ಮಾ ಶಂ. ೮-೭೯; ಸ್ವಾ. ಶಂ. ೬-೪೯) ಎಂದು ಬರೆದಿರುತ್ತಾರೆ.

## ಸಂನ್ಯಾಸವಿಷಯಕ್ಕೆ ಆಚಾರ್ಯರವರ ಅಭಿಪ್ರಾಯ

೧೧೫. ಸಂನ್ಯಾಸವು ಶಾಸ್ತ್ರಚೋದಿತವೆ ? ಯಾವ ಬಗೆಯ ಸಂನ್ಯಾಸವು ಶಾಸ್ತ್ರಚೋದಿತವಾಗಿದೆ ? -ಎಂಬ ಬಗ್ಗೆ ಈಗಲೂ ಮತಭೇದವಿದೆ. ಶಂಕರಭಗವತ್ಪಾದರವರು ಪರಮಹಂಸಪಾರಿವ್ರಾಜ್ಯವನ್ನು ಶ್ರುತಿಯಲ್ಲಿ ವಿಧಿಸಿದೆ ಎಂಬ ಪಕ್ಷವನ್ನು ಒಪ್ಪುವವರು. ಆ ಕಾಲದಲ್ಲಿ ಈ ಸಂನ್ಯಾಸವು ಶಾಸ್ತ್ರಸಂಮತವಲ್ಲವೆಂದು ಸಾಧಿಸುವವರು ಅನೇಕರು ಇದ್ದಿರಬೇಕೆಂಬುದಕ್ಕೆ ಭಾಷ್ಯಗಳಲ್ಲಿಯೇ ಆಧಾರವಿದೆ. ಆಶ್ರಮಗಳೆಷ್ಟು ?- ಎಂಬ ಪ್ರಶ್ನೆಯನ್ನು ಸೂತ್ರಭಾಷ್ಯದಲ್ಲಿ ವಿಮರ್ಶಿಸಿದೆ. 'ತ್ರಯೋ ಧರ್ಮಸ್ಕನ್ಧಾಃ' (ಛಾಂ. ೨-೨೩-೧) ಎಂಬ ವಾಕ್ಯದಲ್ಲಿ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ- ಎಂಬ ಮೂರು ಆಶ್ರಮದವರಿಗೂ ಪುಣ್ಯಲೋಕಪ್ರಾಪ್ತಿರೂಪಫಲವೆಂದೂ ಬ್ರಹ್ಮಸಂಸ್ಥನಿಗೆ ಅಮೃತತ್ವ(ಮೋಕ್ಷ) ಫಲವೆಂದೂ ಹೇಳಿದೆ. ಇಲ್ಲಿ ನಾಲ್ಕು ಆಶ್ರಮಗಳನ್ನು ಹೇಳಿದೆಯಷ್ಟೆ ? ಇದು ಪರಾಮರ್ಶಮಾತ್ರವು, ವಿಧಿಯಲ್ಲ-ಎಂಬ ಪೂರ್ವಪಕ್ಷವು ಜೈಮಿನಿಗಳದು. ಇದು ಪರಾಮರ್ಶವಾದರೂ ಮಿಕ್ಕ ಆಶ್ರಮಗಳಂತೆ ಇದೂ ಅನುಷ್ಠೇಯವೇ ಎಂದು (ವೇ. ಸೂ. ೩-೪-೧೯) ತಿಳಿಸಿದ್ದರಿಂದಲೂ ತೃಪ್ತರಾಗದೆ ಬಾದರಾಯಣರು ಅಲ್ಲಿ ಸಂನ್ಯಾಸವನ್ನು ವಿಧಿಸಿಯೇ ಇವೆ(ವೇ ಸೂ.೩-೪-೨೦) ಎಂದು ಬರೆದಿರುತ್ತಾರೆ. ಈ ಸಂದರ್ಭದಲ್ಲಿ ಶಂಕರಾಚಾರ್ಯರ ಭಾಷ್ಯದಲ್ಲಿ ಬ್ರಹ್ಮಸಂಸ್ಥನೆಂದರೆ ಭಿಕ್ಷುವೇ ಎಂದು ಸ್ಥಾಪನೆಮಾಡಿರುತ್ತಾರೆ. ಈ ಛಾಂದೋಗ್ಯಶ್ರುತಿಯ ಭಾಷ್ಯದಲ್ಲಿಯೂ ಹೀಗೆಯೇ ವಿಚಾರಮಾಡಿ ಬ್ರಹ್ಮಸಂಸ್ಥನೆಂದರೆ ಪರಮಹಂಸಪರಿವ್ರಾಜಕನೇ ಎಂದು ನಿರ್ಣಯಿಸಿದೆ. ಕರ್ಮಬ್ರಹ್ಮನಿಷ್ಠೆಗಳಿಗೆ ವಿರೋಧವಿದೆ ಎಂಬ ಪಕ್ಷವನ್ನು ಎರಡು ಕಡೆಗಳಲ್ಲಿಯೂ ಸ್ಥಾಪಿಸಿದೆ.

ಬೃಹದಾರಣ್ಯಕಭಾಷ್ಯದಲ್ಲಿ ನಾಲ್ಕನೆಯ ಅಧ್ಯಾಯದ ಐದನೆಯ ಬ್ರಾಹ್ಮಣದ ಅಂತ್ಯದಲ್ಲಿ ಈ ವಿಚಾರದನ್ನು ವಿಸ್ತಾರವಾಗಿ ಚರ್ಚೆಗೆ ತೆಗೆದುಕೊಂಡಿರುತ್ತದೆ. ಅಲ್ಲಿ 'ಯಾವಜ್ಜೀವಮಗ್ನಿಹೋತ್ರಂ ಜುಹುಯಾತ್' (ಜುಹೋತಿ ?)ಮುಂತಾದ ಶ್ರುತಿಗಳಲ್ಲಿ ಸಾಯುವವರೆಗೂ ಕರ್ಮವನ್ನು ಮಾಡುತ್ತಲೇ ಇರಬೇಕೆಂದು ಐಕಾಶ್ರಮ್ಯ (ಗೃಹಸ್ಥಾಶ್ರಮವೊಂದೇ ಆಶ್ರಮವೆಂಬ ಪಕ್ಷ)ವನ್ನು ಬೆಂಬಲಿಸುವ (ಐಕಾಶ್ರಮ್ಯಜ್ಞಾಪಕಾನಿ) ಶ್ರುತಿಗಳೂ ಕೆಲವು ಇವೆ ; ಆಶ್ರಮಾಂತರಗಳೂ ಇವೆ ಎಂಬ ಬೇರೆಯ ವಾಕ್ಯಗಳೂ ಇವೆ. ಸಂನ್ಯಾಸದ ವಿಷಯಕ್ಕೆ ಕ್ರಮ, ವಿಕಲ್ಪ, ಯಥೇಷ್ಟಾಶ್ರಮಸೇವೆ-ಇದನ್ನು ಹೇಳುವ ಶ್ರುತಿಸ್ಮೃತಿಗಳೂ ಇವೆ. ಅವನ್ನು

ಬಲ್ಲವರ ಆಚಾರವೂ ಇದೆ (ಏವಂ ವ್ಯುತ್ಥಾನವಿಕಲ್ಪಕ್ರಮಯಥೇಷ್ಟಾಶ್ರಮಪ್ರತಿಪತ್ತಿಪ್ರತಿಪಾದಕಾನಿ ಹಿ ಶ್ರುತಿಸ್ಮೃತಿವಾಕ್ಯಾನಿ ಶತಶಃ ಉಪಲಭ್ಯನ್ತೇ ಇತರೇತರವಿರುದ್ಧಾನಿ| ಆಚಾರಶ್ಚ ತದ್ವಿದಾಮ್|) ಎಂದು ಬರೆದಿದೆ. ಚರ್ಚೆಯ ಕೊನೆಯಲ್ಲಿ 'ವಿದುಷಸ್ತಾವತ್ ಪಾರಿವ್ರಾಜ್ಯಂ ಸಿದ್ಧಮ್। ಸಂಪ್ರದಾನಾದಿಕರ್ಮಕಾರಕಜಾತ್ಯಾದಿಶೂನ್ಯಾವಿಕ್ರಿಯಬ್ರಹ್ಮಾತ್ಮದೃಢಪ್ರತಿಪತ್ತಿಮಾತ್ರೇಣ ವಚನಮನ್ತರೇಣಾಪಿ।' ಸಂಪ್ರದಾನವೇ ಮುಂತಾದ ಕರ್ಮಕಾರಕಗಳೂ ಜಾತ್ಯಾದಿಗಳೂ ಇಲ್ಲದ ವಿಕಾರರಹಿತವಾದ ಬ್ರಹ್ಮಾತ್ಮನ ಜ್ಞಾನವು ದೃಢವಾಗಿ ಉಂಟಾದಮಾತ್ರದಿಂದ ಜ್ಞಾನಿಗೆ ವಚನವಿಲ್ಲದಿದ್ದರೂ ಪಾರಿವ್ರಾಜ್ಯವು ಸಿದ್ಧವಾಯಿತು-ಎಂದು ವಿದ್ವತ್ಸಂನ್ಯಾಸವನ್ನು 'ವಿವಿದಿಷೋರಪಿ ಸಿದ್ಧಂ ಪಾರಿವ್ರಾಜ್ಯಮ್' ಏತಮೇವಾತ್ಮಾನಂ ಲೋಕಮಿಚ್ಛನ್ತಃ ಪ್ರವ್ರಜನ್ತಿ ಇತಿ ವಚನಾತ್ ||
'ಈ ಆತ್ಮನೆಂಬ ಲೋಕವನ್ನೇ ಬಯಸುವವರು ಸಂನ್ಯಾಸಮಾಡಬೇಕು' ಎಂಬ ವಚನವಿರುವದರಿಂದ ಜ್ಞಾನೇಚ್ಛುಗಳಿಗೂ ಪಾರಿವ್ರಾಜ್ಯವು ಸಿದ್ಧವಾಯಿತು ; 'ತಸ್ಮಾದ್ ವಿರಕ್ತಸ್ಯ ಮುಮುಕ್ಷೋಃ ವಿನಾಪಿ ಜ್ಞಾನೇನ ಬ್ರಹ್ಮಚರ್ಯಾದೇವ ಪ್ರವ್ರಜೇತ್ ಇತ್ಯಾದ್ಯುಪಪನ್ನಮ್ ।' ಆದ್ದರಿಂದ (ಯಮಪ್ರಧಾನವಾದ ಅಮಾನಿತ್ವಾದಿಗಳೂ ಮಾನಸವಾದ ಧ್ಯಾನಜ್ಞಾನವೈರಾಗ್ಯಾದಿಗಳೂ ತೀರ ಹತ್ತಿರದ ಉಪಕಾರಕಸಾಧನವಾಗಿರುವದರಿಂದ) ವಿರಕ್ತನಾದ ಮುಮುಕ್ಷುವಿಗೆ ಜ್ಞಾನವುಂಟಾಗದೆ ಇದ್ದರೂ 'ಬ್ರಹ್ಮಚರ್ಯದಿಂದಲೇ ಪ್ರವ್ರಜಿತನಾಗಬೇಕು' ಮುಂತಾದ ವಿಧಿಗಳಿರುವದರಿಂದ ಪಾರಿವ್ರಾಜ್ಯವು ಸಿದ್ಧವಾಯಿತು ಎಂದು ವಿವಿದಿಷಾಸಂನ್ಯಾಸವನ್ನು ಸಿದ್ಧಪಡಿಸಿರುತ್ತಾರೆ. ಅದೇ ಉಪನಿಷತ್ತಿನ ಮೂರನೆಯ ಅಧ್ಯಾಯದಲ್ಲಿ (ಬೃ. ೩-೫-೧) 'ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ' ಎಂಬ ವಾಕ್ಯದ ಅಭಿಪ್ರಾಯವನ್ನು ವಿಚಾರಮಾಡುವ ಸಂದರ್ಭದಲ್ಲಿ "ಯದ್ಧಿ ತದೇಷಣಾಭ್ಯೋ ವ್ಯುತ್ಥಾನಲಕ್ಷಣಂ ಪಾರಿವ್ರಾಜ್ಯಂ ತದಾತ್ಮಜ್ಞಾನಾಙ್ಗಮ್ । ಆತ್ಮಜ್ಞಾನವಿರೋಧ್ಯೇಷಣಾಪರಿತ್ಯಾಗರೂಪತ್ವಾತ್ । ಅವಿದ್ಯಾವಿಷಯತ್ವಾಚ್ಚ ಏಷಣಾಯಾಃ । ತದ್ವ್ಯತಿರೇಕೇಣ ಚ ಅಸ್ತಿ ಆಶ್ರಮರೂಪಂ ಪಾರಿವ್ರಾಜ್ಯಂ ಬ್ರಹ್ಮಲೋಕಾದಿಫಲಪ್ರಾಪ್ತಿಸಾಧನಂ ಯದ್ವಿಷಯಂ ಯಜ್ಞೋಪವೀತಾದಿಸಾಧನವಿಧಾನಂ ಲಿಙ್ಗವಿಧಾನಂ ಚ" (ಪು. ៤೧೩) ಏಷಣೆಗಳನ್ನು ಎಂದರೆ ಮನುಷ್ಯಾದಿಲೋಕಗಳ ಬಯಕೆಗಳನ್ನು ಬಿಟ್ಟೇಳುವ ಪಾರಿವ್ರಾಜ್ಯವಿದೆಯಲ್ಲ, ಅದು ಆತ್ಮಜ್ಞಾನಕ್ಕೆ ಅಂಗವು ; ಅದಕ್ಕಿಂತ ವ್ಯತಿರಿಕ್ತವಾದ ಪಾರಿವ್ರಾಜ್ಯವೂ ಇದೆ ; ಅದು ಬ್ರಹ್ಮಲೋಕವೇ ಮುಂತಾದದ್ದನ್ನು ಪಡೆಯುವದಕ್ಕೆ ಸಾಧನವು ; ಅದರ ವಿಷಯದಲ್ಲಿಯೇ ಯಜ್ಞೋಪವೀತಾದಿಸಾಧನಗಳನ್ನೂ ಲಿಂಗ(ಸಂನ್ಯಾಸಿಯ ವೇಷ)ವನ್ನೂ ವಿಧಿಸಿರುವದು- ಎಂದು ಪರಮ

22

ಹಂಸಪಾರಿವ್ರಾಜ್ಯ ಮತ್ತು ತ್ರಿದಂಡಿಸಂನ್ಯಾಸ– ಎಂಬ ಎರಡು ಆಶ್ರಮಗಳನ್ನು ವಿಂಗಡಿಸಿ ಎರಡೂ ಶಾಸ್ತ್ರೀಯವೆಂದು ಪ್ರತಿಪಾದಿಸಿರುತ್ತದೆ.

ಹೀಗೆಯೇ ತೈತ್ತಿರೀಯ, ಐತರೇಯ– ಮುಂತಾದ ಉಪನಿಷದ್ಭಾಷ್ಯಗಳಲ್ಲಿಯೂ ಆಚಾರ್ಯರು ಪಾರಮಹಂಸ್ಯವು ಶಾಸ್ತ್ರೀಯವೆಂಬ ಸಿದ್ಧಾಂತವನ್ನು ಪ್ರತಿಪಾದಿಸಿರುತ್ತಾರೆ.

"ಬದುಕಿರುವವರೆಗೂ ಅಗ್ನಿಹೋತ್ರವನ್ನು ಮಾಡಬೇಕು" ಎಂದು ವಿಧಿಸಿರುವ ಕರ್ಮವನ್ನು ಬಿಡುವದಕ್ಕೆ ಸಂನ್ಯಾಸವಿಧಾಯಕಶಬ್ದಗಳು ಸಾಧಕವಲ್ಲ. ಏಕೆಂದರೆ ಅಗ್ನಿಹೋತ್ರಾದಿವಿಧಿಗಳು ನಿರವಕಾಶವಾಗಿರುತ್ತವೆ ; ಆದರೆ ಸಂನ್ಯಾಸವಿಧಿಗಳು ಸಾವಕಾಶವಾಗಿವೆ. ಎಂದರೆ ಅವು ಕರ್ಮವನ್ನು ಮಾಡುವದಕ್ಕೆ ಅಧಿಕಾರವಿಲ್ಲದವರ ವಿಷಯ ಎಂದು ಕಲ್ಪಿಸುವದಕ್ಕೂ ಆಗುತ್ತದೆ– ಎಂದು ಆಗಿನ ಪೂರ್ವಪಕ್ಷಿಗಳ ಅಭಿಪ್ರಾಯವಿತ್ತು. ಕುಮಾರಿಲಭಟ್ಟರ ತಂತ್ರವಾರ್ತಿಕದ ಹೀಗೆಂದಿದೆ : "ತತ್ರೈವಂ ಶಕ್ಯತೇ ವಕ್ತುಂ ಯೇಽನ್ಧಪಙ್ಗ್ವಾದಯೋ ನರಾಃ । ಗೃಹಸ್ಥತ್ವಂ ನ ಶಕ್ಷ್ಯನ್ತೇ ಕರ್ತುಂ ತೇಷಾಮಯಂ ವಿಧಿಃ । ನೈಷ್ಠಿಕಬ್ರಹ್ಮಚರ್ಯಂ ವಾ ಪರಿವ್ರಾಜಕತಾಪಿ ವಾ । ತೈರವಶ್ಯಂ ಗ್ರಹೀತವ್ಯಾ ತೇನಾದಾವೇವಮುಚ್ಯತೇ" ॥ (ತಂ.ವಾ. ೧–೩–೪ ಪು. ೧೯೪) ಕುರುಡರು ಹೆಳವರೇ ಮುಂತಾದ ಅಂಗವಿಕಲರು ಗಾರ್ಹಸ್ಥ್ಯವನ್ನು ಮಾಡುವದು ಆಗಲಾರದ್ದಾದ್ದರಿಂದ ಅವರು ನೈಷ್ಠಿಕಬ್ರಹ್ಮಚರ್ಯವನ್ನೋ ಪಾರಿವ್ರಾಜ್ಯವನ್ನೋ ಅವಶ್ಯವಾಗಿ ಸ್ವೀಕರಿಸಬೇಕಾಗುತ್ತದೆ. ಆದ್ದರಿಂದ ಅವರಿಗೆ ಸಂನ್ಯಾಸವನ್ನು ಹೇಳಿದೆ –ಎಂದು ಪೂರ್ವಮೀಮಾಂಸಾವಾರ್ತಿಕಕಾರರ ಅಭಿಪ್ರಾಯ. ಆಚಾರ್ಯರು ಈ ಅಭಿಪ್ರಾಯವು ಸರಿಯಲ್ಲವೆನ್ನುತ್ತಾರೆ. ಏಕೆಂದರೆ ಅನಧಿಕೃತರಾದವರಿಗೆ 'ಸ್ನಾತಕೋ ವಾಽಸ್ನಾತಕೋ ವೋತ್ಸನ್ನಾಗ್ನಿರನಗ್ನಿಕೋ ವಾ' ಎಂದು ಮುಂತಾಗಿ ಬೇರೆಯಾಗಿಯೇ ಜಾಬಾಲೋಪನಿಷತ್ತಿನಲ್ಲಿ ಪಾರಿವ್ರಾಜ್ಯವನ್ನು ವಿಧಿಸಿರುತ್ತದೆ. ಆದ್ದರಿಂದ ಕರ್ಮಗಳೆಲ್ಲ ಅಜ್ಞಾನಿಗಳಾದ ಕಾಮಿಗಳಿಗಾಗಿಯೇ ವಿಹಿತವಾಗಿರುತ್ತವೆ ಎಂಬುದೇ ಸರಿಯಾದ ಸಿದ್ಧಾಂತವು. ಅಂಥ ಅಜ್ಞಾನಿಗಳಾದ ಕಾಮಿಗಳಿಗಾಗಿಯೇ ಯಾವಜ್ಜೀವಕರ್ಮವನ್ನು ವಿಧಿಸಿರುತ್ತದೆ ಎಂದು ಆಚಾರ್ಯರು ಬೃಹದಾರಣ್ಯಕ, ಛಾಂದೋಗ್ಯ, ತೈತ್ತಿರೀಯ, ಐತರೇಯ, ಈಶಾವಾಸ್ಯ –ಮುಂತಾದ ಉಪನಿಷತ್ತುಗಳ ಭಾಷ್ಯದಲ್ಲಿಯೂ ಗೀತಾಭಾಷ್ಯ ಸೂತ್ರ ಭಾಷ್ಯದಲ್ಲಿಯೂ ಸ್ಪಷ್ಟಪಡಿಸಿರುತ್ತಾರೆ.

## ಸಂನ್ಯಾಸವು ಕಲಿವರ್ಜ್ಯವೆ ?

ಇಲ್ಲಿ ಇನ್ನೊಂದು ವಿಷಯವನ್ನು ಕುರಿತು ಪರಿಶೀಲಿಸುವದು ಉಳಿದಿದೆ. ಈವರೆಗೆ ವಿವರಿಸಿರುವಂತೆ (೧) ಆತ್ಮಜ್ಞಾನಿಗಳು ಅಥವಾ ಮುಮುಕ್ಷುಗಳಾದ

ಜಿಜ್ಞಾಸುಗಳು ಸ್ವೀಕರಿಸತಕ್ಕ ಪಾರಮಹಂಸ್ಯ, ಬ್ರಹ್ಮಲೋಕಾದಿಪ್ರಾಪಕವಾದ ಆಶ್ರಮಸಂನ್ಯಾಸ, ಅಂಗವಿಕಲರೇ ಮೊದಲಾದ ಕರ್ಮಾನಧಿಕಾರಿಗಳು ಸ್ವೀಕರಿಸಬೇಕಾದ ಪಾರಿವ್ರಾಜ್ಯ– ಈ ಮೂರೂ ಶಾಸ್ತ್ರೀಯವೆಂದು ಆಚಾರ್ಯರು ಒಪ್ಪಿರುತ್ತಾರಷ್ಟೆ ? ಅಗ್ನಿಹೋತ್ರಾದಿಕರ್ಮಗಳು ಆತ್ಮಜ್ಞಾನವಿಲ್ಲದ ಅಮುಮುಕ್ಷುಗಳಿಗೆ ವಿಹಿತವಾಗಿದೆಯೆಂದೂ ಅಗ್ನಿಯನ್ನು ಬಿಟ್ಟರೆ ಆಗುವ ವೀರಹತ್ಯಾದೋಷವು ಅಜ್ಞರ ವಿಷಯವೇ ಎಂಬೂ ಅವರ ಕಟ್ಟಕಡೆಯ ಮತವಾಗಿರುತ್ತದೆ. ಈ ಪ್ರಸಂಗದಲ್ಲಿ ಸಂನ್ಯಾಸವು ಕಲಿವರ್ಜ್ಯವಲ್ಲವೆ ?– ಎಂಬ ಆಕ್ಷೇಪವನ್ನು ಚಿದ್ವಿಲಾಸೀಯದಲ್ಲಿ ಒಡ್ಡಿರುವಂತೆ ಆಚಾರ್ಯರ ಭಾಷ್ಯದಲ್ಲಿ ಎಲ್ಲಿಯೂ ಹಾಕಿಕೊಂಡಿಲ್ಲ. ಇದೇಕೆ ? ಕಲಿವರ್ಜ್ಯಪ್ರಕರಣವು ಆಚಾರ್ಯರ ಕಾಲಕ್ಕೆ ಸ್ಮೃತಿಗಳಲ್ಲಿ ಇರಲಿಲ್ಲವೆ? ಅಗ್ನಿಹೋತ್ರವುಕೂಡ ಕಲಿವರ್ಜ್ಯವೆಂದೇ ಕೆಲವರು ಹೇಳುತ್ತಿದಾರೆ. ಚಿದ್ವಿಲಾಸರು ಬರೆದಿರುವ 'ಅಶ್ವಾಲಮ್ಭಂ ಗವಾಲಮ್ಭಮ್' (ಚಿ. ಶಂ. ೧೮–೭) ಎಂಬ ಶ್ಲೋಕದ ಪೂರ್ವಾರ್ಧವು 'ಅಗ್ನಿಹೋತ್ರಂ ಗವಾಲಮ್ಭಂ ಸಂನ್ಯಾಸಂ ಪಲಪೈತೃಕಮ್' ಎಂಬ ಪಾಠಾಂತರಯುಕ್ತವಾಗಿ ನಿರ್ಣಯಸಿಂಧುವಿನಲ್ಲಿ ಉದಾಹೃತವಾಗಿರುತ್ತದೆ. ಆಗ ಅಗ್ನಿಹೋತ್ರವೂ ಸಂನ್ಯಾಸದಂತೆ ಕಲಿವರ್ಜ್ಯವೇ –ಎಂಬ ಅನಿಷ್ಟವು ಪೂರ್ವಪಕ್ಷಕ್ಕೆ ಬಂದೊದಗುತ್ತದೆ. ಆದರೆ ಆಚಾರ್ಯರು ಹೇಳಿರುವ ಸಮಾಧಾನದಲ್ಲಿ 'ಸಂನ್ಯಾಸಶ್ಚಾಗ್ನಿಹೋತ್ರಂ ಚ ತಾವದೇವ ಕಲೌ ಯುಗೇ' (ಚಿ. ಶಂ. ೧೭) ಎಂದು ಹೇಳಿದ್ದರೂ– ಈ ವಿಷಯವನ್ನು ಚಿದ್ವಿಲಾಸರು ಎತ್ತಿಲ್ಲ ; ಇದೇಕೆ ? ಈ ಪಾಠಾಂತರವು ಚಿದ್ವಿಲಾಸರಿಗೆ ತಿಳಿದಿರಲಿಲ್ಲವೆಂದು ಕಲ್ಪಿಸುವದು ಸರಿಯಾಗಲಾರದು. ನಿರ್ಣಯಸಿಂಧುಕಾರರು ಕಲಿವರ್ಜ್ಯಸಂನ್ಯಾಸವು ತ್ರಿದಂಡಸಂನ್ಯಾಸವೆಂದು (ನಿ ಸಿಂ. ಕಲಿವರ್ಜ್ಯಪ್ರಕರಣ ಪು. ೨೬೩) ಬರೆದಿರುತ್ತಾರೆ; ಆದರೆ ಆ ಅಭಿಪ್ರಾಯವೂ ಆಚಾರ್ಯರಿಗೆ ಒಪ್ಪೆನ್ನುವದಕ್ಕೆ ಯಾವ ಆಧಾರವೂ ನಮಗೆ ಸಿಕ್ಕಿರುವದಿಲ್ಲ. ಆಚಾರ್ಯರ ಅಭಿಪ್ರಾಯವು ಈ ವಿಷಯದಲ್ಲಿ ಏನಿತ್ತೆಂಬುದನ್ನು ನಿರ್ಣಯಿಸುವದಕ್ಕೆ ನಮಗೆ ವಾಕ್ಯಗಳು ಯಾವವೂ ಇಲ್ಲ. ಧರ್ಮಶಾಸ್ತ್ರಗಳಿಗೆ ಏಕವಾಕ್ಯತೆಯನ್ನು ಮಾಡಬೇಕೆನ್ನುವವರು ಈ ವಿಷಯವನ್ನು ಪರ್ಯಾಲೋಚಿಸಬೇಕಾದದ್ದಿದೆ.

## ಜೈಮಿನಿಯ ಮತವು ಆಚಾರ್ಯರ ಸಿದ್ಧಾಂತಕ್ಕೆ ವಿರುದ್ಧವಲ್ಲ

೧೧೯. ಈ ವಾದಪ್ರಕರಣವನ್ನು ನಿಲ್ಲಿಸುವ ಮುಂಚೆ ಮಂಡನನಿಗೂ ಆಚಾರ್ಯರಿಗೂ ಆದ ಮತ್ತೊಂದು ಸಂವಾದವನ್ನು ಮಾಧವೀಯದಲ್ಲಿ ವರ್ಣಿಸಿರುವಂತೆ (ಮಾ. ಶಂ. ೯–೩ರಿಂದ ೧೫) ತಿಳಿಸುವದು ಅವಶ್ಯ. ಚಿದ್ವಿಲಾಸೀಯದಲ್ಲಿ ಈ ವಿಷಯವು ಕಾಣಿಸುವದಿಲ್ಲ. ಮಂಡನಮಿಶ್ರನು ಎದ್ದು ಭಕ್ತಿಯಿಂದ ಮೂರು ಬಾರಿ ಪ್ರದಕ್ಷಿಣೆಯನ್ನು ಮಾಡಿ ನಮಸ್ಕರಿಸಿ 'ಸ್ವಾಮಿಯೆ, ನಾನು ಉತ್ತಮಾಶ್ರಮ

ನಿಂದೆಯನ್ನು ಮಾಡಿದ್ದೆಲ್ಲವನ್ನೂ ಕ್ಷಮಿಸಿ ನನ್ನ ಅಜ್ಞಾನವನ್ನು ತೊಲಗಿಸಬೇಕು. ಶುದ್ಧಾದ್ವೈತದಲ್ಲಿಯೇ ತತ್ಪರನಾಗಿರುವಂತೆ ನನ್ನನ್ನು ಜ್ಞಾನಿಯಾಗಿ ಮಾಡಿರಿ. ನನಗೆ ಸಂನ್ಯಾಸವನ್ನು ಕೊಟ್ಟು ಶಿಷ್ಯನನ್ನಾಗಿ ಮಾಡಿಕೊಳ್ಳಬೇಕು' ಎಂದು ಬೇಡಿ ಕೊಂಡನು (ಚಿ. ಶಂ. ೧೮-೪೪) ಎಂಬಿಷ್ಟೇ ಅಲ್ಲಿ ಇರುವ ವಿವರ. ಆದರೆ **ಮಾಧವೀಯ**ದಲ್ಲಿ ಒಂದು ಹೆಚ್ಚಿನ ವಿಚಾರಣೀಯವಿಷಯವಿದೆ. ಆಚಾರ್ಯರ ಸಯುಕ್ತಿಕವಾದ ಶ್ರುತ್ಯರ್ಥನಿರ್ಣಯವನ್ನು ಕೇಳಿ ದುರಾಗ್ರಹವನ್ನು ತ್ಯಜಿಸಿದ ಮೇಲೂ ಮಂಡನನು ತನ್ನ ಒಂದು ಸಂಶಯವನ್ನು ಅವರ ಮುಂದೆ ಇಟ್ಟನು. 'ನಿಮ್ಮಿಂದ ನಾನು ವಾದದಲ್ಲಿ ಜಿತನಾದೆನೆಂದು ನನಗೆ ವಿಷಾದವೇನೂ ಇಲ್ಲ. ಆದರೆ ಜೈಮಿನಿಯ ವಚನಗಳೂ ಖಂಡಿತವಾದವಲ್ಲ ! ಸರ್ವಜ್ಞರಾದ ಜೈಮಿನಿ ಗಳು ತಮ್ಮ ಸೂತ್ರದಲ್ಲಿ ಮಿಥ್ಯಾರ್ಥವನ್ನು ಬರೆದರೇಕೆ?' (ಮಾ.ಶಂ.೯-೨೩) ಎಂದನು. ಅದಕ್ಕೆ ಸಮಾಧಾನವಾಗಿ ಆಚಾರ್ಯರು ಹೇಳಿದ್ದೇನೆಂದರೆ 'ಇದು ಜೈಮಿನಿಗಳ ತಪ್ಪಲ್ಲ. ಅವರ ಹೃದಯವನ್ನು ಅರಿಯದ ನಾವೇ ಅವರಲ್ಲಿ ಹೀಗೆ ಅಜ್ಞತೆಯನ್ನು ಆರೋಪಿಸುತ್ತಿರುವೆವು. ಜೈಮಿನಿಗಳಿಗೆ ಪರಬ್ರಹ್ಮದಲ್ಲಿ ತಾತ್ಪರ್ಯ ವಿದ್ದರೂ ವಿಷಯಾಸಕ್ತರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ಜ್ಞಾನಪ್ರಾಪ್ತಿಗೆ ಸಾಧನವಾಗಿರುವ ಧರ್ಮವನ್ನೇ ಮುಖ್ಯವಾಗಿ ಅವರು ನಿರೂಪಣೆಮಾಡಿದರು. 'ತಮೇತಮ್' (ಬೃ. ೪-೪-೨೨) ಎಂಬ ಶ್ರುತಿ ವಾಕ್ಯದಲ್ಲಿ ವೇದಾನುವಚನ, ಯಜ್ಞ, ದಾನ, ತಪಸ್ಸು- ಇವುಗಳಿಂದ ಬ್ರಹ್ಮ ಜ್ಞಾನವಾಗುವದೆಂದು ಹೇಳಿದೆ ; ಅದನ್ನನುಸರಿಸಿಯೇ ಜೈಮಿನಿಗಳು ಧರ್ಮ ತತ್ತ್ವವನ್ನು ನಿರ್ಧಾರಮಾಡಿರುತ್ತಾರೆ (೯-೬, ೭).

[ಕರ್ಮಕ್ಕೆ ಈ ವಿನಿಯೋಗವನ್ನು ಜೈಮಿನಿಗಳು ಹೇಳಿಲ್ಲ ; ಕರ್ಮನಿರೂಪಣೆಮಾಡು ವದರಿಂದ ಈ ಅಭಿಪ್ರಾಯವೂ ಅವರಿಗಿತ್ತು ಎಂದು ಕಲ್ಪಿಸಿದೆ.

**ಮಂಡನ :** ಹಾಗಾದರೆ 'ಆಮ್ನಾಯಸ್ಯ ಕ್ರಿಯಾರ್ಥತ್ವಾದಾನರ್ಥಕ್ಯ ಮತದರ್ಥಾನಾಮ್' (ಜೈ. ಸೂ. ೧-೨-೧). ವೇದವು ಕ್ರಿಯಾಪರವಾಗಿರುವದ ರಿಂದ ಕ್ರಿಯಾಪರವಲ್ಲದ ವಾಕ್ಯಗಳು ವ್ಯರ್ಥ- ಎಂದು ಅವರೇಕೆ ಸೂತ್ರವನ್ನು ರಚಿಸಿರುತ್ತಾರೆ ? (೯-೮)

**ಶಂಕರರು :** ಶ್ರುತಿಯು ಪರಂಪರೆಯಿಂದ ಅದ್ವೈತಪರವೇ ಆದರೂ ಆತ್ಮಜ್ಞಾನವನ್ನುಂಟುಮಾಡುವ ಕರ್ಮದಲ್ಲಿಯೇ ದೃಷ್ಟಿಯುಳ್ಳದ್ದಾಗಿದೆ ಎಂಬ ಕಾರಣದಿಂದ ಆ ಪ್ರಕರಣದ ವಾಕ್ಯಗಳಿಗೆ ಕ್ರಿಯಾರ್ಥಕತ್ವವನ್ನೇ ಜೈಮಿನಿಗಳು ಹೇಳಿರುತ್ತಾರೆ. (೯-೯)

[ಜೈಮಿನಿಗಳು ಶ್ರುತಿಯು ಅದ್ವೈತಪರವೇ ಎಂದು ಬಾಯಿಬಿಟ್ಟು ಹೇಳಿಲ್ಲ ; ಅದ್ವೈತ ಪರವಲ್ಲವೆಂದೂ ಹೇಳಿಲ್ಲ. ಕರ್ಮಕಾಂಡವನ್ನು ಮಾತ್ರ ಲಕ್ಷ್ಯದಲ್ಲಿಟ್ಟುಕೊಂಡು ಕ್ರಿಯಾರ್ಥ

ವಾಗಿರುವದರಿಂದಲೇ ಇತರ ವಾಕ್ಯಗಳೂ ಪ್ರಮಾಣ ಎಂದಿರುತ್ತಾರೆ. ಅವರು ಉಪನಿಷದ್ವಾಕ್ಯಗಳ ವಿಚಾರವನ್ನು ಮಾಡಿಯೇ ಇರುವದಿಲ್ಲ. ಕರ್ಮವು ಜ್ಞಾನಾರ್ಥವೆಂಬುದನ್ನೂ ಅವರು ಹೇಳಿಲ್ಲ.]

ಕುಮಾರಿಲಭಟ್ಟರು ತಮ್ಮ ತಂತ್ರವಾರ್ತಿಕದಲ್ಲಿ 'ಏತೇನ ಕ್ರತ್ವರ್ಥಕರ್ತೃಪ್ರತಿಪಾದನದ್ವಾರೇಣ ಉಪನಿಷದಾಂ ನೈರಾಕಾಙ್ಕ್ಷ್ಯಂ ವ್ಯಾಖ್ಯಾತಮ್' (ಜೈ. ಸೂ. ೧-೩-೭ ತಂ. ವಾ. ಪು. ೧೧೪) ಕರ್ಮಕ್ಕೆ ಅಂಗವಾಗಿರುವ ಕರ್ತೃರೂಪನಾದ ಆತ್ಮನನ್ನು ಹೇಳುವದರಿಂದಲೇ ಉಪನಿಷತ್ತುಗಳು ನಿರಾಕಾಂಕ್ಷವಾಗುತ್ತವೆ- ಎಂದು ಉಪನಿಷತ್ತುಗಳೂ ಕರ್ಮಾರ್ಥವೆಂದೇ ಸ್ಪಷ್ಟವಾಗಿ ಹೇಳಿರುತ್ತಾರೆ. ಇನ್ನೊಂದು ಕಡೆಯಲ್ಲಿ (ತಂ.ವಾ.೧-೩-೮ ಪು. ೨೮೮) 'ಆತ್ಮಜ್ಞಾನಂ ಹಿ ಸಂಯೋಗಪೃಥಕ್ತ್ವಾತ್ ಕ್ರತ್ವರ್ಥಪುರುಷಾರ್ಥಶ್ಚೇನ ಜ್ಞಾಯತೇ ತೇನ ವಿನಾ ಪರಲೋಕಫಲೇಷು ಪ್ರವೃತ್ತಿನಿವೃತ್ತ್ಯಭಾವಾತ್' ಆತ್ಮಜ್ಞಾನವು ಪುರುಷಾರ್ಥಕ್ಕೂ ಆಗುತ್ತದೆ ; ಏಕೆಂದರೆ ಪರಲೋಕಫಲವುಳ್ಳ ಕರ್ಮಗಳಲ್ಲಿ ಪ್ರವೃತ್ತಿನಿವೃತ್ತಿಗಳು ಆಗುವದಕ್ಕೆ ಅದು ಇದ್ದೇಇರಬೇಕು- ಎಂದೂ ಬರೆದಿದಾರೆ. ಅಲ್ಲಿ ಜ್ಞಾನಕರ್ಮಸಮುಚ್ಚಯಗಳನ್ನು ಅವರು ಹೇಳಿರುತ್ತಾರೆ.]

ಮಂಡನ : ಜೈಮಿನಿಗಳಿಗೆ ಸಚ್ಚಿದಾತ್ಮನಲ್ಲಿಯೇ ವೇದಕ್ಕೆ ತಾತ್ಪರ್ಯವೆಂಬ ಅಭಿಪ್ರಾಯವಿದ್ದರೆ ಪರಮೇಶ್ವರನನ್ನು ಅವರು ನಿರಾಕರಿಸಿದ್ದು ಹೇಗೆ ? (೯-೧೦)

ಶಂಕರರು : ಈ ಜಗತ್ತು ಕರ್ತೃಪೂರ್ವಕವಾಗಿದೆ ; ಏಕೆಂದರೆ ಘಟಾದಿಗಳಂತೆ ಇದು ಕಾರ್ಯವಾಗಿದೆ- ಎಂಬ ರೂಪದ ಅನುಮಾನದಿಂದಲೇ ಪರಮೇಶ್ವರಸಿದ್ಧಿ- ಎಂದು ಕಾಣಾದರು ಹೇಳುತ್ತಾರೆ. 'ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ' (ಬೃ. ೩-೯-೨೬) 'ನಾ ವೇದವಿನ್ಮನುತೇ ತಂ ಬೃಹನ್ತಮ್' (ತೈ. ಬ್ರಾ. ೬-೧೨-೯-೭) ಎಂಬ ಶ್ರುತಿಯು ವೇದದಿಂದಲೇ ಈಶ್ವರಸಿದ್ಧಿಯಾದೀತೇ ಹೊರತು ಮತ್ತೆ ಹೇಗೂ ಆಗಲಾರದು ಎಂದು ಹೇಳುತ್ತಿದೆ- ಎಂಬ ಕಾರಣದಿಂದ ಈಶ್ವರಸಿದ್ಧಿಗಾಗಿ ಮಾಡಿರುವ ಈ ಅನುಮಾನವನ್ನೂ ಮತ್ತು ಈಶ್ವರನೇ ಫಲದಾತೃವೆಂಬುದನ್ನೂ ಅವರು ನೂರಾರು ಯುಕ್ತಿಗಳಿಂದ ಖಂಡಿಸಿರುತ್ತಾರೆ. ನಾವು ಹೇಳಿರುವ ಉಪನಿಷನ್ಮತಕ್ಕೆ ಅವರ ಮತವು ಸ್ವಲ್ಪವೂ ವಿರುದ್ಧವಲ್ಲ. ಇದನ್ನರಿಯದೆ ಜನರು ಅವರು ನಿರೀಶ್ವರವಾದಿಗಳೆಂದು ಹೇಳುತ್ತಿದಾರೆ (೯-೧೧ ರಿಂದ ೧೪).

[ಜೈಮಿನಿಗಳಾಗಲಿ ವಾರ್ತಿಕಕಾರರಾಗಲಿ ಈಶ್ವರನಿರ್ಧಾರಣೆಯನ್ನು ಮಾಡಿಲ್ಲ. ಆಚಾರ್ಯರು ಅನುಮಾನದಿಂದ ಬ್ರಹ್ಮಸಿದ್ಧಿಯಾಗಲಾರದು ಎಂದು ಹೇಳುತ್ತಾರೆ; ಬ್ರಹ್ಮವು ಇಂದ್ರಿಯಗೋಚರವಲ್ಲವೆಂಬುದೇ ಅದಕ್ಕೆ ಹೇತು, 'ತಂ ತ್ವೌಪನಿಷದಮ್' ಎಂಬ ಶ್ರುತಿಯನ್ನು ಅವರು ಉದಾಹರಿಸಿರುವದು ನಿಜವಾದರೂ ಅವರು ಹಾಗೆ ಉದಾಹರಿಸಿರುವದು ಅನುಮಾನಕ್ಕೋಸ್ಕರವಲ್ಲ ; ವೇದದ ಒಂದು ವಿಶಿಷ್ಟೋಪದೇಶದಿಂದ ತಿಳಿಯಬರುವ ಆತ್ಮವಸ್ತುವನ್ನು ಮತ್ತೆ ಯಾರೂ ಪರಾಮರ್ಶಿಸಿಲ್ಲ ಎನ್ನುವದಕ್ಕೆ.]

ಹೀಗೆ ಆಚಾರ್ಯರು ಹೇಳಿದ ಉತ್ತರವನ್ನು ಕೇಳಿ ಮಂಡನನೂ ಶಾರದೆ

ಯೂ ಸಭಿಕರೂ ಸಂತೋಷಪಟ್ಟರು ಮಂಡನನು ಜೈಮಿನಿಗಳ ಮಾತಿನಿಂದಲೇ ಇದನ್ನು ಕೇಳಿ ತಿಳಿದುಕೊಳ್ಳಬೇಕೆಂದು ಅವರನ್ನು ಸ್ಮರಿಸಿದನು. ಜೈಮಿನಿಗಳು ಅಲ್ಲಿಗೆ ಬಂದು 'ಈ ಭಾಷ್ಯಕಾರರಲ್ಲಿ ಸಂಶಯವನ್ನು ಇಟ್ಟುಕೊಳ್ಳಬೇಡ. ಇವರು ಹೇಳಿದ್ದೇ ನನ್ನ ಸೂತ್ರಗಳ ಹೃದಯವು ನನ್ನ ಸೂತ್ರಗಳ ಹೃದಯವಂತಿರಲಿ, ಸಕಲಶಾಸ್ತ್ರಗಳ ಹೃದಯವನ್ನೂ ಭೂತಭವಿಷ್ಯದ್ವರ್ತಮಾನಗಳಲ್ಲಿ ನಡೆಯುವದೆಲ್ಲವನ್ನೂ ಇವರೊಬ್ಬರೇ ಬಲ್ಲರು. ನಮ್ಮ ಗುರುಗಳಾದ ವ್ಯಾಸರು ಚಿದೇಕರಸದಲ್ಲಿಯೇ ಶ್ರುತಿಗಳಿಗೆ ತಾತ್ಪರ್ಯವೆಂದು ನಿರ್ಣಯಿಸಿರುವಲ್ಲಿ ನಾನು ಹೇಗೆತಾನೆ ಅದಕ್ಕೆ ವಿರುದ್ಧವಾದ ಹೇಳಿಯೇನು ? ಸಂಸಾರದಲ್ಲಿ ಮುಳುಗಿರುವ ಜನರನ್ನು ಉದ್ಧಾರಮಾಡುವದಕ್ಕೆಂದು ಅವತರಿಸಿರುವ ಪರಮಶಿವನೇ ಇವರು.

ಆದ್ಯೇ ಸತ್ತ್ವಮುನಿಃ ಸತಾಂ ವಿತರತಿ ಜ್ಞಾನಂ ದ್ವಿತೀಯೇ ಯುಗೇ
ದತ್ತೋ ದ್ವಾಪರನಾಮಕೇ ತು ಸುಮತಿರ್ವ್ಯಾಸಃ ಕಲೌ ಶಙ್ಕರಃ ।
ಇತ್ಯೇವಂ ಸ್ಫುಟಮೀರಿತೋಽಸ್ಯ ಮಹಿಮಾ ಶೈವೇ ಪುರಾಣೇ ಯತ
ಸ್ತಸ್ಮಾತ್ತ್ವಂ ಸುಮತೇ ಮತೇ ತ್ವವತರೇಃ ಸಂಸಾರವಾರ್ಧಿಂ ತರೇಃ ॥ ೨೨ ॥

ಕೃತುಯುಗದಲ್ಲಿ ಕಪಿಲನೂ, ತ್ರೇತೆಯಲ್ಲಿ ದತ್ತನೂ ದ್ವಾಪರದಲ್ಲಿ ಸುಬುದ್ಧಿಯಾದ ವ್ಯಾಸನೂ, ಕಲಿಯುಗದಲ್ಲಿ ಶಂಕರನೂ ಸತ್ಪುರುಷರಿಗೆ ಜ್ಞಾನವನ್ನು ಬೋಧಿಸುತ್ತಾರೆ ಎಂದು ಶಿವಪುರಾಣದಲ್ಲಿ ಸ್ಪಷ್ಟವಾಗಿ ಹೇಳಿರುತ್ತದೆ. ಆದ್ದರಿಂದ ನೀನು ಇವರ ಮತವನ್ನು ಅವಲಂಬಿಸು, ಸಂಸಾರವನ್ನು ದಾಟು–ಎಂದು ನುಡಿದು ಜೈಮಿನಿಗಳು ಅಂತರ್ಧಾನರಾದರು. (೯–೧೭ರಿಂದ ೨೨) ವ್ಯಾಸಾಚಲೀಯದಲ್ಲಿ ಶಂಕರವಿಶ್ವರೂಪರ ವಾದವನ್ನು ಪರಾಮರ್ಶಿಸಿದ್ದರೂ ವಾದದ ವಿವರವನ್ನಾಗಲಿ ಮಾಧವನು ವಿವರಿಸಿದ ಶಂಕೆಯನ್ನಾಗಲಿ ಕೊಟ್ಟಿಲ್ಲ. ವಾದಾಂತದಲ್ಲಿ ಸತ್ಯವಾದಿಯಾದ ವಿಶ್ವರೂಪನು ತನ್ನ ಸರ್ವಸ್ವವನ್ನೂ ಶಂಕರರಿಗೆ ಒಪ್ಪಿಸಿ ನಮಸ್ಕರಿಸಿದನು (ವ್ಯಾ. ಶಂ. ೬–೧೦೩) ಎಂದಿಷ್ಟನ್ನು ಮಾತ್ರ ಬರೆದಿದೆ.

## ಮಂಡನನು ಆಚಾರ್ಯರ ಶಿಷ್ಯನಾದದ್ದು

೧೧೧. ಆಗ ಮಂಡನನು ಶಂಕರರಿಗೆ ನಮಸ್ಕಾರವನ್ನು ಮಾಡಿ 'ನಾನು ತಮ್ಮ ಸ್ವರೂಪವನ್ನರಿಯದೆ ಆಡಿದ ಮಾತುಗಳನ್ನು ಕ್ಷಮಿಸಬೇಕು. ಕಪಿಲ ಕಣಾದಾದಿಗಳೂ ಶ್ರುತ್ಯರ್ಥದ ವಿಷಯಕ್ಕೆ ಮೋಹವನ್ನೈದಿರುವಲ್ಲಿ ಪರಶಿವಾಂಶರಾದ ತಾವಲ್ಲದೆ ಮತ್ತೆ ಯಾರು ಅದನ್ನು ನಿರ್ಣಯಿಸಲಾಪರು ? (೯–೩೦) ದೇವನನ್ನು ಭೇದಗೊಳಿಸಿ ಸದ್ಗೋಗಳನ್ನು (ಸೂಕ್ತಿಗಳನ್ನು) ಕೊಲ್ಲುವ ಅಭಿನವ ಯವನರಿಂದ[1] ಈ ಭೂಮಿಯೆಲ್ಲವೂ ವ್ಯಾಪ್ತವಾಗಿರುವದು ; ಅಂಥವರನ್ನು

1. ಇಲ್ಲಿ ಕವಿಯು ತನ್ನ ಕಾಲದ ಭೇದವಾದಿಗಳಾದ ವೇದಾಂತಿಗಳನ್ನು ಮಹಮದೀಯರಿಗೆ ಹೋಲಿಸಿ ಶ್ಲೇಷೋಕ್ತಿಯನ್ನು ಬರೆದಿರುತ್ತಾನೆಂದು ಕಾಣುತ್ತದೆ. ಆದರೆ ಆಚಾರ್ಯರ ಕಾಲಕ್ಕೆ ಮಹಮದೀಯರು ಇದ್ದರೆಂಬುದಕ್ಕಾಗಲಿ ಅಂಥ ವೇದಾಂತಿಗಳಿದ್ದರೆಂಬುದಕ್ಕಾಗಲಿ ಆಧಾರವಿಲ್ಲ,

ಸೇವಿಸುವವರಿಗೆ ಮುಕ್ತಿಪ್ರಸಕ್ತಿಯೆಲ್ಲಿ? ಅಥವಾ ತಮ್ಮ ಶಿಷ್ಯರು ದಿಕ್ಕುದಿಕ್ಕು ಗಳಲ್ಲಿಯೂ ಇರುವವರಿಂದ ಆ ಚಿಂತೆಯಿಂದಾದರೂ ನನಗೆ ಆಗಬೇಕಾದದ್ದೇನು? (೯–೩೨) ನನ್ನ ಪ್ರಾಕೃತಪುಣ್ಯವಶದಿಂದ ತಾವು ನನಗೆ ಉಪದೇಶಮಾಡಿ ಸಂಸಾರ ದಿಂದ ಉದ್ಧರಿಸಿದಿರಿ' ಎಂದು (೯–೩೬) ಆಚಾರ್ಯರನ್ನು ಬಹುವಿಧವಾಗಿ ಸ್ತುತಿಸಿ ಹೆಂಡತಿಮಕ್ಕಳು, ಹಣ, ಮತ್ತು ಗಾರ್ಹಸ್ಥ್ಯಕರ್ಮ– ಇವೆಲ್ಲವನ್ನೂ ಬಿಟ್ಟು ತಮ್ಮ ಚರಣಗಳನ್ನೇ ಶರಣುಹೊಕ್ಕಿದ್ದೇನೆ; ನಾನು ಏನು ಮಾಡ ಬೇಕೋ ಅಪ್ಪಣೆಮಾಡಿರಿ' (೯–೪೩) ಎಂದನು.

ಮಂಡನನ ಸ್ಮರಣಮಾತ್ರದಿಂದ ಜೈಮಿನಿಗಳು ಬಂದರೆಂಬುದೂ ಅವರು ಶಂಕರಾಚಾರ್ಯರ ಅಭಿಪ್ರಾಯವೇ ತಮ್ಮ ಹೃದಯ ಎಂದರೆ ಶಂಕರವಚನವೇ ತತ್ತ್ವಜ್ಞಾನಪ್ರದಾಯಕವೆಂಬುದಕ್ಕೆ ಶಿವಪುರಾಣವನ್ನು ಪ್ರಮಾಣವಾಗಿ ಉದಾ ಹರಿಸಿರುವದೂ ಮಂತ್ರಸಿದ್ಧಿಯಲ್ಲಿಯೂ, ಆಚಾರ್ಯರ ಮಹಿಮೆಯನ್ನು ಪುರಾಣ ಗಳು ಹೊಗಳುವವೆಂಬುದರಲ್ಲಿಯೂ, ಶ್ರದ್ಧೆಯನ್ನಿಟ್ಟಿರುವ ಆಸ್ತಿಕರಿಗಾಗಿ ಕವಿಯು ಬರೆದಿರುವ ವಾಕ್ಯಗಳಾದ್ದರಿಂದ ಅವುಗಳನ್ನು ಇಲ್ಲಿ ವಿಮರ್ಶೆಮಾಡಬೇಕಾದದ್ದೇನೂ ಇರುವದಿಲ್ಲ. ಆದರೆ ಜೈಮಿನಿಗಳನ್ನೂ ವ್ಯಾಸರನ್ನೂ ಸ್ಮರಣಮಾತ್ರದಿಂದ ತಾನಿದ್ದಲ್ಲಿ ಯೇ ಸಾಕ್ಷಾತ್ಕರಿಸಿಕೊಳ್ಳಬಲ್ಲಷ್ಟು ತಪೋಮಹಿಮೆಯುಳ್ಳ ಮಂಡನಪಂಡಿತನು ತನ್ನ ಮತವು ಆ ಇಬ್ಬರು ಋಷಿಗಳಿಗೂ ಸಂಮತವಾಗಿದೆಯೆ, ಇಲ್ಲವೆ?– ಎಂಬುದನ್ನು ಆಚಾರ್ಯರು ವಾದಕ್ಕೆ ಬರುವವರೆಗೂ ವಿಚಾರಿಸಿರಲಿಲ್ಲವೆಂಬುದು ವಾಚಕರಿಗೆ ಆಶ್ಚರ್ಯಜನಕವೆಂಬುದರಲ್ಲಿ ಸಂಶಯವಿಲ್ಲ. ತಮ್ಮ ಸೂತ್ರಗಳಲ್ಲಿ ಪುರಾಣವಚನಗಳನ್ನು ಎಲ್ಲಿಯೂ ಉದಾಹರಿಸದೆ ಇರುವ ಜೈಮಿನಿಗಳು ಮಂಡನನಿಗಾಗಿ ಶಿವಪುರಾಣವಚನವನ್ನುಹೇಗೆ ಉದಾಹರಿಸಿದರೆಂಬುದು ವಿಮರ್ಶ ನೀಯವಾಗಿರುತ್ತದೆ.

ಜೈಮಿನಿಗಳ ಅಭಿಪ್ರಾಯವು ಹೇಗೇ ಇರಲಿ, ಬಾದರಾಯಣಸೂತ್ರಗಳ ನ್ನನುಸರಿಸಿ ಆಚಾರ್ಯರು ಕರ್ಮಕ್ಕೆ ಜ್ಞಾನೋತ್ಪತ್ತಿಹೇತುತ್ವವನ್ನು ಹೇಳಿರು ವದು ನಿಶ್ಚಯ. ಬಾದರಾಯಣರು 'ಅತ ಏವ ಚಾಗ್ನೀನ್ಧನಾದ್ಯನಪೇಕ್ಷಾ' (ವೇ. ಸೂ. ೩–೪–೨೫) ಎಂಬ ಸೂತ್ರದಿಂದ ವಿದ್ಯೆಯೊಂದೇ ಮೋಕ್ಷಕ್ಕೆ ಕಾರಣ ವಾಗಿದೆ, ಅದಕ್ಕೆ ಸಹಾಯವಾಗಿ ಆಶ್ರಮಕರ್ಮಗಳೇನೂ ಬೇಕಾಗಿರುವದಿಲ್ಲ ಎಂದು ಹೇಳಿದಮೇಲೆ 'ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್ |' (ವೇ. ಸೂ. ೩–೪–೨೬), 'ತಮೇತಮ್ (ಬೃ. ೪–೪–೨೨) ಎಂಬ ಶ್ರುತಿಯಲ್ಲ ಯಜ್ಞದಾನತಪಸ್ಸುಗಳು ಜ್ಞಾನೋತ್ಪತ್ತಿಗೆ ಸಾಧನವೆಂದು ಹೇಳಿರುವದರಿಂದ

ಅವೂ ಮುಮುಕ್ಷುಗಳಿಗೆ ಬೇಕು —ಎಂದು ಹೇಳಿರುತ್ತಾರೆ. ಭಾಷ್ಯಕಾರರೂ ಅದರಂತೆಯೇ ಕರ್ಮವು ಚಿತ್ತಶುದ್ಧಿಯ ದ್ವಾರದಿಂದ ವಿವಿದಿಷೆ, ಜ್ಞಾನೋತ್ಪತ್ತಿ, ಜ್ಞಾನನಿಷ್ಠಾಯೋಗ್ಯತೆ– ಇವುಗಳಿಗೆ ಕಾರಣವಾಗಿರುತ್ತದೆ ಎಂದೇ ಪ್ರಸ್ಥಾನತ್ರಯ ಭಾಷ್ಯಗಳಲ್ಲಿ ಪ್ರತಿಪಾದಿಸಿರುತ್ತಾರೆ. ಜೈಮಿನಿಗಳಿಗೂ ಇದು ಸಂಮತವಾಗಿತ್ತೋ ಇಲ್ಲವ್ರೋ ಎಂಬುದನ್ನು ಅವರ ಸೂತ್ರಗಳಿಂದಲೇ ನಿರ್ಧರಿಸುವದು ಆಗುವಂತಿಲ್ಲ.

———

# ೧೦. ಉಭಯಭಾರತಿಯೊಡನೆ ವಾದ

## ಶಂಕರಮಂಡನವಾದವು ಎಷ್ಟು ದಿನಗಳಾದಮೇಲೆ ಹೇಗೆ ಮುಗಿಯಿತು ?

೧೧೧. ಮಂಡನನೊಡನೆ ವಾದವು ಎಷ್ಟುದಿನಗಳವರೆಗೆ ನಡೆಯಿತೆಂಬುದು ನಿಶ್ಚಯವಾಗಿಲ್ಲ, ಮಾಧವೀಯದಲ್ಲಿ ದಿನಗಳ ಸಂಖ್ಯೆಯನ್ನು ಹೇಳಿಲ್ಲ. ಬುದ್ಧಿಮತಿಯಾದ ಅಂಬೆಯನ್ನು ಸಾಕ್ಷ್ಯಕ್ಕೆ ಇಟ್ಟುಕೊಂಡು ಇಬ್ಬರೂ ಒಬ್ಬರನ್ನೊಬ್ಬರು ಗೆಲ್ಲುವದರಲ್ಲಿಯೇ ದೃಷ್ಟಿಯುಳ್ಳವರಾಗಿ ಜಲ್ಪವನ್ನು ಮಾಡುತ್ತಿದ್ದರು ('ಅವ್ಯಾಮುದಾರಧಿಷಣಾಮಭಿಷಿಚ್ಯ ಸಾಕ್ಷ್ಯೇ ಜಲ್ಪಂ ವಿತೇನತುರಥೋ ಜಯಪತ್ತದೃಷ್ಟೀ ||' ೮–೬೬). ಆ ಉಭಯಭಾರತಿಯು ಅವರಿಬ್ಬರ ಕೊರಳಲ್ಲಿಯೂ ಹೂಮಾಲೆಯನ್ನು ಹಾಕಿ 'ಯಾವಾಗ ಯಾರ ಮಾಲೆಯು ಬಾಡುತ್ತದೆಯೋ ಅವರಿಗೆ ಅಪಜಯವಾಯಿತೆಂದು ನಿಶ್ಚಯಿಸತಕ್ಕದು' ಎಂದು ಹೇಳಿ ಮನೆಯ ಕೆಲಸವನ್ನು ಮಾಡಿಕೊಳ್ಳುವದಕ್ಕೂ ಯತಿಗೆ ಭಿಕ್ಷೆಗೂ ಗಂಡನಿಗೆ ಭೋಜನಕ್ಕೂ ಸಜ್ಜುಗೊಳಿಸುವದರಲ್ಲಿ ಆಸಕ್ತಳಾಗಿರುತ್ತಿದ್ದಳು (೮–೬೮). ದಿನದಿನವೂ ಅವರ ವಾದವು ಪ್ರಕರ್ಷವನ್ನು ಪಡೆಯುತ್ತಿತ್ತು ; ಆಕೆಯು ಅವರಿಬ್ಬರನ್ನೂ ಭಿಕ್ಷಾಭೋಜನಗಳಿಗೆಬ್ಬಿಸುವವರೆಗೂ ವಾದಮಾಡುತ್ತಾ ಐದಾರುದಿನಗಳಾದವು (೮–೮೨). ಆಮೇಲೆ ಹಿಂದೆ ವಿವರಿಸಿರುವಂತೆ ವಾದವಾಯಿತು. ಕೊನೆಯಲ್ಲಿ ಆಕೆಯು 'ಯತಿಪತಿಯಾದ ಶಂಕರರ ಯುಕ್ತಿಯನ್ನು ಒಪ್ಪಿ ಮಂಡನನ ಕಂಠದಲ್ಲಿದ್ದ ಮಾಲೆಯು ಮಲಿನವಾದದ್ದನ್ನು ಕಂಡು ನೀವಿಬ್ಬರೂ ಇಂದು ಭಿಕ್ಷೆಗೆ ಏಳಿರಿ' (ಭಿಕ್ಷಾರ್ಥಮುಚ್ಚಲತಮ್) ಎಂದ ಹೇಳಿದಳು (೮–೧೩೨) ಎಂದಿಷ್ಟೇ ಅಲ್ಲಿ ಹೇಳಿದೆ.

ವ್ಯಾಸಾಚಲೀಯದ (೬–೯೭ರಿಂದ ೧೦೦ವರೆಗಿನ) ಕೆಲವು ಶ್ಲೋಕಗಳೂ ಅಕ್ಷರಶಃ ಮಾಧವೀಯದ ಶ್ಲೋಕಗಳಿಗೆ ಸಮವಾಗಿವೆ. (೯೭, ೯೮ನೆಯ ಶ್ಲೋಕಗಳಲ್ಲಿ) ಮಾಲೆ ವಿಚಾರವೂ ಇದೆ. ಆದರೆ ಅಲ್ಲಿ ವಾದವು ಆರೇ ದಿನಗಳಾದವೆಂಬುದಕ್ಕೆ ಗಮಕವಾಗಿ ಒಂದು ಶ್ಲೋಕವಿದೆ :

ಸಾ ಸಪ್ತಮೇ ದಿನ ಉಪೇತ್ಯ ಸರಸ್ವತೀ ತೌ
ಸಂವೀಕ್ಷ್ಯ ಭಿಕ್ಷಿತುಮಭೂದುಭಯೋರನೀಹಾ (ಪೀಹ ?) ।
ಉಕ್ತ್ವೇತ್ಥಮೋದರಧಿಯಾ ವಚನಂ ಸ್ವಭರ್ತು-
ರನ್ತರ್ದಧೇ ಸುವದನಾ ಕಿಲ ಶಾಪಮುಕ್ತಾ (ವ್ಯಾ. ಶಂ. ೬–೧೦೨

ಈ ಶ್ಲೋಕವು ಸರಿಯಾಗಿ ಹೊಂದುಗೆಯ ಅರ್ಥವನ್ನು ಕೊಡುವದಿಲ್ಲ. ಅಕ್ಷರಾರ್ಥವು ಹೀಗಿದೆ : 'ಆ ಸರಸ್ವತಿಯು ಏಳನೆಯ ದಿನ ಹತ್ತಿರಕ್ಕೆ ಬಂದು ಅವರನ್ನಿಬ್ಬರನ್ನೂ ನೋಡಿ 'ಭಿಕ್ಷೆಗೆ ಆಯಿತು' (?) ಎಂದು ಸುಮ್ಮನಾದಳು. ಹೀಗೆ ಗಂಡನಿಗೆ ಆದರದಿಂದ ಮಾತನ್ನು ಹೇಳಿದ ಬಳಿಕ ಆಕೆಯು ಶಾಪವಿಮುಕ್ತಳಾಗಿ ಅಂತರ್ಹಿತಳಾದಳು. ಇಲ್ಲಿ ವಾದವು ಪ್ರಾರಂಭವಾಗಿ 'ಐದಾರು ದಿನಗಳು ನಡೆದವು' ಎಂದು (ವ್ಯಾ. ಶಂ. ೬-೧೦೦) ಹಿಂದೆ ಹೇಳಿದ್ದರಲ್ಲಿ ಆರೇ ಎಂದು ನಿಶ್ಚಿತವಾಗಿ ಹೇಳದೆ ಏಳನೆಯ ದಿನಕ್ಕೆ 'ಭಿಕ್ಷೆಗೆ ಆಯಿತು' -ಎಂದಳು ಎಂಬುದು ಹೊಂದುವದಿಲ್ಲ. ಹೀಗೆಂದೇ ಹೇಳಿ ಅಂತರ್ಧಾನಳಾದಳು ಎಂಬುದು ಇನ್ನೂ ಪೊಂದಿಕೆಯಿಲ್ಲದ ಮಾತು. ಇದನ್ನು ನೋಡಿದರೆ 'ಉಭಯಭಾರತಿಯೊಡನೆ ಆಚಾರ್ಯರಿಗೆ ಈ ಸಂದರ್ಭದಲ್ಲಿ ವಾದವಾಗಲಿಲ್ಲ' ಎಂಬ ಪಕ್ಷಕ್ಕೆ ಅನುಕೂಲವಾಗುವಂತೆ ಯಾರೋ ಇಲ್ಲಿ ಈ ಶ್ಲೋಕವನ್ನು ಮಾಡಿ ಸೇರಿಸಿರುವರೆಂದು ತರ್ಕಿಸಬೇಕಾಗಿದೆ. ಅಥವಾ ಮಾಧವೀಯ (೮-೭೨)ದಲ್ಲಿಯೂ ಇದೇ ಶ್ಲೋಕವಿರುವದರಿಂದ ಭಾರತಿಯೊಡನೆ ಇಲ್ಲಿ ವಾದವಾಗಲಿಲ್ಲವೆಂದೇ ವ್ಯಾಸಾಚಲರ ಮತವಿತ್ತೆಂದೇ ಕಲ್ಪಿಸಬೇಕಾಗುವದು. ಗೋವಿಂದನಾಥನ ಶಂಕರಾಚಾರ್ಯಚರಿತದಲ್ಲಿ 'ಸಪ್ತಮೇಽಹನಿ ವಿಪ್ರೇಂದ್ರೋ ಮಸ್ಕರೀಂದ್ರೇಣ ಧೀಮತಾ | ಪರಾಜಿತಸ್ತದಾ ವಾಣೀ ಭಾವಿಕರ್ಮೇತಿ ನಿಶ್ಚಿತಾ । ಭರ್ತುರಗ್ರೇ ನಿಧಾಯಾಶು ದಣ್ಡಾದೀನ್ ಸೌಮನಸ್ವಿನೀ | ಮುನಿಶಾಪವಿನಿರ್ಮುಕ್ತಾ ತಿರೋಭಾವಂ ಜಗಾಮ ಸಾ ||' (ಗೋ. ೫-೫೯,೬೦) ಗಂಡನ ಮುಂದೆ ದಂಡಾದಿಗಳನ್ನಿಟ್ಟು ಭಾರತಿಯು ಶಾಪಮುಕ್ತಳಾಗಿ ಅಂತರ್ಧಾನಳಾದಳು ಎಂದೂ ಇದೆ.

ಮಾಧವೀಯದಲ್ಲಿ ಮಂಡನನ ಹೆಂಡತಿಯನ್ನು 'ಅಂಬಾ' ಎಂದು ಕರೆದಿರುವದನ್ನು ಲಕ್ಷಿಸಬೇಕು. ಈ ಹೆಸರು ೬೦ನೆಯ ಶ್ಲೋಕದಲ್ಲಿಯೂ ೧೩೨ನೆಯ ಶ್ಲೋಕದಲ್ಲಿಯೂ ಬಂದಿದೆ. ಹಿಂದೆ 'ಉಂಬಾ' (೭-೧೧೬) ಎಂಬ ಹೆಸರು 'ಉಂಬೇಕ'ನ ಹೆಂಡತಿಯಾದ್ದರಿಂದ ಎಂದು ಕವಿಯು ಬರೆದಿದ್ದು ಇಲ್ಲಿ 'ಅಂಬಾ' ಎಂದೇ ಬರೆದಿರುವದೇಕೆ ? ಈ ಎರಡೂ ಹೆಸರುಗಳು ಆಕೆಗಿದ್ದವೆಂದು ಕವಿಯ ಅಭಿಪ್ರಾಯವಿತ್ತೆ ? ಅಥವಾ ಇಲ್ಲಿಯೂ 'ಉಂಬಾ' ಎಂಬ ಪಾಠವನ್ನೇ ಆತನು ಸ್ವೀಕರಿಸಿದ್ದನೆ ?-ಎಂಬುದು ವ್ಯಾಖ್ಯಾನದಿಂದ ಸ್ಪಷ್ಟವಾಗಿಲ್ಲ. ಅಲ್ಲಿ 'ಅಂಬಾ ಸರಸ್ವತೀ' ಎಂದೇ ಇದೆ. ಇಬ್ಬರ ಕೊರಳಿನಲ್ಲಿಯೂ ಹೂವಿನಹಾರವನ್ನು ಹಾಕಿದ್ದಳು ; ಅದು ಬಾಡಿದವರೇ ಸೋತವರು-ಎಂದು ಹೇಳಿ ತಾನು ಕಾರ್ಯಾಂತರದಲ್ಲಿ ವ್ಯಗ್ರಳಾಗಿದ್ದಳು- ಎಂದು ಮೊದಲು ಹೇಳಿದ್ದ ಕವಿಯು ಶಂಕರರ ಯುಕ್ತಿಯನ್ನು ಒಪ್ಪಿದಳು (ಯತಿಕ್ಷಿತಿಪತೇರನುಮೋದ್ಯ ಯುಕ್ತಿಮ್ ಮಾ. ಶಂ. ೧೩೨) ಎಂದು ಬರೆದಿರುವದು ಹೇಗೆ ಸಂಗತವಾಯಿತೆಂಬುದನ್ನು

ವ್ಯಾಖ್ಯಾನಕಾರನು ಹೇಳಿಲ್ಲ. ಆಚಾರ್ಯರ ಯುಕ್ತಿಯು ಬಲವಾಯಿತೆಂಬ ಈ ಅಂಶವನ್ನು ಕೈಬಿಟ್ಟರೆ ಉಳಿಯುವದು ಮಾಲೆಯು ಬಾಡಿದ್ದು. ಇಬ್ಬರ ಕೊರಳಲ್ಲಿಯೂ ಹಾಕಿದ ಮಾಲೆಯು ಅನೇಕ ದಿವಸಗಳವರೆಗೆ ಬಾಡದೆ ಇದ್ದದ್ದು, ಏಕಕಾಲದಲ್ಲಿ ಹಾಕಿದ ಮಾಲೆಗಳೆರಡರೊಳಗೆ ಒಂದು ಮಾತ್ರ ಮೊದಲು ಬಾಡಿದ್ದು ಹೇಗೆಂಬುದು ಆ ಕವಿಗೇ ಗೊತ್ತು. ಕುಮಾರಿಭಟ್ಟರು ಬೆಟ್ಟದಿಂದ ಹಾರಿ, ಅಥವಾ ಉಪ್ಪರಿಗೆಯಿಂದ ಬಿದ್ದು ಮೈಗೆ ಯಾವ ಗಾಯವೂ ಆಗದೆ ಇದ್ದದ್ದು ವೈದಿಕಮತದ ಹೆಚ್ಚುಗಾರಿಕೆಯಿಂದ ಎಂದು ವರ್ಣಿಸಿದ ಕವಿಯು ಹೂಮಾಲೆ ಬಾಡಿದ್ದು ವಾದದಲ್ಲಾದ ಅಪಜಯಕ್ಕೆ ಗುರುತೆಂದು ಹೇಳಿರುವದು ಆತನ ಕಥಾ ಸರಣಿಗೇನೋ ಹೊಂದುತ್ತದೆ.[1] ಆದರೆ ಇದು ನ್ಯಾಯವಾದ ತೀರ್ಮಾನವೆಂದು ಯುಕ್ತ್ಯನುಭವಪ್ರಧಾನರಾದ ಶಂಕರಮಂಡನರಿಬ್ಬರೂ ಒಪ್ಪಿದರೆಂದು ಹೇಗೆತಾನೆ ನಂಬಲಾದೀತು ?

ಚಿದ್ವಿಲಾಸೀಯದಲ್ಲಿ ಹೀಗಿದೆ: ಹದಿನೆಂಟು ವಿದ್ಯೆಗಳ ವಿಷಯಕ್ಕೆ ಹದಿನೆಂಟು ದಿನಗಳವರೆಗೆ ಶಂಕರರು ವಾದಮಾಡಿದರು. ವಿದ್ಯಾಸ್ವಷ್ಟಾದಶ ಸ್ವೇಷ ತತ್ಸಂಖ್ಯಾದಿವಸೈರಪಿ | ವಾಙ್ಮುಖಂ ಸಂಮುಖೀನಃ ಸನ್ಕರ್ತುಮೇವ ಸಮುತ್ಸುಕ (ಚಿ. ಶಂ. ೧೮–೪) ಎಂದಿದೆ. ಹದಿನೆಂಟು ವಿದ್ಯೆಗಳು ಯಾವ ವೆಂಬುದನ್ನೇನೂ ಅಲ್ಲಿ ವಿವರಿಸಿಲ್ಲ. ಕುಮಾರಿಲಭಟ್ಟರ ತಂತ್ರವಾರ್ತಿಕದಲ್ಲಿ– 'ಪರಿಮಿತಾನ್ಯೇವ ಹಿ ಚತುರ್ದಶಾಷ್ಟಾದಶ ವಾ ವಿದ್ಯಾಸ್ಥಾನಾನಿ ಧರ್ಮಪ್ರಮಾಣ ತ್ವೇನ ಶಿಷ್ಟೈಃ ಪರಿಗೃಹೀತಾನಿ– ವೇದೋಪವೇದಾಙ್ಗೋಪಾಙ್ಗಾಷ್ಟಾದಶಧರ್ಮ ಸಂಹಿತಾಪುರಾಣಶಾಸ್ತ್ರಶಿಕ್ಷಾದಣ್ಡನೀತಿಸಂಜ್ಞಕಾನಿ' (ತಂ. ವಾ. ೧–೩–೩–೭, ಪು. ೨೦೧) ಎಂಬಲ್ಲಿ ಧರ್ಮಕ್ಕೆ ಹದಿನೆಂಟು ವಿದ್ಯಾಸ್ಥಾನಗಳು ಬೇಕೆಂದು ಹೇಳಿರುವದನ್ನು ಇಲ್ಲಿ ಪರಾಮರ್ಶಿಸಿದ್ದರೂ ಇರಬಹುದು. ಇಬ್ಬರ ವಾದಕ್ಕೂ ಸಾಕ್ಷಿಯಾಗಿದ್ದ ಸರಸವಾಣಿಯು ಆಚಾರ್ಯರ ವಾಕ್ಯವನ್ನು ಕೇಳಿ ದಿಗ್ಗನೆ ಎದ್ದು –ಪ್ರತಿದಿನವೂ ಗಂಡನನ್ನು ಭೋಜನಕ್ಕೆ, ಯತಿಯನ್ನು ಭಿಕ್ಷೆಗೆ ಕರೆಯುತಿದ್ದ ವಳು– ಈ ಹದಿನೆಂಟನೆಯ ದಿನ ಇಬ್ಬರನ್ನೂ ಭಿಕ್ಷೆಗೆ ಕರೆದಳು (ಚಿ. ಶಂ. ೧೮–೩೮ರಿಂದ ೪೧). ಇಲ್ಲಿ ಸಂನ್ಯಾಸವು ಧರ್ಮವೆ ? –ಎಂಬ ಪ್ರಶ್ನೆಯಿದ್ದದ್ದ ರಿಂದ ಹದಿನೆಂಟು ವಿದ್ಯೆಗಳಲ್ಲಿಯೂ ಚರ್ಚೆಯಾಗಿ ನಿರ್ಣಯವಾಯಿತೆಂಬ ಅಭಿಪ್ರಾಯವು ಗ್ರಂಥಕಾರರಿಗೆ ಇರಬಹುದು. ಇಲ್ಲಿ ಮಾಲೆ ಬಾಡಿದ ಕಥೆಯ ಪರಾಮರ್ಶೆವಿಲ್ಲ.

1. ವಾದದಲ್ಲಿ ಸೋತ ಮಂಡನನ ಮನಸ್ಸಿನ ತಾಪವು ಶರೀರಕ್ಕೂ ಹತ್ತಿತೆಂದು ಕವಿಯ ಕಲ್ಪನೆಯಿರಬಹುದೆ ?

ಅನಂತಾನಂದಗಿರೀಯದಲ್ಲಿ 'ನಿಗಮವೇ ಮುಂತಾದ ಸರ್ವವಿದ್ಯೆಗಳಲ್ಲಿಯೂ ಪ್ರಸಂಗವಾಯಿತು. ನೂರುದಿನಗಳ ಮೇಲೆ ಪತಿಯ ಪಕ್ಷವು ಸ್ಖಲಿತವಾದದ್ದನ್ನು ಕೇಳಿ ಸರ್ವಜ್ಞಳಾದ ಸರಸವಾಣಿಯು ಅಡಿಗೆಯ ಮನೆಯಿಂದ ಗಂಡನ ಬಳಿಗೆಬಂದು 'ನಾಥ ಮಂಡನಮಿಶ್ರ, ಭಿಕ್ಷೆಗೆ ಏಳು' ಎಂದಳು (ಪ್ರ.೫೬, ಪು. ೨೧೬).[1]

ಚಿದ್ವಿಲಾಸೀಯ, ಅನಂತಾನಂದಗಿರಿ –ಇಬ್ಬರೂ ಮಂಡನಪತ್ನಿಯನ್ನು ಸರಸವಾಣಿಯೆಂದೇ ಕರೆದಿರುತ್ತಾರೆ. ಅವರುಗಳು ಕೊರಳಲ್ಲಿ ಮಾಲೆಯನ್ನು ಹಾಕಿದ್ದನ್ನಾಗಲಿ ಅದು ಬಾಡಿದ್ದರಿಂದ ಮಂಡನಾಪಜಯನಿರ್ಣಯವನ್ನು ಮಾಡಿದ ಕಥೆಯನ್ನಾಗಲಿ ಬರೆದಿಲ್ಲ. ಹದಿನೆಂಟು ವಿದ್ಯೆಗಳ ವಿಷಯಕ್ಕೆ ವಾದವಾಯಿತೆಂದು ಚಿದ್ವಿಲಾಸೀಯದಲ್ಲಿ ಹೇಳಿರುವದು ಸಂನ್ಯಾಸವು ಧರ್ಮಶಾಸ್ತ್ರಸಂಮತವೆ ?– ಎಂಬುದನ್ನು ನಿರ್ಣಯಿಸುವದಕ್ಕೆ ಹೇಗೋ ಹೊಂದುಗಡೆಯಾದರೂ ಆಚಾರ್ಯರು ಪ್ರತಿಷ್ಠಾಪನಮಾಡುವದಕ್ಕೆ ಹೊರಟಿದ್ದ ವೇದಾಂತಸಿದ್ಧಾಂತಕ್ಕೆ ಅವುಗಳು ಅಷ್ಟು ಬೇಕಾಗಿರಲಿಲ್ಲ ; ಬೇಕಾಗಿದ್ದರೂ ಅದಕ್ಕೆ ಅಂಗವಾಗಿ ಮಾತ್ರ ಬೇಕಾಗಿದ್ದವು. ಪ್ರಧಾನವಾದ ವೇದಾಂತವಿಚಾರವನ್ನು ಚಿದ್ವಿಲಾಸಯತಿಯು ಬಿಟ್ಟದ್ದೇಕೆಂಬುದು ತಿಳಿಯುವಂತಿಲ್ಲ. ಇನ್ನು ಸರ್ವವಿದ್ಯೆಗಳ ವಿಷಯದಲ್ಲಿಯೂ ನೂರುದಿನಗಳವರೆಗು ವಾದವಾಯಿತೆಂಬ ಅನಂತಾನಂದಗಿರಿಯ ಕಥೆಯು ಪ್ರಕೃತಕ್ಕೆ ಅಸಂಬದ್ಧ ; ಮುಂದೆ ಮಂಡನಭಾರ್ಯೆಯೊಡನೆ ಅಥವಾ ಸರಸ್ವತಿಯೊಡನೆ ಆಚಾರ್ಯರು ವಾದಮಾಡಿದರೆಂಬ ಕಥೆಗೂ ಸಂಗತವಾಗುವದಿಲ್ಲ.

## ಉಭಯಭಾರತಿಯೊಡನೆ ಆದ ವಾದದ ಒಗಟುಗಳು

೧೧೨. ಮಂಡನನು ವಾದದಲ್ಲಿ ಪರಾಜಿತನಾದ ಮೇಲೆ ಆದ ಘಟನೆಗಳು ಶಂಕರವಿಜಯಗಳ ಪ್ರಕಾರ ಇಂತಿವೆ :

**ಮಾಧವೀಯ** : ಗಂಡನು ಸೋತಮೇಲೆ ಭಾರತಿಯು ಆಚಾರ್ಯರನ್ನು ಕುರಿತು 'ದುರ್ವಾಸರು ಹಿಂದೆ ನನಗೆ ಕೊಟ್ಟಿದ್ದ ಶಾಪವು ನಿಮ್ಮ ಜಯವಾಗುವವರೆಗೆ ಎಂದು ಗೊತ್ತಾಗಿತ್ತು. ಆದ್ದರಿಂದ ನಾನು ಹೊರಡುತ್ತೇನೆ' ಎಂದು ತನ್ನ ಲೋಕಕ್ಕೆ ಹೋಗಲನುವಾದಳು. ಆಗ ತಮ್ಮ ಮತವೊಂದೇ ಸರಿಯಾದದ್ದೆಂದು ತೋರಿಸಿಕೊಡುವದಕ್ಕಾಗಿ (ಸ್ವಮತೈಕ್ಯಸಿದ್ಧ್ಯೈ)–ತಾವು ಸರ್ವಜ್ಞರೆಂದು ಎಲ್ಲರಿಂದಲೂ ಸನ್ಮಾನಿಸಲ್ಪಡಬೇಕೆಂದಲ್ಲ–ಸರಸ್ವತಿಯನ್ನು ಜಯಿಸಬೇಕೆಂದು ಆಚಾರ್ಯರು ಆಕೆಯನ್ನು ಅರಣ್ಯದುರ್ಗಾಮಂತ್ರದಿಂದ ಬಂಧಿಸಿ ನೀನು ಸರಸ್ವತಿ ಎಂಬುದನ್ನು ನಾನು ಬಲ್ಲೆ ; ನಿನ್ನ ಭಕ್ತನಾದ ನಾನು ಅನುಜ್ಞೆಯನ್ನು

1. ಇಲ್ಲಿ ದೇ.ಪಾಠದಲ್ಲಿ ಏನೋ ಹೆಚ್ಚುಕಡಿಮೆಯಾಗಿದೆ, ಅನವಶ್ಯವಾದ ಮಾತುಗಳೂ ಸೇರಿಕೊಂಡಿವೆ.

ಕೊಟ್ಟಮೇಲೆ ನೀನು ಹೋಗಬಹುದು' ಎಂದರು. (ಮಾ. ಶಂ. ೮–೧೩೩ರಿಂದ ೧೩೬), ಮಂಡನನು ತಮ್ಮಿಂದ ವಾದದಲ್ಲಿ ಜಿತನಾಗಿ ತಮ್ಮ ಶಿಷ್ಯನಾಗಬೇಕೆಂದು ಬಯಸಲು ಶಂಕರರು ಅವನನ್ನು ಅನುಗ್ರಹಿಸಬೇಕೆಂಬ ಇಚ್ಛೆಯಿಂದ ಅವನ ಹೆಂಡತಿಯ ಮುಖವನ್ನು ನೋಡಲು (೯–೪೫) ಆಕೆಯು 'ನನ್ನ ಬಾಲ್ಯದಲ್ಲಿ ಒಬ್ಬ ಯತಿಯು ನನ್ನ ಭವಿಷ್ಯದ್ವೃತ್ತಾಂತವನ್ನು ಹೇಳಿದ್ದನು ; ಅದರಂತೆಯೇ ಈಗ ನಡೆದಿದೆ. ಆದರೆ ನೀವು ನನ್ನ ಗಂಡನನ್ನು ಪೂರ್ಣವಾಗಿ ಜಯಿಸಿಲ್ಲ ; ಇವನ ಅರ್ಧಾಂಗಿಯಾದ ನನ್ನನ್ನು ಜಯಿಸಿ, ಇವನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳಿರಿ. ತಾವು ಜಗತ್ಕಾರಣನೂ ಸರ್ವಜ್ಞನೂ ಆದ ಪರಮಪುರುಷನೇ ಆದರೂ ನಿಮ್ಮೊಡನೆಯೇ ವಾದಮಾಡಬೇಕೆಂಬ ಕುತೂಹಲವು ನನಗೆ ಉಂಟಾಗಿದೆ, (೯–೫೬, ೫೭) ಎಂದಳು ಈ ಮಾತು ಯುಕ್ತಿಯುಕ್ತವಾದದ್ದರಿಂದ ಆಚಾರ್ಯರು ಅದಕ್ಕೆ ಒಪ್ಪಿದರು.

ಚಿದ್ವಿಲಾಸೀಯ : ಮಂಡನನು ಆಚಾರ್ಯರಿಗೆ ಪ್ರದಕ್ಷಿಣನಮಸ್ಕಾರವನ್ನು ಮಾಡಿ 'ಸಂನ್ಯಾಸವನ್ನು ನಿಂದಿಸಿ ನಾನು ಹೇಳಿದ್ದನ್ನೆಲ್ಲ ಕ್ಷಮಿಸಿ ನನಗೆ ಅದ್ವೈತಜ್ಞಾನವನ್ನು ಉಪದೇಶಿಸಬೇಕು' ಎಂದು ಬೇಡಿಕೊಂಡನು. ಅದರಂತೆ ಆಚಾರ್ಯರು ಅವನಿಗೆ ಸಂನ್ಯಾಸವನ್ನು ಕೊಟ್ಟರು. (ಚಿ. ಶಂ. ೧೮–೪೩ರಿಂದ ೪೫). ಇದೆಲ್ಲವನ್ನೂ ಕಂಡು ದುರ್ವಾಸಶಾಪಮುಕ್ತಳಾದ ವಾಣಿಯು ಶಂಕರರನ್ನು ಸ್ತುತಿಸಿ ಸತ್ಯಲೋಕಕ್ಕೆ ಹೋಗುವದಕ್ಕೆ ಉದ್ಯುಕ್ತಳಾದಳು (ಚಿ. ಶಂ. ೧೮–೪೭). ಆಗ ಆಚಾರ್ಯರು ಆಕೆಯನ್ನು ವನದುರ್ಗಾವಿದ್ಯೆಯಿಂದ ಬಂಧಿಸಿ 'ನನ್ನೊಡನೆ ಪ್ರಸಂಗವನ್ನು ಮಾಡಿ ನನ್ನನ್ನು ಜಯಿಸದೆ ಎಲ್ಲಿಗೆ ಹೋಗುತ್ತಿದೀಯೆ?' ಎಂದರು. ೧೯–೩ರಿಂದಳ). ಆಕೆ 'ಯತಿಪುಂಗವನೆ, ನಾನು ಯಾರೆಂಬುದು ನಿಮಗೆ ತಿಳಿಯಲಿಲ್ಲ, ನನ್ನನ್ನು ಪ್ರಸಂಗದಲ್ಲಿ ಜಯಿಸುವದು ನಿಮ್ಮಿಂದ ಎಂದಿಗೂ ಆಗಲಾರದು. ಆಕಾಶದಲ್ಲಿರುವ ನನಗೂ ಭೂಮಿಯ ಮೇಲಿರುವ ನಿಮಗೂ ಪ್ರಸಂಗವು ತಾನೆ ಹೇಗೆ ಆಗಬೇಕು. ? ನಿಮ್ಮ ದರ್ಶನದಿಂದ ನಾನು ದೂರ್ವಾಸರ ಶಾಪದಿಂದ ಮುಕ್ತಳಾಗಿರುವೆನು. ಆದ್ದರಿಂದ ಸತ್ಯಲೋಕಕ್ಕೆ ಹೋಗಲು ನನಗೆ ಅನುಜ್ಞೆಯನ್ನು ಕೊಡಿರಿ' ಎಂದಳು. ಮತ್ತೆ ಹೋಗುವದಕ್ಕೆ ಪ್ರಾರಂಭಿಸಿದ ಆಕೆಯನ್ನು ವನದುರ್ಗೆಯ ಮಂತ್ರದಿಂದ ಗಟ್ಟಿಯಾಗಿ ಕಟ್ಟಿಹಾಕಿ ವಾದಮಾಡುವದಕ್ಕೆ ಪ್ರಾರಂಭಿಸಿದರು (೧೯–೫ರಿಂದ ೧೦).

ಆ ನ ಂ ದ ಗಿ ರಿ ೀ ಯ: ಸರಸವಾಣಿಯು ಪತಿಯು ಯತ್ಯಾಶ್ರಮವನ್ನು ಗ್ರಹಿಸುವ ಹಿಂದಿನ ಕ್ಷಣದಲ್ಲಿಯೇ ಅಡಿಗೆಮನೆಯ ಗವಾಕ್ಷದ್ವಾರದಿಂದ ಗಗನಕ್ಕೆ ಹಾರಿ ಬ್ರಹ್ಮಲೋಕಕ್ಕೆ ಹೋಗುತ್ತಿರುವದನ್ನು ಕಂಡು ಪರಮಗುರುವು ಆಕೆಯನ್ನು ವನದುರ್ಗಾಮಂತ್ರದಿಂದ ದಿಗ್ಬಂಧನವನ್ನು ಮಾಡಿ 'ಎಲೈ,

ಸರಸವಾಣಿಯೆ, ನೀನು ಬ್ರಹ್ಮಶಕ್ತಿಯಾದರೂ ಅವನ ಅಂಶಭೂತನಾಗಿರುವ ಮಂಡನಮಿಶ್ರನ ಪತ್ನಿಯಂತೆ ಉಪಾಧಿಯಿಂದ ತೋರುತ್ತಿರುವೆ ಆದ್ದರಿಂದ ನನ್ನೊಡನೆ ಪ್ರಸಂಗವನ್ನು ಮಾಡಿಹೋಗು' ಎಂದರು. ಆಕೆಯು 'ಪತಿಯ ಸಂನ್ಯಾಸಕ್ಕಿಂತ ಮೊದಲೇ ವೈಧವ್ಯಭಯದಿಂದ ನಾನು ಕರ್ಮಫಲವನ್ನು ಕೊಡುವ ಪೃಥಿವಿಯನ್ನು ಬಿಟ್ಟುಬಿಟ್ಟಿದೇನೆ ಆದ್ದರಿಂದ ಮತ್ತೆ ಪೃಥಿವಿಯನ್ನು ನಾನು ಮುಟ್ಟಲಾರೆನು. ಭೂಮಿಯಮೇಲಿರುವ ನಿಮ್ಮೊಡನೆ ಹೇಗೆ ಪ್ರಸಂಗ ಮಾಡುವದು?' ಎಂದಳು. ಅವರು 'ತಾಯೆ, ಹೀಗಿದ್ದರೂ ನೆಲದಿಂದ ಆರು ಹಸ್ತಗಳ ಎತ್ತರದಲ್ಲಿ ಆಕಾಶದಲ್ಲಿಯೇ ಇರು. ವಾಕ್ಪ್ರಸಂಗವಾದಮೇಲೆ ಹೋಗುವೆಯಂತೆ' (ಪ್ರ. ೬೬ ಪು. ೨೧೭; ದೇ. ಪ್ರ. ೧೮೫, ೧೮೬) ಎಂದರು.

## ಉಭಯಭಾರತೀವಾದದ ವಿಮರ್ಶೆ :

೧೧೩. ಈಗ ಈ ಭಾಗದ ವಿಮರ್ಶೆಗೆ ಹೊರಡೋಣ.

(೧) **ಸರಸವಾಣಿಯು ದೂರ್ವಾಸಶಾಪದಿಂದ ಮನುಷ್ಯಳಾಗಿ ಹುಟ್ಟಿದಳೆಂಬ ಕಥೆಯು ಎಲ್ಲಾ ಶಂಕರವಿಜಯಗಳಲ್ಲಿಯೂ ಇದೆಯಾದರೂ** ಆಕೆಯ ಹೆಸರು 'ಸರಸವಾಣಿ' ಎಂದು ಚಿದ್ವಿಲಾಸ, ಆನಂದಗಿರಿ– ಇಬ್ಬರೂ ಹೇಳುತ್ತಾರೆ. ಅದು ಆಕೆಗೆ ತಂದೆತಾಯಿಗಳು ಇಟ್ಟ ಹೆಸರೋ ಅಥವಾ ವಿದ್ಯಾವಂತಳಾಗಿ ಸರಸವಾಗಿ ಮಾತಾಡುತ್ತಿದ್ದಳೆಂಬ ಕಾರಣದಿಂದ ಶಂಕರವಿಜಯಕಾರರು ಕಲ್ಪಿಸಿದ ಹೆಸರೋ ತಿಳಿಯುವಹಾಗಿಲ್ಲ. ಅದು ಆಕೆಯ ಅಂಕಿತನಾಮವೆಂದು ಇಟ್ಟುಕೊಂಡರೂ ಬಾಧಕವಿಲ್ಲ. ಆಕೆಯ ವಿದ್ವತ್ತನ್ನು ಮನಸ್ಸಿನಲ್ಲಿಟ್ಟುಕೊಂಡು 'ವಾಣೀ' ಎಂಬ ಹೆಸರಿನ ಆಧಾರದಿಂದ ಆಕೆಯು ಸರಸ್ವತಿಯೇ ಎಂದು ಕಲ್ಪಿಸಿರಬಹುದಾಗಿದೆ. 'ಭಾರತೀ' ಎಂಬ ಹೆಸರೂ ಅಂಥದ್ದೇ. 'ಉಭಯಭಾರತೀ' ಎಂಬ ಹೆಸರನ್ನು ಶಂಕರಮಂಡನರಿಬ್ಬರಿಗೂ ಆಕೆ ಮಧ್ಯಸ್ಥಳೆಂಬುದನ್ನು ಸೂಚಿಸುವದಕ್ಕಾಗಿ ಮಾಧವಾದಿಗಳು ಕಲ್ಪಿಸಿರಬಹುದು. ಆಮೇಲೆ ಆಕೆ ಸರ್ವಜ್ಞಳೆಂದು ತಿಳಿಸುವದಕ್ಕಾಗಿ ಸರಸ್ವತಿಯ ಅವತಾರವೇ ಎಂದು ದುರ್ವಾಸಶಾಪದ ಕಥೆಯು ಹಬ್ಬಿಕೊಂಡಿರಬಹುದು. ಮಾಧವಕವಿಯೇ ಅಲ್ಲದೆ ಇನ್ನೂ ಕೆಲವರು 'ಉಭಯಭಾರತಿ' ಎಂಬ ಹೆಸರನ್ನು ಒಪ್ಪಿದ್ದರೆಂಬುದಕ್ಕೆ ಬೇರೊಂದು ಸಾಕ್ಷಿಯಿರುತ್ತದೆ. **ಗುರುರತ್ನಮಾಲಿಕೆಯ**

ಪರಕೀಯವಪುಃ ಪ್ರವೇಶಶೈಲ್ಯಾ
  ಸ್ಮರತನ್ತ್ರಾಣಿ ವಿದನ್ವಶೀ ನ ಲೌಲ್ಯಾತ್ ।
ಅಕೃತಾತನುಭಾರತೀಂ ವಶೇ ಯಃ
  ಸುಕೃತಂ ಮೇ ಸುತರಾಂ ಗುರುಃ ಸ ಜೀಯಾತ್ ॥ ೨೯ ॥

ಎಂಬ ಪದ್ಯವನ್ನು ವ್ಯಾಖ್ಯಾನಮಾಡುವಾಗ ಸುಷಮಾಕಾರರಾದ ಆತ್ಮಬೋಧರು "ಇದಂ ಪದ್ಯಮತ್ರತ್ಯಾಃ ಕತಿಪಯೇ ಕಾಮರಾ (ಶ್ರೀಮದಾ)ಚಾರ್ಯವಿಜಯ ವಿದ್ಯಾಶಙ್ಕರವಿಜಯಾದಿಷು ನಿಷಣ್ಣಬುದ್ಧಯಃ 'ಅಕೃತೋಭಯಭಾರತೀಮ್' ಇತಿ ಯತ್ಕಿಞ್ಚಿತ್ಪದವ್ಯತ್ಯಯೇನ ಪಟುಮಣ್ಡನಮಿಶ್ರೇತಿ ಪದ್ಯಸಮನನ್ತರಂ ಪಠನ್ತಿ" ಈ ಪದ್ಯವನ್ನು ಇಲ್ಲಿಯ ಕೆಲವರು ಆಚಾರ್ಯವಿಜಯ, ವಿದ್ಯಾಶಂಕರ ವಿಜಯ– ಮುಂತಾದವುಗಳಲ್ಲಿ ಅಭಿಮಾನವುಳ್ಳ ಬುದ್ಧಿಯವರಾಗಿ 'ಅಕೃತೋಭಯಭಾರತೀಮ್' ಎಂದು ಸ್ವಲ್ಪ ಬದಲಾಯಿಸಿದ ಪಾಠವನ್ನಿಟ್ಟುಕೊಂಡು 'ಪಟುಮಣ್ಡನಮಿಶ್ರ' ಎಂಬ (೩೯ನೆಯ) ಪದ್ಯದಮೇಲೆ ಪಠಿಸಿರುತ್ತಾರೆ– ಎಂದು ಬರೆದಿದ್ದಾರೆ. 'ವಿದ್ಯಾಶಂಕರವಿಜಯ' ಎಂಬುದು ಆತ್ಮಬೋಧರು ಮಾಧವೀಯಶಂಕರವಿಜಯಕ್ಕೆ ಇಟ್ಟುಕೊಂಡಿರುವ ಹೆಸರೆಂದು ಕಾಣಿಸುತ್ತದೆ. ಅವರ ಕಡೆಯವರಲ್ಲಿಯೂ ಕೆಲವರು ಗುರುರತ್ನಮಾಲಿಕಾಕಾರರು ಉಭಯಭಾರತಿ ಎಂಬ ಹೆಸರನ್ನೊಪ್ಪಿ ಮಂಡನಮಿಶ್ರನ ಪರಾಜಯವಾದಮೇಲೆಯೇ ಸರಸ್ವತಿಯನ್ನು ಆಚಾರ್ಯರು ಜಯಿಸಿದರೆಂದು ಹೇಳಿರುತ್ತಾರೆಂದು ಅಭಿಪ್ರಾಯಪಟ್ಟಿದ್ದರು. ಅದನ್ನು ಆತ್ಮಬೋಧರು ಇಲ್ಲಿ ಖಂಡಿಸಿರುತ್ತಾರೆ. ಕಾಂಚೀಪೀಠದ ಸಂಪ್ರದಾಯದವರಲ್ಲಿಯೂ ಸರಸ್ವತಿಯನ್ನು ಜಯಿಸಿದ್ದು ಯಾವಾಗ– ಎಂಬ ವಿಷಯಕ್ಕೆ ಮತಭೇದವಿತ್ತೆಂದು ಇದರಿಂದ ಏರ್ಪಡುತ್ತದೆ. ಈ ವಿಷಯವನ್ನು ಮತ್ತೊಮ್ಮೆ ಪ್ರಸ್ತಾಪಿಸಲಿರುವೆವು.

(೨) **ದೂರ್ವಾಸಶಾಪದ** ವಿಷಯಕ್ಕೆ ಆತ್ಮಬೋಧರು ಹೀಗೆಂದು ಬರೆದಿರುತ್ತಾರೆ : ಯೇ ತ್ವಭಿನವೋದ್ದಣ್ಡವಿದ್ಯಾರಣ್ಯಸ್ವಾಮಿಭಿರಾರಚಿತೇ ವಿದ್ಯಾಶಙ್ಕರವಿಜಯೇ ಶಿವರಹಸ್ಯವಚನತ್ವೇನ ಪ್ರತಿಪಾದಿತಾಃ 'ದೂರ್ವಾಸಃ ಶಾಪತೋ ಭೂಮೌ ಜಾತಾಂ ವಾಣೀಮ್....ಇತ್ಯಾದಯಃ ಶ್ಲೋಕಾಃ, ತೇ ನ ಕ್ವಾಪಿ ಶಿವರಹಸ್ಯಪ್ರಾಚೀನಮಾತೃಕಾಸೂಪಲಭ್ಯನ್ತ ಇತ್ಯಪ್ರಾಮಾಣಿಕಮೇವ (ಅಪ್ರಮಾಣಿಕಾ ಏವ ?) ಇತಿ ಸರ್ವಂ ಶಿವಮ್ ||' ಅಭಿನವೋದ್ದಂಡವಿದ್ಯಾರಣ್ಯಸ್ವಾಮಿಗಳಿಂದ ರಚಿತವಾದ ವಿದ್ಯಾಶಂಕರವಿಜಯದಲ್ಲಿ ಶಿವರಹಸ್ಯವಚನವೆಂದು ಪ್ರತಿಪಾದಿತವಾಗಿರುವ 'ದೂರ್ವಾಸಃ ಶಾಪತೋ ಭೂಮೌ ಜಾತಾಂ ವಾಣೀಮ್' ಮುಂತಾದ ಶ್ಲೋಕಗಳು ಶಿವರಹಸ್ಯದ ಯಾವ ಪ್ರಾಚೀನಮಾತೃಕೆಗಳಲ್ಲಿಯೂ ಕಾಣಬರುವದಿಲ್ಲವಾದ್ದರಿಂದ ಅಪ್ರಾಮಾಣಿಕವೇ– ಎಂದು ಬರೆದಿರುವ ವಾಕ್ಯವು ಆತ್ಮಬೋಧರೇ ಬರೆದಿದ್ದರೆ ? ಇಲ್ಲಿ ಪರಾಮೃಷ್ಟವಾಗಿರುವ 'ಅಭಿನವೋದ್ದಂಡವಿದ್ಯಾರಣ್ಯಸ್ವಾಮಿಗಳು' ಯಾರು ? ಆತ್ಮಬೋಧರು ಮಾಧವಕವಿಗೇ ಹಾಗೆಂದು ಹೆಸರಿಟ್ಟುಕೊಂಡು ಕರೆದಿರುವರೆ ? ಹಾಗೆ ಕಾಣಿಸುವದಿಲ್ಲ. ಏಕೆಂದರೆ 'ಅಭಿನವೋದ್ದಂಡವಿದ್ಯಾರಣ್ಯಸ್ವಾಮಿಗಳು ರಚಿಸಿರುವ ವಿದ್ಯಾಶಂಕರ

ವಿಜಯದಲ್ಲಿ' ಶಿವರಹಸ್ಯದ ಶ್ಲೋಕಗಳನ್ನು ಉದಾಹರಿಸಿದೆ ಎನ್ನುತ್ತಾರೆ ; ಆದರೆ ಆ ಶ್ಲೋಕಗಳೇನೂ ಮಾಧವೀಯದಲ್ಲಿ ಕಾಣಿಸುತ್ತಿಲ್ಲ. ಆ ಶ್ಲೋಕಗಳನ್ನು ನಾವು (೧ನೆಯ) ಪರಿಶಿಷ್ಟದಲ್ಲಿ ಉದಾಹರಿಸಿರುತ್ತೇವೆ. ಶ್ರೀಕಕರಾಲಸುಂದರ ರಾಮಯ್ಯನೆಂಬವರು ನಮಗೆ ಕಳುಹಿಸಿರುವ ಶ್ರೀಶೃಂಗೇರಿಮಠ (Sri Sringeri Sarada Mutt) ಎಂಬ ಗ್ರಂಥದಲ್ಲಿ ಕೊಟ್ಟಿರುವ ಪಾಠದಲ್ಲಿ ಅವು ಇರುತ್ತವೆ. ಮದರಾಸಿನಲ್ಲಿ ಶ್ರೀಮುಖಸಂವತ್ಸರದ ಆಶ್ವಯುಜ ಬಹುಳ ಸೌಮ್ಯ ವಾಸರದ ದಿನ ತೆಲುಗು ಅಕ್ಷರಗಳಿಂದ ಅಚ್ಚಾಗಿ ಕಲ್ಯಾಣರಾಮಶಾಸ್ತ್ರಿಗಳು ಪ್ರಕಟಿಸಿರುವ ಒಂದು ಪುಸ್ತಕದಲ್ಲಿಯೂ ಅವು ಇವೆಯೆಂದು ಸೋಮನಾಥಯ್ಯ ನವರಿಂದ (ಸೋ. ಶಂ. ಪ್ರ. ೮) ತಿಳಿದುಬರುತ್ತದೆ. 'ಬೃಹಚ್ಛಂಕರವಿಜಯ, ಕೇರಳೀಯಶಂಕರವಿಜಯ, ಪ್ರಾಚೀನಶಂಕರವಿಜಯ, ವ್ಯಾಸಾಚಲೀಯ- ಮುಂತಾದವುಗಳಲ್ಲಿ' ಬೇರೆಯ ರೀತಿಯಲ್ಲಿಯೇ ಇದೆ ಎಂದು ಇದೇ ಶ್ಲೋಕದ ಸುಷಮಾ ವ್ಯಾಖ್ಯಾನದಲ್ಲಿ ಆತ್ಮಬೋಧರು ಬರೆದಿರುತ್ತಾರೆ. ನಮ್ಮಲ್ಲಿರುವ ವ್ಯಾಸಾಚಲೀಯದ ಕೈಬರಹದ ಪ್ರತಿಯಲ್ಲಿ ದೂರ್ವಾಸಶಾಪದ ವಿಷಯವು ಇದೆಯಾದ್ದರಿಂದ ಅದು ಆತ್ಮಬೋಧರು ಪರಾಮರ್ಶಿಸಿರುವ ವ್ಯಾಸಾಚಲೀಯವಾಗಿರಲಾರದೆಂದು ಹೇಳಬೇಕಾಗಿದೆ. ಆ ಪ್ರತಿಯು ನಿಜವಾದ ವ್ಯಾಸಾಚಲೀಯವೇ ಆಗಲಿ, ಕೃತ್ರಿಮಗ್ರಂಥವೇ ಆಗಲಿ, ಅದರಲ್ಲಂತೂ ಉಭಯಭಾರತಿಯೊಡನೆ ವಾದವು ನಡೆಯಿತೆಂಬ ಸೊಲ್ಲಿಲ್ಲ. ಅದಕ್ಕೆ ಬದಲಾಗಿ ಮಂಡನವಾದವಾದ ಬಳಿಕ ಆಕೆಯು ಕೂಡಲೆ ಶಾಪವಿಮುಕ್ತಳಾಗಿ ಅಂತರ್ಧಾನಳಾದಳು (ಅನ್ತರ್ದಧೇ ಸುವದನಾ ಕಿಲ ಶಾಪಮುಕ್ತಾ ವ್ಯಾ. ಶಂ. ೬—೧೦೨) ಎಂದು ಸ್ಪಷ್ಟವಾಗಿ ಹೇಳಿದೆ ಎಂದು ಆಗಲೆ (ಪು. ೧೬೬) ಹೇಳಿರುತ್ತೇವೆ. 'ಅಭಿನವೋದ್ದಂಡವಿದ್ಯಾರಣ್ಯಸ್ವಾಮಿ'ಗಳೆಂಬವರೊಬ್ಬರು ಇದ್ದು 'ವಿದ್ಯಾಶಂಕರವಿಜಯ'ವೆಂಬ ಹೆಸರಿನ ಗ್ರಂಥವನ್ನು ಬರೆದಿದ್ದರೆ ? ಅದರಲ್ಲಿ ಶಿವರಹಸ್ಯದ ಶ್ಲೋಕಗಳು ಇದ್ದವೆ ?- ಎಂಬುದೂ ಪರಿಶೋಧನೀಯವಾಗಿದೆ. ಕೂಡಲಿ ಶೃಂಗೇರಿಯ ಗುರುಪರಂಪರೆಯಲ್ಲಿ 'ಅಭಿನವ ವಿದ್ಯಾರಣ್ಯಸ್ವಾಮಿ'ಗಳೆಂಬವರೊಬ್ಬರು (ಶಾ. ಶ. ೧೫೬೫—೧೫೮೬) ಇದ್ದಾರೆ ; ಅವರು ಶಂಕರವಿಜಯವನ್ನು ಬರೆದಿದ್ದರೊ, ಇಲ್ಲವೊ, ತಿಳಿಯದು, ಇದೆಲ್ಲ ಹೇಗಾದರೂ ಇರಲಿ. ದೂರ್ವಾಸಶಾಪವನ್ನು ಒಪ್ಪಿದ ಕಾಂಚೀಪೀಠಸಂಪ್ರದಾಯಾನುಯಾಯಿಗಳಾದ ಕೆಲವು ಗ್ರಂಥಕರ್ತರೂ ಇದ್ದರೆಂದು ಆತ್ಮಬೋಧರ ವಾಕ್ಯದಿಂದ ಅನುಮಾನಿಸುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ.

(೩) **ಶಂಕರರಿಗೂ ಉಭಯಭಾರತಿಗೂ ಆದ ವಿವಾದವನ್ನು ಯಾರು ಮೊದಲು ಆರಂಭಿಸಿದರು ?** -ಎಂಬುದೂ ಪರಿಶೀಲನೀಯವಾಗಿದೆ. ತಮ್ಮ ಮತವು ಸರ್ವಸಂಮತವೆಂದು ಸಿದ್ಧಪಡಿಸುವದಕ್ಕಾಗಿ ಶಂಕರಾಚಾರ್ಯರೇ

ಅಂತರಿಕ್ಷದಲ್ಲಿದ್ದ ಆಕೆಯನ್ನು ನಿರ್ಬಂಧಿಸಿದರೆಂದು (ತಾಂ ಜೇತುಮುನಾ ಮುನೀನ್ದ್ರಃ |.... ಸ್ವಮತೈಕ್ಯಸಿದ್ಧ್ಯೈ ೮-೧೩೮) ಎಂದು ಮಾಧವಕವಿ ಮೊದಲು ಹೇಳಿರುತ್ತಾನೆ. ಆದರೆ ಮುಂದೆ ಭಾರತಿಯು 'ಮಂಡನನ ಅರ್ಧಾಂಗಿಯಾದ ನನ್ನನ್ನು ಜಯಿಸಿಲ್ಲ; ನನ್ನನ್ನು ಜಯಿಸಿ ಇವನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳಿ (ವಪುರರ್ಧಮಸ್ಯ ನ ಜಿತಾ ಮತಿಮನ್ನಪಿ ಮಾಂ ವಿಜಿತ್ಯ ಕುರು ಶಿಷ್ಯಮಿಮಮ್ ೯-೫೬). 'ನಿಮ್ಮೊಡನೆಯೇ ವಾದಮಾಡುವ ಕುತೂಹಲವು ನನಗಿದೆ' (ತ್ವಯೈವ ಸಹ ವಾದಕೃತೇ ಹೃದಯಂ ಬಿಭರ್ತಿ ಮಮ ತೂತ್ಕಲಿಕಾಮ್ ೯-೫೭) ಎಂದು ಹೇಳಿದಂತೆ ಬರೆದಿರುತ್ತಾರೆ. ಇವೆರಡರಲ್ಲಿ ಯಾವುದು ನಿಜ ? ಶಂಕರಾಚಾರ್ಯರೇ ಸರಸವಾಣಿಯನ್ನು ವಾದಕ್ಕೆ ಕೆಣಕಿದರೆಂದು ಚಿದ್ವಿಲಾಸೀಯದಲ್ಲಿಯೂ ಆನಂದಗಿರೀಯದಲ್ಲಿಯೂ ಇದೆಯಷ್ಟೆ? ಅದು ನಿಜವಾದರೆ ಆಚಾರ್ಯರು ವಾದಮಾಡಬೇಕಾದ ಆವಶ್ಯಕತೆಯೇನಿತ್ತೆಂಬುದು ಸ್ಪಷ್ಟವಾಗುವದಿಲ್ಲ.

(೪) ಶಂಕರಭಾರತೀಸಂವಾದವು ಮಂಡನನ ಸಂನ್ಯಾಸಕ್ಕಿಂತ ಮೊದಲೊ, ಆಮೇಲೊ' ಮಾಧವೀಯದಂತೆ ಸಂನ್ಯಾಸಕ್ಕಿಂತ ಮೊದಲೇ ಎಂದು ತೋರುತ್ತದೆ. ಚಿದ್ವಿಲಾಸೀಯದಂತೆ ಸಂನ್ಯಾಸವಾದಮೇಲೆ ಈ ವಾದವಾಯಿತು. ಆನಂದಗಿರೀಯದಂತೆ ಮೊದಲೇ ಆಯಿತು.

(೫) ವಶಮುಗ್ರಾಮಂತ್ರದಿಂದ ಆಚಾರ್ಯರು ಸರಸ್ವತಿಯನ್ನು ಬಂಧಿಸಿದರೆಂದು ಉಪಲಬ್ಧವಾಗಿರುವ ಕಥೆಯು ಎಲ್ಲಾ ಶಂಕರವಿಜಯಗಳಲ್ಲಿದೆ. ಆಚಾರ್ಯರು ಮಂತ್ರಶಾಸ್ತ್ರವನ್ನು ಯಾವಾಗ ಯಾರಲ್ಲಿ ಅಭ್ಯಾಸಮಾಡಿದರೋ ತಿಳಿಯದು.

(೬) ಇನ್ನೊಂದು ವಿಷಯವನ್ನು ಇಲ್ಲಿ ವಾಚಕರ ಮುಂದಿಟ್ಟು ಈ ಪ್ರಕರಣದ ವಿಮರ್ಶೆಯನ್ನು ಮುಗಿಸುವೆವು. ಮಂಡನನಿಗೆ ಆಚಾರ್ಯರು ಆಶ್ರಮವನ್ನುಕೊಟ್ಟ ಬಳಿಕ ಸುರೇಶ್ವರನೆಂಬ ಹೆಸರನ್ನು ಕೊಟ್ಟರು ಎಂದು ('ತತಃ ಸಮಾದಿಶ್ಯ ಸುರೇಶ್ವರಾಖ್ಯಾಮ್' ಮಾ. ಶಂ. ೧೦-೧೦೪,'ಸುರೇಶ್ವರಾಚಾರ್ಯ ಇತಿ ಮುದಾಭಿಖ್ಯಾಮುದಾತ್ತದಾ' ಚಿ.ಶಂ. ೧೮ ೪೬) ಮಾಧವೀಯ, ಚಿದ್ವಿಲಾಸೀಯಗಳಲ್ಲಿ ಬಾಯಿಬಿಟ್ಟು ಹೇಳಿದೆ; ಆದರೆ ಆನಂದಗಿರೀಯದಲ್ಲಿ ಮಂಡನಮಿಶ್ರನು ಪರಮಗುರುವಿನ ಚರಣಾರವಿಂದಕ್ಕೆ ನಮಸ್ಕರಿಸಿ ಆತನ ಉಪದೇಶದಿಂದ ಸಂನ್ಯಾಸಿಯಾಗಿ ಕುಬೇರದಿಕ್ಕಿಗೆ ಹೊರಟುಹೋದನು (ತದಾನೀಂ ಮಣ್ಡನಮಿಶ್ರಃ ಪರಮಗುರುಚರಣಾರವಿನ್ದಂ ನತ್ವಾ ತದುಪದೇಶೇನ ಸಂನ್ಯಾಸೀಭೂತ್ವಾ ಕುಬೇರದಿಶಮನುವ್ರಜತ್ ಪ್ರ.೫೬, ಪು.೨೧೬, ದೇ.ಪು. ೧೮೫)ಎಂದಿದ್ದೇ ಇದೆ; ಮಂಡನಮಿಶ್ರನನ್ನು ಗೆಲ್ಲುವವಕ್ಕೆ ಹೊರಟಾಗಲೇ ಪದ್ಮಪಾದಸುರೇಶ್ವರಾದಿಗಳು ಆಚಾರ್ಯರೊಡನೆ ಇದ್ದರೆಂದು (ವನ್ದಿಮಾಗಧಕೃತಸ್ತವೈಃ, ಪದ್ಮಪಾದ

ಸುರೇಶ್ವರಾದಿ ಕೃತ್ಯೈಕರತಾಪ್ತೈಃ....ಪ್ರ. ೫೬– ಪು. ೨೨೨) ಹೇಳಿವೆ. ಹಾಗಾದರೆ[1] ಮಂಡನನಿಗೆ ಆಚಾರ್ಯರು ಕೊಟ್ಟ ಆಶ್ರಮನಾಮವು ಯಾವದು ? ಆತನು ಉತ್ತರದಿಕ್ಕಿಗೆ ಹೋಗಿ ಮುಂದೆ ಏನು ಮಾಡಿದನು ? ಆನಂತಾನಂದ ಗಿರೀಯದಂತೆ ಸುರೇಶ್ವರಾಚಾರ್ಯರು ಪೂರ್ವಾಶ್ರಮದಲ್ಲಿ ಯಾರು ?

## ಭಾರತಿಯು ಕಾಮಶಾಸ್ತ್ರವಿಷಯವಾಗಿ ಕೇಳಿದ್ದು

೧೧೪. ಈಗ ಕಥೆಯನ್ನು ಮುಂದಕ್ಕೆ ಸಾಗಿಸೋಣ. ಆಚಾರ್ಯರಿಗೂ ಉಭಯಭಾರತಿಗೂ ಆದ ವಾದದ ವೃತ್ತಾಂತವನ್ನು ಸಂಗ್ರಹಿಸಿ ಆ ಮೇಲೆ ಅದನ್ನು ವಿಮರ್ಶಿಸುವದಕ್ಕೆ ತೊಡಗೋಣ.

ಮಾಧವೀಯ : ವಾದಕ್ಕೆ ಕರೆದ ಭಾರತಿಯನ್ನು ಕುರಿತು ಶಂಕರರು 'ಕೀರ್ತಿವಂತರು ಸ್ತ್ರೀಯರೊಡನೆ ವಾದಮಾಡಿಯಾರೆ ?' ಎನ್ನಲು, ಆಕೆ 'ತಮ್ಮ ಪಕ್ಷವನ್ನು ಪ್ರತಿಭಟಿಸುವವರು ಸ್ತ್ರೀಯರಾಗಲಿ,ಪುರುಷರಾಗಲಿ, ಸ್ವಪಕ್ಷವನ್ನು ರಕ್ಷಿಸಿಕೊಳ್ಳುವದಕ್ಕಾಗಿ ವಾದಮಾಡಲೇಬೇಕಲ್ಲವೆ ? ಯಾಜ್ಞವಲ್ಕ್ಯನು ಗಾರ್ಗಿಯೊಡನೆಯೂ ಜನಕನು ಸುಲಭೆಯೊಡನೆಯೂ ವಾದಿಸಲಿಲ್ಲವೆ ? ಎಂದಳು. (೯–೫೯, ೬೦, ೬೧) ಆಕೆಯ ಮಾತು ಯುಕ್ತವಾಗಿದ್ದರಿಂದ ಆಚಾರ್ಯರು ಅದಕ್ಕೆ ಒಪ್ಪಿದರು. ಇಬ್ಬರಿಗೂ ಹದಿನೇಳು ದಿನ ವಾದವಾಯಿತು (೯–೬೫). ಆಗ ಶಾರದೆಯು ಇವರನ್ನು ಮತ್ತೆ ಯಾವ ಶಾಸ್ತ್ರದಲ್ಲಿಯೂ ಗೆಲ್ಲುವದಾಗಲಾರದೆಂದು ತಿಳಿದು ಬಾಲಸಂನ್ಯಾಸಿಯಾಗಿದ್ದ ಅವರಿಗೆ ಪರಿಚಯವಿಲ್ಲದಿದ್ದ ಕಾಮಶಾಸ್ತ್ರದಲ್ಲಿ ಪ್ರಶ್ನೆಮಾಡಿದಳು[2] (೯–೬೭ರಿಂದ ೬೯). ಅವುಗಳಿಗೆ ಉತ್ತರವನ್ನು ಹೇಳುವದು ಯತಿಧರ್ಮಕ್ಕೆ ಭಂಗಕಾರಕ, ಹೇಳದೆಇರುವದು ಅಸರ್ವಜ್ಞತಾ ಸೂಚಕ ; ಏನುಮಾಡಲಿ ?– ಎಂದು ಶಂಕರರು ಯೋಚಿಸಿ ಕೊನೆಗೆ ಒಂದು ತಿಂಗಳು ಅವಧಿಯನ್ನು ಕೊಟ್ಟರೆ ಇದಕ್ಕೆ ಉತ್ತರವನ್ನು ಹೇಳುವೆನು ಎಂದರು. ಹಾಗೇ ಆಗಲೆಂದು ಆಕೆ ಒಪ್ಪಿದ್ದರಿಂದ ಯೋಗಶಕ್ತಿಯಿಂದ ಆಕಾಶಮಾರ್ಗದಲ್ಲಿ ಹೊರಟರು (೯–೭೦ರಿಂದ ೭೩).

1. ದೇ. ಪಾಠದಲ್ಲಿ 'ಸುರೇಶ್ವರ' ಎಂಬ ಹೆಸರು ಇಲ್ಲವಾದ್ದರಿಂದ ಹಾಗಾದರೆ ಎಂದು ಬರೆದಿದೇವೆ.

2. ಭಾರತಿಯು ಕೇಳಿದ ಕಾಮಕಲೆಗಳೇ ಮುಂತಾದ ವಿಚಾರಗಳನ್ನೂ ಅವುಗಳಿಗೆ ಆಚಾರ್ಯರು ಕೊಟ್ಟಿರಬಹುದಾದ ಉತ್ತರಗಳನ್ನೂ ಇಲ್ಲಿ ಅನವಶ್ಯವೆಂದು ಬಿಟ್ಟಿರುತ್ತೇವೆ. ವಾತ್ಸ್ಯಾಯನಕಾಮಸೂತ್ರಪಞ್ಚಸಾಯಕಾದಿಗ್ರಂಥಗಳಲ್ಲಿ ಈ ವಿಷಯವು ಪ್ರತಿಪಾದಿತವಾಗಿರುತ್ತದೆ.

ಚಿದ್ವಿಲಾಸೀಯ : ಅವರಿಬ್ಬರಿಗೂ ಆದ ವಾದದಲ್ಲಿ ಎಂಟು ದಿನಗಳು ಕಳೆದವು. ಆಗ ವಾಣಿಯು ಕಾಮಶಾಸ್ತ್ರದಲ್ಲಿ ಪ್ರಶ್ನೆಯನ್ನು ಹಾಕಿದಳು. ಆಚಾರ್ಯರು ಒಂದು ತಿಂಗಳ ಅವಧಿಯನ್ನು ಕೇಳಿಕೊಂಡು ಹೊರಟರು (ಚಿ. ೧೫-೧೭ರಿಂದ ೧೮).

ಆನಂದಗಿರೀಯ : ಆ ಸರಸ್ವತಿಯು ಆಚಾರ್ಯರು ಕೇಳಿಕೊಂಡಂತೆ ಆಕಾಶದಲ್ಲಿಯೇ ಇದ್ದುಕೊಂಡು ಸರ್ವಶಾಸ್ತ್ರಗಳಲ್ಲಿಯೂ, ವೇದ, ಇತಿಹಾಸ, ಪುರಾಣಗಳಲ್ಲಿಯೂ ಸಮಗ್ರವಾಗಿ ಪ್ರಸಂಗವನ್ನು ಮಾಡಿ ಆ ಯತಿಯನ್ನು ತಿರಸ್ಕರಿಸುವದಕ್ಕಾಗಿ ಆತನಿಗೆ ದುಷ್ಪ್ರವೇಶವಾದ ಕಾಮಕಲಾಶಾಸ್ತ್ರದಲ್ಲಿ ನಾಯಿಕಾನಾಯಕಭೇದವನ್ನೂ ಕಲೆಗಳ ವಿವರವನ್ನೂ ಕೇಳಿದಳು. ಅವರು ಸುಮ್ಮನಾದರು (ಪ್ರ. ೫೭. ಪು. ೨೧೭, ದೇ. ಪು. ೧೫೬). ಆಗ ಸರಸವಾಣಿ ನಿಮಗೆ ತಿಳಿಯದ ಶಾಸ್ತ್ರಾಂತರವೂ ಇದೆಯಷ್ಟೆ ?' ಎಂದು ಕೇಳಲು, ಭವಿಷ್ಯಜ್ಜ್ಞಾನಿಗಳಾದ ಪರಮಗುರುಗಳು 'ತಾಯಿಯೆ, ಇಲ್ಲಿಯೇ ಆರು ತಿಂಗಳು ಇರು ; ಬಳಿಕ ಕಲಾದಿಗಳ ವಿಷಯದಲ್ಲಿ ನಿರ್ಣಯವನ್ನು ಹೇಳುವೆನು' ಎಂದರು (ಪ್ರ. ೫೮; ಪು. ೨೧೮, ದೇ. ಪು ೧೫೬).

ಈ ಪ್ರಸಂಗವು ನಡೆಯಿತೆ ? ಎಂಬುದೇ ವಾದಗ್ರಸ್ತವಾಗಿದೆ ಎಂದು ಆಗಲೆ ಹೇಳಿರುತ್ತೇವೆ. ಒಂದುವೇಳೆ ನಡೆದಿದ್ದರೂ ವಾದವು ಎಷ್ಟು ದಿನಗಳವರೆಗೆ ಜರುಗಿತು ಎಂಬುದಕ್ಕೆ ಶಂಕರವಿಜಯಗಳಲ್ಲಿ ಐಕಮತ್ಯವಿಲ್ಲ. ಆಚಾರ್ಯರೇ ಭಾರತಿಯನ್ನು ಪ್ರಸಂಗಕ್ಕೆ ಕರೆದವರೆಂಬುದು ಅಸಂಗತ ; ವೇದಾಂತಸಿದ್ಧಾಂತದ ನಿರೂಪಣೆಗೆ ಹೊರಟ ಆಚಾರ್ಯರು ಸಕಲಶಾಸ್ತ್ರಗಳ ವಿಷಯದಲ್ಲಿಯೂ ವಿವಾದ ಮಾಡುವದಕ್ಕೆ ಹೊರಟರೆಂಬುದು ಇನ್ನೂ ಅಸಂಗತ. ಸರಸ್ವತಿಯ ಅವತಾರವೆಂದು ಪ್ರಸಿದ್ಧಳಾಗಿದ್ದ ಭಾರತಿಯು ಅಥವಾ ಸರಸವಾಣಿಯು ಪ್ರಕೃತಚರ್ಚೆಗೆ ಸಂಬಂಧ ಪಡದ ಕಾಮಶಾಸ್ತ್ರವನ್ನು ಕುರಿತು ಪ್ರಶ್ನೆಯನ್ನು ಪರಪುರುಷನೊಬ್ಬನಿಗೆ ಹಾಕಿದಳೆಂಬುದಂತೂ ಅಸಂಗತವು ಮಾತ್ರವೇ ಅಲ್ಲ, ಆಕೆಯ ಯೋಗ್ಯತೆಗೂ ಕಳಂಕವನ್ನು ಹತ್ತಿಸುವಂಥದ್ದು. ಆಚಾರ್ಯರಾಗಲಿ ಸಭಿಕರಾಗಲಿ ಇಂಥ ಅಯೋಗ್ಯಪ್ರಶ್ನೆಯು ಹಾಕತಕ್ಕದ್ದಲ್ಲವೆಂದು ಏಕೆ ಹೇಳಲಿಲ್ಲವೆಂಬುದೂ ಗೊತ್ತಾಗುವದಿಲ್ಲ: ಆಚಾರ್ಯರು ತಾವು ಸರ್ವಜ್ಞರೆಂಬುದನ್ನು ತೋರ್ಪಡಿಸಿಕೊಳ್ಳುವದಕ್ಕಾಗಿ ಕಾಮಶಾಸ್ತ್ರಪರಿಚಯಕ್ಕೆ ಒಂದು ತಿಂಗಳ ಅಥವಾ ಆರುತಿಂಗಳ ಅವಧಿಯನ್ನು ಕೇಳಿದರೆಂದು ಕಲ್ಪಿಸುವದು ಅವರು ದುರಭಿಮಾನವುಳ್ಳವರೆಂದೂ ಪವಿತ್ರಚರಿತ್ರರಲ್ಲವೆಂದೂ ಹೊರಪಡಿಸುವದಕ್ಕೆ ಸಾಧನವಾದೀತೇ ಹೊರತು ಅವರ ಯೋಗ್ಯತೆಗೆ ತಕ್ಕದ್ದಾಗಿಲ್ಲ. ಈ ಕಲ್ಪಿತಕಥೆಯು ಪರಮತದವರಿಗೆ ಆಚಾರ್ಯರು ನೀತಿಬಾಹ್ಯರೆಂದು ಪ್ರಕಟಿಸುವದಕ್ಕೊಂದು ಅವಕಾಶವನ್ನು ಮಾಡಿಕೊಟ್ಟೀತೇ ಹೊರತು

ಇದರಿಂದ ಆ ಮಹನೀಯರ ಯೋಗ್ಯತೆಯು ಪ್ರದರ್ಶನಕ್ಕೆ ಎಳ್ಳಷ್ಟೂ ಸಹಾಯ್ಯ ವಾಗಲಿಲ್ಲ. ಶಂಕರದ್ವೇಷಿಯಾದ ನಾರಾಯಣಪಂಡಿತನು ಮಣಿಮಂಜರಿಯಲ್ಲಿ ಪರಕಾಯಪ್ರವೇಶವನ್ನು ಹೇಳದಿದ್ದರೂ ಭಾರತಿಯು ನಡತೆಯ ವಿಷಯಕ್ಕೆ ಅವಾಚ್ಯವಾದ ಕಥೆಯನ್ನೇ ಕಲ್ಪಿಸಿರುತ್ತಾನೆ.

## ಪರಕಾಯಪ್ರವೇಶ

೧೧೫. ಮುಂದಿನ ಕಥೆಯನ್ನು ಕೇಳೋಣ. ಉಭಯಭಾರತಿಯ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವದಕ್ಕೆ ಒಂದು ಅಥವಾ ಆರು ತಿಂಗಳ ಬಿಡು ವನ್ನು ಕೇಳಿಕೊಂಡು ಶಿಷ್ಯರೊಡನೆ ಆಕಾಶಮಾರ್ಗದಿಂದ ಹೊರಟ ಆಚಾರ್ಯರು (ಮಾ. ಶಂ. ೯–೭೩) ವರುಣದಿಕ್ಕಿಗೆ ಇದ್ದ ಅಮೃತಪುರವೆಂಬ ಪಟ್ಟಣವನ್ನು (ಚಿ. ಶಂ. ೧೯–೨೦, ಆ. ಶಂ. ಪ್ರ. ೫೮, ಪು. ೨೧೮, ದೇ. ೧೮೦) ಸೇರಿದರು. ಅವರೊಡನೆ ಪದ್ಮಪಾದರೇ ಮುಂತಾದ ನಾಲ್ವರೇ ಶಿಷ್ಯರಿದ್ದರು (ಚಿ. ಶಂ. ೧೬–೧೯), ಹಸ್ತಾಮಲಕ, ಪದ್ಮಪಾದ, ವಿಧಿವಿದ್, ಆನಂದಗಿರಿ– ಎಂದು ಅವರ ಹೆಸರು (ಆ. ಶಂ. ಪು. ೨೧೪). ಆ ರಾಜನ ಹೆಸರು **ಅಮರಕ** (ಮಾ. ಶಂ. ೯–೭೭) ಅಥವಾ **ಅಮರೇಶ್ವರ** (ಚಿ; ಶಂ. ೧೯–೪೦). ಆತನು ರಾತ್ರಿಯಲ್ಲಿ ಬೇಟೆಗಾಗಿ ಬಂದಿದ್ದು ಅಡವಿಯಲ್ಲಿ ಮರದ ಕೆಳಗೆ ಮೂರ್ಛೆಯನ್ನು ಹೊಂದಿ ಸತ್ತುಬಿದ್ದಿದ್ದನು (ಮಾ. ಶಂ. ೯–೭೫); ಅಥವಾ ನೂರು ಜನರ ಹೆಂಡಿರೂ ಪೌರವೃದ್ಧರೂ ಮೃತನಾದ ರಾಜನ ಶರೀರವನ್ನು ಶ್ಮಶಾನಕ್ಕೆ ತಂದು ಚಿತೆಯ ಮೇಲೆ ಏರಿಸಿದ್ದರು (ಚಿ. ಶಂ. ೧೯–೨೨, ೨೩, ಆ. ಶಂ. ಪ್ರ. ೫೪–೨೧೪, ದೇ. ಪು. ೧೮೦). ಆಗ ಆಚಾರ್ಯರು ಸನಂದನನನ್ನು ಕುರಿತು 'ನೂರು ಜನ ಹೆಂಡಿರುಳ್ಳ ಈ ಅಮರಕನು ಸತ್ತುಬಿದ್ದಿದ್ದಾನೆ; ಇವನ ಶರೀರವನ್ನು ಯೋಗ ಸಾಮರ್ಥ್ಯದಿಂದ ಹೊಕ್ಕು ಇವನ ಮಗನಿಗೆ ಪಟ್ಟವನ್ನು ಕಟ್ಟಿ ಮತ್ತೆ ಬರ ಬೇಕೆಂದು ಮಾಡಿರುತ್ತೇನೆ. ಈತನ ಹೆಂಡಿರನ್ನು ಸಾಕ್ಷಾತ್ತಾಗಿ ನೋಡಿಕೊಂಡು ಬರುವೆನು' ಎಂದರು. ಆಗ ಸನಂದನನು 'ತಾವು ಸರ್ವಜ್ಞರಾದ್ದರಿಂದ ತಮಗೆ ಎಲ್ಲವೂ ತಿಳಿದಿದ್ದರೂ ಬಿನ್ನವಿಸಿಕೊಳ್ಳುತ್ತೇನೆ. ಹಿಂದಕ್ಕೆ **ಮತ್ಸ್ಯೇಂದ್ರನು** ತನ್ನ ಶಿಷ್ಯನಾದ **ಗೋರಕ್ಷನನ್ನು** ಶರೀರರಕ್ಷಣೆಗೆ ಇಟ್ಟು ಒಬ್ಬ ರಾಜನ ಶರೀರವನ್ನು ಸೇರಿ ಪ್ರಜೆಗಳಿಗೆಲ್ಲ ಸುಖವಾಗುವಂತೆ ಮಾಡಿ ರಾಜ್ಯಭಾರವನ್ನು ಮಾಡುತ್ತಿರಲು ಮಂತ್ರಿವರ್ಯರ ಪ್ರೇರಣೆಯಂತೆ ರಾಣಿಯರು ಆತನನ್ನು ವಶ ಪಡಿಸಿಕೊಂಡರು; ಗೋರಕ್ಷನು ಆತನಿಗೆ ತತ್ತ್ವಬೋಧದಿಂದ ವೈರಾಗ್ಯವನ್ನು ಉಂಟುಮಾಡಿ ಹಿಂತಿರುಗಿಸಬೇಕಾಯಿತು. ಇದಲ್ಲದೆ ಇದು ಊರ್ಧ್ವರೇತಸ್ಕ ರಾದ ತಮ್ಮ ವ್ರತಕ್ಕೆ ಭಂಗವನ್ನು ಮಾಡಿ ಪಾಪವನ್ನು ತಂದೊಡ್ಡೀತು. ಇದ ನ್ನೆಲ್ಲ ತಾವೇ ಯೋಚಿಸಬೇಕು' ಎಂದನು. ಆಗ ಆಚಾರ್ಯರು 'ನೀನು ಹೇಳಿದ್ದೇ ಸರಿ. ಆದರೆ ಅಸಂಗನಾದ ನನಗೆ– ಕೃಷ್ಣನಿಗೆ ಗೋಪಸ್ತ್ರೀಯರ

ಸಂಗದಿಂದ ಹೇಗೋ ಹಾಗೆ ಕಾಮವುಂಟಾಗಲಾರದು. ವಜ್ರೋಲಿಯೋಗ ವನ್ನು ಬಲ್ಲೆನಾದ್ದರಿಂದ ಯತಿಧರ್ಮಭಂಗವೂ ಆಗಲಾರದು. ದೇಹಾದ್ಯಾತ್ಮ ಬುದ್ಧಿಯುಳ್ಳ ಅಜ್ಞರಿಗೆ ವಿಧಿಪ್ರತಿಷೇಧಶಾಸ್ತ್ರಗಳೇ ಹೊರತು ತತ್ತ್ವಜ್ಞರಿಗಲ್ಲ; ಜ್ಞಾನಿಯು ವೇದದ ತಲೆಯಮೇಲೆ ನಿಂತಿರುವವನಾದ್ದರಿಂದ ಅವನು ವಿಧಿಕಿಂಕರ ನಲ್ಲ. ಪರಮಾತ್ಮನಿಗಿಂತ ವ್ಯತಿರಿಕ್ತವಾದ ಜಗತ್ತು ಸರ್ವಥಾ ಇಲ್ಲ ಎಂಬ ಜ್ಞಾನವಿರುವವನಿಗೆ ಕರ್ಮಲೇಪವಿಲ್ಲ. ಜ್ಞಾನಿಯಾದ ಇಂದ್ರನಿಗೆ ಅವನು ಮಾಡಿದ ಪಾಪಗಳು ಅಂಟಲಿಲ್ಲ: ಜನಕನು ಬಹುದಕ್ಷಿಣಯಜ್ಞಗಳನ್ನು ಮಾಡಿದರೂ ಆ ಪುಣ್ಯದಿಂದ ದೇಹಾಂತರವನ್ನು ಪಡೆಯಲಿಲ್ಲ, ಅಭಯವನ್ನೇ ಪಡೆದನು. ಆದ್ದರಿಂದ ಕಾಮಶಾಸ್ತ್ರಪರಿಶೀಲನೆಯಿಂದ ಯಾವ ದೋಷವೂ ಬರಲಾರದು. ಶಿಷ್ಟಾಚಾರಪರಿಪಾಲನೆಗಾಗಿ ಪರಕಾಯಪ್ರವೇಶದ ಮೂಲಕ ವಾಗಿ ಈ ಕಾರ್ಯವನ್ನು ಮಾಡುವೆನಾದ್ದರಿಂದ ಯಾವ ದೋಷವೂ ಇಲ್ಲ' ಎಂದು (ಮಾ. ಶಂ. ೯–೭೬ ರಿಂದ ೧೦೦) ಸಮಾಧಾನಪಡಿಸಿದರು. ಆಮೇಲೆ ತಮ್ಮ ಶರೀರವನ್ನು ಕಾಪಾಡಿಕೊಂಡಿರುವಂತೆ ಶಿಷ್ಯರಿಗೆ ಹೇಳಿ ಬೆಟ್ಟದಲ್ಲಿದ್ದ ಒಂದು ಗುಹೆಯಲ್ಲಿ (ಮಾ. ಶಂ. ೯–೧೦೩) ಅಥವಾ ಮರದ ಪೊಟರೆಯಲ್ಲಿ (ಚಿ. ಶಂ. ೧೯–೩೪) ಶರೀರವನ್ನು ಇಟ್ಟು ಯೋಗಬಲದಿಂದ ಬ್ರಹ್ಮರಂಧ್ರ ಮಾರ್ಗದಿಂದ ಆಪಾದಾಗ್ರವಾಗಿ ಮೆಲ್ಲಮೆಲ್ಲಗೆ ಮೃತಶರೀರವನ್ನು ಹೊಕ್ಕರು. ರಾಜನು ಬದುಕಿದ್ದನ್ನು ಕಂಡು ಎಲ್ಲರೂ ಹರ್ಷಿತರಾದರು (ಮಾ. ಶಂ. ೯–೧೦೧ ರಿಂದ ೧೦೯).

ಹೀಗೆ ಸತ್ತುಬದುಕಿದ ರಾಜನನ್ನು ಪುರೋಹಿತಾದಿಗಳು ಶಾಂತಿಯನ್ನು ಮಾಡಿಸಿ ಪುರದ ಒಳಕ್ಕೆ ಕರೆದುಕೊಂಡು ಹೋದರು. ರಾಜನು ಮಂತ್ರಿಗಳ ಸಹಾಯದಿಂದ ರಾಜ್ಯವನ್ನು ಆಳುವದಕ್ಕೆ ಮೊದಲುಮಾಡಿದನು. ಅವನ ಗುಣಗಳು ಮೊದಲಿಗಿಂತ ತೀರಭಿನ್ನವಾಗಿರುವದನ್ನೂ ರಾಜ್ಯವು ಅಭಿವೃದ್ಧಿಹೊಂದಿ ರುವದನ್ನೂ ಕಂಡು ಮಂತ್ರಿಗಳು (ಮಾ. ಶಂ. ೧೧–೯) ಈ ಶರೀರದಲ್ಲಿ ಯಾವನೋ ಮಹಾತ್ಮನು ಹೊಕ್ಕಿರಬೇಕು; ಆದ್ದರಿಂದ ಈತನು ಮತ್ತೆ ಹಿಂದಿನ ದೇಹವನ್ನು ಪ್ರವೇಶಿಸದಂತೆ ನೋಡಿಕೊಳ್ಳಬೇಕು ಎಂದುಕೊಂಡು 'ಎಲ್ಲಿ ಶವ ವನ್ನು ಕಂಡರೂ ಯಾವ ವಿಚಾರವನ್ನೂ ಮಾಡದೆ ಕೂಡಲೆ ಸುಟ್ಟುಬಿಡಬೇಕು' ಎಂದು ಗುಟ್ಟಾಗಿ ಆಜ್ಞೆಯನ್ನು ಮಾಡಿದರು. ಮೊದಲು ಈ ರಹಸ್ಯವನ್ನು ಕಂಡುಕೊಂಡು ಹೀಗೆ ಆಜ್ಞೆಮಾಡಿಸಿದವಳು ರಾಜನ ಜ್ಯೇಷ್ಠಪತ್ನಿ ಎಂದು ಮಿಕ್ಕ ಎರಡು ಶಂಕರವಿಜಯಗಳಲ್ಲಿದೆ (ಚಿ. ಶಂ. ೧೯–೩೮ ರಿಂದ ೪೩; ಆ. ಶಂ. ಪ್ರ. ೫೮, ದೇ. ಪು. ೧೮೭) ಹೊಸ ರಾಜನು ರಾಜ್ಯಭಾರವನ್ನು ಮಂತ್ರಿಗಳಿಗೊಪ್ಪಿಸಿ ತಾನು ವಿವಿಧವಿಷಯಸುಖಗಳನ್ನು ಅನುಭವಿಸುತ್ತಿದ್ದನು. ಆ ಸಂದರ್ಭದಲ್ಲಿ ವಾತ್ಸ್ಯಾಯನಸೂತ್ರಗಳನ್ನೂ ಅವುಗಳ ಮೇಲಿನ ಭಾಷ್ಯವನ್ನೂ ಚೆನ್ನಾಗಿ

ನೋಡಿ ತಾನೂ ಅಭಿನವಾರ್ಥಗರ್ಭಿತವಾದ ಒಂದು ನಿಬಂಧವನ್ನು ಬರೆದನು (ಮಾ. ಶಂ. ೧೦-೧೮).

## ಪರಕಾಯಪ್ರವೇಶದ ಕಥೆಯ ವಿಮರ್ಶೆ

೧೧೬. **ಈ ಕಥೆ ನಿಜವಾಗಿ ನಡೆದದ್ದರ ವರ್ಣನೆಯಾಗಿದ್ದೀತೆ ?** ರಾಜನು ಬೇಟೆಗೆ ಬಂದಿದ್ದು ಮೂರ್ಛೆಹೋಗಿ ಸತ್ತು ಮರದ ಕೆಳಗೆ ಬಿದ್ದಿದ್ದನೆಂದು ಮಾಧವೀಯ; ಸತ್ತಮೇಲೆ ರಾಜನ ಶರೀರವನ್ನು ಶ್ಮಶಾನಕ್ಕೆ ತಂದು ಚಿತೆಯಮೇಲೆ ಏರಿಸಿದ್ದರೆಂದು ಚಿದ್ವಿಲಾಸೀಯ, ಮತ್ತು ಆನಂದಗಿರೀಯ. ಬೆಟ್ಟದ ಗವಿಯಲ್ಲಿ ಶಂಕರರು ತಮ್ಮ ಶರೀರವನ್ನು ಬಿಟ್ಟಿದ್ದರೆಂದು ಮಾಧವೀಯ; ಮರದ ಪೊಟ್ಟರೆಯಲ್ಲಿಟ್ಟರೆಂದು ಚಿದ್ವಿಲಾಸೀಯ- ಹೀಗೆಲ್ಲ ಕಥಾವೈಲಕ್ಷಣ್ಯವಿದೆ. ಘಟನೆಯು ನಡೆದು ಬಹುಕಾಲವಾದಮೇಲೆ ಗ್ರಂಥಕರ್ತರು ತಾವು ಕೇಳಿದ್ದಂತೆ ಕಥೆಯನ್ನು ಬರೆದರೊ, ಅಥವಾ ಕಥೆಯೇ ಕಲ್ಪಿತವೊ ? ಆಚಾರ್ಯರು ಪಾದಾಂಗುಷ್ಠದಿಂದ ಮೊದಲುಮಾಡಿ ವಾಯುವನ್ನೆಳೆದುಕೊಂಡು ಬ್ರಹ್ಮರಂಧ್ರದ ಮೂಲಕ ಹೊರಕ್ಕೆ ಬಂದು ರಾಜನ ಶರೀರವನ್ನು ಬ್ರಹ್ಮರಂಧ್ರದಿಂದ ಹೊಕ್ಕು ಪಾದಾಗ್ರದವರೆಗೂ ಪ್ರವೇಶಿಸಿದರು- ಎಂದು (ಮಾ.ಶಂ. ೯-೧೦೫)ಮಾಧವಕವಿ ವರ್ಣಿಸಿರುತ್ತಾನೆ. **'ಬನ್ಧಕಾರಣಶೈಥಿಲ್ಯಾತ್ ಪ್ರಚಾರಸಂವೇದನಾಚ್ಚ ಚಿತ್ತಸ್ಯ ಪರಶರೀರಪ್ರವೇಶಃ'** (ಯೋ. ಸೂ. ೩-೩೮) ಎಂದು ವಿಭೂತಿಪಾದದಲ್ಲಿ ಯೋಗಸೂತ್ರವಿದೆ. ಈ ಸೂತ್ರವನ್ನು ಭಾಷ್ಯದಲ್ಲಿ ಹೀಗೆಂದು ವಿವರಿಸಿದೆ: "ಚಂಚಲವಾಗಿರುವ ಮನಸ್ಸು ನಿಲುಗಡೆಯಿಲ್ಲದೆಇರುವದಷ್ಟೆ ? ಅದು ಕರ್ಮಾಶಯದ ವಶದಿಂದ ಶರೀರದಲ್ಲಿ ಬದ್ಧವಾಗಿರುತ್ತದೆ; ಬಂಧವೆಂದರೆ ನಿಲುಗಡೆ. ಆ ಬಂಧಕ್ಕೆ ಕಾರಣವಾಗಿರುವ ಕರ್ಮವು ಸಮಾಧಿಬಲದಿಂದ ಸಡಿಲವಾಗುತ್ತದೆ. ಚಿತ್ತದ ಪ್ರಚಾರವನ್ನು ಅರಿತುಕೊಳ್ಳುವದು ಸಮಾಧಿಯಿಂದಲೇ ಉಂಟಾಗುತ್ತದೆ. (ಹೀಗೆ) ಕರ್ಮಬಂಧವು ನಾಶವಾಗುವದರಿಂದಲೂ ತನ್ನ ಚಿತ್ತದ ಪ್ರಚಾರವನ್ನು ಅರಿತುಕೊಳ್ಳುವದರಿಂದಲೂ ಯೋಗಿಯು ಚಿತ್ತವನ್ನು ತನ್ನ ಶರೀರದಿಂದ ಈಚೆಗೆ ಎಳೆದುಕೊಂಡು ಬೇರೆಯ ಶರೀರಗಳಲ್ಲಿ ಇಡುತ್ತಾನೆ ಹಾಗೆ ಇಟ್ಟ ಚಿತ್ತವನ್ನು ಇಂದ್ರಿಯಗಳು ಅನುಸರಿಸಿಕೊಂಡು ಹೋಗುತ್ತವೆ. ಹೇಗೆ ಜೇನುಗಳ ಮುಂದಾಳನ್ನು ಉಳಿದ ನೊಣಗಳು ಅನುಸರಿಸಿಯೇ ಹಾರುವವೋ, ಅದು ಕೂತುಕೊಂಡರೆ ತಾವೂ ಕೂತುಕೊಳ್ಳುವವೋ ಹಾಗೆ ಚಿತ್ತವು ಮತ್ತೊಂದು ಶರೀರವನ್ನು ಹೋಗಲು ಇಂದ್ರಿಯಗಳು ತಾವೂ ಅದನ್ನು ಹೋಗುವವು." ಈ ಭಾಷ್ಯವನ್ನು ಓದಿದಮೇಲೂ ನಮಗೆ ಶರೀರದಲ್ಲಿ ನಿಂತಿರುವ ಮನಸ್ಸನ್ನು ಸಡಿಲಿಸಿ ಹೊರಕ್ಕೆ ತೆಗೆಯುವದಕ್ಕಾಗಲಿ ಮತ್ತೊಂದು ಶರೀರದೊಳಗೆ ಹೊಗಿಸುವದಕ್ಕಾಗಲಿ ಆಗುವದಿಲ್ಲ. ಹಾಗೆ ಮಾಡಬಹುದೆಂದು ಶಾಸ್ತ್ರೀಯವಾಗಿ ಮನದಟ್ಟುಮಾಡಿಕೊಡುವ ಮಹಾತ್ಮರೂ ನಮ್ಮ ಕಣ್ಣಿಗೆ ಬಿದ್ದಿಲ್ಲ. ಆದ್ದರಿಂದ ಪರಕಾಯಪ್ರವೇಶವು ಸಾಧ್ಯವೆ, ಅಲ್ಲವೆ ?-

ಎಂಬ ವಿಷಯಕ್ಕೆ ಯಾವ ನಿಶ್ಚಿತವಾದ ಅಭಿಪ್ರಾಯವನ್ನೂ ನಾವು ಕೊಡುವ ದಾಗಿಲ್ಲ. ಆಚಾರ್ಯರು ಒಂದು ಸಣ್ಣ ಕಾರ್ಯಕ್ಕಾಗಿ ಪರಕಾಯ ಪ್ರವೇಶವನ್ನು ಮಾಡಿರಬಹುದೆ? ಅವರಿಗೆ ಈ ವಿದ್ಯೆ ಯಾರಿಂದ ದೊರಕಿತು?– ಎಂಬಿವು ಮಾತ್ರ ಪರಿಶೀಲನೀಯಪ್ರಶ್ನೆಗಳಾಗಿವೆ.

## ಪದ್ಮಪಾದರಿಗೂ ಆಚಾರ್ಯರಿಗೂ ಆದ ಸಂಭಾಷಣೆಯ ವಿಮರ್ಶೆ

೧೧೭. ಪರಕಾಯಪ್ರವೇಶವನ್ನು ನಿಷೇಧಿಸಿದ **ಪದ್ಮಪಾದರ ಯುಕ್ತಿಗಳು ದುರ್ಬಲವೆ?** ಆಚಾರ್ಯರು ಹೇಳಿದರೆಂದು ಮಾಧವಕವಿ ವರ್ಣಿಸಿರುವ ಯುಕ್ತಿಗಳು ಪ್ರಬಲವೆ?– ಎಂಬುದನ್ನು ಈಗ ಪರೀಕ್ಷಿಸೋಣ. ಪರಕಾಯ ಪ್ರವೇಶವನ್ನು ಮಾಡಬಾರದೆಂಬುದಕ್ಕೆ ಪದ್ಮಪಾದರು ಎರಡು ಕಾರಣಗಳನ್ನು ಹೇಳಿರುತ್ತಾರೆ: (೧) ಮತ್ಸ್ಯೇಂದ್ರನು ರಾಜಶರೀರವನ್ನು ಪ್ರವೇಶಿಸಿದಾಗ ಭೋಗಾ ಸಕ್ತನಾಗಿ ತನ್ನನ್ನು ತಾನೇ ಮರೆತಂತೆ ಈಗಲೂ ಆಗಬಹುದು– ಎಂಬ ಶಂಕೆ ಯೊಂದು; (೨) ಯತ್ಯಾಶ್ರಮಕ್ಕೆ ಇದರಿಂದ ಭಂಗವುಂಟಾಗಬಹುದೆಂಬುದು ಇನ್ನೊಂದು. ಮತ್ಸ್ಯೇಂದ್ರನು ಆಚಾರ್ಯರ ಕಾಲಕ್ಕಿಂತ ಹಿಂದಿನವನೊ, ಅಲ್ಲವೊ– ಎಂಬುದನ್ನು ಐತಿಹಾಸಿಕರು ನಿಶ್ಚಯಿಸಲಿ. ಪರಕಾಯಪ್ರವೇಶಕನಿಗೆ ಅವನಂತೆ ಭೋಗಾಸಕ್ತನಾಗುವ ಅಪಾಯವಿದೆ ಎಂಬುದು ನಿಶ್ಚಿತ; ಪ್ರಕೃತದಲ್ಲಿ ಹಾಗೆಯೇ ಆಯಿತೆಂದು ಶಂಕರವಿಜಯಕಾರರು ಹೇಳುತ್ತಾರೆ. ಇನ್ನು ಪ್ರಕೃತ ಪರಕಾಯಪ್ರವೇಶದಿಂದ ಯತಿಧರ್ಮಕ್ಕೆ ಕುಂದಿಲ್ಲ– ಎಂಬುದಕ್ಕೆ ಆಚಾರ್ಯರು ಕೊಟ್ಟರೆಂಬ ಯುಕ್ತಿಗಳನ್ನು ಈಗ ಪರಿಶೀಲಿಸೋಣ: (1) ಶ್ರೀಕೃಷ್ಣನಿಗೆ ಗೋಪಸ್ತ್ರೀಯರ ಸಂಬಂಧದಿಂದ ಹೇಗೆ ಕಾಮೋದ್ರೇಕವಾಗಲಿಲ್ಲವೋ ಹಾಗೆ ಅಸಂಗಿಯಾದ ಪುರುಷನಿಗೂ ಆಗುವದಿಲ್ಲ– ಎಂಬುದೊಂದು ಯುಕ್ತಿ. ತಾವು ಅಸಂಗಿಗಳೆಂದು ಭ್ರಾಂತರಾದ ಅಥವಾ ಅಸಂಗಿವೇಷಧಾರಿಗಳಾದ ಸಾಧು ಸಂನ್ಯಾಸಿಗಳೂ ಈ ಯುಕ್ತಿಯನ್ನು ದುರುಪಯೋಗಪಡಿಸಿಕೊಳ್ಳಬಹುದಲ್ಲವೆ? (2) ವಜ್ರೋಲಿಯೋಗವು ತಮಗೆ ವಶವಾಗಿರುವದರಿಂದ ಅವಕೀರ್ಣಿತ್ವ ದೋಷವು ತಮಗೆ ಬರಲಾರದು– ಎಂಬುದು ಎರಡನೆಯದು. ಹಠಯೋಗ ಪ್ರದೀಪಿಕೆಯೇ (ಹಠ. ೩–೮೪ರಿಂದ ೮೮) ಮುಂತಾದ ಗ್ರಂಥಗಳಲ್ಲಿ ಈ ಯೋಗವನ್ನು ವರ್ಣಿಸಿರುತ್ತದೆ; ಇದನ್ನು ಅನುಷ್ಠಾನಮಾಡಿದವರು ಈಗಲೂ ಅಲ್ಲಲ್ಲಿ ಇರುತ್ತಾರೆಂದೂ ಕೇಳಿರುತ್ತೇವೆ. ಆದರೆ ರೇತಃಸ್ಖಲನವಾಗದೆ ಇದ್ದಮಾತ್ರ ದಿಂದ ಸ್ತ್ರೀಸಂಬಂಧವಾದವನಿಗೆ ಊರ್ಧ್ವರೇತಸ್ಕತೆಯ ವ್ರತಭಂಗವಾಗುವದಿಲ್ಲ ವೆನ್ನಬಹುದೆ? (3) 'ಸಂಕಲ್ಪವೇ ಕಾಮಕ್ಕೆ ಮೂಲವು, ಅದು ನನಗಿಲ್ಲ' ಎಂದು ಆಚಾರ್ಯರು ಹೇಳಿದಂತೆ (೯–೯೧) ಮಾಧವೀಯದಲ್ಲಿದೆ. ಸಂಕಲ್ಪವೇ ಇಲ್ಲದ ಆಚಾರ್ಯರು ಪರಕಾಯಪ್ರವೇಶಸಂಕಲ್ಪವನ್ನು ಹೇಗೆ ಮಾಡಿದರು? ಸತ್ಯ ಸಂಕಲ್ಪನಾದ ಪರಮೇಶ್ವರನಂತೆ ಸಂಕಲ್ಪಿಸಿರಬಹುದು– ಎಂಬುದು ಈ ಪ್ರಶ್ನೆಗೆ

ಉತ್ತರವಾಗಲಾರದು. ಏಕೆಂದರೆ ಪರಮೇಶ್ವರನಿಗೆ ಸೃಷ್ಟ್ಯಾದಿಗಳಲ್ಲಿ ಪ್ರಾಣಿಕರ್ಮಾಪೇಕ್ಷೆಯಿಂದ ಆಗುವ ಸಂಕಲ್ಪಕ್ಕೂ ಆಚಾರ್ಯರಿಗೆ ಒಂದು ಬೇಕು, ಒಂದು ಬೇಡ– ಎಂಬ ರೂಪದಲ್ಲಿ ಆದ ಈ ಸಂಕಲ್ಪಕ್ಕೂ ಭೇದವಿದೆ. (4) ದೇಹಾಭಿಮಾನಿ ಜೀವನಿಗೆ ವಿಧಿಪ್ರತಿಷೇಧಗಳೇ ಹೊರತು ಅಜಾಪ್ವಯಬ್ರಹ್ಮಜ್ಞಾನಿಗಲ್ಲ –ಎಂಬ ಒಂದು ವಾದವನ್ನು ಕವಿಯು ಇಲ್ಲಿ ಆಚಾರ್ಯರ ಬಾಯಿಗೆ ಹಾಕಿರುತ್ತಾನೆ. ಜ್ಞಾನಿಯು ವಿಧಿನಿಷೇಧಕಿಂಕರನಾಗಿ ಕರ್ಮಗಳನ್ನು ಮಾಡುವದಿಲ್ಲ– ಎಂಬ ಅಭಿಪ್ರಾಯವು ಭಾಷ್ಯವಾರ್ತಿಕಗಳಲ್ಲಿ ಕಾಣಬರುವದು ನಿಜವಾದರೂ ಅವನು ಸ್ವೇಚ್ಛೆಯಿಂದ ಯಾವ ಕರ್ಮದಲ್ಲಾದರೂ ಪ್ರವರ್ತಿಸಬಹುದು– ಎಂಬರ್ಥದಲ್ಲಿ ಅವನು ವೇದಕಿಂಕರನಲ್ಲವೆಂಬ ವಾದವನ್ನು ಆಚಾರ್ಯರು ಎಲ್ಲಿಯೂ ಒಡ್ಡಿರುವಂತೆ ಕಾಣಿಸುವದಿಲ್ಲ (5) ಬ್ರಹ್ಮಕ್ಕಿಂತ ವ್ಯತಿರಿಕ್ತವಾದ ಜಗತ್ತೇ ಇಲ್ಲ ಎಂಬುದನ್ನು ಅರಿತಿರುವವರಿಗೆ ಸ್ವಪ್ನಕಾಲದಲ್ಲಿ ಮಾಡಿದ ಕರ್ಮದ ಲೇಪವು ಎಚ್ಚರದಲ್ಲಾಗದಿರುವಂತೆಯೇ ಕರ್ಮಫಲದ ಲೇಪವು ಆಗುವದಿಲ್ಲ (೯–೯೫)– ಎಂಬುದು ಆಚಾರ್ಯರಿಂದ ಕವಿಯು ಹೇಳಿಸಿರುವ ಇನ್ನೊಂದು ವಾದ. ಅಜ್ಞಾನದಶೆಯಲ್ಲಿ ಮಾಡಿದ ಕರ್ಮಗಳು ವಿದ್ಯಾದಶೆಯಲ್ಲಿ ಬಾಧಿತವಾಗುವದರಿಂದ ಅವುಗಳ ಫಲವು ಜ್ಞಾನಿಗೆ ಅಂಟಲಾರವು– ಎಂಬುದಿಷ್ಟೇ ಈ ಯುಕ್ತಿಯಿಂದ ಸಿದ್ಧವಾದೀತೇ ಹೊರತು ಜ್ಞಾನವಾದಮೇಲೆ ಜ್ಞಾನಿಯು ನಿಷಿದ್ಧಕರ್ಮವನ್ನು ಮಾಡಿದರೂ ಅದರ ಫಲವು ಅವನಿಗೆ ಆಗುವದಿಲ್ಲ ಎಂಬುದಕ್ಕೆ ಇದು ಸರಿಯಾದ ಯುಕ್ತಿಯಾಗಲಾರದು. (6) ಜ್ಞಾನಿಯು ಅಶ್ವಮೇಧಸಹಸ್ರವನ್ನು ಮಾಡಿದರೂ ಜನಕನಂತೆ ಪುಣ್ಯಾಲಿಪ್ತನಾಗಿರುವನು, ಬ್ರಹ್ಮಹತ್ಯಾದಿಗಳನ್ನು ಮಾಡಿದರೂ ಇಂದ್ರನಂತೆ ಪಾಪಾಲಿಪ್ತನಾಗಿರುವವನು (೯–೯೭) ಎಂಬುದು ಮತ್ತೊಂದು ವಾದ ಜ್ಞಾನವಾದ ಬಳಿಕವೂ ತಮ್ಮತಮ್ಮ ಸ್ಥಾನಕ್ಕೆ ಉಚಿತವಾದ ಕರ್ಮಗಳನ್ನು ವ್ಯವಹಾರದೃಷ್ಟಿಯಿಂದ ಮಾಡುತ್ತಿದ್ದರೂ ಕರ್ಮಫಲವು ಅಂಟದು –ಎಂಬುದಕ್ಕೆ ಇವು ನಿದರ್ಶನಗಳಾದಾವೇ ಹೊರತು ಸ್ವವರ್ಣಾಶ್ರಮಕ್ಕೆ ಅನುಚಿತವಾದ ಕರ್ಮವನ್ನು ಜ್ಞಾನಿಯು ಮಾಡಬಹುದೆಂಬುದಕ್ಕೆ ಇವು ಅನುಮತಿಯನ್ನು ಕೊಡಲಾರವು. (7) ಜ್ಞಾನಿಗೆ ಪಾಪಕರ್ಮದಿಂದ ಕುಂದಾಗುವದಿಲ್ಲ, ಪುಣ್ಯಕರ್ಮದಿಂದ ಹೆಚ್ಚಾಗುವದಿಲ್ಲ ; ಪಾಪವನ್ನು ಮಾಡಿದೆನಲ್ಲ, ಪುಣ್ಯವನ್ನು ಮಾಡಲಿಲ್ಲವಲ್ಲ ! ಎಂದು ಅವನು ಪಶ್ಚಾತ್ತಾಪವನ್ನು ಹೊಂದುವದಿಲ್ಲ ಎಂಬ ಶ್ರುತಿಯನ್ನು ಕವಿಯು ಉದಾಹರಿಸಿರುತ್ತಾನೆ. ಈ ಅಭಿಪ್ರಾಯವನ್ನು ಹಿಂದಿನ ಯುಕ್ತಿಗಳಿಂದಲೇ ತಳ್ಳಿಹಾಕಿದಂತೆ ಆಗಿರುತ್ತದೆ. ಜ್ಞಾನಿಯ ದೃಷ್ಟಿಯಲ್ಲಿ ಪುಣ್ಯಪಾಪಗಳೇ ಇಲ್ಲ ; ಅಕರ್ತೃತ್ವಬುದ್ಧಿಯಿರುವದರಿಂದ ಅವನು ಏರುಪೇರಿಲ್ಲದ ಸರ್ವಸಮವಾದ ನಿಷ್ಕರ್ಮಬ್ರಹ್ಮದಲ್ಲಿಯೇ ನಿಷ್ಠನಾಗಿರುತ್ತಾನೆ ಎಂದು ಈ ಶ್ರುತಿಯು ಜ್ಞಾನವನ್ನು ಹೊಗಳುತ್ತದೆಯೇ ಹೊರತು ಜ್ಞಾನಿಯು ಯಾವ ಕರ್ಮವನ್ನಾದರೂ ಮಾಡಬಹುದು–

ಎಂಬುದಕ್ಕೆ ಆಧಾರವಾಗುವದಿಲ್ಲ (8) 'ಈ ಶರೀರಕರಣಗಳಿಂದಲೇ ಕಾಮ ಶಾಸ್ತ್ರವನ್ನು ಪರಿಶೀಲಿಸಿದರೂ ದೋಷವಾಗುವಂತಿಲ್ಲವಾದರೂ ಶಿಷ್ಟಾಚಾರಪರಿ ಪಾಲನೆಗಾಗಿ ಶರೀರಾಂತರದಿಂದಲೇ ಮಾಡುವೆನು' (೯–೧೦೦)– ಎಂದು ಕೊನೆ ಯಲ್ಲಿ ಕವಿಯು ಆಚಾರ್ಯರಿಂದ ಹೇಳಿಸಿರುತ್ತಾನೆ. ನಾವು ಈವರೆಗೂ ತೋರಿಸಿ ಕೊಟ್ಟಿರುವಂತೆ ಜ್ಞಾನಿಗೆ ಅನುಚಿತಪ್ರವೃತ್ತಿಯು ಹೇಗೂ ಸಲ್ಲದಿರುವಾಗ ಶರೀರಾಂತರದಿಂದ ಅದನ್ನು ಮಾಡಿದಮಾತ್ರದಿಂದ ಕರ್ಮವು ಅಕರ್ಮವಾಗುವ ದೆಂಬ ವಾದವನ್ನು ಎಂದಿಗೂ ಒಪ್ಪುವದಾಗುವಂತಿಲ್ಲ.

ಆಚಾರ್ಯರ ಯುಕ್ತಿಗಳೆಂದು ಮಾಧವಕವಿಯು ಉದಾಹರಿಸಿರುವವುಗಳು ಯಾವವೂ ಭಗವತ್ಪಾದರ ವೇದಾಂತಪ್ರಕ್ರಿಯೆಗೆ ಹೊಂದುವಂತಿಲ್ಲವೆಂದು ತೋರಿಸುವ ಉದ್ದೇಶದಿಂದ ಮಾತ್ರವೇ ಈ ವಿಸ್ತೃತವಿಮರ್ಶೆಯನ್ನು ಇಲ್ಲಿ ಬರೆ ದಿದೇವೆಯೇ ಹೊರತು ಪೂಜ್ಯಪಾದರಾದ ಆಚಾರ್ಯರಿಗೆ ಈ ದೋಷಗಳು ಹೊಳೆದಿರಲಿಲ್ಲವೆಂದಾಗಲಿ ಅವರು ಅನುಚಿತಕರ್ಮವನ್ನು ಮಾಡಿದರೆಂದಾಗಲಿ ಸೂಚಿಸುವದಕ್ಕಲ್ಲವೆಂದು ನಾವು ಅವರ ಪವಿತ್ರಚರಣಸ್ಮರಣಪೂರ್ವಕವಾಗಿ ಶಪಥಮಾಡಿ ಹೇಳುತ್ತೇವೆ. ದೊಡ್ಡವರ ಹೆಸರಿನಿಂದ ಅಜ್ಞರಿಗೆ ಅಡ್ಡಹಾದಿಯನ್ನು ತುಳಿಯುವದಕ್ಕೆ ಅವಕಾಶವಾಗಬಾರದೆಂಬುದೇ ನಮ್ಮ ಭಾವವು. ಮಾಧವನು ಪದ್ಮಪಾದರ ಮೂಲಕ ಹೊರಡಿಸಿರುವ ಅಭಿಪ್ರಾಯವೇ ನಮ್ಮದು :

ವ್ರತಮಸ್ಮದೀಯಮತುಲಂ ಕ್ವ ಮಹತ್ । ಕ್ವ ಚ ಕಾಮಶಾಸ್ತ್ರಮತಿಗರ್ಹ್ಯಮಿದಂ ।
ತದಪೀಷ್ಯತೇ ಭಗವತೈವ ಯದಿ । ಹ್ಯನವಸ್ಥಿತಂ ಜಗದಿಹೈವ ಭವೇತ್ ॥ ೮೭ ॥
ಅಧಿಮೇದಿನಿ ಪ್ರಥಯಿತುಂ ಶಿಥಿಲಂ । ಧೃತಕಙ್ಕಣಸ್ಯ ಯತಿಧರ್ಮಮಿಮಮ್ ।
ಭವತಃ ಕಿಮಸ್ತ್ಯವಿದಿತಂ ತದಪಿ । ಪ್ರಣಯಾನ್ಮಯೇರಿತಮಿದಂ ಭಗವನ್ ॥ ೮೮ ॥

'ನಿರುಪಮಾನವಾದ ನಮ್ಮಗಳ ಸಂನ್ಯಾಸಧರ್ಮವೆಲ್ಲಿ ಅತಿಗರ್ಹ್ಯವಾದ ಈ ಕಾಮ ಶಾಸ್ತ್ರವೆಲ್ಲಿ ? ಆದರೂ ಅದನ್ನು ತಾವೇ ಸ್ವೀಕರಿಸಿದರೆ ಜಗತ್ತಿನ ವ್ಯವಸ್ಥೆಯೇ ತಪ್ಪಿಬಿಟ್ಟೀತು ! ಆಗಲೆ ಶಿಥಿಲವಾಗಿರುವ ಈ ಯತಿಧರ್ಮವನ್ನು ಭೂಮಿಯ ಮೇಲೆ ಪ್ರಚಾರಮಾಡುವದಕ್ಕೆ ಬದ್ಧಕಂಕಣರಾಗಿರುವ ತಮಗೆ ತಿಳಿಯದಿರು ವದಾಗಿ ಯಾವದು ತಾನೆ–ಇದೆ ? ಆದರೂ ಪೂಜ್ಯರೆ, ತಮ್ಮಲ್ಲಿರುವ ಭಕ್ತಿಯಿಂದ ಇದನ್ನು ಹೇಳಿರುತ್ತೇನೆ'– ಎಂಬುದು ಶ್ಲೋಕಗಳ ಅರ್ಥ. ಆಚಾರ್ಯರು ಅಂತಃ ಪುರದ ಸ್ತ್ರೀಯರೊಡನೆ ವಿವಿಧಭೋಗಗಳನ್ನು ಅನುಭವಿಸಿದರೆಂದು ಶಂಕರವಿಜಯ ಕಾರರು ಮೂವರೂ ವಿವರಿಸಿ ವರ್ಣಿಸಿರುವರು. ಪರಮವೈರಾಗ್ಯಚಕ್ರವರ್ತಿಗಳೂ ಬ್ರಹ್ಮನಿಷ್ಠರೂ ಆದ ಯತಿಶ್ರೇಷ್ಠರ ಚರಿತ್ರೆಯನ್ನು ಹೀಗೆ ಬಣ್ಣಿಸುವದಕ್ಕೆ ಹೊರ ಟಿರುವದು ಯೋಗ್ಯರಿಗೆಲ್ಲ ಮನಃಖೇದಾವಹವೆಂದು ಯಾರಾದರೂ ಒಪ್ಪಬೇಕು. **ಶಂಕರವಿಜಯಗಳು** ಕಾವ್ಯಮಾತ್ರವೆಂಬುದರಮೇಲೆ ಅವುಗಳಲ್ಲಿರುವ ಎಷ್ಟೋ

ಅತಿಶಯೋಕ್ತಿಗಳನ್ನು ಒಪ್ಪಿದರೂ ಭಗವತ್ಪಾದರು ರಾಜನ ಶರೀರದಲ್ಲಿ ಸ್ತ್ರೀಸಂಪರ್ಕದಿಂದಾಗುವ ಸುಖವನ್ನು ಅನುಭವಿಸುವಾಗ 'ನಿರರ್ಗಳವಾದ ಬ್ರಹ್ಮಾನಂದವನ್ನು ಅನುಭವಿಸಿದರು' (೧೦-೧೬) ಎಂದು ಮಾಧವಕವಿಯು ವರ್ಣಿಸಿರುವದಂತೂ ಅಕ್ಷಮ್ಯವೆಂದೇ ಹೇಳಬೇಕಾಗಿದೆ. 'ವಿಷಯಾನಂದವೆಲ್ಲ ಬ್ರಹ್ಮಾನಂದದ ಲೇಶವೇ' ಎಂದು ಶ್ರುತಿಯಲ್ಲಿದೆ. ಹಾಗೆ ಶ್ರುತಿಯು ಹೇಳುವದು ವಿಷಯಗಳಲ್ಲಿ ನಿಜವಾದ ಸುಖವಿಲ್ಲದಿದ್ದರೂ ಇಷ್ಟವಿಷಯದ ಪ್ರಾಪ್ತಿಯಾದಾಗ ಅಂತಃಕರಣದಲ್ಲಿಪ್ರತಿಫಲಿಸುವ ಪರಮಾತ್ಮಸ್ವರೂಪಾನಂದದ ಪ್ರತಿಬಿಂಬವನ್ನೇ ವಿಷಯಾನಂದವೆಂದು ಜನರು ಭ್ರಮಿಸುತ್ತಾರೆಂಬುದನ್ನು ತಿಳಿಸುವದಕ್ಕೇ ಹೊರತು ಸ್ತ್ರೀಮಾಲಗಂಧಾದಿವಿಷಯಜನ್ಯಸುಖವು 'ನಿರರ್ಗಲವಾದ ಬ್ರಹ್ಮಾನಂದ' ಎಂಬ ಅಭಿಪ್ರಾಯದಿಂದಲ್ಲ- ಎಂದು ವೇದಾಂತಜ್ಞರಲ್ಲಿ ಅರಿಕೆಮಾಡಿಕೊಳ್ಳಬೇಕಾದದ್ದೇನೂ ಇಲ್ಲವಷ್ಟೆ ?

ಸಾಲದ ಕಡಿಮೆಗೆ ಚಿದ್ವಿಲಾಸರು ಈ ವಾಕ್ಯವನ್ನು ಬರೆದಿರುತ್ತಾರೆ :

'ತಸ್ಯಾಸೀತ್ಪ್ರತಿಲೋಲತಾ ತ್ರಿಪುರಜಿತ್ಪೂರ್ಣಾಕೃತೇರಪ್ಯಹೋ ।
ತದ್ವಾಣೀಂ ಪ್ರವಿಜಿತ್ಯ ತಾಂ ವಶಯಿತುಂ ನೇತುಂ ಪುರೀಂ ಸ್ವಾಮಪಿ ॥

'ಆ ವಾಣಿಯನ್ನು ಜಯಿಸಿ ಆಕೆಯನ್ನು ವಶಗೊಳಿಸಿಕೊಳ್ಳುವದಕ್ಕಾಗಿಯೂ ತಮ್ಮ ಪುರಕ್ಕೆ ಕರೆದುಕೊಂಡುಹೋಗುವದಕ್ಕಾಗಿಯೂ ಆ ಶಿವನ ಪೂರ್ಣಾಕೃತಿಯಾದ ಆಚಾರ್ಯರಿಗೂ ರತಿಲೋಲತ್ವವುಂಟಾಯಿತು.' (ಚಿ.ಶಂ. ೧೯-೫೨)

ಆನಂದಗಿರೀಯದಲ್ಲಿ 'ರಾಜನು ಕಾಮಲೋಲುಪನೂ ಅತ್ಯಾಶಾಬದ್ಧಬುದ್ಧಿಯೂ' (ಪ್ರ. ೫೯ ಪು. ೨೨೦; ದೇ.ಪು.೧೮೮) ಆಗಿದ್ದನೆಂದಿದೆ! ಈ ಬರಹದ ಮೇಲೆ ನಾವು ಯಾವ ಟೀಕೆಯನ್ನೂ ಮಾಡಲು ಅಸಮರ್ಥರಾಗಿರುತ್ತೇವೆ.

## ಅಮರುಕಕಾವ್ಯರಚನೆ :

೧೧೮. ಆಚಾರ್ಯರು ವಾತ್ಸ್ಯಾಯನಸೂತ್ರವನ್ನೂ ಅದರ ಭಾಷ್ಯವನ್ನೂ ಚೆನ್ನಾಗಿ ನೋಡಿ ಹೊಸದೊಂದು ಕಾಮಶಾಸ್ತ್ರನಿಬಂಧವನ್ನು ಬರೆದರೆಂದು ಮಾಧವೀಯದಲ್ಲಿರುವದನ್ನು ಆಗಲೆ ತಿಳಿಸಿರುತ್ತೇವೆ. ಆನಂದಗಿರೀಯದಲ್ಲಿ 'ಅಕರೋಚ್ಛಾಸ್ತ್ರಮನ್ಯುಗಂ ಶತಸಂಖ್ಯಾಂ ಸತೀರತೇ'[1] (ಪ್ರ. ೫೮, ೨೧೯, ೨೭೦) ನೂರು ಗ್ರಂಥಪ್ರಮಾಣವಾದ ಅಮೃತಶಾಸ್ತ್ರವನ್ನು ಮಾಡಿದರು- ಎಂದಿದೆ. ಚಿದ್ವಿಲಾಸೀಯದಲ್ಲಿ ಇದರ ಸುದ್ದಿಯಿಲ್ಲ. 'ಅಮರುಕಕಾವ್ಯ'ವೆಂದು ಪ್ರಸಿದ್ಧವಾಗಿರುವ ಗ್ರಂಥವೇ ಆಚಾರ್ಯರು ಬರೆದದ್ದೆಂದು ಅನೇಕರ

1. ದೇ. ಪಾಠದಲ್ಲಿ ಈ ಶ್ಲೋಕವಿಲ್ಲ !

ಭಾವನೆಯಿದೆ ಧ್ವನ್ಯಾಲೋಕವೇ ಮುಂತಾದ ಗ್ರಂಥಗಳ ಕರ್ತೃವಾದ ಆನಂದ ವರ್ಧನನು ಅಮರುಕಶತಕವನ್ನು ಪರಾಮರ್ಶಿಸಿರುತ್ತಾನೆ. ಅತನು ಅವಂತಿ ವರ್ಮರಾಜನ ಆಸ್ಥಾನಪಂಡಿತನಾದ್ದರಿಂದ ಅವನು ಶಾ. ಶ. ೭೭೮ರಿಂದ ೮೧೭ ರಲ್ಲಿದ್ದನು. ಈ ಗ್ರಂಥವು ಆಚಾರ್ಯಕೃತವೆಂಬುದಕ್ಕೆ ಗ್ರಂಥದಲ್ಲಾಗಲಿ ವ್ಯಾಖ್ಯಾನಗಳಲ್ಲಾಗಲಿ ಯಾವ ಸ್ವಾಕ್ಷ್ಯವೂ ಇಲ್ಲ. ವೇಮಭೂಪಾಲಕನು ಇದಕ್ಕೆ ವ್ಯಾಖ್ಯಾನವನ್ನು ಬರೆಯುವಾಗ 'ಅಮರುಕಕವಿನಾ ರಚಿತಾಂ ಶೃಙ್ಗಾರ ರಸಾತ್ಮಿಕಾಂ ಶತಶ್ಲೋಕೀಮ್ | ಶ್ರುತ್ವಾ ವಿಕಸಿತಚೇತಾಸ್ತದಭಿಪ್ರಾಯಂ ಪ್ರಕಾಶತಾಂ ನೇತುಮ್ | ಮೂಲಶ್ಲೋಕಾನ್ ಸಮಾಹೃತ್ಯ ಪ್ರಕ್ಷಿಪ್ತಾನ್ ಪರಿಹೃತ್ಯ ಚ | ವಿಧತ್ತೇ ವಿದುಷಾಮಿಷ್ಟಾಂ ಟೀಕಾಂ ಶೃಙ್ಗಾರದೀಪಿಕಾಮ್ ||' ಅಮರುಕಕವಿಯ ಅಭಿಪ್ರಾಯವನ್ನು ಪ್ರಕಾಶಗೊಳಿಸುವದಕ್ಕಾಗಿ ಪ್ರಕ್ಷಿಪ್ತ ಶ್ಲೋಕಗಳನ್ನು ತೆಗೆದುಹಾಕಿ ಉಳಿದವಕ್ಕೆ ಟೀಕೆಯನ್ನು ಬರೆದಿರುತ್ತೇನೆಂದು ಹೇಳಿ ಕೊಂಡಿರುತ್ತಾನೆ. ಆದ್ದರಿಂದ ಅವನ ಕಾಲದಲ್ಲಿ ಈ ಗ್ರಂಥವು ಶಂಕರಕೃತಿಯೆಂಬ ಐತಿಹ್ಯವಿರಲಿಲ್ಲವೆಂದು ಹೇಳಬೇಕಾಗಿದೆ. ಉತ್ತರದೇಶದಲ್ಲಿ ಈ ಕಾವ್ಯವು ಆಚಾರ್ಯರ ಕೃತಿ ಎಂಬ ಕಥೆ ಪ್ರಚಾರದಲ್ಲಿಲ್ಲ. ಈ ಎಲ್ಲಾ ಕಾರಣಗಳಿಂದ ಈ ಗ್ರಂಥವು ಭಗವತ್ಪಾದರ ಕೃತಿಯೆನ್ನುವದು ಸರಿಯಲ್ಲವೆಂದು ಸೋಮನಾಥಯ್ಯ ನವರು (ಸೋ. ಶಂ. ಪು. ೧೩೭–೧೪೦) ಅಭಿಪ್ರಾಯಪಟ್ಟಿದ್ದಾರೆ.

## ಆಚಾರ್ಯರನ್ನು ಶಿಷ್ಯರು ಗಾನಮೂಲಕವಾಗಿ ಎಚ್ಚರಿಸಿದ್ದು

೧೧೫. ಮುಂದಿನ ಕಥೆ ಹೀಗಿದೆ : ಸರಸವಾಣಿಯಲ್ಲಿ ಆಚಾರ್ಯರು ಕೇಳಿ ಕೊಂಡಿದ್ದ ಗಡವು ಮುಗಿದು ಐದಾರು ದಿನಗಳಾದರೂ (ಮಾ. ಶಂ. ೧೦–೨೦) ಗುರುಗಳು ತಮ್ಮ ಶರೀರಕ್ಕೆ ಹಿಂತಿರುಗಲಿಲ್ಲ. ಅವರು ಎಲ್ಲಿ ಹೋಗಿದ್ದಾರು ? ಎಲ್ಲಿ ಹುಡುಕೋಣ ? –ಎಂದು ಶಿಷ್ಯರು ಚಿಂತಿಸುತ್ತಿರುವಲ್ಲಿ ಪದ್ಮಪಾದರು 'ದುಃಖವೇಕೆ ? ಎಲ್ಲಾ ಕಡೆಯಲ್ಲಿಯೂ ಹುಡುಕೊಣ. ಕಾಮಶಾಸ್ತ್ರವನ್ನು ಕಲಿಯುವದಕ್ಕೆ ಹೋಗಿರುವದರಿಂದ ಅವರು ಈ ದೊರೆಯ ಹೆಂಡಿರ ಮಧ್ಯದಲ್ಲಿ ಯೇ ಇರಬೇಕು ; ಆದ್ದರಿಂದ ಕೆಲವರು ಇಲ್ಲಿದ್ದು ಮಿಕ್ಕವರು ಹುಡುಕೋಣ !' ಎಂದರು. ಅವರು ಬೆಟ್ಟದಿಂದ ಬೆಟ್ಟವನ್ನೂ ದೇಶದಿಂದ ದೇಶವನ್ನೂ ದಾಟಿ ಕೊನೆಗೆ ಅಮರುಕನ ದೇಶಕ್ಕೆ ಬಂದರು (ಮಾ. ಶಂ. ೧೦–೩೮). ರಾಜನು ಸತ್ತು ಮತ್ತೆ ಬದುಕಿದನೆಂದೂ ರಾಜನು ಗಾನಲೋಲನಾಗಿ ಸ್ತ್ರೀಸಕ್ತನಾಗಿರುವನೆಂದೂ ಜನರಿಂದ ಕೇಳಿ ತಿಳಿದುಕೊಂಡು ಗಾಯಕವೇಷವನ್ನು ಹಾಕಿಕೊಂಡು ಅರಮನೆಗೆ ಬಂದರು. ಅಲ್ಲಿ ಅರಸನನ್ನು ಕಂಡು ಸಭೆಯವರನ್ನೆಲ್ಲ ಬೆರಗುಗೊಳಿಸುತ್ತಾ ಗಾನಮಾಡುವ ವ್ಯಾಜದಿಂದ ಅನ್ಯಾಪದೇಶವಾಗಿ ಹಾಡಿ ಹೇಳಿದ್ದನ್ನು ಮಾಧವನು ಮೊದಲನೆಯ ಶ್ಲೋಕದಲ್ಲಿ ಹೀಗೆ ಸಂಗ್ರಹಿಸಿರುತ್ತಾನೆ :

ಭೃಙ್ಗ ತವ ಸಙ್ಗತಿಮಪಾಸ್ಯ ಗಿರಿಶೃಙ್ಗೇ
ತುಙ್ಗವಿಟಪಿನಿ ಸಙ್ಗಮಜುಷಿ ತ್ವದಙ್ಗೇ
ಸ್ವಾಙ್ಗರಚಿತಾಃ ಸಕಲುಷಾಸ್ತು ರಙ್ಗಾಃ
ಸಙ್ಗಮಕೃತೇ ಭಙ್ಗಮುಪಯಾನ್ತಿ ಭೃಙ್ಗಾಃ ॥

'ಎಲೈ ಭ್ರಮರವೆ, ನಿನ್ನ ಸಂಗವನ್ನು ಬಿಟ್ಟು ಬೆಟ್ಟದ ಶಿಖರದಲ್ಲಿ ಎತ್ತರವಾದ ಮರದಲ್ಲಿ ನಿನ್ನ ಶರೀರವು ತಗಲಿಕೊಂಡಿರಲು ನಿನ್ನ ಅಂಗಕ್ಕಾಗಿ ಏರ್ಪಾಡಾಗಿದ್ದ ಭೃಂಗಗಳು ನಿನ್ನ ಸಂಗಮಕ್ಕಾಗಿ ಬೇರೆಬೇರೆಯಾಗಿ ಹೋಗಿವೆ ಎಂದು ಅರ್ಥ. ಹೀಗೆ ಇನ್ನೆರಡು ಹಾಡುಗಳಾದ ಬಳಿಕ ಆತ್ಮಸ್ವರೂಪವನ್ನು ನೆನಪಿಗೆ ತರುವ ಈ ಪದ್ಯಗಳನ್ನು ಹಾಡಿದರು :

ನೇತಿನೇತ್ಯಾದಿ[1] ನಿಗಮವಚನೇನ ನಿಪುಣಂ ನಿಷಿಧ್ಯ ಮೂರ್ತಾಮೂರ್ತರಾಶಿಮ್ [
ಯದಶಕ್ಯನಿಹ್ನವಂ ಸ್ವಾತ್ಮರೂಪತಯಾ ಜಾನನ್ತಿ ಕೋವಿದಾಸ್ತತ್ತ್ವಮಸಿ ತತ್ತ್ವಮ್ ।

'ನೇತಿ ನೇತಿ' ಮುಂತಾದ ವೇದಾಂತವಚನದಿಂದ ಮೂರ್ತಾಮೂರ್ತರೂಪವಾದ (ಅನಾತ್ಮಭೂತ)ರಾಶಿಯನ್ನು ಅಲ್ಲಗಳೆದು, ಯಾವವನ್ನು ಅಲ್ಲಗಳೆಯುವದಕ್ಕಾಗಲಾರ ದಾದ್ದರಿಂದ ತಮ್ಮ ಆತ್ಮನೆಂದು ಪಂಡಿತರು ಅರಿತುಕೊಳ್ಳುವರೋ ಆ ತತ್ತ್ವವೇ ನೀನಾಗಿರುವೆ.

ಖಾದ್ಯಮುತ್ಪಾದ್ಯ ವಿಶ್ವಮನುಪ್ರವಿಶ್ಯ ಗೂಢಮನ್ನಮಯಾದಿಕೋಶಕುಷಜಾಲೇ ।
ಕವಯೋ ವಿವಿಚ್ಯ ಯುಕ್ತ್ಯವಘಾತತೋ ಯತ್ತಣ್ಡುಲವದಾದದತಿ
ತತ್ತ್ವಮಸಿ ತತ್ತ್ವಮ್ ॥

'ಆಕಾಶವೇ ಮುಂತಾದ ವಿಶ್ವವನ್ನು ಸೃಷ್ಟಿಸಿ ಒಳಹೊಕ್ಕು ಅನ್ನಮಯಾದಿಕೋಶ ಗಳೆಂಬ ಹೊಟ್ಟಿನ ಸಮೂಹದಲ್ಲಿ ಹುದುಗಿರುವ ಯಾವವನ್ನು ಬಲ್ಲವರು ಯುಕ್ತಿಯಿಂದ ಕುಟ್ಟಿ ವಿಂಗಡಿಸಿಕೊಂಡು ಅಕ್ಕಿಯಕಾಳಿನಂತ ಯಾವವನ್ನು ತೆಗೆದುಕೊಳ್ಳುವರೋ ಆ ತತ್ತ್ವವೇ ನೀನಾಗಿರುವೆ.

ವಿಷಮವಿಷಯೇಷು ಸಂಚಾರಿಣೋಽಕ್ಷಾಶ್ವಾನ್ದೋಷದರ್ಶನಕಶಾಭಿಘಾತತಃ
ಸ್ವೈರವತ್[2] ।
ಸಂನಿವರ್ತ್ಯ ಸ್ವಾನ್ತರಶ್ಮಿಭಿರ್ಧೀರಾ ಬಧ್ನನ್ತಿ ಯತ್ರೈವ ತತ್ತ್ವಮಸಿ ತತ್ತ್ವಮ್ ॥೩॥

'ವಿಷಯವಾದ ವಿಷಯಗಳಲ್ಲಿ ಸ್ವೇಚ್ಛೆಯಿಂದ ಸಂಚರಿಸುತ್ತಿರುವ ಇಂದ್ರಿಯಗಳೆಂಬ ಕುದುರೆಗಳನ್ನು ಧೀರರಾದವರು ದೋಷದರ್ಶನವೆಂಬ ಕೋರಡೆಯ ಪೆಟ್ಟಿನಿಂದ ಹಿಂತಿರು ಗಿಸಿ ಹೃದಯದ ಲಗಾಮುಗಳಿಂದ ಯಾವದರಲ್ಲಿಯೇ ಕಟ್ಟಿಹಾಕುವರೋ ಆ ತತ್ತ್ವವೇ ನೀನಾಗಿರುವೆ'.

ವ್ಯಾವೃತ್ತಜಾಗ್ರದಾದಿಷ್ವನುಸ್ಯೂತಂ ತೇಭ್ಯೋಽನ್ಯದೇವ ಪುಷ್ಪೇಭ್ಯ ಇವ ಸೂತ್ರಮ್ ।
ಇತಿ ಯದಾಧಾರಾಧಿಕತ್ರಯಪೃಥಕ್ತ್ವೇನ ವಿನ್ದನ್ತಿ[3] ಸೂರಯಸ್ತತ್ತ್ವಮಸಿ ತತ್ತ್ವಮ್ ॥

---

1. 'ನೇತಿನೇತ್ಯಾದಿನಾ' ಎಂದಿದ್ದರೆ ಓದುವದಕ್ಕೆ ತಡೆಯಿರುವದಿಲ್ಲ.
2. ಅಚ್ಚಿನ ಪುಸ್ತಕದಲ್ಲಿ ಇದನ್ನು ಮುಂದಿನ ಪಾದಕ್ಕೆ ತಪ್ಪಾಗಿ ಸೇರಿಸಿದೆ.
3. ವಿದನ್ತಿ ಎಂಬುದಕ್ಕಿಂತ ವಿನ್ದನ್ತಿ ಎಂಬ ಪಾಠವೇ ಉತ್ತಮ.

'ಎಚ್ಚರವೇ ಮುಂತಾದ ಅವಸ್ಥೆಗಳಲ್ಲಿ ಅನುಸ್ಯೂತವಾಗಿರುವುದು– ಹೂಗಳಲ್ಲಿ ಅನುಸ್ಯೂತವಾಗಿರುವ ನಾರು ಅವಕ್ಕಿಂತ ಬೇರೆಯಾಗಿರುವಂತೆ– ಆ ಅವಸ್ಥೆಗಳಿಗಿಂತ ಬೇರೆಯೇ ಎಂದು ಉಪಾಧಿತ್ರಯಗಳಿಗಿಂತ ಬೇರೆಯಾಗಿ ಯಾವ ತತ್ತ್ವವನ್ನು ವಿದ್ವಾಂಸರು ಅರಿತುಪಡೆದುಕೊಳ್ಳುವರೋ ಅದೇ ನೀನು'

ಪುರುಷ ಏವೇದಮಿತ್ಯಾದಿ ವೇದೇಷು ಸರ್ವಕಾರಣತಯಾ ಯಸ್ಯ ಸಾರ್ವಾತ್ಮ್ಯಮ್ ।
ಹಾಟಕಸ್ಯೇವ ಮುಕುಟಾದಿ ತಾದಾತ್ಮ್ಯಂ ಸ್ವರಸಮಾಮ್ನಾಯತೇ ತತ್ತ್ವಮಸಿ
ತತ್ತ್ವಮ್ ॥೫॥

'ಪುರುಷ ಏವೇದಂ ವಿಶ್ವಮ್' (ಇವೆಲ್ಲವೂ ಪುರುಷನೇ) ಎಂಬಿದೇ ಮುಂತಾದ ವೇದಗಳಲ್ಲಿ–ಚಿನ್ನವು ಕಿರೀಟವೇ ಮುಂತಾದವುಗಳ ರೂಪದಲ್ಲಿರುವಂತೆ–ಸರ್ವಕ್ಕೂ ಕಾರಣವಾಗಿರುವ ಯಾವುದಕ್ಕೆ ಸರ್ವಾತ್ಮತ್ವವನ್ನು ಸ್ವರಸವಾಗಿ ಹೇಳಿದೆಯೋ ಆ ತತ್ತ್ವವೇ ನೀನು

ಯಶ್ಚಾಹಮತ್ರ ವರ್ಷ್ಮಣಿ ಭಾಮಿ ಸೋಽಸೌ ಯೋಽಸೌ ವಿಭಾತಿ ರವಿಮಣ್ಡಲೇ
ಸೋಽಹಮ್ ।
ಇತಿ ವೇದವಾದಿನೋ ವ್ಯತಿಹಾರತೋ ಯದ್ಧ್ಯಾಯನ್ತಿ । ಯತ್ನತಸ್ತತ್ತ್ವಮಸಿ
ತತ್ತ್ವಮ್ ॥೬॥

"ಈ ಶರೀರದಲ್ಲಿ ಯಾವ ನಾನು ತೋರುತ್ತಿರುವೆನೋ ಅದು ಅತನೇ ; ಸೂರ್ಯಮಂಡಲದಲ್ಲಿ ಯಾವನು ಪ್ರಕಾಶಿಸುತ್ತಿರುವನೋ ಅವನು ನಾನೇ–ಎಂದು ವ್ಯತಿಹಾರದಿಂದ ವೇದವಾದಿಗಳು ಧ್ಯಾನಮಾಡುತ್ತಿರುವರಲ್ಲ, ಆ ತತ್ತ್ವವೇ ನೀನು',

ವೇದಾನುವಚನಸದ್ದಾನಮುಖಧರ್ಮೈಃ ಶ್ರದ್ಧಯಾನುಷ್ಠಿತೈರ್ವಿವ್ಯಯಾ ಯುಕ್ತೈಃ ।
ವಿವಿದಿಷನ್ತ್ಯತ್ಯನ್ತನಿರ್ಮಲಾಃ ಸ್ವಾನ್ತಾ ಬ್ರಾಹ್ಮಣಾ ಯದ್ಬ್ರಹ್ಮ ತತ್ತ್ವಮಸಿ
ತತ್ತ್ವಮ್ ॥೭॥

'ಬ್ರಾಹ್ಮಣರು ವೇದಾನುವಚನ, ದಾನ– ಮುಂತಾದ ಧರ್ಮಗಳನ್ನು ಶ್ರದ್ಧೆಯಿಂದ ಉಪಾಸನಾಯುಕ್ತವಾಗಿ ಅನುಷ್ಠಾನಮಾಡುವದರಿಂದ ವಿಶುದ್ಧಹೃದಯರಾಗಿ ಯಾವ ಬ್ರಹ್ಮವನ್ನು ಅರಿಯುವದಕ್ಕೆ ಪ್ರಯತ್ನಿಸುವರೋ ಆ ತತ್ತ್ವವೇ ನೀನು'.

ಶಮದಮೋಪರಮಾದಿಸಾಧನೈರ್ಧೀರಾಃ ಸ್ವಾತ್ಮನಾತ್ಮನಿ ಯದನ್ವಿಷ್ಯ ಕೃತಕೃತ್ಯಾಃ ।
ಅಧಿಗತಾಮಿತಸಚ್ಚಿದಾನನ್ದರೂಪಾ ನ ಪುನರಿಹ ಖಿದ್ಯನ್ತಿ ತತ್ತ್ವಮಸಿ ತತ್ತ್ವಮ್ ॥೮॥

'ವಿವೇಕಿಗಳಾದವರು ಶಮ, ದಮ, ಉಪರತಿ–ಮುಂತಾದ ಸಾಧನಗಳಿಂದ ತಮ್ಮಲ್ಲಿಯೇ ಯಾವ ಆತ್ಮನನ್ನು ಹುಡುಕಿ ಅರಿತುಕೊಂಡು ಅನಂತವಾದ ಸಚ್ಚಿದಾನಂದರೂಪರಾಗುವರೋ ಮತ್ತು ಈ ಸಂಸಾರದ ಖೇದವನ್ನು ಅನುಭವಿಸುವದಿಲ್ಲವೋ, ಆ ತತ್ತ್ವವೇ ನೀನು'.

ಹೀಗೆ ಎಂಟು ಪದ್ಯಗಳನ್ನು ಶಿಷ್ಯರು ಹಾಡಿದರೆಂದು (ಮಾ. ಶಂ. ೧೦–೯೯ ರಿಂದ ೫೫) ಮಾಧವಕವಿಯು ಬರೆದಿರುತ್ತಾನೆ. ಈ ಪದ್ಯಗಳಲ್ಲಿ ಆಚಾರ್ಯರ ವೇದಾಂತಕ್ಕೆ ಹೊಂದುಗೆಯಾಗಿಯೇ ಉಪನಿಷದರ್ಥಸಾರವನ್ನು ಸಂಗ್ರಹಿಸಿರುತ್ತದೆಯಾದರೂ ಆಚಾರ್ಯರ ಶಿಷ್ಯರು ಈ ಶ್ಲೋಕಗಳನ್ನೇ ಹಾಡಿದರೆಂದು ಒಪ್ಪುವದಕ್ಕಾಗುವದಿಲ್ಲ. ಏಕೆಂದರೆ ಚಿದ್ವಿಲಾಸೀಯದಲ್ಲಿ :

---

1. ,ಯದಧ್ಯಾಪಯನ್ತಿ' ಎಂಬ ಅಚ್ಚಿನ ಪಾಠವು ಸರಿಯಲ್ಲ,

2. ವಿಮಲ ಎಂಬ ಅಚ್ಚಿನ ಪಾಠವು ಛಂದಸ್ಸಿಗೆ ಹೊಂದುವದಿಲ್ಲ.

ನಿಸ್ತಮಸಿ ನೀರಜಸಿ ನಿರ್ಗಲಿತಸತ್ತ್ವೇ, ತೇಜಸಿ ವಿವೇಕಜುಷಿ ಭೇದಮತಿಶೂನ್ಯೇ ।
ಸರ್ವಜನಮಾನಸಸಮಾತಿಗಮಚಿಸ್ತ್ಯಂ ತತ್ತ್ವಮಸಿ ತತ್ತ್ವಮಸಿ ತತ್ತ್ವಮಸಿ ರಾಜನ್

ಎಂದು ಮುಂತಾದ ಐದು ಶ್ಲೋಕಗಳನ್ನು (ಚಿ. ಶಂ. ೨೦–೨೨ರಿಂದ೨೪) ಹಾಡಿದ ರೆಂದಿದೆ. ಆನಂದಗಿರೀಯದಲ್ಲಿ 'ಯತ್ಸತ್ಯಮುಖ್ಯಶಬ್ದಾರ್ಥಾನುಕೂಲಂ ತತ್ತ್ವಮಸಿ ತತ್ತ್ವಮಸಿ ತತ್ತ್ವಮಸಿ ರಾಜನ್ | (ಪ್ರ. ೫೯– ಪು. ೨೨೨೦ ; ದೇ. ೧೮೮) ಎಂದು ಮುಂತಾಗಿ ಹಾಡಿದರೆಂದಿದೆ.

## ಕಾಮಶಾಸ್ತ್ರವನ್ನು ಕಲಿತ ಬಳಿಕ ಆಚಾರ್ಯರು ಏನು ಮಾಡಿದರು ?

೧೧೬. ಶಿಷ್ಯರ ಈ ಹಾಡನ್ನು ಕೇಳಿದ ರಾಜನು ಸಭೆಯಲ್ಲಿ ಮೂರ್ಛೆ ಹೋದನು. ಹಿಂದೆ ಹೇಳಿರುವ ವಿಧಾನದಿಂದಲೇ ಆಚಾರ್ಯರು ತಮ್ಮ ಶರೀರವನ್ನು ಹೊಕ್ಕು ಮೊದಲಿನಂತೆಯೇ ಎದ್ದರು. ಹಕ್ಕಿಯ ರೂಪವನ್ನು ಧರಿಸಿಕೊಂಡು ಹೋದರೆಂದು ಚಿದ್ವಿಲಾಸೀಯ (ಕಲವಿಙ್ಕಾಕೃತಿರ್ಭೂತ್ವಾ ೨೦–೬). ಅಲ್ಲಿ ಅರಸನ ಭೃತ್ಯರು ಹಾಕಿದ್ದ ಅಗ್ನಿಯಿಂದ ಆ ಶರೀರವು ಸುಟ್ಟು ಉರಿಯುತ್ತಿತ್ತು. ಆಗ ಆ ಸ್ಥಿತಿಯಿಂದ ಬಿಡುಗಡೆಹೊಂದುವದಕ್ಕಾಗಿ ಲಕ್ಷ್ಮೀನರಸಿಂಹನನ್ನು ಆಚಾರ್ಯರು ಸ್ತುತಿಸಿದರು.

ಶ್ರೀಮತ್ಪಯೋನಿಧಿನಿಕೇತನ ಚಕ್ರಪಾಣೇ ।
ಭೋಗೀಶ ಭೋಗಮಣಿರಞ್ಜಿತಪುಣ್ಯಮೂರ್ತೇ ॥
ಯೋಗೀಶ ಶಾಶ್ವತ ಶರಣ್ಯ ಭವಾಬ್ಧಿಪೋತ ।
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಮ್ಬಮ್ ॥

ಎಂದು ಮುಂತಾಗಿರುವ ಶ್ಲೋಕಗಳೇ ಆ ಸ್ತೋತ್ರವೆಂದು ಚಿದ್ವಿಲಾಸೀಯ ದಲ್ಲಿಯೂ (ಚಿ. ಶಂ. ೨೦–೧೩ರಿಂದ೨೦), ಆನಂದಗಿರೀಯದಲ್ಲಿಯೂ (ಪ್ರ. ೬೦, ಪು. ೨೨೧, ೨೨೨ ; ದೇ. ೧೮೯) ಇದೆ. ಡಿಂಡಿಮವ್ಯಾಖ್ಯಾನಕಾರನೂ ಪದ್ಧತಿ ಯಂತೆ ಆನಂದಗಿರೀಯವನ್ನು ಅನುಸರಿಸಿರುತ್ತಾನೆ. ಈ ಸ್ತೋತ್ರದಿಂದ ತುಷ್ಟ ನಾದ ನರಸಿಂಹನ ದಯೆಯಿಂದ ಬೆಂಕಿಯು ಆರಿತು ; ಶಂಕರಾಚಾರ್ಯರು ಹೊರಕ್ಕೆ ಬಂದರು (ಮಾ. ಶಂ. ೧೦–೬೦. ನೃಸಿಂಹನು ಕೈಯನ್ನು ಕೊಟ್ಟು ಎಬ್ಬಿಸಿ ಶಂಕರರನ್ನು ಮೈದಡವಿದನು (ಚಿ. ಶಂ. ೨೦–೨೧, ೨೨) ಎಂದು ಚಿದ್ವಿಲಾಸೀಯ ; ಹಾಗೆ ಮೈದಡವಿದಮೇಲೆ 'ಸರ್ವಲೋಕವನ್ನೂ ಜಯಿಸು' ಎಂದು ಆಶೀರ್ವಾದಮಾಡಿ ಅಂತರ್ಧಾನನಾದನೆಂದು (ಆ. ಶಂ. ೬೦– ಪು. ೨೨೩, ದೇ. ೧೯೦) ಆನಂದಗಿರೀಯ.

ಆಚಾರ್ಯರು ಶಿಷ್ಯರೊಡನೆ ಮಂಡನನ ಮನೆಗೆ ಬಂದರು. ಮಂಡನನ ಸತ್ಕಾರವನ್ನು ಸ್ವೀಕರಿಸಿದರು. ಆಗ ಶಾರದೆಯು 'ಸರ್ವವಿದ್ಯೆಗಳಿಗೂ ಈಶಾನನು

ನೀನು ; ನನ್ನನ್ನು ಹಾಗೆಯೇ ಜಯಿಸದೆ ಕಾಮಶಾಸ್ತ್ರವನ್ನು ತಿಳಿದುಕೊಳ್ಳು ವದಕ್ಕೆಂದು ಏನೇನುಮಾಡಿದೆಯೋ ಅದೆಲ್ಲ ಮನುಷ್ಯರ ನಡತೆಯ ವಿಡಂಬನವು. ಚಂದ್ರನೇ ಮುಂತಾದವರಿಗೆ ಸೂರ್ಯನಿಂದ ಪರಿಭವವಾದರೆ ಹೇಗೆ ಅಪಕೀರ್ತಿ ಯಿಲ್ಲವೋ ಹಾಗೆಯೇ ನಿನ್ನಿಂದ ಜಿತರಾದ ನಮ್ಮಿಬ್ಬರಿಗೂ ಇದು ಲಜ್ಜಾವಹವಲ್ಲ. ಈಗ ನಾನು ನನ್ನ ಲೋಕಕ್ಕೆ ಹೋಗುವದಕ್ಕೆ ಅನುಮತಿಯನ್ನು ಕೊಡು' ಎಂದು ಅಂತರ್ಹಿತಳಾದ ಆಕೆಯನ್ನು ಆಚಾರ್ಯರು ಯೋಗಶಕ್ತಿಯಿಂದ ಕಂಡು "ನೀನು ಬ್ರಹ್ಮನ ರಾಣಿಯೆಂಬುದನ್ನು ಬಲ್ಲೆನು. ಆದ್ದರಿಂದ ನಾನು ಕಲ್ಪಿಸುವ ಋಶ್ಯ ಶೃಂಗವೇ ಮುಂತಾದ ಸ್ಥಳಗಳಲ್ಲಿ ಶಾರದೆಯೆಂಬ ಹೆಸರಿನಿಂದ ಅರ್ಚ್ಯವಾನಳಾಗಿ ಇಷ್ಟಾರ್ಥಗಳನ್ನು ಕೊಡುತ್ತಾ ಸಂನಿಹಿತಳಾಗಿರಬೇಕು" ಎಂದು ಬೇಡಿಕೊಂಡರು. ಹಾಗೇ ಆಗಲೆಂದು ಒಪ್ಪಿ ಸರಸ್ವತಿಯು ತನ್ನ ಲೋಕಕ್ಕೆ ಹೊರಟುಹೋದಳು. ತನ್ನ ಗಂಡನು ಯತಿಯಾದ್ದರಿಂದ ವೈಧವ್ಯವು ಬರಬಾರದೆಂದು ನೆಲವನ್ನು ಮುಟ್ಟದೆ ಮೇಲೆಯೇ ಇದ್ದು ಅದೃಶ್ಯಳಾದದ್ದನ್ನು ಕಂಡು ಎಲ್ಲರೂ ವಿಸ್ಮಿತರಾದರು ಮಂಡನನೂ ಆಚಾರ್ಯರೂ ಸಂತೋಷಪಟ್ಟರು (ಮಾ. ಶಂ. ೧೦-೬೭ ರಿಂಕ ೭೩)-ಎಂದು **ಮಾಧವೀಯ.**

**ಚಿದ್ವಿಲಾಸೀಯ :** ಶಂಕರರು ಶಿಷ್ಯರೊಡನೆ ಸರಸ್ವತಿಯಿದ್ದಲ್ಲಿಗೆ ಬಂದು "ಈಗ ನೀನು ಕೇಳುವ ಪ್ರಶ್ನೆಗೆ ಉತ್ತರವನ್ನು ಕೊಡುವೆನು" ಎಂದರು. ಆಗ ಅವರ ಮುಖದ ತೇಜಸ್ಸಿನಿಂದಲೂ ಮಾತಿನಿಂದಲೂ ಅವರಿಗೆ ಎಲ್ಲವೂ ತಿಳಿದಿದೆ ಎಂದು ಊಹಿಸಿಕೊಂಡು "ಯತಿಯೆ, ನಾನು ಜಿತಳಾದೆನು ; ನೀನು ಶಿವನೇ ಎಂದು ಬಲ್ಲೆನು. ನಾನು ಸತ್ಯಲೋಕಕ್ಕೆ ಹೋಗುವದಕ್ಕೆ ಅನುಜ್ಞೆಯನ್ನು ಕೊಡು' ಎಂದಳು. ಆಚಾರ್ಯರು ಆಕೆಯನ್ನು ಸ್ತೋತ್ರಮಾಡಿ "ನೀನು ಪ್ರಸನ್ನಳಾದರೆ ನನ್ನೊಡನೆ ಬಾ ; ಮತ್ತೇನನ್ನೂ ನಾನು ಬಯಸುವಂತಿಲ್ಲ' ಎಂದರು. ಅದಕ್ಕೆ ಒಪ್ಪಿದ ಸರಸ್ವತಿಯೊಡನೆ ಸಂತೋಷದಿಂದ ವಿಭಾಡಂಕ ಋಷಿಯ ತಪೋವನಕ್ಕೆ (ಶೃಂಗೇರಿಗೆ) ಬಂದರು (ಚಿ, ಶಂ. ೨೦-೪೫ರಿಂದ ೬೯).

**ಆನಂದಗಿರೀಯ :** ಆಚಾರ್ಯರು ಸರಸವಾಣಿಯ ಬಳಿಗೆ ಬಂದು ನೀನು ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವೆನು- ಎನ್ನುವಷ್ಟರಲ್ಲಿಯೇ ಸರಸ ವಾಣಿಯು 'ನೀನು ಸರ್ವಜ್ಞನು' ಎಂದು ಒಪ್ಪಿಕೊಂಡಳು (ಪ್ರ. ೬೧) ಬಳಿಕ ಆಕೆಯನ್ನು ಮಂತ್ರಬದ್ಧಳಾಗಿ ಮಾಡಿ ವಿದ್ಯಾಪೀಠವನ್ನು ನಿರ್ಮಿಸಿ ಭಾರತೀ ಸಂಪ್ರದಾಯದಲ್ಲಿ ಶಿಷ್ಯರನ್ನಿಟ್ಟರು. ಅಂದಿನಿಂದ **ಭಾರತೀಸಂಪ್ರದಾಯದ** ನಿಷ್ಠ ರಾದ ಶುದ್ಧಾದ್ವೈತಗುರುಗಳು ಪರಮಗುರುಗಳಾದ ಆಚಾರ್ಯಸ್ವಾಮಿಗಳ ಕಟಾಕ್ಷದಿಂದ ಪಡೆದುಕೊಂಡ ವಿದ್ಯಾವೈಶದ್ಯವುಳ್ಳವರಾಗಿರುತ್ತಾರೆ ಎಂದು ವ್ಯವಹಾರ ( ಪ್ರ. ೬೨- ಪು. ೨೨೩, ೨೨೪ )- ಎಂದು ನಮ್ಮಲ್ಲಿರುವ

ತೆಲುಗಕ್ಷರದ ಪ್ರತಿಯಲ್ಲಿದೆ. ಸೋ ಮ ನಾ ಥ ಯ್ಯ ನ ವರು ಉದಾಹರಿಸಿರುವ ಆನಂದಗಿರೀಯವಾಕ್ಯವು ಹೀಗಿವೆ (ಸೋ. ಪಂ. ಪು. ೧೪೫) : "ತತಃ ಪರಂ ಸರಸವಾಣೀಂ ಮನ್ತ್ರಬದ್ಧಾಂ ಕೃತ್ವಾ ಗಗನಮಾರ್ಗಾದೇವ ಶೃಙ್ಗಗಿರಿಸಮೀಪೇ ತುಙ್ಗಭದ್ರಾತೀರೇ ಚಕ್ರಂ ನಿರ್ಮಾಯ ತದಗ್ರೇ ಪರದೇವತಾಂ ಸರಸವಾಣೀಂ ನಿಧಾಯ" ಮಂತ್ರಬಲದಿಂದ ಕಟ್ಟಿ ಗಗನಮಾರ್ಗದಲ್ಲಿಯೇ ಹೊರಟು ಶೃಂಗೇರಿಯ ಸಮೀಪದಲ್ಲಿ ತುಂಗಭದ್ರಾತೀರದಲ್ಲಿ ಚಕ್ರವನ್ನು ನಿರ್ಮಾಣಮಾಡಿ ಅದರ ಮೇಲೆ ಸರಸವಾಣಿಯನ್ನಿಟ್ಟು– ಇತ್ಯಾದಿ. ಈ ವಾಕ್ಯವು ದೇವನಾಗರಿಯ ಪ್ರತಿ (ದೇ. ಪ್ರ. ೧೯೦)ದಲ್ಲಿಯೂ ಇದೆ ; 'ಏವಮ್ ಆಕಲ್ಪಂ ಸ್ಥಿರಾ ಭವ ಮದಾಶ್ರಮೇ ಇತ್ಯಾಜ್ಞಾಪ್ಯ ನಿಜಮಠಂ ಕೃತ್ವಾ[1]' ಎಂದೂ ಇದೆ ! ಆನಂತಾನಂದಗಿರೀಯವಾಕ್ಯಗಳು ಹೀಗೆ ಬೇರೆಬೇರೆಯ ಪುಸ್ತಕಗಳಲ್ಲಿ ಏಕೆ ಬದಲಾಯಿಸಿರುತ್ತವೆಯೋ, ಯಾವ ಯಾವದರಲ್ಲಿ ಯಾರಯಾರ ಕೈವಾಡವಾಗಿದೆಯೋ ಈಶ್ವರನೇ ಬಲ್ಲ.

ಶಂಕರವಿಜಯಸಂಗ್ರಹ (ಅಥವಾ ಕೂಷ್ಮಾಂಡಶಂಕರವಿಜಯ)ದಲ್ಲಿ ಆಚಾರ್ಯರು ತಮ್ಮೊಡನೆ ಬರಬೇಕೆಂದು ಕೇಳಿಕೊಂಡಂತೆ ವಾಣಿಯು 'ನಿನ್ನೊಡನೆ ಬಂದೇನು ; ಆದರೆ ನನ್ನನ್ನು ಹಿಂತಿರುಗಿ ನೋಡಬಾರದು ; ಹಾಗೆ ನೋಡಿದರೆ ನನ್ನ ಲೋಕಕ್ಕೆ ತೆರಳುವೆನು' ಎಂದಳು. ಪಂಪಾಪುರದಕಡೆಗೆ ಹೋಗುತ್ತಿರುವಲ್ಲಿ ಆಕೆಯು ಬರುತ್ತಾಳೊ ಇಲ್ಲವೊ ?– ಎಂದು ಆಚಾರ್ಯರು ಹಿಂತಿರುಗಿ ನೋಡಲು ಆಕೆ ಅವರ ಅಪ್ಪಣೆಯನ್ನು ಪಡೆದುಕೊಂಡು ಬ್ರಹ್ಮಲೋಕಕ್ಕೆ ಹೊರಟುಹೋದಳು (ಶಂ. ವಿ. ಸಂ. ೬-೯ರಿಂದ ೧೩) ಎಂದಿದೆ, ಆದರೆ ಉತ್ತರದೇಶದಿಂದ ಬರುವಾಗ ಹಂಪೆಗೆ ಬರುವ ದಾರಿಯಲ್ಲಿ ಶೃಂಗೇರಿಯು ಸಿಕ್ಕುವದೇ ಇಲ್ಲವಾದ್ದರಿಂದ ಆ ಕಥೆಗೆ ಯಾವ ಬೆಲೆಯನ್ನು ಕೊಡೋಣ ?

ಈ ಕಥೆಯಾದ ಬಳಿಕ ಮಂಡನನಿಗೆ ಸಂನ್ಯಾಸವನ್ನು ಕೊಟ್ಟು ಸುರೇಶ್ವರಾಚಾರ್ಯರೆಂಬ ಹೆಸರನ್ನಿಟ್ಟು ಶಂಕರಾಚಾರ್ಯರು ಮಾಡಿದ ಉಪದೇಶವು (೧೦-೭೪ರಿಂದ ೧೦೪ರವರೆಗೆ ಇದೆ. ಅಲ್ಲಿಂದ ಮುಂದಕ್ಕೆ ಸುರೇಶ್ವರಾಚಾರ್ಯರು ಕೆಲವು ದಿವಸಗಳು ನರ್ಮದೆಯ ಸುತ್ತಲೂ ಮಗಧದೇಶದಲ್ಲಿ ವಾಸವನ್ನು ಮಾಡಿಕೊಂಡಿದ್ದರು. (ಮಾ. ಶಂ. ೧೦-೧೦೫) ಎಂದಿದೆ. ಮಂಡನನಿಗೆ ಮೊದಲೇ ಸಂನ್ಯಾಸವಾಗಿತ್ತೆಂದೂ ಮಿಕ್ಕೆರಡು ಶಂಕರವಿಜಯಗಳಲ್ಲಿರುವದನ್ನು ಆಗಲೇ ಹೇಳಿರುತ್ತೇವೆ. ನಾಲ್ವರು ಶಿಷ್ಯರೊಡನೆಯೇ ಆಚಾರ್ಯರು ಹೋಗಿದ್ದು ಪರಕಾಯ ಪ್ರವೇಶಮಾಡಿದರೆಂದೂ ಆ ಇಬ್ಬರ ಮತ. ಮಂಡನನು ಸಂನ್ಯಾಸಿಯಾದ ಬಳಿಕ 'ಕುಬೇರದಿಕ್ಕಿಗೆ ಹೊರಟುಹೋದನು' ಎಂದೂ (ಆ. ಶಂ. ಪು. ೩೧೬) ಮಂಡನ

1. ಮಠದ ವಿಚಾರವನ್ನು ಮುಂದೆ ೧೩ರ ಖಂಡದಲ್ಲಿ ಮತ್ತೆ ಪ್ರಸ್ತಾಪಿಸಲಿರುವೆ.

ನನ್ನು ಗೆಲ್ಲುವದಕ್ಕೆ ಹೊರಟಾಗಲೇ ಅವರಲ್ಲಿ ಸುರೇಶ್ವರನೆಂಬ ಶಿಷ್ಯನೊಬ್ಬನು ಇದ್ದನೆಂದೂ (ಶಿ. ಶಂ ಪು. ೨೧೨) ಆನಂದಗಿರೀಯದಲ್ಲಿರುವವನ್ನು ಆಗಲೆ (ಪು. ೧೬೪) ಹೇಳಿರುತ್ತೇವೆ.

## ಆಚಾರ್ಯರು ಬೆಂಕಿಹೊತ್ತಿಕೊಂಡಿದ್ದ ಶರೀರವನ್ನು ಹೊಕ್ಕರೆ ?

೧೧೭. ಈಗ ಈ ಕಥಾಂಶವನ್ನು ವಿಮರ್ಶಿಸೋಣ : (೧) ಕಥೆಯ ವಿವರವನ್ನು ಹೇಳುವ ಪ್ರಕಾರವು ಒಂದೊಂದು ಶಂಕರವಿಜಯದಲ್ಲಿ ಒಂದೊಂದು ಬಗೆಯಾಗಿದೆ ಎಂಬುದು ಸ್ಪಷ್ಟವಾಗಿದೆ. (೨) ವಾನರರು ಸೀತೆಯನ್ನು ಹುಡುಕಿದಂತೆ ಶಿಷ್ಯರು ಆಚಾರ್ಯರನ್ನು ಹುಡುಕಿಕೊಂಡು ಬೆಟ್ಟದಿಂದ ಬೆಟ್ಟಕ್ಕೆ ದೇಶದಿಂದ ದೇಶಕ್ಕೆ ಹೋದರೆಂದು ಮಾಧವೀಯದಲ್ಲಿರುವದು ಕಥೆಗೆ ಹೊಂದಿಕೆಯಾಗಿಲ್ಲ. ಏಕೆಂದರೆ ಅಮರುಕರಾಜನ ಶರೀರದಲ್ಲಿ ತಾವು ಪ್ರವೇಶಿಸುವೆನೆಂದು ಆಚಾರ್ಯರೇ ಬಾಯಿಬಿಟ್ಟು ಹೇಳಿದ್ದರು. (೩) ಸರಸ್ವತಿಯು ಕೊಟ್ಟಿದ್ದ ಕಾಲದ ಅವಧಿಯು ಮೀರಿದ್ದರಿಂದ ಶಿಷ್ಯರು ಹುಡುಕಿಕೊಂಡು ಹೋದರು ಎಂಬ ಮಾಧವಕವಿಯ ಕಥೆಗಿಂತ ಅಮರುಕನ ಮಂತ್ರಿಯು ರಾಣಿಯ ಅಪ್ಪಣೆಯಂತೆ ಮರದ ಪೊಟ್ಟರೆಯಿಂದ ಶವವನ್ನು ಎಳೆದು ಚಿತೆಯಮೇಲೆ ಇಟ್ಟನು ಎಂಬ ಕಥೆಯು ಹೆಚ್ಚು ಸ್ವಾಭಾವಿಕವಾಗಿದೆಯಾದರೂ ಶವಕ್ಕೆ ಬೆಂಕಿಯನ್ನು ಹಾಕಿದಮೇಲೆ ಶಿಷ್ಯರು ರಾಜಸಭೆಗೆ ಹೋಗಿ ಗಾನಮಾಡಿ ಆಚಾರ್ಯರನ್ನು ಹಿಂತಿರುಗಿಸಿದರೆಂದಿರುವದು ಹೊಂದಿಕೆಯಾಗಿಲ್ಲ ; ಇಷ್ಟೆಲ್ಲ ಆಗುವವರೆಗೂ ಶವವು ಸುಡದೆ ಹಾಗೇ ಇತ್ತೆ ? –ಎಂಬ ಶಂಕೆ ತಲೆದೋರುತ್ತದೆ. ದೇಹಕ್ಕೆ ಬೆಂಕಿಹಾಕಿದ್ದನ್ನು ಕಂಡು ಶಿಷ್ಯರು ಸುಮ್ಮನಿದ್ದರೆ ? ಅವರು ಅರಸಿನಕಡೆಯ ಭೃತ್ಯರನ್ನು ಬೆಂಕಿಹಾಕದಂತೆ ಅಡ್ಡಿ ಮಾಡಲಿಲ್ಲವೆ ? ಅಥವಾ ರಾಜಭೃತ್ಯರು ಅವರುನ್ನು ಅಸಡ್ಡೆಮಾಡಿ ಅಲ್ಲಿಂದ ಅಟ್ಟಲಿಲ್ಲವೆ ?– ಎಂಬ ಇನ್ನೂ ಒಂದು ಶಂಕೆಯು ಎದ್ದುಕೊಳ್ಳುತ್ತದೆ. (೪) ಹಾಡನ್ನು ಕೇಳಿ ಮೂರ್ಛಿತನಾಗಲು ಶಂಕರರು ಹಕ್ಕಿಯ ರೂಪವನ್ನು ಧರಿಸಿ ಹೋದರೇಕೆ ? ಹಿಂದೆ ರಾಜನ ಶರೀರವನ್ನು ಆಚಾರ್ಯರು ಯಾವ ರೂಪಾಂತರವನ್ನೂ ಧರಿಸದೆ ಹೊಕ್ಕಿರಲಿಲ್ಲವೆ ? ಒಂದು ಶರೀರವನ್ನು ಬಿಟ್ಟು ಮತ್ತೊಂದು ಶರೀರಕ್ಕೆ ಹೋಗುವದು ಯೋಗಿಗಳಿಗೆ ಶಕ್ಯವೆಂದೇ ಯೋಗಶಾಸ್ತ್ರದ ಪ್ರಕ್ರಿಯೆಯಾದ್ದರಿಂದ ಇದು ಅನವಶ್ಯವಾದ ಕಲ್ಪನೆಯಾಗಿರುತ್ತದೆ. (೫) ಚಿತೆಯಲ್ಲಿ ಶವಕ್ಕೆ ಬೆಂಕಿಹತ್ತಿಕೊಂಡಾಗ ಆಚಾರ್ಯರು ಅದರೊಳಗೆ ಹೊಕ್ಕು ಎದ್ದರೆ ರಾಜಭೃತ್ಯರು ಸುಮ್ಮನಿದ್ದರೆಂಬುದು ಅಸಂಭಾವಿತ. ಅವರು ದೇಹವನ್ನು ಪೂರ್ಣವಾಗಿ ಸುಟ್ಟಿರಬೇಕು, ಇಲ್ಲವೆ ಶವವು ಸಜೀವವಾಗಿ ಎದ್ದದ್ದನ್ನು ಕಂಡು ಅಂಜಿ ಪಲಾಯನಮಾಡಿರಬೇಕು. ಹಾಗೇನೂ ಶಂಕರವಿಜಯಕಾರರು ಹೇಳಿಲ್ಲ.

## ನೃಸಿಂಹನು ಆಚಾರ್ಯರನ್ನು ಉರಿಯಿಂದ ಕಾಪಾಡಿದನೆ ?

೧೧೮. ನರಸಿಂಹನ ಕೃಪೆಯಿಂದ ಉರಿ ಆರಿದಮೇಲೆ ಅಲ್ಲಿಯವರೆಗೆ ಸುಟ್ಟಿದ್ದ ಭಾಗದಲ್ಲಿ ಸುಟ್ಟ ಗುರುತು ಶರೀರದಲ್ಲಿ ಉಳಿದಿರಬೇಕಲ್ಲವೆ ? ಶಂಕರ ವಿಜಯದಲ್ಲಿ ಆ ವಿಷಯವನ್ನೇನೂ ಹೇಳಿಲ್ಲ. ಲಕ್ಷ್ಮೀನರಸಿಂಹಕರಾವಲಂಬನ ಸ್ತೋತ್ರವು ಪ್ರಕೃತಸಂದರ್ಭದಲ್ಲಿ ಮಾಡಿದ್ದೆಂಬುದಕ್ಕೆ ಗಮಕವಾದ ಪದವಾಗಲಿ ವಾಕ್ಯವಾಗಲಿ ಆ ಸ್ತೋತ್ರದಲ್ಲಿಲ್ಲ. ಶಂಕರವಿಜಯಕಾರರೂ ಡಿಂಡಿಮವ್ಯಾಖ್ಯಾಕಾರನೂ ಇದು ಸಂದರ್ಭಕ್ಕೆ ತಕ್ಕದಾಗಿದೆಯೆಂದು ಯಾವ ಆಧಾರದಮೇಲೆ ನಿರ್ಧಾರಮಾಡಿರುವರೋ ನಮಗಂತೂ ತಿಳಿಯದು. ಈ ಸ್ತೋತ್ರದ ಎಂಟನೆಯ ಶ್ಲೋಕದಲ್ಲಿ 'ಸಂಸಾರದಾವದಹನಾತುರಭೀಕರೋರುಜ್ವಾಲಾವಳೀಭಿರತಿದಗ್ಧತನೂರುಹಸ್ಯ| ತ್ವತ್ಪಾದಪದ್ಮಸರಸೀ ಶರಣಾಗತಸ್ಯ ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಮ್ಬಮ್ ||' ಸಂಸಾರವೆಂಬ ದಾವಾಗ್ನಿಯ ದೊಡ್ಡ ಜ್ವಾಲಾವಳಿಗಳಿಂದ ಅತಿಯಾಗಿ ದಗ್ಧವಾದ ತನೂರುಹನಾದ(ಮೈಗೂದಲುಳ್ಳ), ನಿನ್ನ ಪಾದಪದ್ಮಗಳ ಸರೋವರವನ್ನು ಶರಣುಹೊಂದಿದ ನನಗೆ ಎಲೈ ಲಕ್ಷ್ಮೀನೃಸಿಂಹನೆ, ನಿನ್ನ ಕೈಯ ಅವಲಂಬನವನ್ನು ಕೊಡು (ನನ್ನನ್ನು ಕೈಹಿಡಿ)– ಎಂಬರ್ಥವುಳ್ಳ ಶ್ಲೋಕವೊಂದು ಇದೆ. ಆದರೆ ಅಲ್ಲಿ ಆಚಾರ್ಯರ ಮೈಯು ಸುಡುತ್ತಿತ್ತೆಂಬುದಕ್ಕೆ ಸೂಚಕವಾದ ಶಬ್ದವೇನೂ ಕಾಣಿಸುವದಿಲ್ಲ. ಈ ಸ್ತೋತ್ರದ ಬೇರೆಯ ಪದ್ಯಗಳಲ್ಲಿ ಸಂಸಾರವನ್ನು ಘೋರವಾದ ಕಾಡು, ಆಳವಾದ ಭಾವಿ, ಸಾಗರ, ವೃಕ್ಷ, ಸರ್ಪ, ಬಲೆ, ಮದ್ದಾನೆ –ಇವುಗಳಿಗೂ ಹೋಲಿಸಿದ ರೂಪಕಗಳನ್ನು ಕೊಟ್ಟಿದೆ. ಸಂಸಾರವನ್ನು ಹೀಗೆ ರೂಪಕಗಳಿಂದ ವರ್ಣಿಸಿದಮಾತ್ರಕ್ಕೆ ಆಚಾರ್ಯರು ಬೆಂಕಿಯಲ್ಲಿ ಬಿದ್ದಾಗ ಮಾಡಿದ ಸ್ತೋತ್ರವಿದೆಂದು ತರ್ಕಿಸುವದಕ್ಕೆ ಆಧಾರವೇನಿದೆ ? 'ಮಮ ದೇಹಿ ಕರಾವಲಮ್ಬಮ್' ನನ್ನ ಕೈಯನ್ನು ಹಿಡಿ– ಎಂದು ಪ್ರತಿಯೊಂದು ಪದ್ಯದ ಕೊನೆಯಲ್ಲಿಯೂ ಇರುವದನ್ನು ಕಂಡು ನರಸಿಂಹನು ಶಂಕರಾಚಾರ್ಯರನ್ನು ಕೈಹಿಡಿದು ಬೆಂಕಿಯ ಜ್ವಾಲೆಯಿಂದ ಈಚೆಗೆ ಎಳೆದನು– ಎಂಬ ಕಲ್ಪನೆಯನ್ನು ಯಾರೋ ಮಾಡಿರಬಹುದೆಂದು ತೋರುತ್ತದೆ.

## ಆಚಾರ್ಯರು ಶಾರದೆಯನ್ನು ಜಯಿಸಿ ಶೃಂಗೇರಿಗೆ ಕರೆತಂದದ್ದು

೧೧೯. ಆಚಾರ್ಯರು ಮಂಡನನ ಮನೆಗೆ ಬಂದಾಗ ಸರಸ್ವತಿಯು 'ಅವಧಿಯನ್ನು ಮೀರಿ ಬಂದದ್ದೇಕೆ ?' ಎಂದು ಆಚಾರ್ಯರನ್ನು ಕೇಳಿಲ್ಲ; 'ನನ್ನ ಪ್ರಶ್ನೆಗಳಿಗೆ ಉತ್ತರವೇನು ?' ಎಂದೂ ಕೇಳಿಲ್ಲ. ಇದನ್ನು ನೋಡಿದರೆ ಅವರನ್ನು ಜಯಿಸುವದಕ್ಕೆ ಕಾಮಶಾಸ್ತ್ರದ ವಿಷಯದ ಪ್ರಶ್ನೆಯನ್ನು ಹಾಕಿದ್ದಳೊ, ಇಲ್ಲವೊ? –ಎಂಬ ಸಂಶಯವು ಎದ್ದುಕೊಳ್ಳುತ್ತದೆ. (೨) ಈಗ ಅವಳಿಗೆ ಆಚಾರ್ಯರು

ಸಾಕ್ಷಾತ್ಪರಶಿವನೇ ಎಂಬ ಅರಿವಾಯಿತು ಎಂಬುದೂ ಸರಿಯಲ್ಲ ; ಏಕೆಂದರೆ ಆಕೆಯು ಮೊದಲೇ ಹಾಗೆಂದು ತಿಳಿದಿದ್ದು ಅವರನ್ನು ವಾದಕ್ಕೆ ಕರೆದಿದ್ದಳು (ಮಾ. ಶಂ. ೯–೫೩, ೫೭) ; ಈಗೇಕೆ ವಾದವನ್ನು ಮಾಡಲಿಲ್ಲ ? (೩) ಆಚಾರ್ಯರು 'ನೀನು ಸರಸ್ವತಿಯೆಂಬುದನ್ನು ಬಲ್ಲೆ, ಅಥವಾ ಈಗ ತಿಳಿದೆನು' ಎಂದು ಹೇಳಿ ಕೊಂಡಿರುವದೂ ಹೊಂದಿಕೆಯಾಗಿಲ್ಲ ; ಏಕೆಂದರೆ ಹಾಗೆಂದು ತಿಳಿದುಕೊಂಡೇ ಅವರು ವಾದಕ್ಕೆ ಒಪ್ಪಿದ್ದರು. (೪) ಈವರೆಗೆ ಶೃಂಗೇರಿಯ ಪರಾಮರ್ಶವೇ ಇರಲಿಲ್ಲ ; ಈಗ ತಟ್ಟನೆ 'ನಾನು ಸ್ಥಾಪಿಸುವ ಶೃಂಗೇರಿಯೇ ಮುಂತಾದ ಅರ್ಚನಾ ಸ್ಥಾನಗಳಲ್ಲಿ ನಿನ್ನ ಸಾನಿಧ್ಯಿಯಿರಲಿ' ಎಂದು ಬೇಡಿಕೊಂಡದ್ದು ಹೇಗೆ ? ಅಥವಾ ಚಿದ್ವಿಲಾಸೀಯದಲ್ಲಿಯೂ ಆನಂದಗಿರೀಯದಲ್ಲಿಯೂ ಹೇಳಿರುವಂತೆ ಆಚಾರ್ಯರು ಶಾರದೆಯನ್ನು ಪ್ರಾರ್ಥಿಸಿಯಾಗಲಿ ಮಂತ್ರಶಕ್ತಿಯಿಂದ ಬಂಧಿಸಿಯಾಗಲಿ ಶೃಂಗೇ ರಿಗೆ ಕರೆತಂದರೆಂಬ ಕಥೆಗೆ ಅವಕಾಶವೆಲ್ಲಿದೆ ? ವ್ಯಾಸಾಚಲೀಯಾದಿಗಳಲ್ಲಿ ಈ ವಾದದ ಪ್ರಸ್ತಾಪವೇ ಇಲ್ಲವೆಂಬುವನ್ನೇ ಓದುಗರು ಇಲ್ಲಿ ನೆನಪಿನಲ್ಲಿಡಬೇಕಾಗಿದೆ.

## ಐತಿಹಾಸಿಕಭಾರತಿ

೧೧೦. ಆಚಾರ್ಯರಿಗೆ ಭಾರತೀಮಂಡನರೊಡನೆ ಆದ ವಾದಕ್ಕೆ ಆಧಾರ ವಾಗಿ ಐತಿಹಾಸಿಕಅಂಶವೇನಾದರೂ ಇದ್ದಿರಬಹುದೆ ?– ಎಂಬುದೊಂದು ಪ್ರಶ್ನೆ. ಇದು ನಾವುನಾವು ಮಾಡುವ ಊಹೆಯನ್ನವಲಂಬಿಸಿರುತ್ತದೆಯಾದ್ದರಿಂದ ಈ ವಿಷಯಕ್ಕೆ ಐಕಮತ್ಯವಾಗುವ ಸಂಭವವಿಲ್ಲವೆಂದು ಹೇಳಬೇಕಾದದ್ದೇ ಇಲ್ಲ. ಸಿ.ಎನ್. ಕೃಷ್ಣಸ್ವಾಮಿ ಅಯ್ಯರ್‌ರವರು ಈ ವಿಷಯಕ್ಕೆ ಹೇಳುವದೇನೆಂದರೆ ಭಾರತಿಯು ವಿದ್ಯಾವತಿಯಾಗಿದ್ದದ್ದರಿಂದ ಆಕೆಯನ್ನು ಈಚಿನವರು ಸರಸ್ವತಿಯ ಅವತಾರವೆಂದು ಎಣಿಸಿದ್ದು ಸ್ವಾಭಾವಿಕವಾಗಿದೆ. ಸ್ತ್ರೀಯರಿಗೆ ವಿದ್ಯಾವತಿಯ ರಾಗುವದಕ್ಕೆ ಆ ಕಾಲದಲ್ಲಿ ಈಗಿರುವದಕ್ಕಿಂತ ಹೆಚ್ಚಿನ ಅವಕಾಶವಿತ್ತು. ಬೌದ್ಧರ ಕಾಲದಲ್ಲಿ ಸ್ತ್ರೀಯರೂ ಸಂನ್ಯಾಸಿನಿಯರಾಗಿ ಧರ್ಮಪ್ರಸಾರದಲ್ಲಿಕೂಡ ತೊಡ ಗಿದ್ದರು ; ಅವರ ಸಂಪರ್ಕದಿಂದ ಈ ವಿಷಯಕ್ಕೆ ಹಿಂದುಗಳಮೇಲೂ ಪರಿಣಾಮ ವಾಗಿರಬಹುದು. ಆದ್ದರಿಂದ ಶಂಕರರಿಗೂ ಆಕೆಗೂ ವಾದವಾಗಿದ್ದರೆ ಆಶ್ಚರ್ಯ ವಿಲ್ಲ. ಮಂಡನನು ತನ್ನ ವಿದ್ಯಾತಿಶಯದಲ್ಲಿದ್ದ ಅತಿವಿಶ್ವಾಸದಿಂದಲೇ ತಾನು ಸೋತರೆ ಭಿಕ್ಷುವಾಗುವೆನೆಂದು ಪಣತೊಟ್ಟಿದ್ದನು. ಗಂಡನು ಪರಾಜಿತನಾದ ದ್ದನ್ನು ಕಂಡು ಇನ್ನು ಪತಿವಿಯೋಗವು ತನಗೆ ಕಟ್ಟಿಟ್ಟ ಬುತ್ತಿಯೆಂದು ತಿಳಿದ ಮೇಲೆ ಆಕೆಯು ತಾನೂ ವೈರಾಗ್ಯದಿಂದ ಪತಿಯನ್ನೇ ಹಿಂಬಾಲಿಸಿರಬಹುದು. ಮುಂದೆ ಶೃಂಗೇರಿಯಲ್ಲಿ ಮಠವು ಸ್ಥಾಪಿತವಾಗಿ ಮಂಡನನೇ ಅದಕ್ಕೆ ಅಧ್ಯಕ್ಷನಾದ ಬಳಿಕ ಆಕೆ ಅಲ್ಲಿಗೆ ಬಂದು ತನ್ನ ಆಯುಃಶೇಷವನ್ನು ಭಗವಚ್ಚಿಂತನೆಯಲ್ಲಿಯೇ ಕಳೆದಳೆಂದು ಕಲ್ಪಿಸುವದು ಆಕೆಯ ಯೋಗ್ಯತೆಗೂ ಸ್ವಭಾವಕ್ಕೂ ಅನುಸಾರ

ಹಾಗುತ್ತದೆ. ತನ್ನ ಭಾಗಕ್ಕೆ ಇನ್ನು ಮೇಲೆ ಗಂಡನು ಮೃತನೇ ಆದರೂ ಆಸನಂತೆ ತಾನೂ ಆಚಾರ್ಯರ ಶಿಷ್ಯಳಾಗಿ ಅವರನ್ನು ಹಿಂಬಾಲಿಸಿದ್ದು ಯುಕ್ತವೇ ಆಗುತ್ತದೆ ವಿರಕ್ತಳೂ ವಿದ್ಯಾವತಿಯೂ ಆಗಿದ್ದ ಆಕೆಯ ಸಂಸಿದ್ಧಿಯು, ಅದ್ವೈತ ಪ್ರಚಾರಕ್ಕೆ ಸಹಾಯಕವಾಗಿರಬಹುದು. ಆ ಸಹಾಯವು ಎಷ್ಟರಮಟ್ಟಿಗೆ ಆಗಿರಬಹುದೆಂಬುವನ್ನು ಮಾತ್ರ ಈಗ ನಿಶ್ಚಯಿಸುವದು ಸಾಧ್ಯವಾಗುವಂತಿಲ್ಲ (CN KS. pp. 50 52).

ಕೃಷ್ಣಸ್ವಾಮಯ್ಯರ ಈ ಅಭಿಪ್ರಾಯದ ಸಾರಾಸಾರತೆಯ ನಿರ್ಧಾರಣ ಕಾರ್ಯವನ್ನು ನಾವು ವಾಚಕರಿಗೇ ಬಿಟ್ಟುಬಿಟ್ಟಿರುತ್ತೇವೆ. ಶಾರದಾಶಂಕರ ವಾದವು ಈ ಸಂದರ್ಭದಲ್ಲಿ ಆಗಲೇ ಇಲ್ಲವೆಂದೂ ಅದು ಕಾಂಚಿಯಲ್ಲಿ ಆಯಿತೆಂದೂ ಅಭಿಪ್ರಾಯಪಡುವ ಮತ್ತೊಂದು ಸಂಪ್ರದಾಯದ ಕಥೆಯನ್ನು ಆಗಲೆ (ಖಂ. ೧೧೩) ತಿಳಿಸಿಯೇ ಇರುತ್ತೇವೆ. ಮಂಡನವಾದದ ವಿಚಾರದಲ್ಲಿ ಬಲದೇವ ಉಪಾಧ್ಯಾಯರು ಮತ್ತೊಂದು ಬಗೆಯ ಅಭಿಪ್ರಾಯವನ್ನು (ಬಲ. ಶಂ. ಪು ೮೮) ಪ್ರಕಟಿಸಿರುತ್ತಾರೆ. ಅದ್ವೈತಿಯಾದ ಮಂಡನನೊಡನೆಯೇ ಈ ವಾದವಾಯಿತು. ಶಂಕರ, ಮಂಡನ– ಇಬ್ಬರೂ ಅದ್ವೈತಿಗಳೇ ಆದರೂ ಅವರಿಬ್ಬರ ಅದ್ವೈತಪ್ರಕ್ರಿಯೆಗಳಲ್ಲಿ ಬಹಳ ಭೇದವಿರುತ್ತದೆ; ಆದ್ದರಿಂದ ಶಂಕರರು ಮಂಡನನ ಪ್ರಕ್ರಿಯೆಯನ್ನು ಉಪನಿಷದ್ವಿರುದ್ಧವೆಂದು ಭಾವಿಸಿರಬಹುದು. ಮಂಡನ ನಂಥ ಪ್ರಬಲಪ್ರತಿಸ್ಪರ್ಧಿಯೊಬ್ಬನು ಇರುವವರೆಗೆ ತಮ್ಮ ಪ್ರಕ್ರಿಯೆಯನ್ನು ಪ್ರಚಾರಮಾಡುವದು ಸಾಧ್ಯವಾಗಲಾರದು– ಎಂದೆಣಿಸಿ ಅವರು ವಾದಮಾಡಿರಬೇಕು– ಎಂಬುದು ಉಪಾಧ್ಯಾಯರ ಊಹೆ. ಬ್ರಹ್ಮಸಿದ್ಧಿಕಾರ ಮಂಡನನೊಡನೆ ಆಚಾರ್ಯರಿಗೆ ನಿಜವಾಗಿಯೂ ವಾದವಾಯಿತೆಂದು ಇಟ್ಟುಕೊಳ್ಳುವದಾದರೆ ಈ ಕಲ್ಪನೆಯೊಂದನ್ನೇ ನಾವು ಅವಲಂಬಿಸಬೇಕಾಗುತ್ತದೆ– ಎಂಬುದು ನಿಶ್ಚಯ. ಆದರೆ ಮಂಡನನು ಶಂಕರಾಚಾರ್ಯರ ಸೂತ್ರಭಾಷ್ಯವನ್ನು ಪೂರ್ವಪಕ್ಷವಾಗಿ ಉದಾಹರಿಸಿಕೊಂಡಿರುತ್ತಾನೆಂಬ ಕುಪ್ಪುಸ್ವಾಮಿಶಾಸ್ತ್ರಿಗಳವರ ಪಕ್ಷವನ್ನು ಅಂಗೀಕರಿಸಿದರೆ ಆಗ ಇದು ಸಂಭಾವಿತವೇ ಅಲ್ಲವೆಂದಾಗುವದು. ಆದ್ದರಿಂದ ಈ ಅಭಿಪ್ರಾಯದ ವಿಷಯಕ್ಕೂ ವಾಚಕರು ತಮ್ಮತಮ್ಮ ತೀರ್ಮಾನವನ್ನೇ ಮಾಡಿಕೊಳ್ಳಬೇಕಾಗಿರುತ್ತದೆ. ಅದು ಹೇಗೇ ಆದರೂ ಉಭಯಭಾರತಿಯೊಡನೆ ವಾದವಾಯಿತೆಂಬುದು ಬಲುಮಟ್ಟಿಗೆ ಅಸಂಭಾವಿತವೆಂದೇ ನಮಗೆ ಕಾಣುತ್ತದೆ. ಏಕೆಂದರೆ ಸರಸ್ವತಿಯೊಡನೆ ವಾದವಾದದ್ದು ಬೇರೊಂದು ಸಂದರ್ಭದಲ್ಲಿ ಎಂದು ಕಾಂಚೀಸಂಪ್ರದಾಯದವರು ಹೇಳುತ್ತಿದ್ದಾರೆ ; ಮಂಡನಪರಾಜಯವಾದ ದಿನವೇ ಸರಸ್ವತಿಯು ಅಂತರ್ಧಾನಳಾಗಿಬಿಟ್ಟಳೆಂದು ವ್ಯಾಸಾಚಲೀಯದಲ್ಲಿರುವದನ್ನು ಆಗಲೆ (ಖಂ. ೧೧೧) ಹೇಳಿಯೂ ಇರುತ್ತೇವೆ.

# ೧೨. ಮಂಡನನು ಆಚಾರ್ಯರ ಶಿಷ್ಯನಾದದ್ದು

## ಮಂಡನನ ಸಂನ್ಯಾಸ

೧೨೧. ಚಿದ್ವಿಲಾಸ, ಅನಂತಾನಂದಗಿರಿ- ಇಬ್ಬರೂ ಮಂಡನಸಂನ್ಯಾಸವು ಸರಸ್ವತೀಜಯಕ್ಕಿಂತ ಮೊದಲೇ ಆಯಿತೆಂದು ಹೇಳಿರುವದನ್ನು ಹಿಂದೆಯೇ ತಿಳಿಸಿರುತ್ತೇವೆ. ಮಾಧವೀಯದಲ್ಲಿ ಮಾತ್ರ ಆಚಾರ್ಯರು ಕಾಮಶಾಸ್ತ್ರದ ಮರ್ಮವನ್ನು ಕಲಿತುಕೊಂಡುಬಂದಬಳಿಕ ಮಂಡನನಿಗೆ ಸಂನ್ಯಾಸವಾಯಿತೆಂದು ಬರೆದಿದೆ. ವ್ಯಾಸಾಚಲೀಯದಲ್ಲಿ ಭಾರತಿಯ ವಾದವೇ ಇಲ್ಲವಾದ್ದರಿಂದ ಪರಕಾಯಪ್ರವೇಶವೃತ್ತಾಂತವು ಇಲ್ಲವೆಂದು (ಖಂ. ೧೧೧) ತಿಳಿಸಿದುತ್ತೇವಷ್ಟೆ ? ಆದರೆ ವಿಶ್ವರೂಪನಿಗೆ ಆಚಾರ್ಯರು ವಾದಾನಂತರವೇ ಮಾಡಿದ ಉಪದೇಶವು ಮಾತ್ರ ಅಕ್ಷರಶಃ ಮಾಧವವ್ಯಾಸಾಚಲೀಯಗಳಿಗೆ ಸಮಾನವಾಗಿದೆ.

ಮಾಧವೀಯದಲ್ಲಿ 'ತಂ ಸಮೀಕ್ಷ್ಯ ನಭಸಶ್ಚ್ಯುತಂ ಸ ಚ ಪ್ರಾಞ್ಜಲಿಃ ಪ್ರಣತಪೂರ್ವವಿಗ್ರಹಃ । ಅರ್ಹಣಾಭಿರಭಿಪೂಜ್ಯ ತಸ್ಥಿವಾನೀಕ್ಷಣೈರ ನಿಮಿಷೈಃ ಪಿಬನ್ನಿವ ॥ (ಆಕಾಶದಿಂದ ಇಳಿದ ಅವರನ್ನು ಕಂಡು ಕೈಮುಗಿದು ತಲೆಬಾಗಿ ಯಥಾವಿಧಿಯಾಗಿ ಪೂಜಿಸಿ ಎವೆಯಿಕ್ಕದೆ ನೋಡುತ್ತಾ ನಿಂತನು (ಮಾ. ಶಂ. ೧೦-೬೩) ಎಂದು ಹೇಳಿದಮೇಲೂ

ಸ ವಿಶ್ವರೂಪೋ ಬತ ಸತ್ಯವಾದೀ । ಪಪಾತ ಪಾದಾಮ್ಬುಜಯೋರ್ಯತೀಶಃ ।
ಗೃಹಂ ಶರೀರಂ ಮಮ ಯಚ್ಚ ಸರ್ವಂ । ತವೇತಿ ವಾದೀ ಮುದಿತೋ ಮಹಾತ್ಮಾ ॥

ಎಂದು ಬರೆದಿದೆ. ಈ ಶ್ಲೋಕವು ವ್ಯಾಸಾಚಲೀಯದಲ್ಲಿಯೂ (ವ್ಯಾ.ಶಂ.೬-೧೦೩) ಇದೆ. ಇದು ವ್ಯಾಸಾಚಲೀಯಕ್ಕೆ ಹೊಂದುವಂತೆ ಮಾಧವೀಯಕ್ಕೆ ಹೊಂದುಗೆ ಯಿಲ್ಲ. ಏಕೆಂದರೆ 'ಆ ಸತ್ಯವಾದಿಯಾದ ವಿಶ್ವರೂಪನು ಯತೀಶ್ವರನ ಪಾದಗಳಿಗೆ ಬಿದ್ದನು ; ಮನೆಯೂ ಶರೀರವೂ ಮತ್ತು ನನ್ನ ಸರ್ವಸ್ವವೂ ತಮ್ಮವೇ ಎಂದು ಸಂತೋಷದಿಂದ ಆ ಮಹಾತ್ಮನು ನುಡಿದನು- ಎಂಬುದು ಶ್ಲೋಕದ ಅರ್ಥ. 'ಸತ್ಯವಾದೀ' ಎಂಬ ವಿಶೇಷಣವು ಮಾಧವೀಯಕಥಾಸಂದರ್ಭಕ್ಕೆ ಹೊಂದುಗಡೆ ಯಾಗಿಲ್ಲ ; ಆಚಾರ್ಯರಿಗೆ ನಮಸ್ಕಾರವನ್ನು ಮಾಡಿದನು ಎಂದು ಮೊದಲೇ ಹೇಳಿದೆ. ಈಗ ಮತ್ತೆ ಅದೇ ಅರ್ಥದ ಶ್ಲೋಕಾರ್ಥವನ್ನು ಹೇಳುವದಕ್ಕೇನು ಕಾರಣ ? ಈ ಸಂದರ್ಭದಲ್ಲಿ ಮಂಡನನ ಸತ್ಯವಾದಿತ್ವವೇನು ?- ಎಂಬ ಪ್ರಶ್ನೆ ಗಳಿಗೆ ಉತ್ತರವು ಸಿಕ್ಕುವದಿಲ್ಲ. ವ್ಯಾಸಾಚಲೀಯದಲ್ಲಾದರೆ ವಿಶ್ವರೂಪನು

ಪರಾಜಿತನಾದ್ದರಿಂದ ತಾನು ಮೊದಲೇ ಪ್ರತಿಜ್ಞೆಮಾಡಿದ್ದಂತೆ 'ನಿಮ್ಮ ಶಿಷ್ಯನಾದೆನು, ಸಂನ್ಯಾಸಕ್ಕೆ ಸಿದ್ಧನಾಗಿದೇನೆ' ಎಂದನು- ಎಂಬ ವಿಶೇಷಣಕ್ಕೆ ಸಾರ್ಥಕ್ಯವು ಬರುತ್ತದೆ. ಅಲ್ಲಿ ವಿಶ್ವರೂಪನ ಸಂನ್ಯಾಸವೃತ್ತಾಂತವೇ ಮುಂದೆ ಇರುವದಕ್ಕೂ ಇದು ಸಂಗತವಾಗುತ್ತದೆ, ಇದಲ್ಲದೆ ಮಾಧವೀಯದಲ್ಲಿ ಈ ಪದ್ಯವಿಲ್ಲದಿದ್ದರೂ ಮುಂದಿನ 'ಪ್ರೇಯಸಾ ಪ್ರಥಮಮರ್ಚಿತಂ ...' (ಮಾ. ಶಂ. ೧೦-೬೫) 'ಗಂಡನು ಮೊದಲು ಪೂಜಿಸಿದಮೇಲೆ ಆಸನದಲ್ಲಿ ಕುಳಿತಿದ್ದ ಆಚಾರ್ಯರನ್ನು ಕುರಿತು ಶಾರದೆಯು ವಿನಯದಿಂದ ಇಂತೆಂದಳು' ಎಂಬರ್ಥದ ಶ್ಲೋಕವು ಹೊಂದುಗೆಯಾಗುತ್ತದೆ. ಆದ್ದರಿಂದ ವ್ಯಾಸಾಚಲೀಯದಲ್ಲಿದ್ದ ಈ ಶ್ಲೋಕವನ್ನು ಯಾರೋ ಅನವಶ್ಯವಾಗಿ ಇಲ್ಲಿ ಸೇರಿಸಿರಬಹುದೆಂದು ತೋರುತ್ತದೆ. ಆದರೆ ಮಾಧವೀಯದಲ್ಲಿರುವ

ಸಂನ್ಯಾಸಗೃಹ್ಯವಿಧಿನಾ ಸಕಲಾನಿ ಕರ್ಮಾ-
ಣ್ಯಾಧಾಯ ಶಙ್ಕರಗುರುರ್ವಿದುಷೋಽಸ್ಯ ಕುರ್ವನ್ ।
ಕರ್ಣೇ ಜಗೌ ಕಿಮಪಿ ತತ್ತ್ವಮಸೀತಿ ವಾಕ್ಯಂ
ಕರ್ಣೇಜಪಂ ನಿಖಿಲಸಂಸೃತಿದುಃಖಹಾನೇಃ ॥೭೪॥

ಎಂಬ ಶ್ಲೋಕವು ಇಲ್ಲಿ ಅವಶ್ಯವಾಗಿದೆ. ಇದನ್ನು ನಮ್ಮಲ್ಲಿರುವ ವ್ಯಾಸಾಚಲೀಯದಲ್ಲಿ ಯಾರೋ ಕೈಬಿಟ್ಟಿರುವಂತೆ ಕಾಣುತ್ತದೆ. ಏಕೆಂದರೆ ಸಂನ್ಯಾಸ ಗೃಹ್ಯಸೂತ್ರಕ್ಕನುಸಾರವಾಗಿ ಎಲ್ಲಾ ಕರ್ಮಗಳನ್ನೂ ಸರಿಯಾಗಿ ಮಾಡಿಸಿ ಆ ಮಂಡನನಿಗೆ ಸಕಲಸಂಸಾರನಾಶವನ್ನು ಸೂಚಿಸುವ 'ತತ್ತ್ವಮಸಿ' ಎಂಬ ಒಂದಾನೊಂದು ವಾಕ್ಯವನ್ನು ಕಿವಿಯಲ್ಲಿ ಶಂಕರಗುರುಗಳು ಉಪದೇಶಿಸಿದರು- ಎಂಬುದು ಶ್ಲೋಕದ ಅರ್ಥ. ಈ ಶ್ಲೋಕವಿದ್ದರೇ ಇದರ ಮುಂದಿರುವ

ಸಂನ್ಯಾಸಪೂರ್ವಂ ವಿಧಿವನ್ನಿಭಿಕ್ಷೋಃ
ಪಶ್ಚಾದುಪಾದಿಕ್ಷದಥಾತ್ಮತತ್ತ್ವಮ್ ।
ಆಚಾರ್ಯವರ್ಯಃ ಶ್ರುತಿಮಸ್ತಕಸ್ಥಂ
ತದಾದಿವಾಕ್ಯಂ ಪುನರಾಬಭಾಷೇ ॥ (ಮಾ.ಶಂ. ೧೦-೭೬, ವ್ಯಾ.ಶಂ. ೬-೧೦೪)

"ಸಂನ್ಯಾಸಪೂರ್ವಕವಾಗಿ ಯಥಾವಿಧಿಯಾಗಿ ಮಂಡನನು ಭಿಕ್ಷಾಟನೆಮಾಡಿದನು; ಆಮೇಲೆ ಆಚಾರ್ಯಶ್ರೇಷ್ಠರು ಆ ತತ್ತ್ವವನ್ನು ಉಪದೇಶಿಸಿದರು, ತತ್ತ್ವಮಸಿ ವಾಕ್ಯವನ್ನು ಮತ್ತೆ ಅರ್ಥಸಹಿತವಾಗಿ ಹೇಳಿದರು" ಎಂಬ ಶ್ಲೋಕವು ಹೊಂದುಗಡೆಯಾಗುವದು. ಮೊದಲು ವಾಕ್ಯವನ್ನುಮಾತ್ರ ಉಪದೇಶಿಸಿದ್ದರೆ, ಆ ಬಳಿಕ ವಾಕ್ಯಾರ್ಥವನ್ನು ಹೇಳಿದರು-ಎಂಬ ಅಭಿಪ್ರಾಯವು ಹೊಂದುವದು. ಆಗ 'ಪುನರಾಬಭಾಷೇ' ಎಂಬಲ್ಲಿ ಪುನಃಶಬ್ದಕ್ಕೆ ಸ್ವಾರಸ್ಯವೂ ಬಂದಂತಾಗುವದು.

ಮೇಲೆ ಹೇಳಿದಂತೆ 'ಸ ವಿಶ್ವರೂಪೋ' ಎಂಬ ವಾಕ್ಯವನ್ನು ಈಚೆಗೆ ಯಾರೋ ಸೇರಿಸಿದರೋ ಅಥವಾ ಮಾಧವಕವಿಯೇ ಇವನ್ನು ಪ್ರಾಚೀನ ವ್ಯಾಸಾಚಲಶಂಕರಜಯ'ದಿಂದ ಸೇರಿಸಿಕೊಂಡಿದ್ದಾನೋ ಈಗ ನಿಶ್ಚಯಿಸುವದ ಕ್ಕಾಗುವದಿಲ್ಲ. ವ್ಯಾಸಾಚಲೀಯದ ಎಷ್ಟೋ ಶ್ಲೋಕಗಳು ಮಾಧವೀಯದಲ್ಲಿವೆ. ಪ್ರಕೃತದಲ್ಲಿಯೂ ಮುಂದೆ ಹೇಳುವ ಉಪದೇಶಶ್ಲೋಕಗಳೂ ವ್ಯಾಸಾಚಲೀಯ ವವೇ ಆಗಿವೆ. ಹಾಗೆ ತಾನು ಉದ್ದೇಶಪೂರ್ವಕವಾಗಿಯೇ ಹಿಂದಿನವರ ಶ್ಲೋಕ ಗಳನ್ನು ತನ್ನ ಕಾವ್ಯದಲ್ಲಿ ಸೇರಿಸಿಕೊಂಡಿರುವದಾಗಿ ಈ ಗ್ರಂಥಕರ್ತನೇ ಬಾಯಿ ಬಿಟ್ಟು ಹೇಳಿರುತ್ತಾನೆ :

ಯಥಾತಿರುಚ್ಯೇ ಮಧುರೇಽಪಿ ರುಚ್ಯುತ್ಪಾದನಾಯ ರುಚ್ಯಾಂತರಯೋಜನಾರ್ಹಾ ।
ತಥೇಷ್ಯತಾಂ ಪ್ರಾಕ್ಕವಿಹೃದ್ಯಪದ್ಯೇಷ್ವೇಷಾಪಿ ಮತ್ಪದ್ಯನಿವೇಶಭಙ್ಗೀ ॥

(ಮಾ. ಶಂ. ೧–೩)

'ಹೇಗೆ ಅತಿರುಚಿಯಾಗಿರುವ ಮಧುರಪದಾರ್ಥದಲ್ಲಿಯೂ ಸವಿಯನ್ನುಂಟುಮಾಡ ುವದಕ್ಕಾಗಿ ಮತ್ತೊಂದು ರುಚಿಯನ್ನು ಸೇರಿಸುವದು ಯೋಗ್ಯವಾಗಿರುವದೋ, ಹಾಗೆಯೇ ಹಿಂದಿನ ಕವಿಗಳ ಮನೋಹರಪರವಾದ ಪದ್ಯಗಳಲ್ಲಿಯೂ ನನ್ನ ಪದ್ಯಗಳನ್ನು ಸೇರಿಸಿರುವ ರೀತಿಯನ್ನು ತಿಳಿಯಬೇಕು" ಎಂಬುದು ಶ್ಲೋಕದ ಅರ್ಥ. ಈ ದೃಷ್ಟಿಯಿಂದ ನೋಡಿದರೆ ಮಾಧವನು ಪ್ರಕೃತಶ್ಲೋಕಗಳನ್ನೆಲ್ಲ 'ಪ್ರಾಚೀನವ್ಯಾಸಾಚಲಶಂಕರವಿಜಯ'ದಿಂದ ತೆಗೆದುಕೊಂಡಿರುತ್ತಾನೆ; ಆದರೆ ಆದರಲ್ಲಿ ಶಾರದೆಯ ಪರಾಜಯದ ಕಥೆಯಿಲ್ಲದಿದ್ದ ಕಾರಣ ಈ ಎರಡು ಪದ್ಯಗಳ ಸೇರುವಿಕೆಯು ಇಲ್ಲಿ ಹೊಂದುಗೆಯಾಗಲಿಲ್ಲ–ಎನ್ನಬೇಕಾಗುತ್ತದೆ.

## ತತ್ತ್ವಮಸಿವಾಕ್ಯ

೧೨೨. ಆಚಾರ್ಯರು 'ತತ್ತ್ವಮಸಿ' ಎಂಬ ಒಂದಾನೊಂದು ವಾಕ್ಯ ವನ್ನು ಮಂಡನನ ಕಿವಿಯಲ್ಲಿ ಉಪದೇಶಮಾಡಿದರು– (ಕರ್ಣೇ ಜಗೌ ಕಿಮಪಿ ತತ್ತ್ವಮಸೀತಿ ವಾಕ್ಯಮ್) ಎಂಬ ಮಾತನ್ನು ಲಕ್ಷಿಸತಕ್ಕದ್ದಿದೆ ಹಿಂದೆ ಆಚಾರ್ಯರಿಗೆ ಗೋವಿಂದಭಗವತ್ಪಾದರು ನಾಲ್ಕು ವೇದಾಂತವಾಕ್ಯಗಳಿಂದ ಬ್ರಹ್ಮತತ್ತ್ವವನ್ನು ಉಪದೇಶಿಸಿದರು (ಬ್ರಹ್ಮತಾಮುಪದಿದೇಶ ಚತುರ್ಭಿರ್ವೇದ ಶೇಖರವಚೋಭಿಃ ಮಾ. ಶಂ, ೫–೧೦೩) ಎಂದು ಹೇಳಿದ ಮಾಧವನೇ ಇಲ್ಲಿ 'ತತ್ತ್ವಮಸಿ'ಎಂಬ ಒಂದೇ ವಾಕ್ಯವನ್ನು ಉಪದೇಶಿಸಿದರೆಂದು ಹೇಳಲು ಕಾರಣ ವೇನು ? ಮುಂದೆಯೂ ಈ ವಾಕ್ಯದ ಅರ್ಥವನ್ನೇ ವಿವರಿಸಿ ಹೇಳಿರುತ್ತದೆ. ಇದ ರಲ್ಲಿ ಏನೋ ರಹಸ್ಯವಿರಬೇಕೆಂದು ತೋರುತ್ತದೆ. ತತ್ತ್ವಮಸ್ಯಾದಿಮಹಾ ವಾಕ್ಯಗಳ ವಿಷಯವಾಗಿ ನಾವು ಹಿಂದೆ ( ಖಂ. ೬೭ ) ಹೇಳಿರುವದನ್ನು ಇಲ್ಲಿ ಮನದಂದರೆ ಇಲ್ಲಯೂ "ತತ್ತ್ವಮಸಿ" ಎಂಬ ವಾಕ್ಯವನ್ನು ಮಂತ್ರದಂತೆ ಉಪ ದೇಶಿಸಿದ್ದು ಸರಿಯೆ ?–ಎಂಬ ಶಂಕೆ ಎದ್ದುಕೊಳ್ಳುವದು ನಿಶ್ಚಯ.

## ತತ್ತ್ವಮಸಿವಾಕ್ಯಾರ್ಥ

೧೩೩. ಆಚಾರ್ಯರು ಸುರೇಶ್ವರಾಚಾರ್ಯರಿಗೆ ಮಾಡಿದ ಉಪದೇಶವು ಮುಖ್ಯವಾಗಿ 'ತತ್ತ್ವಮಸಿ' ವಾಕ್ಯದ ಅರ್ಥದ ವಿವರಣೆಯಾಗಿರುತ್ತದೆ. ಈ ವಿವರಣೆಯು ಮಾಧವೀಯಕ್ಕೂ ವ್ಯಾಸಾಚಲೀಯಕ್ಕೂ ಸಮಾನವಾಗಿದೆ. 'ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ, ಪ್ರಾಣ– ಇವು ಯಾವವೂ ನೀನಲ್ಲ, ಇವುಗಳೆಲ್ಲಕ್ಕಿಂತ ವ್ಯತಿರಿಕ್ತನಾದ ಆತ್ಮನೇ. ತತ್ತ್ವಮಸಿವಾಕ್ಯದಲ್ಲಿ ತ್ವಂ ಶಬ್ದವಾಚ್ಯನಾಗಿರುವವನು ಜೀವನು; ಜಗತ್ಕಾರಣವಾದ ಬ್ರಹ್ಮವೇ ತತ್ಪದ ವಾಚ್ಯವು. ಅವೆರಡಕ್ಕೂ ಈ ವಾಕ್ಯದಲ್ಲಿ ಐಕ್ಯವನ್ನು ಹೇಳಿರುತ್ತದೆ 'ಸರ್ವಜ್ಞ, ಅಜ್ಞ–ಈ ಇಬ್ಬರಿಗೂ ಐಕ್ಯವನ್ನು ವಾಕ್ಯವು ಹೇಳುತ್ತದೆ ಎಂದು ಹೇಗೆತಾನೆ ಹೇಳಲಾದೀತು ? ತಮಃಪ್ರಕಾಶಗಳಿಗೆ ಏಕತ್ವವು ಎಲ್ಲಿಯೂ ಕಂಡಿಲ್ಲವಲ್ಲ ? – ಎಂದರೆ ವಾಚ್ಯಾರ್ಥವನ್ನು ತೆಗೆದುಕೊಂಡರೆ ಹೀಗೆಯೇ ಸರಿ ; ಆದರೆ ಅವನೇ ಈ ಮನುಷ್ಯನು– ಎಂಬ ವಾಕ್ಯದಲ್ಲಿರುವಂತೆ ವಿರುದ್ಧಾಂಶಗಳನ್ನು ಬಿಟ್ಟು ಅವಿರುದ್ಧಾಂಶಕ್ಕೆ ಏಕತ್ವವನ್ನು ಲಕ್ಷಣೆಯಿಂದ ಹೇಳುವದರಲ್ಲಿ ಯಾವ ವಿರೋಧವೂ ಇಲ್ಲ. ಆದ್ದರಿಂದ ದೇಹಾದಿಗಳಲ್ಲಿ ನಾನು ಎಂಬ ಬುದ್ಧಿಯನ್ನು ಬಿಡು. ಜಾಗ್ರದಾದ್ಯವಸ್ಥೆಗಳಲ್ಲಿ ಆತ್ಮನು ಅನುಗತನಾಗಿರುವಲ್ಲಿ ಒಂದನ್ನೊಂದು ಬಿಟ್ಟು ಹೋಗುವ ಬುದ್ಧ್ಯಾದಿಗಳು– ರಜ್ಜುವಿನ ಇದಮಂಶದಲ್ಲಿ ಕಲ್ಪಿತವಾಗಿರುವ ನೆಲದ ಬಿರುಕು, ಹಾವು, ಕೋಲು– ಮುಂತಾದವುಗಳಂತೆ ತುರೀಯನಾಗಿರುವ ನಿನ್ನಲ್ಲಿ ಕಲ್ಪಿತವಾಗಿರುತ್ತವೆ. ಅಂಥ ನಿರ್ಭಯವಾದ ನೀನೇ ಬ್ರಹ್ಮವೆಂದು ತಿಳಿದುಕೊ ; ಮುನ್ನಿನಂತೆ ಭ್ರಾಂತನಾಗದಿರು. ಈ ಪ್ರತ್ಯಕ್ತತ್ತ್ವವು ಜ್ಞಾನಿಗೆ ತೀರ ಹತ್ತಿರ, ಅಜ್ಞಾನಿಗೆ ಬಲುದೂರ. ಒಳಗೂ ಹೊರಗೂ ಇರುವ ಈ ಚೈತನ್ಯವನ್ನು ಅಜ್ಞರು ಹುಡುಕುತ್ತಿರುವರಲ್ಲ ! (ಮಾ. ಶಂ. ೧೦–೭೭ರಿಂದ ೯೩, ವ್ಯಾ. ಶಂ. ೭–೧ರಿಂದ ೧೬) ಪರಿಪಕ್ವಬುದ್ಧಿಯುಳ್ಳವನಿಗೆ ವಾಕ್ಯವು ಒಂದು ಸಲ ಶ್ರವಣಮಾಡಿದಮಾತ್ರದಿಂದ ಜ್ಞಾನವನ್ನುಂಟುಮಾಡಿಬಿಡುತ್ತದೆ; ಮಂದಮತಿಯಾದವನಿಗೆ ಮೆಲ್ಲುಮೆಲ್ಲಗೆ ಗುರುಪಾದಸೇವೆ, ಪ್ರಣವಾಭ್ಯಾಸ–ಮುಂತಾದವುಗಳಿಂದ ಮನೋಮಾಲಿನ್ಯವು ಹೋಗುತ್ತದೆ ; ಆದ್ದರಿಂದ ಗುರ್ವಾಜ್ಞೆಯನ್ನು ನಡೆಯಿಸುತ್ತಿರಬೇಕು' (ಮಾ. ಶಂ. ೧೦–೯೫ರಿಂದ ೧೦೨) ಎಂದು ಆಚಾರ್ಯರು ಉಪದೇಶಿಸಿದರು. ಮಂಡನನು 'ತಮ್ಮ ಉಪದೇಶದಿಂದ ಅಜ್ಞಾನವನ್ನು ಕಳೆದುಕೊಂಡು ಧನ್ಯನಾದೆನು' ಎಂದು ಅವರ ಚರಣಗಳಿಗೆ ನಮಸ್ಕಾರಮಾಡಿದನು. ಅವರು ಅವನಿಗೆ ಸುರೇಶ್ವರನೆಂಬ ಹೆಸರನ್ನು ಇಟ್ಟು ಮುಖ್ಯಶಿಷ್ಯನನ್ನಾಗಿ ಮಾಡಿಕೊಂಡರು (ಮಾ. ಶಂ. ೧೦–೧೦೩, ೧೦೪ ; ವ್ಯಾ. ಶಂ. ೭–೧೯, ೨೦).

ಮಾಧವನ– ಅಥವಾ ವ್ಯಾಸಾಚಲೀಯವೇ ಮೂಲವಾಗಿದ್ದರೆ ಆ ಗ್ರಂಥ ಕರ್ತೃವಿನ– ವೇದಾಂತಸಿದ್ಧಾಂತದ ಪರಿಚಯವು ಎಷ್ಟು ಹೆಚ್ಚಿನ ಮಟ್ಟದ್ದೆಂಬುದು ಇಲ್ಲಿ ನಮಗೆ ಗೊತ್ತಾಗುತ್ತದೆ. ಆತನು ಹಿಂದೆ ಶಿಷ್ಯರ ಗಾನದ ಮೂಲಕವಾಗಿ ಪರಮಾತ್ಮಸ್ವರೂಪವನ್ನು ವರ್ಣಿಸಿ 'ಅದೇ ನೀನು' ಎಂದು ತತ್ತ್ವಮಸಿವಾಕ್ಯದ ಅರ್ಥವನ್ನು ವಿವಿಧವೇದಾಂತವಾಕ್ಯಗಳ ಆಧಾರದಿಂದ ತಿಳಿಯ ಹೇಳಿದ್ದನು ; ಈಗ ತತ್‌ತ್ವಂಪದಗಳ ಅರ್ಥವನ್ನು ಶೋಧನಮಾಡುವ ರೀತಿಯಿಂದ ಯುಕ್ತಿಪ್ರಧಾನವಾಗಿ ಇಲ್ಲಿ ಅದನ್ನು ತಿಳಿಸಿರುತ್ತಾನೆ. ವಾಕ್ಯಶ್ರವಣವನ್ನು ಒಂದು ಸಲ ಮಾಡಿದರೂ ಉತ್ತಮಾಧಿಕಾರಿಗಳಿಗೆ ಜ್ಞಾನವಾಗಿಬಿಡುತ್ತದೆ ಎಂಬ ಆಚಾರ್ಯರ ಮತವನ್ನು ಇಲ್ಲಿ ಸ್ಫುಟವಾಗಿ ವರ್ಣಿಸಿರುತ್ತಾನೆ. 'ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ– ಎಂಬ ಸ್ಮೃತಿವಚನವನ್ನು ಸಾಧನವಾಗಿ ತಿಳಿಸಿರುತ್ತಾನೆ.

ತತ್ತ್ವಂಪದಗಳ ಅರ್ಥವನ್ನು ಆಚಾರ್ಯರು ಭಾಷ್ಯದಲ್ಲಿ ವಿಂಗಡಿಸಿ ಹೇಳಿರುವ ಕ್ರಮವನ್ನು ಇಲ್ಲಿ ವಾಚಕರ ಮುಂದೆ ಇಡುವದು ಆವಶ್ಯವಾಗಿರುತ್ತದೆ. ಸೂತ್ರಭಾಷ್ಯ(೪–೧–೨)ದಲ್ಲಿ ಅವರು ಹೀಗೆಂದಿರುತ್ತಾರೆ: "ತತ್ಪದದಿಂದ ಆಲೋಚನೆಮಾಡುವ ಜಗತ್ತಿನ ಜನ್ಮಾದಿಗಳಿಗೆ ಕಾರಣವಾಗಿರುವ ಪ್ರಕೃತವಾದ ಸದ್ಬ್ರಹ್ಮವು ಉಕ್ತವಾಗಿದೆ. 'ಸತ್ಯಂ ಜ್ಞಾನಮನನ್ತಂ ಬ್ರಹ್ಮ', 'ವಿಜ್ಞಾನಮಾನನ್ದಂ ಬ್ರಹ್ಮ', 'ಅದೃಷ್ಟಂ ದ್ರಷ್ಟೃ....ಅವಿಜ್ಞಾತಂ ವಿಜ್ಞಾತೃ', 'ಅಜಮಜರಮಮರಮ್', 'ಅಸ್ಥೂಲಮನಣ್ವಹ್ರಸ್ವಮದೀರ್ಘಮ್'– ಮುಂತಾದ ಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವ ಬ್ರಹ್ಮವೇ ಇದು. ಇಲ್ಲಿ ಅಜಾದಿಶಬ್ದಗಳು ಜನ್ಮವೇ ಮುಂತಾದ ಭಾವವಿಕಾರಗಳನ್ನು ತೊಲಗಿಸುತ್ತವೆ ; ಅಸ್ಥೂಲಾದಿಶಬ್ದಗಳು ಸ್ಥೂಲತ್ವವೇ ಮುಂತಾದ ದ್ರವ್ಯಧರ್ಮಗಳನ್ನು ತೊಲಗಿಸುತ್ತವೆ. ವಿಜ್ಞಾನಾದಿಶಬ್ದಗಳು ಅದು ಚೈತನ್ಯಪ್ರಕಾಶಸ್ವರೂಪವೆಂದು ಹೇಳುತ್ತವೆ. ಯಾವ ಸಂಸಾರಧರ್ಮವೂ ಇಲ್ಲದ–ಅನುಭವಾತ್ಮಕವಾದ ಈ ಬ್ರಹ್ಮವೆಂಬ ಹೆಸರುಳ್ಳದ್ದೇ ತತ್ಪದಾರ್ಥವೆಂದು ವೇದಾಂತಾಭಿಯುಕ್ತರಲ್ಲಿ ಪ್ರಸಿದ್ಧವಾಗಿರುತ್ತದೆ. ಹಾಗೆಯೇ ತ್ವಂಪದಾರ್ಥವೂ ಶ್ರೋತೃವಿನ ಸ್ವರೂಪವು; ಇದೇ ನನ್ನ ಆತ್ಮನೆಂದು ಸಂಭಾವಿತವಾಗಿರುವ ದೇಹಾದಿಗಳನ್ನು ಅಲ್ಲಗಳೆದು ಚೈತನ್ಯವೇ ಎಂದು ಕೊನೆಯಲ್ಲಿ ಅದನ್ನು ನಿಶ್ಚಯಿಸಲಾಗುತ್ತದೆ. ಈ ಪದಾರ್ಥಗಳು ಯಾರಿಗೆ ಅಜ್ಞಾನಸಂಶಯವಿಪರ್ಯಯಗಳೆಂಬ ಪ್ರತಿಬಂಧಕದಿಂದ ತಿಳಿಯದೇ ಇರುವವೋ ಅವರಿಗೆ 'ತತ್ತ್ವಮಸಿ' ಎಂಬ ವಾಕ್ಯವು ತನ್ನ ಅರ್ಥವನ್ನು ಇದ್ದದ್ದು ಇದ್ದಂತೆ ತಿಳಿಸಲಾರದು. ಏಕೆಂದರೆ ಪದಾರ್ಥಜ್ಞಾನಪೂರ್ವಕವಾಗಿಯೇ ವಾಕ್ಯಾರ್ಥಜ್ಞಾನವು ಆಗಬೇಕಾಗಿರುತ್ತದೆ. ಆದ್ದರಿಂದ ಅವರು ಪದಾರ್ಥವಿವೇಕಕ್ಕಾಗಿ ಶಾಸ್ತ್ರಯುಕ್ತ್ಯಭ್ಯಾಸವನ್ನು ಮಾಡಬೇಕು– ಆದರೆ ಯಾವ ನಿಪುಣಮತಿಗಳಿಗೆ ಅಜ್ಞಾನಸಂಶಯವಿಪರ್ಯಯಗಳೆಂಬ ಪದಾರ್ಥ

ವಿಷಯದ ಪ್ರತಿಬಂಧವು ಇರವದಿಲ್ಲವೋ ಅವರು ತತ್ತ್ವಮಸಿವಾಕ್ಯಾರ್ಥವನ್ನು ಒಂದುಸಲ ಹೇಳಿದರೂ ಅನುಭವಕ್ಕೆ ತಂದುಕೊಳ್ಳುತ್ತಾರೆ. ಆದ್ದರಿಂದ ಅವರಿಗೆ ಆವೃತ್ತಿಯು ವ್ಯರ್ಥವು."

ಈ ಭಾಷ್ಯವು ವಿಸ್ತಾರವಾಗಿದ್ದರೂ ಇಲ್ಲಿ ಇದನ್ನು ಕನ್ನಡಿಸಿ ಬರೆದಿರುವದೇಕೆಂದರೆ ಪದಾರ್ಥಗಳನ್ನು ಶೋಧನೆಮಾಡಿದ ಬಳಿಕ ತತ್ತ್ವಂಪದಾರ್ಥಗಳ ಐಕ್ಯಕ್ಕೆ ಯಾವ ಅಡ್ಡಿಯೂ ಇರುವದಿಲ್ಲವೆಂದು ತಿಳಿಸುವದಕ್ಕೆ. ಮಾಧವೀಯದಲ್ಲಿ ದೇಹಾದಿಗಳನ್ನು ಅನಾತ್ಮವೆಂದು ಅಲ್ಲಗಳೆದಮೇಲೂ 'ಸರ್ವಜ್ಞ, ಅಜ್ಞ– ಇವರುಗಳಿಗೆ ಐಕ್ಯವು ಹೇಗೆ ?' ಎಂಬ ಶಂಕೆಯನ್ನು ತೆಗೆದಿರುವದೂ ಅಲ್ಲಿ 'ಅವನೇ ಈ ಪುರುಷನು' ಎಂಬಂತೆ ಲಕ್ಷ್ಯಾರ್ಥವನ್ನು ತೆಗೆದುಕೊಳ್ಳಬೇಕೆಂದು ಹೇಳಿರುವದೂ ಸರಿಯಾಗುವದಿಲ್ಲ. ತತ್ತ್ವಮಸಿವಾಕ್ಯದ ಪದಗಳಿಗೆ ಹೀಗೆ ಜಹದಜಹಲ್ಲಕ್ಷಣೆಯನ್ನು ಹೇಳುವ ಪದ್ಧತಿಯೂ 'ಅವನೇ ಇವನು' ಎಂಬ ವಾಕ್ಯದ ಉದಾಹರಣೆಯನ್ನು ಕೊಡುವ ಪದ್ಧತಿಯೂ ಈಚಿನ ವೇದಾಂತಪ್ರಕರಣಗಳಲ್ಲಿ ಬಹಳವಾಗಿ ರೂಢಿಯಲ್ಲಿರುವದರಿಂದ ಅದರ ವಾಸನೆಯಿಂದ ವಾಸಿತನಾಗಿರುವ ಕವಿಯು ಅನವಶ್ಯವಾದಕಡೆಯಲ್ಲಿಯೂ ಅದನ್ನು ಕೊಟ್ಟಿರುತ್ತಾನೆ.

ಆಚಾರ್ಯರು ತತ್ತ್ವಮಸಿವಾಕ್ಯಕ್ಕೆ ಇನ್ನೊಂದು ಬಗೆಯಿಂದಲೂ ಅರ್ಥವನ್ನು ಬರೆದಿರುವದುಂಟು. ಉ ದಾ ಹ ರ ಣೆ ಗೆ ಉಪದೇಶಸಾಹಸ್ರಿಯಲ್ಲಿ 'ಸಿದ್ಧಾದೇವಾಹಮಿತ್ಯಸ್ಮಾದ್ಯುಷ್ಮದ್ಧರ್ಮೋ ನಿಷಿಧ್ಯತೇ | ರಜ್ಜ್ವಾಮಿವಾಹಿಧೀರ್ಯುಕ್ತ್ಯಾ ತತ್ತ್ವಮಸ್ಯಾದಿಶಾಸನೈಃ' (ಉಪ. ೧೮-೪) ಹಗ್ಗದಲ್ಲಿ ಹಾವು ಎಂಬ ಬುದ್ಧಿಯನ್ನು ಹೇಗೆ ಯುಕ್ತಿಯಿಂದ ಅಲ್ಲಗಳೆಯುವರೋ ಹಾಗೆಯೇ ಅಹಮ್ (ನಾನು)ಎಂಬ ಆತ್ಮವಸ್ತುವು ಸ್ವತಃಸಿದ್ಧವಾಗಿರುವಲ್ಲಿ ವಿಷಯವಾಗಿರುವ ಅಹಂಕಾರವೇ ಮುಂತಾದ ಅನಾತ್ಮಗಳನ್ನು ವಿವೇಚಿಸಿ ಯುಕ್ತಿಯಿಂದ ಅಲ್ಲಗಳೆಯುವದೇ 'ತತ್ತ್ವಮಸಿ' ಮುಂತಾದ ವಚನಗಳ ಕೃತ್ಯವು– ಎಂದು ಶ್ಲೋಕದ ಅರ್ಥ. ತ್ವಂಪದಾರ್ಥಶೋಧನೆಯಲ್ಲಿ ಈ ರಹಸ್ಯವಿದೆ ಎಂಬುದನ್ನು ಈಚಿನ ವೇದಾಂತಗ್ರಂಥಗಳಲ್ಲಿ ಹೇಳುವ ವಾಡಿಕೆಯಿಲ್ಲ. ಪ್ರಕೃತ ಮಾಧವೀಯ ವಿಚಾರಕ್ಕೆ ಇದು ಸಂಬಂಧ್ದವಾಗದೆ ಇದ್ದರೂ ಆಚಾರ್ಯರ ಉಪದೇಶಕ್ಕೂ ವ್ಯಾಖ್ಯಾನಪ್ರಸ್ಥಾನಗಳ ಕ್ರಮಕ್ಕೂ ಇರುವ ವೈಲಕ್ಷಣ್ಯವನ್ನು ತಿಳಿಸುವ ಪ್ರಸಕ್ತಿಯಿಂದ ಇವನ್ನು ಇಲ್ಲಿ ಹೇಳಬೇಕಾಯಿತು.

---

# ೧೨. ದಕ್ಷಿಣಕ್ಕೆ ಪ್ರಯಾಣ

## ಕಾಪಾಲಿಕರನ್ನು ಜಯಿಸಿದ್ದು

೧೨೪. ಆಚಾರ್ಯರು ಮಂಡನನನ್ನು ವಾದದಲ್ಲಿ ಸೋಲಿಸಿದ ಬಳಿಕ ದಕ್ಷಿಣದಿಕ್ಕಿಗೆ ಹೊರಟರು. ಅಲ್ಲಿ ಮಹಾರಾಷ್ಟ್ರವೇ ಮುಂತಾದ ದೇಶಗಳಲ್ಲಿ ಗ್ರಂಥಪ್ರಚಾರವನ್ನು ಮಾಡುತ್ತಾ ಮತಾಂತರಗಳನ್ನು ಖಂಡಿಸುತ್ತಾ ಕಾಲಕ್ರಮ ದಲ್ಲಿ ಶ್ರೀಶೈಲಕ್ಕೆ ಬಂದರು. ಅಲ್ಲಿ ಪಾತಾಳಗಂಗೆಯಲ್ಲಿ ಸ್ನಾನಮಾಡಿ ಭ್ರಮ ರಾಂಬಾಸಹಿತನಾದ ಮಲ್ಲಿಕಾರ್ಜುನನ ದರ್ಶನವನ್ನು ಮಾಡಿದರು. ಅವರ ಶಿಷ್ಯರಾದ ಸುರೇಶ್ವರಾಚಾರ್ಯರೇ ಮೊದಲಾದವರು ಪಾಶುಪತ, ವೈಷ್ಣವ, ವೀರಶೈವ, ಮಾಹೇಶ್ವರ-ಮುಂತಾದ ಮತದವರನ್ನು ಖಂಡಿಸಿದರು. ಆ ಮತಾಂತರ ದವರಲ್ಲಿ ಕೆಲವರು ಇವರ ಶಿಷ್ಯರಾದರು ; ಇನ್ನು ಕೆಲವರು ಇವರ ಸಾವನ್ನೇ ನಿರೀಕ್ಷಿಸುತ್ತಾ ಕಾಲಹರಣವನ್ನು ಮಾಡುತ್ತಿದ್ದರು (ಮಾ.ಶಂ. ೧೦-೧೦೭ರಿಂದ ೧೧೬).

ಅಲ್ಲಿ ಒಮ್ಮೆ ಉಗ್ರಭೈರವನೆಂಬ ಒಬ್ಬ ಸಾಧುವೇಷಧಾರಿಯಾದ ಭೈರವನು ಬಂದು 'ಸ್ವಾಮಿ, ತಮ್ಮಂಥ ಲೋಕೋಪಕಾರಿಗಳನ್ನು ನಾನು ಎಲ್ಲಿಯೂ ಕಾಣಲಿಲ್ಲ; ತಮ್ಮ ಸಾರ್ವಜ್ಞ್ಯ, ಸೌಶೀಲ್ಯ, ದಯಾಳುತ್ವ-ಮುಂತಾದ ಗುಣಗಳನ್ನು ಕೇಳಿಯೇ ತಮ್ಮಲ್ಲಿಗೆ ಬಂದಿರುತ್ತೇನೆ. ತಮ್ಮಿಂದ ನನಗೆ ಒಂದು ಮಹಾಕಾರ್ಯವಾಗಬೇಕಾಗಿದೆ. ಶಿವನನ್ನು ತಪಸ್ಸಿನಿಂದ ತುಷ್ಟಿಗೊಳಿಸಿ ಸಶರೀರ ನಾಗಿ ಕೈಲಾಸಕ್ಕೆ ಹೋಗಬೇಕೆಂಬ ನನ್ನ ಬಯಕೆಯನ್ನು ಸೂಚಿಸಿದೆನು. ಆ ಭೈರವೇಶ್ವರನು 'ಒಬ್ಬ ರಾಜನ ಶಿರಸ್ಸನ್ನಾಗಲಿ ಒಬ್ಬ ಸರ್ವಜ್ಞನ ಶಿರಸ್ಸನ್ನಾಗಲಿ ಹೋಮಮಾಡಿದರೆ ನಿನ್ನ ಇಷ್ಟಾರ್ಥವು ನೆರವೇರುವದು' ಎಂದು ಹೇಳಿರುತ್ತಾನೆ. ರಾಜನು ನನಗೆ ಸಿಕ್ಕುವದು ಕಷ್ಟ ; ಸರ್ವಜ್ಞರಾದ ತಾವು ದೊರಕಿರುವದರಿಂದ ನನ್ನ ಕಾರ್ಯವು ಸಿದ್ಧಿಸುವ ಕಾಲವು ಬಂದಿದೆ. ಪರೋಪಕಾರಕ್ಕಾಗಿಯೇ ಮಹಾತ್ಮರು ದೇಹವನ್ನು ತ್ಯಾಗಮಾಡುತ್ತಾರಲ್ಲವೆ ? ತಮ್ಮ ತಲೆಯನು ಕೊಟ್ಟರೆ ತಮಗೆ ಹೆಚ್ಚಿನ ಕೀರ್ತಿ ಬರುವದು. ನನಗೆ ಸಿದ್ಧಿಯ ಲಾಭವಾಗು ವದು. ಶರೀರವು ನಶ್ವರವೆಂಬುದನ್ನು ತಾವು ಆಲೋಚಿಸಿ ತಮಗೆ ತಿಳಿದಂತೆ ಮಾಡಬಹುದು' ಎಂದು ಕೇಳಿಕೊಂಡನು. ಆಚಾರ್ಯರು 'ಅವಶ್ಯವಾಗಿ ಆಗಲಿ ; ಆದರೆ ಇದು ನನ್ನ ಶಿಷ್ಯರಿಗೆ ತಿಳಿಯದಂತೆ ಆಗಬೇಕಾಗಿದೆ. ಆದ್ದರಿಂದ ಏಕಾಂತ ವಾಗಿ ಬಾ' ಎಂದರು. ಕಾಪಾಲಿಕನು ಸಮಯವನ್ನು ಸಾಧಿಸಿಕೊಂಡು ಬಂದನು.

–ಆಚಾರ್ಯರೂ ಧ್ಯಾನಾರೂಢರಾಗಿ ಹೊರಗಿನ ಭಾನವಿಲ್ಲದೆ ಕುಳಿತಿದ್ದರು. ಆದರೆ ಅವನು ಅವರ ತಲೆಯನ್ನು ಕಡಿಯುವದಕ್ಕೆ ತ್ರಿಶೂಲವನ್ನು ಎತ್ತುವ ಹೊತ್ತಿಗೆ ಸರಿಯಾಗಿ ಅಲ್ಲಿಗೆ ದೈವಿಕವಾಗಿ ಬಂದ ಪದ್ಮಪಾದರು ನೃಸಿಂಹೋಪಾಸಕರಾಗಿ ಮಂತ್ರಸಿದ್ಧರಾಗಿದ್ದದ್ದರಿಂದ ನೃಸಿಂಹಭಾವವನ್ನೇ ತಳೆದು ಹಿಂದೆ ಹಿರಣ್ಯಕಶಿಪುವಿನ ವಕ್ಷಸ್ಥಲವನ್ನು ಸೀಳಿದ್ದಂತೆ ಆ ಭೈರವನ ಎದೆಯನ್ನು ಸೀಳಿಬಿಟ್ಟರು. ಧ್ಯಾನದಿಂದ ಎಚ್ಚತ್ತ ಆಚಾರ್ಯಸ್ತೋತ್ರದಿಂದಲೇ ನರಸಿಂಹನು ಪ್ರಶಾಂತನಾದನು. ವಿಚಾರಿಸಿದ್ದರಲ್ಲಿ ಅಹೋಬಲಪರ್ವತದ ಬಳಿಯಲ್ಲಿ ಪದ್ಮಪಾದರಿಗೆ ನರಸಿಂಹನ ಪ್ರಸಾದವಾಗಿತ್ತೆಂದು ತಿಳಿಯಬಂದಿತು- ಎಂದು ಮಾಧವೀಯದ ಹನ್ನೊಂದನೆಯ ಸರ್ಗದಲ್ಲಿದೆ.

ಚಿದ್ವಿಲಾಸೀಯದಂತೆ ಆಚಾರ್ಯರು ಕಾಪಾಲಿಕರನ್ನು ಜಯಿಸಿದ್ದು ರಾಮೇಶ್ವರದಲ್ಲಿ; ಅವರ ನಾಯಕನಿಗೆ ವಟುಕನಾಥ (ಚಿ. ಶಂ. ೨೭–೨೪)ನೆಂದು ಹೆಸರು. ಆಗ ಭೈರವನೇ ಪ್ರತ್ಯಕ್ಷನಾಗಿ ಆಚಾರ್ಯರ ಮತಕ್ಕೆ ಸಂಮತಿಯನ್ನು ಕೊಟ್ಟು, ದುರ್ಮತಗಳನ್ನೆಲ್ಲ ಜಯಿಸೆಂದು ಹೇಳಿದನು (ಚಿ.ಶಂ.೨೭–೪೧, ೪೨). ಆನಂದಗಿರೀಯದಂತೆ ಆಚಾರ್ಯರು ಉಜ್ಜಯಿನಿಯಲ್ಲಿ ಕಾಪಾಲಿಕರನ್ನು ಗೆದ್ದರು ; ಅವರ ನಾಯಕನಿಗೂ ವಟುಕನಾಥನೆಂದೇ[1] ಹೆಸರು (ಆ. ಶಂ. ೨೩– ಪು. ೧೧೯, ೧೨೦ ; ದೇ. ೨೩– ಪು. ೧೦೫–೧೦೬).

ಕಾಪಾಲಿಕರನ್ನು ಆಚಾರ್ಯರು ಖಂಡಿಸಿದರೆ ?– ಎಂಬುದನ್ನು ನಿಶ್ಚಯಿಸುವದಕ್ಕೆ ನಮಗೆ ಸರಿಯಾದ ಇತಿಹಾಸದ ಆಧಾರವು ಯಾವದೂ ಇಲ್ಲ. ಶ್ರೀಶೈಲದಲ್ಲಿರುವ ಮಲ್ಲಿಕಾರ್ಜುನಲಿಂಗವು ಪ್ರಖ್ಯಾತವಾದ ದ್ವಾದಶಲಿಂಗಗಳಲ್ಲಿ ಒಂದು. ಅಲ್ಲಿ ಕಾಪಾಲಿಕರೂ ಬೌದ್ಧರೂ ತಾಂತ್ರಿಕರೂ ಇದ್ದರು ; ನಾಗಾರ್ಜುನನು ಅಲ್ಲಿಯೇ ಸಿದ್ಧಿಗಳನ್ನು ಪಡೆದುಕೊಂಡನಂತೆ. ಈ ಪರ್ವತದ ಎರಡೂ ಪಾರ್ಶ್ವಗಳಲ್ಲಿದ್ದದ್ದರಿಂದ 'ಪೂರ್ವಶೈಲೀಯ', 'ಅಪರಶೈಲೀಯ' ಎಂಬ ಬೌದ್ಧರ ಎರಡು ನಿಕಾಯ (ತಂಡ)ಗಳು ಉಂಟಾಗಿದ್ದವಂತೆ. ಕ್ರಿ. ಶ. 639ರಲ್ಲಿ ಚಾಲುಕ್ಯರಾಜನಾದ ಎರಡನೆಯ ಪುಲಿಕೇಶಿಯ ಮಗ ನಾಗವರ್ಧನನು ಕಪಾಲೇಶ್ವರನ ಪೂಜೆಗಾಗಿ ಅನೇಕ ಉಂಬಳಿಗಳನ್ನು ದಾನಮಾಡಿದ್ದನಂತೆ ಎಂಬರ್ಥದ ಶಿಲಾಶಾಸನವು ದೊರಕಿದೆ ಎಂದು ಬಲದೇವ ಉಪಾಧ್ಯಾಯರು (ಪು. ೯೦, ೯೧) ಹೇಳುತ್ತಾರೆ. 'ಕರಡಿ' ಎಂಬ ಹೆಸರಿನ ಮಹಾರಾಷ್ಟ್ರ ಬ್ರಾಹ್ಮಣರು ಯಾತ್ರಿಕರನ್ನು ಪುಷ್ಟಿಕರವಾದ ಆಹಾರದಾನದಿಂದ ಕೊಬ್ಬಿಸಿ ನವರಾತ್ರಿಯಲ್ಲಿ ದೇವಿಗೆ ಬಲಿದಾನಕೊಡುತ್ತಾರೆಂಬ ಕಿಂವದಂತಿಯಿದೆಯೆಂದೂ ಈ ಕರಡಿಬ್ರಾಹ್ಮಣರಲ್ಲಿ ಒಬ್ಬನೇ ಪ್ರಕೃತದ ಉಗ್ರಭೈರವನಾಗಿರಬಹುದೆಂದೂ ಕೃಷ್ಣಸ್ವಾಮಿ ಅಯ್ಯ

1. ದೇ. ಪಾ. ೮ ಪುಟ ೧೦೪ರಲ್ಲಿ ಕಾಪಾಲಿಕರ ನಾಯಕನ ಹೆಸರನ್ನು ವಟುಕ ಎಂದು ಹೇಳಿದೆ.

ಎನವು (CNKS p. 56) ಊಹಿಸಿರುತ್ತಾರೆ. ಆದರೆ ಇದೂ ಕಲ್ಪನಾರಾಜ್ಯಕ್ಕೆ ಸೇರಿದ್ದೇ. ಭೈರವನಿಗೂ ದೇವೀ ಉಪಾಸಕರಿಗೂ ಇರುವ ಸಂಬಂಧವಿಷಯಕ್ಕೆ ನಮಗೆ ಯಾವ ಆಧಾರವೂ ದೊರೆತಿಲ್ಲ. ಪಾಶುಪತ, ವೈಷ್ಣವ, ವೀರಶೈವ, ಮಾಹೇಶ್ವರ– ಈ ಮತದವರನ್ನು ಶಂಕರರ ಶಿಷ್ಯರು ವಾದದಲ್ಲಿ ಪರಾಜಯ ಗೊಳಿಸಿದರೆಂದು ಮಾಧವೀಯದಲ್ಲಿದೆಯಷ್ಟೆ ? ಸೂತ್ರಭಾಷ್ಯದಲ್ಲಿ ವೀರಶೈವರನ್ನು ಬಿಟ್ಟು ಮಿಕ್ಕವರ ಪರಾಮರ್ಶವಿರುವದು ಕಂಡುಬರುತ್ತಿದೆ. ವೀರಶೈವರಲ್ಲಿ ಒಂದು ಪಂಗಡದವರು ತಮ್ಮ ಮತದ ಸ್ಥಾಪಕರಾದ ರೇಣುಕಸಿದ್ಧರು ಶಂಕರರಿಗೆ ಚಂದ್ರ ಮೌಳೀಶ್ವರ ಲಿಂಗವನ್ನು ಕೊಟ್ಟರೆಂಬ ಕಥೆಯನ್ನು ಹುಟ್ಟಿಸಿಕೊಂಡಿರುವದನ್ನು ಈ ಹಿಂದೆಯೇ (೭೨) ತಿಳಿಸಿರುತ್ತೇವೆ. ಆದರೂ ಶಂಕರಾಚಾರ್ಯರ ಅಥವಾ ಸುರೇಶ್ವರಾಚಾರ್ಯರ ಗ್ರಂಥಗಳಲ್ಲಿ ವೀರಶೈವಮತದ ಪರಾಮರ್ಶಗಂಧವೂ ಕಾಣಿಸುತ್ತಿಲ್ಲ. ಕಾಪಾಲಿಕರ ಮತದ ಪರಾಮರ್ಶವಂತೂ ಅಲ್ಲಿ ಇಲ್ಲವೇ ಇಲ್ಲ. ಹೀಗಿರುವದರಿಂದ ಆಚಾರ್ಯರು ಆ ಮತದವರನ್ನು ವಾದದಲ್ಲಿ ಜಯಿಸಿದರೆಂಬುದು ಯಥಾರ್ಥವೋ, ಮಾಧವಕವಿಯ ಕಲ್ಪನಾಮಾತ್ರವೋ ಹೇಳುವದಕ್ಕೆ ಬರು ವಂತಿಲ್ಲ. ಕಾಪಾಲಿಕನ ಕಥೆಗೆ ಪದ್ಮಪಾದರ ನರಸಿಂಹಾವೇಶದ ಕಥಾನಕವನ್ನು ಗಂಟುಹಾಕಿರುವದನ್ನು ನೋಡಿದರೆ ಕಲ್ಪನಾಚತುರನಾದ ಮಾಧವನು ಈ ಅದ್ಭುತ ವೊಂದು ಆಚಾರ್ಯರ ಕಥೆಯಲ್ಲಿದ್ದರೆ ಅವರಿಗೆ ಕೀರ್ತಿದಾಯಕವೆಂದು ಎಣಿಸಿರ ಬಹುದೆಂದು ಹೇಳುವದಕ್ಕೂ ಬರುವಂತಿದೆ. ಈ ಕಥೆಯನ್ನು ತ್ರಿಸಂಧ್ಯದಲ್ಲಿಯೂ ಓದುವವರಿಗೆ ಅಪಮೃತ್ಯುನಾಶ, ಐಹಿಕಭೋಗಗಳು, ಅಂತ್ಯದಲ್ಲಿ ಮುಕ್ತಿ–ಎಂಬ ಫಲಗಳಾಗುವವೆಂದು ಆತನು ಫಲಶ್ರುತಿಯನ್ನೂ (ಮಾ. ಶಂ. ೧೧–೬೪) ಹೇಳಿರುತ್ತಾನೆ.

## ಹಸ್ತಾಮಲಕಲಾಭ

೧೩೫. ಶ್ರೀಶೈಲದಿಂದ ಆಚಾರ್ಯರು ಗೋಕರ್ಣಕ್ಕೆ ಬಂದರು. ಅಲ್ಲಿ ಮಹಾಬಲೇಶ್ವರನನ್ನು ಸ್ತೋತ್ರಮಾಡಿ ಮೂರು ದಿನವಿದ್ದು ಹರಿಶಂಕರಕ್ಕೆ ಬಂದರು. ಅಲ್ಲಿ ಆಚಾರ್ಯರು ಮಾಡಿರುವ ಶಿವವಿಷ್ಣು–ಇಬ್ಬರಿಗೂ ಅನ್ವಯಿಸು ವಂತಿರುವ ಕೆಲವು ಶ್ಲೋಕಗಳನ್ನು (ಮಾ. ಶಂ. ೧೨–9ರಿಂದ ೧೯) ಮಾಧವನು ಕೊಟ್ಟಿರುತ್ತಾನೆ. ಅಲ್ಲಿಂದ ಮುಂದಕ್ಕೆ ಆಚಾರ್ಯರು ಮೂಕಾಂಬಿಕಾಸ್ಥಾನಕ್ಕೆ ಹೊರಟರು. ದಾರಿಯಲ್ಲಿ ದ್ವಿಜದಂಪತಿಗಳು ತಮಗಿದ್ದ ಒಂದೇ ಮಗು ಸತ್ತದ್ದ ಕ್ಕಾಗಿ ಶೋಕಿಸುತ್ತಿದ್ದರು. ಆಕಾಶವಾಣಿಯಿಂದ ಪ್ರೇರಿತರಾದ ಶಂಕರರು ಆ ಮಗು ವನ್ನು ಬದುಕಿಸಿದರಂತೆ (೧೨–೨೪). ಮೂಕಾಂಬಿಕಾ ದೇವಾಲಯವನ್ನು ಸೇರಿ ದೇವಿಯನ್ನು ಸ್ತೋತ್ರಮಾಡಿ ಕೆಲವು ದಿನಗಳಾದ ಬಳಿಕ ಅಲ್ಲಿರುವ ಶ್ರೀಬಲಿ ಎಂಬ ಅಗ್ರಹಾರಕ್ಕೆ ಬಂದರು. ಅಲ್ಲಿ ಎರಡು ಸಾವಿರ ಅಗ್ನಿಹೋತ್ರಿಗಳಿದ್ದರಂತೆ.

ಅವರೊಳಗೆ ಪ್ರಭಾಕರನೆಂಬ ಬ್ರಾಹ್ಮಣನಿದ್ದನು. ಐಹಿಕಸಂಪತ್ತೆಲ್ಲವೂ ಇದ್ದರೂ ತನಗಿದ್ದ ಒಬ್ಬನೇ ಮಗನು ಹುಟ್ಟಿದಂದಿನಿಂದ ಮೂಕನಾಗಿದ್ದದ್ದರಿಂದ ಆ ಬ್ರಾಹ್ಮಣನು ಶೋಕಾಕ್ರಾಂತನಾಗಿದ್ದನು. ಆಚಾರ್ಯರು ಶಿಷ್ಯಸಮೇತರಾಗಿ ಅಲ್ಲಿಗೆ ಬಂದದ್ದನ್ನು ಕೇಳಿ ಮಗನನ್ನು ಅವರ ಬಳಿಗೆ ಕರೆದುಕೊಂಡು ಬಂದು ಅವರ ಕಾಲಿಗೆ ಬೀಳಿಸಿದನು. ಶಂಕರರು ದಯೆಯಿಂದ ಅವನನ್ನು ಎಬ್ಬಿಸಿದರು. ತಂದೆಯು ಮಗನ ಸ್ಥಿತಿಯನ್ನು ವಿವರಿಸಿ ಹೇಳಿದನು. ಆಚಾರ್ಯರು 'ನೀನು ಯಾರಪ್ಪ ? ಏಕೆ ಜಡನಂತೆ ಆಚರಿಸುತ್ತಿದ್ದೀಯೆ ?' ಎಂದು ಕೇಳಲು 'ಗುರುವೆ, ನಾನು ಜಡನಲ್ಲ, ನನ್ನ ಸಂನಿಧಿಯಲ್ಲಿ ಜಡವು ತನ್ನ ವ್ಯಾಪಾರವನ್ನು ಮಾಡುತ್ತಿರುವದು. ಷಡೂರ್ಮಿಗಳೂ ಷಡ್ವಿಕಾರಗಳೂ ಇಲ್ಲದ ಆನಂದಸ್ವರೂಪವಾದ ಪರತತ್ತ್ವವೇ ನಾನು' (ಮಾ. ಶಂ. ೧೨-೫೫) ಎಂದು ಹನ್ನೆರಡು ಶ್ಲೋಕಗಳಿಂದ ಆತ್ಮತತ್ತ್ವದ ಸ್ವರೂಪವನ್ನು ವಿವರಿಸಿದನು.

ನಿಮಿತ್ತಂ ಮನಶ್ಚಕ್ಷುರಾದಿಪ್ರವೃತ್ತೌ
ನಿರಸ್ತಾಖಿಲೋಪಾಧಿರಾಕಾಶಕಲ್ಪಃ ।
ರವಿರ್ಲೋಕಚೇಷ್ಟಾನಿಮಿತ್ತಂ ಯಥಾ ಯಃ
ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥

'ಯಾವ ಉಪಾಧಿಯೂ ಇಲ್ಲದ ಆಕಾಶಕಲ್ಪನಾಗಿರುವ ಯಾವನು— ಸೂರ್ಯನು ಜನರ ವ್ಯವಹಾರಕ್ಕೆ ನಿಮಿತ್ತವಾಗಿರುವಂತೆ— ಮನಸ್ಸು, ಚಕ್ಷುಸ್ಸು- ಮುಂತಾದವುಗಳ ಪ್ರವೃತ್ತಿಗೆ ನಿಮಿತ್ತನಾಗಿರುವನೋ ಆ ನಿತ್ಯಚೈತನ್ಯಸ್ವರೂಪನಾದ ಆತ್ಮನೇ ನಾನು' ಎಂದು ಮುಂತಾದ 'ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ' ಎಂಬ ಪಲ್ಲವಿಯುಳ್ಳ ಹನ್ನೆರಡು ಶ್ಲೋಕಗಳು 'ಹಸ್ತಾಮಲಕೀಯ' ಎಂಬ ಹೆಸರಿನ ಪ್ರಕರಣವೆಂದು ಪ್ರಸಿದ್ಧವಾಗಿರುತ್ತವೆ. ಪರಮಾತ್ಮತತ್ತ್ವವನ್ನು ಅಂಗೈನೆಲ್ಲಿಯಂತೆ ಇವು ತಿಳಿಸುವದರಿಂದ ಇವನ್ನು ಹೇಳಿದ ಆ ಮಹಾತ್ಮನಿಗೂ ಆ ಹೆಸರಾಯಿತು. ಆಚಾರ್ಯರು 'ಅಪ್ಪ, ಇವನು ಪೂರ್ವಜನ್ಮದಲ್ಲಿ ಯೋಗಿಯಾಗಿದ್ದು ಈಗ ನಿಮ್ಮ ಮಗನಾಗಿ ಹುಟ್ಟಿರುತ್ತಾನೆ. ಸಂಸಾರದಲ್ಲಿ ಅತ್ಯಂತ ವಿರಕ್ತನಾಗಿರುವದರಿಂದಲೇ ಹೀಗೆ ಮಾತನಾಡದೆ ಇರುತ್ತಾನೆ. ಇವನಿಂದ ನಿಮಗೇನೂ ಪ್ರಯೋಜನವಾಗಲಾರದು' ಎಂದು ತಂದೆತಾಯಿಗಳನ್ನು ಸಮಾಧಾನಗೊಳಿಸಿ ಅವರನ್ನು ಮನೆಗೆ ಕಳುಹಿಸಿಕೊಟ್ಟರು. ಹಸ್ತಾಮಲಕರು ಆಚಾರ್ಯರ ಶಿಷ್ಯಮಂಡಲಿಯಲ್ಲಿ ಸೇರಿಕೊಂಡರು.

ಆಚಾರ್ಯರು ಶ್ರೀಶೈಲದಿಂದ ಗೋಕರ್ಣಕ್ಕೆ ಯಾವ ಮಾರ್ಗದಿಂದ ಬಂದರೆಂಬುದನ್ನು ಮಾಧವೀಯದಲ್ಲಿ ಹೇಳಿರುವದಿಲ್ಲ. ದಾರಿಯಲ್ಲಿ ಹರಿಶಂಕರ, ಮೂಕಾಂಬಿಕಾಸ್ಥಾನ—ಇವನ್ನು ಸೇವಿಸಿದರೆಂದು ಮತ್ತೆ ಯಾವ ಶಂಕರವಿಜಯದಲ್ಲಿ

ಯೂ ವರ್ಣಿಸಿರುವದು ಕಾಣಿಸುವದಿಲ್ಲ. ವ್ಯಾಸಾಚಲೀಯದಲ್ಲಿ ಆಚಾರ್ಯರು ಗೋಕರ್ಣಕ್ಕೆ ಹೋಗುತ್ತಿದ್ದಾಗ ಹಸ್ತಾಮಲಕರು ಸಿಕ್ಕಿದಂತೆ ಬರೆದಿದೆ.

ಶ್ರೀಗೋಕರ್ಣಂ ಯಾತುಕಾಮಃ ಕದಾಚಿ-
ಚ್ಛ್ರೀವಲ್ಲ್ಯಾಖ್ಯಂ ಗ್ರಾಮವರ್ಯಂ ಜಗಾಮ ।
ಶಿಷ್ಯೈರ್ಜುಷ್ಟಂ ವೇದವಿದ್ಭಿರ್ಮಹದ್ಭಿಃ
ಶ್ರೀಮಾನ್ ಪೂಜ್ಯೋ ದೇಶಿಕೇನ್ದ್ರಸ್ತ್ವದೀಯಃ ॥ (೧೨-೧)

ಇಲ್ಲಿ ಅಗ್ರಹಾರದ ಹೆಸರು (ಮಾಧವೀಯದಂತೆ ಅಗ್ರಹಾರಕಂ ಶ್ರೀಬಲಿ ಸಂಜ್ಞಮ್ ಮಾ. ೧೨-೧೯) ಶ್ರೀವಲ್ಲೀ ಎಂದಿರುವದನ್ನು ಲಕ್ಷಿಸಬೇಕು ; ಶ್ರೀಬಲಿ ಎಂಬ ಹೆಸರು ಇದರ ರೂಪಾಂತರವೋ, ಅಥವಾ ಗ್ರಾಮಕ್ಕೆ ಶ್ರೀವಲ್ಲೀ, ಶ್ರೀಬಲಿ – ಎಂಬ ಹೆಸರುಗಳಿದ್ದವೋ ಗೊತ್ತಾಗುವಂತಿಲ್ಲ. ಹಸ್ತಾಮಲಕನು ಆಚಾರ್ಯ ರಿಗೆ ಹೇಳಿದ "ನಾಹಂ ಜಡಃ" ಎಂಬ ಶ್ಲೋಕವು ಮಾಧವೀಯದಂತೆ ಇಲ್ಲಿಯೂ (ವ್ಯಾ. ಶಂ. ೧೨-೩) ಇದೆ. ಕಥಾಭಾಗದಲ್ಲಿ ವ್ಯಾಸಾಚಲೀಯವನ್ನೇ ಹಿಂಬಾ ಲಿಸುವ ಗೋವಿಂದನಾಥನು (ಶ್ರೀ. ಶಂ. ಚ. ೬-೮೮) "ಗೋಕರ್ಣಂ ಯಾತು ಕಾಮಃ ಸನ್ನೇಕದಾ ದೇಶಿಕೇಶ್ವರಃ | ಮಾರ್ಗೇ ಶಿವವಿಹಾರಾಖ್ಯಂ ಗ್ರಾಮಂ ಪ್ರಾಪದನುತ್ತಮಮ್ ||" ಎಂದು ಆ ಊರಿಗೆ ಶಿವವಿಹಾರ ಎಂಬ ಬೇರೊಂದು ಹೆಸರನ್ನೇಕೆ ಕೊಟ್ಟನೋ ತಿಳಿಯಲಿಲ್ಲ. ಮಿಕ್ಕ ಕಥಾಭಾಗವು ಮಾಧವೀಯದಂತೆಯೇ ವ್ಯಾಸಾಚಲೀಯದಲ್ಲಿದೆ.

ಚಿದ್ವಿಲಾಸೀಯದಲ್ಲಿ ಗೋಕರ್ಣಯಾತ್ರೆಯು ಬೇರೊಂದು ಸಂದರ್ಭದಲ್ಲಿ ಬಂದಿದೆ. ಹಸ್ತಾಮಲಕವೃತ್ತಾಂತವು ಪ್ರಯಾಗದಲ್ಲಿ ನಡೆದಂತೆ ಅಲ್ಲಿ ವರ್ಣಿಸಿದೆ. ಹುಡುಗನ ತಂದೆಯ ಹೆಸರು ಅಲ್ಲಿ ದಿವಾಕರಾಧ್ವರಿ; ಮಾಧವೀಯದಲ್ಲಿರುವಂತೆ ಪ್ರಭಾಕರನಲ್ಲ. ಹೆಸರು ಗೊತ್ತಾಗದೆಇದ್ದದ್ದರಿಂದ ತೇಜಸ್ವಿಯಾದ ಬ್ರಾಹ್ಮಣ ನೆಂದು ತಿಳಿಸುವ ಹೆಸರೊಂದನ್ನು ಶಂಕರವಿಜಯಕಾರರುಗಳು ಆರಿಸಿಕೊಂಡಿರ ಬಹುದು. ಮಾಧವೀಯದ "ತತ್ರ ದ್ವಿಜಃ ಕಶ್ಚನ ಶಾಸ್ತ್ರವೇದೀ ಪ್ರಭಾಕರಾಖ್ಯಃ" (೧೨-೪೩) ಎಂಬ ಶ್ಲೋಕವು ವ್ಯಾಸಾಚಲೀಯದಲ್ಲಿಲ್ಲವಾದ್ದರಿಂದ ಆ ಗ್ರಂಥದಲ್ಲಿ ತಂದೆಯ ಹೆಸರು ಗೊತ್ತಾಗುವಂತಿಲ್ಲ ; ಗೋವಿಂದನಾಥನೂ ಅವನ ಹೆಸರನ್ನು ಹೇಳಿಲ್ಲ. ಪ್ರಸಿದ್ಧವಾಗಿರುವ ಹಸ್ತಾಮಲಕೀಯದ ಪ್ರಾರಂಭದಲ್ಲಿ ಕಾಣುವ

ಕಸ್ತ್ವಂ ಶಿಶೋ ಕಸ್ಯ ಕುತೋಽಸಿ ಗನ್ತಾ
ಕಿಂ ನಾಮ ತೇ ತ್ವಂ ಕುತ ಆಗತೋಽಸಿ ।
ಏತದ್ವದ ತ್ವಂ ಮಮ ಸುಪ್ರಸಿದ್ಧಂ[1]
ಮತ್ಪ್ರೀತಯೇ ಪ್ರೀತಿವಿವರ್ಧನೋಽಸಿ ॥

1. 'ಮಮ ಸುಪ್ರಸಿದ್ಧಮ್' ಎಂಬ ಪಾದವು 'ಏತನ್ಮಯೋಕ್ತಂ ವದ ಚಾರ್ಭಕ ತ್ವಮ್' ಎಂಬ ಪಾಠಾಂತರವಾಗಿ ಈಗ ಕಾಣುತ್ತಿದೆ.

ಎಂಬ ಶ್ಲೋಕವೂ ಚಿದ್ವಿಲಾಸೀಯದಲ್ಲಿ ಕಾಣುತ್ತದೆ. "ಕಸ್ತ್ವಂ ಶಿಶೋ ಕಸ್ಯ ಸುತಃ ಕುತೋಽ-ನೇತ್ಯಸ್ಮಾಭಿರಾಚಷ್ಟ ಕಿಲೈಷ ಪೃಷ್ಟಃ" (ಮಾ. ಶಂ ೧೩-೨೮) ಎಂಬ ಶ್ಲೋಕವನ್ನು ನೋಡಿದರೆ ಮಾಧವನಿಗೂ ಈ ಶ್ಲೋಕದ ಪರಿಚಯವಿತ್ತೆಂದು ಊಹಿಸಬಹುದಾಗುತ್ತದೆ. ಪ್ರಕರಣದ ಮುಂದಿನ ಶ್ಲೋಕವು ಎಂದರೆ "ನಾಹಂ ಮನುಷ್ಯೋ ನ ಚ ದೇವಯಕ್ಷೌ" ಎಂದು ಮುಂತಾಗಿರುವದೂ ಚಿದ್ವಿಲಾಸೀಯದಲ್ಲಿದೆ. 'ನಿಮಿತ್ತಂ ಮನ ಇತ್ಯಾದಿಪದ್ಯೈರ್ದ್ವಾದಶಭಿಸ್ತಥಾ'(ಚಿ.ಶಂ.೧೧-೩೦) ಎಂದು ಪ್ರಕರಣದ ಪ್ರತೀಕೆಯನ್ನು ಇಲ್ಲಿ ಕೊಡಲಾಗಿದೆ. ಈ ಪ್ರಕರಣದಲ್ಲಿ ಹನ್ನೆರಡು ಶ್ಲೋಕಗಳಿದ್ದವೆಂಬುದು ಶಂಕರವಿಜಯಕಾರರಿಗೆಲ್ಲ ತಿಳಿದಿತ್ತೆಂಬುದಕ್ಕೆ ಆಧಾರವಿದೆ. ಈ ಪ್ರಕರಣದ ಕರ್ತೃ ಯಾರೆಂಬುದು ಇವರು ಯಾರಿಗೂ ತಿಳಿದಿರಲಿಲ್ಲವೆಂದೂ ಹೇಳಬೇಕಾಗಿದೆ. ಏಕೆಂದರೆ ಮೊದಲನೆಯ ಎರಡು ಶ್ಲೋಕಗಳಲ್ಲಿರುವ ಪ್ರಶ್ನೋತ್ತರಗಳು ಮುಂದೆ ಹನ್ನೆರಡು ಶ್ಲೋಕಗಳು ಬರುವವೆಂಬ ನಿರೀಕ್ಷಣೆಯನ್ನೇನೂ ಎಬ್ಬಿಸುವಂತಿಲ್ಲ. ಏಕೆಂದರೆ 'ಮಗು ನೀನು ಯಾರು ? ಎಲ್ಲಿಗೆ ಹೋಗುವವನಿರುವೆ?' ಎಂದು ಮುಂತಾಗಿರುವ ಪ್ರಶ್ನೆಯನ್ನು ಹಾಕಿದವರ ಎದುರಿಗೆ ಹುಡುಗನೊಬ್ಬನೇ ಮಾತನಾಡದೆ ಹೋಗುತ್ತಿದ್ದನೆಂದು ಕಲ್ಪಿಸುವದಕ್ಕೂ ಎಡೆಯಿದೆ. ಉತ್ತರದ ಶ್ಲೋಕದಲ್ಲಿ 'ನಾಹಂ ಮನುಷ್ಯೋ....ನಿಜಬೋಧರೂಪಃ' ಎಂಬ ಉತ್ತರವಿರುವದರಿಂದ ನಾನು ಮನುಷ್ಯಾದಿಗಳಲ್ಲಿ ಯಾರೂ ಅಲ್ಲ; ಏಕೆಂದರೆ ಆತ್ಮಚೈತನ್ಯಸ್ವರೂಪನಾಗಿರುತ್ತೇನೆ- ಎಂದಿದೆ. ಮುಂದಿನ ಶ್ಲೋಕದಲ್ಲಿರುವ 'ನಿತ್ಯೋಪಲಬ್ಧಿಸ್ವರೂಪೋಽಹಮ್' ಎಂಬ ಮಾತಿಲ್ಲ. ಇನ್ನೊಂದು ವಿಷಯ ; ಮುಂದೆ ಆಚಾರ್ಯರೇ ಈ ವೃತ್ತಾಂತವನ್ನು ಪರಾಮರ್ಶಿಸುವ ಸಂದರ್ಭವು ಬಂದಾಗ ಹಸ್ತಾಮಲಕನು ಜ್ಞಾನದ ಪ್ರದರ್ಶನವನ್ನು ಮಾಡಿದ್ದನ್ನು ಕಂಡು ತಂದೆಯು ಹರ್ಷಿತನಾಗಿ 'ಆಜನ್ಮನಃ ಸಂಸೃತಿಪಾಶಮುಕ್ತಃ ಶಿಷ್ಯೋಽಸ್ತ್ವಯಂ ವಿಶ್ವಗುರೋಽಸ್ತ್ವೈವ' (ಮಾ. ಶಂ. ೧೩-೩೧). 'ಹುಟ್ಟಿದಂದಿನಿಂದ ಸಂಸಾರಪಾಶಮುಕ್ತನಾಗಿರುವ ಇವನು ಜಗದ್ಗುರುವಾದ ತಮಗೇ ಶಿಷ್ಯನಾಗಿರಲಿ!' ಎಂದು ಹೇಳಿದಂತೆ ಬರೆದಿರುತ್ತಾನೆ. ಆದರೆ ಇಲ್ಲಿ ಆಚಾರ್ಯರೇ ವಸ್ತುಂ ನ ಯೋಗ್ಯೋ ಭವತಾ ಸಹಾಯಂ ನ ತೇಽಮುನಾರ್ಥೋ ಜಡಿಮಾಸ್ಪದೇನ'(೧೨-೫೯) ಈತನು ನಿನ್ನೊಡನೆ ಇರುವದಕ್ಕೆ ತಕ್ಕವನಲ್ಲ ; ಜಡನಾಗಿರುವ ಇವನಿಂದ ನಿನಗೆ ಆಗಬೇಕಾದದ್ದೇನು?- ಮುಂದೆ ಮುಂತಾಗಿ ಹೇಳಿ 'ಆ ಬ್ರಾಹ್ಮಣಬಾಲಕನನ್ನು ಕರೆದುಕೊಂಡು ತಮ್ಮ ಇಚ್ಛಾನುಸಾರವಾಗಿ ಹೊರಟುಹೋದರು' (ದ್ವಿಜಾತ್ಮಜಂ ಯಯೌ ಗೃಹೀತ್ವಾ ೧೨-೬೨) ಎಂದು ಬರೆದಿದಾನೆ! ಸಾಲದ ಕಡಿಮೆಗೆ 'ಹಸ್ತಾಮಲಕಸ್ತೋತ್ರಭಾಷ್ಯಂ' ಎಂಬ ಹೆಸರಿನಿಂದ ಆಚಾರ್ಯರು ಒಂದು ಭಾಷ್ಯವನ್ನು ಬರೆದಂತೆಯೂ ಪ್ರಸಿದ್ಧಿಯಿದೆ! ಇದನ್ನು **ಶ್ರೀರಂಗಂ ವಾಣೀವಿಲಾಸ** ಪ್ರೆಸ್ಸಿನವರು (೧೬ನೆಯ ಖಂಡ ಪು. ೧೮೩-೧೮೩) ಶಂಕರಗ್ರಂಥಾವಳಿಯಲ್ಲಿ ಸೇರಿಸಿ

ಬಿಟ್ಟಿರುತ್ತಾರೆ! ಶಂಕರವಿಜಯಗಳು ಆಚಾರ್ಯರ ಅದ್ಭುತಮಹಿಮೆಯನ್ನು ಪ್ರಚಾರಮಾಡಬೇಕೆಂಬ ಅಭಿನಿವೇಶದಿಂದ ಬರೆದವುಗಳಾದ್ದರಿಂದ ಈ ಬಗೆಯ ಪೂರ್ವಾಪರವಿರೋಧಗಳು ಅವುಗಳಲ್ಲಿ ಕಂಡುಬಂದರೆ ಆಶ್ಚರ್ಯಪಡಬೇಕಾದ್ದೇನೂ ಇಲ್ಲ. ಆದರೆ ಆಚಾರ್ಯರು ತಮ್ಮ ಶಿಷ್ಯನ ಪ್ರಕರಣವೊಂದಕ್ಕೆ ಭಾಷ್ಯವನ್ನು ಬರೆದರೆಂದು ಈಗಲೂ ನಂಬುವವರ ಶ್ರದ್ಧೆಯನ್ನು ಏನೆಂದು ಕರೆಯೋಣ?

# ೧೩. ಶೃಂಗೇರಿ

## ಆಚಾರ್ಯರು ಶೃಂಗೇರಿಗೆ ಯಾವಾಗ, ಏಕೆ ಬಂದರು

೧೩೬. ಮಾಧವೀಯದಂತೆಯೇ ಸಾಮಾನ್ಯವಾದ ಕಥೆಯನ್ನು ಸಾಗಿಸಿಕೊಂಡು ಉಳಿದ ಶಂಕರವಿಜಯಗಳಲ್ಲಿ ಕಾಣಬರುವ ಕಥಾಕ್ರಮವೈಲಕ್ಷಣ್ಯವನ್ನೂ ತಿಳಿಸುತ್ತಾ ಹೋಗುವದೇ ಈ ಗ್ರಂಥದ ಶೈಲಿಯಾಗಿದೆಯಷ್ಟೆ ? ಅದನ್ನನುಸರಿಸಿ ಕಥೆಯನ್ನು ಮುಂದುವರಿಸುವೆವು. ಆಚಾರ್ಯರು ಶೃಂಗೇರೀಪೀಠವನ್ನು ಸ್ಥಾಪಿಸಿದ್ದು ದಕ್ಷಿಣಪ್ರಯಾಣದಲ್ಲಿ ನಡೆದ ಅನೇಕ ಘಟನೆಗಳಲ್ಲಿ ಒಂದಾದರೂ ಆ ಪೀಠಕ್ಕಿರುವ ಪ್ರಾಮುಖ್ಯದ ದೃಷ್ಟಿಯಿಂದ ಅದನ್ನೇ ಒಂದು ಸ್ವತಂತ್ರಘಟ್ಟವಾಗಿ ವಿಂಗಡಿಸುವದು ಯೋಗ್ಯವೆಂದೆಣಿಸಿ ಹಾಗೆ ಮಾಡಿರುತ್ತೇವೆ.

ಶೃಂಗೇರಿಯು ಆಚಾರ್ಯರ ಜನ್ಮಸ್ಥಲವಲ್ಲ, ಅವರ ಗುರುಗಳಾಗಲಿ ಪರಮಗುರುಗಳಾಗಲಿ ಇದ್ದ ಸ್ಥಲವೂ ಅಲ್ಲ ಆದರೂ ಆಚಾರ್ಯರು ತಮ್ಮ ಮಠವನ್ನು ಅಲ್ಲಿ ಏಕೆ ಸ್ಥಾಪನೆಮಾಡಿದರು ?– ಎಂಬುದು ತಿಳಿಯುವಂತಿಲ್ಲ. ಮಾಧವೀಯದಲ್ಲಿ ಆಚಾರ್ಯರು ಸರಸ್ವತಿಯನ್ನು ಪ್ರಾರ್ಥಿಸಿಕೊಂಡಾಗ–

ತಸ್ಮಾದಸ್ಮತ್ಕಲ್ಪಿತೇಷ್ವರ್ಚ್ಯಮಾನಾ
  ಸ್ಥಾನೇಷು ತ್ವಂ ಶಾರದಾಖ್ಯಾ ದಿಶನ್ತೀ ।
ಇಷ್ಟಾನರ್ಥಾನೃಷ್ಯಶೃಙ್ಗಾದಿಕೇಷು
  ಕ್ಷೇತ್ರೇಷ್ವಾಸ್ಸ್ವ ಪ್ರಾಪ್ತಸತ್ಸಂನಿಧಾನಾ ॥ (ಮಾ. ಶಂ. ೧೧-೭೧)

'ನಾನು ಕಲ್ಪಿಸುವ ಋಷ್ಯಶೃಂಗಾದಿಕ್ಷೇತ್ರಗಳಲ್ಲಿ ಶಾರದೆ ಎಂಬ ಹೆಸರಿನಿಂದ ಅರ್ಚಿಸಿದವರ ಇಷ್ಟಾರ್ಥಗಳನ್ನು ಕೊಡುತ್ತಾ ಇರಬೇಕು' ಎಂದು ಕೇಳಿಕೊಂಡರು. ಈ ಹಿಂದೆ ಋಷ್ಯಶೃಂಗವೆಂಬ ಹೆಸರೇ ಈವರೆಗೆ ಪರಾಮೃಷ್ಟವಾಗಿರಲಿಲ್ಲ. ತಟ್ಟನೆ ಈ ಹೆಸರು ಆಚಾರ್ಯರ ಮನಸ್ಸಿಗೆ ಹೇಗೆ ಹೊಳೆಯಿತು ? ಇದನ್ನು ಮಾಧವನು ಹೇಳಿರುವದಿಲ್ಲ. ಶೃಂಗೇರಿಗೆ ಬಂದ ಸಂದರ್ಭವನ್ನು ತಿಳಿಸುವಾಗ 'ಶೃಙ್ಗಗಿರಿಂ ಪ್ರತಸ್ಥೇ' (ಶೃಂಗೇರಿಗೆ ಹೊರಟರು) ಎಂದು ಮೊದಲುಮಾಡಿ,

ಯತ್ರಾಧುನಾಪ್ಯುತ್ತಮಮೃಷ್ಯಶೃಙ್ಗ-
  ಸ್ತಪಶ್ಚರತ್ಯಾತ್ತಭೃದನ್ತರಙ್ಗಃ ।
ಸಂಸ್ಪರ್ಶಮಾತ್ರೇಣ ವಿಶೀರ್ಣಭದ್ರಾ
  ವಿದ್ಯೋತತೇ ಯತ್ರ ಚ ತುಙ್ಗಭದ್ರಾ ॥ (ಮಾ.ಶಂ. ೧೨-೬೪)

"ಅಲ್ಲಿ ಋಷ್ಯಶೃಂಗರು ಉತ್ತಮತಪಸ್ಸನ್ನು ಮಾಡುತ್ತಾ ಆತ್ಮಾನುಸಂಧಾನ ವನ್ನು ಮಾಡುತ್ತಿರುವರು. ಸ್ಪರ್ಶಮಾತ್ರದಿಂದ ಮಂಗಲವನ್ನುಂಟುಮಾಡುವ ತುಂಗಭದ್ರೆಯೂ (?) ಅಲ್ಲಿ ಕಂಗೊಳಿಸುತ್ತಿರುವದು" ಎಂದಿಷ್ಟೇ ಹೇಳಿರುತ್ತಾನೆ.

ಚಿದ್ವಿಲಾಸೀಯ (೨೦ನೆಯ ಅಧ್ಯಾಯ)ದಲ್ಲಿ : ಶಂಕರಾಚಾರ್ಯರು ಸರಸ್ವತಿಯನ್ನು ತಮ್ಮೊಡನೆ ಬರಬೇಕೆಂದು ಪ್ರಾರ್ಥಿಸಿಕೊಂಡು, ಈತಿಬಾಧೆ ಗಳಿಲ್ಲದೆ ಯಾವಾಗಲೂ ಸಸ್ಯಸಂಪೂರ್ಣವಾಗಿಯೂ ಸರ್ವಲಕ್ಷಣಲಕ್ಷಿತವಾಗಿಯೂ ನಿರ್ವೈರಪ್ರಾಣಿಗಳಿಂದ ತುಂಬಿರುವದಾಗಿಯೂ ರಮ್ಯವಾದ ನದಿಯಿಂದ ಆವೃತ ವಾಗಿಯೂ ದಿವ್ಯತಪೋವನಗಳಿಂದ ತುಂಬಿರುವದಾಗಿಯೂ ಹೆಜ್ಜೆಹೆಜ್ಜೆಗೂ ನೀರಿನ ಕಾಲುವೆಗಳಿರುವದಾಗಿಯೂ ದುರ್ಭಿಕ್ಷವನ್ನೇ ಕಾಣದಿರುವದಾಗಿಯೂ ಇದ್ದುಕೊಂಡು ಸರಸ್ವತೀಪ್ರತಿಷ್ಠಾಪನೆಗೆ ಯೋಗ್ಯವಾದ ಒಂದು ಸ್ಥಲವು ಬೇಕೆಂದು ಹುಡುಕುತ್ತಾ ಪದ್ಮಪಾದ, ಸುರೇಶ್ವರ, ಹಸ್ತಾಮಲಕ, ತೋಟಕ- ಇವರು ಗಳೊಡನೆಯೂ ಸರಸ್ವತೀದೇವಿಯೊಡನೆಯೂ ವಿಭಾಂಡಕರ ತಪೋವನಕ್ಕೆ ಬಂದರು (ಚಿ. ಶಂ. ೨೦-೪೪ರಿಂದ೬೧) ಎಂದು ತಿಳಿಸಿದ ಬಳಿಕ ಶೃಂಗೇರಿಯ ಸಂನಿ ವೇಶವನ್ನೂ ಮಹಿಮೆಯನ್ನೂ ಬಗೆಬಗೆಯಾಗಿ ಹೊಗಳಿ ಮಾರ್ಗದಲ್ಲಿ ತುಂಗ ಭದ್ರಾ ನದಿಯಲ್ಲಿ ಸ್ನಾನಕ್ಕೆಂದು ಆಚಾರ್ಯರು ಇಳಿಯುತ್ತಿರುವಲ್ಲಿ ಹೆಣ್ಣು ಕಪ್ಪೆಯೊಂದು ಹಡೆಯುವ ಸ್ಥಿತಿಯಲ್ಲಿ ಬಲವಾದ ಬಿಸಿಲಿನ ತಾಪವನ್ನು ತಾಳ ಲಾರದೆ ಇರಲು (ಶಾಲೂರೀಮತಿಗರ್ಭಭಾರವಿಷಹಾಂ ಸದ್ಯಃ ಪ್ರಸೂತ್ಯುನ್ಮುಖೀಂ ತೀವ್ರೋದ್ಯದ್ಗ್ರದಿವಾಕರಾತಪಪರಿಕ್ಲಾನ್ತಾಮ್) ಅದಕ್ಕೆ ಒಂದು ಹೆಣ್ಣುಹಾವು ತನ್ನ ಹೆಡೆಯನ್ನು ಬಿಚ್ಚಿ ನೆರಳುಮಾಡುತ್ತಿದ್ದದ್ದನ್ನು ಕಂಡರು. (ಭುಜಙ್ಗೀಂ ಫಣಾಮಾಸ್ತೀರ್ಯಾತಪವಾರಣಾಯ ಪರಿತಃ ಪಾನ್ತೀಂ ದೃಶಾಲೋಕತ ೨೧- ೫೩) ಎಂದು ಅಲ್ಲಿಯ ಪ್ರಾಣಿಗಳು ವೈರತ್ಯಾಗವನ್ನು ಮಾಡಿದ್ದ ಅದ್ಭುತದೃಶ್ಯಗಳಲ್ಲಿ ಒಂದನ್ನು ವರ್ಣಿಸಿರುತ್ತದೆ; ಮುಂದೆ ಮತ್ತೊ ಒಂದು ಸಲ ಈ ಕಥೆಯನ್ನು ಪರಾಮರ್ಶಿಸುವಾಗ ಚಿದ್ವಿಲಾಸರು ಕಪ್ಪೆಗೆ ನೆರಳನ್ನೊದಗಿಸಿದ್ದ ಹಾವು ಗಂಡು ಎಂದು ಹೇಳಿರುತ್ತಾರೆ ! (ವರ್ಷಾಭ್ವೀಂ ಗುರ್ವಿಣೀಂ ಯತ್ರ ಪಾತಿ ಸ್ಮ ಫಣಿರಾಡಪಿ ೨೪-೧೪). ಬಲದೇವೋಪಾಧ್ಯಾಯರ ಪ್ರಕಾರ ಈ ಅದ್ಭುತವನ್ನು ಶಂಕರರು ಕಂಡದ್ದು ಕ್ರಮಸಂನ್ಯಾಸಕ್ಕೆಂದು ಗುರುವನ್ನು ಹುಡಿಕಿಕೊಂಡು ಹೋಗುತ್ತಿದ್ದಾಗಿನ ದಾರಿಯಲ್ಲಿ (ಬಲ. ಶಂ. ಪು. ೪೮) ; ಅಲ್ಲಿ ಅವರು ಕಥೆಯ ವಿವರವನ್ನು ಸ್ವಲ್ಪ ಬೇರೆಯಾಗಿ ಕೊಟ್ಟಿರುತ್ತಾರೆ. ಅದಕ್ಕೆ ಅವರಿಗೆ ಯಾವ ಆಧಾರವಿತ್ತೋ ತಿಳಿಯದು.

ಕೂಷ್ಮಾಂಡಶಂಕರವಿಜಯವೆಂಬ ಗ್ರಂಥದಲ್ಲಿ : ಸರಸವಾಣಿಯು ಶಂಕರರ ಹಿಂದೆಯೇ ಬರುವದಕ್ಕೆ ಒಪ್ಪಿದಳು. ಆದರೆ ಆಚಾರ್ಯರು ತನ್ನನ್ನು

ನಡುವೆ ಹಿಂತಿರುಗಿ ನೋಡಬಾರದೆಂದು ಒಂದು ಕಟ್ಟುಪಾಡನ್ನು ಮಾಡಿಕೊಂಡಿದ್ದಳು. ಪಂಪಾಪುರಕ್ಕೆ ಹೋಗುತ್ತಿರುವ ದಾರಿಯಲ್ಲಿ ಶಂಕರರು ಆಕೆ ಬರುತ್ತಿದ್ದಾಳೋ ಇಲ್ಲವೋ– ಎಂದು ಹಿಂತಿರುಗಿ ನೋಡಲು ಮೊದಲು ಒಪ್ಪಿದ್ದ ಸಮಯಧರ್ಮವನ್ನು ಮೀರಿದ್ದರಿಂದ ಸರಸವಾಣಿಯು ಅದೃಶ್ಯಳಾಗಿ ಅವರ ಅಪ್ಪಣೆಯನ್ನು ಪಡೆದು ಬ್ರಹ್ಮಲೋಕಕ್ಕೆ ಹೋಗಿಬಿಟ್ಟಳು. (ತಥೇತ್ಯುಕ್ತ್ವಾ ಪುರೋ ಗಚ್ಛನ್ ಗುರುಃ ಪಮ್ಪಾಪುರಂ ಪ್ರತಿ | ಆಯಾತಿ ವಾ ನ ವೇತೀತಿ ಪಶ್ಚಾದ್ಭಾಗಂ ಪ್ರದೃಷ್ಟವಾನ್ | ತದಾಗತ್ಯ ಗುರುಂ ಗನ್ತುಮನುಜ್ಞಾಂ ದಾತುಮರ್ಹಸಿ | ಇತ್ಯುಕ್ತ್ವಾ ತು ತದಾಽದೃಶ್ಯಾ ಬ್ರಹ್ಮಲೋಕಮವಾಪ ಸಾ || ಕೂ. ಶಂ. ೫-೯ರಿಂದ೧೧) ಎಂದು ಬರೆದಿದೆ.

ಸೋಮನಾಥಯ್ಯನವರು, ಹೆಣ್ಣು ಕಪ್ಪೆಗಳು ಮರಿಗಳನ್ನು ಹೆರುವದಿಲ್ಲ, ತತ್ತಿಯನ್ನಿಡುತ್ತವೆ– ಎಂಬ ಜಂತುಸ್ವಭಾವವು ಚಿದ್ವಿಲಾಸರಿಗೂ ಉತ್ತರದೇಶದ ಮಂಡನಮಿಶ್ರನ ಊರಿನಿಂದ ಹಂಪೆಗೆ ಬರುವ ದಾರಿಯಲ್ಲಿ ಶೃಂಗೇರಿ ಸಿಕ್ಕುವದಿಲ್ಲವೆಂಬುದು ಕೂಷ್ಮಾಂಡಶಂಕರವಿಜಯಕಾರನಿಗೂ ತಿಳಿದಿರಲಿಲ್ಲವೆಂಬ ಆಕ್ಷೇಪವನ್ನು (ಸೋ. ಶಂ. ೧೫೭,೧೫೮) ಎತ್ತಿರುತ್ತಾರೆ. ಆದರೆ ಕಲ್ಪನಾಕಥೆಗಳನ್ನು ರಚಿಸುವ ಕವಿಗಳ ಗ್ರಂಥಗಳನ್ನು ಸೂಕ್ಷ್ಮವಿಮರ್ಶೆಗೆ ಗುರಿಮಾಡುವದರಿಂದ ಲಾಭವಾದರೂ ಏನು ?

ದೀರ್ಘಕಾಲಪ್ರವಾಸದಲ್ಲಿದ್ದ ಆಚಾರ್ಯರು ಈ ಸಮಯದಲ್ಲಿ ವಾರ್ಧಕದಿಂದಲೂ ವಿಧವಾಧರ್ಮಪರಿಪಾಲನೆಯಿಂದಲೂ ಪುತ್ರನ ಅಗಲುವಿಕೆಯ ದುಃಖದಿಂದಲೂ ತಮ್ಮ ತಾಯಿಯು ಬಹಳ ಕೃಶಳಾಗಿದ್ದಾಳೆಂದು ತಿಳಿದು ಆಕೆಯ ಸಮೀಪದಲ್ಲಿರುವದು ಉಚಿತವೆಂದು ದಕ್ಷಿಣಕ್ಕೆ ಬಂದರು. ಆದರೆ ಇವರು ಸಂನ್ಯಾಸವನ್ನು ತೆಗೆದುಕೊಂಡದ್ದನ್ನು ಒಪ್ಪದೆಯೂ ಇವರ ಕೀರ್ತಿಯನ್ನು ಕೇಳಿ ಮನುಷ್ಯಸ್ವಭಾವವಾದ ಅಸೂಯೆಯಿಂದಲೂ ಬಂಧುಗಳುತಮ್ಮ ಊರಿನಲ್ಲಿ ನಿಂತರೆ ಮನಶ್ಶಾಂತಿಯಾಗಲಾರದೆಂದು ಊಹಿಸಿ ತಮ್ಮ ಊರಿಗೆ ಬಹುದೂರವಿಲ್ಲದ ಹೊರಗಿನ ಪ್ರಾಂತದಲ್ಲಿ ವಾಸಮಾಡುವದು ಒಳ್ಳೆಯದೆಂದು ಎಣಿಸಿರಬಹುದು. ಶೃಂಗೇರಿಯು ಅವರ ಊರಿಗೆ ಮೂವತ್ತು ಗಾವುದಕ್ಕಿಂತ ಹೆಚ್ಚು ಇರಲಿಲ್ಲ. ಶೃಂಗೇರಿಯ ಪ್ರಾಂತದ ದೊರೆಗಳೂ[1] ಅವರಲ್ಲಿ ಭಕ್ತಿಯುಕ್ತರಾಗಿದ್ದದ್ದರಿಂದ ಮಠವನ್ನು ಕಟ್ಟಿಸಿಕೊಳ್ಳುವದಕ್ಕೆ ಪ್ರೋತ್ಸಾಹಿಸಿಯೂ ಇರಬಹುದು– ಎಂದು **ಸೋಮನಾಥಯ್ಯನವರು** (ಸೋ. ಶಂ. ಪು. ೧೫೮-೧೬೦) ತರ್ಕಿಸಿರುತ್ತಾರೆ.

---

1. ವೀರಸೇನ ಎಂಬ ಹೆಸರಿನ ರಾಜನನ್ನು ಚಿದ್ವಿಲಾಸೀಯದಲ್ಲಿ (೨೧-೪೭) ಉಲ್ಲೇಖಿಸಿದೆ, ಆ ಹೆಸರಿನ ರಾಜನು ಅಲ್ಲಿ ಇದ್ದನೆ ? –ಎಂಬುದನ್ನು ಐತಿಹಾಸಿಕರು ನಿರ್ಣಯಿಸಬೇಕಾಗಿದೆ.

ಇವೆಲ್ಲವೂ ತರ್ಕಮಾತ್ರವಾಗಿರುವದರಿಂದ ನಿಜವೆಂದಾಗಲಿ ನಿಜವಲ್ಲವೆಂದಾಗಲಿ ನಿಶ್ಚಯಿಸಲು ನಾವು ಅಶಕ್ತರಾಗಿದ್ದೇವೆ. ಚಿದ್ವಿಲಾಸೀಯದಲ್ಲಿ ಆಚಾರ್ಯರು ಇನ್ನೂ ಗೋವಿಂದಭಗವತ್ಪಾದರ ಬಳಿಯಲ್ಲಿರುವಾಗಲೇ ಅವರ ತಾಯಿಯ ಸ್ಮರಣವಶದಿಂದ ಊರಿಗೆ ಹೋಗಿ ಆಕೆಗೆ ಉಪದೇಶಮಾಡಿ ವೈಕುಂಠಪ್ರಾಪ್ತಿಗೆ ಸಹಾಯಕರಾದರು (ಚಿ.ಶಂ. ೧೦-೪೭) ಎಂದಿದೆ. ಆ ಕಾಲಕ್ರಮವನ್ನು ಒಪ್ಪುವವರ ಪಕ್ಷದಲ್ಲಿ ಈ ತರ್ಕವು ಹೊಂದುಗೆಯಾಗುವದಿಲ್ಲ. ಆಚಾರ್ಯರು ತಮ್ಮ ಬಳಿಗೆ ಬಂದಿದ್ದ ಚೋಳದೇಶದ ಬ್ರಾಹ್ಮಣಕುಮಾರನಿಗೆ ಸಂನ್ಯಾಸವನ್ನು ಕೊಡುವ ಹೊತ್ತಿಗೇ ತಾಯಿಯು ಅವರನ್ನು ಸ್ಮರಣೆಮಾಡಿದಳೆಂದು ನಮ್ಮಲ್ಲಿರುವ ವ್ಯಾಸಾಚಲೀಯ (ವ್ಯಾ. ಶಂ. ೪-೯೩)ದಲ್ಲಿದೆ. ಆದಕ್ಕೂ ಈ ಊಹೆಯು ಹೊಂದುಗೆಯಾಗುವದಿಲ್ಲ. ಶಂಕರರು ಗುರುಗಳ ಬಳಿಯಲ್ಲಿದ್ದಾಗ, ಅಥವಾ ಮೊಟ್ಟಮೊದಲನೆಯ ಶಿಷ್ಯನನ್ನು ಪರಿಗ್ರಹಿಸಿದಾಗಲೇ ಅವರ ಕೀರ್ತಿಯು ದಕ್ಷಿಣ ದೇಶದ ರಾಜರುಗಳ ಕಿವಿಗೆ ಬಿದ್ದಿತ್ತೆಂದು ಹೇಗೆತಾನೆ ಊಹಿಸಲಾದೀತು ?

ಆಚಾರ್ಯರು ಉತ್ತರಕಾಶಿಯಲ್ಲಿದ್ದುಕೊಂಡು ಭಾಷ್ಯಗಳನ್ನು ಬರೆದಿದ್ದರೂ ಅವುಗಳ ಪ್ರಚಾರಕ್ಕೆ ಹೆಚ್ಚು ಅವಕಾಶವಾಗಿರಲಿಲ್ಲ. ಈಗ ಅವರಿಗೆ ಅವಕಾಶ ದೊರಕಿತು (ಬ. ಶಂ. ೯೫) ಎಂದು ಬಲದೇವಉಪಾಧ್ಯಾಯರು ಬರೆದಿರುವದರಲ್ಲಿ ಹೆಚ್ಚು ನಿಜದ ಅಂಶವಿರುವಂತೆ ಕಾಣುತ್ತದೆ. ಆಚಾರ್ಯರು ವೇದಾಂತ ಪ್ರಚಾರಕ್ಕೆಂದೇ ದಕ್ಷಿಣಕ್ಕೆ ಬಂದಿರಬೇಕು. ಆದರೆ ನಿಂತದ್ದೇಕೆ ?- ಎಂಬುವಕ್ಕೆ ಉತ್ತರವೇನೂ ನಮಗೆ ಇದರಿಂದ ಗೊತ್ತಾಗುವಂತಿಲ್ಲ.

## ಶಾರದಾಪ್ರತಿಷ್ಠೆ

೧೨೭. ಶೃಂಗೇರಿಯಲ್ಲಿ ಆಚಾರ್ಯರು ದೊಡ್ಡ ದೇವಾಲಯವನ್ನು ರಚಿಸಿ ಶಾರದಾಪ್ರತಿಷ್ಠೆಯನ್ನು ಮಾಡಿದರು. ಸರಸ್ವತಿಯು ತಾನು ವಾಗ್ದಾನಮಾಡಿದ್ದಂತೆಯೇ ಇಂದಿನವರೆಗೂ "ಶಾರದಾಂಬಾ" ಎಂಬ ಹೆಸರಿನಿಂದ ಶೃಂಗೇರಿಪುರದಲ್ಲಿದ್ದುಕೊಂಡು ಅಭೀಷ್ಟವರಗಳನ್ನು ಕೊಡುತ್ತಾ ಇರುತ್ತಾಳೆ- ಎಂದು ಮಾಧವನು ಎರಡು ಶ್ಲೋಕಗಳಲ್ಲಿ ಈ ವಿಷಯವನ್ನು ಮುಗಿಸಿರುತ್ತಾನೆ.

ಪ್ರಕಲ್ಪ್ಯ ತತ್ರೇನ್ದ್ರವಿಮಾನಕಲ್ಪಂ । ಪ್ರಾಸಾದಮಾವಿಷ್ಕೃತಸರ್ವಶಿಲ್ಪಮ್ ।<br>
ಪ್ರವರ್ತಯಾಮಾಸ ಸ ದೇವತಾಯಾಃ । ಪೂಜಾಮಜಾದ್ಯೈರಪಿ ಪೂಜಿತಾಯಾಃ ॥<br>
ಯಾ ಶಾರದಾಮ್ಬೇತ್ಯಭಿಧಾಂ ವಹನ್ತೀ । ಕೃತಾಂ ಪ್ರತಿಜ್ಞಾಂ ಪ್ರತಿಪಾಲಯನ್ತೀ ।<br>
ಅದ್ಯಾಪಿ ಶೃಂಗೇರಿಪುರೇ ವಸನ್ತೀ । ಪ್ರದ್ಯೋತತೇಽಭೀಷ್ಟವರಾನ್ ದಿಶನ್ತೀ ॥೬೯॥

(ಮಾ. ಶಂ. ೧೨-೬೮, ೬೯)

ಇಲ್ಲಿ ಕವಿಯು 'ಶೃಂಗೇರಿಪುರೇ' ಎಂದು ಬರೆದಿರುವದರಿಂದ ಅವನ ಕಾಲಕ್ಕೆ ಆಗಲೆ 'ಶೃಂಗೇರಿ' ಎಂಬ ಹೆಸರು ಪ್ರಚಾರದಲ್ಲಿತ್ತೆಂದು ಗೊತ್ತಾಗುತ್ತದೆ.

ಚಿದ್ವಿಲಾಸೀಯದ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ತುಂಗಭದ್ರಾ ನದಿಯ ಮಹಿಮೆಯನ್ನು ವರ್ಣಿಸಿ, ಮೇಲೆ ಪರಾಮರ್ಶಿಸಿರುವ ಕಪ್ಪೆ ಹಾವುಗಳ ಸ್ನೇಹದ ಅದ್ಭುತವನ್ನು ಕಂಡ ಆಚಾರ್ಯರು ವಾಗ್ದೇವೀಪ್ರತಿಷ್ಠೆಗೆ ಅದೇ ಸರಿಯಾದ ಸ್ಥಲವೆಂದು ಸಂಕಲ್ಪಿಸಿದ ವೃತ್ತಾಂತವಿದೆ. ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ತುಂಗಾನದಿಯ ಬಳಿಯಲ್ಲಿರುವ ಆಶ್ರಮಗಳ ವರ್ಣನೆಯಿದೆ. ಇಪ್ಪತ್ತಮೂರನೆಯ ಅಧ್ಯಾಯದಲ್ಲಿ ಋಷ್ಯಶೃಂಗರ ವೃತ್ತಾಂತವಿದೆ. ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಕ್ಷೇತ್ರದ ಮಹಿಮೆಯನ್ನು ಮನಗಂಡ ಶಂಕರರು ಅಲ್ಲಿದ್ದ ಕರ್ಮನಿಷ್ಠರಾದ ಗೃಹಸ್ಥರೂ ತಮ್ಮ ಶಿಷ್ಯರುಗಳೂ ಪ್ರಾರ್ಥನೆಮಾಡಿದಂತೆ ಶಾರದಾಪ್ರತಿಷ್ಠೆಯನ್ನು ಮಾಡೋಣವೆ?–ಎಂದು ಯೋಚಿಸುತ್ತಿರುವಲ್ಲಿ ಆಕಾಶವಾಣಿಯೂ ಇದೇ ಪ್ರತಿಷ್ಠೆಗೆ ಸರಿಯಾದ ಕ್ಷೇತ್ರ ಎಂದು ನುಡಿಯಿತು– ಎಂದಿದೆ. ಆಚಾರ್ಯರು ತಾವು ಕಂಡಿದ್ದ ಅದ್ಭುತದರ್ಶನದ ಸ್ಥಲದಲ್ಲಿಯೇ ಉತ್ಕೃಷ್ಟವಾದ ದೇವಾಲಯವನ್ನು ಕಟ್ಟಿಸಿ ಸುಮುಹೂರ್ತದಲ್ಲಿ ಮಂತ್ರಶಾಸ್ತ್ರವಿಧಾನದಿಂದ ಶ್ರೀಚಕ್ರವನ್ನೂ (೪–೨೧) ಶಾರದಾಪ್ರತಿಷ್ಠೆಯನ್ನೂ ಮಾಡಿಸಿದರು; ದಿಗ್ಬಂಧನವನ್ನು ಮಾಡಿಸಿ ಯಥಾಸ್ಥಾನದಲ್ಲಿ ಉಚಿತವಾದ ದೇವತೆಗಳನ್ನು ಪ್ರತಿಷ್ಠಾಪನೆಮಾಡಿಸಿದರು; ಶರನ್ನವರಾತ್ರಿಯ ಉತ್ಸವವನ್ನು (೨೭) ಮಾಡಿಸಿದರು; ಅದರ ಬಳಿಯಲ್ಲಿ ವಿಶಾಲವಾದ ಶ್ರೀಮಠವನ್ನು ಸ್ಥಾಪಿಸಿ ವಿದ್ಯಾಪೀಠವನ್ನು ಏರ್ಪಡಿಸಿದರು (೩೨); ಪೂರ್ವಕ್ಕೆ ಭೈರವ, ಉತ್ತರಕ್ಕೆ ಕಾಳಿಕಾದೇವಿ, ದಕ್ಷಿಣದಲ್ಲಿ ಮಹಾದುರ್ಗಿ. ಪಶ್ಚಿಮಕ್ಕೆ ಮಾರುತಿ–ಹೀಗೆ ಸುತ್ತಲೂ ದುಷ್ಟನಿಗ್ರಹಕ್ಕಾಗಿ ಪ್ರತಿಷ್ಠೆಮಾಡಿಸಿದರು (೩೪–೪೫, ೪೭)–ಎಂದು ವಿವರಿಸಿದೆ.

## ಶಾರದಾಮಠಗಳ ಸ್ಥಾಪನೆ

೧೨೮. ಮಾಧವೀಯದಲ್ಲಿ ಶೃಂಗೇರಿಯ ಮಹಿಮೆಯನ್ನು ಹೊಗಳಿರುವದು, ಶಾರದಾಪೂಜೆಯು ನಡೆಯುವಂತೆ ಸಂಪ್ರದಾಯಪ್ರವರ್ತಕರಾದದ್ದು– ಇವೆರಡು ವಿಷಯಗಳು ಇವೆಯೇ ಹೊರತು ಅಲ್ಲಿ ಮಠದ ಸ್ಥಾಪನೆಯಾದದನ್ನು ಪರಾಮರ್ಶಿಸಿರುವದಿಲ್ಲ. ಡಿಂಡಿಮವ್ಯಾಖ್ಯಾನದಲ್ಲಿ 'ಅತ್ರ ಪ್ರಾಜ್ಞ್ಯಃ ಮಠಂ ಕೃತ್ವಾ ತತ್ರ ವಿದ್ಯಾಪೀಠನಿರ್ಮಾಣಂ ಕೃತ್ವಾ ಭಾರತೀಸಂಪ್ರದಾಯಂ ನಿಜಶಿಷ್ಯಂ ಚಕಾರ। ಯಸ್ತ್ವದ್ವೈತಮತೇ ಸ್ಥಿತ್ವಾ ಭಾರತೀಪೀಠನಿನ್ದಕಃ। ಸ ಯಾತಿ ನರಕಂ ಘೋರಂ ಯಾವದಾಭೂತಸಂಪ್ಲವಮ್॥ ಕಞ್ಚಿಚ್ಛಿಷ್ಯಂ ಸುರೇಶ್ವರಾಖ್ಯಂ ಪೀಠಾಧ್ಯಕ್ಷಮಕರೋತ್ ಇತಿ।' (ಮಾ. ಶಂ. ೧೨–೬೮) ಎಂಬ ವಾಕ್ಯಗಳಿವೆ. ಆನಂದಗಿರೀಯದಲ್ಲಿರುವ ವಾಕ್ಯದ ಒಂದಂಶವನ್ನು ಹಿಂದೆ (೧೧೭ನೆಯ ಖಂಡದಲ್ಲಿ) ಕೊಟ್ಟಿರುತ್ತೇವೆ. 'ತತಃ ಪರಂ ಸರಸವಾಣೀಂ ಮನ್ತ್ರಬದ್ಧಾಂ ಕೃತ್ವಾ ಗಗನಮಾರ್ಗಾದೇವ ಶೃಙ್ಗಗಿರಿಸಮೀಪೇ ತುಙ್ಗಭದ್ರಾತೀರೇ ಚಕ್ರಂ

ತವಗ್ರೇ ಪರದೇವತಾಂ ಸರಸವಾಣೀಂ ನಿಧಾಯ ತತ್ರ ವಿದ್ಯಾಪೀಠನಿರ್ಮಾಣಂ ಕೃತ್ವಾ ಭಾರತೀಸಂಪ್ರದಾಯಂ ನಿಜಶಿಷ್ಯೇಷು ಆಚಕಾರ | ತದಾರಭ್ಯ ಶುದ್ಧಾದ್ವೈತ ಗು ರ ವೋ ಭಾರತೀಸಂಪ್ರದಾಯನಿಷ್ಠಾಃ ಪರಮಗುರೋರಾಚಾರ್ಯಸ್ವಾಮಿನಃ ಕಟಾಕ್ಷಲಬ್ಧವಿದ್ಯಾವೈಶದ್ಯಾ ಇತಿ ವ್ಯವಹಾರಃ | ಯಸ್ತ್ವದ್ವೈತಮತೇ ಸ್ಥಿತ್ವಾ ಭಾರತೀಪೀಠನಿನ್ದಕಃ || ಸ ಯಾತಿ ನರಕಂ ಘೋರಂ ಯಾವದಾಭೂತಸಂಪ್ಲವಮ್ |" (ಆ. ಶಂ. ೬೨ ಪು. ೨೨೩ರಿಂದ ೨೩೦, ದೇ. ಪು. ೧೯೦) ಎಂದು ಪೂರ್ಣವಾಕ್ಯ. ಮುಂದಿನ ಪ್ರಕರಣದಲ್ಲಿ 'ತತ್ರೈವ ಪರಮಗುರುಃ ದ್ವಾದಶಾಬ್ದಂ ವಿದ್ಯಾಪೀಠೇ ಸ್ಥಿತ್ವಾ ಬಹುಶಿಷ್ಯೇಭ್ಯಃ ಶುದ್ಧಾದ್ವೈತವಿದ್ಯಾಯಾಃ ಸಮ್ಯಗ್ಗುರೂಪದೇಶಂ('ಸಮ್ಯಗುಪದೇಶಂ' ದೇ.)ಕೃತ್ವಾ ತದನನ್ತರಂ ಪದ್ಮಪಾದಾಖ್ಯಂ ಕಞ್ಚಿಚ್ಛಿಷ್ಯಂ (ದೇ. ಕಞ್ಚಿಚ್ಛಿಷ್ಯಂ ಸುರೇಶ್ವರಾಖ್ಯಮ್) ಪೀಠಾಧ್ಯಕ್ಷಂ ಕೃತ್ವಾ ಸ್ವಯಂ ನಿಶ್ಚಕ್ರಾಮ' (ಆ.ಶಂ. ೬೩ ಪು. ೨೨೫: ದೇ.ಪು. ೧೯೧–೧೯೨)ಎಂದಿದೆ.[1] ವಾಕ್ಯಗಳ ಈ ಅಭಿಪ್ರಾಯವೇ ಡಿಂಡಿಮವ್ಯಾಖ್ಯಾನದಲ್ಲಿದೆ. ಈ ಸಂದರ್ಭದಲ್ಲಿ ಅದ್ವೈತರಾಜ್ಯಲಕ್ಷ್ಮೀಟೀಕೆಯ ವ್ಯಾಖ್ಯಾನದ ಟಿಪ್ಪಣಿಯು ಕಂಡುಬರುವದಿಲ್ಲ. ಇದನ್ನು ನೋಡಿದರೆ ವ್ಯಾಖ್ಯಾನಕಾರನು ಆನಂದಗಿರೀಯದಲ್ಲಿರುವ ಕಥೆಯಂತೆ ಆಚಾರ್ಯರು ಮಠವನ್ನು ಸ್ಥಾಪಿಸಿ ಭಾರತೀಸಂಪ್ರದಾಯವನ್ನು ಏರ್ಪಡಿಸಿ ಅಲ್ಲಿಗೆ ಸುರೇಶ್ವರಾಚಾರ್ಯರನ್ನು ಪೀಠಾಧಿಪತಿಗಳನ್ನಾಗಿ ಮಾಡಿದರು– ಎಂದು ಅಭಿಪ್ರಾಯವನ್ನು ಕೊಟ್ಟಿರುವಂತೆ ಕಾಣಿಸುತ್ತಿದೆ.

ಚಿದ್ವಿಲಾಸೀಯದಲ್ಲಿ (೨೪) ಈ ವಿಷಯವನ್ನು ಇನ್ನಷ್ಟು ವಿಸ್ತಾರವಾಗಿ ಕೊಟ್ಟಿದೆ :

ಶ್ರೀಮಠಂ ತತ್ರ ನಿರ್ಮಾಯ ವಿದ್ಯಾಪೀಠಮಚೀಕ್ಲ್ರಪತ್ |
ಚತುರ್ಶ್ಲೋಕಂ ವಾವದೂಕಂ ಸುರೇಶಾಚಾರ್ಯಮಗ್ರಿಮಮ್ ||
ಬ್ರಹ್ಮವಿದ್ಯಾವರಿಷ್ಠಂ ತಂ ತತ್ಪೀಠೇ ವಿನಿವೇಶ್ಯ ಸಃ |
ಆಜಿಜ್ಞಪತ್ಸುರೇಶಾರ್ಯಮಿತ್ಥಂ ದೇಶಿಕಪುಙ್ಗವಃ ||
ಯಸ್ತ್ವದ್ವೈತಮತೇ ಸ್ಥಿತ್ವಾ ಭಾರತೀಪೀಠನಿನ್ದಕಃ |
ಸ ಯಾತಿ ನರಕಂ ಘೋರಂ ಯಾವದಾಭೂತಸಂಪ್ಲವಮ್ ||
ಆಸೇತುಹಿಮವಚ್ಛೈಲಂ ಸದಾಚಾರಾನ್ ವಿಚಾರಯ |
ಯತ್ರ ಸ್ಖಲತಿ ಯಃ ಕೋ ವಾ ವಿಪ್ರಸ್ತಂ ಶಿಕ್ಷಯಾಧಿಕಮ್ ||
ಸಂಪ್ರದಾಯಾನ್ ದಶೈವೈತಾನ್ ಶಿಷ್ಯೇಷ್ವಾರಚಯ ಸ್ವತಃ |
ತೀರ್ಥಾಶ್ರಮವನಾರಣ್ಯಗಿರಿಪರ್ವತಸಾಗರಾಃ ||
ಸರಸ್ವತೀ ಭಾರತೀ ಚ ಪುರೀತ್ಯೇತೇ ದಶೈವ ಹಿ ||

---

1. ಇಲ್ಲಿ ಕಂಸದಲ್ಲಿಟ್ಟಿರುವದು ದೇ' ಪಾಠ. ಇಲ್ಲಿರುವ ಸುರೇಶ್ವರಪದ್ಮಪಾದರ ವಿಷಯಗಳನ್ನು ಮುಂದೆ ಪರಾಮರ್ಶಿಸುವೆವು.

ಶಿವಾತ್ ಕ್ರಮಾತ್ಸಮಾಯಾತಂ ಚನ್ದ್ರಮೌಳೀಶ್ವರಂ ಪರಮ್ ।
ರತ್ನಗರ್ಭಂ ಗಣಪತಿಂ ಪೂಜಯೇತಿ ದದೌ ಮುದಾ ॥ (೩೨ರಿಂದ ೩೭)

(1) ಮಠವನ್ನು ನಿರ್ಮಿಸಿದ್ದು (2) ಸುರೇಶ್ವರರನ್ನು ಅಲ್ಲಿ ಪೀಠಾಧಿಪತಿಗಳನ್ನಾಗಿ ಇಟ್ಟದ್ದು (3) ಭಾರತೀಸಂಪ್ರದಾಯಸ್ಥಾಪನೆ (4)ಸದಾಚಾರವಿಚಾರಣೆಗೆ ಪೀಠಾಧಿಪರನ್ನು ಗೊತ್ತುಮಾಡಿದ್ದು (5) ತೀರ್ಥಾಶ್ರಮಾದಿದಶಸಂಪ್ರದಾಯಗಳನ್ನು ಪ್ರವರ್ತನೆಮಾಡಿದ್ದು (6) ಚಂದ್ರಮೌಲೀಶ್ವರಗಣಪತಿಗಳ ಪೂಜೆಯನ್ನು ಮಾಡಬೇಕೆಂದದ್ದು– ಇಷ್ಟು ವಿಷಯಗಳೂ ಇಲ್ಲಿವೆ. ಇವುಗಳನ್ನೆಲ್ಲ ವಿವರವಾಗಿ ವಿಮರ್ಶೆಮಾಡತಕ್ಕ ಸಂದರ್ಭವು ಇದಲ್ಲ. ಸದ್ಯಕ್ಕೆ ಮಠವನ್ನು ನಿರ್ಮಿಸಿದ್ದು, ಸುರೇಶ್ವರರನ್ನು ಪೀಠದಲ್ಲಿ ನಿಲ್ಲಿಸಿದ್ದು–ಆನಂದಗಿರೀಯದಂತೆ ಇಲ್ಲಿಯೂ ಇದೆ ಎಂಬುದನ್ನು ನಾವು ಲಕ್ಷಿಸಬೇಕಾಗಿದೆ. **ಶೃಂಗೇರಿಯಲ್ಲಿ** ಮಠಸ್ಥಾಪನೆಯ ವಿ ಚಾ ರ ವು **ಮಣಿಮಂಜರೀಭೇದಿನೀ** (ವಿದ್ಯಾಪೀಠಮುಖಾಕಲಯ್ಯ ಭಗವಾಂಸ್ತದ್ಭಾರತೀಯಂ ಮುದಾ ೩–೩೧), **ಭಗವತ್ಪಾದಾಭ್ಯುದಯ** (ಶಾರದಾಮಠ ಇತ್ಯೇವ ನಾಮ ಚಕ್ರೇ ೮–೩೭) –ಮುಂತಾದ ಈಚಿನ ಶಂಕರ ಚರಿತ್ರೆಗಳಲ್ಲಿಯೂ ಇದೆಯೆಂಬುದನ್ನು ಹೇಳಬೇಕಾಗಿಲ್ಲ.

ಹೀಗಿದ್ದರೂ ಈ ಮಠಸ್ಥಾಪನೆಯ ವೃತ್ತಾಂತವು ಮಾಧವೀಯದಲ್ಲಿಲ್ಲ. ಮಾಧವಾನುಸಾರಿ ಎಂದು ಕೆಲವರು ನಂಬಿರುವ **ಶಂಕರಕಥಾಸುಧಾನಿಧಿಯಲ್ಲಿ:**

ಭಾರತೀ ಸಮವಲೋಕ್ಯ ಮಣ್ಡನಂ
ಮುಣ್ಡಿನಂ ಯತಿಮತಾನುವರ್ತಿನಮ್ ।
ತದ್ಭಯೇನ ಯತಿದೃಷ್ಟಿವರ್ತ್ಮಗಾ
ನೋ ಭವೇಯಮಿತಿ ಸಾ ತಿರೋದಧೇ ॥ (ಶಂ.ಕ.ಸು. ೫–೧)

ಮಂಡನನು ಯತಿಯಾಗಲು ಯತಿದೃಷ್ಟಿಗೋಚರನಾದೇನೆಂಬ ಭಯದಿಂದ ಅದೃಶ್ಯಳಾದಳು ಎಂದೂ ಅಶರೀರವಾಣಿಯಿಂದ 'ನೀನು ಸ್ಮರಿಸಿದಲ್ಲಿ ನಾನು ಸಂನಿಹಿತಳಾಗಿರುವೆನು' ಎಂದು ಹೇಳಿದಳೆಂದೂ ಬರೆದಿದೆ. ಮುಂದೆ ಆಚಾರ್ಯರು ಶೃಂಗೇರಿಗೆ ಬಂದಾಗ ಅವರ ಸ್ಮರಣೆಯಿಂದ ಪ್ರಸನ್ನಳಾಗಿ ಇಲ್ಲಿ ನಿತ್ಯವೂ ನನ್ನ ಪೂಜೆಯನ್ನೇ ಮಾಡು (ವಿಧೇಯಾ ಮುದೈವ ಪೂಜಾ ನಿತ್ಯಂ ಯತೀನ್ದ್ರೇತಿ ಪುನಃಪುನಸ್ತಮ್ ೫–೩೫) ಎಂದು ಬಾರಿಬಾರಿಗೂ ಹೇಳಲು ಅದರಂತೆ ಅಲ್ಲಿ ರಮ್ಯವಾದ ಮಠವನ್ನು ನಿರ್ಮಿಸಿದರೆಂದು ಬರೆದಿದೆ. (ವಾಚಂ ತದೀಯಾಂ ಬಹು ಮನ್ಯಮಾನಸ್ತಥೇತಿ ನಿರ್ಮಾಯ ಮಠಂ ಸುರಮ್ಯಮ್) ಎಂದು ಕವಿಯು ತನ್ನದೇ ಒಂದು ಕಲ್ಪನೆಯನ್ನು ಪ್ರಕಟಿಸಿರುತ್ತಾನೆ.

ಈಗ ಶಾರದಾಪೀಠಸ್ಥಾಪನೆಯ ವಿಷಯಕ್ಕೆ ಸ್ವಲ್ಪ ವಿಮರ್ಶೆಮಾಡುವ ಕಾಲವು ಒದಗಿದೆ. ಇಲ್ಲಿ ಪರಿಶೀಲಿಸಬೇಕಾದ ಮುಖ್ಯವಿಷಯಗಳು ಯಾವವೆಂದರೆ,

(೧) ಆಚಾರ್ಯರು ಶೃಂಗೇರಿಯಲ್ಲಿ ಮಠವನ್ನು ಸ್ಥಾಪಿಸಿದರೆಂದು ಅನೇಕ ಶಂಕರವಿಜಯಗಳಲ್ಲಿ ಹೇಳಿದೆಯಾದರೂ ಆ ಬಗ್ಗೆ ಶಾಸನಗಳೂ ಆಧಾರವೂ ಇರುವದಿಲ್ಲ. ಶಾ.ಶ. ೧೨೬೮ನೆಯ ಪಾರ್ಥಿವಸಂವತ್ಸರದ ? ಬಹುಳ ಗುರುವಾರ ದಲ್ಲೂ ಶ್ರೀ ವೀರಹರಿಹರ ಒಡೆಯರು ಮುಂತಾದವರು ಕೊಟ್ಟ ಶಾಸನದಲ್ಲಿ 'ಭಾರತೀತೀರ್ಥ ಶ್ರೀಪಾದಂಗಳವರೂ ಅವರ ಶಿಷ್ಯಾದಿಗಳೂ ಆ ಶೃಂಗೆರಿಯ ತೀರ್ಥವಾಸದಲ್ಲು ಅನುಷ್ಠಾನವಮಾಡಿಹದಕ್ಕೆ'[1] ಎಂದು ಬರೆದಿದೆಯಂತೆ(ಸೋ.ಶಂ. ಪು. ೧೬೧)[1] ಅದರಲ್ಲಿ ಶಾರದಾಪೀಠದ ಪ್ರಸ್ತಾಪವೇಕಿಲ್ಲ ?–ಎಂಬುದು ಆಲೋಚ ನೀಯವಾಗಿದೆ.

(೨) ಶಂಕರವಿಜಯಗಳಲ್ಲಿ ಮಂತ್ರಶಾಸ್ತ್ರದ ಪರಾಮರ್ಶವು ಕಾಣಬರುತ್ತಿದೆ. ಮಂತ್ರಶಕ್ತಿಯಿಂದ ದೇವತೆಗಳನ್ನು ಆಹ್ವಾನಿಸುವದು, ಅವರನ್ನು ದಿಗ್ಬಂಧನ ಮಾಡುವದು- ಮುಂತಾದ ಅದ್ಭುತಗಳೂ ಅಲ್ಲಲ್ಲಿ ಪ್ರಸ್ತಾಪಿತವಾಗಿವೆ. ಪ್ರಕೃತ ವಾದ ಶೃಂಗೇರಿಯಲ್ಲಿ ಆಚಾರ್ಯರು ಶಾರದಾದೇವಿಯನ್ನು 'ಮಂತ್ರಶಾಸ್ತ್ರವಿಧಾನ ದಿಂದ ಬರೆದ ಶ್ರೀಚಕ್ರದ ಮೇಲೆ ಸ್ಥಾಪಿಸಿದರೆಂದು' (ಶ್ರೀಚಕ್ರಂ ತತ್ರ ಸಲ್ಲಿಖ್ಯ ಮನ್ತ್ರಶಾಸ್ತ್ರವಿಧಾನತಃ....) ಎಂದು ಚಿದ್ವಿಲಾಸರು ಅದರ ವಿವರಸಮೇತ(೩೪.೨೧ ರಿಂದ ೨೩) ವರ್ಣಿಸಿರುತ್ತಾರೆ. ಮಾಧವನೂ ಹನ್ನೆರಡನೆಯ ಸರ್ಗದಲ್ಲಿ ಆಚಾರ್ಯರು ಮೂಕಾಂಬಿಕೆಯನ್ನು ಸ್ತೋತ್ರಮಾಡಿದಂತೆ ವರ್ಣಿಸಿರುವಲ್ಲಿ (೧೨-೨೭ರಿಂದ ೩೭ರವರೆಗೆ) ಮಂತ್ರಶಾಸ್ತ್ರದ ಪರಿಚಯವನ್ನು ಆಚಾರ್ಯರಿಗೆ ಕೂಡಿಸಿ ಬರೆದಿರುತ್ತಾನೆ. ಆಚಾರ್ಯರಿಗೆ ಮಂತ್ರಶಾಸ್ತ್ರವು ಯಾರಲ್ಲಿ ಯಾವಾಗ ಆಯಿತೆಂಬ ವಿವರವನ್ನು ಮಾತ್ರ ಕೊಟ್ಟಿರುವದಿಲ್ಲ. ಇದರ ರಹಸ್ಯವೇನು ?

(೩) ಶೃಂಗೇರಿಯ ಪೀಠದ ವಿಷಯಕ್ಕೆ ಚಿದ್ವಿಲಾಸರು ನಾಲ್ಕು ಅಧ್ಯಾಯ ಗಳಷ್ಟು (ಇಡಿಯ ಗ್ರಂಥದ ಎಂಟನೆಯಂಶದಷ್ಟು) ಸ್ಥಾನವನ್ನು ಕಲ್ಪಿಸಿಟ್ಟಿರು ತ್ತಾರೆ. ಆದರೆ ಮಾಧವೀಯದಲ್ಲೇಕೆ ಅದರ ಪ್ರಸ್ತಾಪವಿಲ್ಲ ?

ಇದನ್ನೂ ಮಿಕ್ಕ ವಿವರಗಳನ್ನೂ ಮಠಗಳ ಪ್ರಸ್ತಾಪವನ್ನು ಮಾಡುವಾಗ ಮತ್ತೆ ವಿಚಾರಕ್ಕೆ ತೆಗೆದುಕೊಳ್ಳುವೆವು.

## ತೋಟಕಾಚಾರ್ಯರ ಶಿಷ್ಯವೃತ್ತಿ

೧೨೯. ಆಚಾರ್ಯರು ಶೃಂಗೇರಿಯಲ್ಲಿದ್ದಷ್ಟು ಕಾಲವೂ ದೇವಿಗೆ ಪೂಜೆಗೆ ಏರ್ಪಡಿಸಿದ್ದೇ ಅಲ್ಲದೆ ತಮ್ಮ ಭಾಷ್ಯಗ್ರಂಥಗಳನ್ನು ಶಿಷ್ಯರಿಗೆ ಪಾಠಹೇಳುತ್ತಾ

1. ಈಚೆಗೆ 'ಶೃಂಗೇರೀ ಶ್ರೀಮಠೀಯಪ್ರಾಕ್ತನಲೇಖನಮಾಲಾಸಂಗ್ರಹ' ವೆಂಬ ಪುಸ್ತಕವೊಂದು ನಮಗೆ ದೊರೆತಿದೆ. ಅದರಲ್ಲಿ ಪ್ರಕಟವಾಗಿರುವ ಮೊದಲನೆಯ ಶಾಸನ ವಿದು. ಶಾ. ಶ. ೧೨೭೭ರಲ್ಲಿ ಬರೆದ ಶಾಸನದಲ್ಲಿ 'ಈ ಮಠದ ಪರಿಚರಿಯಕ್ಕೆ' ಎಂಬ ಮಾತು ನಮಗೆ ಕಂಡುಬಂದಿದೆ.

ಕಾಲವನ್ನು ಕಳೆಯುತ್ತಿದ್ದರು. ಆಗ ಒಬ್ಬ ಶಿಷ್ಯನು ಆಚಾರ್ಯರನ್ನು ಎಡೆಬಿಡದೆ ಸೇವಿಸುತ್ತಿದ್ದನು. ಓಮ್ಮೆ ಆವನು ಆಚಾರ್ಯರ ಶಾಟಿಗಳನ್ನು ಒಗೆದುಕೊಂಡು ಬರುವದಕ್ಕೆ ಹೋಗಿದ್ದನು. ಶಿಷ್ಯರು ಶಾಂತಿಪಾಠವನ್ನು ಹೇಳುವದಕ್ಕೆ ಪ್ರಾರಂಭಿಸಲು 'ಗಿರಿಯೂ ಬರಲಿ' ಎಂದರು. 'ಆವನೇನೂ ಅಂಥ ಬುದ್ಧಿವಂತನಲ್ಲ,ಶಾಸ್ತ್ರಕ್ಕೆ ಆಧಿಕಾರಿಯೂ ಅಲ್ಲ ; ಅವನಿಗಾಗಿ ಏತಕ್ಕೆ ಕಾಯಬೇಕು ?' ಎಂದು ಪದ್ಮಪಾದರು ಎನ್ನಲು ಅವರ ಗರ್ವವನ್ನು ಪರಿಹಾರಮಾಡಬೇಕೆಂಬ ಮತ್ತು ಆಶ್ರಿತನಾಗಿದ್ದ ಗಿರಿಯಲ್ಲಿ ಕರುಣೆಯನ್ನು ತೋರಿಸಬೇಕೆಂಬ ಇಚ್ಛೆಯಿಂದ ಆಚಾರ್ಯರು ಆವನಿಗೆ 'ಹದಿನಾಲ್ಕು ವಿದ್ಯೆಗಳನ್ನು' ಮನಸ್ಸಿನಿಂದಲೇ ಉಪದೇಶಮಾಡಿದರು (ತಸ್ಯ ಗರ್ವಮಪಹರ್ತುಮಖರ್ವಂ ಸ್ವಾಶ್ರಯೇಷು ಕರುಣಾತಿಶಯಾಚ್ಚ । ವ್ಯಾದಿದೇಶ ಸ ಚತುರ್ದಶವಿದ್ಯಾಃ ಸದ್ಯ ಏವ ಮನಸಾ ಗಿರಿನಾಮ್ನೇ॥ ೧೨-೭೮)-ಗುರ್ವನುಗ್ರಹದಿಂದ ಆತನು ಬಂದಕೂಡಲೆ ಆಚಾರ್ಯರನ್ನು ಹೊಗಳುವ ವೇದಾಂತಸಿದ್ಧಾಂತಪ್ರಧಾನವಾದ ಕೆಲವು ತೋಟಕವೃತ್ತಶ್ಲೋಕಗಳಿಂದ ಅವರನ್ನು ಸ್ತುತಿಸಿದನು. ಆ ಪ್ರಕರಣವೂ ತೋಟಕವೆಂಬ ಹೆಸರಿನಿಂದಲೇ ಪ್ರಸಿದ್ಧವಾಗಿದೆ. ಆ ಶಿಷ್ಯನೂ ಅಂದಿನಿಂದ ತೋಟಕಾಚಾರ್ಯನೆಂಬ ಹೆಸರಿನಿಂದಲೇ ಪ್ರಖ್ಯಾತನಾದನು ; ಪದ್ಮಪಾದರಿಗೆ ಸಮಾನವಾದ ಪ್ರತಿಭೆಯುಳ್ಳವನಾಗಿ ಮುಖ್ಯಶಿಷ್ಯಸ್ಥಾನವನ್ನು ಪಡೆದುಕೊಂಡನು (ಮಾ. ಶಂ. ೧೨-೭೦ರಿಂದ ೮೬).

ವ್ಯಾಸಾಚಲೀಯದಲ್ಲಿ ತೋಟಕಾಚಾರ್ಯರು ಆಚಾರ್ಯರಿಗೆ ಭಗಂದರರೋಗವು ಬಂದಿದ್ದಾಗ ಸೇವೆಗೆ ನಿಂತಿದ್ದರೆಂದು (ವ್ಯಾ. ಶಂ. ೯-೮೪ರಿಂದ೯೭) ವರ್ಣಿಸಿದೆ. ಅಲ್ಲಿ ಮಾಧವೀಯದ ಅನೇಕ ಪದ್ಯಗಳು ಕಾಣುತ್ತವೆ; ಆದರೆ ಉಳಿದ ಶಿಷ್ಯರುಗಳ ಅಸೂಯೆಯಾಗಲಿ, ಶಾಂತಿಪಾಠದ ಪ್ರಕರಣವಾಗಲಿ ಇಲ್ಲ. ಬಹಳಮಟ್ಟಿಗೆ ವ್ಯಾಸಾಚಲೀಯವನ್ನೇ ಅನುಸರಿಸಿರುವ ಗೋವಿಂದನಾಥನು ಹಸ್ತಾಮಲಕನ ಲಾಭವಾದ ಬಳಿಕವೇ ತೋಟಕಾಚಾರ್ಯರ ಕಥೆಯನ್ನು ವರ್ಣಿಸಿರುತ್ತಾನೆ; ಅಲ್ಲಿ ಭಗಂದರದ ಸಂದರ್ಭವು ಪರಾಮೃಷ್ಟವಾಗಿರುವದಿಲ್ಲ.

ಚಿದ್ವಿಲಾಸೀಯದಲ್ಲಿ ಆಚಾರ್ಯರಿಗೆ ವ್ಯಾಸದರ್ಶನವಾಗುವ ಮುಂಚೆಯೇ ಕಾಶಿಯಲ್ಲಿ ತೋಟಕಾಚಾರ್ಯರ ಪರಿಚಯವಾದಂತೆ ಬರೆದಿದೆ. ಕಾಶಿಯಲ್ಲಿ ವಿಶ್ವನಾಥೇಶ್ವರಿಯ ಮಗನಾದ ಕಲಾನಾಥನೆಂಬಾತನು ಆಚಾರ್ಯರು ಅಲ್ಲಿಗೆ ಬಂದಿದ್ದಾರೆಂಬುದನ್ನು ತಿಳಿದು ತೋಟಕವೃತ್ತದಿಂದ,

ವಿದಿತಾಖಿಲಶಾಸ್ತ್ರಸುಧಾಜಲಧೇ । ಮಹಿತೋಪನಿಷತ್ಕಥಿತಾರ್ಥನಿಧೇ ।
ಹೃದಯೇ ಕಲಯೇ ವಿಮಲಂ ಚರಣಂ । ಭವ ಶಙ್ಕರದೇಶಿಕ ಮೇ ಶರಣಮ್ ॥

ಎಂದು ಮೊದಲಾಗಿರುವ ಎಂಟು ಪದ್ಯಗಳನ್ನು ಹೇಳಿಕೊಂಡು ಆಚಾರ್ಯರ ಪಾದಕ್ಕೆ ಬಿದ್ದನು. ಅಲ್ಲಿಂದ ಮುಂದಕ್ಕೆ ಆಚಾರ್ಯರ ಸೇವೆಯನ್ನು ಮಾಡುತ್ತಾ

ಉಳಿದ ಮುಖ್ಯಶಿಷ್ಯರ ಸಮಾನಪದವಿಗೆ ಏರಬೇಕೆಂಬ ಅಭಿಲಾಷೆಯುಳ್ಳವನಾಗಿದ್ದನು. ಆಚಾರ್ಯರು ಆವನನ್ನು ಕರೆದು ಕರುಣಾಕಟಾಕ್ಷದಿಂದ ನೋಡಿ ಆವನಿಗೆ ಆಸಾಧಾರಣಕೌಶಲನನ್ನು ಆನುಗ್ರಹಿಸಿದರು. ಆವನು ತನಗೆ ಸಂನ್ಯಾಸವನ್ನು ಕೊಡಬೇಕೆಂದು ಕೇಳಿಕೊಂಡಪ್ರಕಾರ ಆಶ್ರಮವನ್ನು ಕೊಟ್ಟು ಆಚಾರ್ಯರು "ನಿನ್ನ ಮುಖದಿಂದ ತೋಟಕವೃತ್ತವು ಬಂದಿರುವ ಕಾರಣ ನಿನಗೆ ತೋಟಕಾಚಾರ್ಯನೆಂದೇ ಹೆಸರಾಗಲಿ!" ಎಂದು ಆಶೀರ್ವದಿಸಿದರು (ಚಿ. ಶಂ. ೧೩-೧ರಿಂದ೨೦). ಆನಂದಗಿರೀಯದಲ್ಲಿ ಈ ಕಥೆಯಿರುವಂತೆ ಕಾಣಿಸಲಿಲ್ಲ.

## ತೋಟಕಾಖ್ಯಾನದ ವಿಮರ್ಶೆ

೧೩೦. ಈ ಕಥೆಯ ವಿಷಯದಲ್ಲಿ ವಿಮರ್ಶೆಮಾತಕ್ಕೆ ವಿಷಯಗಳು ಯಾವುವೆಂದರೆ :

(೧) ತೋಟಕಾಚಾರ್ಯರ ಪೂರ್ವಾಶ್ರಮದ ಹೆಸರು ಯಾವುದು? ಎಂಬುದು ಅನಿಶ್ಚಿತವಾಗಿದೆ. ಗಿರಿ ಎಂದು ಮಾಧವೀಯದಲ್ಲಿದೆ ; ಇದನ್ನು 'ಆನಂದಗಿರಿ' ಎಂದು ಈಗ ಕೆಲವರು ಭ್ರಾಂತಿಯಿಂದ ಮಾರ್ಪಡಿಸಿಕೊಂಡಿರುತ್ತಾರೆ. ಕಲಾನಾಥ ಎಂದು ಚಿದ್ವಿಲಾಸೀಯದಲ್ಲಿದೆ. ಇದೆಲ್ಲ ಯಾವದಾದರೊಂದು ಹೆಸರು ಇರಬೇಕೆಂದು ಕಲ್ಪಿಸಿದ್ದೇ ಹೊರತು ಮತ್ತೇನೂ ಆಲ್ಲವೆಂಬುದು ಸ್ಪಷ್ಟ.

(೨) ತೋಟಕವೃತ್ತದಲ್ಲಿರುವ ಈ ಪದ್ಯಗಳು ಯಾವದೋ ಒಂದು ಕ್ರಮದಲ್ಲಿ ಶಂಕರವಿಜಯಗಳಿಗಿಂತ ಮೊದಲೇ ಇದ್ದಿರಬೇಕು. ಶಂಕರವಿಜಯಕಾರರು ಅವನ್ನು ಒಬ್ಬ ಶಿಷ್ಯರಿಗೆ ಸಂಬಂಧಿಸಿ ಬರೆದಿರಬಹುದು– ಎಂದು ಹೇಳಬೇಕಾಗಿದೆ. ಡಿಣ್ಡಿಮಕಾರನು : 'ಭಗವನ್ನುದಧೌ ಮೃತಿಜನ್ಮಜಲೇ' ಎಂಬುದನ್ನು ಹಿಡಿದು 'ಯತ ಏವಮತೋಽಸಿ ಸದೇವ ಸದಾ' ಎಂಬವರೆಗಿನ ಐದು ಪದ್ಯಗಳನ್ನು ಬರೆದು "ಇತ್ಯಾದಿಭಿರ್ಗುರುಶಿಷ್ಯಸಂವಾದೇನ ಪರತತ್ತ್ವವ್ಯಞ್ಜಕೈಃ .... ತೋಟಕವೃತ್ತೈಃ ಸಹ ದೇಶಿಕವರಂ ಶ್ರೀಶಙ್ಕರಂ ಪ್ರತ್ಯಾಗತವಾನ್ ಇತ್ಯರ್ಥಃ' (ಇವೇ ಮುಂತಾದ ಗುರುಶಿಷ್ಯಸಂವಾದದಿಂದ ಪರತತ್ತ್ವವನ್ನು ಹೊರಗೆಡಹುವ ತೋಟಕವೃತ್ತಗಳೊಡನೆ ಗುರುಶ್ರೇಷ್ಠರಾದ ಶ್ರೀಶಂಕರರ ಬಳಿಗೆ ಬಂದನು) ಎಂದು ಬರೆದಿರುವದರಿಂದ ಆತನ ಕಾಲದಲ್ಲಿ ಈ ಐದು ಪದ್ಯಗಳಾದಮೇಲೆಯೇ "ವಿದಿತಾಖಿಲಶಾಸ್ತ್ರಸುಧಾಜಲಧೇ" ಮುಂತಾದ ಪದ್ಯಗಳಿದ್ದವೆಂದು ಕಲ್ಪಿಸಬೇಕಾಗುತ್ತದೆ. ಆದರೆ ಚಿದ್ವಿಲಾಸೀಯದಲ್ಲಿ ಸ್ಪಷ್ಟವಾಗಿ "ವಿದಿತಾಖಿಲಶಾಸ್ತ್ರಸುಧಾಜಲಧೇ" ಎಂದೇ ಪ್ರಾರಂಭವಾಗಿ ಎಂಟು ಪದ್ಯಗಳನ್ನು ಬರೆದಿದೆ. ಮಿಕ್ಕ ಪದ್ಯಗಳು ಇದ್ದವೆಂಬುದಕ್ಕೆ ಅಲ್ಲಿ ಯಾವ ಗುರುತೂ ಇಲ್ಲ. ಸೋಮನಾಥಯ್ಯನವರು ಬರೆದುಕೊಂಡಿರುವ ಈ ಪ್ರಕರಣಪಾಠದಲ್ಲಿ "ವಿದಿತಾಖಿಲ" ಎಂದು ಮುಂತಾದ ಎಂಟು ಶ್ಲೋಕಗಳಾದ ಮೇಲೆಯೇ "ಭಗವನ್ನುದಧೌ" ಮುಂತಾದ ಐದು ಪದ್ಯಗಳಿವೆ.

ಅವರು ಯಾವ ಮೂಲವನ್ನು ಅನುಸರಿಸಿ ಬರೆದರೋ ತಿಳಿಯುವಂತಿಲ್ಲ. ಆನಂದಾಶ್ರಮದಲ್ಲಿ ಪ್ರಕಟವಾಗಿರುವ **ಮಾಧವೀಯ**ದಲ್ಲಿ ಸಂಪಾದಕರು ಒಂದು ಟಿಪ್ಪಣಿಯನ್ನು ಹಾಕಿದಾರೆ : "ಅಗ್ರಿಮಂ ಪದ್ಯದ್ವಯಂ ಪುಸ್ತಕೇ "ಭಗವನು॥ ದಧೌ" ಇತ್ಯಾದಿ ಶ್ಲೋಕಪಞ್ಚಕಾತ್ ಪ್ರಾಗಧಿಕಂ ದೃಶ್ಯತೇ—

ಸಕಲಂ ಮನಸಾ ಕ್ರಿಯಯಾ ಜನಿತಂ ಸಮವೇಕ್ಷ್ಯ ವಿನಾಶಿತಯಾ ತು ಜಗತ್ ।
ನಿರವಿದ್ಯತ ಕಶ್ಚಿದತೋ ನಿಖಿಲಾದವಿನಾಶಿಕೃತೇ ಯತಿತವ್ಯಮಿತಿ ॥ ೧ ॥

ಪ್ರತಿಪತ್ತುಮಸಾವವಿನಾಶಿಪದಂ ಯತಿಧರ್ಮರತೋ ಯತಿಮೇವ ಗುರುಮ್ ।
ವಿದಿತಾತ್ಮಕಲಂ ಸಮುಪೇತ್ಯ ಕವಿಃ ಪ್ರಣಿಪತ್ಯ ನಿವೇದಿತವಾನ್ ಸ್ವಮತಮ್ ॥ ೨ ॥

ಈ ಟಿಪ್ಪಣಿಯಂತೆ ವ್ಯಾಖ್ಯಾನದಲ್ಲಿ ಕೊಟ್ಟಿರುವ ಐದು ಪದ್ಯಗಳಿಗಿಂತ ಮುಂಚೆ ಈ ಎರಡು ಪದ್ಯಗಳಿರುವ ಪಾಠಾಂತರವೂ ಇತ್ತು. ಕ್ರಿಯಾಜನ್ಯವಾದದ್ದೆಲ್ಲವೂ ವಿನಾಶಿಯೇ ಎಂದು ಮನಸ್ಸಿನಿಂದ ನಿಶ್ಚಯಿಸಿ ಎಲ್ಲದರ ವಿಷಯಕ್ಕೆ ವಿರಕ್ತನಾಗಿ ಅವಿನಾಶಿಯಾದದ್ದನ್ನು ಪಡೆಯುವದಕ್ಕೇ ಪ್ರಯತ್ನಿಸಬೇಕೆಂದು ಹೊರಟ ಸಂನ್ಯಾಸಿಯೊಬ್ಬನು ಯತಿಗಳಾದ ಗುರುಗಳ ಬಳಿಯಲ್ಲಿ ತನ್ನ ಅಭಿಪ್ರಾಯವನ್ನು ನಮಸ್ಕಾರಪೂರ್ವಕವಾಗಿ ಬಿನ್ನವಿಸಿಕೊಂಡನು– ಎಂಬುದು ಆ ಪದ್ಯಗಳ ಅಭಿಪ್ರಾಯ. ಈ ಪದ್ಯಗಳು ನಿಜವಾಗಿಯೂ ಪ್ರಕೃತಶ್ಲೋಕಗಳ ಮೊದಲು ಇದ್ದದ್ದು ನಿಜವಾದರೆ ಒಬ್ಬಾನೊಬ್ಬ ವಿರಕ್ತನಾದ ಮುಮುಕ್ಷುವು ಗುರುವಿನ ಬಳಿಗೆ ಹೋಗಿ ತತ್ತ್ವವನ್ನು ಕೇಳಿದಂತೆ ಬರೆದ ಪ್ರಕರಣವಿದು. ಅದರಲ್ಲಿ ಗುರುಶಿಷ್ಯಸಂವಾದವೂ ಇರುವದರಿಂದ ಇದನ್ನು ತೋಟಕಾಚಾರ್ಯರಿಗೆ ಶಂಕರವಿಜಯಕಾರರು ಗಂಟು ಹಾಕಿದರೆಂದು ಕಲ್ಪಿಸಬೇಕಾಗುತ್ತದೆ. ಇದರ ವಿಷಯಕ್ಕೆ ವಾಚಕರೇ ತಮತಮ್ಮ ತೀರ್ಮಾನವನ್ನು ಮಾಡಿಕೊಳ್ಳಬೇಕಾಗಿದೆ. ಈ ಹಸ್ತಾಮಲಕತೋಟಕವೃತ್ತಾಂತಗಳು ಪದ್ಮಪಾದಸುರೇಶ್ವರಕಥೆಗಳಂತೆಯೇ ಶಂಕರವಿಜಯಕಾರರ ಕಲ್ಪನಾಪ್ರಪಂಚಕ್ಕೇ ಸೇರಿದವುಗಳು ; ಆದ್ದರಿಂದಲೇ ಈ ವಿಷಯದ ವೃತ್ತಾಂತ ಕಥನಗಳಲ್ಲಿ ಹೊಂದಿಕೆಯಿಲ್ಲದೆಹೋಗಿದೆ ಎಂತ ನಮಗಂತೂ ತೋರುತ್ತದೆ.

ಮಥಿತಾರ್ಥವೇನೆಂದರೆ, ಆಚಾರ್ಯರಿಗೆ ನಾಲ್ಕು ಜನ ಪ್ರಮುಖಶಿಷ್ಯರೆಂಬುದು ನಿಶ್ಚಿತ ; ಅವರು ಒಳ್ಳೆಯ ಪ್ರತಿಭಾವಂತರಾಗಿ ಆಚಾರ್ಯರ ಅನುಗ್ರಹಕ್ಕೆ ಪಾತ್ರರಾಗಿದ್ದರೆಂಬುದೂ ನಿಶ್ಚಿತ. **ಮಾಧವೀಯ**ದಲ್ಲಿ ಕಾಣುವ ಈ ಮುಂದಿನ ಉತ್ಪ್ರೇಕ್ಷೆಯ ಪದ್ಯಕ್ಕೆ ಅವರು ನಿಜವಾಗಿಯೂ ಲಕ್ಷ್ಯರಾಗಿದ್ದರೆಂಬುದಕ್ಕೆ ಯಾವ ಸಂಶಯವೂ ಇಲ್ಲ :

ಪುಮರ್ಥಾಶ್ಚತ್ವಾರಃ ಕಿಮುತ ನಿಗಮಾ ಋಕ್ಪ್ರಭೃತಯಃ
ಪ್ರಭೇದಾ ವಾ ಮುಕ್ತೇರ್ವಿಮಲತರಸಾಲೋಕ್ಯಮುಖರಾಃ ।
ಮುಖಾನ್ಯಾಹೋ ಧಾತುಶ್ಚಿರಮಿತಿ ವಿಮೃಶ್ಯಾಥ ವಿಬುಧಾ
ವಿದುಃ ಶಿಷ್ಯಾನ್ ಹಸ್ತಾಮಲಕಮುಖರಾನ್ ಶಙ್ಕರಗುರೋಃ ॥

'ಹಸ್ತಾಮಲಕರೇ ಮೊದಲಾದ ಶಂಕರಗುರುವಿನ ನಾಲ್ವರು ಶಿಷ್ಯರನ್ನು ಕಂಡು–ಇವರೇನು ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥಗಳೊ, ಅಥವಾ ಋಗಾದಿಚತುರ್ವೇದಗಳೊ, ಅಥವಾ ಸಾಲೋಕ್ಯಸಾಮೀಪ್ಯಸಾರೂಪ್ಯಸಾಯುಜ್ಯ ಗಳೆಂಬ ಮುಕ್ತಿವಿಶೇಷಗಳೊ, ಅಥವಾ ಬ್ರಹ್ಮನ ನಾಲ್ಕು ಮುಖಗಳೊ !–ಎಂದು ಪಂಡಿತರು ಬಹುಕಾಲ ವಿಮರ್ಶಿಸುತ್ತಿದ್ದರು' ಎಂಬುದು ಪದ್ಯದ ಅಭಿಪ್ರಾಯ.

(೩) **ಶಾಂತಿಪಾಠವು ಯಾವಾಗ, ಹೇಗೆ ಆಚರಣೆಗೆ ಬಂತು ?** ಗಿರಿಯು ಬರುವದಕ್ಕೆ ಮುಂಚೆ 'ಶಾಂತಿಪಾಠ'ವನ್ನು ಹೇಳುವದಕ್ಕೆ ಮೊದಲುಮಾಡಿದರು–ಎಂದು ಮಾಧವನು ತಟ್ಟನೆ ಹೇಳಿಬಿಟ್ಟಿರುತ್ತಾನೆ. ಹಿಂದೆ ಗೋವಿಂದಭಗವತ್ಪಾದ ರಾಗಲಿ ಆಚಾರ್ಯರಾಗಲಿ ಉಪನಿಷದರ್ಥವನ್ನು ಅಥವಾ ಸೂತ್ರಾರ್ಥವನ್ನು ವಿವರಿಸುವ ಮುಂಚೆ ಶಾಂತಿಪಾಠವನ್ನು ಈ ಅನುಕ್ರಮದಲ್ಲಿ ಹೇಳಬೇಕೆಂದು ಉಪದೇಶಮಾಡಿರುವದು ಕಾಣಬರುವದಿಲ್ಲ. ಉಪನಿಷತ್ತುಗಳ ಆದಿಯಲ್ಲಿ, ನಡುವೆ, ಅಥವಾ ಅಂತ್ಯದಲ್ಲಿ ಈ ಪಾಠಗಳು ಅಲ್ಲಲ್ಲಿ ಕಂಡುಬರುತ್ತವೆ: ಭಾಷ್ಯ ಕಾರರೂ ಅಲ್ಲಲ್ಲಿಯೇ ಇವಕ್ಕೆ ವ್ಯಾಖ್ಯಾನವನ್ನು ಬರೆದಿರುತ್ತಾರೆ. ಇವುಗಳನ್ನೆಲ್ಲ ಒಟ್ಟುಗೂಡಿಸಿ ಒಂದಾನೊಂದು ಕ್ರಮದಲ್ಲಿ ಪಠಿಸಬೇಕೆಂದು ಆಚಾರ್ಯರೂ ಎಲ್ಲಿಯೂ ಬರೆದಿರುವದಿಲ್ಲ ; ಸ್ಮೃತ್ಯಾದಿಗಳಲ್ಲಿಯೂ ಶಾಂತಿಪಾಠವು ವಿಹಿತ ವಾಗಿರುವಂತೆ ಕಾಣುವದಿಲ್ಲ. ಶಾಂತಿಗಳ ಪಾಠಕ್ರಮವೂ ಬೇರೆಬೇರೆಯ ಕಡೆಗಳಲ್ಲಿ ಬೇರೆಬೇರೆಯಾಗಿರುವದು ಕಂಡುಬರುತ್ತದೆ. ಮಾಧವನ ಕಾಲಕ್ಕೆ ಶಾಂತಿಪಾಠವನ್ನು ಹೇಳಿಕೊಂಡು ಭಾಷ್ಯವನ್ನು ಓದುವ ಕ್ರಮವು ಆಚರಣೆಗೆ ಬಂದಿತ್ತೆಂದು ಮಾತ್ರ ನಾವು ಕಲ್ಪಿಸಬಹುದು. ಇದು ಶಿಷ್ಟಾಚಾರವಾಗಿರುವದರಿಂದ ನಾವೂ ಇದನ್ನು ಅನುಸರಿಸತಕ್ಕದ್ದು– ಎಂದು ಹೇಳಬಹುದು. ಅಷ್ಟೆ. ಆದರೆ ಇದು ಸಂಸ್ಕಾರವೆ ? ಎಂಬುದು ಮಾತ್ರ ಇನ್ನೂ ನಿರ್ಧಾರಣೀಯಪ್ರಶ್ನೆಯೇ ಆಗಿರುತ್ತದೆ. ಆತ್ಮವಿದ್ಯೆ ಯನ್ನು ಹೇಳುವಾಗ ಉಪಸತ್ತಿಯೂ ಉಪನಯನವೂ ಆವಶ್ಯವೆಂದು ಸೂತ್ರ ಭಾಷ್ಯದಲ್ಲಿ ಆಚಾರ್ಯರು (ಪ್ರ. ೧–೧, ಛಾಂ. ೫–೧೧–೭, ೭–೧–೧. ಮುಂತಾದ) ಉಪನಿಷತ್ತುಗಳ ಆಧಾರದಿಂದ ಬರೆದಿರುತ್ತಾರೆ. ಆ ಸಂಸ್ಕಾರದಲ್ಲಿ ಶಾಂತಿಪಾಠವು ಸೇರಿದೆಯೆಂದು ಸ್ಮೃತ್ಯಾದಿಗಳಿಂದ ಸಿದ್ಧವಾಗುವದೆ?–ಎಂಬುದನ್ನು ಅಧ್ಯಯನಸಂಪ್ರದಾಯವನ್ನು ಬಲ್ಲವರು ಪರಿಶೀಲಿಸಿ ನಿಶ್ಚಯಿಸಬೇಕಾಗಿದೆ.

## ಪದ್ಮಪಾದಾದಿಶಿಷ್ಯರುಗಳಲ್ಲಿ ಸ್ಪರ್ಧೆ :

೧೩೧. ಒಮ್ಮೆ ಸುರೇಶ್ವರರು ಗುರುಗಳಿಗೆ ನಮಸ್ಕಾರವನ್ನು ಮಾಡಿ ಗಂಭೀರ ಭಾವದ ಶಾರೀರಕಕ್ಕೆ ಒಂದು ಸ್ಫುಟವೃತ್ತಿಯನ್ನು ಮಾಡಬೇಕೆಂದು ಮನಸ್ಸು ಮಾಡಿ 'ಗುರುವೆ, ನಾನು ಏನುಮಾಡಬೇಕೋ ಅದನ್ನು ಅಪ್ಪಣೆಕೊಡಿಸಿರಿ ; ಬದುಕಿದ್ದಕ್ಕೆ ಗುರುಗಳಲ್ಲಿ ಭಕ್ತಿಯಿರುವದೇ ಸಾರ್ಥಕ್ಯವಲ್ಲವೆ ?' ಎಂದರು.

ಆಚಾರ್ಯರು ನನ್ನ ಭಾಷ್ಯಕ್ಕೆ ವಾರ್ತಿಕವನ್ನು ಮಾಡು ಎಂದರು. ಈ ವಿಷಯವನ್ನು ತಿಳಿದ ಪದ್ಮಪಾದಶಿಷ್ಯರಾದ ಚಿತ್ಸುಖಾಚಾರ್ಯರೇ ಮೊದಲಾದವರು ರಹಸ್ಯವಾಗಿ ಆಚಾರ್ಯರನ್ನು ಒಬ್ಬೊಬ್ಬರಾಗಿ ಕಂಡು ಇಂತೆಂದರು ; ಇವನು ವಿದ್ವಾಂಸನು, ಕರ್ಮನಿಷ್ಠನು, ಈಶ್ವರನನ್ನೇ ನಿರಾಕರಿಸಿದವನು, ಕರ್ಮವೇ ಸ್ವಯಂಫಲದಾತೃವೆಂದವನು. ಇಂಥವನು ಭಾಷ್ಯದಮೇಲೆ ಯಾವದಾದರೊಂದು ನಿಬಂಧವನ್ನು ಬರೆದರೆ ಅದನ್ನು ಕರ್ಮಪರವಾಗಿಯೇ ಮಾಡಿಬಿಡುತ್ತಾನೆ. ಇವನು ಸಂನ್ಯಾಸವನ್ನು ಬುದ್ಧಿಪೂರ್ವಕವಾಗಿ ಮಾಡಲಿಲ್ಲ; ವಾದದಲ್ಲಿ ಜಿತನಾಗಿ ಸಂನ್ಯಾಸಿಯಾಗಿರುತ್ತಾನೆ. ಆದ್ದರಿಂದ ಇವನು ವೃತ್ತಿಯನ್ನು ಮಾಡುವದು ಬೇಡ. ಇನ್ನು ಯಾರಿಗಾದರೂ ಈ ಕೆಲಸವನ್ನು ಹೇಳಿರಿ. (೧) ಪದ್ಮಪಾದರು ತಮ್ಮಲ್ಲಿ ಹೆಚ್ಚಿನ ಭಕ್ತಿಯುಳ್ಳವರು ; ಅಥವಾ (೨) ಈ ಆನಂದಗಿರಿಗಳು ತಮ್ಮ ಅಭಿಪ್ರಾಯಕ್ಕನುಗುಣವಾಗಿ ವ್ಯಾಖ್ಯಾನಮಾಡುವಂಥ ಸಾಮರ್ಥ್ಯವನ್ನು ಸರಸ್ವತಿಯ ಅನುಗ್ರಹದಿಂದ ಪಡೆದುಕೊಂಡಿರುತ್ತಾರೆ. ಅವರಾದರೂ ವಾರ್ತಿಕವನ್ನು ಮಾಡಲಿ !' ಎಂದರು. ಆ ಸಂದರ್ಭದಲ್ಲಿ ಹತ್ತಿರಕ್ಕೆ ಬಂದ ಪದ್ಮಪಾದರು 'ಹಸ್ತಾಮಲಕರೂ ಈ ವೃತ್ತಿಯನ್ನು ಮಾಡಲು ಶಕ್ತರು' ಎಂದರು. ಸುರೇಶ್ವರರು ವಾರ್ತಿಕವನ್ನು ಮಾಡುವದು ಮಿಕ್ಕ ಶಿಷ್ಯರಿಗೆ ಇಷ್ಟವಿಲ್ಲವೆಂಬುದು ಆಚಾರ್ಯರಿಗೆ ಮನವರಿಕೆಯಾಯಿತು. 'ಹಸ್ತಾಮಲಕನು ಮೊದಲಿನಿಂದಲೂ ಅಂತರ್ಮುಖನಾಗಿರುವದರಿಂದ ಗ್ರಂಥರಚನೆಯಲ್ಲಿ ಪ್ರವೃತ್ತನಾಗಲಾರನು. ಸುರೇಶ್ವರನು ಮಾಡುವದು ನಿಮ್ಮಗಳಿಗೆ ಇಷ್ಟವಿಲ್ಲದ್ದರಿಂದ ಬಹುಜನಕ್ಕೆ ಅಸಮ್ಮತವಾದದ್ದನ್ನು ಮಾಡಿಸುವದಕ್ಕೆ ನನಗೂ ಮನಸ್ಸು ಬರುವದಿಲ್ಲ !' ಎಂದರು. ಶಿಷ್ಯರು 'ಈ ಸನಂದನರೇ ಮಾಡಲಿ !' ಎನ್ನಲು ಆಚಾರ್ಯರು 'ಒಳ್ಳೆಯದು, ಸನಂದನನು ಭಾಷ್ಯದಮೇಲೆ ಒಂದು ನಿಬಂಧವನ್ನು ಬರೆಯಲಿ, ವಾರ್ತಿಕವನ್ನು ಬರೆಯುವದು ಬೇಡ, ಏಕೆಂದರೆ ಮತ್ತೊಬ್ಬರು ಅದನ್ನು ಬರೆಯಲು ಪ್ರತಿಜ್ಞೆಮಾಡಿದ್ದಾಗಿದೆ' ಎಂದರು. ರಹಸ್ಯವಾಗಿ ಸುರೇಶ್ವರನನ್ನು ಕರೆದು 'ಅಪ್ಪ, ನೀನು ಭಾಷ್ಯವಾರ್ತಿಕವನ್ನು ಮಾಡಬೇಡ ; ನಿನಗೆ ಗಾರ್ಹಸ್ಥ್ಯಧರ್ಮದಲ್ಲಿ ತಾತ್ಪರ್ಯವಿದೆ ಎಂದು ಭಾವಿಸಿರುವ ನಮ್ಮ ಮಿಕ್ಕ ಶಿಷ್ಯರು ಅದಕ್ಕೆ ಒಪ್ಪಿಗೆಕೊಡುತ್ತಿಲ್ಲ' ಎಂದು ವಿಷಯವೆಲ್ಲವನ್ನೂ ತಿಳಿಸಿ 'ನೀನು ಸ್ವತಂತ್ರವಾಗಿಯೇ ವೇದಾಂತಗ್ರಂಥವೊಂದನ್ನು ಬರೆ' ಎಂದರು. ಆತನು 'ನೈಷ್ಕರ್ಮ್ಯಸಿದ್ಧಿ' ಎಂಬ ಗ್ರಂಥವನ್ನು ರಚಿಸಿದನು. ನಿಷ್ಕರ್ಮತತ್ತ್ವಪರವಾಗಿರುವ ಆ ಗ್ರಂಥವನ್ನು ಮೊದಲಿನಿಂದ ಕೊನೆಯವರೆಗೂ ನೋಡಿ ಸಂತುಷ್ಟಚಿತ್ತರಾದ ಗುರುಗಳು ಮಿಕ್ಕವರಿಗೂ ಅದನ್ನು ತೋರಿಸಲು 'ಈತನಂಥ ತತ್ತ್ವಜ್ಞಾನಿಯು ಇನ್ನೊಬ್ಬನಿಲ್ಲ' ಎಂದು ಅವರಿಗೆಲ್ಲ ನಂಬಿಕೆಯಾಯಿತು. ಅದನ್ನು ಈಗಲೂ ಸಂನ್ಯಾಸಿಗಳು ಶ್ರವಣಮಾಡುತ್ತಾರೆ.

ಸುರೇಶ್ವರಾಚಾರ್ಯರು 'ನನ್ನ ವಾರ್ತಿಕರಚನೆಗೆ ವಿಘ್ನವನ್ನು ಮಾಡಿದರಲ್ಲವೆ ? ಆದ್ದರಿಂದ ಇನ್ನೊಬ್ಬರು ಅದನ್ನು ರಚಿಸಿದರೂ ಅದು ಪ್ರಚಾರಕ್ಕೆ ಬರುವದು ಬೇಡ !' ಎಂದು ಶಾಪವನ್ನು ಕೊಟ್ಟರು.

ಹೀಗೆ ನೈಷ್ಕರ್ಮ್ಯಸಿದ್ಧಿಯನ್ನು ರಚಿಸಿದ ಬಳಿಕ "ನಾನು ಖ್ಯಾತಿಲಾಭ ಪೂಜೆಗಳಿಗಾಗಿ ಈ ಗ್ರಂಥವನ್ನು ಮಾಡಲಿಲ್ಲ; ಗುರುಗಳ ಅಪ್ಪಣೆಯನ್ನು ಮೀರಬಾರದೆಂದು ರಚಿಸಿದೆನು. ನಾನು ಹಿಂದೆ ಗೃಹಸ್ಥನಾಗಿದ್ದಮಾತ್ರದಿಂದ ಈಗಲೂ ನನ್ನಲ್ಲಿ ಅದೇ ಸ್ವಭಾವವು ಇದ್ದೀತೆ ? ಗುರುಗಳು ಮಾಡಿದ ತತ್ತ್ವೋಪದೇಶದಿಂದ ನಾನು ಸಂನ್ಯಾಸಿಯಾದೆನೇ ಹೊರತು ವಾದದಲ್ಲಿ ಸೋತದ್ದರಿಂದಲ್ಲ. ಹಿಂದೆ ನೈಯಾಯಿಕಾದಿಗ್ರಂಥಗಳನ್ನು ಮಾಡಿದ್ದೆನು. ಇನ್ನು ಮೇಲೆ ಗುರುಸೇವೆಯಲ್ಲಿಯೇ ಕಾಲವನ್ನು ಕಳೆಯುವೆನು" ಎಂದು ಸುಮ್ಮನಾದರು. ಆಚಾರ್ಯರು ಮೆಲ್ಲಗೆ ಅವರನ್ನು ಸಮಾಧಾನಪಡಿಸಿ "ನನ್ನ ಶಾಖೆಯಾದ ತೈತ್ತಿರೀಯದ ಉಪನಿಷತ್ತಿಗೆ ಒಂದು ವಾರ್ತಿಕವನ್ನೂ ನಿನ್ನ ಶಾಖೆಯಾದ ಕಾಣ್ವದ ಬೃಹದಾರಣ್ಯಕೋಪನಿಷತ್ತಿಗೆ ಒಂದು ವಾರ್ತಿಕವನ್ನೂ ಮಾಡು; ಇದಕ್ಕೆ ನನ್ನ ಮಾತೇ ಕೊನೆ, ಮಿಕ್ಕವರ ಮಾತನ್ನು ಲಕ್ಷ್ಯದಲ್ಲಿಡಬೇಡ" ಎಂದರು ಅದರಂತೆ ಸುರೇಶ್ವರರು ಆ ಎರಡು ವಾರ್ತಿಕಗಳನ್ನೂ ರಚಿಸಿದರು. ಗುರುಗಳ ಅನುಜ್ಞೆಯಿಂದ ಸನಂದನರು ಸೂತ್ರಭಾಷ್ಯಕ್ಕೆ ಟೀಕೆಯನ್ನು ಬರೆದರು. ಆ ಟೀಕೆಯ ಪೂರ್ವಭಾಗವು ಪಂಚಪಾದಿಕೆಯೆಂದೂ ಮುಂದಿನ ಭಾಗವು ವೃತ್ತಿಯೆಂದೂ ಪ್ರಸಿದ್ಧವಾಯಿತು. ಆಚಾರ್ಯರು ರಹಸ್ಯದಲ್ಲಿ ಸುರೇಶ್ವರರಿಗೆ 'ಅಪ್ಪ, ಈ ಸನಂದನನ ಗ್ರಂಥದಲ್ಲಿ ಐದೇ ಪಾದಗಳು ಪ್ರಸಿದ್ಧವಾಗಿರುವವು. ಅದರಲ್ಲಿಯೂ ನಾಲ್ಕು ಸೂತ್ರಗಳೇ ಬಲುಪಟ್ಟಿಗೆ ಪ್ರಚುರವಾಗುವವು. ಪ್ರಾರಬ್ಧಕರ್ಮಪರಿಪಾಕದಿಂದ ನೀನು ಮತ್ತೆ ವಾಚಸ್ಪತಿಯಾಗಿ ಭೂಮಿಯಲ್ಲಿ ಹುಟ್ಟಿ ನನ್ನ ಭಾಷ್ಯಕ್ಕೆ ಭವ್ಯವಾದ ಟೀಕೆಯನ್ನು ಮಾಡುವೆ' ಎಂದು ಹೇಳಿದರು. ಆನಂದಗಿರಿಮೊದಲಾದ ಶಿಷ್ಯರಿಗೆ "ನೀವೂ ಅದ್ವೈತಪರವಾದ ನಿಬಂಧವನ್ನು ಮಾಡಿರಿ" ಎಂದು ಅಪ್ಪಣೆಮಾಡಿದರು. ಅವರೂ ಅದರಂತೆ ಅನೇಕ ನಿಬಂಧಗಳನ್ನು ಮಾಡಿದರು (ಮಾ. ಶಂ. ೧೩-೧೩ರಿಂದ ೭೫).

ಸ್ವಲ್ಪ ಹೆಚ್ಚುಕಡಿಮೆಯಾಗಿ ಇದೇ ಅಭಿಪ್ರಾಯವು ವ್ಯಾಸಾಚಲೀಯ (ವ್ಯಾ. ಶಂ. ೭-೩೮ರಿಂದ ೮೦)ದಲ್ಲಿಯೂ ಇದೆ. ಆದರೆ ಅಲ್ಲಿ "ಆನಂದಗಿರಿ ಹಸ್ತಾಮಲಕರ" ಪರಾಮರ್ಶವಿಲ್ಲ.

## ವ್ಯಾಖ್ಯಾನಪ್ರಸ್ಥಾನಗಳು ಹೊರಟದ್ದು ಹೇಗೆ ?

೧೩೨. ಈ ಮೇಲೆ ವರ್ಣಿಸಿರುವ ವ್ಯಾಖ್ಯಾನಪ್ರಸ್ಥಾನದ ಬೆಳೆವಣಿಗೆಯ

ವೃತ್ತಾಂತದಲ್ಲಿ ಕಾಣಬರುವ ಕೆಲವು ಅಂಶಗಳನ್ನು ಒಂದೊಂದಾಗಿ ವಿಮರ್ಶಿಸೋಣ:

ಒಂದನೆಯದಾಗಿ ಸುರೇಶ್ವರಾಚಾರ್ಯರು ವಾರ್ತಿಕವನ್ನು ಮಾಡಬೇಕೆಂದು ಬಯಸಿದರೆಂದೂ ಆಚಾರ್ಯರು ಅದಕ್ಕೆ ಅನುಜ್ಞೆಯನ್ನು ಕೊಟ್ಟರೆಂದೂ ನಂಬ ವದು ಕಷ್ಟವಾಗಿದೆ. ಏಕೆಂದರೆ ವಾರ್ತಿಕದಲ್ಲಿ ಗುರುಗಳ ಅಪ್ಪಣೆಯಂತೆ ತಾವು ಸೂತ್ರಭಾಷ್ಯವನ್ನು ಬಿಟ್ಟು ಎರಡು ಉಪನಿಷತ್ತುಗಳಿಗೆ ಮಾತ್ರ ವಾರ್ತಿಕವನ್ನು ಬರೆದಿರುವದಾಗಿ ಎಲ್ಲಿಯೂ ಸುರೇಶ್ವರರು ಹೇಳಿಕೊಂಡಿಲ್ಲ. ಶಾಬರಭಾಷ್ಯಕ್ಕೆ ಶ್ಲೋಕವಾರ್ತಿಕ ಮತ್ತು ತಂತ್ರವಾರ್ತಿಕ- ಎಂಬ ಎರಡು ವಾರ್ತಿಕಗಳನ್ನು ಕುಮಾರಿಲಭಟ್ಟರು ಬರೆದಿರುತ್ತಾರೆ ; ಅವನ್ನು ಅವರು ಭಾಷ್ಯಕಾರರ ಜೀವಿತಕಾಲದಲ್ಲಿ ಬರೆದಿಲ್ಲ. ಭಾಷ್ಯಕ್ಕೆ ಅನೇಕರು ವ್ಯಾಖ್ಯಾನವನ್ನು ಬರೆದಿದ್ದರಾದರೂ ಅವು ಮೀಮಾಂಸಾಭಾಷ್ಯಕ್ಕೆ ಅಷ್ಟು ಅನುಗುಣವಾಗಿಲ್ಲವೆಂದು ಅವರಿಗೆ ತೋರಿತ್ತು ; ಇದಲ್ಲದೆ ಭಾಷ್ಯಕಾರರ ಅಭಿಪ್ರಾಯಗಳೆಲ್ಲವೂ ಅವರಿಗೆ ಸಂಮತವಾಗಿರಲಿಲ್ಲ. ಆದ್ದರಿಂದ ಅವರು ವಿಸ್ತಾರವಾದ ವ್ಯಾಖ್ಯಾನಗಳನ್ನು ತಮ್ಮ ಕಾಲಕ್ಕೆ ಸರಿಹೋಗುವಂತೆ ಬರೆದು, ಪ್ರಕಟಿಸಿದರು. 'ವಾರ್ತಿಕ'ವೆಂದರೇ ಉಕ್ತಾನುಕ್ತದುರುಕ್ತಗಳನ್ನು ತಿಳಿಸುವದು, ಸರಿಯಾಗಿ ಹೇಳಿದ್ದನ್ನು ವಿವರಿಸುವದು, ಹೇಳದೆ ಇರುವದನ್ನು ಸೇರಿಸುವದು, ಸರಿಯಲ್ಲವೆಂದು ತನಗೆ ತೋರಿದ್ದನ್ನು ತಿಳಿಸುವದು. ಆದ್ದರಿಂದ ಕುಮಾರಿಲಭಟ್ಟರು ಮೀಮಾಂಸಾಶಾಸ್ತ್ರಕ್ಕೆ ವಾರ್ತಿಕವನ್ನು ಬರೆದದ್ದು ಸರಿಯಾಯಿತು. ಆದರೆ ಆಚಾರ್ಯರು ತಮ್ಮ ಶಿಷ್ಯನನ್ನು ಕರೆದು ನನ್ನ ಗ್ರಂಥಕ್ಕೆ ವಾರ್ತಿಕವನ್ನು ಬರೆಯಬೇಕೆಂದು ಹೇಳುವದಾಗಲಿ, ಶಿಷ್ಯನು "ನಾನು ತಮ್ಮ ಗ್ರಂಥಕ್ಕೆ ವಾರ್ತಿಕವನ್ನು ಬರೆಯುವೆನು" ಎಂದು ಕೇಳಿಕೊಳ್ಳುವದಾಗಲಿ ಉಚಿತವಾಗಲಾರದು. ಹೀಗಿರುವದರಿಂದ ಆಚಾರ್ಯರು ಮುಕ್ತರಾದ ಬಳಿಕವೇ ಸುರೇಶ್ವರಾಚಾರ್ಯರು ಈ ಎರಡು ವಾರ್ತಿಕಗಳನ್ನೂ ಬರೆದರೆಂದು ಕಲ್ಪಿಸುವದೇ ನ್ಯಾಯ್ಯಪ್ರಾಪ್ತವಾಗುತ್ತದೆ. ಅವರು ಬೃಹದಾರಣ್ಯಕಭಾಷ್ಯಕ್ಕೂ ತೈತ್ತಿರೀಯಭಾಷ್ಯಕ್ಕೂ ಬರೆದಿರುವ ವಾರ್ತಿಕಗಳಲ್ಲಿ ಕೆಲವು ಕಡೆಗಳಲ್ಲಿ ಆಚಾರ್ಯಮತವನ್ನು ಖಂಡಿಸಿ ಬರೆದಿರುತ್ತಾರೆ. ಆಚಾರ್ಯರು ಬದುಕಿರುವ ಕಾಲಕ್ಕೇ ಅವನ್ನು ಬರೆದಿದ್ದರೆ ಅವಕ್ಕೆ ಆಚಾರ್ಯರ ಅನುಮತಿಯನ್ನು ತೆಗೆದುಕೊಂಡಿರುವೆನೆಂದು ಅವರಾಗಲಿ, ಅಥವಾ ಶಿಷ್ಯನು ಹೇಳಿದ್ದೇ ನನ್ನ ಕೊನೆಯ ತೀರ್ಮಾನವೆಂದು ಆಚಾರ್ಯರಾಗಲಿ, ಸ್ಪಷ್ಟಪಡಿಸಬೇಕಾಗಿತ್ತು. ಹಾಗೇನೂ ಆಗಿರುವದಿಲ್ಲ. ಸುರೇಶ್ವರರ ವಾರ್ತಿಕವು ಕುಮಾರಿಲಶ್ಲೋಕವಾರ್ತಿಕಕ್ಕೇನೂ ಕಡಿಮೆಯಿಲ್ಲವೆಂದು ತಿಳಿಸುವದಕ್ಕೆ ಭಟ್ಟಪಾದರಿಂದ ಆಚಾರ್ಯರು ವಾರ್ತಿಕವನ್ನು ಬರೆಯಿಸುವದಕ್ಕೆ ಹವಣಿಸಿದರೆಂದೂ ಸುರೇಶ್ವರಾಚಾರ್ಯರವರಿಗೆ ಅವ

ಕಾಶವು ಸಿಕ್ಕಿದ್ದರೆ ಸೂತ್ರಭಾಷ್ಯಕ್ಕೂ ವಾರ್ತಿಕವನ್ನು ಬರೆಯುತ್ತಿದ್ದರೆಂದೂ ಬಗೆದು ಯಾರೋ ಈ ಕಥೆಗಳನ್ನು ಹುಟ್ಟಿಸಿರಬೇಕೆಂದು ತೋರುತ್ತದೆ.

ಎರಡನೆಯದಾಗಿ ಸೂತ್ರಭಾಷ್ಯಕ್ಕೆ ಸುರೇಶ್ವರರು ವಾರ್ತಿಕವನ್ನು ಬರೆಯ ಬೇಕೆಂದಿದ್ದರೆಂಬುದಕ್ಕೆ ಸಾಧಾರಪ್ರಮಾಣವೇನೂ ಇಲ್ಲ. ಸೂತ್ರವು ಅವರ ಕಣ್ಣಿಗೆ ಬಿದ್ದಿರಲಿಲ್ಲವೆಂದಾಗಲಿ ಅಥವಾ ಅದು ಇನ್ನೂ ಕಡಿಮೆಯ ಬೆಲೆಯದೆಂದು ಅವರ ಅಭಿಪ್ರಾಯವಿತ್ತೆಂದಾಗಲಿ ಎಣಿಸುವದಕ್ಕೆ ಬರುವದಿಲ್ಲ. ಏಕೆಂದರೆ ಅವರು ಸೂತ್ರಗಳನ್ನೂ ತಮ್ಮ ಗ್ರಂಥದಲ್ಲಿ ಪ್ರಮಾಣವಾಗಿ ಉದಾಹರಿಸಿರುತ್ತಾರೆ. ಇದಲ್ಲದೆ ಸೂತ್ರಭಾಷ್ಯಕ್ಕೂ ಬೃಹದಾರಣ್ಯಕಭಾಷ್ಯಕ್ಕೂ ಕೆಲವು ಅಭಿಪ್ರಾಯಭೇದಗಳಿವೆಯೆಂಬುದನ್ನು ನಾವು (೭ ೨೪) ಆಗಲೆ ತಿಳಿಸಿರುತ್ತೇವೆ. ಆ ಸಂದರ್ಭಗಳಲ್ಲಿ ವಾರ್ತಿಕಕಾರರು ಈ ಮತಭೇದಕ್ಕೆ ಕಾರಣವನ್ನಾಗಲಿ, ಅಥವಾ ಆಯಾ ವಿಷಯಕ್ಕೆ ತಮ್ಮ ಸ್ವಂತ ಅಭಿಪ್ರಾಯವನ್ನಾಗಲಿ ತಿಳಿಸಿರುವದಿಲ್ಲ. ಇದೇಕೆಂಬುದನ್ನು ತತ್ತ್ವಾನ್ವೇಷಕರು ಪರಿಶೋಧಿಸಬೇಕಾಗಿದೆ. ಸೂತ್ರಭಾಷ್ಯದಲ್ಲಿ ಹೀಗೆಂದು ಬರೆದಿದೆ ಎಂದು ಅವರು ಎಲ್ಲಿಯೂ ಉದಾಹರಿಸಿಲ್ಲ. ಈ ಪರಿಸ್ಥಿತಿಯಲ್ಲಿ ಸೂತ್ರಭಾಷ್ಯಕ್ಕೆ ವಾರ್ತಿಕವನ್ನು ಬರೆಯಬೇಂಬ ಅಭಿಲಾಷೆ ಅವರಿಗೆ ಇತ್ತೆಂದು ಕಲ್ಪಿಸುವದು ಹೇಗೆ ಸರಿಯಾದೀತು ?

ಮೂರನೆಯದಾಗಿ ಪದ್ಮಪಾದರು ಆಚಾರ್ಯರಿಗೆ ಮೊಟ್ಟಮೊದಲು ದೊರಕಿದ ಶಿಷ್ಯರು ; ಅವರ ವಿಷಯದಲ್ಲಿ ಆಚಾರ್ಯರಿಗಿದ್ದ ಪ್ರೇಮವನ್ನು ಕಂಡು ಬೇರೆಯ ಶಿಷ್ಯರು ಅಸೂಯೆಪಡುತ್ತಿದ್ದರು- ಎಂದು ಶಂಕರವಿಜಯಗಳು ಹೇಳುತ್ತಿವೆ. ಅಂಥವರಿಗೆ, ಅಥವಾ ಅವರ ಕಡೆಯವರಿಗೆ, ಸುರೇಶ್ವರಾಚಾರ್ಯರ ಮೇಲೆ ಅಸೂಯೆ ಬಂತೆಂದಾಗಲಿ, ಸುರೇಶ್ವರರು ತತ್ತ್ವವನ್ನು ಸರಿಯಾಗಿ ತಿಳಿದುಕೊಂಡು ತುರೀಯಾಶ್ರಮವನ್ನು ಸ್ವೀಕರಿಸಲಿಲ್ಲವೆಂದು ತಿಳಿಯುವಷ್ಟು ವಿವೇಕಶೂನ್ಯತೆಯಿತ್ತೆಂದಾಗಲಿ ಕಲ್ಪಿಸುವದು ಸರಿಯಾಗಿ ಕಾಣುವದಿಲ್ಲ.

ನಾಲ್ಕನೆಯದಾಗಿ ಸುರೇಶ್ವರರನ್ನು 'ನೂತ್ನ ಭಿಕ್ಷು'ವೆಂದು ಈ ಕಥಾಭಾಗದಲ್ಲಿ (ಮಾ. ಶಂ. ೧೩-೪೪) ಕರೆದಿರುವದು ಹೊಂದುವದಿಲ್ಲ. ಏಕೆಂದರೆ ಅವರಿಂದೀಚೆಗೆ 'ಹಸ್ತಾಮಲಕ', 'ತೋಟಕಾಚಾರ್ಯ' -ಇವರು ಭಿಕ್ಷುಗಳಾಗಿದ್ದರು. ವ್ಯಾಸಾಚಲೀಯ (ವ್ಯಾ. ಶಂ. ೭-೪೯)ರಲ್ಲಿ ಇದೇ ಪದ್ಯವಿದೆ. ಅದರಂತೆ ಪದ್ಮಪಾದರಾಡಮೇಲೆ ಸುರೇಶ್ವರಾಚಾರ್ಯರೊಬ್ಬರೇ ಹೊಸದಾಗಿ, ಬಂದ ಮುಖ್ಯಶಿಷ್ಯರಾದ್ದರಿಂದ ಈ ವಿಶೇಷಣವು ಹೊಂದುತ್ತದೆ. ಮಾಧವೀಯವು ಆ ವ್ಯಾಸಾಚಲೀಯ (ಅಥವಾ ಅದು ಕೃತ್ರಿಮವೆಂದಾದರೆ ಮತ್ತೊಂದು ವ್ಯಾಸಾಚಲೀಯದ) ಕಥೆಯನ್ನು ಮಾರ್ಪಡಿಸಿ ಕಲ್ಪಿಸಿದ ಕಥೆಯೆಂದು ಭಾವಿಸಬೇಕೆ? ಇದು ಆಲೋಚನೀಯವಾಗಿದೆ.

ಐದನೆಯದಾಗಿ ಆನಂದಗಿರಿಯು ಸರಸ್ವತಿಯ ಅನುಗ್ರಹದಿಂದ ಭಾಷ್ಯಕ್ಕೆ ವ್ಯಾಖ್ಯಾನಮಾಡುವ ಸಾಮರ್ಥ್ಯವನ್ನು ಪಡೆದಿರುತ್ತಾನೆ (ಮಾ ಶಂ. ೧೩-೨೦) ಎಂದಿರುವ ಕಥೆಗೆ ಮೂಲವು ಯಾವದು ? ಆ ಆನಂದಗಿರಿ ಹೇಗೆ ಶಂಕರ ಶಿಷ್ಯನಾದನೆಂಬುದನ್ನು ಯಾರೂ ಹೇಳಿಲ್ಲ. 'ಉದ್ವೀಕ್ಷ್ಯತಾಂ ಶಾಙ್ಕರವಾಕ್ಯಸಾರಃ' (ಮಾ. ಶಂ. ೧-೨) ಎಂಬ ಶ್ಲೋಕದ ವ್ಯಾಖ್ಯಾನದಲ್ಲಿ ಅದ್ವೈತರಾಜ್ಯಲಕ್ಷ್ಮೀ ಟೀಕಾಕಾರನು 'ಶಙ್ಕರಸ್ಯ ಭಗವತೋ ಭಾಷ್ಯಕಾರಸ್ಯ ಅಯಂ ಶಾಙ್ಕರಃ ಆನನ್ದಗಿರ್ಯಭಿಧಃ । ತಸ್ಯ ತತ್ರ ಶಿಷ್ಯಸ್ಯ ವಾಕ್ಯಸಾರಃ |' ಎಂದು ಬರೆದಿರುವದನ್ನು ಆಗಲೆ (ಪು.೧೦) ತಿಳಿಸಿರುತ್ತೇವೆ. ಅಲ್ಲಿಯೂ ಆಚಾರ್ಯರ ಪ್ರಶಿಷ್ಯರು ಆನಂದಗಿರಿ ಎಂದಿದೆ ; ನೇರಾದ ಶಿಷ್ಯರೆಂದಿಲ್ಲ. ಭಾಷ್ಯಗಳಿಗೆ ಆನಂದಗಿರೀಯವೆಂದು ಪ್ರಸಿದ್ಧವಾಗಿರುವ ಟೀಕೆಗಳು ಆಚಾರ್ಯರ ಸಾಕ್ಷಾಚ್ಛಿಷ್ಯರು ಬರೆದವುಗಳೆಂಬ ಮೂಢಕಲ್ಪನೆ ಕೆಲವರಲ್ಲಿ ಈಗಲೂ ಇದೆ. ಆ ಕಲ್ಪನೆಗೆ ಮಾಧವ ಕವಿಯೂ ವಶನಾಗಿದ್ದನೆ ? ಇದನ್ನು ಇನ್ನಷ್ಟು ಒಳಹೊಕ್ಕು ಪರಿಶೀಲಿಸಬೇಕಾಗಿದೆ. ಶಂಕರವಿಜಯವನ್ನು ಬರೆದಿರುವ ಅನಂತಾನಂದಗಿರಿಯನ್ನಂತೂ ಇಲ್ಲಿ ಲೆಕ್ಕಕ್ಕೆ ಹಿಡಿಯುವದಕ್ಕೆ ಬಲವಹಾಗೆಯೇ ಇಲ್ಲವಷ್ಟೆ ?

ಇವರಂತೆ ಚಿತ್ಸುಖರು ಪದ್ಮಪಾದರ ಸತೀರ್ಥ್ಯರು (ಎಂದು ಅಥಾಮುಷ್ಯ ಶಾಙ್ಕರ್ಯ್ರದಯಿತಾಃ ಸತೀರ್ಥ್ಯಾಸ್ತಂ ಚಿತ್ಸುಖಾದ್ಯಾಃ ೧೩-೫) ಎಂದಿರುವದನ್ನು ಚೆನ್ನಾಗಿ ಪರೀಕ್ಷಿಸತಕ್ಕದ್ದಿದೆ. ಆಚಾರ್ಯರಿಗೆ ಚಿತ್ಸುಖರೆಂಬ ಶಿಷ್ಯರೊಬ್ಬರು ಇದ್ದರೆ ? ಆತ್ಮಬೋಧಾಚಾರ್ಯರು ಗುರುರತ್ನಮಾಲಿಕೆಯ ೧೮ನೆಯ ಶ್ಲೋಕದ ಸುಷಮಾವ್ಯಾಖ್ಯಾನದಲ್ಲಿ 'ಅಹರಹರನುಕ್ಷಣಮುಪಚರಿತಾಚಾರ್ಯಚರಣಾಃ, ಸರ್ವವೃತ್ತಾನ್ತಸಾಕ್ಷಿಣಃ, ಸಹಜವದೇಕಾಗ್ರಹಾರೋತ್ಪನ್ನಾಃ ಆಜೀವಮವಿರಹಯುಜಃ ಶ್ರೀಸರ್ವಜ್ಞಚಿತ್ಸುಖಾಚಾರ್ಯಾಃ ಸ್ವಕೃತಬೃಹಚ್ಛಙ್ಕರ ವಿಜಯೇ', 'ಪ್ರತಿಕ್ಷಣವೂ ಆಚಾರ್ಯರನ್ನು ಉಪಚರಿಸುತ್ತಾ ಸರ್ವವೃತ್ತಾಂತವನ್ನೂ ಕಂಡವರೂ, ಒಡಹುಟ್ಟಿದವರಂತೆ ಒಂದೇ ಅಗ್ರಹಾರದಲ್ಲಿ ಹುಟ್ಟಿದವರೂ, ಬದುಕಿರುವವರೆಗೂ ಅವರನ್ನು ಬಿಟ್ಟಗಲದವರೂ ಆದ ಶ್ರೀಸರ್ವಜ್ಞಚಿತ್ಸುಖಾಚಾರ್ಯರು ತಾವು ಮಾಡಿರುವ ಬೃಹಚ್ಛಂಕರವಿಜಯದಲ್ಲಿಹೀಗೆಂದಿರುತ್ತಾರೆ, ಎಂದು ಬರೆದಿರುತ್ತಾರೆ. ಬೃಹಚ್ಛಂಕರವಿಜಯವು ನಿಜವಾಗಿಯೂ ಒಂದು ಗ್ರಂಥವಾಗಿ ರಚಿತವಾಗಿದ್ದರೆ ಕುಂಭಕೋಣಮಠದಲ್ಲಿ ಇರುವ ಸಂಭವವಿದೆಯಾದ್ದರಿಂದ ಯಾರಾದರೂ ಅದನ್ನು ಶೋಧಿಸಿ ಪ್ರಕಟಿಸಿದರೆ ಆತ್ಮಬೋಧರು ಬರೆದಿರುವ ಈ ವಿಶೇಷಣಗಳು ಆ ಚಿತ್ಸುಖಾಚಾರ್ಯರಿಗೆ ಎಷ್ಟರಮಟ್ಟಿಗೆ ಹೊಂದುವವೆಂಬದನ್ನು ನಿರ್ಧರಿಸಬಹುದಾಗುವದು. ಅಲ್ಲಿಯವರೆಗೆ ಸುಪ್ರಸಿದ್ಧ 'ತತ್ತ್ವದೀಪಿಕಾ'ಕಾರರಾದ ಚಿತ್ಸುಖಾಚಾರ್ಯರು ಮಾತ್ರ ಶಂಕರರ ನೇರಾದ ಶಿಷ್ಯರಲ್ಲವೆಂದು ಹೇಳಿ

ತೃಪ್ತರಾಗಬೇಕಾಗಿದೆ. ಏಕೆಂದರೆ ಅವರು 'ಜ್ಞಾನೋತ್ತಮರ ಶಿಷ್ಯ'ರೆಂದು ಅನ್ವಯಿತ ಪ್ರದೀಪಿಕೆಯಿಂದ ಗೊತ್ತಾಗುತ್ತದೆ. ಆ ಗ್ರಂಥದಲ್ಲಿ ಇತ್ತೀಚಿನ ಶ್ರೀಧರಾಚಾರ್ಯ ಕೃತವಾದ ನ್ಯಾಯಕಂದಲಿಯನ್ನು ಮತ್ತೆಮತ್ತೆ ಪರಾಮರ್ಶಿಸಿದೆ.

ಆರನೆಯದಾಗಿ ಆಚಾರ್ಯರು 'ವಾರ್ತಿಕವನ್ನು ಪದ್ಮಪಾದರು ಬರೆಯಬಾರದು' ಎಂದು ಹೇಳಿ ಸುರೇಶ್ವರರಿಂದ ನೈಷ್ಕರ್ಮ್ಯಸಿದ್ಧಿಗ್ರಂಥವನ್ನು ಸ್ವತಂತ್ರವಾಗಿ ಬರೆಯಿಸಿ ಅದನ್ನು ನೋಡಿದವರೆಲ್ಲರಿಗೂ ಸುರೇಶ್ವರರು ವೇದಾಂತತತ್ತ್ವವನ್ನು ಚೆನ್ನಾಗಿ ತಿಳಿದವರೆಂದು ಎಲ್ಲರಿಗೂ ಒಪ್ಪಾದಮೇಲಾದರೂ ಅವರಿಂದ ವಾರ್ತಿಕವನ್ನೇಕೆ ಬರೆಯಿಸಲಿಲ್ಲ ? –ಎಂಬ ಪ್ರಶ್ನೆಗೆ ಮಾಧವವ್ಯಾಸಾಚಲರಿಬ್ಬರಲ್ಲಿ ಯಾರೊಬ್ಬರೂ ಉತ್ತರವನ್ನು ಹೇಳಿಲ್ಲ.

ಏಳನೆಯದಾಗಿ ಸುರೇಶ್ವರಾಚಾರ್ಯರು 'ಮತ್ತೊಬ್ಬರು ವಾರ್ತಿಕವನ್ನು ಬರೆದರೂ ಅದು ಪ್ರಚಾರವಾಗುವದು ಬೇಡ' ಎಂದು ಶಾಪವನ್ನು ಕೊಟ್ಟರೆಂತೆ ಕಲ್ಪಿಸಿರುವದು ಸಂಯಮೀಂದ್ರರಾದ ಅವರಿಗೆ ಆತ್ಮಶ್ಲಾಘನೆ, ಪರರಲ್ಲಿ ಅಸೂಯೆ, ಆಚಾರ್ಯರ ಗ್ರಂಥಪ್ರಚಾರಕ್ಕೆ ವಿಘ್ನವನ್ನು ಮಾಡುವಷ್ಟು ಕೀಳ್ತರದ ಬುದ್ಧಿ–ಇವೆಲ್ಲವನ್ನೂ ಆರೋಪಿಸಿದಂತೆ ಆಗಿರುತ್ತದೆ. ಇದು ಆ ಮಹಾತ್ಮರಿಗೆ ಒಪ್ಪುವ ಸ್ವಭಾವಕಥನವಲ್ಲ.

ಎಂಟನೆಯದಾಗಿ ಪದ್ಮಪಾದರು ಗುರುಗಳ ಅನುಜ್ಞೆಯಿಂದ ಭಾಷ್ಯದ ಮೇಲೆ ನಿಬಂಧವನ್ನು ಬರೆದರೆಂದೂ ಅದರ ಪೂರ್ವಭಾಗಕ್ಕೆ ಪಂಚಪಾದಿಕೆಯೆಂದೂ ಉತ್ತರಭಾಗಕ್ಕೆ ವೃತ್ತಿಯೆಂದು ಹೆಸರೆಂದೂ ವರ್ಣಿಸಿರುವದು ಸಂಶಯಕ್ಕೆಡೆಯನ್ನುಂಟುಮಾಡುತ್ತದೆ. ಒಂದೇ ಟೀಕೆಗೆ ಈ ಎರಡು ಹೆಸರುಗಳು ಏಕೆ ಹೇಗೆ ಬಂದವೆಂಬುದನ್ನು ಶಂಕರವಿಜಯಕಾರರುಗಳು ಸ್ಪಷ್ಟಪಡಿಸಿಲ್ಲ. ಆಚಾರ್ಯರು 'ಇದರಲ್ಲಿ ಐದೇ ಪಾದಗಳು ಪ್ರಸಿದ್ಧವಾಗುವವು ; ಅದರಲ್ಲಿಯೂ ನಾಲ್ಕು ಸೂತ್ರಗಳೇ ಹೆಚ್ಚು ಪ್ರಚಾರವಾಗುವವು' ಎಂದು ಭವಿಷ್ಯವನ್ನು ಹೇಳಿದರೆಂದಿರುವದು ಮತ್ತಷ್ಟು ಸಂಶಯವನ್ನು ತಂದೊಡ್ಡುತ್ತದೆ. ಈಗ ಭಾಷ್ಯದ ಮೇಲೆ ಒಂದು ಟೀಕೆಯೇನೋ ಪಂಚಪಾದಿಕೆ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ ; ಆದರೆ ಈಗ್ಗೆ ನಮಗೆ ಸಿಕ್ಕಿರುವದು ನಾಲ್ಕೇ ಸೂತ್ರಗಳ ಟೀಕೆ. ಅದು ಪದ್ಮಪಾದ ಕೃತವೆಂದೂ ವಿದ್ವಾಂಸರಲ್ಲಿ ಪ್ರಸಿದ್ಧವಾಗಿದೆ. ಆದರೆ ಗ್ರಂಥಕಾರರು ತಾವು ಗುರುಗಳ ಅಪ್ಪಣೆಯಿಂದ ಆ ಗ್ರಂಥವನ್ನು ಬರೆದೆವೆಂದು ಹೇಳಿಕೊಂಡಿಲ್ಲ. 'ವ್ಯಾಖ್ಯಾಸ್ಯೇ ಪಞ್ಚಪಾದಿಕಾಮ್' (ವಿವರಣ), 'ವಿಭಜೇ ಪಞ್ಚಪಾದಿಕಾಮ್' (ಪ್ರಬೋಧಪರಿಶೋಧಿನೀ), 'ವ್ಯಾಕುರ್ವೇ ಪಞ್ಚಪಾದಿಕಾಮ್' (ವೇದಾಂತ ರತ್ನಕೋಶ)– ಹೀಗೆ ಪಂಚಪಾದಿಕೆ ಎಂಬ ಹೆಸರಿನಿಂದ ವ್ಯಾಖ್ಯಾನಕಾರರು ಕರೆದಿದ್ದರೂ ಅವರಿಗೆ ನಾಲ್ಕು ಸೂತ್ರಗಳು ಮಾತ್ರವೇ ಸಿಕ್ಕಿರುತ್ತವೆ. ವ್ಯಾಖ್ಯಾನ

ಕಾರರ ಸಂಜ್ಞೆಯನ್ನು ಆಧಾರವಾಗಿಟ್ಟುಕೊಂಡೇ ಮಾಧವಕವಿಯು ಈ ಕಥೆಯ ನ್ನೇಕೆ ಕಲ್ಪಿಸಿರಬಾರದು?–ಎಂಬ ಪ್ರಶ್ನೆಯೂ ತಲೆಯೆತ್ತಿಕೊಳ್ಳುತ್ತದೆ. ಈ ಗ್ರಂಥದ ಈಕ್ಷತ್ಯಧಿಕರಣದ ಸ್ವಲ್ಪಭಾಗವನ್ನು ಎತ್ತಿ ವಿವರಿಸಿರುವ ಒಂದಾನೊಂದು ಅಜ್ಞಾತ ಕರ್ತೃಕವ್ಯಾಖ್ಯಾನವು ಮದರಾಸ್ ಸರಕಾರದ ಪ್ರಾಚೀನಗ್ರಂಥಕೋಶಾಲಯ ದಲ್ಲಿ (R 3224 ನೇ ಅಂಕದ್ದು) ಇರುವದಾಗಿ ಪ್ರೊ॥ಕಂ ಸು. ಶ್ರೀರಾಮ ಶಾಸ್ತ್ರಿಗಳು ಪ್ರಕಾಶಿಸಿರುವ ಪಂಚಪಾದಿಕೆಯ ಪೀಠಿಕೆ (ಪು. ೯)ಯಲ್ಲಿದೆ. ಅದೇ ಗ್ರಂಥದಲ್ಲಿ ವಾಚಸ್ಪತಿಮಿಶ್ರರು ತಮ್ಮ ಭಾಮತೀವ್ಯಾಖ್ಯಾನದಲ್ಲಿ ಖಂಡಿಸಿರುವ ಕೆಲವು ಅಭಿಪ್ರಾಯಗಳನ್ನು 'ಪಞ್ಚಪಾದೀ'ಕಾರರವೆಂದು ಕಲ್ಪತರುಕಾರರು ಬರೆದಿರುತ್ತಾರೆಂದು ಅದೇ ಶ್ರೀರಾಮಶಾಸ್ತ್ರಿಗಳವರು(ಪು. ೮)ಬರೆದಿರುತ್ತಾರೆ. ಆದರೆ ಕಲ್ಪತರುಕಾರರು ಹೇಳುವ 'ಪಞ್ಚಪಾದೀ' ಎಂಬುದು ಪ್ರಕೃತಪಂಚಪಾದಿಕೆಯೇ ಎಂಬುದಕ್ಕೆ ನಮಗೆ ಯಾವ ಆಧಾರವೂ ದೊರೆತಿಲ್ಲ. ಕಲ್ಪತರುಕಾರರು 'ಪಂಚ ಪಾದಿಕಾ' ಎಂಬ ಹೆಸರನ್ನೇ ಬಳಸಿಲ್ಲವಾದರಿಂದ ಈ ಎರಡು ಗ್ರಂಥಗಳೂ ಒಂದರ ಹೆಸರುಗಳೇ ಎಂದು ನಿಶ್ಚಯಿಸುವದು ಕಷ್ಟವಾಗಿರುತ್ತದೆ, ಪಂಚಪಾದಿಕಾಕಾರರು 'ಈ ವಿಷಯವನ್ನು ಸುಗತಮತಪರೀಕ್ಷೆಯಲ್ಲಿ ವಿವರಿಸುವೆವು' (ಸುಗತಮತ ಪರೀಕ್ಷಾಯಾಂ ನಿಪುಣತರಂ ಪ್ರಪಞ್ಚಯಿಷ್ಯಾಮಃ), ಇದು ಹೇಗೆಂಬುದನ್ನು 'ಏಕ ಆತ್ಮನಃ ಶರೀರೇ ಭಾವಾತ್' ಎಂಬಧಿಕರಣದ ಆರಂಭದಲ್ಲಿ ತೋರಿಸಿ ಕೊಡುವೆವು (ದರ್ಶಯಿಷ್ಯಾಮಃ),'ವಾಕ್ಯಾಭಾಸತ್ವವನ್ನು ಆಯಾ ಅಧಿಕರಣದಲ್ಲಿ ಸಿದ್ಧಾಂತಮಾಡಿ ತೋರಿಸಿಕೊಡುವೆವು' (ಪ್ರದರ್ಶಯಿಷ್ಯಾಮಃ)–ಎಂದು ಪೂರ್ಣ ಗ್ರಂಥಕ್ಕೇ ವ್ಯಾಖ್ಯಾನವನ್ನು ತಾವು ಮಾಡುವದಾಗಿ ಪ್ರತಿಜ್ಞೆಮಾಡಿರುತ್ತಾರೆ; ಆದ್ದರಿಂದ ಪಂಚಪಾದಿಕೆ– ಎಂದರೆ ಐದು ಪಾದಗಳು ಅಥವಾ ಭಾಗಗಳು ಇದರಲ್ಲಿವೆ ಎಂದರ್ಥ. ಪದಚ್ಛೇದ, ಪದಾರ್ಥೋಕ್ತಿ, ವಿಗ್ರಹ, ವಾಕ್ಯಯೋಜನೆ. ಆಕ್ಷೇಪಕ್ಕೆ ಸಮಾಧಾನ– ಎಂಬ ಐದು ಭಾಗಗಳಿರುವದರಿಂದ ಈ ಹೆಸರು ಬಂದಿದೆ (ಪೋ.ಪಂ ಭೂ ಪು. ೫, ೬) ; ಅಥವಾ ವಿಸ್ತಾರವಾದ (ಪಞ್ಚ), ಜ್ಞಾನ(ಪಾದ) ವನ್ನು ತಿಳಿಸಿಕೊಡುವದರಿಂದ ಪಂಚಪಾದಿಕೆ ಎಂದೂ ಈ ಹೆಸರಿಗೆ ವ್ಯುತ್ಪತ್ತಿ ಯನ್ನು ಹೇಳಬಹುದು– ಎಂದು ಶ್ರೀರಾಮಶಾಸ್ತ್ರಿಗಳು ಕಲ್ಪಿಸಿರುತ್ತಾರೆ! ಇದೆಲ್ಲ ಕೇವಲ ವ್ಯಾಖ್ಯಾನಕೌಶಲಪ್ರದರ್ಶನವೆಂದು ಹೇಳದೆ ಗತ್ಯಂತರವಿಲ್ಲ. ಐದನೆಯ ಸೂತ್ರದ ಮೇಲೆಯೂ ಈ ವ್ಯಾಖ್ಯಾನದ ಭಾಗವು ಉದಲಬ್ಧವಾಗಿರುವದು ನಿಜ ವಾದರೂ ಗ್ರಂಥವು ಸಂಪೂರ್ಣವಾಗಿದೆ ಎಂಬುದಕ್ಕೆ ನಮಗೆ ಆಧಾರವು ಸಾಲದು. ಕಾರಣಾಂತರದಿಂದ ಈ ಗ್ರಂಥವು ಪರಿಪೂರ್ಣವಾಗದೆ ಯಾವದೋ ಕಾರಣದಿಂದ ಈ ಗ್ರಂಥವನ್ನು ಪಂಚಪಾದಿಕಾ ಎಂದು ಕರೆಯುವ ಸಂಪ್ರದಾಯವು ಬೇರೂರಿ ಕೊಂಡಮೇಲೆ ಇಂಥ ಕಥೆಗಳು ಹುಟ್ಟಿದವೆಂದೇ ಹೇಳಬೇಕಾಗುತ್ತದೆ.

**ವೃತ್ತಿ** ಎಂಬುದು ಯಾವದೊಂದು ಗ್ರಂಥದ ಸಂಜ್ಞಾನಾಮವಲ್ಲವೆಂಬುದು ಸ್ಪಷ್ಟವಾಗಿದೆ. ಉಪನಿಷತ್ತುಗಳ ಭಾಷ್ಯಗಳನ್ನು ಶಂಕರಭಗವತ್ಪಾದರವರೇ 'ವೃತ್ತಿ' ಎಂದು ಕರೆದುಕೊಂಡಿರುವದು (ಉದಾ: ಕ. ಭಾ. ಬೃ. ಭಾ.) ಕಂಡು ಬಂದಿದೆ. ಭಗವತ್ಪಾದರ ಭಾಷ್ಯದ ಹಿಂದೆಯೇ ಅನೇಕ ಭಾಷ್ಯಗಳಿದ್ದಿರಬಹು ದೆಂಬುದಕ್ಕೆ ಆಯಾ ಭಾಷ್ಯಗಳ ಅಭಿಪ್ರಾಯವನ್ನು ಆಚಾರ್ಯರು ಖಂಡಿಸಿರು ವದೇ ಗಮಕವಾಗಿಗುತ್ತದೆ. ಆ ಅಭಿಪ್ರಾಯಗಳನ್ನೂ 'ವೃತ್ತಿಕಾರರ ಮತ'ವೆಂತ ಭಾಷ್ಯಟೀಕಾಕಾರರು ಬರೆದೂ ಇರುತ್ತಾರೆ. ಪಂಚಪಾದಿಕೆಯಲ್ಲಿಯೇ (ಪಂ.ಪಾ. ವರ್ಣಕ ೨ ಪು. ೪೨, ವರ್ಣಕ ೩, ಪು. ೪೮) ಇಂಥ ಬೇರೆಬೇರೆಯ 'ವೃತ್ತಿ ಕಾರ'ರುಗಳಿಂದ ಕೆಲವು ವಾಕ್ಯಗಳನ್ನೂ ಉದಾಹರಿಸಿಯೂ ಇರುತ್ತದೆ. ಆದ್ದರಿಂದ ಪಂಚಪಾದಿಕೆಗೆ ಏಕೆ ಈ ಹೆಸರು ಬಂತೆಂದಾಗಲಿ, ಅದರ ಉತ್ತರಭಾಗಕ್ಕೆ 'ವೃತ್ತಿ' ಎಂಬ ಹೆಸರು ಇತ್ತೆಂದಾಗಲಿ ಕಲ್ಪಿಸುವದಕ್ಕೆ ನಮಗೆ ಯಾವ ಪ್ರಮಾಣ ವೂ ಈವರೆಗೆ ದೊರೆತಿಲ್ಲ ಪಂಚಪಾದಿಕೆಯು ಏಕೆ ನಾಲ್ಕು ಸೂತ್ರಗಳಲ್ಲಿಯೇ ಸಮಾಪ್ತವಾಗಿರಬೇಕೆಂಬುದನ್ನು ಶೋಧಿಸಿ ತಿಳಿಯಲಾರದವರು ಇಂಥ ಕಥೆಯನ್ನು ಕಟ್ಟಿರಬೇಕೆಂಬುದೇ ನಿಶ್ಚಯ.

ಒಂಬತ್ತನೆಯದಾಗಿ ಆಚಾರ್ಯರು ಸುರೇಶ್ವರರಿಗೆ 'ನೀನು ಮುಂದೆ ವಾಚಸ್ಪತಿಯಾಗಿ ಹುಟ್ಟಿ ಭವ್ಯವಾದ ಟೀಕೆಯನ್ನು ಮಾಡುವೆ' ಎಂದು ಭವಿಷ್ಯ ವನ್ನು ನುಡಿದರೆಂಬುದೂ ಇದೆಲ್ಲ ಮಾಧವಕವಿಯ ಕಲ್ಪನೆ ಎಂಬುದಕ್ಕೆ ಪುಷ್ಟಿ ಯನ್ನು ಕೊಡುತ್ತದೆ ಎನ್ನಬಹುದು. ವಾಚಸ್ಪತಿಮಿಶ್ರರು ಪೂರ್ಣವಾದ ಟೀಕೆ ಯನ್ನು ಬರೆದಿರುವದನ್ನೂ ಪಂಚಪಾದಿಕೆಯು ವಿಚ್ಛಿನ್ನವಾಗಿರುವದನ್ನೂ ಕಂಡ ಆ ಕವಿ ಇಂಥ ಕಲ್ಪನೆಗೆ ತನ್ನ ಮನದಲ್ಲಿ ಇಂಬುಗೊಟ್ಟಿರಬೇಕೆಂದು ತೋರುತ್ತದೆ. ವಾಚಸ್ಪತಿಯು 'ವಾರ್ತಿಕ'ವನ್ನೇ ಬರೆಯುವನೆಂದೇಕೆ ಆಚಾರ್ಯರು ಹೇಳಲಿಲ್ಲ? ಅಥವಾ ಭಾಮತಿಯೇ ವಾರ್ತಿಕವೆಂದು ಕವಿಯ ಅಭಿಪ್ರಾಯವೆ ? (ಹಾಗೂ ಆಗ ಬಹುದೆಂದು ಕಲ್ಪತರುಕಾರರು 'ತರ್ಹಿ ವಾರ್ತಿಕತ್ವಮಸ್ತು ನ ಹಿ ವಾರ್ತಿಕಸ್ಯ ಶೃಙ್ಗಮಸ್ತಿ' ವಾರ್ತಿಕವೇ ಆಗಲಿ, ವಾರ್ತಿಕಕ್ಕೇನೂ ಕೋಡಿಲ್ಲವಷ್ಟೆ ? –ಎಂದು ಸೂ. ಭಾ. ೨-೪-೧೯ರಲ್ಲಿ ಹೇಳಿಯೂ ಇರುತ್ತಾರೆ). ಹೇಗೇ ಆದರೂ ಸುರೇಶ್ವರಾಚಾರ್ಯರ ಅ ಪ ರ ರೂ ಪ ವು ವಾಚಸ್ಪತಿಮಿಶ್ರರು ಎಂಬುದಂತೂ ಆಚಾರ್ಯರ ಭವಿಷ್ಯದ್ಘಟನೋಹಾಪ್ರತಿಭೆಗೆ ಕೀರ್ತಿಯನ್ನು ತಂದುಕೊಡುವಂತಿಲ್ಲ. ಏಕೆಂದರೆ ಭಾಮತಿಯ ಅಭಿಪ್ರಾಯಕ್ಕೂ ವಾರ್ತಿಕದ ಆಶಯಕ್ಕೂ ಹೊಂದಿಕೆ ಯಿರುವದಿಲ್ಲ. ವಾಚಸ್ಪತಿಮಿಶ್ರನು ಮಂಡನಮಿಶ್ರನ ಅನೇಕ ಅಭಿಪ್ರಾಯಗಳನ್ನು ಭಾಷ್ಯಕಾರರ ಅಭಿಪ್ರಾಯವೆಂಬ ಭಾವವುಂಟಾಗುವ ಹಾಗೆ ತನ್ನ ಟೀಕೆಯಲ್ಲಿ ಹೆಣೆದುಕೊಂಡಿರುತ್ತಾನೆ. ಆನಂದಗಿರಿಯುಕೂಡ ಒಂದು ಕಡೆಯಲ್ಲಿ 'ಮಣ್ಡನ

ಪ್ರೈಷ್ಠಸೇವೀ' ಮಂಡನನ ಬೆನ್ನಂಟಿದವನು ಎಂದು ಆತನನ್ನು ಹಾಸ್ಯಮಾಡಿರು ತ್ತಾನೆ. ಸುರೇಶ್ವರಾಚಾರ್ಯರೂ ತಮ್ಮ ವಾರ್ತಿಕದಲ್ಲಿ ಮಂಡನಮಿಶ್ರನ ಅಭಿ ಪ್ರಾಯಗಳನ್ನು ಸೇರಿಸಿಕೊಂಡಿರುತ್ತಾರಾದರೂ ಶಾಂಕರಪ್ರಕ್ರಿಯೆಗೆ ವಿರುದ್ಧ ವಾಗಿರುವ ಮಂಡನವಾದವನ್ನು ಸುಸ್ಪಷ್ಟವಾಗಿ ಖಂಡಿಸಿರುತ್ತಾರೆ. ಅಂತು ಹೇಗೆಹೇಗೆ ನೋಡಿದರೂ ಈ 'ವಾರ್ತಿಕಪಂಚಪಾದಿಕೆಗಳ ಸಂಬಂಧದ ಕಥೆಯು' ಕಲ್ಪನಾಮಾತ್ರವೆಂದೇ ನನಗೆ ಮನವಟ್ಟಾಗಿಬಿಟ್ಟಿದೆ.

## ಪಂಚಪಾದಿಕೆಯು ಸುಟ್ಟುಹೋದ ಕಥೆಯು ಸಂಭಾವನೀಯವೆ ?

೧೩೧. ಮಾಧವೀಯದಲ್ಲಿ ವರ್ಣಿಸಿರುವ ಈ ಶಿಷ್ಯಸ್ಪರ್ಧೆಯ ಕಥೆಯು ನಿಜವಾಗಲಿ, ಆಗದಿರಲಿ, ಆಚಾರ್ಯರು ದಕ್ಷಿಣಕ್ಕೆ ಬಂದಮೇಲೆ ಅದ್ವೈತ ಸಿದ್ಧಾಂತದ ಪ್ರಚಾರಕ್ಕೆ ಏರ್ಪಾಡುಮಾಡಿರಬೇಕು ; ಅವರ ಶಿಷ್ಯರುಗಳೂ ಈ ಕೆಲಸದಲ್ಲಿ ಉತ್ಸಾಹವನ್ನು ಮೂಡಿಸಿರಬೇಕು-ಎಂಬುದಂತೂ ಸರ್ವರೂ ಒಪ್ಪತಕ್ಕ ದಾಗಿದೆ.

ಈಗ ಪದ್ಮಪಾದರ ಕಥೆಯನ್ನು ಶಂಕರವಿಜಯಗಳಲ್ಲಿ ಮುಂದುವರಿಸಿರುವ ಪ್ರಕಾರವನ್ನು ಸಂಕ್ಷೇಪವಾಗಿ ತಿಳಿಯುವದಕ್ಕೆ ಪ್ರಯತ್ನಿಸೋಣ. ಪದ್ಮಪಾದಾ ಚಾರ್ಯರು ಗುರುಗಳನ್ನು ಒಪ್ಪಿಸಿ ಅವರ ಅನುಜ್ಞೆಯನ್ನು ಪಡೆದು ತೀರ್ಥ ಯಾತ್ರೆಗೆ ಹೊರಟರು (ಮಾ.ಶಂ. ೧೪-೧ರಿಂದ ೨೮). ಗುರುಗಳು ಶೃಂಗೇರಿ ಯಲ್ಲಿ ಕೆಲವು ಕಾಲವಿದ್ದು ಮಾತೃವೃತ್ತಾಂತವನ್ನು ಯೋಗಶಕ್ತಿಯ ಬಲದಿಂದ ತಿಳಿದುಕೊಂಡು ಆಕಾಶಮಾರ್ಗದಿಂದ ತಾಯಿಯಿದ್ದಲ್ಲಿಗೆ ಹೋದರು. ಅಲ್ಲಿ ನಡೆದದ್ದರ ವಿವರವನ್ನು ಮುಂದೆ ತಿಳಿಸುವೆವು.

ಪದ್ಮಪಾದರು ಗುರುಗಳ ಅಪ್ಪಣೆಯನ್ನು ಪಡೆದುಕೊಂಡು ಉತ್ತರದ ತೀರ್ಥ ಗಳನ್ನು ಸೇವಿಸಿದ ಬಳಿಕ ದಕ್ಷಿಣಕ್ಕೆ ಬಂದು ಕಾಳಹಸ್ತೀಶ್ವರ, ಕಾಂಚಿಯ ಏಕಾಮ್ರೇಶ್ವರ, ಕಲ್ಲಾಲೇಶ- ಇವರ ದರ್ಶನವನ್ನು ಮಾಡಿಕೊಂಡು ಶಿವಗಂಗಾ ತೀರ್ಥದಲ್ಲಿ ಸ್ನಾನವನ್ನು ಮಾಡಿ, ರಾಮಸೇತುವಿಗೆಂದು ಹೋಗುವ ದಾರಿಯಲ್ಲಿ ಸಿಕ್ಕಿದ ಸೋದರಮಾವನ ಮನೆಗೆ ಬಂದರು. ಅಲ್ಲಿದ್ದ ಬಂಧುಗಳ ಪ್ರಾರ್ಥನೆ ಯಂತೆ ಕೆಲವು ದಿನಗಳು ಇದ್ದರು. ಸೋದರಮಾವನು ಅವರು ಬರೆದಿದ್ದ ಟೀಕೆ ಯನ್ನು ನೋಡಿ ಗ್ರಂಥಕಾರರ ಮತಾಂತರಖಂಡನೆಯ ಚಾತುರ್ಯವನ್ನು ನೋಡಿ ಸಂತೋಷಭರಿತನಾದರೂ ತನ್ನದಾದ ಪ್ರಭಾಕರಮತವನ್ನು ನಿರಾಕರಿ ಸಿದ್ದದ್ದನ್ನು ಕಂಡು ಮಾತ್ಸರ್ಯದಿಂದಲೂ ಕೂಡಿದವನಾಗಿ ಚೆನ್ನಾಗಿದೆ ಎಂದಿಷ್ಟೇ ಹೇಳಿದನು. ಪದ್ಮಪಾದರು ಸೇತುವನ್ನು ನೋಡುವದಕ್ಕೆ ಹೋಗಿ ಬರುವವರೆಗೂ ಈ ಪುಸ್ತಕವು ನಿನ್ನಲ್ಲಿರಲಿ ಎಂದು (೧೧೧) ಅದನ್ನು ಬಿಟ್ಟು

ಹೊರಟರು. ಅವರು ಹೋದಬಳಿಕ ಮಾವನು ತನ್ನ ಪಕ್ಷವನ್ನು ಹೇಗಾದರೂ ಉಳಿಸಿಕೊಳ್ಳಬೇಕೆಂಬ ಅಭಿಮಾನದಿಂದ ಪುಸ್ತಕವನ್ನು ಒಂದು ಮನೆಯಲ್ಲಿಟ್ಟು ಯಾರಿಗೂ ಸಂಶಯವುಂಟಾಗದಂತೆ ಮನೆಗೇ ಬೆಂಕಿಯನ್ನು ಹತ್ತಿಸಿದನು(೧೧೫). ಮುಂದಿನ ಯಾತ್ರೆಯನ್ನು ಮುಗಿಸಿಕೊಂಡು ಹಿಂದಿರುಗಿದ ಪದ್ಮಪಾದರು ಪುಸ್ತಕವು ನಾಶವಾದ ವಾರ್ತೆಯನ್ನು ಕೇಳಿ ಬಹಳ ವ್ಯಸನಪಟ್ಟರು. ಮುಂದಕ್ಕೆ ಹೊರಟು ಕೇರಳಕ್ಕೆ ಆಚಾರ್ಯರು ಬಂದಿರುವರೆಂಬುದನ್ನು ಕೇಳಿ ಅಲ್ಲಿಗೆ ಬಂದು ಆಚಾರ್ಯರಿಗೆ ನಡೆದದ್ದೆಲ್ಲವನ್ನೂ ತಿಳಿಸಿದರು. ಪಂಚಪಾದಿಕೆಯು ನಾಶವಾದ ರೀತಿಯನ್ನು ತಿಳಿಸಿ 'ಈಗ ಮತ್ತೆ ಬರೆಯಬೇಕೆಂದರೂ ಹಿಂದಿನ ಯುಕ್ತಿಗಳು ಹೊಳೆಯುತ್ತಿಲ್ಲ, ಏನು ಮಾಡಲಿ!' ಎಂದು ಶೋಕಿಸಿದರು. ಆಚಾರ್ಯರು ಅವರನ್ನು ಸಮಾಧಾನಗೊಳಿಸಿ 'ಇದು ನನಗೆ ಮೊದಲೇ ಗೊತ್ತಿತ್ತು, ಸುರೇಶ್ವರನಿಗೆ ಇದನ್ನು ತಿಳಿಸಿಯೂ ಇದ್ದೆ (೧೬೭) ಶೃಂಗೇರಿಯಲ್ಲಿ ಕೇಳಿದ್ದ ಪಂಚಪಾದೀಭಾಗವು ನನಗೆ ನೆನಪಿದೆ. ಹೇಳುತ್ತೇನೆ, ಬರೆದುಕೊ!'– ಎಂದು ಹಿಂದಿನ ಅನುಪೂರ್ವಿಯಿಂದಲೇ ಬರೆಯಿಸಿದರು. ಪದ್ಮಪಾದರು ಪರಮಾನಂದಭರಿತರಾದರು (೧೪–೧೬೮ರಿಂದ ೧೭೦).

ಈಗ ಈ ಕಥೆಯ ತತ್ತ್ವವೇನಿರಬಹುದೆಂಬುದನ್ನು ಸ್ವಲ್ಪ ವಿಮರ್ಶಿಸಿ ನೋಡೋಣ. ಪದ್ಮಪಾದರನ್ನು ಮಾವನೂ ಬಂಧುಗಳೂ ಸ್ವಾಗತಿಸಿದರೆಂಬುದೇನೂ ಅಸಂಭಾವನೀಯವಲ್ಲ. ಆದರೆ ಅದರಲ್ಲಿ ಪ್ರಾಭಾಕರಮತದ ಖಂಡನೆಯು ಇದ್ದದ್ದರಿಂದ ಮಾವನು ಅದನ್ನಿಟ್ಟ ಮನೆಗೆ ಬೆಂಕಿಹೊತ್ತಿಸಿಕೊಂಡನೆಂಬುದು ಸ್ವಲ್ಪ ಸಂಶಯನೀಯ. ಈ ಕಥೆಯು ವ್ಯಾಸಾಚಲೀಯದಲ್ಲಿಯೂ ಸ್ವಲ್ಪಹೆಚ್ಚುಕಡಿಮೆ ಹೀಗೆಯೇ ಇದೆ (ವ್ಯಾ. ಶಂ. ೭–೬೮ರಿಂದ ೮–೩೩ರವರೆಗೆ). ಈ ಕಥೆಯನ್ನು ಯಾರಿಂದಲೋ ಕೇಳಿ ಮಾಧವವ್ಯಾಸಾಚಲರಿಬ್ಬರೂ ಬರೆದಿದ್ದಾರೆಂಬುದಕ್ಕೆ ಅವರೇ ಹೇಳಿಕೊಂಡಿರುವ ಸಾಕ್ಷ್ಯವೂ ಇದೆ ಏಕೆಂದರೆ ಇಬ್ಬರೂ ಹೀಗೆಂದು ಬರೆದುಕೊಂಡಿದ್ದಾರೆ :

ಐತಹ್ಯಮಾಶ್ರಿತ್ಯ ವದನ್ತಿ ಚೈವಂ<br>
ತದೇವ ಮೂಲಂ ಮಮ ಭಾಷಣೇಽಪಿ ।<br>
ಯಾವತ್ಕೃತಂ ತಾವದಿಹಾಸ್ಯ ಕರ್ತುಃ<br>
ಪಾಪಂ ತತಃ ಸ್ಯಾದ್ದ್ವಿಗುಣಂ ಪ್ರವಕ್ತುಃ ॥

(ಮಾ. ಶಂ. ೧೪–೧೧೬, ವ್ಯಾ. ಶಂ. ೮–೭೬

'ಐತಿಹ್ಯಮಾತ್ರವನ್ನು ಆಶ್ರಯಿಸಿ ಜನರು ಹೀಗೆನ್ನುತ್ತಿದ್ದಾರೆ : ನನ್ನ ಹೇಳಿಕೆಗೂ ಅದೇ ಮೂಲವು. ಪಾಪವನ್ನು ಮಾಡಿದವನಿ- ಎಷ್ಟು ಪಾಪವೋ ಅದನ್ನು ಮಾತ್ತೊಬ್ಬರಲ್ಲಿ ಹೇಳಿದವನಿಗೆ ಅದರ

ಎರಡರಷ್ಟು ಪಾಪ' ಎಂದು ಇಬ್ಬರೂ ತಮ್ಮ ಹೊಣೆಗಾರಿಕೆಯನ್ನು ತಪ್ಪಿಸಿ ಕೊಂಡಿರುತ್ತಾರೆ. ಇನ್ನೊಂದು ಮಾತನ್ನು ಇಬ್ಬರೂ ಸಮಾನವಾಗಿ ಆಡಿರುತ್ತಾರೆ

ದೃಷ್ಟ್ವಾ ಬುದ್ಧಿಂ ಮಾತುಲಸ್ತಸ್ಯ ಭೂಯೋ
ಭೀತಃ ಪ್ರಾಸ್ಯದ್ಭೋಜನೇ ತಸ್ಯ ಸೋಽಪ್ಯವ್
ಕಿಂಚಿದ್ ಗ್ರಂಥಂ ಪೂರ್ವವನ್ನ ಕ್ಷಮೋಽಭೂ
ಟೀಕಾಂ ಕರ್ತುಂ ಕೇಚಿದೇವಂ ಬ್ರುವನ್ತಿ ॥

(ಮಾ. ಶಂ. ೧೪–೧೨೩, ವ್ಯಾ. ಶಂ. ೯–೩೩).

'ಪುಸ್ತಕವು ಹೋದರೂ ನನ್ನ ಬುದ್ಧಿಯೇನೋ ಉಳಿದಿದೆಯಲ್ಲ' ಎಂದು ಟೀಕೆಯನ್ನು ಬರೆಯಲು ಪ್ರಾರಂಭಿಸಿದ ಆತನ ಬುದ್ಧಿಯನ್ನು ಕಂಡು ಮತ್ತೂ ಅಂಜಿದ ಸೋದರಮಾವನು ಅವನ ಬುದ್ಧಿಯನ್ನು ಮಂಕುಮಾಡುವ ಯಾವದೋ ಮದ್ದನ್ನು ಅವನ ಊಟದ ಅನ್ನದಲ್ಲಿ ಹಾಕಿದನು. ಅದ್ದರಿಂದ ಮೊದಲಿನಂತೆ ಆತನು ಟೀಕೆಯನ್ನು ಮಾಡಲಾರದಾದನು ಎಂದು ಕೆಲವರು ಹೇಳುತ್ತಾರೆ. ವ್ಯಾಸಾಚಲೀಯದಲ್ಲಿ ಆಚಾರ್ಯರು ಗ್ರಂಥವಲ್ಲಿ ಐದು ಪಾದಗಳನ್ನು ಮತ್ತೆ ಬರೆಯಿಸಿದರೆಂಬ ಸುದ್ದಿಯಿಲ್ಲ. ಪದ್ಮಪಾದರು ಕೇರಳದಲ್ಲಿ ಆಚಾರ್ಯರನ್ನು ಸಂಧಿಸಿದ ಸುದ್ದಿಯೇ ಅಲ್ಲಿಲ್ಲ! ಅಲ್ಲಿ ಉಗ್ರಭೈರವನನ್ನು ಪದ್ಮಪಾದರು ಸಂಧಿಸಿದ್ದೂ (೯–೩೫ರಿಂದ ೬೩) ತೋಟಕಾಚಾರ್ಯನ ವೃತ್ತಾಂತವೂ (೯–೬೪ರಿಂದ ೯೬) ಇದೆ. ನಮ್ಮಲ್ಲಿರುವ ಕೈಪ್ರತಿಯು ವ್ಯಾಸಾಚಲೀಯವು ಕೃತ್ರಿಮವಾಗಲಿ ಆಗದಿರಲಿ, ಪದ್ಮಪಾದರ ಗ್ರಂಥವು ಸುಟ್ಟುಹೋದ ಕಥೆಯು ಅವರಿಬ್ಬರಿಗಿಂತ ಪೂರ್ವದಲ್ಲಿಯೇ ಜನರಲ್ಲಿ ಪ್ರಚಾರವಾಗಿತ್ತೆಂಬುದು ಖಂಡಿತ.

ಅವರೆ ಆಚಾರ್ಯರು ಪಂಚಪಾದಿಕೆಯನ್ನು ಮತ್ತೆ ನೆನಪಿನಿಂದ ಹೇಳಿ ಬರೆಯಿಸಿದರೆಂಬ ಕಥೆಯು ಮಾಧವಕವಿಗೇ ಸಲ್ಲತಕ್ಕದ್ದು. ಹಾಗೆ ಕಲ್ಪಿಸು ವದರಲ್ಲಿ ಆಚಾರ್ಯರು ಮಹಾಮೇಧಾಶಕ್ತಿಯುಳ್ಳವರೆಂದು ತಿಳಿಸುವದೇ ಆತನ ಉದ್ದೇಶ. ಹಾಗೆಂದು ಆತನು (ಮಾ ಶಂ. ೧೪–೧೭೫) ಹೇಳಿಯೂ ಇರು ತ್ತಾನೆ. ಇದೇ ಸಂದರ್ಭದಲ್ಲಿ ನಮಗೆ ತಿಳಿಯಬರುವ ಮತ್ತೊಂದು ವಿಷಯವೂ ಇದೆ. ಅದೇನೆಂದರೆ ಆಚಾರ್ಯರು

ಪೂರ್ವಂ ಶೃಙ್ಗಕ್ಷ್ಮಾಧರೇ ಮತ್ಸಮೀಪೇ
ಪ್ರೇಮ್ಣಾ ಯಾಽಸೌ ವಾಚಿತಾ ಪಂಚಪಾದೀ ।
ಸಾ ಮೇ ಚಿತ್ತಾನ್ನಾಪಯಾತ್ಯದ್ಯ ಶೋಕೋ
ಯಾತಾಚ್ಛೀಘ್ರಂ ತಾಂ ಲಿಖೇತ್ಯಾಖ್ಯದಾರ್ಯಃ ॥ (೧೪–೧೭೬)

'ಹಿಂದೆ ಶೃಂಗೇರಿಯಲ್ಲಿ ನನ್ನ ಬಳಿಯಲ್ಲಿ 'ಪಂಚಪಾದಿ'ಯನ್ನು ಓದಿದ್ದೆ ಯಲ್ಲ, ಅದು ನನ್ನ ಚಿತ್ತದಿಂದ ದೂರವಾಗಿಹೋಗಿಲ್ಲ; ಶೋಕಮಾಡದಿರು, ಅದನ್ನು ಬೇಗನೆ ಬರೆದುಕೊ' ಎಂದು ಹೇಳಿದ್ದರಲ್ಲಿ 'ಪಂಚಪಾದಿ' ಎಂಬ

ಪೆಸರಿದೆ. ಮುಂದಿನ ಶ್ಲೋಕದಲ್ಲಿಯೂ 'ಆಶ್ವಾಸ್ಯೈತ್ಥಂ ಭಾಷ್ಯಕೃತ್ಪಂಚಪಾದೀ ವಾಚಪ್ಯೌ' ಎಂದು ಪಂಚಪಾದೀಶಬ್ದವನ್ನೇ ಉಪಯೋಗಿಸಿರುತ್ತಾನೆ. ಶ್ರೀರಾಮಶಾಸ್ತ್ರಿಗಳು (ಪು. ೨೩೪) ಪರಾಮರ್ಶಿಸಿರುವ ಕಲ್ಪತರುವಾಕ್ಯಗಳಲ್ಲಿ 'ಪಂಚಪಾದೀ' ಎಂದೇ ಇರುವದನ್ನೇ ನೋಡಿಯೇ ಮಾಧವನು ಹೀಗೆ ಕಥೆಯನ್ನು ಕಲ್ಪಿಸಿರಬಹುದೆ?– ಎಂಬ ಶಂಕೆಯೊಂದು ಎದ್ದುಕೊಳ್ಳುತ್ತದೆ. ಇದು ಹೇಗೇ ಆಗಿರಲಿ, ಕಲ್ಪತರುಕಾರರು ವೈಶ್ವಾನರಾಧಿಕರಣದಲ್ಲಿಯೂ ದಹರಾಧಿಕರಣದಲ್ಲಿಯೂ 'ಪಂಚಪಾದೀ' ಎಂಬ ಹೆಸರನ್ನೇ ಮೂರು ಸಲವೂ ಪ್ರಯೋಗಿಸಿರುತ್ತಾರೆ. 'ಪಂಚಪಾದಿಕಾ' ಎಂಬ ಹೆಸರನ್ನು ಎಲ್ಲಿಯೂ ಎತ್ತಿಲ್ಲ. ಪರಿಮಲಕಾರರು ಈ ವಿಷಯದಲ್ಲಿ ಏನನ್ನೂ ಹೇಳಿಲ್ಲ. ಕಲ್ಪತರುಕಾರರು ಪಂಚಪಾದಿಕೆಗೆ 'ದರ್ಪಣ'ವೆಂಬ ಟೀಕೆಯನ್ನು ಬರೆದರೆಂಬ ಶ್ರೀರಾಮಶಾಸ್ತ್ರಿಗಳ ಕಲ್ಪನೆಯ ಮಾತನ್ನುಕೂಡ ಹೇಳಿಲ್ಲ. ಆದ್ದರಿಂದ ಪಂಚಪಾದಿಯೇ ಪ್ರಕೃತಗ್ರಂಥವೆಂದೂ, ಅದು ಪದ್ಮಪಾದಕೃತವೆಂದೂ, ಅದಕ್ಕೆ 'ಪಂಚಪಾದಿಕೆ' ಎಂಬ ಹೆಸರು ಶಂಕರವಿಜಯ ಕಥೆಯಲ್ಲಿ ಹೇಳಿದ ಕಾರಣದಿಂದ ಬಂತೆಂದೂ, ಉತ್ತರಭಾಗವೂ ಒಂದಿದೆಯೆಂದೂ, ಅದಕ್ಕೆ 'ವೃತ್ತಿ' ಎಂದು ಹೆಸರೆಂದೂ ಹೇಳುವದು ನಿರಾಧಾರಕಲ್ಪನಾ ಪರಂಪರೆಯೇ ಎಂದು ಇದರಿಂದಲೂ ನಿಶ್ಚಿತವಾಗುತ್ತದೆ.

ಆಚಾರ್ಯರು ಮಹಾಮೇಧಾವಿಗಳೆಂದು ಹೊಗಳುವದಕ್ಕಾಗಿ ಮಾಧವನು ಕಲ್ಪಿಸಿರುವ ಮತ್ತೊಂದು ಕಥೆಯನ್ನು ಈ ಗುಂಪಿಗೇ ಸೇರಿಸಬೇಕಾಗಿದೆ. ಕವಿತಾ ಕುಶಲನಾದ ಕೇರಳರಾಜ್ಯದ ರಾಜಶೇಖರನು ಆಚಾರ್ಯರನ್ನು ಕಾಣುವದಕ್ಕೆ ಬಂದಾಗ 'ನಿಮ್ಮ ನಾಟಕತ್ರಯವು ಪ್ರಸಿದ್ಧವಾಯಿತಷ್ಟೆ?' ಎಂದು ಕೇಳಲು ಅವನು ಅಕಸ್ಮಾತ್ತಾಗಿ ಅವು ಬೆಂಕಿಯಲ್ಲಿ ಸುಟ್ಟುಹೋದವೆಂದು ಹೇಳಿದನು; ಆಗ ಅವನ್ನು ಶಂಕರಾಚಾರ್ಯರವರು ಮತ್ತೆ ಹೇಳಿ ಬರೆಯಿಸಿ ಅವನನ್ನು ಬೆರಗು ಮಾಡಿದರು (ಮಾ. ಶಂ. ೧೪–೧೭೧ರಿಂದ ೧೭೩) ಎಂಬುದು ಶಂಕರವಿಜಯದಲ್ಲಿರುವ ಕಥೆ. ಹಿಂದೆ ತಾವು ಬ್ರಹ್ಮಚಾರಿಗಳಾಗಿದ್ದಾಗ ಈ ರಾಜನ ಮೂರು ನಾಟಕಗಳನ್ನು ನೋಡಿಕೊಟ್ಟಿದ್ದರೆಂಬ ಕಥೆಯನ್ನು (ಪು. ೫೯) ವಾಚಕರು ನೆನಪಿಗೆ ತಂದುಕೊಳ್ಳಬೇಕು. ಅಷ್ಟು ವರ್ಷಗಳ ಹಿಂದೆ ಒಬ್ಬರಲ್ಲಿ ತಾವು ಒಮ್ಮೆ ನೋಡಿದ ನಾಟಕಗಳ ನೆನಪೇ ಅಚ್ಚಳಿಯದೆ ಇರುವಾಗ ಶೃಂಗೇರಿಯಲ್ಲಿ ಇತ್ತೀಚೆಗೆ ನೋಡಿದ್ದ ಪದ್ಮಪಾದರ ಗ್ರಂಥದ ನೆನಪು ಇರುವದೇನಾಶ್ಚರ್ಯ?–ಎಂಬುದು ಮಾಧವಕವಿಯ ಆಶಯವಿರಬೇಕು. ಆದರೆ ಆಚಾರ್ಯರಿಗೆ ಐದು ಪಾದಗಳ ಭಾಗವನ್ನು ಮಾತ್ರ ಪದ್ಮಪಾದರು ಓದಿಹೇಳಿದ್ದೇಕೆ? 'ವೃತ್ತಿ'ಯ ಭಾಗವನ್ನೇಕೆ ಓದಿ ಹೇಳಲಿಲ್ಲ?–ಎಂಬ ಪ್ರಶ್ನೆಗೆ ಉತ್ತರವನ್ನು ಕಲ್ಪಿಸುವದನ್ನು ಕವಿ ಇಲ್ಲಿ ಮರೆತಿರುತ್ತಾನೆ. ರಾಜಶೇಖರನ ನಾಟಕಗಳು ಯಾವವು?– ಎಂಬುದನ್ನೂ ಅವನು ಹೇಳಿಲ್ಲ. ಬಾಲರಾಮಾಯಣ, ಬಾಲಭಾರತ, ಕರ್ಪೂರಮಂಜರೀ

–ಇವೇ ಆ ನಾಟಕಗಳೆಂದು ಕೇರಳದ ವಿದ್ವಾಂಸರ ನಂಬಿಕೆಯಿದೆಯಂತೆ. ಆದರೆ ರಾಜಶೇಖರಕವಿಯು ಯಾಯಾವರಬ್ರಾಹ್ಮಣ ; ವಿದರ್ಭದೇಶದಲ್ಲಿ ಅವನ ಮನೆ ಇತ್ತು, ಕಾನ್ಯಕುಬ್ಜನಗರವೇ ಅವನಿಗೆ ಕರ್ಮಕ್ಷೇತ್ರವಾಗಿತ್ತು ; ಈ ಕಾರಣದಿಂದ ಕೇರಳೀಯ ಕಲ್ಪನೆಯು ಅಸಂಗತವು ಎಂದು ಬಲದೇವ ಉಪಾಧ್ಯಾಯರು (ಪ್ರ. ೧೦೪ ಟಿಪ್ಪಣಿ) ಬರೆದಿರುತ್ತಾರೆ. ಆಚಾರ್ಯರ ಕಾಲಕ್ಕೆ ಕೇರಳದೇಶದಲ್ಲಿ ಈ ಹೆಸರಿನ ಕವಿಯೊಬ್ಬನು ರಾಜನಾಗಿದ್ದನೆಂದು ಇತಿಹಾಸದಿಂದ ಸಿದ್ಧವಾಗುವ ವರೆಗೆ ನಾಟಕತ್ರಯದ ಉಜ್ಜೀವನದ ಕಥೆಯೂ ಕವಿಕಲ್ಪನಾಮಾತ್ರವೆ ಎಂದು ಹೇಳಬೇಕಾಗಿದೆ.

# ೧೪. ಆಚಾರ್ಯರ ಮಾತೃಭಕ್ತಿ

## ತಾಯಿಗೆ ಸದ್ಗತಿಯನ್ನು ಕೊಡಿಸಿದ್ದು

೧೩೪. ಈಗ ಆಚಾರ್ಯರ ಕೇರಳಯಾತ್ರೆಯ ವಿವರವನ್ನು ಮಾಧವೀಯದಂತೆ ಸಂಗ್ರಹಿಸೋಣ : ಆಕಾಶಮಾರ್ಗದಿಂದ ತಾಯಿಯ ಬಳಿಗೆ ಬಂದ ಶಂಕರರು ಆಕೆಯನ್ನು ಸಮಾಧಾನಪಡಿಸಿದರು. ಆಕೆಯು ಸಂತುಷ್ಟಾಂತರಂಗಳಾಗಿ 'ಅಪ್ಪ, ನೀನು ಬಂದದ್ದು ಒಳ್ಳೆಯದಾಯಿತು. ಇನ್ನು ನಾನು ಈ ಶರೀರವನ್ನು ಧರಿಸಿರಲಾರೆನು. ಶಾಸ್ತ್ರೋಕ್ತವಾಗಿ ನನಗೆ ಸಂಸ್ಕಾರವನ್ನು ಮಾಡಿ ನನ್ನನ್ನು ಪುಣ್ಯಲೋಕಕ್ಕೆ ಕಳುಹಿಸು' ಎಂದಳು. ಆಚಾರ್ಯರು ಆಕೆಗೆ ಒಳ್ಳೆಯದಾಗಲೆಂದು ನಿರ್ಗುಣನಿರ್ವಿಶೇಷಬ್ರಹ್ಮತತ್ತ್ವವನ್ನು ಉಪದೇಶಿಸಿದರು. ಆದರೆ ಅವಳ ಮನಸ್ಸಿಗೆ ಅದು ಹಿಡಿಯಲಿಲ್ಲ. ಆಗ ಆಚಾರ್ಯರು 'ಅನಾದ್ಯನ್ತಮಾದ್ಯಂ ಪರಂ ತತ್ತ್ವಮರ್ಥಂ ಚಿದಾಕಾರಮೇಕಂ ತುರೀಯಂ ತ್ವಮೇಯಮ್ । ಹರಿಬ್ರಹ್ಮಮೃಗ್ಯಂ ಪರಬ್ರಹ್ಮರೂಪಂ ಮನೋವಾಗತೀತಂ ಮಹಃಶೈವಮೀಡೇ ॥' ಮುಂತಾದ ಹದಿನಾಲ್ಕು ಶ್ಲೋಕಗಳ ಶಿವಭುಜಂಗಪ್ರಯಾತಸ್ತೋತ್ರದಿಂದ (ವೃತ್ತೈರ್ಭುಜಙ್ಗಪ್ರಯಾತೈಃ ೧೪-೩೭) ಶಿವನನ್ನು ಸ್ತುತಿಸಿದರು. ಆತನು ಪ್ರಸನ್ನನಾಗಿ ತನ್ನ ದೂತರನ್ನು ಕಳುಹಿಸಿದನು. ಶೂಲಪಿನಾಕಪಾಣಿಗಳಾದ ಅವರೊಡನೆ ಶಿವಲೋಕಕ್ಕೆ ಹೋಗಲಾರೆನೆಂದು ತಾಯಿ ಹೇಳಿದ್ದರಿಂದ ಅವರನ್ನು ವಿನಯದಿಂದ ಕಳುಹಿಸಿಕೊಟ್ಟು, ಆಚಾರ್ಯರು ವಿಷ್ಣುವನ್ನು ಸ್ತೋತ್ರಮಾಡಿದರು. ಆ ಸ್ತೋತ್ರವು ಯಾವದೆಂಬುದು ಸ್ಪಷ್ಟವಾಗಿ ಗೊತ್ತಾಗುವಂತಿಲ್ಲ. ಶ್ರೀ ವಿ ಷ್ಣು ವಿ ನ ವರ್ಣನೆಯನ್ನು ಮಾಧವನು ಹೀಗೆ ಮಾಡಿರುತ್ತಾನೆ :

ಭುಜಗಾಧಿಪಭೋಗತಲ್ಪಭಾಜಂ ಕಮಲಾಙ್ಕಸ್ಥಲಕಲ್ಪಿತಾಙ್ಘ್ರಿಪದ್ಮಮ್ ।
ಅಭಿವೀಜಿತಮಾದರೇಣ ಲೀಲಾಪಸುಧಾಭ್ಯಾಂ ಚಲಮಾನಚಾಮರಾಭ್ಯಾಮ್ ॥೩೯॥
ವಿಹಿತಾಞ್ಜಲಿನಾ ನಿಷೇವ್ಯಮಾಣಂ ವಿನತಾನನ್ದನಕೃತಾಗ್ರತೋ ರಥೇನ ।
ಧೃತಮೂರ್ತಿಭಿರಸ್ತ್ರದೇವತಾಭಿಃ ಪರಿತಃ ಪಞ್ಚಭಿರಞ್ಚಿತೋಪಕಣ್ಠಮ್ ॥೪೦॥
ಮಹನೀಯತಮಾಲಕೋಮಲಾಙ್ಗಂ ಮಕುಟೇ ರತ್ನಚಯಂ ಮಹಾರ್ಹಯುಕ್ತಮ್ ।
ಶಿಶಿರೇತರಭಾನುಶೀಲಿತಾಗ್ರಂ ಹರಿನೀಲೋಪಲಭೂಧರಂ ಹಸನ್ತಮ್ ॥೪೧॥

ಯಾವ ಸ್ತೋತ್ರವು ಇದಕ್ಕೆ ಮೂಲವಾಗಿದೆಯೋ ತಿಳಿಯದು. ಹೀಗೆ ಶಂಕರರು ವರ್ಣಿಸಿದ ವಿಷ್ಣುಮೂರ್ತಿಯನ್ನು ಚಿತ್ತದಲ್ಲಿ ಧರಿಸಿಕೊಂಡೇ ಯೋಗಿಯಂತೆ ತಾಯಿಯು ಅಂತ್ಯಕಾಲದಲ್ಲಿ ಆತನನ್ನೇ ಭಾವಿಸುತ್ತಾ ದೇಹವನ್ನು ತ್ಯಜಿಸಿದಳು. ಆಗ ವಿಷ್ಣುದೂತರು ವಿಮಾನವನ್ನು ತೆಗೆದುಕೊಂಡುಬಂದರು. ಅವರೊಡನೆ ಆಕೆಯು ದೇವಯಾನಮಾರ್ಗದಿಂದ ಪರಮಪದವನ್ನೈದಿದಳು (ಮಾ. ಶಂ. ೧೪–೪೨ರಿಂದ ೪೫),

ವ್ಯಾಸಾಚಲೀಯದಲ್ಲಿ ಸನಂದನನು ಶಿಷ್ಯನಾದೊಡನೆ ಆಚಾರ್ಯರು ಕೇರಳಕ್ಕೆ ಬಂದರು. ಅವರು ಉಪದೇಶಿಸಿದ ನಿರ್ಗುಣವಿದ್ಯೆ ಆಕೆಗೆ ತಿಳಿಯಲಿಲ್ಲ; ಅದ್ದರಿಂದ ವಿಷ್ಣುವಿನ ಸಾಕಾರರೂಪವನ್ನು ಉಪದೇಶಿಸಿದರು ; ಅದನ್ನೇ ಧ್ಯಾನಿಸುತ್ತಾ ಆ ತಾಯಿ ಶರೀರವನ್ನು ತ್ಯಜಿಸಿದಳು (ವ್ಯಾ. ಶಂ. ೮–೯೪ರಿಂದ ೯೯) –ಎಂದಿಷ್ಟೇ ಇದೆ. ಅಲ್ಲಿ ಶಿವದೂತರ ಭಯಂಕರಾಕಾರದ ಪ್ರಸ್ತಾಪವಿಲ್ಲ.

ಚಿದ್ವಿಲಾಸೀಯದಂತೆ ಆಚಾರ್ಯರು ಗೋವಿಂದಭಗವತ್ಪಾದರ ಬಳಿಯಿಂದಲೇ ಕೇರಳಕ್ಕೆ ಬಂದು ಮಾತೃಸಂಸ್ಕಾರವನ್ನು ಮಾಡಿದರೆಂದು ಹಿಂದೆ (ಪು.೧೦೦) ಹೇಳಿರುತ್ತೇವೆ. ಅಲ್ಲಿ ನಿರ್ಗುಣವಿದ್ಯೆಯ ಸುದ್ದಿಯಿಲ್ಲ; ಶಿವಭುಜಂಗಪ್ರಯಾತದಿಂದ ಶಿವನನ್ನು ಸ್ತುತಿಸಿದ್ದನ್ನು ಹೇಳಿದೆ. ವಿಷ್ಣುವನ್ನು ವಿಷ್ಣುಭುಜಂಗಪ್ರಯಾತದಿಂದ ಸ್ತುತಿಸಿದರೆಂದೂ ವಿಷ್ಣುದೂತರೊಡನೆ ಆರ್ಯಾಂಬಿಕೆಯು ವೈಕುಂಠಕ್ಕೆ ತೆರಳಿದಳೆಂದೂ (ಚಿ.ಶಂ. ೧೦–೪೩ರಿಂದ ೪೭) ಹೇಳಿದೆ.

ಈ ಮಾತೃಸೇವೆಯ ವಿಚಾರವನ್ನು ಕುರಿತು ವಿಮರ್ಶಿಸಬೇಕಾದ ವಿಷಯಗಳಿವು :

(೧) **ಆಚಾರ್ಯರಿಗೆ ಮಾತೃವಿಯೋಗವಾದದ್ದು ಯಾವಾಗ?** ಈ ವಿಷಯಕ್ಕೆ ಶಂಕರವಿಜಯಗಳಲ್ಲಿ ಐಕಕಂಠ್ಯವಿಲ್ಲವೆಂದು ಆಗಲೆ ಹೇಳಿಟ್ಟಿದ್ದೇವೆ. ಶಂಕರರ ಕೆಲಸವು ಪರಿಪಕ್ವವಾದ ಕಾಲಕ್ಕೆ ಆಕೆಯ ದೇಹತ್ಯಾಗವಾದರೆ ಕಥೆಗೆ ಚೆನ್ನಾಗಿ ಒಪ್ಪೀತೆಂದು ಮಾಧವಕವಿ ಕಲ್ಪಿಸಿರಬೇಕೆಂದು ಕಾಣುತ್ತದೆ.

(೨) **ಶಂಕರಾಚಾರ್ಯರು ತಾಯಿಗೆ ನಿರ್ಗುಣತತ್ತ್ವವನ್ನು ಉಪದೇಶಿಸಿದರೆ?** ಆಚಾರ್ಯರು ನಿರ್ಗುಣವಾದ ಅದ್ವಿತೀಯತತ್ತ್ವವೇ ಪರಮಾರ್ಥ

ನೆಂಬ ಬೋಧೆಯನ್ನೇ ಎತ್ತಿಹಿಡಿಯುವವರಾಗಿದ್ದರೆಂಬುದು ನಿಜ; ಆದರೆ ಅವರು ಎಲ್ಲರಿಗೂ ಆತ್ಮತತ್ತ್ವವನ್ನೇ ಬೋಧಿಸಬೇಕೆಂದು ಪಟ್ಟುಹಿಡಿದವರಲ್ಲ. ಏಕೆಂದರೆ ಗೀತಾಭಾಷ್ಯದಲ್ಲಿ ಹನ್ನೆರಡನೆಯ ಅಧ್ಯಾಯದ ವ್ಯಾಖ್ಯಾನದಲ್ಲಿ ಈ ವಾಕ್ಯವು ಕಾಣುತ್ತದೆ.

ಯಸ್ಮಾತ್ ಅರ್ಜುನಸ್ಯ ಅತ್ಯಂತಮೇವ ಹಿತೈಷೀ ಭಗವಾನ್, ತಸ್ಯ ಸಮ್ಯಗ್ದರ್ಶನಾನಾಗಸ್ಪೃತಂ ಕರ್ಮಯೋಗಂ ಭೇದದೃಷ್ಟಿಮಂತಮೇವ ಉಪದಿಶತಿ ॥

(ಗೀ. ಭಾ. ೧೨-೧೩ರ ಅವತರಣಿಕೆ)

'ಅರ್ಜುನನ ವಿಷಯದಲ್ಲಿ ಅತ್ಯಂತಹಿತೈಷಿಯಾಗಿದ್ದುದ್ದರಿಂದ ಭಗವಂತನು ಅವನಿಗೆ ಸಮ್ಯಗ್ದರ್ಶನದ ಸಂಬಂಧವಿಲ್ಲದ ಭೇದದೃಷ್ಟಿಯುಳ್ಳ ಕರ್ಮಯೋಗವನ್ನೇ ಹೇಳಿರುತ್ತಾನೆ. ಈ ವಾಕ್ಯವನ್ನು ನೋಡಿದರೆ ಯಾವ ತತ್ತ್ವೋಪದೇಶದ ಲಾಭವೂ ಇಲ್ಲದ ವೃದ್ಧಳಾದ ತಾಯಿಗೆ ಅವರು ನಿರ್ವಿಶೇಷತತ್ತ್ವವನ್ನು ಉಪದೇಶಿಸುವದಕ್ಕೆ ಹೋದರೆಂಬುದು ಹೇಗೆ ಸಂಭಾವಿತವಾದೀತು ?

(೩) ಶಿವಭುಜಂಗಪ್ರಯಾಗದಿಂದ ಆಚಾರ್ಯರು ಶಿವನನ್ನು ಸ್ತೋತ್ರ ಮಾಡಿದರೆಂದು ಕರ್ಣಾಕರ್ಣಿಕೆಯಾಗಿ ಕೇಳಿದ್ದ ಸುದ್ದಿಯನ್ನೇ ಮಾಧವನೂ ವರ್ಣಿಸಿರಬೇಕೆಂಬುದು ನಿಶ್ಚಯ. ಏಕೆಂದರೆ ಆ ಸ್ತೋತ್ರದಲ್ಲಿ ಮೊಟ್ಟಮೊದಲನೆಯ ಪದ್ಯವೇ 'ನಿರ್ಗುಣಪದ'ವಾಗಿದೆ. ನಿರ್ಗುಣತತ್ತ್ವವು ಮನಸ್ಸಿಗೆ ಹಿಡಿಯುವಹಾಗಿಲ್ಲವೆಂದು ತಾಯಿ ಹೇಳಿರುವಾಗ ಆ ಶ್ಲೋಕದಿಂದ ಆಚಾರ್ಯರು ಮೊದಲುಮಾಡಿರಲಾರರು. ಈ ಸ್ತೋತ್ರವು ಆಚಾರ್ಯರದ್ದೇ ಎಂಬ ದೃಢಭಾವನೆಯುಳ್ಳವರಲ್ಲಿ ಕೆಲವರು ಪಲ್ಲವಸೇನಾನಿಯಾದ '**ಪರಂಜ್ಯೋತಿ**' (ಶಿರುತ್ತೊಂಡಾರ್) ಎಂಬಾತನ ಪರಾಮರ್ಶವು 'ಮಾತದ್ರೋಹಿಣಃ' ಎಂಬ ವಿಶೇಷಣದಲ್ಲಿದೆ ಎಂಬುದರಮೇಲೆ ಆಚಾರ್ಯರ ಕಾಲವು ಏಳನೆಯ ಶತಮಾನದಿಂದೀಚೆಗೆ ಇರಬೇಕೆಂದು ಕಲ್ಪಿಸುತ್ತಿದ್ದಾರೆ ! ಆದರೆ ಇದು ಆಚಾರ್ಯರದ್ದೆಂದೂ ಅದರಲ್ಲಿ ಈ ಪರಾಮರ್ಶವಿದೆಯೆಂದೂ ಅವರಿಗೆ ಯಾವ ದಿವ್ಯದೃಷ್ಟಿಯಿಂದ ನಿರ್ಣಯವಾಯಿತೋ !

(೪) ಆಚಾರ್ಯರ ತಾಯಿತಂದೆಗಳು ಶಿವಭಕ್ತಿಯಿಂದಲೇ ಪುತ್ರವಂತರಾದರು ಎಂದು ವರ್ಣಿಸಿದ ಕವಿಯೇ ಇಲ್ಲಿ ಶಿವಲೋಕವು ಭಯಂಕರವೆಂಬ ಭಾವನೆಯು ಬರುವಂತೆ ಏತಕ್ಕೆ ವರ್ಣಿಸಿದನೆಂಬುದನ್ನು ಹೇಳುವದಕ್ಕಾಗುವದಿಲ್ಲ. ಶಿವ ದೂತರು 'ಶೂಲಪಿನಾಕಪಾಣಿ'ಗಳಾದರೂ ಭಕ್ತರಿಗೆ ಅಂಜಿಕೆಯನ್ನು ಮಾಡುವ ರೂಪದಿಂದ ಪ್ರಾಣಪ್ರಯಾಣಸಮಯದಲ್ಲಿ ಭಕ್ತರಿಗೆ ಕಾಣಿಸಿಕೊಂಡಾರೇನು ?

(೫) ವಿಷ್ಣುವನ್ನು ಸ್ತೋತ್ರಮಾಡಿದ್ದರಿಂದ ವಿಷ್ಣುದೂತರು ಬರಲು ಅವರೊಡನೆ ತಾಯಿ ಸಂತೋಷಪೂರ್ವಕವಾಗಿ ವೈಕುಂಠಕ್ಕೆ ತೆರಳಿದಳು–ಎಂದಿರುವ ಕಥೆಗೆ ಯಾವದೋ ಒಂದು ದಂತಕಥೆಯು ಆಧಾರವಿರಬೇಕೆಂದು ತೋರುತ್ತದೆ. ಹಾಗಿಲ್ಲದಿದ್ದರೆ ಮಾಧವ, ವ್ಯಾಸಾಚಲ, ಚಿದ್ವಿಲಾಸ–ಈ ಮೂವರೂ ಈ ಪ್ರಸಂಗದಲ್ಲಿವಿಷ್ಣುಸ್ತೋತ್ರವನ್ನು ತರಲಾರರು. ಅದರಲ್ಲಿಯೂ ಲಿಂಗಪೂಜೆಯನ್ನು ಶಂಕರರ ಕೊರಳಿಗೆ ಕಟ್ಟಿರುವ ಚಿದ್ವಿಲಾಸನು ಹಾಗೆಂದು ಹೇಳುವದಕ್ಕೆ ಏನಾದರೂ ಕಾರಣವಿರಲೇಬೇಕು. ಇದನ್ನು ವಿಮರ್ಶಕರು ನಿರ್ಣಯಿಸಬೇಕಾಗಿದೆ.

(೬) ವಿಷ್ಣುದೂತರೊಡನೆ ಹೋದ ತಾಯಿಯು ದೇವಯಾನದಿಂದ ಹೋದ ಕ್ರಮವನ್ನು ವರ್ಣಿಸಿದಾಗ ಮಾಧವಕವಿಯು

> ಇಯಮರ್ಚಿರಹರ್ವಲಕ್ಷಪಕ್ಷಾನ್
> ಷಡುದಙ್ಮಾಸಸಮಾನಿಲಾರ್ಕಚಂದ್ರಾನ್ ।
> ಚಪಲಾವರುಣೇಂದ್ರಧಾತೃಲೋಕಾನ್
> ಕ್ರಮಶೋಽತೀತ್ಯ ಪರಂ ಪದಂ ಪ್ರಪೇದೇ ॥೪೨॥

'ಅಗ್ನಿ, ಅಹಸ್ಸು, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ವಾಯು, ಸೂರ್ಯ, ಚಂದ್ರ, ಬ್ರಹ್ಮ– ಈ ಲೋಕಗಳನ್ನು ಕ್ರಮದಿಂದ ದಾಟಿ ಪರಮಪದವನ್ನು ಪಡೆದಳು' ಎಂದು ಬರೆದಿರುತ್ತಾನೆ. ಇಲ್ಲಿರುವ ದೇವಯಾನಕ್ರಮವು ಸೂತ್ರಭಾಷ್ಯದಲ್ಲಿ ನಾಲ್ಕನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ಚಿಂತಿತವಾಗಿದೆ. ಭಾಷ್ಯಕಾರರು ಅಲ್ಲಿ ಸೂತ್ರದಲ್ಲಿ "ವಾಯುಮಬ್ದಾತ್" (ವೇ.ಸೂ. ೪–೩–೨) ಎಂದಿದ್ದರೂ ಬೃಹದಾರಣ್ಯಕದಲ್ಲಿ 'ಮಾಸೇಭ್ಯೋ ದೇವಲೋಕಂ ದೇವಲೋಕಾದಾದಿತ್ಯಮ್' (ಬೃ. ೬–೨–೧೫) ಎಂದು ಬರೆದಿರುವದರಿಂದ ದೇವಲೋಕವಾದಮೇಲೆ ವಾಯುವನ್ನು ಸೇರುತ್ತಾನೆ ಎಂದು ನಿರ್ಣಯಿಸಿರುತ್ತಾರೆ. ಆದ್ದರಿಂದ 'ದೇವಲೋಕ'ವೆಂಬುದು ಇಲ್ಲಿ ಬಿಟ್ಟುಹೋಗಿದೆಯೆಂಬುದೊಂದು ವಿಶೇಷ. ಅದಕ್ಕಿಂತಲೂ ಧಾತೃಲೋಕ (ಬ್ರಹ್ಮಲೋಕ)ವನ್ನು ದಾಟಿ ಪರಮಪದವನ್ನು ಪಡೆದಳು ಎಂದು ಬರೆದಿರುವದರಿಂದ ಆರ್ಯಾಂಬೆಯು ಪರಬ್ರಹ್ಮಸಾಯುಜ್ಯವನ್ನೇ ಪಡೆದಳು ಎಂದಿರುವದು ಸ್ವವಚನವಿರುದ್ಧವಾಗಿದೆ. ಏಕೆಂದರೆ ಸಾಕಾರ ವಿಷ್ಣುವನ್ನು ಭಜಿಸುವವರಿಗೆ ಜ್ಞಾನವಾಗದೆ ಪರಬ್ರಹ್ಮಪ್ರಾಪ್ತಿಯಾಗದೆಂಬುದು ಆಚಾರ್ಯರ ಸಿದ್ಧಾಂತ (ಸೂ. ಭಾ. ೪–೪–೨೨). ಹೀಗಿರುವಲ್ಲಿ ನಿರ್ಗುಣವಿದ್ಯೆಯು ತನ್ನ ಮನಸ್ಸಿಗೆ ಹಿಡಿಯಲಿಲ್ಲವೆಂದು ಹೇಳುವ ಆರ್ಯಾಂಬೆಗೆ ಸಗುಣವಿದ್ಯಾಮಾತ್ರದಿಂದ ಪರಬ್ರಹ್ಮಪ್ರಾಪ್ತಿಯಾಯಿತೆಂದು ಬರೆದಿರುವದು ಹೇಗೂ ಸಂಗತವಾಗಲಾರದು. ಆರ್ಯಾಂಬೆಗೆ ಜ್ಞಾನಕ್ಕೆ ಅಧಿಕಾರವಿತ್ತು, ಅಥವಾ ಇರಲಿಲ್ಲ; ಇರದಿದ್ದರೆ ಆಕೆ ಬ್ರಹ್ಮಲೋಕವನ್ನು ಮೀರಿದ ಪರಬ್ರಹ್ಮವನ್ನೇ

ಪಡೆದನೆಂದು ಹೇಳುವದು ಸಂಗತನಲ್ಲ. ಸಗುಣಬ್ರಹ್ಮವನ್ನೇ ಉಪಾಸನೆಮಾಡಿ ಬ್ರಹ್ಮಲೋಕವನ್ನು ವಿರಾಡ ಪರುಷಪದವನ್ನು ಪಡೆದುಕೊಂಡಳೆಂದು ಹೇಳುವದು ಹೇಗೆತಾನೆ ಸರಿಯಾದೀತು ?

೧೩೫ ಆಚಾರ್ಯರು ತಾಯಿಯ ಅಂತ ಕರ್ಮವನ್ನು ತಾನೇ ಮಾಡ ಬೇಕೆಂದು ಹೊರಟಾಗ ಅವರಿಗೆ ನಿಮಗೆ ಈ ಕರ್ಮದಲ್ಲಿ ಅಧಿಕಾರವೆಲ್ಲಿಯದು ?– ಎಂದು ಬಂಧುಗಳು ಅವರನ್ನು ನಿಂದಿಸಿದರು (೧೪–೪೬) ಬೆಂಕಿಯನ್ನು ಕೇಳಿ ದರೂ ಅವರು ಕೊಡಲಿಲ್ಲ; ಆಗ ಅವರಿಗೆ ಕೋಪವು ಬಂದು ಅವರನ್ನೆಲ್ಲ ಶಪಿಸಿದರು (೪೭). ಒಣಗಿದ ಕಟ್ಟಿಗೆಗಳನ್ನು ಕೂಡಿಹಾಕಿ ಮನೆಯ ಅಂಗಳದಲ್ಲಿ ಆಕೆಯ (?) ಬಲದೋಳನ್ನು ಕಡೆದು ತೆಗೆದ ಬೆಂಕಿಯಿಂದಲೇ ಆಕೆಯನ್ನು ಸುಟ್ಟರು (೪೮). ಇನ್ನುಮೇಲೆ ನೀವು ವೇದಬಹಿಷ್ಕೃತರಾಗಿರಿ, ನಿಮ್ಮಲ್ಲಿ ಸಂನ್ಯಾಸಿಗಳಿಗೆ ಭಿಕ್ಷೆಯಾಗುವದು ಬೇಡ. ಇಲ್ಲಿಂದ ಮುಂದಕ್ಕೆ ಮನೆಯ ಅಂಗಳದ ಮೂಲೆಯಲ್ಲಿಯೇ ನಿಮಗೆ ಶ್ಮಶಾನವಾಗಲಿ !–ಎಂದು ಶಪಿಸಿದರು. ಅಂದಿನಿಂದ ಹಾಗೆಯೇ ನಡೆಯುತ್ತಿದೆ. ದೊಡ್ಡವರ ವಿಷಯದಲ್ಲಿ ತಿಳಿದುತಿಳಿದೂ ಮಾಡಿದ ಅಪರಾಧವು ಎಂದಿಗಾದರೂ ಒಳ್ಳೆಯದನ್ನು ಮಾಡೀತೆ ? (೪೯ರಿಂದ ೫೧) ಎಂದು ಮಾಧವನು ಬರೆದಿರುತ್ತಾನೆ.

ಬೆಂಕಿಯನ್ನು ಕೊಡದೆ ಇದ್ದ ಅಪರಾಧಕ್ಕಾಗಿಯೇ ಹೀಗೆ ಆಚಾರ್ಯರು ಬಂಧುಗಳನ್ನು ಶಪಿಸಿದರೆಂದು ಹೇಳಿದೆ; ಅವರು ಕರ್ಮಕ್ಕೆ ಅಡ್ಡಿಮಾಡಿದರೆಂದು ಅಲ್ಲಿ ಕಂಠೋಕ್ತವಾಗಿ ಹೇಳಿಲ್ಲ.

ಚಿದ್ವಿಲಾಸದಲ್ಲಿಯೋ: ಎಂದರೆ ತಾಯಿಯು ಸಾಯುವ ಅವಸ್ಥೆಯಲ್ಲಿ ದ್ದಾಗ ಬ್ರಾಹ್ಮಣರನ್ನು ಕರೆದರು. ಅವರು ಬರಲಿಲ್ಲವಾದ್ದರಿಂದ ಯತಿದೂಷಕ ರಾದ ಅವರನ್ನು ಇನ್ನುಮೇಲೆ ನೀವು ಜ್ಞಾನವರ್ಜಿತರಾಗಿರಿ! ಅನಾಚಾರದಲ್ಲಿಯೇ ನಿರತರಾಗಿರಿ ! ಕೃಷಿ, ವ್ಯಾಪಾರ–ಇವುಗಳನ್ನೇ ಮಾಡುತ್ತಿರಿ ! ನಿಮ್ಮ ದೇಶವು ಯತಿಗಳಿಗೆ ವಾಸಯೋಗ್ಯವಾಗುವದು ಬೇಡ ! ಯಾರಾದರೂ ಯತಿಗಳು ಇಲ್ಲಿಗೆ ಬಂದರೆ ಪತಿತರಾಗಲಿ ! (ಚಿ.ಶಂ. ೧೦–೬೦ರಿಂದ ೬೩) ಎಂದಿದೆ; ಚೂರ್ಣೀ ನದಿಯನ್ನು ತಾಯಿಯ ಮನೆಯ ಬಳಿ ಹರಿಯುವಂತೆ ತಿರುಗಿಸಿದ್ದು, ಈ ಮಾತೃ ಸೇವೆಯನ್ನು ಮಾಡಿದ್ದು–ಎಲ್ಲವೂ ಆಚಾರ್ಯರು ಗೋವಿಂದಭಗವತ್ಪಾದರ ಬಳಿಯಲ್ಲಿರುವಾಗಲೇ (ಇತ್ಯಾದಿ ಕಥೆಯತ್ಯೈವ ಗೋವಿನ್ದಭಗವದ್ಗುರೌ ೧೦– ೬೫) ಎಂಬುದು ಚಿದ್ವಿಲಾಸರ ಮತ.

ಆಚಾರ್ಯರು ಕೊಟ್ಟ ಶಾಪವು ಫಲಕಾರಿಯಾದದ್ದಕ್ಕೆ ಒಂದು ನಿಮಿತ್ತ ವನ್ನು ಮಾಧವನು ಕಲ್ಪಿಸಿರುತ್ತಾನೆ; ಕೇರಳರಾಜನಾದ ರಾಜಶೇಖರನು ತನ್ನ ನಾಟಕತ್ರಯವನ್ನು ಉಜ್ಜೀವನಮಾಡಿಕೊಟ್ಟು ಆಚಾರ್ಯರಿಗೆ ನಮಸ್ಕಾರವನ್ನು

ಮಾಡಿ 'ನಾನು ಮಾಡತಕ್ಕದ್ದೇನಾದರೂ ಇದ್ದರೆ ಅಪ್ಪಣೆಮಾಡಬೇಕು!' ಎಂದು ಬೇಡಿಕೊಳ್ಳಲು ಅವನು 'ನಾನು ಕಾಲಟಿಯ ನಿವಾಸಿಗಳಿಗೆ ಈರೀತಿ ಶಾಪವನ್ನು ಕೊಟ್ಟಿರುತ್ತೇನೆ ; ಇದಕ್ಕನುಸಾರವಾಗಿ ನೀನೂ ಮಾಡು ಎಂದು ಹೇಳಿದನಂತೆ (ಮಾ. ಶಂ. ೧೪-೧೭೩, ೧೭೪).

ಈಗ ಈ ಅಂತ್ಯಕರ್ಮದ ಕಥೆಯನ್ನು ಸ್ವಲ್ಪ ವಿಮರ್ಶಿಸಬಹುದಾಗಿದೆ :

(೧) ಶಾಪದ ಕಥೆ ನಿಜವಿರಬಹುದೆ ? ಕಾಲಟಿಯ ಅಗ್ರಹಾರದವರು ಆಚಾರ್ಯರನ್ನು ಅಂತ್ಯಕ್ರಿಯೆಗಳನ್ನು ಮಾಡದಂತೆ ಅಡ್ಡಿಮಾಡಿದರೆಂಬುದು ಅವಿಶ್ವಾಸನೀಯವಲ್ಲ. ಸಂನ್ಯಾಸಿಗಳಿಗೆ ಯಾವ ಕರ್ಮದಲ್ಲಿಯೂ ಅಧಿಕಾರವಿಲ್ಲ ವೆಂದು ಶಾಸ್ತ್ರದಲ್ಲಿ ಹೇಳಿರುವದರಿಂದ ಶಾಸ್ತ್ರಶ್ರದ್ಧಾಳುಗಳಾದ ಬ್ರಾಹ್ಮಣರು ಹಾಗೆ ಅಡ್ಡಿಯನ್ನು ಮಾಡಿರಬಹುದು ; ಆಚಾರ್ಯರು ತಾಯಿಗೆ ಕೊಟ್ಟ ವಾಗ್ದಾನದಂತೆ ಆ ಕರ್ಮವನ್ನು ಮಾಡಿರಲೂಬಹುದು. ಆಚಾರ್ಯರೇ ತನ್ನ ಅಂತ್ಯಕರ್ಮವನ್ನು ಮಾಡಬೇಕೆಂದು ತಾಯಿ ಹಠವನ್ನು ತೊಟ್ಟು ಹೇಳಿದ್ದಳೆ?- ಎಂಬುದು ನಿಶ್ಚಿತವಾಗಿಯೂ ತಿಳಿಯದು. ಶಂಕರವಿಜಯಕಾರರು ಹಾಗೆಂದು ಹೇಳಿರುವದು ಮುಂದೆ ಬರಲಿರುವ ಶಾಪದ ಕಥೆಗೆ ಅನುಗುಣವಾಗಿರಲೆಂದು ಮಾಡಿದ ಕಲ್ಪನೆಯಾಗಿದ್ದರೂ ಇರಬಹುದು. ಇರುವ ಒಬ್ಬನೇ ಮಗನು ಸಂನ್ಯಾಸಿಯಾದರೆ ನನ್ನ ಪೋಷಣೆಗೆ ಗತಿ ಯಾರು ? ಅಂತ್ಯಕ್ರಿಯೆಯನ್ನು ಮಾಡುವವರು ಯಾರು ?- ಎಂದು ಆಕೆ ಪರಿತಾಪವನ್ನು ಸೂಚಿಸಿರಬಹುದು. ಪಿತ್ರಾರ್ಜಿತಧನವನ್ನು ಬಂಧುಗಳಿಗೆ ಕೊಟ್ಟು ಅವರಿಗೆ ನಿನ್ನ ಪೋಷಣೆಯ ಭಾರ ವನ್ನು ಒಪ್ಪಿಸುತ್ತೇನೆ ; ನೀನು ಸಾಯುವ ಹೊತ್ತಿಗೆ ಹೇಗಾದರೂ ನಾನು ಬಂದು ನಿನ್ನ ಅಂತ್ಯಕ್ರಿಯೆಯನ್ನು ಸಾಂಗವಾಗಿ ನೆರವೇರಿಸುವೆನು- ಎಂದು ಆಚಾರ್ಯರು ವಾಗ್ದಾನಮಾಡಿದ್ದರೆ ಅದೇನೂ ಅಸ್ವಾಭಾವಿಕವಲ್ಲ. ಆದರೆ ಅವರು ಬಹುಕಾಲದಮೇಲೆ ಸಂನ್ಯಾಸಿಗಳಾಗಿ ಬಂದಾಗ ಅವರಿಗೆ ಬಂಧುಗಳ ಸಹಾಯವು ದೊರಕದೆಹೋಗಲೂಬಹುದು. ಆ ಕಥೆಯನ್ನೇ ಬೆಳೆಯಿಸಿ ಶಾಪದ ಕಥೆಯು ಹುಟ್ಟಿಕೊಂಡಿರಬಹುದೆಂದು ಕಾಣುತ್ತದೆ.

(೨) ಆಚಾರ್ಯರು ತಾವೇ ಅಂತ್ಯಕರ್ಮವನ್ನು ಮಾಡಿದರೆ ? ಇದನ್ನು ನಿಶ್ಚಯಿಸಿ ಹೇಳುವದು ಕಷ್ಟ. ಬಲತೋಳನ್ನು ಕಡೆದು ಅಗ್ನಿಯನ್ನು ತೆಗೆದುಕೊಂಡರೆಂದು ಬರೆದಿರುವದು ಆಚಾರ್ಯರ ಮಹಿಮೆಯನ್ನು ಹೊಗಳುವದ ಕ್ಕೆಂದು ಕಲ್ಪಿಸಿದ್ದಾಗಿರಬಹುದು. ಶವದ ಬಲದೋಳನ್ನು ಕಡೆದರೆ ಅಗ್ನಿಯು ಹುಟ್ಟುವದೆ?- ಇದನ್ನು ವ್ಯಾಖ್ಯಾನಕಾರರು ವಿಚಾರಮಾಡಿಲ್ಲ. ಕಲಿವರ್ಜ್ಯಗಳಲ್ಲಿ ಸೇರಿದ್ದ ಸಂನ್ಯಾಸವನ್ನು ಸ್ವೀಕರಿಸಿ ಉದ್ಧಾರಮಾಡಿದಂತೆಯೇ ಧರ್ಮಶಾಸ್ತ್ರಗಳನು ಧಿಕ್ಕರಿಸಿ ತಾಯಿಯ ಕ್ರಿಯೆಗಳನ್ನು ಮಾಡಿದರು. ಸಮಸ್ತಧರ್ಮಶಾಸ್ತ್ರಗಳೂ

ಸಮಸ್ತದೇಶಕಾಲಗಳಲ್ಲಿಯೂ ಪ್ರಮಾಣವೆಂದು ಅಂಗೀಕರಿಸುವದು ಅನುಚಿತ ಎಂಬ ಅಭಿಪ್ರಾಯವನ್ನು ಸೋಮನಾಥಯ್ಯನವರು (ಸೋ. ಶಂ ಪು. ೧೭೩) ಹೊರಗೆಡಹಿದ್ದಾರೆ. ಆಚಾರ್ಯರು ಕಲಿವರ್ಜ್ಯವಿಚಾರವನ್ನು ಭಾಷ್ಯಗಳಲ್ಲಿ ಎಲ್ಲಿಯೂ ಪ್ರಸ್ತಾಪಿಸಿಲ್ಲವೆಂಬ ಆಗಲೆ (ಪು. ೧೬೬) ಹೇಳಿದೇವೆ. ಧರ್ಮಶಾಸ್ತ್ರಗಳಿಗೆ ದೇಶಕಾಲಗಳ ಅಪೇಕ್ಷೆಯಿಂದ ಸಂಕೋಚವನ್ನು ಒಪ್ಪಿದರೂ ಸಂನ್ಯಾಸಿಯು ಕರ್ಮವನ್ನೂ ಮಾಡಬಹುದೆ ?–ಎಂಬುವಕ್ಕೆ ಅದು ಸಾಧಕವೂ ಅಲ್ಲ, ಬಾಧಕವೂ ಅಲ್ಲ. ವೇದಾಧ್ಯಯನವಿರುವವರೆಗೂ ಸಂನ್ಯಾಸಾದಿಗಳನ್ನು ಆಚರಿಸಬಹುದೆಂಬ ಧರ್ಮಶಾಸ್ತ್ರವಚನಗಳೂ ಇರುವದರಿಂದ ಸಂನ್ಯಾಸದ ವಿಷಯಕ್ಕೆ ಹೇಳಿರುವ ದಾದ ಯುಕ್ತಿಗಳು ಸಂನ್ಯಾಸಿಗಳು ಕರ್ಮವನ್ನು ಮಾಡಬಹುದೆಂಬುದಕ್ಕೆ ಸಾಧಕವಾಗಲಾರವು. ಹೀಗಿರುವದರಿಂದ ಈ ವಿಷಯವು ಇನ್ನಷ್ಟು ಪರಿಶೀಲನೆಯನ್ನು ಅಪೇಕ್ಷಿಸುತ್ತದೆ ಎಂದು ಹೇಳಬೇಕಾಗಿದೆ.

(೩) **ಆಚಾರ್ಯರು ಶಾಪವನ್ನು ಕೊಟ್ಟರೆ ? ಅದಕ್ಕೆ ರಾಜನ ಸಹಾಯವನ್ನು ಪಡೆದರೆ ?** ಕೇರಳದಲ್ಲಿ ಕಾಣಬರುವ ಕೆಲವು ಆಚಾರಗಳು ಇತರ ದೇಶಗಳ ಆಚಾರಗಳಿಗಿಂತ ವಿಲಕ್ಷಣವಾಗಿರುವದನ್ನು ಕಂಡು ಅದಕ್ಕೆ ಶಂಕರಶಾಪವನ್ನು ಯಾರೋ ಗಂಟುಹಾಕಿರಬಹುದೆಂದು ತೋರುತ್ತದೆ. ಶವಗಳನ್ನು ಅಂಗಳದಲ್ಲಿ ಸುಡುವ ಪದ್ಧತಿಯು ವಿಸ್ತಾರವಾದ ಬಯಲಿನಲ್ಲಿಯೇ ವಾಸಮಾಡುತ್ತಿರುವ ಜನರಿಂದ ಆ ದೇಶದಲ್ಲಿ ಬಹುಕಾಲದಿಂದ ಆಚರಣೆಯಲ್ಲಿರಬಹುದಾಗಿದೆ. ಕಾಲಮಹಿಮೆಯಿಂದ ಅಧ್ಯಯನಾದಿಗಳು ತಪ್ಪಿಹೋಗುವದು ಕೇರಳಕ್ಕೇನೂ ಮೀಸಲಲ್ಲ. ನಮ್ಮ ರಾಜರುಗಳು ಕೆಲವು ಧಾರ್ಮಿಕಸಾಮೂಹಿಕ ಆಚಾರಗಳ ವಿಷಯದಲ್ಲಿ ಕೈಹಾಕಿ ಶಾಸನಗಳಮೂಲಕ ಆಗಿಂದಾಗ್ಗೆ ಶಾಸನವನ್ನು ಮಾಡಿದ್ದುಂಟಾದರೂ ರಾಜಶೇಖರನೆಂಬ ರಾಜನು ಇದ್ದಿದ್ದರೆ– ಅವನು ಇದ್ದದ್ದೇ ವಿವಾದಗ್ರಸ್ತವೆಂದು ಆಗಲೆ ಹೇಳಿರುತ್ತೇವೆ– ಅವನು ಆಚಾರ್ಯರ ಅಪ್ಪಣೆಯನ್ನು ಪಾಲಿಸುವಷ್ಟುಮಟ್ಟಿಗೆ ಅವರ ಕೀರ್ತಿಯು ಆ ದೇಶದಲ್ಲಿಯೂ ಹಬ್ಬಿತ್ತು ಎಂದು ಪ್ರಮಾಣಾಂತರಗಳಿಂದ ಸಿದ್ಧವಾಗುವವರೆಗೆ ಶಾಪಾನುಸಾರವಾಗಿ ರಾಜನು ಶಾಸನವನ್ನು ಮಾಡಿದನೆಂದಾಗಲಿ ಶಾಂತಮೂರ್ತಿಗಳಾದ ಆಚಾರ್ಯರು ತಾವೂ ಶಾಸ್ತ್ರವನ್ನು ಧಿಕ್ಕರಿಸಿ ಅದನ್ನು ಆಕ್ಷೇಪಿಸಿದ ಬ್ರಾಹ್ಮಣರಿಗೆ ಶಾಪವನ್ನೂ ಕೊಟ್ಟರೆಂದಾಗಲಿ ನಂಬುವದು ಕಷ್ಟವಾಗಿರುತ್ತದೆ. ಮಾಧವಕವಿಯು ಆಚಾರ್ಯರು ಇಂಥ ಅಶಾಸ್ತ್ರೀಯಾಚರಣೆಯನ್ನು ಏಕೆ ಮಾಡಿದರೆಂದು ಶಂಕಿಸಿಯಾರೆಂದು–

ಯದ್ಯಪ್ಯಶಾಸ್ತ್ರೀಯಮತದಾ ವಿಭಾತಿ ತೇಜಸ್ವಿನಾಂ ಕರ್ಮ ತಥಾಪ್ಯನಿನ್ದ್ಯಮ್ ।
ವಿನಿನ್ದ್ಯಕೃತ್ಯಂ ಕಿಲ ಭಾರ್ಗವಸ್ಯ ದಮಃ ಸ್ವಪುತ್ರಾನ್ ಕಿಚಿದ್ ವ್ಯಕಾಯ ॥

(ಮಾ. ಶಂ. ೧೪–೫೩)

ತೇಜಸ್ವಿಗಳಾದವರ ಕರ್ಮವು ಅಶಾಸ್ತ್ರೀಯವೆಂದು ತೋರಿದರೂ ಅದು ನಿಂದ್ಯವಲ್ಲ. ಪರಶುರಾಮನು ತಾಯಿಯನ್ನು ಕೊಂದನಲ್ಲವೆ ? ಕೆಲವರು ಮುನಿಗಳು ತಮ್ಮ ಮಕ್ಕಳನ್ನೇ ತೋಳಕ್ಕೆಕೊಟ್ಟರಂತಲ್ಲ !' ಎಂದು ಆಚಾರ್ಯರ ಕೃತ್ಯವನ್ನು ಮಂಡನಮಾಡಿರುತ್ತಾನೆ. ಅಂತೂ ಈ ಅಂತ್ಯಕರ್ಮ ಮತ್ತು ಆಚಾರ್ಯರು ಕೊಟ್ಟ ಶಾಪ- ಇವೆರಡೂ ಇನ್ನೂ ಪರಿಶೀಲನೀಯವೇ ಆಗಿ ಉಳಿದಿವೆ ಎನ್ನುವದು ಯುಕ್ತ.

ಒಟ್ಟಿನಲ್ಲಿ ಆಚಾರ್ಯರು ತಾಯಿಯ ಅಂತ್ಯಕಾಲಕ್ಕೆ ಸರಿಯಾಗಿ ದೂರದೇಶದಿಂದ ಬಂದೊದಗಿದರು ಎಂಬುದಕ್ಕೆ ಎಲ್ಲರ ಸಂಮತಿಯಿದೆ. ಅವರ ನಿರುಪಮ ಮಾತೃಭಕ್ತಿಗೆ ಅದೊಂದು ನಿದರ್ಶನವೆಂಬುದರಲ್ಲಿ ಸಂಶಯವಿಲ್ಲ.

# ೧೫. ಆಚಾರ್ಯರ ದಿಗ್ವಿಜಯ

## ಶೃಂಗೇರಿಯಿಂದ ಕಾಂಚಿಗೆ

೧೩೭. ಈಗ ಆಚಾರ್ಯರು ತಮ್ಮ ಮತವನ್ನು ಭರತಖಂಡದಲ್ಲೆಲ್ಲ ಹರಡುವ ಸಂಕಲ್ಪವುಳ್ಳವರಾದರು (ಮಾ. ಶಂ. ೧೪-೧೫). ಸಾವಿರ ಶಿಷ್ಯರೊಡನೆಯೂ ಸುಧನ್ವರಾಜನೊಡನೆಯೂ ಮೊದಲು ರಾಮಸೇತುವಿಗೆ(ರಾಮೇಶ್ವರಕ್ಕೆ) ಹೋದರು. ಅಲ್ಲಿ ಶಾಕ್ತರೊಡನೆ ವಿವಾದವಾಯಿತು. ಅಲ್ಲಿಯ ಜನರನ್ನು ಕರ್ಮಮಾರ್ಗಕ್ಕೆ ತಿರುಗಿಸಿ, ರಾಮನಾಥನನ್ನು ಅರ್ಚಿಸಿದ ಬಳಿಕ ಪಾಂಡ್ಯರನ್ನೂ ಚೋಳರನ್ನೂ ದ್ರವಿಡರನ್ನೂ ವಶಗೊಳಿಸಿಕೊಂಡು ಹಸ್ತಿಗಿರಿಯ ಒಡ್ಯಾಣದಂತಿದ್ದ ಕಾಂಚಿಗೆ ಹೋದರು (ಮಾ. ಶಂ. ೧೫-೧ರಿಂದ ೪). ಅಲ್ಲಿ 'ಪರವಿದ್ಯಾಚರಣಾನುಸಾರಿಯಾದ' (?) ಚಿತ್ರವುಳ್ಳ ದೇವಾಲಯವನ್ನು ಮಾಡಿಸಿ ತಾಂತ್ರಿಕರನ್ನು ಹೊರಡಿಸಿ ಭಗವತೀ ಕಾಮಾಕ್ಷಿಗೆ ಶ್ರುತಿಸಮ್ಮತವಾದ ಪೂಜೆಯನ್ನು ಏರ್ಪಡಿಸಿದರು (ಮಾ. ಶಂ. ೧೫-೫).

ಚಿದ್ವಿಲಾಸೀಯದಂತೆ : ಶಂಕರಾಚಾರ್ಯರು ವರಾಹಪರ್ವತದಲ್ಲಿದ್ದ ತೀರ್ಥಗಳನ್ನು ನೋಡಿ, ತುಂಗಭದ್ರೆಯ ಮೂಲವನ್ನು ದರ್ಶನಮಾಡಿಕೊಂಡು ನರಸಿಂಹಪರ್ವತದಲ್ಲಿ ನಾರಸಿಂಹನನ್ನು ಸಾಕ್ಷಾತ್ಕರಿಸಿಕೊಂಡು ಆ ಪರ್ವತದ ಕೆಳಗೆ ಋಷ್ಯಶೃಂಗಮಹೇಶ್ವರನನ್ನು ದರ್ಶನಮಾಡಿಕೊಂಡು ಆತನ ಆಜ್ಞೆಯನ್ನು ಪಡೆದುಕೊಂಡು ವರದರಾಜನ ರಾಜಧಾನಿಯಾದ ಕಾಂಚಿಗೆ ಬಂದರು. ಬ್ರಹ್ಮನು ವಿಷ್ಣುವನ್ನು ಕುರಿತು ಯಾಗಮಾಡಲು ವಿಷ್ಣುವು ಯಜ್ಞಕುಂಡದಿಂದ ಹೊರಕ್ಕೆ ಬಂದು ದರ್ಶನವನ್ನು ಕೊಟ್ಟ ಸ್ಥಲವದು. ಒಂದು ಗುಹೆಯಲ್ಲಿ ಸಗುಣನಿರ್ಗುಣರೂಪಳಾದ ರುದ್ರಶಕ್ತಿ ಇರುತ್ತಾಳೆ. ಅಲ್ಲಿ ಒಂದು ಪಟ್ಟಣವನ್ನು ನಿರ್ಮಾಣಮಾಡಿಸಬೇಕೆಂದು ಆಚಾರ್ಯರು ಬಯಸಿದರು. ಅಲ್ಲಿಯ ರಾಜಸೇನನೆಂಬ ರಾಜನು ಆಚಾರ್ಯರ ಇಚ್ಛೆಯಂತೆ ಏಕಾಮ್ರೇಶ್ವರ ದೇವಾಲಯವನ್ನು ಕಾಮಾಕ್ಷಿಯ ಪಾರ್ಶ್ವದಲ್ಲಿಯೇ ನಿರ್ಮಿಸಿ ಶಿವಕಾಂಚಿಯನ್ನೂ ವರದರಾಜನ ದೇವಾಲಯದ ಸಮೇತವಾದ ವಿಷ್ಣುಕಾಂಚಿಯನ್ನೂ ಎಂಟೇದಿನಗಳಲ್ಲಿ ನಿರ್ಮಾಣಮಾಡಿಸಿದನು (೨೫-೧ರಿಂದ ೧೧ ; ೨೪ರಿಂದ ೩೧)' ಆಚಾರ್ಯರು ಶ್ರೀಚಕ್ರವನ್ನು ತಾವೇ ಬರೆದರು, ಚಕ್ರದ ಹಿಂದೆ ಕಾಮಾಕ್ಷಿಯನ್ನು ಪ್ರತಿಷ್ಠೆಮಾಡಿಸಿ ಏಕಾಮ್ರೇಶ್ವರ, ವರದರಾಜ– ಇವರ ಪೂಜೆಗೆ ಏರ್ಪಾಡುಮಾಡಿಸಿದರು (ಚಿ. ಶಂ. ೨೫–೪೪ರಿಂದ ೫೫).

**ಆನಂದಗಿರೀಯದಂತೆ :** ಅಹೋಬಿಲವೆಂಬ ನರಸಿಂಹನ ಆವಿರ್ಭಾವ ಸ್ಥಲಕ್ಕೆ ಹೋಗಿ ಅಲ್ಲಿ ನೃಸಿಂಹನನ್ನು ಸ್ತೋತ್ರಮಾಡಿ, ಅಲ್ಲಿಂದ ವೇಂಕಟಗಿರಿಗೆ ಹೋಗಿ ಅಲ್ಲಿದ್ದ ಅರ್ಚಕರನ್ನು ಅದ್ವೈತಪರರನ್ನಾಗಿ ಮಾಡಿ ಅಲ್ಲಿಂದ ಕಾಂಚಿಗೆ ಹೋದರು. ಅಲ್ಲಿ ಪೃಥಿವೀಮೂರ್ತಿಯಿಂದ ಆವಿರ್ಭೂತವಾದ ಲಿಂಗದ ರೂಪದಿಂದ ಏಕಾಮ್ರೇಶನು ಇರುತ್ತಾನೆ. ಅಲ್ಲಿ ಒಂದು ತಿಂಗಳವರೆಗೆ ಇದ್ದು ಶಂಕು ಪ್ರತಿಷ್ಠಾಪೂರ್ವಕವಾಗಿ ಶಿವಕಂಚಿ ಎಂಬ ಪಟ್ಟಣವನ್ನು ನಿರ್ಮಿಸಿ ಅದರ ಮೂಡಲಲ್ಲಿ ಬ್ರಹ್ಮನು ಮಾಡಿದ ಯಜ್ಞದಲ್ಲಿ ಯಜ್ಞಕುಂಡದಿಂದ ಎದ್ದ ವರದರಾಜನ ಬಳಿಯಲ್ಲಿ ವಿಷ್ಣುಕಂಚಿಯನ್ನು ಕಟ್ಟಿಸಿದರು. ಆ ದೇವರುಗಳ ಸೇವಾರ್ಥವಾಗಿ ಭಕ್ತರಾದ ಬ್ರಾಹ್ಮಣಾದಿಗಳನ್ನು ನಿಯಮಿಸಿ ಅವರನ್ನು ಶುದ್ಧಾದ್ವೈತಾನುವರ್ತಿಗಳನ್ನಾಗಿ ಮಾಡಿ ಸರ್ವವೇದಾಂತತಾತ್ಪರ್ಯನಿಷ್ಠರಾಗಿ ಸುಖವಾಗಿದ್ದರು. (ಆ. ಶಂ. ೬೩, ಪು. ೨೨೫ ; ದೇ. ಪು. ೧೯೨) ಕಾಮಾಕ್ಷಿವಿಚಾರವು ಇಲ್ಲಿ ೬೪ನೆಯ ಪ್ರಕರಣದಲ್ಲಿಯೂ ಶ್ರೀಚಕ್ರವಿಚಾರವು ೬೫ನೆಯ ಪ್ರಕರಣದಲ್ಲಿಯೂ ಇದೆ.

## ಕಾಂಚಿಯವರೆಗಿನ ಯಾತ್ರೆಯ ವಿಮರ್ಶೆ

೧೩೭. ಇಲ್ಲಿಯವರೆಗಿನ ಯಾತ್ರೆಯ ವಿವರವು ಶಂಕರವಿಜಯಗಳಲ್ಲಿ ಒಂದೇ ರೀತಿಯಲ್ಲಿ ವರ್ಣಿತವಾಗಿಲ್ಲ. (೧) ಆಚಾರ್ಯರು ಸುಧನ್ವರಾಜನೊಡನೆಯೂ ಸಾವಿರ ಶಿಷ್ಯರೊಡನೆಯೂ (ಮಾ. ಶಂ. ೧೫-೧) ದಿಗ್ವಿಜಯಕ್ಕೆ ಹೊರಟರು –ಎಂದು ಮಾಧವನು ಹೇಳಿರುವದು ಮತ್ತೆ ಯಾವ ಶಂಕರವಿಜಯದಲ್ಲಿಯೂ ಇಲ್ಲ. (೨) ರಾಮಸೇತುವಿನಲ್ಲಿ ಶಾಕ್ತೇಯರೊಡನೆ ವಾದಮಾಡಿದರೆಂಬುದೂ ನಿಶ್ಚಿತವಲ್ಲ. (೩) ಕಾಂಚಿಯಲ್ಲಿರುವದು ಏಕಾಮ್ರನೋ ಏಕಾಂಬರನೋ ನಿಶ್ಚಯವಾಗಿ ತಿಳಿಯದು[1] ; ಏಕಾಂಬರಶಬ್ದದ ಅಪಭ್ರಂಶವೇ 'ಏಕಾಮ್ರ'ನಾಗಿರಬೇಕೆಂದು ಸೋಮನಾಥಯ್ಯನವರು (ಸೋ. ಶಂ. ಪು. ೧೭೭) ಊಹಿಸಿರುತ್ತಾರೆ. ಏಕಾಮ್ರೇಶ್ವರನ ದೇವಾಲಯದಲ್ಲಿರುವ ಒಂದು ಮಾವಿನ ಮರವು ವೇದವೃಕ್ಷವೆಂದೂ ಆ ಗಿಡದಲ್ಲಿ ಪ್ರತಿದಿನವೂ ಸ್ವಾಮಿಯ ನೈವೇದ್ಯಕ್ಕೆ ಒಂದೊಂದು ಹಣ್ಣು ಸಿಕ್ಕುತ್ತಿದ್ದ ಕಾರಣದಿಂದ ಆ ಲಿಂಗಕ್ಕೆ ಏಕಾಮ್ರೇಶ್ವರನೆಂಬ ಹೆಸರಾಯಿತೆಂದೂ ಒಂದು ಐತಿಹ್ಯವಿದೆಯಂತೆ ! (ಸೋ. ಶಂ. ಪು. ೧೭೭).

ಕಾಂಚೀಪಟ್ಟಣವು ಹಸ್ತಿಗಿರಿಯ ಕಾಂಚಿ ಎಂದು ಮಾಧವನು (ಮಾ. ಶಂ. ೧೫-೪) ವರ್ಣಿಸಿರುವದು ರೂಪಕಕ್ಕೂ ಪ್ರಾಸಕ್ಕೂ ಹೊಂದಿಕೆಯಾಗಿರಬಹು

---

1. ತೆಲುಗು ಪುಸಕ್ತದಲ್ಲಿ 'ಏಕಾಮ್ರೇಶ'ನೆಂದಿದೆ (ಪು. ೨೨೫) ದೇ॥ಪಾಠದಲ್ಲಿ 'ಅಂಬರೇಶ' (ಪು. ೧೯೨) ಎಂದಿದೆ. ಸೋಮನಾಥಯ್ಯನವರ ಪುಸ್ತಕಪಾಠವು ಏಕಾಮ್ಬರೇಶ' (!)

ಪಾಪವೂ ಅಲ್ಲಿ ಯಾವ ಪರ್ವತವೂ ಇಲ್ಲ. ವರದರಾಜಸ್ವಾಮಿಯು ಹಸ್ತಿಗಿರಿ ಅಥವಾ ಕರಿಗಿರಿ ಎಂಬ ಪರ್ವತದಮೇಲೆ ಇದೆ ಎಂದು ವೈಷ್ಣವರು ಹೇಳುತ್ತಿದು ವವನ್ನು ಕೇಳಿ ಕವಿಯು ಹೀಗೆಂದು ಬರೆದಿರಬಹುದೆಂತ ಸೋಮನಾಥಯ್ಯನವರ ಊಹೆ (ಸೋ. ಶಂ. ೧೭೬). ಶಿವಕಾಂಚಿಯಲ್ಲಿ ಕಾಮಾಕ್ಷೀಪೂಜೆಯು ಇಂದಿನ ವರೆಗೂ ನಡೆಯುತ್ತಿರುವದರಿಂದ ಆಚಾರ್ಯರು ಅಲ್ಲಿ ನಡೆಯುತ್ತಿದ್ದ ತಾಂತ್ರಿಕ ಪೂಜೆಯನ್ನು ನಿರ್ಮೂಲೀಕರಿಸಿದರೆಂಬುದನ್ನು ನಾವು ನಂಬಬಹುದು.

(೫) ಚಿದ್ವಿಲಾಸರಿಗೆ ಶ್ರೀಚಕ್ರದಲ್ಲಿ ಬಹಳ ಅಕ್ಕರೆ. ಕಾಂಚಿ ವಿಷಯದಲ್ಲಿಯೂ ಅದನ್ನು ವರ್ಣಿಸುವಾಗ ಅದರ ವಿವರವನ್ನು ಎಂಟು ಶ್ಲೋಕ ಗಳಿಂದ ಕೊಟ್ಟು 'ತಸ್ಮಾನ್ಮುಮುಕ್ಷುಭಿಃ ಕಾರ್ಯಂ ಶ್ರೀಚಕ್ರಾರ್ಚನಮನ್ವಹಮ್| ಶಿವಶಕ್ತ್ಯೈಕರೂಪತ್ವಾನ್ನಿರ್ಮಿತಂ ದೇಶಿಕೇನ ತತ್ ||' (ಚಿ. ಶಂ. ೨೫-೪೩) 'ಆದ್ದರಿಂದ ಮುಮುಕ್ಷುಗಳು ಪ್ರತಿದಿನವೂ ಶ್ರೀಚಕ್ರಾರ್ಚನವನ್ನು ಮಾಡಬೇಕು. ಶಿವಶಕ್ತಿಗಳ ಏಕರೂಪತ್ವವನ್ನು ತಿಳಿಸುವದರಿಂದ ಅದನ್ನು ಗುರುಗಳು ನಿರ್ಮಿಸಿರುತ್ತಾರೆ' ಎಂದೂ ಹೇಳಿರುತ್ತಾರೆ. ಆ ಪ್ರಾಂತದಲ್ಲಿ ಶಿವ, ಶಕ್ತಿ– ಈ ಇಬ್ಬರ ಭೇದದ ವಿಷಯಕ್ಕೆ ಹೊಡೆದಾಟವಿದ್ದ ಆಚಾರ್ಯರೋ, ಅವರಿಂದೀಚಿನ ಯಾರೋ ಒಬ್ಬರೋ ಶಿವ, ಶಕ್ತಿ– ಇಬ್ಬರೂ ಒಂದೇ ಎಂದು ಉಪದೇಶಿಸಿ ಜಗಳವನ್ನು ನಿಲ್ಲಿಸಿರಬೇಕೆಂದು ಇದರಿಂದ ಕಲ್ಪಿಸಬಹುದು. ಆನಂದ ಗಿರೀಯದಲ್ಲಿ ಕಾಮಾಕ್ಷಿ ಎಂದರೆ 'ಭಗವತೀ ಚಿದ್ರೂಪಿಣೀ ಬ್ರಹ್ಮವಿದ್ಯಾ ರುದ್ರ ಶಕ್ತಿಃ' (ಪು. ೨೨೫; ದೇ. ಪು. ೧೯೪), 'ಶೈವಾನಾಮಪಿ ಶಾಕ್ತಾನಾಂ ಚಕ್ರಾಣಾಂ ಚ ಪರಸ್ಪರಮ್ | ಅವಿನಾಭಾವಸಂಬನ್ಧಂ ಯೋ ಜಾನಾತಿ ಸ ಸರ್ವವಿತ್' (ಪು. ೨೩೦ ; 'ಚಕ್ರವಿತ್' ದೇ. ಪು. ೧೯೬) ಎಂದಿದೆ. ಈ ಶ್ಲೋಕವನ್ನು ಚಿದ್ವಿಲಾಸರೂ (ಚಿ. ಶಂ. ೨೫-೪೦) ಉದಾಹರಿಸಿರುತ್ತಾರಾದ್ದರಿಂದ ಅವರು ಆನಂದಗಿರೀಯದಿಂದ ಅದನ್ನು ತೆಗೆದುಕೊಂಡಿರಬೇಕು ; ಅಥವಾ ಇಬ್ಬರೂ ಬೇರೊಂದು ಗ್ರಂಥದಿಂದಲೂ ತೆಗೆದುಕೊಂಡಿರಬಹುದು. ಮಾಧವಕವಿಯೂ ಹನ್ನೆರಡನೆಯ ಸರ್ಗದಲ್ಲಿ ಆಚಾರ್ಯರು ಮೂಕಾಂಬಿಕಾಸ್ತೋತ್ರವನ್ನು ಮಾಡಿದ ರೆಂದು ವರ್ಣಿಸುವ ಸಂದರ್ಭದಲ್ಲಿ 'ಶ್ರೀಚಕ್ರಷಟ್ಚಕ್ರಕಯೋಃ ಪುರೋಽಥ ಶ್ರೀಚಕ್ರಮನ್ವೋರಪಿ ಚಿನ್ತಿತೈಕ್ಯಮ್' ಎಂದು ಶ್ರೀಚಕ್ರವನ್ನು ಪರಾಮರ್ಶಿಸಿರು ತ್ತಾನೆ. ವ್ಯಾಖ್ಯಾನಕಾರನಂತೂ ಆನಂದಗಿರಿಯಿಂದ ಧಾರಾಳವಾಗಿ ಉದಾಹರಿ ಸುವ ಸ್ವಭಾವದವನಾದ್ದರಿಂದ ಎಂಟು ಶ್ಲೋಕಗಳನ್ನು ಹಾಕಿದಾನೆ ; ಅವುಗಳಲ್ಲಿ 'ಶೈವಾನಾಮಪಿ ಶಾಕ್ತಾನಾಮ್' ಎಂಬ ಪ್ರಕೃತಶ್ಲೋಕವೂ ಇದ್ದೇ ಇದೆ.

(೬) ಆಚಾರ್ಯರು ಆನಂದಗಿರಿಚಿದ್ವಿಲಾಸರು ಹೇಳುವಂತೆ ಶಿವಕಂಚಿ, ವಿಷ್ಣುಕಂಚಿ– ಎಂಬ ಪುರಿಗಳನ್ನು ನಿರ್ಮಿಸಿದರೆ ? ಕಂಚಿಯು ದಕ್ಷಿಣದಲ್ಲೊಂದು

ಮಹಾವಿದ್ಯಾಸ್ಥಾನವಾಗಿದ್ದು ಬ್ರಾಹ್ಮಣರಿಗೂ ಬೌದ್ಧರಿಗೂ, ಬೌದ್ಧರಿಗೂ ಜೈನರಿಗೂ, ಜೈನರಿಗೂ ಬ್ರಾಹ್ಮಣರಿಗೂ, ಅದ್ವೈತಿಗಳಿಗೂ ವಿಶಿಷ್ಟಾದ್ವೈತಿಗಳಿಗೂ, ತೆಂಕಲೆಯುವರಿಗೂ ವಡಕಲೆಯುವರಿಗೂ ವಾಗ್ವಾದಗಳು ಬಿಡದೆ ನಡೆದಿರುವ ಸ್ಥಳ. ಇಲ್ಲಿರುವ ದೇವಸ್ಥಾನಗಳು ಪಲ್ಲವರಿಂದ ಕಟ್ಟಲ್ಪಟ್ಟವೆಂಬುದಕ್ಕೆ ಗುರುತುಗಳಿವೆಯಂತೆ. ಇಲ್ಲಿ ಹಿಂದಕ್ಕೆ ಶೈವಮತವು ಹರಡಿತ್ತೆಂಬುದಕ್ಕೆ ಗುರುತಾಗಿ ಊರಸುತ್ತಲಿನ ಬಯಲಿನಲ್ಲಿ ಲಿಂಗಗಳು ಪಾಣಿಪಟ್ಟಗಳು, ಬಸವಣ್ಣಗಳು- ಇವುಗಳ ಅವಶೇಷಗಳು ಹೇರಳವಾಗಿ ಕಾಣಬರುತ್ತಿರುವದೇ ಸಾಕ್ಷಿ. ಶಿವಕಂಚಿ (ದೊಡ್ಡಕಂಚಿ), ವಿಷ್ಣುಕಂಚಿ (ಚಿಕ್ಕಕಂಚಿ)-ಇವು ಒಂದಕ್ಕೊಂದು ನಾಲ್ಕು ಮೈಲಿಗಳ ಅಂತರದಲ್ಲಿವೆ. ಇವುಗಳ ನಡುವೆ ಒಂದು ಕಾಡು ಇತ್ತು; ಈಗಿರುವ ಹಡ್ಸನ್ ಪೇಟೆಯು ನಿರ್ಮಿತವಾಗಿ ಸುಮಾರು ನೂರೈವತ್ತು ವರ್ಷಗಳಾಗಿರಬಹುದು. ಶಿವಕಂಚಿಯಕಡೆಗೇ ಊರು ದೊಡ್ಡಪಟ್ಟಣವಾಗಿದ್ದಿರಬೇಕು. ಶಿವಕಂಚಿಯಲ್ಲಿ ಸಿಕ್ಕುವ ಶಾಸನಗಳಲ್ಲಿ 'ಕಂಚಿ' ಎಂಬ ಸಾಮಾನ್ಯನಾಮವೇ ಇದೆ ; 'ಶಿವಕಂಚಿ' ಎಂಬ ವಿಶೇಷಣಯುಕ್ತನಾಮವು ಕಾಣಬರುವದಿಲ್ಲ; ವಿಷ್ಣುಕಂಚಿಯಬಳಿ ಸಿಕ್ಕುವ ಶಾಸನಗಳಲ್ಲಿ ಕಂಚಿ ಎಂಬ ಹೆಸರೇ ಕಾಣಬರುವದಿಲ್ಲ ; ಈ ಸ್ಥಲಕ್ಕೆ ಹಿಂದಕ್ಕೆ 'ತಿರುವತ್ತಿಯೂರು' ಎಂಬ ಹೆಸರು ಇತ್ತೆಂದು ತಿಳಿಯಬಂದಿದೆ. ಶಾ. ಶ. ೧೪೫೨ರವರೆಗೂ ಆ ಹೆಸರೇ ಇದ್ದಂತೆ ಕಾಣುತ್ತದೆ. ವರದರಾಜಸ್ವಾಮಿಯ ದೇವಾಲಯದ ಮಹಾದ್ವಾರವು ಪಶ್ಚಿಮಮುಖವಾಗಿದ್ದು ಇದರಮೇಲೆ ಒಂದು ಚಿಕ್ಕ ಗೋಪುರವಿದೆ. ಗರ್ಭಗೃಹವೂ ಸ್ವಾಮಿಯ ವಿಗ್ರಹವೂ ಎತ್ತರವಾದ ಜಗಲಿಯಮೇಲೆ ಪೂರ್ವಾಭಿಮುಖವಾಗಿದೆ. ಇವುಗಳ ಎದುರಿಗೆ ಪೂರ್ವದಿಕ್ಕಿನ ಹೊರಗಿನ ಪ್ರಾಂತದ ಮಹಾದ್ವಾರದ ಗೋಪುರವು ಅತ್ಯುನ್ನತವಾಗಿದೆ ; ಅದಕ್ಕೆ 'ಪುಣ್ಯಕೋಟಿ' ವಿಮಾನವೆಂದು ಹೆಸರು. ಸುತ್ತಲೂ ಗೋಡೆಗಳನ್ನು ಹಾಕಿ ಕಟ್ಟಿರುವ ಆ ಜಗಲಿಯ ಒಳಗೆ 'ಹಸ್ತಿಗಿರಿ' ಎಂಬ ಬೆಟ್ಟವು (?) ಇದೆ ಎಂದೂ ಹೇಳುತ್ತಾರೆ ; ಈ ದೇವಸ್ಥಾನವನ್ನು ಕಟ್ಟಿದಾಗ ಪೂರ್ವಾಭಿಮುಖವಾಗಿಯೇ ಇದ್ದು ತಿರುವತ್ತಿಯೂರೆಂಬ ಗ್ರಾಮವು ದೇವಸ್ಥಾನದ ಪೂರ್ವದಿಕ್ಕಿನಲ್ಲಿ ಇದ್ದಿರಬಹುದೆಂದೂ ಆ ಮೂಡು ಹಾಳಾದಮೇಲೆ ದೇವರಪೂಜೆಯು ನಿಂತುಹೋಗಿರಬಹುದೆಂದೂ ಮುಂದಕ್ಕೆ ಶ್ರೀವೈಷ್ಣವರು ಪಾಳುಬಿದ್ದಿದ್ದ ಗುಡಿಯನ್ನು ಜೀರ್ಣೋದ್ಧಾರಮಾಡಿ ಮೇಲಿನ ಅಂತರಾಳಗರ್ಭಾಗಾರವನ್ನು ಗೋಡೆಗಳಿಂದ ಮುಚ್ಚಿ ಅವುಗಳಮೇಲೆ ಹೊಸ ಗರ್ಭಗೃಹವನ್ನು ಕಟ್ಟಿ ಶ್ರೀವರದರಾಜಸ್ವಾಮಿಯನ್ನು ಪ್ರತಿಷ್ಠೆಮಾಡಿಸಿರಬಹುದೆಂದೂ ಈಚೆಗೆ ಪಶ್ಚಿಮದಿಕ್ಕಿನಲ್ಲಿ ಹೊಸ ಊರು ಹುಟ್ಟಿಕೊಳ್ಳಲಾಗಿ ಮಹಾದ್ವಾರವು ಊರಿನ ಒಳಗೆ ಇಲ್ಲದೆ ಹೊರಗೆ ಇದ್ದುದ್ದರಿಂದ ಊರಿನವರು ಗುಡಿಯೊಳಕ್ಕೆ ಹೋಗುವದಕ್ಕೆ ಅನುಕೂಲವಾಗುವಂತೆ ಪಶ್ಚಿಮದ ಗೋಡೆಯನ್ನೊಡೆದು

ದ್ವಾರನಮಾಡಿ ಆಲ್ಲೊಂದು ಮಹಾದ್ವಾರವನ್ನು ಕಟ್ಟಿ ಅದರಮೇಲೆ ಒಂದು ಗೋಪುರವನ್ನು ಕಟ್ಟಿರಬಹುದೆಂದೂ ಇತ್ತೀಚೆಗೆ ಶ್ರೀರಾಮಾನುಜಾಚಾರ್ಯರಿಂದ ಮುಂಪಕ್ಕೆ ಬಹ್ವಾಭ್ಯುಸ್ಥಿತಿಗೆ ಬಂದು ಊರು ಕಂಚಿಗೆ ಸಮೀಪದಲ್ಲಿದ್ದದ್ದರಿಂದ ಚಿಕ್ಕ ಕಂಚಿಯೆಂದೂ ವಿಷ್ಣುದೇವಸ್ಥಾನವೂ ಶ್ರೀವೈಷ್ಣವರೂ ಪ್ರಬಲವಾಗಿದ್ದದ್ದರಿಂದ ವಿಷ್ಣುಕಂಚಿಯೆಂದೂ ಹೆಸರಿಟ್ಟಿರಬಹುದೆಂದೂ ತಿರು- ಅತ್ತಿ- ಊರು ಎಂಬ ಹೆಸರನ್ನು ಸಂಸ್ಕೃತಕ್ಕೆ ತಿರುಗಿಸಿ ಶ್ರೀಹಸ್ತಿಗಿರಿ ಎಂಬ ನಾಮಧೇಯವನ್ನಿಟ್ಟಿರಬಹುದೆಂದೂ ಸೋಮನಾಥಯ್ಯನವರು (ಸೋ. ಶಂ. ಪು.೧೭೧) Topographical Notes on Kanehi by the late S. M. Natesha Sastriar (1886)-ಎಂಬ ಇಂಗ್ಲಿಷುಗ್ರಂಥದ ಆಧಾರದಿಂದ ಬರೆದಿರುತ್ತಾರೆ. ಕಂಚಿಗಳೆರಡನ್ನೂ ನಾವೂ ಸ್ವತಃ ನೋಡಿರುತ್ತೇವೆ ; ವಿಷ್ಣುಕಂಚಿಯ ದೇವಸ್ಥಾನವು ವಿಲಕ್ಷಣವಾಗಿ ನಿರ್ಮಿತವಾಗುವದಕ್ಕೆ ಕಾರಣವೇನೆಂಬುದು ಮಾತ್ರ ನಮಗೆ ಸೋಮನಾಥಯ್ಯನವರಿಂದಲೇ ತಿಳಿದುಬಂದದ್ದು.

ಈ ಮೇಲಿನ ವಿವರಣೆಯಿಂದ ಆನಂದಗಿರಿ, ಚಿದ್ವಿಲಾಸ- ಇವರಿಬ್ಬರೂ ವಿಷ್ಣುಕಂಚಿ ಎಂಬ ಹೆಸರು ರೂಢಿಗೆ ಬಂದ ಬಳಿಕವೇ ತಮ್ಮ ಶಂಕರವಿಜಯಗಳನ್ನು ರಚಿಸಿರಬೇಕೆಂದು ಸೋಮನಾಥಯ್ಯನವರು (ಸೋ.ಶಂ.ಪ್ರ. ೧೮೭) ಕಲ್ಪಿಸಿರುವದು ನಮಗೂ ವಿಶ್ವಸನೀಯವಾಗಿ ತೋರುತ್ತದೆ.

## ಆಚಾರ್ಯರು ವೇಂಕಟಗಿರಿಗೆ ಹೋದದ್ದು

೧೩೮. ತಮ್ಮ ಚರಣಸೇವೆಗೆಂದು ಬಂದ ಆಂಧ್ರರನ್ನು ಅನುಗ್ರಹಿಸಿ ವೇಂಕಟಾಚಲೇಶ್ವರನನ್ನು ನಮಸ್ಕರಿಸಿ ಆಚಾರ್ಯರು ವಿದರ್ಭರಾಜಧಾನಿಗೆ ಹೋದರು (ಮಾ. ಶಂ. ೧೫-೬) ಎಂದು ಮಾಧವಕವಿಯ ವರ್ಣನೆ.

ಚಿದ್ವಿಲಾಸೀಯದಲ್ಲಿ ಹೀಗಿದೆ : ಸಶಿಷ್ಯರಾಗಿ ವೇಂಕಟೇಶನನ್ನು ನೋಡುವದಕ್ಕೆಂದು ಹೊರಟ ಆಚಾರ್ಯರು ಗೋವಿಂದರಾಜೇಶ್ವರನನ್ನು ನಮಸ್ಕರಿಸಿ ಬೆಟ್ಟವನ್ನು ಹತ್ತಿ ಪುಷ್ಕರಿಣಿಯಲ್ಲಿ ಸ್ನಾನಮಾಡಿ, ವೇಂಕಟೇಶ್ವರನನ್ನು ದರ್ಶನಮಾಡಿ ಸ್ತುತಿಸಿ ಅಲ್ಲಿರುವ ಅರ್ಚಕರು ಶ್ರೌತಮಾರ್ಗವನ್ನು ಬಿಟ್ಟು ವೈಖಾನಸಾಗಮಾಚಾರದವರಾದ್ದರಿಂದ ಅವರನ್ನು ಶುದ್ಧಾದ್ವೈತಪರರಾಗಿ ಮಾಡಿದರು.[1]

1. ವೈಖಾನಸರು ಅವೈದಿಕರಲ್ಲ- ಎಂಬುದು ಅವರ ಧರ್ಮಸೂತ್ರಗ್ರಂಥಗಳಿಂದ ಗೊತ್ತಾಗುತ್ತದೆ "ವೈಖಾನಸರ ಧ್ಯೇಯ'' ಎಂಬ ಲೇಖನದಲ್ಲಿ ಈ ವಿಚಾರವನ್ನು ವಿಶದವಾಗಿ ವಿವರಿಸಿದೆ. ಅಧ್ಯಾತ್ಮಪ್ರಕಾಶಪತ್ರಿಕೆಯ ೧೦ನೇ ಸಂಪುಟ ೫ನೇ ಸಂಚಿಕೆಯ (ಪುಟ೬೩)ವನ್ನು ನೋಡಿರಿ.

ಆನಂದಗಿರಿಯು ಈ ಮೊದಲೇ ಆಚಾರ್ಯರು ವೇಂಕಟಗಿರಿಗೆ ಹೋಗಿದ್ದಂತೆ ವರ್ಣಿಸಿರುವವನ್ನು ಹಿಂದೆ (ಪು. ೨೩೭ರಲ್ಲಿ) ತಿಳಿಸಿರುತ್ತೇವೆ. ಅಲ್ಲಿಂದ ಆಚಾರ್ಯರು ಕಾಂಚಿಗೆ ಹೋದರೆಂದು ಆತನು ಹೇಳಿರುತ್ತಾನೆ.

(೧) ಆನಂದಗಿರಿಯು ಪರಾಮರ್ಶಿಸಿದ ವೇಂಕಟಗಿರಿಯು ವೇಂಕಟಾಚಲವೇ ಆಗಿದ್ದರೆ ಆತನಿಗೆ ಸ್ಥಲವು ಎಲ್ಲಿತ್ತೆಂಬುದು ನಿರ್ದಿಷ್ಟವಾಗಿ ತಿಳಿದಿರಲಿಲ್ಲವೆಂದು ಹೇಳಬೇಕಾಗುತ್ತದೆ.

(೨) ತಿರುಪತಿಯಲ್ಲಿರುವ ದೇವರು ವೇಂಕಟರಮಣನೆಂದು ಈಗ ಪ್ರಸಿದ್ಧವಾಗಿದ್ದರೂ ಹಿಂದೆ ಹಾಗೆ ಇರಲಿಲ್ಲ. ತಿರುಪತಿಯ ಬೆಟ್ಟವನ್ನು ಶೇಷಾದ್ರಿ ಎಂದು ಪುರಾಣಗಳಲ್ಲಿ ಕರೆದಿದೆ. ಶೇಷಾದ್ರಿಯಲ್ಲಿ ಕಪಿಲೇಶಕ್ಷೇತ್ರವಿದೆ[1] ಎಂದು ಸ್ಕಾಂದಾದಿಶೈವಪುರಾಣಗಳಿಂದ ತಿಳಿದುಬರುತ್ತದೆ. ಆ ಬೆಟ್ಟದಮೇಲಿದ್ದ ಒಂದು ವಿಗ್ರಹವು ಜೈನಮತವು ಪ್ರಬಲವಾಗಿದ್ದಾಗ ಜಿನಮುನಿಯೆಂದೂ ಶೈವರ ಕಾಲದಲ್ಲಿ ಭೈರವನೆಂದೂ ಪ್ರಸಿದ್ಧವಾಗಿತ್ತೆಂದು ಐತಿಹ್ಯ. ಶ್ರೀರಾಮಾನುಜರಕಾಲದಲ್ಲಿ ಅದು ಯಾವ ದೇವರೆಂಬ ಬಗ್ಗೆ ಜೈನರಿಗೂ ವೈಷ್ಣವರಿಗೂ ಮತಭೇದವಿದ್ದದ್ದರಿಂದ ಶಂಖಚಕ್ರಗಳು, ತ್ರಿಶೂಲಡಮರುಗಳು– ಇವುಗಳನ್ನು ಚಿನ್ನದಿಂದ ಮಾಡಿ ರಾತ್ರಿ ಆ ದೇವರ ಬಳಿ ಇಟ್ಟು, ದೇವಾಲಯದ ಕದಗಳನ್ನು ಮುಚ್ಚಿಸಿ ಬೀಗಮುದ್ರೆ ಮಾಡಿ ಬೆಳಗ್ಗೆ ನೋಡಿದಾಗ ಮೂರ್ತಿಯು ಯಾವ ಆಯುಧಗಳನ್ನು ಧರಿಸಿರುವದೋ ಆ ದೇವರೆಂದು ತಿಳಿಯುವದು; ಯಾವದನ್ನೂ ಧರಿಸದೆ ಇದ್ದರೆ ಜಿನಮುನಿಯೆಂದು ಭಾವಿಸುವದು –ಎಂಬ ವ್ಯವಸ್ಥೆಯನ್ನು ರಾಮಾನುಜಾಚಾರ್ಯರು ಹೇಳಿದರಂತೆ. ಮಾರನೆಯ ದಿನ ನೋಡಿದ್ದರಲ್ಲಿ ದೇವರು ಶಂಖಚಕ್ರಗಳನ್ನು ಧರಿಸಿದ್ದರಿಂದ ಅದು ವಿಷ್ಣುಪ್ರತಿಮೆಯೆಂದು ನಿರ್ಣಯವಾಗಿದೆಯಂತೆ(ಸೋ.ಶಂ. ಪು. ೧೮೩–೧೮೪). ಈಗಲೂ ಮೂರ್ತಿಯು ಹೇಗಿದೆ ಎಂಬುದನ್ನು ನೋಡುವದಕ್ಕೆ ಜನರಿಗೆ ಅವಕಾಶವಿಲ್ಲದ್ದರಿಂದ 'ಲೋಗುಟ್ಟು ಪೆರುಮಾಳಕೇ ತೆಲುಸಾನು' (ಒಳಗುಟ್ಟು ದೇವರಿಗೇ ಗೊತ್ತು) ಎಂಬ ಗಾದೆ ಹುಟ್ಟಿದೆ. ಇತಿಹಾಸವು ಹೀಗಿರುವಲ್ಲಿ, ರಾಮಾನುಜರಿಗಿಂತ ಎಷ್ಟೋ ಶತಮಾನಗಳ ಹಿಂದೆ ಇದ್ದ ಶಂಕರಭಗವತ್ಪಾದರು ವೆಂಕಟರಮಣಸ್ವಾಮಿಯ ಅರ್ಚಕರನ್ನು ಅದ್ವೈತಿಗಳಾಗಿ ಮಾಡಿದ

---

1. ಬೆಟ್ಟದಕೆಳಗೆ 'ಕಪಿಲತೀರ್ಥ'ವಿದೆ, ಕಪಿಲೇಶ್ವರನೆಂಬ ಹೆಸರಿನ ಲಿಂಗವು ಎಲ್ಲಿದೆಯೊ ? ಸ್ಕಾಂದಮಹಾಪುರಾಣ ವೈಷ್ಣವಖಂಡ ಅಧ್ಯಾಯ ೯ರಲ್ಲಿ ರಂಗದಾಸನೆಂಬ ಪಾಂಡ್ಯದೇಶದ ಶೂದ್ರನೊಬ್ಬನು ಶೇಷಾದ್ರಿಯಲ್ಲಿ ಕಪಿಲೇಶಕ್ಷೇತ್ರದಲ್ಲಿ ಶ್ರೀನಿವಾಸನ ಸೇವೆ ಮಾಡಿದನೆಂದಿದೆ :

ಶನೈಃ ಸಂಪ್ರಾಪ್ಯ ಶೇಷಾದ್ರಿಂ ನಿರ್ಝರಂ ಸಂದದರ್ಶ ಹ [
ತತ್ಸಮೀಪಂ ಸಮಾಸಾದ್ಯ ಕಪಿಲಾಪೂಜಿತಂ ಶಿವಮ್ ‖ ಎಂತ ವರ್ಣಿಸಿದೆ.

ರೆಂಬ ಕಥೆಯು ನಿಜವಾಗಿರಲಾರದು. ವೈಖಾನಸರ ಸೂತ್ರದಿಂದ ಅವರು ಅದ್ವೈತಿಗಳೇ ಆಗಿದ್ದ ವೈಷ್ಣವರೆಂದು ತಿಳಿಯಬರುತ್ತದೆ. ಈ ನಿಜವನ್ನು ತಿಳಿಯದೆ ವೈಖಾನಸರು ನಾಮವನ್ನು ಹಾಕಿಕೊಳ್ಳುವದನ್ನು ಕಂಡು ಅವರು ದ್ವೈತಿಗಳಾಗಿದ್ದರೆಂದು ಭ್ರಮಿಸಿ ಚಿದ್ವಿಲಾಸರು ಹೀಗೆ ಬರೆದಿರಬಹುದೆಂದು ಕಾಣುತ್ತದೆ.

(೩) ಆಚಾರ್ಯರು ಗೋವಿಂದರಾಜೇಶ್ವರನನ್ನು ನಮಸ್ಕರಿಸಿದರೆಂಬ ಹೇಳಿಕೆಯೂ ಹೀಗೆಯೇ ಅವಿಶ್ವಸನೀಯವಾಗಿದೆ. ಗೋವಿಂದರಾಜನ ವಿಗ್ರಹವು ಮೊದಲು ಚಿದಂಬರದಲ್ಲಿ ಕನಕಸಭಾಪತಿಯ ದೇವಾಲಯದ ಪ್ರಾಕಾರದಲ್ಲಿತ್ತೆಂದು **ಮಾಣಿಕ್ಕವಾಚಕರ್** ಎಂಬ ಶಿವಭಕ್ತನ ಕೃತಿಗಳಿಂದ ತಿಳಿದುಬಂದಿದೆ. ಶೈವವೈಷ್ಣವರಿಗೆ ಮತಾಭಿಮಾನದಿಂದ ದ್ವೇಷವು ಪ್ರಬಲಿಸಿದಾಗ ಗೋವಿಂದರಾಜ ಮಂದಿರವನ್ನು ಕಿತ್ತುಹಾಕಿ 'ವಿಗ್ರಹವನ್ನು ವಿಷ್ಣುವಿನ ಸ್ಥಾನಕ್ಕೆ ಕಳುಹಿಸಿದರು' ಅಂದರೆ ಸಮುದ್ರದಲ್ಲಿ ಹಾಕಿಬಿಟ್ಟರು. ಅದು ಶ್ರೀರಾಮಾನುಜರ ಕಾಲಕ್ಕೆ ಸಿಕ್ಕಿದ ಕಾರಣ ಅದನ್ನು ತಿರುಪತಿಯಲ್ಲಿ ಪ್ರತಿಷ್ಠಿಸಲಾಯಿತು –ಎಂದು **ಸೋಮನಾಥಯ್ಯನವರು** (ಸೋ.ಶಂ. ಪು. ೧೮೫)–"Sri Ramanujacharya's Life" by S. Krishnaswamy Iyengar M.A, pp 47-49 ಎಂಬ ಗ್ರಂಥದ ಆಧಾರದಿಂದ– ಬರೆದಿರುತ್ತಾರೆ. ಅದೇ ಅಯ್ಯಂಗಾರ್ಯರವರು ಬರೆದಿರುವ 'ದಕ್ಷಿಣಭಾರತದ ಚರಿತ್ರೆ' ಎಂಬ ಇಂಗ್ಲಿಷು ಪುಸ್ತಕದಲ್ಲಿಯೂ ಈ ವಿಷಯವನ್ನು ನಾವು ನೋಡಿದ ನೆನಪಿದೆ. ಇತಿಹಾಸವು ಹೀಗಿರುವಲ್ಲಿ ಶಂಕರರು ಗೋವಿಂದರಾಜನನ್ನು ಹೇಗೆತಾನೆ ನಮಸ್ಕರಿಸಿದ್ದಾರು ?

## ಕರ್ಣಾಟಕದಲ್ಲಿ ಕಾಪಾಲಿಕರನ್ನು ಜಯಿಸಿದ್ದು

೧೫೯. ಆಚಾರ್ಯರು ತಿರುಪತಿಯಿಂದ ವಿದರ್ಭರಾಜಧಾನಿಗೆ ಹೋದರಷ್ಟೆ? ಅಲ್ಲಿಂದ ಮುಂದಕ್ಕೆ **ಕರ್ಣಾಟಕ**ದೇಶದಲ್ಲಿ ಪ್ರಬಲರಾಗಿದ್ದ **ಕಾಪಾಲಿಕರನ್ನು** ಜಯಿಸುವದಕ್ಕೆ ಹೊರಟರು. ವಿದರ್ಭರಾಜನು 'ಅಲ್ಲಿ ಕಾಪಾಲಿಕರು ಬಹಳ ಜನರಿದ್ದಾರೆ; ಅವರು ತಮ್ಮ ಕೀರ್ತಿಯನ್ನು ಎಂದಿಗೂ ಸಹಿಸಲಾರರು, ಶ್ರುತಿಯಲ್ಲಿ ಅವರಿಗೆ ಈರ್ಷ್ಯೆಯಿದೆ. ಅಲ್ಲಿ ಒದಗಬಹುದಾದ ಅಪಾಯದ ವಿಷಯಕ್ಕೆ ಎಚ್ಚರವಾಗಿರಿ'– ಎಂದು ಎಚ್ಚರಿಸಿದನು. ಸುಧನ್ವನು 'ನಾನಿರುವಲ್ಲಿ ತಮಗೆ ಯಾವ ಅಂಜಿಕೆಯೂ ಇಲ್ಲ' ಎಂದು ಭರವಸೆಕೊಟ್ಟು ಆಚಾರ್ಯರ ಹಿಂದೆಯೇ ಹೊರಟನು. ಅಲ್ಲಿ ಕ್ರಕಚನೆಂಬ ಕಾಪಾಲಿಯು ಚಿತಾಭಸ್ಮಲೇಪ, ಕಪಾಲಧಾರಣೆ, ತ್ರಿಶೂಲ– ಇವುಗಳಿಂದ ಭೂಷಿತನಾಗಿ ಬಂದು ತನ್ನ ಅಶುಭಾಚಾರದ ಮತದ ಹೆಚ್ಚುಗಾರಿಕೆಯನ್ನು ಆಚಾರ್ಯರ ಮುಂದೆ ಕೊಚ್ಚಿಕೊಂಡನು. ಸುಧನ್ವನು ಆ ಭಂಡನನ್ನು ಅಧಿಕಾರಿಗಳ ಮೂಲಕ ಸಭೆಯಿಂದ ಹೊರಕ್ಕೆ ತಳ್ಳಿಸಿದನು.

ಆಮೇಲೆ ಆಚಾರ್ಯರನ್ನು ಕೊಲ್ಲುವದಕ್ಕೆಂದು ಅವನು ತನ್ನ ದಂಡನ್ನೇ ತೆಗೆದು ಕೊಂಡುಬಂದನು. ಸುಧನ್ವನು ಯುದ್ಧಕ್ಕೆ ಸಿದ್ಧನಾದನು. ಮೇಲೆ ಬಿದ್ದ ಕ್ರಕಚನ ದಂಡಿಗೆ ಅಂಜಿ ವಿಪ್ರರು ಆಚಾರ್ಯರಿಗೆ ಶರಣುಬಂದರು. ಆಚಾರ್ಯರು ಹುಂಕಾರಮಾತ್ರದಿಂದಲೇ ಅವರನ್ನೆಲ್ಲ ಬೂದಿಗೈದರು ; ಕ್ರಕಚನು ಆಚಾರ್ಯರ ಬಳಿಗೆ ಬಂದು 'ಎಲಾ, ಕುಮತಾನುಯಾಯಿಯೆ, ನಿನ್ನ ಕರ್ಮದ ಫಲವನ್ನು ಅನುಭವಿಸು !' ಎಂದು ಕಣ್ಣುಮುಚ್ಚಿಕೊಂಡು ಹೆಂಡವನ್ನು ತುಂಬಿದ ಕಪಾಲ ವನ್ನು ಕೈಯಲ್ಲಿಟ್ಟುಕೊಂಡು ಕಪಾಲಿಯನ್ನು ಧ್ಯಾನಿಸಲು ಭೈರವನು ಪ್ರತ್ಯಕ್ಷನಾಗಿ 'ಶಂಕರಾಚಾರ್ಯರೂಪದಿಂದಿರುವ ನನ್ನ ವಿಷಯದಲ್ಲಿಯೇ ಇಂಥ ಅಪರಾಧ ವನ್ನು ಮಾಡುತ್ತಿರುವೆಯಲ್ಲ !' ಎಂದು ಅವನ ರುಂಡವನ್ನು ಹಾರಿಸಿದನು (ಮಾ. ಶಂ. ೧೫-೬ರಿಂದ ೨೬).

ಈ ಕಥೆ ಮಿಕ್ಕ ಶಂಕರವಿಜಯಗಳಲ್ಲಿಲ್ಲ. (೧) ಮಾಧವಕವಿಯ ಕಾಲಕ್ಕೆ ಕಾಪಾಲಿಕರು ಹೆಚ್ಚಿಕೊಂಡಿದ್ದರೊ, ಅಥವಾ ಅವರ ಹಾವಳಿಯ ವಿಷಯವಾಗಿ ಆತನು ಬಹುವಾಗಿ ಕೇಳಿದ್ದನೋ, ಯಾವದೋ ಕಾರಣದಿಂದ ಹಿಂದೊಂದು ಸಲ ಶ್ರೀಶೈಲದಲ್ಲಿ ಕಾಪಾಲಿಕರಿಗೆ ಪ್ರತೀಕಾರವನ್ನು ಮಾಡಿದ ಕಥೆಯನ್ನು ಹೇಳಿದಷ್ಟ ರಿಂದ ತೃಪ್ತನಾಗದೆ ಅವನು ಮತ್ತೊಮ್ಮೆ ಈ ಕಥೆಯನ್ನು ಹೇಳಿದ್ದಾನೆ.

(೨) ಸುಧನ್ವರಾಜನು ಯಾರೆಂಬುದೇ ತಿಳಿಯುವಂತಿಲ್ಲವೆಂದು ಹಿಂದೆ (ಪು. ೧೧೯) ತಿಳಿಸಿರುತ್ತೇವೆ. ಅವನು ಭಟ್ಟರ ಕಾಲದಿಂದ ಆಚಾರ್ಯರ ದಿಗ್ವಿಜಯ ಕಾಲದವರೆಗೂ ವೈದಿಕಮತಾನುಯಾಯಿಯಾಗಿದ್ದದ್ದು ಹೇಗೆ ? ಅವನಿಗೆ ವೇದಾಂತದಲ್ಲಿ ಯಾವಾಗ ಹೇಗೆ ಅಭಿರುಚಿಯುಂಟಾಯಿತು ?-ಎಂಬುದ ನ್ನಾಗಲಿ, ಆಚಾರ್ಯರ ಹಿಂದೆ ಅವನೂ ದಿಗ್ವಿಜಯಕ್ಕೆ ಬಂದನೆಂಬುದನ್ನಾಗಲಿ ಕವಿ ಹೇಳಿಲ್ಲ.

(೩) ವಿ ದ ರ್ಭ ದೇ ಶ ವು ಯಾವದು ? ಇದು ಈಗಿನ ಬೀರಾರ್ ಪ್ರದೇಶವೆ? ಅಲ್ಲಿಂದ ಆಚಾರ್ಯರು ಉತ್ತರಕ್ಕೆ ಹೋದರೊ, ದಕ್ಷಿಣಕ್ಕೆ ಬಂದರೋ? ಕರ್ಣಾಟಕವು ಆಗ ಎಲ್ಲಿಯವರೆಗೆ ಹಬ್ಬಿತ್ತು ?- ಇವುಗಳನ್ನು ಇತಿಹಾಸದ ಆಧಾರದಿಂದ ಗೊತ್ತುಮಾಡಿದಮೇಲೆಯೇ ಕಾಪಾಲಿಕಪ್ರಕರಣದ ನಿಜವನ್ನು ನಿಶ್ಚಯಿಸಬಹುದಾಗುತ್ತದೆ. ಚಿದ್ವಿಲಾಸರು ಸ್ವಲ್ಪ ಹೆಚ್ಚುಕಡಿಮೆಯಾಗಿ ಇದೇ ಕಥೆಯನ್ನು ರಾಮೇಶ್ವರದಲ್ಲಿ ನಡೆದಂತೆ ವರ್ಣಿಸಿರುತ್ತಾರೆ. ಮಧ್ಯಾರ್ಜುನ ದಿಂದ ಅಲ್ಲಿಗೆ ಬಂದ ಆಚಾರ್ಯರನ್ನು ಕಾಪಾಲಿಕರು ಸಂಧಿಸಿದರು. ಅಲ್ಲಿ ಭೋಜಸಿಂಹನೆಂಬ ರಾಜನು ಆಚಾರ್ಯರ ಹಿಂದೆ ಇದ್ದನು. ಸ್ವೇಚ್ಛೆಯಾಗಿ ಮಾತನಾಡುತ್ತಿದ್ದ ಕಾಪಾಲಿಕಶಿಷ್ಯರನ್ನೂ ಗುರುವನ್ನೂ ಹೊಡೆದನು. ಕಾಪಾಲಿಕ

ಗುರುವು ಭೈರವನನ್ನು ಸ್ಮರಿಸಲಾಗಿ ಆ ದೇವನು ಪ್ರತ್ಯಕ್ಷನಾಗಿ ಶಂಕರರ ಸ್ತೋತ್ರವನ್ನು ಕೇಳಿ ಸಂತುಷ್ಟನಾಗಿ 'ನೀನು ಪೂಜ್ಯನು ; ನೀನು ಇಲ್ಲಿಗೆ ಬಂದಿರುವೆ ಎಂಬುದನ್ನು ತಿಳಿದೇ ನಾನು ಇಲ್ಲಿಗೆ ಬಂದಿದ್ದೇನೆ. ಇವರನ್ನು ದಂಡಿಸು !' ಎಂದು ನುಡಿದು ಅಂತರ್ಧಾನವನ್ನು ಹೊಂದಿದನು. ಆಚಾರ್ಯರು 'ವಿಪ್ರಾಧಮರೆ, ಸರ್ವಕರ್ಮಬಹಿಷ್ಕೃತರಾಗಿರಿ !' ಎಂದು ಶಪಿಸಿದರು (ಚಿ. ಶಂ. ೨೭ನೆಯ ಅಧ್ಯಾಯ)– ಎಂದು ಬರೆದಿರುತ್ತಾರೆ. ಮಾಧವನ ಕಥೆ ನಿಜವೋ ? ಚಿದ್ವಿಲಾಸರ ಕಥೆ ನಿಜವೋ ? ರಾಮೇಶ್ವರದಲ್ಲಿ ಆಚಾರ್ಯರು ಜಯಿಸಿದ್ದು ಮಾಧವನು ಹೇಳಿದಂತೆ ಶಾಕ್ತರನ್ನೋ, ಚಿದ್ವಿಲಾಸರು ಹೇಳಿರುವಂತೆ ಕಾಪಾಲಿಕರನ್ನೋ ? ಕಾಪಾಲಿಕರ ಗುರು ಕ್ರಕಚನೊ, ವಟುಕನಾಥನೊ ? ಅವನನ್ನು ಮಾಧವನು ಹೇಳಿದಂತೆ ಭೈರವನು ಕೊಂದನೊ, ಅಥವಾ ಅವನ ಅನುಮತಿಯಿಂದ ಆಚಾರ್ಯರೇ ಶಪಿಸಿದರೊ ?

## ಗೋಕರ್ಣದಲ್ಲಿ ನೀಲಕಂಠಾಚಾರ್ಯನನ್ನು ಗೆದ್ದದ್ದು

೧೪೦. ಹೀಗೆಯೇ ಆಯಾ ದೇಶಗಳಲ್ಲಿ ಪಾಷಂಡಿಗಳಾಗಿದ್ದ ದ್ವಿಜರನ್ನು ಖಂಡಿಸಿ ಆಚಾರ್ಯರು ಪಶ್ಚಿಮಸಮುದ್ರತೀರವನ್ನು ಸೇರಿ ಗೋಕರ್ಣಕ್ಕೆ ಬಂದರು. ಅಲ್ಲಿ ಸಮುದ್ರಸ್ನಾನವನ್ನು ಮಾಡಿ ಭುಜಂಗಪ್ರಯಾತಗಳಿಂದ ಶಿವನನ್ನು ಸ್ತೋತ್ರಮಾಡಿದರು. ಅವರು ಬಂದ ಶಿಷ್ಯರಿಗೆ ವೇದಾಂತವನ್ನು ಹೇಳುತ್ತಾರೆಂಬ ಸುದ್ದಿಯನ್ನು ತಿಳಿದು ಹರದತ್ತನು ತಮ್ಮ ಗುರುವಾದ ನೀಲಕಂಠಾಚಾರ್ಯನಿಗೆ ಭಟ್ಟಮಂಡನಾದಿಗಳನ್ನು ಜಯಿಸಿದ ಶಂಕರಾಚಾರ್ಯರು ಬರುತ್ತಿದ್ದಾರೆಂದು ತಿಳಿಸಿದನು. ಇದನ್ನು ಕೇಳಿದ ನೀಲಕಂಠನು ನಗುತ್ತಾ 'ಸಮುದ್ರವನ್ನು ಒಣಗಿಸಬಹುದು, ಸೂರ್ಯನನ್ನು ಆಕಾಶದಿಂದ ಕೆಡಹಬಹುದು, ಆಕಾಶವನ್ನು ಬಟ್ಟೆಯಂತೆ ಸುತ್ತಬಹುದು, ನನ್ನನ್ನು ಮಾತ್ರ ಈತನು ವಾದದಲ್ಲಿ ಗೆಲ್ಲಲಾರನು' ಎಂದನು. ಆಚಾರ್ಯರ ಬಳಿಗೆ ಆತನು ಬಂದಾಗ ಸುರೇಶ್ವರಾಚಾರ್ಯರು ವಾದಮಾಡುವದಕ್ಕಾರಂಭಿಸಿದರು. ಆಮೇಲೆ ನೀಲಕಂಠಾಚಾರ್ಯರಿಗೂ ಶಂಕರಾಚಾರ್ಯರಿಗೂ ವಾದವಾಯಿತು. ವಾದದಲ್ಲಿ ಜಿತನಾದ ನೀಲಕಂಠನು ಆಚಾರ್ಯರಿಗೆ ಶಿಷ್ಯನಾಗಿ ಶರಣುಬಂದನು. ಅದನ್ನು ಕೇಳಿ ಉದಯನಕವಿಯೇ ಮುಂತಾದವರು ನಡುಗಿದರು (ಮಾ. ಶಂ. ೧೫–೩೧ರಿಂದ ೭೩).

ಈಗ ಈ ಕಥೆಯ ಬೆಲೆಯನ್ನು ನೋಡೋಣ : (೧) ಆಚಾರ್ಯರು ಗೋಕರ್ಣಕ್ಕೆ ಹೋದ ಕಥೆಯು ಚಿದ್ವಿಲಾಸೀಯದಲ್ಲಿಯೂ (ಚಿ.ಶಂ.೨೯-೩೦) ಇದೆ. ಅಲ್ಲಿ ಅವರು ಶಿವನನ್ನು ಭುಜಂಗಪ್ರಯಾತದ ಶ್ಲೋಕಗಳಿಂದ ಸ್ತೋತ್ರ ಮಾಡಿದ ಸುದ್ದಿಯಾಗಲಿ ನೀಲಕಂಠಾಚಾರ್ಯನನ್ನು ಜಯಿಸಿದ್ದರ ಪರಾಮರ್ಶ

ವಾಗಲಿ ಇಲ್ಲ. ಆಚಾರ್ಯರು ತಮ್ಮ ತಾಯಿಗಾಗಿ ಶಿವಭುಜಂಗಪ್ರಯಾತವನ್ನು ಮಾಡಿದರೆಂದು ಹೇಳಿದ್ದ ಮಾಧವನು ಮತ್ತೊಮ್ಮೆ ಇಲ್ಲಿ ಆ ವೃತ್ತವನ್ನೇಕೆ ತಂದನು ? ಅಥವಾ ಭುಜಂಗಪ್ರಯಾತದ ಶಿವಸ್ತೋತ್ರಗಳು ಎರಡು ಇವೆ ಎಂದು ಆತನ ಕಲ್ಪನೆಯಿರಬಹುದೆ ?

(೨) ಆಚಾರ್ಯರ ಕಾಲಕ್ಕೆ ವಿಶಿಷ್ಟಾದ್ವೈತಮತವು ಇದ್ದಿತೆಂಬುದಕ್ಕೆ ಯಾವ ಹೊರಗಿನ ಆಧಾರಪ್ರಮಾಣವಾಗಲಿ ಭಾಷ್ಯದಲ್ಲಿರುವ ಆಂತರಿಕಪ್ರಮಾಣ ವಾಗಲಿ ಇಲ್ಲ. ಅವರಿಗೆ ಪ್ರತಿವಾದಿಗಳಾಗಿದ್ದವರೆಲ್ಲರೂ ಅದ್ವೈತಿವೇದಾಂತಿಗಳೇ, ಬೇರೆಯ ವೇದಾಂತಿಗಳ ಪರಾಮರ್ಶವೇ ಅವರ ಗ್ರಂಥಗಳಲ್ಲಿಲ್ಲ. ಬೃಹದಾ ರಣ್ಯಕಭಾಷ್ಯದಲ್ಲಿ ಈ ವಾಕ್ಯವಿದೆ : 'ಸರ್ವೋಪನಿಷತ್ಸು ಹಿ ವಿಜ್ಞಾನಾತ್ಮನಃ ಪರಮಾತ್ಮನಾ ಏಕತ್ವಪ್ರತ್ಯಯೋ ವಿಧೀಯತೇ ಇತ್ಯವಿಪ್ರತಿಪತ್ತಿಃ ಸರ್ವೇಷಾ ಮುಪನಿಷದ್ವಾದಿನಮ್|'(ಬೃ.ಭಾ.೨-೧-೨೦)'ಎಲ್ಲಾ ಉಪನಿಷತ್ತುಗಳಲ್ಲಿಯೂ ವಿಜ್ಞಾನಾತ್ಮನಿಗೂ ಪರಮಾತ್ಮನಿಗೂ ಏಕತ್ವವನ್ನೇ ತಿಳಿಸಿದೆ ಎಂಬುದಕ್ಕೆ ಉಪ ನಿಷದ್ವಾದಿಗಳಲ್ಲಿ ಯಾರಿಗೂ ಮತಭೇದವಿಲ್ಲ' ಎಂದು ಬರೆದಿರುವ ಶಂಕರರು ವಿಶಿಷ್ಟಾದ್ವೈತಿಯೊಡನೆ ವಾದಮಾಡಿದರೆಂದು ಕಲ್ಪಿಸುವದು ಎಂಥ ಸಾಹಸ !

(೩) ನೀಲಕಂಠಾಚಾರ್ಯರು ಸೂತ್ರಕ್ಕೆ ಭಾಷ್ಯವನ್ನು ಬರೆದಿರುವದು ನಿಜ. ಆದರೆ ಅವರು ರಾಮಾನುಜಾಚಾರ್ಯರ ಬಳಿಕವೇ ಭಾಷ್ಯವನ್ನು ರಚಿಸಿದ ರೆಂದು ನಂಬುವದಕ್ಕೆ ಕಾರಣವಿದೆ. ಅವರು ರಾಮಾನುಜರ ಗ್ರಂಥದಲ್ಲಿರುವ ವಿಷಯಗಳನ್ನು ಕದ್ದಿರುವರೆಂದು ಕೆಲವರು ಶ್ರೀವೈಷ್ಣವರು ಹೇಳಿಕೊಳ್ಳುತ್ತಿದಾರೆ. ನೀಲಕಂಠಭಾಷ್ಯಕ್ಕೆ "ಶಿವಾರ್ಕಮಣಿದೀಪಿಕೆ" ಎಂಬ ವ್ಯಾಖ್ಯಾನವನ್ನು ಬರೆ ದಿರುವ ಅಪ್ಪಯ್ಯದೀಕ್ಷಿತರು ರಾಮಾನುಜಭಾಷ್ಯಕ್ಕೂ ಈ ಹೊಸ ಭಾಷ್ಯಕ್ಕೂ ಇರುವ ವೈಲಕ್ಷಣ್ಯವನ್ನು ತೋರಿಸುವದಕ್ಕೆ ಹೊರಟಿದಾರೆ. ರಾಮಾನುಜರು ಈ ಭಾಷ್ಯವನ್ನು ವಿಮರ್ಶೆಗೆ ತೆಗೆದುಕೊಂಡೂ ಇಲ್ಲ. ಹೀಗಿರುವದರಿಂದಲೂ ಆಚಾ ರ್ಯರು ಈ ಹೊಸ ಭಾಷ್ಯಕಾರರೊಡನೆ ವಾದಮಾಡಿರಲಾರರೆಂದೇ ಆಗುತ್ತದೆ.

(೪) ನೀಲಕಂಠಭಾಷ್ಯವು ರಾಮಾನುಜಭಾಷ್ಯದಂತೆ ವಿಸ್ತಾರವಾಗಿಲ್ಲ. ಸಿದ್ಧಾಂತವನ್ನು ಸಂಗ್ರಹಿಸಿ ಹೇಳುವದೇ ಹೊರತು ಪರಮತಗಳನ್ನು ತರ್ಕದಿಂದ ಖಂಡಿಸುವದಕ್ಕೆ ಹೋಗಿಲ್ಲ. ಹೀಗಿರುವಲ್ಲಿ ನೀಲಕಂಠಾಚಾರ್ಯರು ಮಾಧವನು ಹೇಳಿರುವಂತೆ ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುವಷ್ಟು ವಾದಪ್ರಿಯರೆಂಬುದನ್ನು ನಂಬುವದಕ್ಕಾಗಲಿ ಇಲ್ಲಿ ಮಾಧವನು ವಿಸ್ತರಿಸಿ ಹೇಳಿರುವ ಯುಕ್ತಿಗಳನ್ನು ಅದ್ವೈತಕ್ಕೆ ವಿರುದ್ಧವಾಗಿ ಒಡ್ಡಿದರೆಂದು ನಂಬುವದಕ್ಕಾಗಲಿ ಆಗುವಂತಿಲ್ಲ. ಆಚಾರ್ಯರ ಭಾಷ್ಯದಲ್ಲಾಗಲಿ ಸುರೇಶ್ವರರ ವಾರ್ತಿಕದಲ್ಲಾಗಲಿ ವಿಶಿಷ್ಟಾದ್ವೈತದ

ಪರಾಮರ್ಶವೇ ಇಲ್ಲದಿರುವಾಗ ಅವರಿಬ್ಬರೂ ಈ ಆಚಾರ್ಯನೊಡನೆ ವಾದ ಮಾಡಿದರೆಂಬುದನ್ನು ಹೇಗೆತಾನೆ ನಂಬುವುದಕ್ಕಾದೀತು ?

(೫) ಹರದತ್ತನು ಪ್ರಸಿದ್ಧ ಶೈವಾಚಾರ್ಯನೆಂಬುದೇನೊ ನಿಜ ಆದರೆ ಆತನಿಗಾಗಲಿ ನೀಲಕಂಠಾಚಾರ್ಯರಿಗಾಗಲಿ ಗೋಕರ್ಣದ ಸಂಬಂಧವಿದ್ದಿತೆ ? ಆತನು ನೀಲಕಂಠಶಿವಾಚಾರ್ಯರ ಶಿಷ್ಯನೆಂಬುದಕ್ಕೆ ಮಾಧವನ ಮತವಲ್ಲದೆ ಮತ್ತೆ ಯಾವದಾದರೂ ಆಧಾರವಿದೆಯೆ ?–ಎಂಬುದೂ ವಿಚಾರಣೀಯವಾಗಿದೆ.

## ದ್ವಾರಕೆ, ಉಜ್ಜಯಿನಿ

೧೪೧. ಆಚಾರ್ಯರು ಗೋಕರ್ಣದಿಂದ ಮುಂದಕ್ಕೆ ಹೊರಟು ಸೌರಾಷ್ಟ್ರವೇ ಮುಂತಾದ ದೇಶಗಳಲ್ಲಿ ತಮ್ಮ ಭಾಷ್ಯವನ್ನು ಪ್ರಚಾರಮಾಡುತ್ತಾ ದ್ವಾರಕೆಗೆ ಹೋದರು. ಅಲ್ಲಿ ಪಂಚಭೇದಗಳನ್ನು ಹೇಳುತ್ತಿದ್ದ ಪಾಂಚರಾತ್ರರನ್ನು ಜಯಿಸಿದರು. ಹೀಗೆ ವೈಷ್ಣವ, ಶೈವ, ಶಾಕ್ತ, ಸೌರ–ಮುಂತಾದವರೆಲ್ಲರನ್ನೂ ವಶಗೊಳಿಸಿಕೊಂಡು ಉಜ್ಜಯಿನಿಗೆ ಹೋದರು. ಅಲ್ಲಿ ಭೇದಾಭೇದವಾದಿಯಾದ ಭಟ್ಟಭಾಸ್ಕರನನ್ನು ವಾದದಲ್ಲಿ ಜಯಿಸಿ ಬಾಣ, ಮಯೂರ, ದಂಡಿ –ಮುಂತಾದವರನ್ನು ಜಯಿಸಿದರು (ಮಾ.ಶಂ. ೧೭–೭೩ರಿಂದ ೧೪೧).

(೧) ಈಗ ಈ ಹೇಳಿಕೆಯನ್ನು ವಿಮರ್ಶಿಸಬಹುದು ; ದ್ವಾರಕೆಯಲ್ಲಿ ಆಚಾರ್ಯರು ಮಠವನ್ನು ಸ್ಥಾಪಿಸಿದರೆಂದೇನೂ ಮಾಧವನು ಬರೆದಿಲ್ಲ ; ಶೃಂಗೇರಿಯ ವಿಷಯದಲ್ಲಿ ಆತನು ಮಠವನ್ನು ಪ್ರಸ್ತಾಪಿಸಿಲ್ಲವೆಂದು ಆಗಲೆ ಹೇಳಿದೇವೆ. ಚಿದ್ವಿಲಾಸರು ಅಲ್ಲಿ ಆಚಾರ್ಯರು ಒಂದು ಮಠವನ್ನು ಸ್ಥಾಪಿಸಿ ಹಸ್ತಾಮಲಕರನ್ನು ಅಧ್ಯಕ್ಷರನ್ನಾಗಿ ಮಾಡಿದರೆಂದು ಬರೆದಿದಾರೆ (ಚಿ. ಶಂ. ೩೧–೫). ಅವರು ಶೃಂಗೇರಿಯ ಪೀಠದಲ್ಲಿ ಸುರೇಶ್ವರಾಚಾರ್ಯರನ್ನು ನಿಲ್ಲಿಸಿದ್ದರೆಂದೂ ಚಿದ್ವಿಲಾಸರ ಹೇಳಿಕೆ (ಚಿ. ಶಂ. ೨೪–೩೩).

ಚಿದ್ವಿಲಾಸರು ರಾಮೇಶ್ವರದಿಂದ ಆಚಾರ್ಯರು ವಕ್ರತುಂಡಪುರಿಗೆ ಬಂದು ಗಾಣಾಪತ್ಯರನ್ನು ಜಯಿಸಿದರೆಂದು ಬರೆದಿದಾರೆ (ಚಿ. ಶಂ. ೨೮). ಅಲ್ಲಿಂದ ಮಧುರೆಗೆ ಹೋಗಿ ಮೀನಾಕ್ಷೀಸುಂದರೇಶರ ದರ್ಶನವನ್ನು ಆಚಾರ್ಯರು ಮಾಡಿದರೆಂದು ಅವರ ಮತ (ಚಿ. ಶಂ. ೨೬–೨೧, ೨೨). ಅಲ್ಲಿಂದ ಮುಂದಕ್ಕೆ ಅನಂತಶಯನಕ್ಕೆ ಹೋದರೆಂದೂ ಅಲ್ಲಿ ಭಕ್ತ, ಭಾಗವತ, ವೈಷ್ಣವ, ಪಾಂಚರಾತ್ರ ವೈಖಾನಸ ಮತ್ತು ಕರ್ಮಹೀನ– ಎಂಬ ಪ್ರಭೇದವುಳ್ಳ ವೈಷ್ಣವರನ್ನು ಜಯಿಸಿದರೆಂದೂ ಆನಂದಗಿರಿಯೂ (ಪ್ರ. ೬ರಿಂದ ೧೦) ಹೇಳಿದಂತೆಯೇ ಚಿದ್ವಿಲಾಸರೂ

(ಚಿ. ಶಂ. ೨೪–೩೦ರಿಂದ ೮೯) ಹೇಳಿರುತ್ತಾರೆ.[1] ಮುಂದೆ ವಾಸುಕಿಕ್ಷೇತ್ರದಲ್ಲಿ ಕಾರ್ತಿಕೇಯನನ್ನು ಅರ್ಚನೆಮಾಡಿದರಂತೆ (ಚಿ. ಶಂ. ೨೯–೫). **ಆಮೇಲೆ** ಮೃಡಪುರಿಯಲ್ಲಿ ಬೌದ್ಧರನ್ನು ವಾದದಲ್ಲಿ ಜಯಿಸಿದರಂತೆ(ಚಿ ಶಂ. ೩೯–೯ರಿಂದ ೨೯). ಅಲ್ಲಿಂದ ಮುಂದಕ್ಕೆ ಗೋಕರ್ಣಕ್ಕೆ ಬಂದರು. ಮುಂದಕ್ಕೆ ಶ್ರೀಶೈಲಕ್ಕೆ ಬಂದರು. ಜೋಗುಳಾಂಬಾ, ಬಗಳಾಂಬಾ, ಜ್ವಾಲಾಮುಖೀ, ನೃಸಿಂಹೇಶ, ಪಾಂಡುರಂಗೇಶ– ಇವರ ದರ್ಶನವಾದಮೇಲೆ ಜಗನ್ನಾಥಕ್ಕೆ ಬಂದರು. ಅಲ್ಲೊಂದು ಮಠವನ್ನು ಮಾಡಿ ಪದ್ಮಪಾದರನ್ನು ಪೀಠಾಧಿಪತಿಗಳನ್ನಾಗಿ ಮಾಡಿದರು (ಚಿ. ಶಂ. ೩೦–೧೦, ೧೧). ಹಸ್ತಾಮಲಕತೋಟಕರೊಡನೆ ಉಜ್ಜಯಿನಿಗೆ ಬಂದರು. ಅಲ್ಲಿ ಮಹಾಕಾಲೇಶ್ವರನ ದರ್ಶನವನ್ನು ಮಾಡಿಕೊಂಡು ಅಲ್ಲಿ ಶಾಕ್ತಮಾರ್ಗದವರನ್ನು ವಾದದಲ್ಲಿ ಜಯಿಸಿ ಅದ್ವೈತಿಗಳನ್ನಾಗಿ ಮಾಡಿದರು. ಅಲ್ಲಿಂದ ಕ್ರಮದಿಂದ ದ್ವಾರಕೆಗೆ ಬಂದರು. ಅಲ್ಲಿ ಒಂದು ಮಠವನ್ನು ಸ್ಥಾಪಿಸಿ ಹಸ್ತಾಮಲಕರನ್ನು ಪೀಠದಲ್ಲಿ ನಿಲ್ಲಿಸಿದರು (ಚಿ. ಶಂ. ೩೦–೧೫ರಿಂದ ೫೫, ೩೧–೩ರಿಂದ ೬).[2]

(೨) ಚಿದ್ವಿಲಾಸರು ಕೊಟ್ಟಿರುವ ಈ ದಿಗ್ವಿಜಯವನ್ನು ಹೋಲಿಸಿದರೆ ನಮಗೆ ತಿಳಿಯಬರುವದೇನೆಂದರೆ : ಚಿದ್ವಿಲಾಸರ ಕ್ರಮದಲ್ಲಿ ಆಚಾರ್ಯರು ಉಜ್ಜಯಿನಿಯಿಂದ ದ್ವಾರಕೆಗೆ ಹೋದರು ; ಮಾಧವೀಯದಲ್ಲಿ ಮೊದಲು ದ್ವಾರಕೆಗೆ ಹೋಗಿ ಈ ಬಳಿಕ ಉಜ್ಜಯಿನಿಗೆ ಬಂದರು. ಚಿದ್ವಿಲಾಸರು ಉಜ್ಜಯಿನಿಯಲ್ಲಿ ಆಚಾರ್ಯರು ಶಾಕ್ತರನ್ನು ಜಯಿಸಿದರೆಂದು ಹೇಳುತ್ತಾರೆ ; ಮಾಧವನು ಶಾಕ್ತರನ್ನು ಸೇತುವಿನಲ್ಲಿ ಜಯಿಸಿದಂತೆ ಹೇಳಿ ಉಜ್ಜಯಿನಿಯಲ್ಲಿ ಭಟ್ಟಭಾಸ್ಕರರನ್ನು ಜಯಿಸಿದರೆಂದು ಹೇಳಿದಾನೆ. ಆನಂದಗಿರಿಯು ಇಲ್ಲಿ ಕಾಪಾಲಿಕರನ್ನು ಆಚಾರ್ಯರು ಗೆದ್ದರೆಂದು ಹೇಳಿದಾನೆ (ಪ್ರ. ೨೩); ಆದರೆ ಚಿದ್ವಿಲಾಸರು ರಾಮೇಶ್ವರದಲ್ಲಿ ಕಾಪಾಲಿಕರನ್ನು ಆಚಾರ್ಯರಿಂದ ಜಿತರನ್ನಾಗಿ ಮಾಡಿ (೩೦. ೧೩೩) ಇಲ್ಲಿಗೆ ಶಾಕ್ತೇಯರನ್ನು ವರ್ಗಾಯಿಸಿದಾರೆ ! ಚಿದ್ವಿಲಾಸರು ಕಾಪಾಲಿಕರ ವೃತ್ತಾಂತವನ್ನು ಬಹುಮಟ್ಟಿಗೆ ಆನಂದಗಿರಿಯನ್ನೇ ಅನುಸರಿಸಿ ಬರೆದಿರುತ್ತಾರೆಂಬುದನ್ನು ನಾವು ಲಕ್ಷಿಸಬಹುದಾಗಿದೆ.

1. ಚಿದ್ವಿಲಾಸರು ಅದ್ವೈತಿಗಳಾದರೂ ತಮ್ಮ ವಾದದಲ್ಲಿ ಶಿವಪಾರಮ್ಯವನ್ನೇ ಮುಖ್ಯವಾಗಿ ಎತ್ತಿಹಿಡಿದಿದಾರೆ. ಇದರಿಂದ ಅವರ ಗ್ರಂಥದ ಕಾಲದ ವಿಷಯಕ್ಕೆ ಏನಾದರೂ ಸಾಧನವು ದೊರಕಬಹುದೆಂದು ಇಲ್ಲಿ ಅದನ್ನು ಸೂಚಿಸಿರುತ್ತೇವೆ.

2. ಆನಂದಗಿರೀಯದಲ್ಲಿ ಪ್ರ. ೫೫ರಲ್ಲಿ ದ್ವಾರಕೆಯ ಪರಾಮರ್ಶವಿದೆ. 'ದ್ವಾರಕಾದಿದಿವ್ಯಸ್ಥಲವಿಲೋಕನವಶಾತ್' ಎಂದಿಷ್ಟೇ(ಪು. ೨೧೧) ಇದೆ. ಅಲ್ಲಿ ಮಠದ ಪರಾಮರ್ಶವಿಲ್ಲ.

(೩) ದ್ವಾರಕೆಗೆ ಹೋಗುವಾಗ ನರ್ಮದೆಯನ್ನು ದಾಟಬೇಕಾಗಿತ್ತು. ಅಲ್ಲದೆ ಆಚಾರ್ಯರು ಹೋದಾಗ ಗೋವಿಂದಭಗವತ್ಪಾದರು ಅವರಿಗೆ ಸಿಕ್ಕಿದರೆ, ಇಲ್ಲವೆ? ಅಥವಾ ಆಗಲೆ ಅವರು ಸಿದ್ಧಿಯನ್ನು ಹೊಂದಿದ್ದರೆ?–ಇವನ್ನು ಯಾರೂ ತಿಳಿಸಿಲ್ಲ.

(೪) ಪಾಂಚರಾತ್ರರನ್ನು ಜಯಿಸಿದ ಕಥೆ ಚಿದ್ವಿಲಾಸೀಯವಲ್ಲಿ (ಚಿ. ಶಂ ೨೮) ಆಗಲೆ ಬಂದುಬಿಟ್ಟಿರುವದರಿಂದಲೊ, ಏನೊ, ದ್ವಾರಕೆಯಲ್ಲಿ ಅವರ ಪರಾಮರ್ಶವನ್ನು ಮಾಡಿಲ್ಲ ಮಾಧವನು ಕಂಠೋಕ್ತನಾಗಿ ಅವರನ್ನು ಅಲ್ಲಿ ಆಚಾರ್ಯರು ಜಯಿಸಿದ ವೃತ್ತಾಂತವನ್ನು ವಿವರಿಸಿ ಬರೆದಿರುತ್ತಾನೆ. ದ್ವಾರಕೆಯು ಶ್ರೀಕೃಷ್ಣನ ಸ್ಥಾನವಾದ್ದರಿಂದ ಅಲ್ಲಿ ಪಾಂಚರಾತ್ರರು ಇದ್ದಿರಬಹುದೆಂದು ಊಹಿಸಬಹುದು. ಆದರೆ 'ಶತಶಃ ಸಮುಪೇತ್ಯ ಪಾಞ್ಚರಾತ್ರಾಸ್ತ್ವವಸ್ಮೃತಂ ಪಞ್ಚಭಿದಾಂ ವದನ್ತಃ' (ಮಾ. ಶಂ. ೧೫–೭೫) ಪಂಚಭೇದವನ್ನು ಹೇಳುವ ಪಾಂಚರಾತ್ರರು ಆಚಾರ್ಯರಿಂದ ಭಗ್ನರಾದರು ಎಂಬುದು ಮಾತ್ರ ವಸ್ತುಸ್ಥಿಗೆ ಹೊಂದುವಂತಿಲ್ಲ. ಏಕೆಂದರೆ ಭಾರತದಲ್ಲಿರುವ ನಾರಾಯಣೀಯದಲ್ಲಿರುವ ಪಾಂಚರಾತ್ರಮತದ ವರ್ಣನೆಯಲ್ಲಿ ಪಂಚಭೇದದ ಪರಾಮರ್ಶವಿಲ್ಲ. ಅಲ್ಲಿ 'ನಿರ್ಗುಣಾಂ ನಿರ್ಗುಣಾ ಭೂತ್ವಾ. ಪ್ರವಿಶನ್ತಿ ಸನಾತನಮ್' (೩೫೦–೭೨) ಎಂದಿದೆ. ಭಕ್ತರು ನಿರ್ಗುಣರಾಗಿ ನಿರ್ಗುಣನಾದ ಭಗವಂತನನ್ನೇ ಸೇರಿಕೊಳ್ಳುತ್ತಾರೆ– ಎಂದು ಸ್ಪಷ್ಟವಾಗಿ ಹೇಳಿರುವ ಮತವು 'ಪಂಚಭೇದಮತ'ವಾಗಲಾರದಷ್ಟೆ? ಶ್ರೀಶಂಕರಭಗವತ್ಪಾದರವರ ಸೂತ್ರಭಾಷ್ಯದಲ್ಲಿ ಭಾಗವತಮತವನ್ನು ಅನುವಾದಮಾಡುವಾಗಲೂ ಭಗವಂತನಾದ ವಾಸುದೇವನೇ, ಪರಮಾರ್ಥತತ್ತ್ವವು; ಯಾವಜ್ಜೀವವೂ ಆತನನ್ನು ಆರಾಧನೆಮಾಡಿದವರು ಆತನ ಸಾಯುಜ್ಯವನ್ನು ಹೊಂದುತ್ತಾರೆ ಎಂದೇ ಹೇಳಿದೆ. ಆದ್ದರಿಂದ ಪಂಚಭೇದಗಳನ್ನು ಒಪ್ಪುವ ಪಾಂಚರಾತ್ರರು ತಲೆದೋರಿಕೊಂಡಮೇಲೆಯೇ ಮಾಧವೀಯಶಂಕರವಿಜಯವು ಉತ್ಪನ್ನವಾಗಿರಬೇಕೆಂದು ಇದರಿಂದ ಸಿದ್ಧವಾಗುತ್ತದೆ. ಅನಂತಾನಂದಗಿರಿಯು ಉದಾಹರಿಸಿರುವ 'ಭಕ್ತಾ ಭಾಗವತಾಶ್ಚೈವ ವೈಷ್ಣವಾಃ ಪಾಂಚರಾತ್ರಿಣಃ| ವೈಖಾನಸಾಃ ಕರ್ಮಹೀನಾಃ ಷಡ್ವಿಧಾಶ್ಚೈವ ವೈಷ್ಣವಾಃ ||' (ಪ್ರ. ೬. ಪು. ೪೫ ; (ದೇ. ಪು. ೪೨) ಎಂಬ ಶ್ಲೋಕದ ಅರ್ಥವನ್ನು ಚಿದ್ವಿಲಾಸರೂ ಅನುವಾದಮಾಡಿಕೊಂಡಿರುವದರಿಂದ ಅವರಿಬ್ಬರೂ ಭಾಗವತಮತದಲ್ಲಿ ಒಳಪಂಗಡಗಳು ಒಡೆದುಕೊಂಡಮೇಲೆಯೇ ತಮ್ಮ ಶಂಕರವಿಜಯಗಳನ್ನು ಬರೆದರೆಂಬುದು ಸ್ಪಷ್ಟ.

(೫) ಉಜ್ಜಯಿನಿಯಲ್ಲಿ ಆಚಾರ್ಯರು ಭಟ್ಟಭಾಸ್ಕರನನ್ನು ಜಯಿಸಿದರೆಂಬ ಕಥೆಯು ನೀಲಕಂಠಾಚಾರ್ಯನನ್ನು ಜಯಿಸಿದರೆಂಬುದರ ಜಾತಿಗೇ ಸೇರ

ತಕ್ಕದ್ದಾಗಿದೆ. ಏಕೆಂದರೆ ವೇದಭಾಷ್ಯಕರ್ತನಾದ ಭಟ್ಟಭಾಸ್ಕರನು ಭೇದಾಭೇದ ವಾದಿಯಾದ ಭಾಸ್ಕರಾಚಾರ್ಯನಿಗಿಂತ ಬೇರೆಯೆಂಬುದೇ ಕವಿಗೆ ತಿಳಿದಿಲ್ಲ. ಭಾಸ್ಕರಾಚಾರ್ಯನು ಆಚಾರ್ಯರಿಗಿಂತ ಈಚಿನವನಾದ್ದರಿಂದ ಅವರ ಭಾಷ್ಯ ವನ್ನಲ್ಲದೆ ಪಂಚಪಾದಿಕೆಯನ್ನೂ ಅಲ್ಲಲ್ಲಿ ಖಂಡಿಸಿರುತ್ತಾನೆ. ಈ ಭಾಸ್ಕರಾ ಚಾರ್ಯನ ಅಭಿಪ್ರಾಯಗಳ ಖಂಡನೆಯು ಸೂತ್ರಭಾಷ್ಯಟೀಕೆಯಾದ ಭಾಮತಿ ಯಲ್ಲಿ ಕಂಡುಬರುತ್ತಿರುವರಿಂದ ಈತನು ಆಚಾರ್ಯರಿಗೂ ಭಾಮತೀಕಾರನಾದ ವಾಚಸ್ಪತಿಮಿಶ್ರನಿಗೂ ನಡುವಣ ಕಾಲದಲ್ಲಿ ಇದ್ದಿರಬೇಕೆಂದಾಗುತ್ತದೆ. ಹೀಗಿರು ವಲ್ಲಿ ಈತನೊಡನೆ ಆಚಾರ್ಯರಿಗೆ ವಾದವಾಯಿತೆಂಬುದು ಹೇಗೆ ವಿಶ್ವಸನೀಯ ವಾದೀತು ? ಹೀಗೆ ಅವಿಶ್ವಸನೀಯವಾದ ಘಟನೆಗಳೆಂಬುದರ ಕಾರಣದಿಂದಲೇ ನಾವು ನೀಲಕಂಠನ ಅಥವಾ ಭಾಸ್ಕರಾಚಾರ್ಯನ ಪೂರ್ವಪಕ್ಷಗಳೆಂದು ಮಾಧ ವನು ವರ್ಣಿಸಿರುವ ಯುಕ್ತಿಗಳನ್ನಾಗಲಿ ಅವಕ್ಕೆ ಆಚಾರ್ಯರು ಹೇಳಿದರೆಂದು ಕಲ್ಪಿಸಿರುವ ಪ್ರತ್ಯುತ್ತರಗಳನಾಗಲಿ ಇಲ್ಲಿ ವಿವರಿಸಿಲ್ಲ.

(೫) ಬಾಣ ಮಯೂರ, ದಂಡಿ–ಇವರೆಲ್ಲ ಆಚಾರ್ಯರ ಸಮಕಾಲಿಕ ರೆಂಬ ಕಲ್ಪನೆಯೂ (ಮಾ ಶಂ. ೧೫–೨೪೧) ಹೀಗೆಯೇ ಇತಿಹಾಸಕ್ಕೆ ವಿರುದ್ಧ ವಾಗಿರುವವರಿಂದ ಅದರ ವಿಷಯಕ್ಕೆ ಏನನ್ನೂ ಹೇಳಬೇಕಾಗಿಲ್ಲ. ಅವರಿಗೆ ಆಚಾರ್ಯರ ಭಾಷ್ಯದ ಶ್ರವಣವನ್ನು ಮಾಡಬೇಕೆಂಬ ಕುತೂಹಲವುಂಟಾಯಿತು (ನಿಜಭಾಷ್ಯಶ್ರವಣೋತ್ಸುಕಾಂಶ್ಚಕಾರ) ಎಂದು ಮಾಧವನು ಹೇಳಿರುವದಕ್ಕೆ ಯಾವ ಆಧಾರವಿದೆಯೋ ಅವನಿಗೇ ಗೊತ್ತು.

## ಬಾಹ್ಲೀಕದಲ್ಲಿ ಆರ್ಹತರ ಮತ್ತು ನೈಮಿಷದಲ್ಲಿ ಇತರರ ಸೋಲು

೧೮೨. ಆಚಾರ್ಯರು ಬಾಹ್ಲೀಕದೇಶದಲ್ಲಿ ಶಿಷ್ಯರಿಗೆ ಭಾಷ್ಯವನ್ನು ಹೇಳು ತ್ತಿರುವಲ್ಲಿ ಕೆಲವರು ಆರ್ಹತರು ಅಲ್ಲಿಗೆ ಬಂದು ವಾದದಲ್ಲಿ ಜಿತರಾದರು (ಮಾ. ಶಂ. ೧೫–೧೪೨ರಿಂದ ೧೫೫) ಎಂದು ಮಾಧವೀಯ. ಉಜ್ಜಯಿನಿ ಯಿಂದ ಭಾರತದ ವಾಯುವ್ಯಭಾಗದಲ್ಲಿರುವ ಭಾಕ್ಟ್ರಿಯಕ್ಕೆ ನೇರಾಗಿ ಹೋದರೆ? –ಎಂಬುದೊಂದು ವಿಮರ್ಶನೀಯವಿಷಯ. ಆರ್ಹತಮತದ ಖಂಡನೆಯನ್ನು ಚಿದ್ವಿಲಾಸರು ಮೃಡಪುರಿಯಲ್ಲಿ ಮಾಡಿಸಿದ್ದಾರೆ. ಅಲ್ಲಿ ಆರ್ಹತರಿಗೂ ಸೌಗತ ರಿಗೂ ಭೇದವೇ ಇಲ್ಲವೆಂಬಂತೆ ಅವರು ಬರೆದಿರುವದಲ್ಲದೆ ಬೌದ್ಧರ ಅಥವಾ ಜೈನರ ನಿಜವಾದ ಯಾವ ಮತವನ್ನೂ ಅವರು ತೋರಿಸಿಲ್ಲ (ಚಿ. ಶಂ. ೨೯–೯ ರಿಂದ೨೯) ಅವರನ್ನು ಶಿಷ್ಯರ ಪಾದರಕ್ಷೆಯೇ ಮುಂತಾದದ್ದನ್ನು ನೋಡಿಕೊಂಡಿರು ವದಕ್ಕೆ ಆಚಾರ್ಯರು ನಿಯಮಿಸಿದರೆಂದು (೨೯) ಅಲ್ಲಿಹೇಳಿರುವವಂತೂ ಗರ್ಹ್ಯ

ವಾಗಿದೆ. ಪ್ರಕೃತದಲ್ಲಿ ಮಾಧವನು ಆರ್ಹತಮತವನ್ನೇನೋ ಸರಿಯಾಗಿ ಅನುವಾದಮಾಡಿಕೊಂಡಿರುತ್ತಾನೆ ಆದರೆ ಉಪಸಂಹಾರಶ್ಲೋಕದಲ್ಲಿ

ಇತಿ ಮಾಧ್ಯಮಿಕೇಷು ಭಗ್ನದರ್ಪೇ
  ಷ್ವಥ ಭಾಷ್ಯಾಣಿ ಸ ನೈಮಿಶೇ ವಿತತ್ಯ ।
ವರದಾನ್ ಭರತಾಂಶ್ಚ ಶೂರಸೇನಾನ್
  ಕುರುಪಾಞ್ಚಾಲಮುಖಾನ್ ಬಹೂನಜೈಷೀತ್ ॥ (೧೫–೧೬)

'ಹೀಗೆ ಮಾಧ್ಯಮಿಕರ ಭಂಗವಾದಮೇಲೆ ಆಚಾರ್ಯರು ನೈಮಿಷದಲ್ಲಿಯೂ ಭಾಷ್ಯಗಳನ್ನು ಹರಡಿದರು. ವರದರು, ಭರತರು, ಶೂರಸೇನರು. ಕುರು ಪಂಚಾಲರು– ಮೊದಲಾದ ಅನೇಕರನ್ನು ಜಯಿಸಿದನು' ಎಂದು ಬರೆದಿರುವದು ವಿಚಿತ್ರವಾಗಿದೆ. ಏಕೆಂದರೆ ಆರ್ಹತರು ಮಾಧ್ಯಮಿಕರಲ್ಲ ; ಮಾಧ್ಯಮಿಕರೆಂದರೆ ಬೌದ್ಧರ ಶೂನ್ಯವಾದಿಗಳು (!)

'ವರದರೇ ಮೊದಲಾದವರು ಯಾರು ? ಅವರ ಮತವೇನು ?' ಎಂಬುದೇ ನನ್ನೂ ಹೇಳದೆ ಸುಮ್ಮನೆ 'ಬಹುಜನರನ್ನು ಜಯಿಸಿದನು' ಎಂದಿರುವದನ್ನು ನೋಡಿದರೆ ಆಚಾರ್ಯರು ಭರತಖಂಡದ ಮೂಲೆಮೂಲೆಗಳಲ್ಲಿಯೂ ಸಂಚರಿಸಿ ಎಲ್ಲರನ್ನೂ ಜಯಿಸಿದರು– ಎಂಬ ವರ್ಣನೆಯಿಲ್ಲದಿದ್ದರೆ ಕಾವ್ಯವು ಸುಂದರವಾಗಿ ತೋರಲಾರದು ಎಂಬುದೊಂದೇ ಮಾಧವನ ಉದ್ದೇಶವೆಂದು ಹೇಳಬೇಕಾಗುತ್ತದೆ. ಇದರ ಮುಂದಿರುವ

ಪಟುಯುಕ್ತಿನಿಕೃತ್ತಸರ್ವಶಾಸ್ತ್ರಂ
  ಗುರುಭಟ್ಟೋದಯನಾದಿಕೈರಜಯ್ಯಮ್
ಸ ಹಿ ಖಣ್ಡನಕಾರಮೂರ್ಧದರ್ಪಂ
  ಬಹುಧಾ ವ್ಯುದ್ಯ ವಶಂವದಂ ಚಕಾರ ॥ (ಮಾ. ಶಂ. ೧೫–೧೫೬)

ಎಂಬ ವಾಕ್ಯವೂ ಈ ಉದ್ದೇಶದಿಂದಲೇ ಬರೆದದ್ದಾಗಿರಬೇಕು. ಏಕೆಂದರೆ ಗುರು, ಭಟ್ಟ, ಉದಯನ– ಇವರಿಂದಲೂ ಜಯಿಸಲು ಖಂಡನಕಾರನು ಅಶಕ್ಯನಾಗಿದ್ದನು– ಎಂದು ಹೇಳುವದಕ್ಕೆ, ಮೊದಲು ಅವರೆಲ್ಲ ಸಮಕಾಲಿಕರೇ ಅಲ್ಲ. ಒಂದು ವೇಳೆ ಅವರ ಸಿದ್ಧಾಂತವನ್ನವಲಂಬಿಸಿದವರು ಅವನನ್ನು ಗೆಲ್ಲಲಾರದೆಹೋಗಿದ್ದರೆಂಬ ಅಭಿಪ್ರಾಯವನ್ನು ಈ ವಾಕ್ಯಕ್ಕೆ ಕಲ್ಪಿಸಿದರೂ ಆಚಾರ್ಯರು ಅವನೊಡನೆ 'ಬಹಳವಾಗಿ ವಾದಮಾಡಿ ತಮ್ಮ ವಶಕ್ಕೆ ತೆಗೆದುಕೊಂಡರು' ಎಂಬುದಂತೂ ಅಪಹಾಸ್ಯವಾದ ಮಾತು. ಏಕೆಂದರೆ ಖಂಡನಖಂಡಖಾದ್ಯದ ಕರ್ತೃವಾದ ಶ್ರೀಹರ್ಷನು ಆಚಾರ್ಯರಿಂದ ಈಚಿನವನು; ಅವರಲ್ಲಿ ಭಕ್ತಿಯುಳ್ಳವನಾಗಿದ್ದು ಅವರ ಸಿದ್ಧಾಂತವನ್ನು ಸ್ಥಾಪಿಸುವ ಒಂದಾನೊಂದು ಯುಕ್ತಿಯನ್ನು ತೋರಿಸುವದಕ್ಕೆಂದೇ ಗ್ರಂಥ

ವನ್ನು ಬರೆದಾತನು ಖಂಡನಖಂಡಖಾದ್ಯವನ್ನು ಕಣ್ಣೆತ್ತಿ ನೋಡದೆಯೇ, ಕೇಳಿಕೆಯ ಮಾತಿನ ಮೇಲೆ ಖಂಡನಕಾರನನ್ನು ಆಚಾರ್ಯರು ಜಯಿಸಿದರೆಂದು ಬರೆದಿರುವ ಈ ಮಾಧವನು ವಿದ್ಯಾರಣ್ಯರಾಗಿರಲಾರನೆಂಬುದಕ್ಕೆ ಇದೊಂದು ಬಲವಾದ ಪ್ರಮಾಣವಾಗಿದೆ.

## ಕಾಮರೂಪದಲ್ಲಿ ಅಭಿನವಗುಪ್ತ

೧೮೩. ಆಮೇಲೆ ಆಚಾರ್ಯರು ಕಾಮರೂಪದೇಶಕ್ಕೆ ಹೋದರು. ಅಭಿನವಗುಪ್ತನೆಂಬ ಶಾಕ್ತಭಾಷ್ಯಕಾರನನ್ನು ಜಯಿಸಿದರು. ಇವರನ್ನು ಮತ್ತೆ ಹೇಗೂ ಗೆಲ್ಲುವದು ಅಸಾಧ್ಯವೆಂದು ತಿಳಿದ ಆತನು ಹೊರಗೆ ನೋಡುವದಕ್ಕೆ ಆಚಾರ್ಯರ ಶಿಷ್ಯನಂತೆಯೇ ನಟಿಸುತ್ತಿದ್ದನು. ವಿದೇಹ, ಕೋಸಲ, ಅಂಗ ವಂಗ– ಇವುಗಳಲ್ಲೆಲ್ಲ ಆಚಾರ್ಯರ ಯಶಸ್ಸು ಹರಡಿತು. ಆಮೇಲೆ ಅವರು ಮುರಾರಿಮಿಶ್ರ, ಉದಯನ, ಧರ್ಮಗುಪ್ತ–ಇವರನ್ನು ಗೆದ್ದು ಗೌಡದೇಶ ದಲ್ಲಿಯೂ ತಮ್ಮ ಕೀರ್ತಿಯನ್ನು ಹಬ್ಬಿಸಿದರು. ಈ ರೀತಿಯಲ್ಲಿ ಸಕಲದಿಕ್ಕು ಗಳಲ್ಲಿಯೂ ದ್ವೈತವಾರ್ತೆಯು ಇಲ್ಲದಂತೆ ಮಾಡಿ ಸರ್ವಸಂಶಯಗಳನ್ನೂ ನಿವೃತ್ತಿ ಮಾಡುತ್ತಾ ಇರುತ್ತಿದ್ದರು (ಮಾ. ಶಂ. ೧೫–೧೫೮ರಿಂದ ಸರ್ಗಾಂತ್ಯದವರೆಗಿನ ಸಾರ).

ಆಚಾರ್ಯರು ಎಲ್ಲರನ್ನೂ ಜಯಿಸಿದರೆಂದು ತಿಳಿಸುವದೇ ಗ್ರಂಥಕರ್ತೃವಿನ ಉದ್ದೇಶವೆಂಬುದು ಸ್ಪಷ್ಟ. ಆದ್ದರಿಂದ ಆತನು ಆಚಾರ್ಯರ ಕಾಲಕ್ಕೆ ಇದ್ದವರು, ಇಲ್ಲದಿದ್ದವರು–ಎಂಬ ವಿವೇಚನೆಯಿಲ್ಲದೆ, ಎಲ್ಲರನ್ನೂ ಸೇರಿಸುತ್ತಾ ಬಂದಿರುತ್ತಾನೆ. ಕಾಮರೂಪವೆಂಬುದು ಅಸ್ಸಾಮಿನ ಮುಖ್ಯನಗರ; ಅಲ್ಲಿ ತಾಂತ್ರಿಕರಿರುವದು ನಿಜವಾದರೂ ಅಭಿನವಗುಪ್ತನು ಆ ದೇಶದವನಲ್ಲ. ಅವನು ಕಾಶ್ಮೀರದೇಶದಲ್ಲಿ ಪ್ರತ್ಯಭಿಜ್ಞಾದರ್ಶನದ ಗ್ರಂಥಗಳನ್ನು ಬರೆದ ಒಬ್ಬ ಸುಪ್ರಸಿದ್ಧನಾದ ಆಚಾರ್ಯನು. ತಂತ್ರಾಲೋಕ, ಈಶ್ವರಪ್ರತ್ಯಭಿಜ್ಞಾವಿಮರ್ಶಿನೀ, ಪರಮಾರ್ಥ ಸಾರ– ಮುಂತಾದ ಅನೇಕ ಗ್ರಂಥಗಳನ್ನು ಬರೆದು ಸುಪ್ರಸಿದ್ಧನಾಗಿರುವ ಪ್ರಖ್ಯಾತ ಶೈವಾಚಾರ್ಯನನ್ನು ಇದುವರೆಗೂ ಯಾರ ಕೈಗೂ ಸಿಕ್ಕದೆ ಇರುವ 'ಶಾಕ್ತಭಾಷ್ಯ' ವನ್ನು ಬರೆದವನೆಂದು ಹೇಳಿರುವದೂ ಆಚಾರ್ಯರಿಂದ ನಾಲ್ಕೈದು ಶತಮಾನ ಗಳಷ್ಟು ಈಚೆಗೆ ಇದ್ದ ಅವನನ್ನು ಆಚಾರ್ಯರ ಸಮಕಾಲಿಕನನ್ನಾಗಿ ಮಾಡಿರು ವದೂ– ಈ ಕವಿಯ ಸಾಹಸ !

## ದಿಗ್ವಿಜಯದ ಉಪಸಂಹಾರ

೧೮೮. ಆಚಾರ್ಯರು ಸರ್ವದಿಕ್ಕುಗಳಲ್ಲಿಯೂ ಸರ್ವಮತಪ್ರವರ್ತಕರು ಗಳನ್ನೂ ಅಥವಾ ಸರ್ವಮತಗಳ ಅನುಯಾಯಿಗಳನ್ನೂ ಗೆದ್ದರೆಂದು ಜಯಭೇರಿ

ಯನ್ನು ಹೊಡೆಯುವದೇ ಶಂಕರವಿಜಯಕಾರರುಗಳ ಹೆಗ್ಗುರಿಯಾದ್ದರಿಂದ ಕಾಲ್ಪನಿಕವಾದ ಎಷ್ಟೋ ಸ್ಥಳಗಳನ್ನು ಆವರು ಸಂಚರಿಸಿದಂತೆಯೂ ಅಸಮಕಾಲಿಕರಾದ ಎಷ್ಟೋ ವಾದಿಗಳನ್ನು ಜಯಿಸಿದಂತೆಯೂ ಕಲ್ಪಿಸಿರುವದು ಸ್ವಾಭಾವಿಕವಾಗಿದೆ. ಈವರೆಗೆ ನಾವು ಮುಖ್ಯವಾಗಿ ಮಾಧವೀಯಾನುಸಾರವಾಗಿಯೇ ಆಚಾರ್ಯರು ಸಂದರ್ಶಿಸಿದ ಸ್ಥಳಗಳನ್ನೂ ಪಾದದಲ್ಲಿ ಸೋಲಿಸಿದ ಇತರಮತೀಯರನ್ನೂ ವಿವರಿಸುತ್ತಾಬಂದಿರುವದು ಪ್ರತಿಪಾದನೆಯ ಸೌಕರ್ಯಕ್ಕಾಗಿ ಮಾತ್ರ.

ಚಿದ್ವಿಲಾಸೀಯದ ಮತ್ತು ಆನಂದಗಿರೀಯ ದಿಗ್ವಿಜಯಕ್ರಮವನ್ನು ಸ್ವಲ್ಪಮಟ್ಟಿಗೆ ಹಿಂದೆ ತಿಳಿಸಿರುತ್ತೇವೆ (ಪು. ೨೪೬, ೨೪೮, ೨೫೧, ೨೫೫, ೨೬೭, ೨೫೮). ಆ ವಿವರದಲ್ಲಿ ಚಿದಂಬರದಲ್ಲಿ ಸೌರಮತವನ್ನು ಖಂಡಿಸಿದ್ದು (ಚಿ.೨೬–೧೧ರಿಂದ೬೨), ಮಧ್ಯಾರ್ಜುನದಲ್ಲಿ, ದೇವಿ, ಗಣಪತಿ, ಶಿವ, ಸೂರ್ಯ ವಿಷ್ಣು–ಈ ದೇವತೆಗಳ ಅರ್ಚಕರನ್ನು ಅದ್ವೈತಿಗಳಾಗಿ ಪರಿವರ್ತಿಸಿದ್ದು, ರಾಮೇಶ್ವರನಿಗೆ ಗಂಗಾಭಿಷೇಕವನ್ನು ಮಾಡಿಸಿದ್ದು, ವಿಷ್ಣುಶರ್ಮ, ಪದ್ಮನಾಭ, ಕೃಷ್ಣದ್ವೈಪಾಯನ, ವ್ಯಾಸದಾಸ, ವರಾಹಾಚಾರ್ಯ–ಮುಂತಾದ ವೈಷ್ಣವರನ್ನೂ ಉಜ್ಜಯಿನಿಯಲ್ಲಿ 'ತ್ರಿಪುರಾಂಬಾಕುಮಾರ', 'ಬಿಂದುಭುಕ್' ಪೂರ್ಣಬೋದಕ, ಪೂರ್ಣಾನಂದ, ವೀರಶಾಕ್ತ, ಶುದ್ಧವಿದ್ಯಾಕಲಾನಿಧಿ -ಎಂಬ ಶಾಕ್ತರನ್ನು ಜಯಿಸಿದ್ದು–ಇಂಥ ವಿವರಗಳನ್ನು ನಾವು ಅಲ್ಲಿ ಬಿಟ್ಟುಬಿಟ್ಟಿರುತ್ತೇವೆ. ಆಚಾರ್ಯರು ದ್ವಾರವತಿಯನ್ನು ಬಿಟ್ಟಮೇಲೆ ಮಧುರೆ, ಗೋಕುಲ ಪೌಂಡರೀಕಕ್ಷೇತ್ರ, ಕುರುಕ್ಷೇತ್ರ–ಇವುಗಳನ್ನು ನೋಡಿದರು–ಎಂದಿದೆ.

ಈ ದಿಗ್ವಿಜಯವಿವರಣೆಯಲ್ಲಿ ಕಾಣುವ ಮುಖ್ಯವಿಷಯಗಳೇನೆಂದರೆ : (೧) ಮುಖ್ಯವಾಗಿ ಆಚಾರ್ಯರು ತೀರ್ಥಯಾತ್ರಾಕ್ರಮದಿಂದಲೇ ಸಂಚರಿಸಿದರು. (೨) ಅಷ್ಟುಹೊತ್ತಿಗೆ ನಾಲ್ಕುದಿಕ್ಕುಗಳಲ್ಲಿಯೂ ಮಠಸ್ಥಾಪನೆಯಾಯಿತೆಂದು ಹೇಳುವ ಮಠಾಮ್ನಾಯಗಳು ಪ್ರಚಾರದಲ್ಲಿದ್ದಂತೆ ಕಾಣುತ್ತದೆ. (೩) ಶರೀರಗಳನ್ನು ತಪ್ತಲೋಹಗಳಿಂದ ಸುಟ್ಟುಕೊಳ್ಳುತ್ತಿದ್ದವರನ್ನು ಆ ಆಚಾರಗಳಿಂದ ತಪ್ಪಿಸಿ ಶುದ್ಧವೈದಿಕಮಾರ್ಗಕ್ಕೆ ತಿರುಗಿಸಿದ್ದು ಆಚಾರ್ಯರ ಒಂದು ಮುಖ್ಯಕಾರ್ಯಕ್ರಮ. (೪) ಇತರ ಮತದ್ವೇಷವು ಕಾಣದಿದ್ದರೂ ಚಿದ್ವಿಲಾಸರಲ್ಲಿ ಶಿವಾದ್ವೈತದಲ್ಲಿ ಅಭಿಮಾನವು ಹೆಚ್ಚು.

ಅನಂತಾನಂದಗಿರಿಯು ವಿವರಿಸುವ ಎಷ್ಟೋ ಹೆಸರುಗಳನ್ನು ಚಿದ್ವಿಲಾಸರು ಆರಿಸಿಕೊಂಡಿರುತ್ತಾರೆಂದು ಕಾಣಬರುತ್ತಿದೆ. ಕಲ್ಪನಾಕುಶಲನಾದ ಆತನು ಶೈವರು, ಶಿವಮತೈಕದೇಶಿ, ವೈಷ್ಣವ, ಪಾಂಚರಾತ್ರ, ವೈಖಾನಸ, ಕರ್ಮಹೀನ–ಇವರನ್ನೂ ವೈಷ್ಣವ, ಹೈರಣ್ಯಗರ್ಭ, ಸೌರ, ಅಗ್ನಿವಾದಿ, ಮಹಾ

ಗಣಪತಿ, ಹರಿದ್ರಾಗಣಪತಿ, ಉಚ್ಛಿಷ್ಟಗಣಪತಿ, ನವನೀತಸ್ವರ್ಣಸಂತಾನಗಣಪತಿ –ಎಂಬ ಗಣಪತ್ಯಾರಾಧಕರನ್ನೂ ಶಕ್ತಿ, ಮಹಾಲಕ್ಷ್ಮಿ, ವಾಗ್ದೇವತಾ, ವಾಮಾಚಾರ–ಮುಂತಾದ ಶಾಕ್ತೇಯರನ್ನೂ ಕಾಪಾಲಿಕ, ಚಾರ್ವಾಕ, ಸೌಗತ, ಜೈನ, ಬೌದ್ಧ, ಮಲ್ಲಾರಿ, ವಿಷ್ವಕ್ಸೇನ, ಮನ್ಮಥ, ಕುಬೇರ, ಯಮ, ವರುಣ, ಶೂನ್ಯ, ವರಾಹ, ಲೋಕ, ಗುಣ, ಸಾಂಖ್ಯ, ಯೋಗ, ಅಣು, ಚಂದ್ರ, ಭೌಮ, ಕ್ಷಪಣಕ, ಪಿತೃ, ಶೇಷಗರುಡ, ಸಿದ್ಧ, ಗಾಂಧರ್ವ, ಭೂತ,ಭೇತಾಳ–ಎಂಬ ಮತಗಳನ್ನೂ ಆಚಾರ್ಯರು ಗೆದ್ದಂತೆ ಬರೆದಿರುತ್ತಾನೆ! ಇವುಗಳ ಹೆಸರುಗಳು ಕೆಲವು ಪರ್ಯಾಯನಾಗಿವೆ. ಆಚಾರ್ಯರ ಕಾಲಕ್ಕೆ ವಿವಿಧಮತಗಳೂ ಆಚಾರಗಳೂ ಲೋಕದಲ್ಲಿ ಹರಡಿಕೊಂಡಿದ್ದವೆಂದು ತಿಳಿಸುವದಕ್ಕೆ ಇವುಗಳಲ್ಲಿ ಕೆಲವನ್ನು ಗ್ರಂಥಕರ್ತನು ತಾನೇ ಕಲ್ಪಿಸಿಕೊಂಡಿದಾನೆಂದರೂ ಸಲ್ಲುವಂತಿದೆ.

## ಷಣ್ಮತಸ್ಥಾಪನೆ :

೧೪೫. ಆಚಾರ್ಯರು ಮಾಯಾಪುರಿಯಲ್ಲಿದ್ದಾಗ, ಪರವಾದಿದವಾನಲ, ವಟುಕನಾಥ, ಮಹಾಧುಣ್ಡಿಗಣೇಶ್ವರ, ದಿವಾಕರಾಚಾರ್ಯ, ಬಿಂದುಮಾಧವ–ಇವರೆಲ್ಲರೂ ಗುರುಗಳನ್ನು ನಮಸ್ಕರಿಸಿ 'ತಾವು ಅದ್ವೈತವೇ ವೇದವೇದಾಂತಸಂಮತವು, ಮಿಕ್ಕದ್ದೆಲ್ಲವೂ ಅಸಾರವು–ಎಂದು ಸಾಧಿಸಿಬಿಟ್ಟಿರುತ್ತೀರಿ ; ಆದರೆ ಕಲಿಯುಗದಲ್ಲಿ ಮಲಿನಬುದ್ಧಿಯುಳ್ಳ ಜನರಿಗೆ ಹೇಗೆತಾನೆ ಅದ್ವೈತದಲ್ಲಿ ಪ್ರವೇಶವಾದೀತು ? ಆದ್ದರಿಂದ ಶೈವ, ಶಾಕ್ತ, ವೈಷ್ಣವ, ಸೌರ, ಗಾಣಾಪತ್ಯ, ಕಾಪಾಲ–ಎಂಬ ಆರು ಮತಗಳನ್ನು ತಾವು ಪ್ರಖ್ಯಾತಿಗೆ ತರಬೇಕು' – ಎಂದು ಬೇಡಿಕೊಂಡರು. ಆಚಾರ್ಯರು ನಿಮಗೆ ಯಾರುಯಾರಿಗೆ ಯಾವ ಯಾವ ಮತದಲ್ಲಿ ಅಭಿಲಾಷೆಯಿರುತ್ತದೆಯೋ, ಆಯಾ ಮತವನ್ನು ಪ್ರತಿಪಾದಿಸಿರಿ ; ಶರೀರಕ್ಕೆ ಅಂಕನವನ್ನು ಮಾಡಿಕೊಳ್ಳುವದು, ತಪ್ತಲೋಹಗಳಿಂದ ಶರೀರವನ್ನು ಸುಟ್ಟುಕೊಳ್ಳುವದು– ಇಂಥ ಶ್ರುತಿಸ್ಮೃತಿವಿರುದ್ಧವಾದ ಆಚಾರಗಳನ್ನು ಬಿಟ್ಟು ಷಣ್ಮತವನ್ನು ಪ್ರಕಾಶಗೊಳಿಸಿರಿ–ಎಂದು ಹೇಳಿದರು. ಅದರಂತೆ ಆ ಶಿಷ್ಯರು ದಿಗ್ವಿಜಯಕ್ಕೆ ಹೊರಟರು (ಚಿ ಶಂ. ೩೧–೧೮ರಿಂದ ೨೩). ಇದು ಚಿದ್ವಿಲಾಸರ ಕಥೆ.

**ಆನಂದಗಿರೀಯದ ವರ್ಣನೆ ಹೇಗೆಂದರೆ :** ಶುದ್ಧಾದ್ವೈತದಲ್ಲಿ ಅಧಿಕಾರಿಗಳಲ್ಲದವರು ವಿಶ್ರಂಖಲಪ್ರವೃತ್ತಿಯುಳ್ಳವರಾದಾರು ಎಂದು ಲೋಕರಕ್ಷಣಾರ್ಥವಾಗಿ ವರ್ಣಾಶ್ರಮಪರಿಪಾಲನೆಯನ್ನು ಮಾಡಬೇಕೆಂದು ಜೀವೇಶ್ವರಭೇದವುಳ್ಳ ಮತಕಲ್ಪನೆಯನ್ನು ಮಾಡಬೇಕೆಂದು ಪ್ರಾರಂಭಿಸಿ (೧) **ಪರಮತಕಾಲಾನಲ**ನೆಂಬ ಶಿಷ್ಯನನ್ನು ಕುರಿತು 'ನಿನಗೆ ಯಾವ ಮತವು ಪ್ರಿಯವು ?'– ಎಂದು ಕೇಳಿ

ವರು. ಆತನು 'ಅದ್ವೈತದಲ್ಲಿಯೇ ನನಗೆ ಮನಸ್ಸು ನಿಂತಿದೆಯಾದರೂ ಶಿವೋಪಾಸನೆಯಲ್ಲಿ ನನಗೆ ಭಕ್ತಿಯಿದೆ' ಎಂದನು. ಆಚಾರ್ಯರು 'ಅದ್ವೈತಕ್ಕೆ ಅನಧಿಕಾರಿಗಳಾದವರಿಗೆ ಇದೂ ಆಗಬಹುದು' ಎಂದರು. ಆ ಶಿಷ್ಯನು ಭರತ ಖಂಡದಲ್ಲಿ ಶಿವಪಂಚಾಕ್ಷರೀಮಂತ್ರೋಪದೇಶಪೂರ್ವಕವಾಗಿ ಶೈವಮತವನ್ನು ಪ್ರಚಾರಮಾಡಿದನು. (ಆ. ಪ್ರ. ೬೭). ಬಳಿಕ ಲಕ್ಷ್ಮಣ, ಹಸ್ತಾಮಲಕ ಎಂಬ ಶಿಷ್ಯರ ಆಶಯವನ್ನು ತಿಳಿದು ಅವರಿಗೆ ಸಂನ್ಯಾಸವನ್ನು ಕೊಟ್ಟು 'ಆರು(?) ವಿಧವಾದ ಭೇದವುಳ್ಳ, ಸಕಲಮನುಜಮೋಹಕರವಾದ (!) ಹತ್ತು ಮುದ್ರೆಗಳ ಗುರುತುಳ್ಳ (ದ್ವಿಪಞ್ಚಮುದ್ರಾಲಿಙ್ಗಮ್) ನಾರಾಯಣಾಷ್ಟಾಕ್ಷರಮಂತ್ರೋಪ ದೇಶಮೂಲಕವಾದ ವೃಷ್ಟಿಸೃಷ್ಟಿದೋಷವರ್ಜಿತವಾದ (?) ಮತವನ್ನು ಕಲ್ಪಿಸಿ ಹೀಗೆ ಆರು ವಿಧವಾದ (?) ಜ್ಞಾನಕರ್ಮವಿಭೇದದಿಂದ (ದೇ. ನಾ. ಕರ್ಮ ವಿಭೇದೇನ ಪ್ರ. ೨೦೬) ವೈಷ್ಣವಮತವನ್ನು ಮಾಡಿ ದಿಗ್ವಿಜಯಮಾಡಿರಿ !' ಎಂದರು. ಅವರು ಹಾಗೇ ಮಾಡಿದರು (ಆ. ಪ್ರ. ೬೯). ಹೀಗೆಯೇ ತ್ರಿಪುರಕುಮಾರನ ಮೂಲಕ ಶಾಕ್ತಮತವನ್ನೂ (ಆ. ಪ್ರ. ೭೦), ಗಿರಿಜಾ ಕುಮಾರನ ಮೂಲಕ ಗಾಣಾಪತ್ಯವನ್ನೂ (ಆ. ಪ್ರ. ೭೧) ಪ್ರಚಾರಮಾಡಿ ವಟುಕನಾಥನೆಂಬ ಶಿಷ್ಯನ ಅಭಿಪ್ರಾಯದಂತೆ ಕಾಪಾಲಿಕಮತಕ್ಕೆ ಅವಕಾಶ ವನ್ನು ಕಲ್ಪಿಸಿದರು (ಆ. ಪ್ರ. ೭೨). ಇಂದ್ರಸಂಪ್ರದಾಯವರ್ತಿಯಾದ ಸುರೇಶ್ವರನ ಮೂಲಕ ಮೋಕ್ಷಲಿಂಗವನ್ನು ಚಿದಂಬರಕ್ಕೆ ಕಳುಹಿಸಿ ದರು (ಆ. ಪ್ರ. ೭೪).

ಇಲ್ಲಿ ಎರಡು ಶಂಕರವಿಜಯಗಳಲ್ಲಿಯೂ ಹೇಳಿರುವ ಷಣ್ಮತಪ್ರವರ್ತಕ ಶಿಷ್ಯರ ಹೆಸರುಗಳು ಬೇರೆಬೇರೆಯಿವೆ. ಚಿದ್ವಿಲಾಸೀಯದಲ್ಲಿ ಶಿಷ್ಯರೇ ಆಚಾರ್ಯ ರನ್ನು ಹೀಗೆ ಮತಪ್ರವರ್ತನೆಮಾಡಬೇಕೆಂದು ಬೇಡಿಕೊಂಡರು. ಆನಂದ ಗಿರೀಯದಲ್ಲಿ ಆಚಾರ್ಯರೇ ಹೀಗೆ ಮಾಡುವದು ಅವಶ್ಯವೆಂದು ತಿಳಿದರು– ಎಂಬ ವೃತ್ತಾಂತಕಥನವೈಲಕ್ಷಣ್ಯವನ್ನು ವಾಚಕರು ಲಕ್ಷಿಸಬೇಕು.

ಈ ಮತಸ್ಥಾಪನೆಯ ವಿಷಯಕ್ಕೆ ನೆನಪಿಡತಕ್ಕ ವಿಷಯಗಳಿವು : (೧) ಆಚಾರ್ಯರು ಅದ್ವೈತವೇ ಪರಮಸಿದ್ಧಾಂತವೆಂದು ಎಣಿಸಿದರೂ ವ್ಯವ ಹಾರದಲ್ಲಿ ಜೀವೇಶ್ವರಭೇದವನ್ನೊಳಗೊಂಡ ಉಪಾಸನೆಯನ್ನು ಮಾಡುವದು ಶಾಸ್ತ್ರೀಯವೇ, ಶ್ರೇಯಸ್ಕರವೇ ಎಂದು ಗೀತಾಭಾಷ್ಯದಲ್ಲಿಯೂ ಸೂತ್ರಭಾಷ್ಯ ದಲ್ಲಿಯೂ (ಗೀ. ಭಾ. ೧೨–೧೦ ಅವತರಣಿಕೆ ಸೂ. ಭಾ. ಆನಂದಮಯಾಧಿ ಕರಣದ ಅವತರಣಿಕೆ) ಹೇಳಿರುತ್ತಾರೆ. ಆದ್ದರಿಂದ ಅವರು ಶೈವಾದಿಮತಗಳಿಗೆ ಅವಕಾಶವನ್ನು ಕಲ್ಪಿಸಿದರೆಂಬುದು ಅಸಂಭಾವಿತವಲ್ಲ. ಆದರೆ ಅವರು ಇವನ್ನು ಹೊಸದಾಗಿ ಸ್ಥಾಪಿಸಬೇಕಾದದ್ದೇನೂ ಇರಲಿಲ್ಲ. (೨) ಷಣ್ಮತಸ್ಥಾಪಕರಾದ

ಶಿಷ್ಯರ ಹೆಸರು ಬೇರೆಬೇರೆಯಾಗಿವೆ : ಅವು ಮತ್ತೆ ಯಾವ ಸಂದರ್ಭದಲ್ಲಿಯೂ ಬಂದಿಲ್ಲ. ಆದ್ದರಿಂದ ಇವು ಚಿದ್ವಿಲಾಸ ಮತ್ತು ಆನಂದಗಿರಿ ಇವರ ಕಲ್ಪನೆಯೇ ಆಗಿರಬೇಕು. (೩) 'ಷಣ್ಮತಸ್ಥಾಪನಾಚಾರ್ಯ' ಎಂಬ ಬಿರುದನ್ನು ಮಠದವರು ಉಪಯೋಗಿಸಿಕೊಳ್ಳುತ್ತಿರುವದನ್ನು ನೋಡಿ ಯಾರೋ ಈ ಮತಪ್ರವರ್ತನೆಯ ಕಥೆಯನ್ನು ಈಚೆಗೆ ಕಟ್ಟಿದ್ದರೂ ಕಟ್ಟಿರಬಹುದು. (೪) ಚಿದ್ವಿಲಾಸರು ಶರೀರಾಂಕನಾದಿಗಳನ್ನು ಬಿಟ್ಟು ಉಪಾಸನೆಮಾಡುವವನ್ನು ಪ್ರಚಾರಮಾಡುವಂತೆ ಆಚಾರ್ಯರು ಹೇಳಿದರು– ಎಂಬುದು ಈಚಿನ ಶಂಕರಾನುಯಾಯಿಗಳಾದ ಬ್ರಾಹ್ಮಣಾದಿಗಳ ಆಚಾರವನ್ನು ನೋಡಿ ಕಲ್ಪಿಸಿದ ಕಥೆಯಾಗಿರಬಹುದು. ಆನಂದಗಿರಿಯು ಅಂಕನಾದಿಗಳ ಸಮೇತವಾದ (!) ಮತಗಳನ್ನು ಶಂಕರಶಿಷ್ಯರು ಪ್ರಚಾರಮಾಡಿದರೆಂದು ಹೇಳಿರುವದು ಸ್ವಭಾವಕ್ಕೆ ಹೊಂದುವಂತಿಲ್ಲ. ರಾಮಾನುಜ ಮಧ್ವಾಚಾರ್ಯರೇ ಮುಂತಾದವರೂ ಆಚಾರ್ಯರ ಮತವನ್ನೇ ಬೋಧಿಸಿರುತ್ತಾರೆ–ಎಂಬ ಧ್ವನಿ ಬರುವಂತೆ, ಕೀಳುಭಾವನೆಯಿಂದ, ಈ ಕಥೆ ಕಲ್ಪಿತವಾಗಿದ್ದರೂ ಇರಬಹುದು. (೫) ಆಚಾರ್ಯರು ಮಾಯಾಪುರಿಯಲ್ಲಿದ್ದಾಗ ಈ ಮತಪ್ರಚಾರವು ಪ್ರಾರಂಭವಾಯಿತೆಂದು ಚಿದ್ವಿಲಾಸರೂ ಕಾಂಚಿಯಲ್ಲಿದ್ದಾಗ ಆಯಿತೆಂದು ಆನಂದಗಿರಿಯೂ ಬರೆದಿರುವದರಿಂದ ಈ ಕಥೆಯೆಲ್ಲವೂ ಕಲ್ಪನೆಯೇ ಆಗಿರಬಹುದೆಂಬುದಕ್ಕೆ ಇನ್ನಷ್ಟು ಪುಷ್ಟಿ ಬರುತ್ತದೆ. ಆನಂದಗಿರಿಗೆ ಕಾಂಚಿಯ ಬಗ್ಗೆ ಹೆಚ್ಚಿನ ಅಭಿಮಾನವಿದೆಯೆ ?–ಎಂಬುದನ್ನು ಮತ್ತೆ ಪರಿಶೀಲಿಸುವೆವು.

# ೧೬. ಸರ್ವಜ್ಞ ಪೀಠಾರೋಹಣ, ತಿರೋಧಾನ

## ಭಗಂಧರರೋಗಪರಿಹಾರ

೧೪೭. ಆಚಾರ್ಯರ ದಿಗ್ವಿಜಯವನ್ನು ವಿಸ್ತಾರವಾಗಿ ವರ್ಣಿಸಿದ ಬಳಿಕ **ಮಾಧವನು** ಅವರ ಅಂತರ್ಧಾನಕ್ಕೆ ಪೀಠಿಕೆಯೋ ಎಂಬಂತೆ ಅವರಿಗೆ ಭಗಂಧರ ರೋಗವು ಬಂದ ಪರಿಯನ್ನು ವರ್ಣಿಸಿರುತ್ತಾನೆ. ಆಚಾರ್ಯರಿಂದ ಪರಾಜಿತನಾದ ಅಭಿನವಗುಪ್ತನು ಅಭಿಚಾರಕ್ರಿಯೆಯನ್ನು ಮಾಡಲು ಅದರ ಫಲವಾಗಿ ಆಚಾರ್ಯರಿಗೆ ಆ ರೋಗವು ಬಂದಿತು. ಆ ಕಾಲಕ್ಕೆ ತೋಟಕಾಚಾರ್ಯರು ಬೇಸರಿಕೆಯಿಲ್ಲದೆ ಅವರ ಬಟ್ಟೆಯನ್ನು ಒಗೆಯುವದೇ ಮುಂತಾದ ರೀತಿಯಿಂದ ಪರಿಚರ್ಯೆಯನ್ನು ಮಾಡುತ್ತಿದ್ದರು. ಶಿಷ್ಯರು 'ಶರೀರಾಭಿಮಾನವಿಲ್ಲದ ತಾವು ಇದನ್ನು ಉಪೇಕ್ಷೆಮಾಡಬಹುದಾದರೂ ನಮಗೆ ಇದನ್ನು ಕಂಡು ವ್ಯಥೆಯಾಗುತ್ತದೆ. ಆದ್ದರಿಂದ ಇದಕ್ಕೇನಾದರೂ ಔಷಧಿಮಾಡಿಸಬೇಕು' ಎಂದು ನಿರ್ಬಂಧಮಾಡಿ ದಕ್ಷರಾದ ವೈದ್ಯರನ್ನು ಹುಡುಕಿ ಕರೆತಂದರು. ಯಾರಿಂದಲೂ ಅದನ್ನು ವಾಸಿಮಾಡುವದು ಆಗಲಿಲ್ಲ ಕೊನೆಗೆ ಶಿವನ ಅಪ್ಪಣೆಯಿಂದ ಅಶ್ವಿನೀ **ದೇವತೆಗಳು** ಮನುಷ್ಯವೇಷದಿಂದ ಬಂದು 'ಇದು ಮತ್ತೊಬ್ಬರ ಮಾಟದಿಂದ ಆದದ್ದಾದ್ದರಿಂದ ಇದಕ್ಕೆ ಚಿಕಿತ್ಸೆಯಿಲ್ಲ' ಎಂದು ಹೇಳಿ ಹೊರಟುಹೋದರು. ಇದನ್ನು ಕೇಳಿ ಖತಿಗೊಂಡ ಪದ್ಮಪಾದರು ಗುರುಗಳು ಬೇಡವೆಂದರೂ ಕೇಳದೆ ಪ್ರತಿಮಂತ್ರವನ್ನು ಜಪಿಸಿದರು. ಆದರಿಂದ ಅಭಿನವಗುಪ್ತನು ಅದೇ ರೋಗದಿಂದ ಸತ್ತನು (ಮಾ. ಶಂ. ೧೬–೧ರಿಂದ೩೨).

ಈ ಕಥೆ ವ್ಯಾಸಾಚಲೀಯದಲ್ಲಿಯೂ ಇದೆ. ಅಲ್ಲಿ ಅಭಿನವಗುಪ್ತನ ಕಥೆಯಿಲ್ಲ. ಅಶ್ವಿನೀದೇವತೆಗಳನ್ನು ಆಚಾರ್ಯರು ಪ್ರಾರ್ಥಿಸಿದ ಪ್ರಕಾರ ಅವರು ಬಂದು ಆ ರೋಗವನ್ನು ವಾಸಿಮಾಡಿದರು. ಅಲ್ಲಿ ಹತ್ತನೆಯ ಸರ್ಗದಲ್ಲಿ ಶಿಷ್ಯರು ವೈದ್ಯರನ್ನು ಹುಡುಕಿದ ಸಂದರ್ಭವನ್ನು ನಿಮಿತ್ತಮಾಡಿಕೊಂಡು ಅನವಶ್ಯವಾಗಿ ಬೇರೆಯ ವರ್ಣನೆಯನ್ನು ಸೇರಿಸಿ ಸರ್ಗವನ್ನು ಬೆಳೆಯಿಸಿದೆ. ಕವಿಯು ಅಷ್ಟರಿಂದಲೂ ತೃಪ್ತನಾಗದೆ ಮುಂದಿನ ಸರ್ಗದಲ್ಲಿಯೂ ಎಪ್ಪತ್ತೈದು ಪದ್ಯಗಳನ್ನು ಋತುವರ್ಣನೆಗೇ ವಿನಿಯೋಗಿಸಿ ವೈದ್ಯರೆಲ್ಲ ಹತಾಶರಾದ ಬಳಿಕ ಅಶ್ವಿನೀದೇವತೆಗಳನ್ನು ಕರೆಯಿಸಿರುತ್ತಾನೆ (!) ಆಗ ಆಚಾರ್ಯರಿಗೆ ಇವರು ಅಶ್ವಿನೀದೇವತೆಗಳೆಂದು ತಿಳಿಯಿತು.

'ಮುಮುದಿರೇ ಯತಯೋ ಗುರುಮಾತ್ಮನಃ
ಗತಗದಂ ಪರಿದೃಶ್ಯ....'

ಗರುಗಳು ಸ್ವಾಸ್ಥ್ಯವನ್ನು ಪೊಂದಿದ್ದನ್ನು ಕಂಡು ಶಿಷ್ಯರೆಲ್ಲ ಸಂತೋಷಪಟ್ಟರು ಎಂದು (೧೫೭ನೆಯ ಪದ್ಯದಲ್ಲಿ) ಪರಿಸಮಾಪ್ತಿಗೊಳಿಸಿರುತ್ತಾನೆ. ಈ ಸರ್ಗದ ಸಮಾಪ್ತಿವಾಕ್ಯದಲ್ಲಿ ವ್ಯಾಸಾಚಲನ ಅಂಕಿತವಿಲ್ಲವೆಂಬುದೊಂದು ವಿಶೇಷ.

(೧) ಚಿದ್ವಿಲಾಸೀಯದಲ್ಲಾಗಲಿ ಆನಂದಗಿರೀಯದಲ್ಲಾಗಲಿ ಈ ಕಥೆ ಕಾಣುವದಿಲ್ಲ. ಆದರೂ ವ್ಯಾಸಾಚಲೀಯದಲ್ಲಿಯೂ ಇದು ಇರುವದರಿಂದ ಆಚಾರ್ಯರಿಗೆ ಜೀವನದ ಕೊನೆಯಲ್ಲಿ ಈ ರೋಗವು ಬಂದಿತ್ತೆಂಬ ಸುದ್ದಿಯನ್ನು ಕರ್ಣಾಕರ್ಣಿಕೆಯಿಂದ ಕೇಳಿಯೇ ಈ ವಾರ್ತೆಯನ್ನು ಮಾಧವವ್ಯಾಸಾಚಲರು ಕಲ್ಪಿಸಿರಬಹುದುದಾಗಿದೆ. (೨) ಕಾಲಕಾಲಕ್ಕೆ ಆಹಾರನಿದ್ರೆಗಳಿಲ್ಲದೆ ದೇಹಶ್ರಮ, ಬುದ್ಧಿಕ್ಷೋಭಗಳು ಹೆಚ್ಚಾಗಿ ಮಲಬಂಧವಾಗಿರುವವರಿಗೆ ಈ ರೋಗವು ಬರುವ ದಂತೆ. ಆದ್ದರಿಂದ ಈ ರೋಗವು ಪವಿತ್ರಚರಿತ್ರರಾದ ಆಚಾರ್ಯರಿಗೆ ಏಕೆ ಬಂದಿರ ಬಹುದು ?—ಎಂದು ಕೆಲವರು ಶಂಕಿಸುವದು ಸರಿಯಲ್ಲ. ವೈದ್ಯಶಾಸ್ತ್ರದಲ್ಲಿ ಹೇಳಿರುವಂತೆ ಇದರಲ್ಲಿ ಅನೇಕಪ್ರಭೇದಗಳಿರುವವು; ಈ ರೋಗ ವಾಸಿಯಾಗುವದು ಕಷ್ಟ. ಆಚಾರ್ಯರಿಗೆ ಈ ರೋಗವು ನಿರ್ಮೂಲವಾಗದೆ ಅದರಿಂದಲೇ ಅವರ ಆಯುಸ್ಸು ಹ್ರಸ್ವವಾಯಿತೆಂದು ಕಾಣುತ್ತದೆ ಎಂಬರ್ಥವು ಬರುವಂತೆ (ಸೋ.ಶಂ. ಪು. ೧೮೮ರಿಂದ೧೯೦) ಸೋಮನಾಥಯ್ಯನವರು ಬರೆದಿರುತ್ತಾರೆ. ಇದು ಸಾಮಾನ್ಯವಾಗಿ ಪರಿಹಾರವಾಗುವದಲ್ಲವೆಂಬ ಕಾರಣದಿಂದಲೇ ಶಂಕರವಿಜಯ ಗಳಲ್ಲಿ ಅಶ್ವಿನೀದೇವತೆಗಳನ್ನು ಆಹ್ವಾನಿಸಿರಬಹುದು. ಆದರೆ ಈ ರೋಗದ ಕಥೆಯು ಎಲ್ಲಾ ಶಂಕರವಿಜಯಗಳಲ್ಲಿಯೂ ಇಲ್ಲದ್ದರಿಂದಲೂ, ಇರುವ ಎರಡು ಗ್ರಂಥಗಳಲ್ಲಿ ಒಂದರಲ್ಲಿ ಅದು ಚಿಕಿತ್ಸೆಯಿಂದ ಪರಿಹಾರವಾಗಲಿಲ್ಲವೆಂದೂ ಮತ್ತೊಂದರಲ್ಲಿ ಪರಿಹಾರವಾಯಿತೆಂದೂ ಬರೆದಿರುವದರಿಂದಲೂ ಈ ವಿಷಯವನ್ನು ಉಪೇಕ್ಷೆಮಾಡಬೇಕಾಗಿದೆ.

(೩) ತೋಟಕರು ಪ್ರತಿದಿನವೂ ಜುಗುಪ್ಸೆಯಿಲ್ಲದೆ ಆಚಾರ್ಯರ ಬಟ್ಟೆ ಒಗೆಯುವದು ಮುಂತಾದ ಸೇವೆಯನ್ನು ಮಾಡುತ್ತಿದ್ದರೆಂದು (ಮಾ. ಶಂ.೧೬-೩) ಬರೆದಿರುವದಕ್ಕೆ ವ್ಯಾಸಾಚಲೀಯವೇ ಆಧಾರವೋ ಅಥವಾ 'ಪ್ರಾಚೀನಶಂಕರ ಜಯ' ದಲ್ಲಿಯೂ ಈ ಕಥೆಯಿತ್ತೋ ಈಗ ನಿಶ್ಚಯಿಸುವದಕ್ಕೆ ಬರುವದಿಲ್ಲ.

## ಗೌಡಪಾದದರ್ಶನ

೧೪೭. ಶಂಕರಾಚಾರ್ಯರು ಗಂಗಾತೀರದಲ್ಲಿ ಧ್ಯಾನಮಾಡುತ್ತಿದ್ದಾಗ ಜಪಮಾಲೆಯನ್ನು ಕೈಯಲ್ಲಿ ಹಿಡಿದುಕೊಂಡು ಶ್ರೀಗೌಡಪಾದರು ಬರುತ್ತಿರು ವದನ್ನು ಕಂಡರು. ಆಚಾರ್ಯರು ಅವರ ಪಾದಗಳನ್ನು ಅರ್ಚಿಸಿ ಕೈಮುಗಿದು ಕೊಂಡು ನಿಂತರು. ಗೋವಿಂದನು ಹೇಳಿಕೊಟ್ಟ ವಿದ್ಯೆಯನ್ನು ಅರಿತುಕೊಂಡೆಯಾ?

ಸಚ್ಚಿದಾನಂದರೂಪತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡಿರುವೆಯಷ್ಟೆ ? ನಿನ್ನ ಶಿಷ್ಯರು ಶಾಂತಿದಾಂತ್ಯಾದಿಗಳಿಂದ ಕೂಡಿ ನಿನ್ನನ್ನು ಶುಶ್ರೂಷೆಮಾಡಿಕೊಂಡಿರುವರೆ ? ನಿನ್ನ ನಿತ್ಯಶತ್ರುಗಳನ್ನು ಜಯಿಸಿಕೊಂಡಿರುವೆಯು ? ಶಾಂತಿಯೇ ಮುಂತಾದ ಸದ್ಗುಣಗಳನ್ನು ಪಡೆದುಕೊಂಡಿರುವೆಯಷ್ಟೆ ? ಅಷ್ಟಾಂಗಯೋಗವನ್ನು ಸಾಧಿಸಿಕೊಂಡಿದ್ದೀಯೊ ?' ಎಂದು ಅವರು ಪ್ರೇಮದಿಂದ ಕೇಳಿದರು. ಆಚಾರ್ಯರು 'ತಾವು ಹೇಳಿದ್ದೆಲ್ಲವೂ ಅವಶ್ಯವಾಗಿ ಆಗುತ್ತದೆ; ತಮ್ಮ ಕೃಪಾದೃಷ್ಟಿಗೆ ಪಾತ್ರನಾದ ನನಗೆ ಯಾವದುತಾನೆ ದುರ್ಲಭ ?' ಎಂದರು. ಶ್ರೀಗೌಡಪಾದರು 'ನನ್ನ ಕಾರಿಕೆಗಳಿಗೆ ಭಾಷ್ಯವನ್ನು ಮಾಡಿದ್ದೀಯೆಂದು ಗೋವಿಂದನಿಂದ ಕೇಳಿ ನಿನಗೆ ದೃಷ್ಟಿಗೋಚರನಾಗಿದೇನೆ' ಎಂದರು. ಆಚಾರ್ಯರು ಕಾರಿಕಾಭಾಷ್ಯವನ್ನು ತೋರಿಸಿದರು. ಗೌಡಪಾದರು ಬಹಳ ಸಂತೋಷಪಟ್ಟು, "ನನ್ನ ಕಾರಿಕೆಗಳ ಆಶಯವನ್ನು ಸರಿಯಾಗಿ ಗ್ರಹಿಸಿಕೊಂಡಿದೀಯೆ, ವರವನ್ನು ಬೇಡು !" ಎನ್ನಲು ಆಚಾರ್ಯರು "ತಮ್ಮನ್ನು ನೋಡಿದಮೇಲೆ ನನಗೆ ಇನ್ನೇನು ಬೇಕು ? ಆದರೂ ನನಗೆ ಯಾವಾಗಲೂ ಚೈತನ್ಯತತ್ತ್ವದ ವಿಷಯದಲ್ಲಿಯೇ ಚಿಂತನೆಯಿರುವಂತೆ ಅನುಗ್ರಹಿಸಿರಿ" ಎಂದು ಬೇಡಿಕೊಂಡರು. ಹಾಗೇ ಆಗಲೆಂದು ಅನುಗ್ರಹಿಸಿ ಗೌಡಪಾದರು ಅಲ್ಲಿಯೇ ಅಂತರ್ಧಾನರಾದರು (ಮಾ. ಶಂ. ೧೭-೩೩ರಿಂದ೫೩).

(೧) ಈ ಕಥೆ ಮತ್ತೆ ಯಾವ ಶಂಕರವಿಜಯದಲ್ಲಿಯೂ ಇಲ್ಲ. ಗೋವಿಂದ ಭಗವತ್ಪಾದರು ಆಚಾರ್ಯರಿಗೆ ಉಪದೇಶಮಾಡಿದ ಮೇಲೆ ಅವರಿಗೂ ಗೌಡಪಾದರಿಗೂ ಸಮಾಗಮವಾದದ್ದು ಈ ಗ್ರಂಥದಲ್ಲಿ, ಮತ್ತೆಲ್ಲಿಯೂ ಉಕ್ತವಾಗಿಲ್ಲ. ಇದೆಲ್ಲ ನಿಜವಿರಬಹುದೆ ? ಅಥವಾ ಇದು ಆಚಾರ್ಯರು ಗೌಡಪಾದರ ಕೃಪೆಗೂ ಪಾತ್ರರಾದರು -ಎಂದು ತಿಳಿಸುವದಕ್ಕೆ ಕಲ್ಪಿಸಿದ ಕಥೆಯೆ? ವಿಮರ್ಶಿಸಬೇಕು.

(೨) ಗೌಡಪಾದರು ಆಚಾರ್ಯರನ್ನು 'ಅಷ್ಟಾಂಗಯೋಗವನ್ನು ಸಾಧಿಸಿದ್ದಿಯೋ ?' ಎಂದು ಕೇಳಿರುವದು ಅವರ ಕಾರಿಕೆಗೆ ಅನುಗುಣವಾಗಿಲ್ಲ. ಏಕೆಂದರೆ ಕಾರಿಕೆಯಲ್ಲಿ ಆತ್ಮಸತ್ಯಾನುಬೋಧ, ಮನೋನಿಗ್ರಹ- ಎಂಬ ಎರಡೇ ಸಾಧನಗಳನ್ನು ಹೇಳಿದೆ. ಆಚಾರ್ಯರೂ ಪಾತಂಜಲಯೋಗದ ಪ್ರಕ್ರಿಯೆಯನ್ನು ಖಂಡಿಸಿ ವೈದಿಕಯೋಗದಿಂದಲೇ ಪರಮಾತ್ಮಪ್ರಾಪ್ತಿಯಾಗುವದೆಂದು ಸೂತ್ರಭಾಷ್ಯದಲ್ಲಿ ಹೇಳಿರುತ್ತಾರೆ.

೧೫೮. ಒಮ್ಮೆ ಆಚಾರ್ಯರು ಗಂಗೆಯಲ್ಲಿ ಶಿಷ್ಯರೊಡನೆ ನಿತ್ಯಕರ್ಮಾನುಷ್ಠಾನವನ್ನು ಮಾಡಿಕೊಂಡು ಧ್ಯಾನಮಗ್ನರಾಗಬೇಕೆಂದಿರುವಲ್ಲಿ ಈ ಮಾತು ಕಿವಿಗೆ ಬಿದ್ದಿತು : "ಪೃಥಿವಿಯಲ್ಲೆಲ್ಲ ಜಂಬುದ್ವೀಪವು ಪ್ರಶಸ್ತವಾದದ್ದು. ಅದರಲ್ಲಿ ಭಾರತವು ಶ್ರೇಷ್ಠವು ; ಅದರಲ್ಲಿಯೂ ಶಾರದಾದೇವಿಯಿಂದ ಕಾಶ್ಮೀರವು ಅತ್ಯಂತಪ್ರಶಸ್ತವಾದದ್ದು ; ಆ ದೇವಿಯ ಆಲಯಕ್ಕೆ ನಾಲ್ಕು ಬಾಗಿಲುಗಳು; ಅಲ್ಲಿ

ಒಂದು ಪೀಠವಿದೆ. ಅದನ್ನು ಸರ್ವಜ್ಞನಾದವನು ಮಾತ್ರ ಏರಬಹುದು, ಮಿಕ್ಕವರಿಗೆ ಅಲ್ಲಿ ಪ್ರವೇಶವಿಲ್ಲ. ಆ ದೇವಾಲಯದ ಪೂರ್ವಪಶ್ಚಿಮೋತ್ತರದ ಬಾಗಿಲುಗಳನ್ನು ಆಗಲೆ ಬೇರೆಬೇರೆ ದೇಶದವರು ತೆರೆಯಿಸಿದ್ದಾರೆ. ಆದರೆ ದಕ್ಷಿಣದ ಬಾಗಿಲನ್ನು ತೆರೆಯಿಸುವದಕ್ಕೆ ದಕ್ಷಿಣದೇಶದವರು ಯಾರೂ ಶಕ್ತರಾಗಿಲ್ಲ."

ಇದರ ನಿಜವನ್ನರಿತು ಆ ಬಾಗಿಲನ್ನು ತೆರೆಯಿಸಬೇಕೆಂದು ಆಚಾರ್ಯರು ಕಾಶ್ಮೀರಕ್ಕೆ ಹೊರಟರು. ಶಿಷ್ಯರಿಂದ ವಿದ್ವತ್ತನ್ನು ಘೋಷಿಸುತ್ತಾ ಆಚಾರ್ಯರು ಶಾರದಾಲಯದ ದಕ್ಷಿಣದ್ವಾರವಿದ್ದಲ್ಲಿಗೆ ಬಂದರು. ಅಲ್ಲಿ ವಾದಿಗಳು ಅವರನ್ನು ಬಾಗಿಲನ್ನು ತೆರೆಯದಂತೆ ಅಡ್ಡಿಮಾಡಿ ಮೊದಲು ಕಾಣಾದಮತಾನುಸಾರಿಯಾದವನು, ಬಳಿಕ ನೈಯಾಯಿಕನು, ಆಮೇಲೆ ಸಾಂಖ್ಯನು, ಆಮೇಲೆ ಬೌದ್ಧನು, ಆಮೇಲೆ ದಿಗಂಬರ ಜೈನನು, ಅವನೂ ಆದಮೇಲೆ ಜೈಮಿನೀಯನು– ಹೀಗೆ ವಾದಿಗಳು ಕೇಳಿದ ಎಲ್ಲಾ ಪ್ರಶ್ನೆಗಳಿಗೂ ಆಚಾರ್ಯರು ಉತ್ತರವನ್ನು ಕೊಡಲು ಅವರು ದಾರಿಯನ್ನು ಬಿಟ್ಟರು. ಈಗ ಸನಂದನನ ಹಸ್ತಾವಲಂಬನದಿಂದ ಆಚಾರ್ಯರು ಸರ್ವಜ್ಞಪೀಠವನ್ನು ಹತ್ತುವದಕ್ಕೆ ಪ್ರಾರಂಭಿಸಲು, ಶಾರದೆಯು ಅಶರೀರವಾಣಿಯಿಂದ 'ನೀನು ವಿಶ್ವರೂಪನನ್ನು ಜಯಿಸಿರುವದರಿಂದ ಸರ್ವಜ್ಞನೇ ಸರಿಯಾದರೂ, ನೀನು ಪರಿಶುದ್ಧನೆ ? ಎಂಬ ವಿಷಯವು ವಿಚಾರಣೀಯವಾಗಿದೆ. ಆದ್ದರಿಂದ ಪೀಠವನ್ನು ಹತ್ತಬೇಡ. ನೀನು ಸ್ತ್ರೀಸಂಗವನ್ನು ಮಾಡಿ ಕಲಾರಹಸ್ಯವನ್ನು ಕಲಿತುಕೊಂಡೆಯಾದ್ದರಿಂದ ನಿನಗೆ ಪಾರಿಶುದ್ಧ್ಯವು ಹೇಗೆ ಬಂದಿತು ?' ಎಂದಳು. ಆಗ ಶಂಕರರು 'ನಾನು ಈ ಶರೀರದಲ್ಲಿ ಪಾಪವನ್ನು ಮಾಡಿಲ್ಲ. ದೇಹಾಂತರಕರ್ಮದಿಂದ ದೇಹಾಂತರಕ್ಕೆ ಲೇಪವಿಲ್ಲವಷ್ಟೆ ?' ಎಂದು ಆಕೆಯನ್ನು ನಿರುತ್ತರಳನ್ನಾಗಿ ಮಾಡಿ ಸರ್ವಜ್ಞಪೀಠವನ್ನು ಹತ್ತಿದರು (ಮಾ. ಶಂ. ೧೬–೫೪ರಿಂದ೮೭).

ಈ ಕಥೆಯು ವ್ಯಾಸಾಚಲೀಯದಲ್ಲಿಯೂ ಇದೆ (ವ್ಯಾ. ಶಂ. ೧೨–೩೦ ರಿಂದ ೭೮). ಅಲ್ಲಿ ವಾದಿಗಳೇ ಅಲ್ಲದೆ ಸರಸ್ವತಿಯೊಡನೆಯೂ ಆಚಾರ್ಯರಿಗೆ ವಾದವಾಯಿತು ; ಸರಸ್ವತಿಯು ವಿದ್ವಾಂಸರು ಹಾಕಿದ ತೆರೆಯ ಮರೆಯಲ್ಲಿದ್ದುಕೊಂಡು (ವ್ಯಾ. ಶಂ. ೧೨–೫೭) ವಾತ್ಸ್ಯಾಯನತಂತ್ರದಲ್ಲಿ ಪ್ರಶ್ನೆಯನ್ನು ಹಾಕಿದಳು. ಏಳು ದಿನ ಗಡುವನ್ನು ತೆಗೆದುಕೊಂಡು (ವ್ಯಾ. ಶಂ. ೧೨–೬೦) ಹಿಂದೆ ಮಾಧವೀಯದಲ್ಲಿ ವರ್ಣಿಸಿರುವಂತೆ ಪರಕಾಯಪ್ರವೇಶವನ್ನು ಮಾಡಿ ಎಂಟನೆಯ ದಿನ ಬಂದು ಪ್ರಶ್ನೆಗಳಿಗೆಲ್ಲ ಉತ್ತರವನ್ನು ಹೇಳಿದರು (ವ್ಯಾ. ಶಂ. ೧೨–೭೨,೭೩). ಆಗ ಶಾರದೆಯು 'ನೀವು ಶುದ್ಧರಲ್ಲ' ಎಂಬ ಶಂಕೆಯನ್ನು ತೆಗೆಯಲು ಆಚಾರ್ಯರು ಮಾಧವೀಯದಲ್ಲಿರುವ ಉತ್ತರವನ್ನೇ ಹೇಳಿದರು.

ಸರ್ವಜ್ಞಪೀಠಾರೋಹಣದ ವೃತ್ತವು ಎಷ್ಟರಮಟ್ಟಿಗೆ ನಿಜ ? –ಎಂಬುದನ್ನು ಈಗ ವಿಮರ್ಶಿಸೋಣ : (೧) ಆಚಾರ್ಯರು ಸಾಕ್ಷಾಚ್ಛಂಕರರೇ ಎಂದು ಮಂಡನಮಿಶ್ರನ ವಾದಾಂತ್ಯವತ ಕಲಾಶಾಸ್ತ್ರದ ವಿಷಯಕ್ಕೆ ಪರೀಕ್ಷೆಮಾಡಿದ ಸರಸ್ವತಿಯು ಒಪ್ಪಿಕೊಂಡಿದ್ದಳು (೧೯೭,೧೯೮); ಆಗ ಶಂಕರರು ಅಪರಿಶುದ್ಧರೆಂಬ ಶಂಕೆಯೇನೂ ಬರಲಿಲ್ಲ. ಆದರೂ ಈಗ ಅದೇ ಸರಸ್ವತಿಯೇ ಹೀಗೆ ಶಂಕೆಯನ್ನು ಮಾಡಿದಳೆಂಬುದು ಸರಿಯಾಗಿ ಕಾಣುವದಿಲ್ಲ. ಮಂಡನಮಿಶ್ರನನ್ನು ಶಿಷ್ಯನನ್ನಾಗಿ ಮಾಡಿಕೊಂಡದ್ದರಿಂದ ನೀನು ಸರ್ವಜ್ಞನೇ ಎಂಬುದನ್ನೇನೋ ಒಪ್ಪಿದಾಳೆ; 'ನೀನು ಶಿವನೇ' ಎಂದು ಆಕೆ ಹಿಂದೆ ಆಡಿದ್ದಮಾತು ಈಗ ಏನಾಯಿತು ?

(೨) ವ್ಯಾಸಾಚಲೀಯದಲ್ಲಿ ಈಗಲೇ ಸರಸ್ವತಿಯೊಡನೆ ಮೊದಲನೆಯ ಸಲಕ್ಕೆ ವಾದವಾಯಿತೆಂದು ಹೇಳಿರುವದೂ ಹಿಂದಿನ ಕಥೆಗೆ ಅಷ್ಟು ಹೊಂದುಗಡೆಯಾಗುವದಿಲ್ಲ. ಪತಿಯು ಸೋತಾಗ ಶಾಪವಿಮುಕ್ತಳಾಗಿ ಅಂತರ್ಧಾನಳಾದ ಸರ್ವಜ್ಞಳಾದ ಶಾರದೆಗೆ ಇವರು ಶಿವನೇ ಎಂಬುದು ತಿಳಿಯದಾಯಿತೆ ?

(೩) ಕಾಶ್ಮೀರದಲ್ಲಿ ಅನೇಕ ವಿದ್ವಾಂಸರು ಹುಟ್ಟಿದ್ದ ಕಾರಣದಿಂದ ದೇಶಾಭಿಮಾನಿದೇವತೆ ಶಾರದೆ ಎಂಬ ಪ್ರಥೆ ಹಬ್ಬಿಕೊಂಡಿದ್ದದ್ದು ಯುಕ್ತವೇ ಸರಿ. ಆದರೆ ಅಲ್ಲಿ ಸರ್ವಜ್ಞತಾಪರೀಕ್ಷೆಯ ಪೀಠವು ಹೇಗೆ ನಿರ್ಮಾಣವಾಯಿತು ? ಆ ದೇಶವೇನೂ ಭರತಖಂಡಕ್ಕೆ ಮಧ್ಯಭಾಗವಲ್ಲವಷ್ಟೆ ?

(೪) ಕಾಶ್ಮೀರದೇಶದ ಇಹಾಸವನ್ನು ಶಾ. ಶ. ೧೦೭೦ರವರೆಗೂ "ರಾಜತರಂಗಿಣಿ" ಎಂಬ ಗ್ರಂಥದಲ್ಲಿ ವರ್ಣಿಸಿರುವ ಕಲ್ಹಣನು ಸರ್ವಜ್ಞಪೀಠದ ವಿಷಯವನ್ನೇ ಪ್ರಸ್ತಾಪಿಸಿಲ್ಲವೇಕೆ ?

(೫) ದರದದೇಶಕ್ಕೆ ಆಚಾರ್ಯರು ದಿಗ್ವಿಜಯಕ್ಕೆ ಹೋದ ಕಥೆಯನ್ನು (ಮಾ. ಶಂ. ೧೫–೧೫೭) ಮಾಧವನು ಹಿಂದೆಯೇ ಹೇಳಿರುತ್ತಾನೆ. ಕಾಶ್ಮೀರಕ್ಕೆ ಉತ್ತರದಲ್ಲಿರುವ ದರದಸ್ಥಾನಕ್ಕೆ ಹೋದಾಗ ಆಚಾರ್ಯರಿಗೆ ಈ ಪೀಠದ ಸುದ್ದಿ ಏಕೆ ಕಿವಿಗೆ ಬೀಳಲಿಲ್ಲ ? ಬಿದ್ದಿದ್ದರೆ ಆವರು ಪೀಠಾರೋಹಣಕ್ಕೆ ಆಗಲೆ ಏಕೆ ಪ್ರಯತ್ನಿಸಲಿಲ್ಲ ?

(೬) ಕಾಶ್ಮೀರದ ಪೂರ್ವ, ಪಶ್ಚಿಮ, ಉತ್ತರ– ಈ ದಿಕ್ಕುಗಳಲ್ಲಿ ಯಾವ ವೈದಿಕಸಂಪ್ರದಾಯದವರೂ ಇರಲಿಲ್ಲ. ಹೀಗಿರುವಲ್ಲಿ ಆ ದೇಶದವರು ಬಾಗಿಲು ತೆರೆಯಿಸಿ ಸರ್ವಜ್ಞಪೀಠವನ್ನೇರಿದರೆಂಬ ಕಥೆ ಹೇಗೆ ಹೊಂದಿಕೆಯಾದೀತು ?

(೭) ಆಚಾರ್ಯರು ದೇಹಾಂತರದಲ್ಲಿ ತಾವುಮಾಡಿದ ಕರ್ಮವು ತಮಗೆ ದೇಹಾಂತರದಲ್ಲಿ ಅಂಟಲಾರದೆಂದು ಹೇಳಿದ್ದು ಹೇಗೂ ಸರಿಯಾದ ಉತ್ತರವಾಗ

ಲಾರದು. ಕರ್ಮದ ಫಲವು ಜನ್ಮಾಂತರದಲ್ಲಿಯೂ ಲೋಕಾಂತರದಲ್ಲಿಯೂ ಆಗುವದೆಂದು ಶಾಸ್ತ್ರಾಧಾರದಮೇಲೆ ವ್ಯವಹಾರದೃಷ್ಟಿಯಿಂದ ಅನುಮೋದಿಸಿರುವ ಆಚಾರ್ಯರು ಒಂದೇ ಜನ್ಮದಲ್ಲಿ ದೇಹವೊಂದರಿಂದ ಮಾಡಿದ ಕರ್ಮದ ಅಂಟು ತಮಗೆ ಈ ದೇಹದಲ್ಲಿ ಆಗಲಾರದೆಂದು ವಾದಿಸಬಹುದೆಂದು ಒಪ್ಪಿರಬಹುದೆ? ವಾದದಾದೇವಿ ಯಾವರೂ ಆ ಉತ್ತರವು ಸರಿಯೆಂದು ಒಪ್ಪಿರಬಹುದೆ? ಈ ವಿಷಯವನ್ನು ಪರಕಾಯಪ್ರವೇಶದ ಸಂದರ್ಭದಲ್ಲಿಯೇ ಚರ್ಚಿಸಿರುವೆವಾದ್ದರಿಂದ ಪ್ರಸಂಗವಶದಿಂದ ಮತ್ತೆ ವಾಚಕರ ನೆನಪಿಗೆ ತಂದಿರುತ್ತೇವೆ.

## ಸರ್ವಜ್ಞಪೀಠಾರೋಹಣ

೧೪೯. ಸರ್ವಜ್ಞಪೀಠವೃತ್ತಾಂತದ ಪ್ರಸಂಗದಿಂದ ಇದೇ ವಿಷಯಕ್ಕೆ ಗ್ರಂಥಾಂತರದಲ್ಲಿ ಏನು ಹೇಳಿದೆ ಎಂಬುದನ್ನು ಇಲ್ಲಿ ಪ್ರಸ್ತಾಪಿಸುವದು ಯೋಗ್ಯವಾಗಿದೆ.

(೧) **ಚಿದ್ವಿಲಾಸೀಯದಲ್ಲಿ** ಆಚಾರ್ಯರು ಕಾಂಚಿಯಲ್ಲಿ ದೇವತಾಪೂಜೆಗೆ ಏರ್ಪಾಡುಮಾಡಿದ ಬಳಿಕ 'ಸರ್ವಜ್ಞಪೀಠವನ್ನು ಏರಬೇಕೆಂದಿರುವಲ್ಲಿ 'ಎಲೈ ಯತಿಯೆ, ನೀನು ಸರ್ವವಿದ್ಯೆಗಳಲ್ಲಿಯೂ ವಿದ್ವಾಂಸರೊಡನೆ ಪ್ರಸಂಗವನ್ನು ಮಾಡಿ ಅವರನ್ನು ಜಯಿಸಿದಮೇಲೆ ಪೀಠವನ್ನು ಏರುವದು ಉಚಿತವಲ್ಲವೆ? ಎಂದು ಅಶರೀರವಾಣಿಯಾದದ್ದನ್ನು ಕೇಳಿ ಅವರಿಗೆ ಆಶ್ಚರ್ಯವಾಯಿತು. (೨೫-೪೯). ಅಲ್ಲಿಗೆ **ತಾಮ್ರಪರ್ಣೀತೀರವಾಸಿಗಳಾದ** ದ್ವೈತವಿದ್ವಾಂಸರು ಬಂದು ಅವರಿಂದ ವಾದಜಿತರಾದರು. ಬಳಿಕ ಆಚಾರ್ಯರು ಪೀಠವನ್ನೇರಿದರು. (ಚಿ. ೪೫-೪೯ ರಿಂದ ೬೯). ಚಿದ್ವಿಲಾಸರು ಶೃಂಗೇರಿಯ ವಿಷಯಕ್ಕೆ ನಾಲ್ಕು ಅಧ್ಯಾಯಗಳನ್ನು ಬರೆದಿದ್ದಾರೆಂದು ಹಿಂದೆ (ಪು. ೨೨೩) ತಿಳಿಸಿರುತ್ತೇವೆ. ಆ ಪೀಠದ ವಿಷಯಕ್ಕೆ ಅಷ್ಟೊಂದು ಅಭಿಮಾನವಿದ್ದ ಅವರುಕೂಡ ಕಾಶ್ಮೀರದ ಸರ್ವಜ್ಞಪೀಠದ ವಿಷಯವಾಗಿ ಏನೂ ಹೇಳದೆ ಕಾಂಚಿಯಲ್ಲಿ ಆ ಪೀಠವಿತ್ತೆಂದು ಹೇಳಿರುವದನ್ನು ನೋಡಿದರೆ ಅವರ ಕಾಲಕ್ಕೆ ಕಾಂಚೀಪೀಠಕ್ಕೆ ಸರ್ವಜ್ಞಪೀಠವೆಂಬ ಪ್ರಥೆಯಿತ್ತೆಂದು ನಂಬಬೇಕಾಗುತ್ತದೆಯಲ್ಲವೆ?

(೨) **ಆನಂದಗಿರೀಯದಲ್ಲಿಯೂ** ಅಹೋಬಲದಿಂದ ಕಾಂಚಿಗೆ ಬಂದ ಆಚಾರ್ಯರು ತಾಮ್ರಪರ್ಣೀತೀರವಾಸಿಗಳೊಡನೆ ವಾದಮಾಡಿ ಅವರನ್ನು ಅದ್ವೈತಿಗಳಾಗಿ ಮಾಡಿದರು (ಆ.ಶಂ.ಪ್ರ. ೬೩-ಪು. ೨೨೮; ಯೇ. ಪು. ೧೫೪) ಆದರೆ ಅಲ್ಲಿ ಸರ್ವಜ್ಞಪೀಠದ ವಿಚಾರವಿಲ್ಲ.

(೩) **ಆತ್ಮಬೋಧರು** ಬರೆದಿರುವ ಗುರುರತ್ನಮಾಲಿಕೆಯ ವ್ಯಾಖ್ಯಾನದಲ್ಲಿ: ಅಸಾವತ್ರ ಪಾಠಸ್ತೂಚಿತಃ | ಸರ್ವಜ್ಞಪೀಠಾರೋಹಣ ಏವ ತದ್ವಿಜ

ಯಸ್ಯ ಶಿವರಹಸ್ಯಬೃಹಚ್ಛಙ್ಕರವಿಜಯಕೇರಳೀಯಶಙ್ಕರವಿಜಯಪ್ರಾಚೀನಶಙ್ಕರವಿಜಯವ್ಯಾಸಾಚಲೀಯಾದಿಷು ನಿರೂಪಿತತ್ವಾತ್। 'ಪರಕೀಯವಪುಃ ಪ್ರವೇಶಶೈಲ್ಯಾ' (ಗು. ರ. ೨೯) ಇತ್ಯಾದಿ ಶ್ಲೋಕವು ಇಲ್ಲಿಯೇ ಇರುವದು ಯುಕ್ತ; ಏಕೆಂದರೆ 'ಸರ್ವಜ್ಞಪೀಠಾರೋಹಣವಾದಮೇಲೆಯೇ ಸರಸ್ವತೀವಿಜಯವನ್ನು ಶಿವರಹಸ್ಯಾದಿಗಳಲ್ಲಿ ಹೇಳಿದೆ' ಎಂದು ಬರೆದಿದಾರೆ. ಅವರು ಉದಾಹರಿಸಿರುವ ವಾಕ್ಯಗಳೊಳಗೆ (1) ಶಿವರಹಸ್ಯವಾಕ್ಯವು ನಮಗೆ ಸಿಕ್ಕಿಲ್ಲ; (2) ನಮ್ಮ ವ್ಯಾಸಾಚಲೀಯದಲ್ಲಿ ಕಾಶ್ಮೀರವು ಪರಾಮೃಷ್ಟವಾಗಿರುವದರಿಂದ ಆತ್ಮಬೋಧರಿಗೆ ಸಮ್ಮತವಾದ ವ್ಯಾಸಾಚಲೀಯವು ಮತ್ತೊಂದಿತ್ತೆಂದಾಗುತ್ತದೆ. (3) ಪ್ರಾಚೀನಶಂಕರವಿಜಯದಲ್ಲಿ ಆತ್ಮಬೋಧರು—

> ಸರ್ವಜ್ಞಪೀಠಮಧಿರುಹ್ಯ ತತಸ್ತದಗ್ರೇ
> ಮಿಶ್ರಾನ್ ವಿಜಿತ್ಯ ಸಹಸೋಪನತಾನ್ ಪ್ರಯಾಗಾತ್ ।
> ಅಧ್ಯಾಸ್ತ ಕಾಞ್ಚ್ಯಾಮಭಿಮಣ್ಡಿತಕಾಮಕೋಟಿ
> ಪೀಠೋ ಮಠಂ ನಿಜಮವಾಪ್ಯ ಸ ಶಾರದಾಖ್ಯಾಮ್ ॥ (ಗು.ರ.ಸು, ೩೯)

ಎಂಬ ಶ್ಲೋಕವನ್ನು ಉದಾಹರಿಸಿದೆ. ಪ್ರಯಾಗದಿಂದ ಬಂದ ಮಿಶ್ರರನ್ನು ಜಯಿಸಿ ಸರ್ವಜ್ಞಪೀಠವನ್ನೇ ಕಾಂಚಿಯ ಕಾಮಕೋಟಿಪೀಠದಲ್ಲಿಯೇ "ತಮ್ಮ ಮಠದಲ್ಲಿ" ಆವರಿದ್ದರು—ಎಂದು ಶ್ಲೋಕದ ಅಭಿಪ್ರಾಯ. ಇಲ್ಲಿ ಆಚಾರ್ಯರು ಜಯಿಸಿದ್ದು ತಾಮ್ರಪರ್ಣಿಯವರನ್ನಲ್ಲವೆಂದಿರುವದರಿಂದ ಇದು ಚಿದ್ವಿಲಾಸೀಯಕ್ಕಾಗಲಿ ಮಾಧವೀಯಕ್ಕಾಗಲಿ ಮೂಲವಲ್ಲವೆಂದಾಯಿತು.

ಹೇಗೇ ಆಗಲಿ, ಆತ್ಮಬೋಧರ ಅಭಿಪ್ರಾಯದಲ್ಲಿ ಸರ್ವಜ್ಞಪೀಠವು ಕಾಂಚಿಯಲ್ಲಿಯೇ ಇತ್ತು; ಶಂಕರವಿಜಯಕಾರರುಗಳಲ್ಲಿ ಕಾಶ್ಮೀರಸರ್ವಜ್ಞಪೀಠವಾದಿಗಳು, ಕಾಂಚೀಸರ್ವಜ್ಞಪೀಠವಾದಿಗಳು— ಎಂದು ಎರಡು ಪಂಗಡಗಳಾಗಿವೆ—ಎಂದಾಯಿತು. 'ಕಾಶ್ಮೀರವು ಶಾರದಾಸ್ಥಾನವೆಂಬ ಪ್ರಸಿದ್ಧಿಯ ಆಧಾರದಮೇಲೆ ಮೊದಲನೆಯ ಪಂಗಡದವರೂ 'ಕಾಂಚಿಯು ಸರ್ವಜ್ಞಪೀಠ'ವೆಂಬ ಪ್ರಸಿದ್ಧಿಯ ಆಧಾರದಮೇಲೆ ಎರಡನೆಯ ಪಂಗಡದವರೂ ಕಲ್ಪಿಸಿಕೊಂಡಿರುವ ಕಥೆಗಳಿವು ಎಂಬುದು ಸ್ಪಷ್ಟವಾಗಿದೆ. ಕಾಂಚಿಯಲ್ಲಿ ಸರ್ವಜ್ಞಾತ್ಮರೇ ಮೊದಲನೆಯ ಪೀಠಾಧಿಪರೆಂದು ಆ ಮಠದ ಸಂಪ್ರದಾಯದವರ ಹೇಳಿಕೆ. ಆ ಕಾರಣದಿಂದಲೇ ಆ ಪೀಠಕ್ಕೆ 'ಸರ್ವಜ್ಞಪೀಠ'ವೆಂಬ ಹೆಸಿರು ಬಂದಿರಬಹುದೆ ?— ಎಂಬುದನ್ನು ವಿಮರ್ಶಕರು ಪರಿಶೀಲಿಸಬೇಕಾಗಿದೆ. ಆಚಾರ್ಯರು ತಾವು ಎಲ್ಲಾ ಶಾಸ್ತ್ರಗಳನ್ನೂ ಎಲ್ಲಾ ವಿದ್ಯೆಗಳನ್ನೂ ಬಲ್ಲವರು ಎಂಬರ್ಥದಲ್ಲಿ ತಾವು ಸರ್ವಜ್ಞರೆಂದು ತೋರಿಸುವದಕ್ಕೆ ಬಂದಿರಲಿಲ್ಲ; ಯಾವದೊಂದನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತಂತಾಗುವದೋ ಆ ಬ್ರಹ್ಮದ ವಿದ್ಯೆಯನ್ನು ಪ್ರಚಾರಮಾಡುವದಕ್ಕೆ ಹೊರ

ಟೆವರು. ಹೀಗಿರುವಲ್ಲಿ ಅವರು ಸರ್ವಶಾಸ್ತ್ರಗಳನ್ನೂ ಬಲ್ಲವರು ಎಂಬರ್ಥದಲ್ಲಿ ತಾವು ಸರ್ವಜ್ಞರೆಂದು ಕಾಣಾದನೈಯಾಯಿಕಾದಿಗಳಿಗೆ ತೋರಿಸಿಕೊಟ್ಟು, ಕಾಶ್ಮೀರದ ಸರ್ವಜ್ಞಪೀಠವನ್ನು ಏರಬೇಕಾದ ಆವಶ್ಯಕತೆ ಏನಿತ್ತು ? ಅಥವಾ ತಾಮ್ರಪರ್ಣೀತೀರದವರನ್ನಾಗಲಿ, ಅನಿರೀಕ್ಷಿತವಾಗಿ ಬಂದೊದಗಿದ ಮಿಶ್ರ' ರನ್ನಾಗಲಿ, ಜಯಿಸಿದಮಾತ್ರದಿಂದ ಸರ್ವಜ್ಞರೆನಿಸಿಕೊಂಡು ಕಾಂಚಿಯ ಸರ್ವಜ್ಞ ಪೀಠವನ್ನೇರುವ ಆವಶ್ಯಕತೆಯಾದರೂ ಏನಿತ್ತು ? ಇದನ್ನು ಯಾವ ಶಂಕರ ವಿಜಯಕಾರರೂ ಉಪಪಾದಿಸಿರುವದಿಲ್ಲ.

## ಆಚಾರ್ಯರು ಸ್ವಸ್ಥಾನಕ್ಕೆ ತೆರಳಿದ್ದು

೧೪೫. ಹೀಗೆ ತಮ್ಮ ಮತವೇ ಸರ್ವಶ್ರೇಷ್ಠವೆಂದು ತಿಳಿಸಿಕೊಡುವದಕ್ಕಾಗಿ ಸರ್ವಜ್ಞಪೀಠವನ್ನೇರಿ 'ಋಷ್ಯಶೃಂಗಾಶ್ರಮಾದಿಗಳಲ್ಲಿ' ಕೆಲವರನ್ನಿಟ್ಟು ಆಚಾರ್ಯರು ಬದರಿಗೆ ಹೋದರು. ಅಲ್ಲಿ ಪಾತಂಜಲದರ್ಶನದಲ್ಲಿ ತಾತ್ಪರ್ಯವುಳ್ಳ ಕೆಲವರನ್ನು ಅವರು ಜಯಿಸಿ ಆ ದರ್ಶನದಿಂದ ತಪ್ಪಿಸಿ ತಮ್ಮ ಸೂತ್ರಭಾಷ್ಯ ವನ್ನು ಹೇಳುತ್ತಾ ಕೆಲವು ದಿನಗಳು ಅಲ್ಲಿದ್ದರು. ಇಲ್ಲಿಗೆ ಅವರಿಗೆ ಮೂವತ್ತೆರಡು ವರ್ಷಗಳಾದವು. ಅಲ್ಲಿಂದ ಮುಂದಕ್ಕೆ ಅವರು ಕೇದಾರಕ್ಕೆ ತೆರಳಿದರು. ಅಲ್ಲಿ ಅತಿಶೀತದಿಂದ ವ್ಯಥೆಪಡುತ್ತಿದ್ದ ಶಿಷ್ಯರಿಗಾಗಿ ಶಿವನನ್ನು ಪ್ರಾರ್ಥಿಸಲು ಆ ಮಹಾದೇವನು ತನ್ನ ಪಾದಕಮಲದಿಂದ ಉಷ್ಣೋದಕಪ್ರವಾಹವನ್ನು ಬಿಟ್ಟನು; ಆ ನದಿಯು ಈಗಲೂ ಹರಿಯುತ್ತಿದೆ. ಹೀಗೆ ದೇವತಾಕಾರ್ಯವನ್ನು ಮಾಡಿ ಕೊಟ್ಟ ಶ್ರೀಶಂಕರಯತೀಶ್ವರರನ್ನು ಕೈಲಾಸಕ್ಕೆ ಕರೆದುಕೊಂಡುಹೋಗುವದಕ್ಕೆ ಬ್ರಹ್ಮೇಂದ್ರಾದಿದೇವತೆಗಳೂ ಋಷಿಗಳೂ ಸಿದ್ಧರೂ ಬಂದರು. ಸಂನಿಹಿತನಾದ ನಂದಿಯ ಮೇಲೆ ಪದ್ಮಪಾದರ ಹಸ್ತಾವಲಂಬನವನ್ನು ಸ್ವೀಕರಿಸಿ ಶಂಕರರು ಸ್ವಧಾಮಕ್ಕೆ ತೆರಳಿದರು. (ಮಾ. ಶಂ. ೧೬–೯೩ರಿಂದ ೧೦೭ರ ಸಾರ).

ಚಿದ್ವಿಲಾಸೀಯದಲ್ಲಿ ಆಚಾರ್ಯರು ಬದರಿಯಲ್ಲಿ ಒಂದು ಮಠವನ್ನು ಸ್ಥಾಪಿಸಿ ಗುರುಪಾದಸೇವೆಯೊಂದು ಹೊರತು ಮತ್ತೇತಕ್ಕೂ ಮನವೊಲಿಯದೆ ಇದ್ದ ತೋಟಕಾಚಾರ್ಯರನ್ನು ಬಲಾತ್ಕಾರಪೂರ್ವಕವಾಗಿ ಅಧ್ಯಕ್ಷರನ್ನಾಗಿ ಮಾಡಿ ರತ್ನಸಿಂಗರಾಜನಿಗೆ ಅದೆಲ್ಲವನ್ನೂ ತಿಳಿಸಿ ಮುಪ್ಪಿನಿಂದ (?) ಶರೀರವು ಕೃಶ ವಾಗಿ ನಾರಾಯಣನನ್ನು ಪ್ರಾರ್ಥಿಸಿದಂತೆ ಭಗವಂತನು ಉಷ್ಣೋದಕಸರಸ್ಸನ್ನು ಕೊಟ್ಟನು. ಆ ಸರೋವರದಲ್ಲಿ ಸ್ನಾನಮಾಡುತ್ತಾ ನಾರಾಯಣಸ್ಮರಣೆಮಾಡುತ್ತಾ ಅಲ್ಲಿ ಇರುತ್ತಿದ್ದರು. ಆ ಕಾಲಕ್ಕೆ ದತ್ತಾತ್ರೇಯಮಹಾಮುನಿಗಳೂ ನಾರಾಯಣದರ್ಶನಕ್ಕಾಗಿ ಬಂದು ಶಂಕರವೃತ್ತಾಂತವನ್ನು ಕೇಳಿ ಅವರೊಡನೆ ಸಂಭಾಷಣೆಮಾಡಿ ನಾರದರ ಪ್ರಾರ್ಥನೆಯಂತೆ ಶಿವನೇ ಈ ನಿಮ್ಮ ರೂ

ಅನತಿರಿಸಿರುವನೆಂಬುದನ್ನು ನಾನು ಬಲ್ಲೆ ಎಂದರು. ಆಚಾರ್ಯರು ತಮ್ಮ ಭಾಷ್ಯಗಳನ್ನು ಅವರಿಗೆ ತೋರಿಸಿದರು. ದತ್ತಾತ್ರೇಯರು ಸೂತ್ರಭಾಷ್ಯವನ್ನೆಲ್ಲ ನೋಡಿ ಹೊಗಳಿದರು. ಅವರ ಕೈಯನ್ನು ಹಿಡಿದುಕೊಂಡು ಮಹಾದ್ವಾರವನ್ನು ಹೊಕ್ಕು ಕ್ರಮಕ್ರಮವಾಗಿ ಪ್ರಮಥರು, ಪಾರ್ವತಿ, ಗಣಪತಿ, ಷಣ್ಮುಖ-ಇವರ್ು ಇದ್ದ ಕೈಲಾಸಕ್ಕೆ ಹೋದರು (ಚಿ. ಶಂ. ೩೧-೩೪ರಿಂದ ೪೯).

**ಗುರುವಂಶಕಾವ್ಯದಲ್ಲಿ :** ಆಚಾರ್ಯರು ನೇಪಾಲಕ್ಕೆ ಹೋಗಿ ಸಿದ್ಧೇಶ್ವರಿಯರ ದರ್ಶನವನ್ನು ಮಾಡಿಕೊಂಡು ತಮ್ಮ ಕಾರ್ಯವೆಲ್ಲವೂ ಪರಿಸಮಾಪ್ತವಾದದ್ದರಿಂದ ದಂಡಕಮಂಡಲುಗಳನ್ನು ತ್ಯಾಗಮಾಡಿದರು. ದಂಡವು ಒಂದು ಮರವಾಯಿತು ; ಕಮಂಡಲುವು ನದಿಯಾಯಿತು ; ಬಳಿಕ ದತ್ತಾತ್ರೇಯರ ಸ್ಥಾನವನ್ನು ಸೇರಿದರು.

> ದತ್ತಾತ್ರೇಯಂ ಭುವನವಿನುತಂ ವೀಕ್ಷ್ಯ ನತ್ವಾಽಸ್ಯ ಗಾದೀನ್
> ವೃತ್ತಂ ಸ್ವೀಯಂ ಸಕಲಮಪಿ ತಾನ್ ಪ್ರೇಷಿತಾನ್ ದಿಕ್ಷು ಶಿಷ್ಯಾನ್ ।
> ಸೋಽಪಿ ಶ್ರುತ್ವಾ ಮುನಿಪತಿರದಾದಾಶಿಷೋ ವಿಶ್ವರೂಪಾ
> ಚಾರ್ಯಾದಿಭ್ಯಃ ಸುಖಮವಸತಾಂ ತತ್ರ ತೌ ಭಾಷಮಾಣೌ ॥ ೩೭೦ ॥

'ದತ್ತಾತ್ರೇಯಮುನಿಯನ್ನು ಕಂಡು ನಮಸ್ಕರಿಸಿ ತಾವು ಮಾಡಿದ್ದೆಲ್ಲವನ್ನೂ ತಾವು ದಿಕ್ಕುದಿಕ್ಕುಗಳಿಗೆ ಶಿಷ್ಯರನ್ನು ಕಳುಹಿಸಿದ್ದನ್ನೂ ತಿಳಿಸಿದರು. ಆ ಮುನಿ ಇದನ್ನು ಕೇಳಿ ವಿಶ್ವರೂಪಾಚಾರ್ಯನೇ ಮುಂತಾದವರಿಗೆ ಆಶೀರ್ವಾದವನ್ನು ಮಾಡಿದರು. ಅವರಿಬ್ಬರೂ ಸಂಭಾಷಣೆಮಾಡುತ್ತಾ ಸುಖವಾಗಿದ್ದರು' ಎಂದಿದೆ.

**ಆನಂದಗಿರೀಯದಲ್ಲಿ :** ತಮ್ಮ ಲೋಕಕ್ಕೆ ಹೋಗಬೇಕೆಂಬ ಇಚ್ಛೆಯಿಂದ ಮುಕ್ತಿಸ್ಥಲವಾದ ಕಾಂಚೀನಗರದಲ್ಲಿ ಒಮ್ಮೆ ಕುಳಿತು ಸ್ಥೂಲಶರೀರವನ್ನು ಸೂಕ್ಷ್ಮದಲ್ಲಿ ಮರೆಮಾಡಿಸಿ ಸದ್ರೂಪರಾಗಿ ಸೂಕ್ಷ್ಮವನ್ನು ಕಾರಣದಲ್ಲಿ ವಿಲಯ ಮಾಡಿ ಚಿನ್ಮಾತ್ರರಾಗಿ ಅಂಗುಷ್ಠಪುರುಷರಾಗಿ ಆಮೇಲೆ ಪರಿಪೂರ್ಣವಾದ ಅಖಂಡಮಂಡಲಾಕಾರಾನಂದವನ್ನು ಸೇರಿ ಸರ್ವಜಗದ್ವ್ಯಾಪಕವಾದ ಚೈತನ್ಯರಾಗಿ ಆ ರೂಪದಿಂದ ಈಗಲೂ ಇರುತ್ತಾರೆಂದಿದೆ (ಪ್ರ. ೭೪ ಪು. ೨೫೫ ; ದೇ ಪು. ೨೧೬).

**ಆತ್ಮಬೋಧರು ಉದಾಹರಿಸಿರುವ ಪ್ರಾಚೀನಶಂಕರವಿಜಯದಲ್ಲಿ**

> ಕಾಮಾಕ್ಷ್ಯಾಃ ಸವಿಧೇ ಸ ಜಾತು ನಿವಸನ್ ಉನ್ಮುಕ್ತ ಲೋಕಸ್ಪೃಹೋ ।
> ದೇಹಂ ಸ್ವಂ ವ್ಯಪಹಾಯ ದೇಹ್ಯಸುಗಮಂ ಧಾಮಾಂತ ಪ್ರಪೇದೇ ಪರಮ್ ॥

(ಗು. ರ. ೩೩ರ ವ್ಯಾಖ್ಯಾನ)

ಕಾಮಾಕ್ಷಿಯ ಬಳಿಯಲ್ಲಿದ್ದುಕೊಂಡು ಲೋಕೈಷಣೆಯನ್ನು ಬಿಟ್ಟು, ದೇಹವನ್ನು ಅಲ್ಲಿಯೇ ಇಟ್ಟು, ವೇಹಿಗಳಿಗೆ ಪಡೆಯಲಸದಳವಾದ ಪರಂಧಾಮವನ್ನು ಸೇರಿದರು.

ಆತ್ಮಬೋಧರು ಉದಾಹರಿಸಿರುವ ಕೇರಳೀಯ ಶಂಕರವಿಜಯದಲ್ಲಿ: ‹ಒಮ್ಮೆ ಆ ಜಗದ್ಗುರುಗಳು ಕಾಮಾಕ್ಷಿಯ ಬಳಿಯಲ್ಲಿ ಇದ್ದುಕೊಂಡು ದೇಹವನು ಅಲ್ಲಿಯೇ ಬಿಟ್ಟು ದೇಹಿಗಳು ಸೇರುವದಕ್ಕೆ ಕಷ್ಟವಾದ ಅಖಂಡಜ್ಯೋತಿಯೂ ಆನಂದವೂ ಅಕ್ಷರವೂ ಆದ ಪರಮಪದವನ್ನು ಸೇರಿದರು. ಆದೇ ಶಂಕರಾಚಾರ್ಯರು ಸತ್ಪುರುಷರಿಗೆ ಮುಕ್ತಿಯನ್ನು ಕೊಡುತ್ತಾ ಮೂರ್ತಿಮತ್ತಾದ ಚೈತನ್ಯದಂತೆ ಅಲ್ಲಿಯೇ ಇರುತ್ತಾರೆ (ಅದೇ ಶ್ಲೋಕದ ವ್ಯಾಖ್ಯಾನದಲ್ಲಿ).

ಗೋವಿಂದನಾಥಕೃತ ಶಂಕರಾಚಾರ್ಯಚರಿತ್ರದಲ್ಲಿ (ಒಂಬತ್ತನೆಯ ಅಧ್ಯಾಯದ ಸಾರ) :

ಕಾಮಾಕ್ಷ್ಯಾ ನಾಮ ವಾಗ್ದೇವ್ಯಾಃ ಸ್ಥಾನಂ ತತ್ಪರಮಂ ಪ್ರಾಪ್ತವಾನ್ ।
ತತ್ರತ್ಯಸರ್ವವಿದ್ವದ್ಭಿಃ ಪೂಜ್ಯಮಾನಂ ದಿನೇದಿನೇ ॥ ೩ ॥

ಸರ್ವಜ್ಞಪೀಠಮಾರೋಢುಮಿಯೇಷ ಯತಿಪುಙ್ಗವಃ ।
ವಾದಿಭಿಃ ಕರ್ಮಕಾಣ್ಡಜ್ಞೈಃ ಕಾಣಾದಾದಿಭಿರಪ್ಯಯಮ್ ॥ ೪ ॥

ಸ್ವೇ ಸ್ವೇ ಶಾಸ್ತ್ರೇ ರಹಸ್ಯಂ ಯತ್ ತತ್ಪೃಷ್ಟಃ ಶಙ್ಕರೋ ಮಹಾನ್ ।
ಯಥಾವದುತ್ತರಂ ಸರ್ವಂ ಸಮುದೀರ್ಯ ಮಹಾಮತಿಃ ॥ ೫ ॥

ಎಂದು ವಾದಿಗಳಿಗೆಲ್ಲ ಉತ್ತರವನ್ನು ಹೇಳಿ ಕಾಂಚಿಯ ಸರ್ವಜ್ಞಪೀಠವನ್ನು ಏರುವದಕ್ಕೆ ಸಿದ್ಧರಾಗಲು ಅಶರೀರವಾಣಿಯನ್ನು ಕೇಳಿ ಏಳು ದಿನದ ಗಡುವನ್ನು ತೆಗೆದುಕೊಂಡು ಪರಕಾಯಪ್ರವೇಶವನ್ನು ಮಾಡಿ ಬಂದು ಸರಸ್ವತಿಯ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಕೊಟ್ಟು ಪೀಠವನ್ನೇರಿ ಕಾಂಚಿಯಿಂದ ಹೊರಟರು. ಕ್ಷೇತ್ರಗಳನ್ನು ಸುತ್ತಿಕೊಂಡು ವೃಷಾಚಲಕ್ಕೆ ಬಂದರು.

ತತ್ರ ದಕ್ಷಿಣಕೈಲಾಸೇ ನಿವಸನ್ನೇಕದಾ ಗುರುಃ ॥ ೧೮ ॥
ಜ್ಞಾತ್ವಾ ನಿಜಶರೀರಾನ್ತಂ ಸಹ ಶಿಷ್ಯೈಃ ಪ್ರಸನ್ನಧೀಃ ।
ಕಾಸಾರೇ ಪಶ್ಚಿಮೇ ಸ್ನಾತ್ವಾ ನತ್ವಾ ತತ್ರತ್ಯಮೀಶ್ವರಮ್ ।

ಆ ದಕ್ಷಿಣಕೈಲಾಸದಲ್ಲಿದ್ದಾಗ ಒಮ್ಮೆ ತಮ್ಮ ಶರೀರಾಂತದ ಕಾಲವು ಒದಗಿದೆ ಎಂಬುದನ್ನರಿತು ಪಶ್ಚಿಮಸರೋವರದಲ್ಲಿ ಸ್ನಾನವನ್ನು ಮಾಡಿ ಈಶ್ವರನಿಗೆ ನಮಸ್ಕರಿಸಿ, ಮೂಲಸ್ಥಾನಕ್ಕೆ ಪ್ರದಕ್ಷಿಣೆಯನ್ನು ಮಾಡಿ ಒಳಹೊಕ್ಕು ಕೃಷ್ಣನನ್ನು ನಮಸ್ಕರಿಸಿ ನಂದಿಗೆ ನಮಸ್ಕಾರಮಾಡಿ ಭಾರ್ಗವರಾಮ, ಸಿಂಹೋದರ –ಇವರನ್ನು ನಮಸ್ಕರಿಸಿ ಉತ್ತರೇಶ, ಪಾರ್ವತಿ, ಹರಿಹರ– ಇವರನ್ನು ನಮಿಸಿ ಅಲ್ಲಿ ಬಹಳ ಸ್ತೋತ್ರಗಳನ್ನು ವಿರಚಿಸಿ ಹೇಳಿ

ಇಷ್ಟೈಃ ಸಹ ಮಹಾಯೋಗೀ ಪ್ರವೇಶೇ ಕುತ್ರಚಿದ್ಗುರುಃ ॥ ೩೨ ॥
ನಿವಿಷ್ಟಃ ಸುಪ್ರಸನ್ನಾತ್ಮಾ ಸರ್ವಮಾಪಾದಮೂರ್ಧಜಮ್ ।
ಯಥಾವಚ್ಚಿನ್ತಯಾಮಾಸ ವೈಷ್ಣವಂ ರೂಪಮಾದರಾತ್ ॥ ೩೩ ॥

ಒಂದು ಕಡೆಯಲ್ಲಿ ಕುಳಿತು ಆಪಾದತಲಮಸ್ತಕವಾಗಿ ವೈಷ್ಣವರೂಪವನ್ನು ಚಿಂತಿಸಿದರು. ಸ್ರಗ್ಧರಾವೃತ್ತದಿಂದ ಸ್ತೋತ್ರಮಾಡಿದರು; ದೇವತೆಗಳು ಕುಸುಮ ವೃಷ್ಟಿಯನ್ನು ಸುರಿಸಿದರು.

ದೇಶಿಕೇನ್ದ್ರೋ ಮಹಾಯೋಗೀ ಸ್ತೋತ್ರಂ ಕುರ್ವನ್ ಸ ವೈಷ್ಣವಮ್ ।
ವಿವೇಶ ಪರಮಾನನ್ದಂ ಭಾನುಬಿಮ್ಬಾನ್ತರಸ್ಥಿತಮ್ ॥ ೬೨

ಹೀಗೆ ವಿಷ್ಣುಸ್ತೋತ್ರವನ್ನು ಮಾಡುತ್ತಾ ಆ ಮಹಾಯೋಗಿಗಳು ಸೂರ್ಯಬಿಂಬದ ಒಳಗೆ ಇರುವ ಪರಮಾನಂದವನ್ನು ಹೊಕ್ಕರು!

## ವ್ಯಾಸಾಚಲೀಯದಲ್ಲಿ

ಏವಂ ನಿರುತ್ತರಪದಾಂ ಸ ವಿಧಾಯ ದೇವೀಂ
ಸರ್ವಜ್ಞಪೀಠಮಧಿರುಹ್ಯ ನನನ್ದ ಸಭ್ಯಃ ।
ಮಾತ್ರಾ ಗಿರಾಮಪಿ ತಥಾ ಪುರುಷೈಶ್ಚ ಸಭ್ಯೈಃ
ಸಂಭಾವಿತೋ ರುಚಿರದೇಶಮಯಂ ಜಗಾಮ ॥ ೬೮ ॥

ಎಂಬ ಶ್ಲೋಕವು ಹನ್ನೆರಡನೆಯ ಸರ್ಗದಲ್ಲಿದೆ. ಸರ್ವಜ್ಞಪೀಠವನ್ನೇರಿದ ಬಳಿಕ ಸರಸ್ವತಿಯಿಂದಲೂ ಸಭ್ಯರಿಂದಲೂ ಸಂಭಾವಿತರಾಗಿ ತಮಗೆ ಇಷ್ಟವಾದ ಕಡೆಗೆ ಹೊರಟುಹೋದರು ಎಂದು ಆದರೆ ಅರ್ಥ. ಆದರೆ ಆತ್ಮಬೋಧರು ಉದಾಹರಿಸಿರುವ ಇದೇ ಶ್ಲೋಕವು

ಏವಂ ನಿರುತ್ತರಪದಾಂ ಸ ವಿಧಾಯ ದೇವೀಂ
ಸರ್ವಜ್ಞಪೀಠಮಧಿರುಹ್ಯ ಪುರೇ ಸ್ವಕ್ಲೃಪ್ತೇ ।
ಮಾತ್ರಾ ಗಿರಾಮಪಿ ತಥಾ ಪುರುಷೈಶ್ಚ ಸಭ್ಯೈಃ
ಸಂಭಾವಿತೋ ಕಮಪಿ ಕಾಲಮುವಾಸ ಕಾಞ್ಚ್ಯಾಮ್ ॥
(ಗು. ರ. ೨೨, ಪ. ವ್ಯಾಖ್ಯಾ)

ಎಂದಿದೆ. 'ಎಲ್ಲರಿಂದಲೂ ಸಂಭಾವಿತರಾಗಿ ಸ್ವಲ್ಪಕಾಲದವರೆಗೆ ಕಾಂಚಿಯಲ್ಲಿದ್ದರು' ಎಂದರ್ಥ. ಅವರು ಹೇಳುವ ವ್ಯಾಸಾಚಲೀಯವೂ ಇದೇ ಆಗಿದ್ದರೆ ಈ ಶ್ಲೋಕವನ್ನು ಯಾರೋ ಒಬ್ಬರು ತಮ್ಮ ಅಭಿಪ್ರಾಯಕ್ಕನುಗುಣವಾಗಿ ತಿದ್ದಿರುತ್ತಾರೆಂದು ಹೇಳಬೇಕಾಗುತ್ತದೆ.

ಒಟ್ಟಿನಲ್ಲಿ ಹೇಳುವದಾದರೆ, ಆಚಾರ್ಯರು ಎಲ್ಲಿ ಹೇಗೆ ತಿರೋಧಾನವಾದರು ಎಂಬುದೂ ಯಾರಿಗೂ ತಿಳಿಯದು. ಈ ವಿಷಯದಲ್ಲಿ ಕಟ್ಟುಕಥೆಗಳಿಗೇನೂ ಕಡಿಮೆಯಿಲ್ಲ. ಇಲ್ಲಿ ಒಂದೆರಡನ್ನು ಸಂಗ್ರಹಿಸಲಾಗಿದೆ : ಆಚಾರ್ಯರು ದಿಗ್ವಿಜಯಕ್ಕೆ ಹೋಗುವಾಗ ವಾದಕಾಲದಲ್ಲಿ ಎಣ್ಣೆ ಕೊಪ್ಪರಿಗೆಯನ್ನಿಟ್ಟು ಅದನ್ನು ಕಾಯಿಸುತ್ತಿದ್ದರಂತೆ. ಪ್ರತಿವಾದಿಗಳಾದ ಬೌದ್ಧರನ್ನು 'ನೀವು ವಾದದಲ್ಲಿ ಸೋತರೆ ನಿಮ್ಮನು ಈ ಕೊಪ್ಪರಿಗೆಯಲ್ಲಿ ಹಾಕುವೆವು' ಎಂಬ ಸಮಯಬಂಧಕ್ಕೆ ಒಪ್ಪಿಸುತ್ತಿದ್ದರಂತೆ. ಒಮ್ಮೆ ಮಹಾಚೀನ (ತಿಬೆಠ್)ದಲ್ಲಿ ಶಾಸ್ತ್ರಾರ್ಥವಾದಾಗ ತಾಂತ್ರಿಕಬೌದ್ಧರನ್ನು ಗೆದ್ದಮೇಲೆ ಶಿಷ್ಯ **ಆನಂದಗಿರಿ**ಯು 'ಪೂಜ್ಯರೆ, ಇನ್ನು ಕೊಪ್ಪರಿಗೆಯನ್ನು ಕಾಯಿಸುವದು ಬೇಡ. ಜಗತ್ತು ನಿರವಧಿಕವಾಗಿದೆ. ತಾವು ಎಲ್ಲಿಯವರೆಗೆ ಹೀಗೆ ವಾದಮಾಡುತ್ತಾ ಇರುವದಕ್ಕಾದೀತು ?' ಎಂದನಂತೆ. ಗುರುಗಳು ಅದಕ್ಕೆ ಒಪ್ಪಿ ಆ ಕೊಪ್ಪರಿಗೆಯನ್ನು ಅಲ್ಲಿಯೇ ದಬ್ಬುಹಾಕಿ ಹಿಂತಿರುಗಿದರಂತೆ. ಆ ಸ್ಥಾನವನ್ನು ಈಗಲೂ '**ಶಂಕರಕಟಾಹ**'ವೆಂದು ಕರೆಯುತ್ತಿದಾರಂತೆ! ನೇಪಾಲತಿಬ್ಬೆತ್ತುಗಳಲ್ಲಿ ಇನ್ನೊಂದು ಕಿಂವದಂತಿ ಪ್ರಚಲಿತವಾಗಿದೆಯಂತೆ. ಒಬ್ಬ ಲಾಮನು(ಬೌದ್ಧ ಮಠಾಧಿಪತಿಯು) ಆಚಾರ್ಯರನ್ನು ವಾದದಲ್ಲಿ ಸೋಲಿಸಲು ಅವರು ಒಪ್ಪಿದ್ದ ಪ್ರಕಾರ ಈ ಕೊಪ್ಪರಿಗೆಯಲ್ಲಿ ಬಿದ್ದರು- ಎಂದು ಕೆಲವರು ; ಒಬ್ಬ ಲಾಮನು ತಾಂತ್ರಿಕಪ್ರಯೋಗದಿಂದ ಆಚಾರ್ಯರನ್ನು ಅಲ್ಲಿ ಕೊಂದನೆಂದು ಕೆಲವರ ಹೇಳಿಕೆ. (ಬಲ. ಪು. ೧೨೭ Prof. Venkatesan- The Last days of Shankaracharya, Journal of Research Madras, Vol. I) ಕಥೆಗೆ ಕಾಲಿಲ್ಲವಷ್ಟೆ ?

ಅಂತೂ ಆಚಾರ್ಯರು ತಮ್ಮ ಮೂವತ್ತೆರಡನೆಯ ವಯಸ್ಸಿನಲ್ಲಿ ಬ್ರಹ್ಮೀಭೂತರಾದರೆಂಬುದು ನಿಶ್ಚಿತ. ಎಲ್ಲಿ, ಹೇಗೆ ?-ಎಂಬ ವಿಶೇಷಪ್ರಕಾರವು ದೇವರಿಗೇ ಗೊತ್ತು. ಸದ್ಯಕ್ಕೆ **ಕೇದಾರನಾಥ**ದಲ್ಲಿ ಆಚಾರ್ಯರು ಅದೃಶ್ಯರಾದ ಸ್ಥಾನದಲ್ಲಿ ಆಚಾರ್ಯರ ಒಂದಾನೊಂದು ಸಮಾಧಿ ಇದೆಯಂತೆ. ಅದು ನಿಜವಾಗಿ ಸಮಾಧಿಯಲ್ಲವೆಂದೂ ಅಲ್ಲಿ ಹೊಸ ಸ್ಮಾರಕವಾದ ಕಟ್ಟಡವನ್ನು ನಿರ್ಮಾಣಮಾಡಬೇಕೆಂದೂ ಆ ಸ್ಮಾರಕವು ಈಗಿನ ಸಮಾಧಿಯ ಬಳಿಯಲ್ಲಿರದೆ ದೇವಸ್ಥಾನದ ಬಳಿಯಲ್ಲಿರತಕ್ಕದ್ದೆಂದೂ ಉತ್ತರಪ್ರದೇಶದ ಪ್ರಧಾನಮಂತ್ರಿಗಳಾದ ಶ್ರೀ|| **ಸಂಪೂರ್ಣಾನಂದರು** ದ್ವಾರಕಾಪೀಠಾಧಿಪರ ಸಂಮತಿಯಿಂದ ಏರ್ಪಾಡುಮಾಡುತ್ತಿದಾರೆ. ತಾವೂ ಮತ್ತು ಎಲ್ಲಾ ಜೀವರೂ ದೇಶಕಾಲವಸ್ತುಪರಿಚ್ಛೇದಶೂನ್ಯವಾದ ಜನನಮರಣ ರಹಿತವಾದ ಬ್ರಹ್ಮವೇ-ಎಂಬ ವೇದಾಂತಾರ್ಥವನ್ನು ಲೋಕಕ್ಕೆ ಬೋಧಿಸಿರುವ ಆಚಾರ್ಯರು ಕಾಂಚಿ, ತ್ರಿಚೂರು ಅಥವಾ ಕೇದಾರ- ಯಾವ ದೇಶಕ್ಕೂ ಮೀಸಲಾಗುವಂತಿಲ್ಲವಾದರೂ ಭರತಖಂಡಕ್ಕೆ ಉತ್ತರದಲ್ಲಿ ಲೋಕೋ

ತ್ತರಕ್ಷೇತ್ರವಾದ ಕೇದಾರದಲ್ಲಿ ಅವರ ಸ್ಮಾರಕವೊಂದು ಇರುವದು ಯೋಗ್ಯವೇ ಆಗಿದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.

## ಆಚಾರ್ಯರ ತಿರೋಧಾನಕಾಲ :

೧೫೧. ಆಚಾರ್ಯರ ಜನ್ಮಕಾಲದ ವಿಷಯಕ್ಕೆ ಹೇಗೋಹಾಗೆಯೇ ತಿರೋಧಾನಕಾಲದ ವಿಷಯಕ್ಕೂ ಮತಭೇದಗಳುಂಟು. ಈ ವಿಷಯಕ್ಕೆ ಮಠದವರ ಅಭಿಪ್ರಾಯವಿಶೇಷಗಳು ಕೆಲವನ್ನು ಹಿಂದೆ (ಪು. ೨೦, ೨೧, ೨೩) ಕೊಟ್ಟಿರುತ್ತೇವೆ. 'ಆಚಾರ್ಯರ ಜನ್ಮಕಾಲಕ್ಕೆ ಮೂವತ್ತೆರಡು ವರ್ಷಗಳ ತರುವಾಯ ಅವರು ಪರಂಧಾಮಕ್ಕೆ ತೆರಳಿದರೆಂದು ಇಟ್ಟುಕೊಂಡು ಅವರವರು ಈ ತಿರೋಧಾನಕಾಲವನ್ನು ನಿಶ್ಚಯಿಸಿರುತ್ತಾರೆ. ಹೆಚ್ಚಿಗೆಯ ವಿಷಯಗಳನ್ನು (೪ನೆಯ) ಪರಿಶಿಷ್ಟದಿಂದ ತಿಳಿಯಬಹುದು. ನಮ್ಮ ದೇಶದ ಪ್ರಾಚೀನ ಇತಿಹಾಸದಲ್ಲಿ ಕಾಲದ ನಿರ್ಣಯವು ಯಾವಾಗಲೂ ವಿವಾದಗ್ರಸ್ತವೇ ಆಗಿರುತ್ತದೆ. ಆದ್ದರಿಂದ ಈ ವಿಷಯದಲ್ಲಿ ಇನ್ನೇನೂ ಬರೆಯದೆ "ಕಾಲಾಯ ತಸ್ಮೈ ನಮಃ" ಎಂದು ಈ ವಿಚಾರವನ್ನು ಇಷ್ಟಕ್ಕೇ ನಿಲ್ಲಿಸುವೆವು.

---

# ೧೭. ಆಚಾರ್ಯರಿಂದಾಗಿರುವ ಲೋಕೋಪಕಾರ

## ಹಿಂದಿನ ಗ್ರಂಥದ ಸಾರ

೧೫೨. ಆವಿರ್ಭಾವದಿಂದ ಮೊದಲುಮಾಡಿ ತಿರೋಧಾನದವರೆಗಿನ ಚರಿತ್ರೆಯನ್ನು ಶಂಕರವಿಜಯಗಳ ಆಧಾರದಿಂದಲೂ ವಿಮರ್ಶಕರುಗಳ ಊಹಾಪೋಹಗಳ ಅವಲಂಬನೆಯಿಂದಲೂ– ನಮಗೆ ತಿಳಿದಮಟ್ಟಿಗೆ ವಿವರಿಸಿದ್ದಾಗಿದೆ. ಆಚಾರ್ಯರ ಚರಿತ್ರೆಯಲ್ಲಿ ಸರ್ವಸಂಮತವಾಗಿರುವ ಅಂಶಗಳು ಇಷ್ಟು : ಅವರು ಕೇರಳದಲ್ಲಿ ಜನಿಸಿದರೆಂಬುದೇ ಸಂಭಾವನೀಯವಾಗಿದೆ. ಬಾಲ್ಯದಲ್ಲಿಯೇ ಪಿತೃವಿಯೋಗವಾಯಿತು. ಉಪನಯನವಾದ ಸ್ವಲ್ಪ ಕಾಲದೊಳಗಾಗಿಯೇ ಪ್ರೈಷೋಚ್ಚಾರಣವನ್ನು ಮಾಡಿ ಉತ್ತರಕ್ಕೆ ಹೋಗಿ ಗೋವಿಂದಭಗವತ್ಪಾದರಲ್ಲಿ ಕ್ರಮಸಂನ್ಯಾಸವನ್ನು ತೆಗೆದುಕೊಂಡು ಅವರ ಉಪದೇಶವನ್ನು ಪಡೆದುಕೊಂಡು ಭಾಷ್ಯಾದಿಗ್ರಂಥಗಳನ್ನು ರಚಿಸಿದರು. ಆಗಿನ ಕಾಲದ ವಿದ್ವಾಂಸರಿಗೆಲ್ಲ ಒಪ್ಪಾಗುವಂತೆ ತಮ್ಮ ಸಿದ್ಧಾಂತವನ್ನು ಬೋಧಿಸಿದರು. ದೇಶದಲ್ಲೆಲ್ಲ ಸಂಚಾರವನ್ನು ಮಾಡಿ ತಮಗೆ ಸಮ್ಮತವಾದ ಸಂಪ್ರದಾಯದ ಅದ್ವೈತಸಿದ್ಧಾಂತವನ್ನು ನೆಲೆಗೊಳಿಸಿದರು. ಅನೇಕರು ಅವರ ಶಿಷ್ಯರಾದರು. ಅವರೂ ಅವರ ಶಿಷ್ಯಪರಂಪರೆಯವರೂ ಬರೆದ ವೇದಾಂತಗ್ರಂಥಗಳೂ ಅವರ ಹೆಸರಿನಲ್ಲಿ ಸ್ಥಾಪಿತವಾದ ಮಠಗಳೂ ಇಂದಿಗೂ ಪ್ರಸಿದ್ಧವಾಗಿವೆ. ಭರತಖಂಡದಲ್ಲಿಯೇ ಅಲ್ಲದೆ ಪಾಶ್ಚಾತ್ಯದೇಶಗಳಲ್ಲಿಯೂ ಅವರನ್ನು ಮಹಾತತ್ತ್ವವಿಶಾರದರು, ಸದಾಚಾರಸ್ಥಾಪಕರು, ಭಕ್ತಶ್ರೇಷ್ಠರು ಕವಿಗಳು–ಎಂದು ಈಗಲೂ ಗೌರವಿಸುತ್ತಾರೆ. ಅವರನ್ನು ಪ್ರಾತಃಸ್ಮರಣೀಯರೆಂದು ಭಾವಿಸುವ ಭಾರತದೇಶನಿವಾಸಿಗಳು ಅಸಂಖ್ಯಾತರಾಗಿ ಈಗಲೂ ಇರುತ್ತಾರೆ.

## ಆಚಾರ್ಯರೂ ಬೌದ್ಧಮತವೂ

೧೫೩. ಈಗ ಈ ಮಹನೀಯರು ಮಾಡಿರುವ ಲೋಕೋಪಕಾರವನ್ನು ಕುರಿತು ಸ್ವಲ್ಪಮಟ್ಟಿಗೆ ಪರಿಶೀಲನೆಮಾಡುವ ಕಾಲವು ಬಂದೊದಗಿದೆ. ಆಚಾರ್ಯರು ಉದಯಿಸಿದಾಗ ಈ ದೇಶದ ಸ್ಥಿತಿ ಹೇಗಿತ್ತು ? ಅವರು ಮತವಿಚಾರದಲ್ಲಿಯೂ ಸಮಾಜದಲ್ಲಿಯೂ ಮಾಡಿದ ಮಾರ್ಪಾಡುಗಳು ಯಾವವು ? ಎಂಬ ವಿಷಯಕ್ಕೆ ವಿದ್ವಾಂಸರುಗಳಲ್ಲಿ ಒಂದೇ ಬಗೆಯ ಅಭಿಪ್ರಾಯವಿಲ್ಲ. ಅವರ ಸಂನ್ಯಾಸಾಶ್ರಮವು ಬೌದ್ಧರ ಅನುಕರಣೆ ಎಂದು ಕೆಲವರ ಅಭಿಪ್ರಾಯವಿದೆ ; ನಮ್ಮ ಪುರಾಣೇತಿಹಾಸಗಳು ಬೌದ್ಧರ ಪ್ರಾಬಲ್ಯವನ್ನು ಅಡಗಿಸುವದಕ್ಕೆ ಹುಟ್ಟಿದ

ವೆಂದೂ ಹಿಂದುಗಳ ಈಚಿನ ಕೆಲಕೆಲವು ಆಚಾರಗಳು ಬೌದ್ಧರಿಂದಲೇ ಬಂದ ವೆಂದೂ ಕೆಲವರು ಹೇಳುತ್ತಿದಾರೆ. ಈ ಅಭಿಪ್ರಾಯಗಳಲ್ಲಿ ನಿಜದ ಅಂಶವೂ ಇರಲಾರದೆಂದು ನಾವು ಹೇಳುವದಿಲ್ಲ. ಆದರೆ ಇವುಗಳು ಯಾವವೂ ಶಂಕರಭಗ ವತ್ಪಾದರ ಸೃಷ್ಟಿಯಲ್ಲವೆಂದು ನಾವು ನೆನಪಿನಲ್ಲಿಡಬೇಕು. ಸಂನ್ಯಾಸಾಶ್ರಮವು ಶ್ರುತ್ಯುಕ್ತವಾಗಿ ಅನಾದಿಕಾಲದಿಂದಲೂ ಇದ್ದೇ ಇತ್ತು ; ಜ್ಞಾನಮಾರ್ಗವನ್ನು ಬೋಧಿಸುವವಕ್ಕೆ ಈಚಿನವರು ಅದನ್ನು ವ್ಯವಸ್ಥೆಗೊಳಿಸಿರಬಹುದು. ಅಷ್ಟೇ ಹೊರತು ಅದು ಬೌದ್ಧಮತದಿಂದ ಬಂದದ್ದಲ್ಲವೆಂಬುದು ನಿಸ್ಸಂದಿಗ್ಧವಾಗಿದೆ. ಸರಿಯಾಗಿ ನೋಡಿದರೆ ಬೌದ್ಧರ 'ಭಿಕ್ಷು'ವರ್ಗವು ಏರ್ಪಾಡಾದದ್ದೇ ವೈದಿಕ ಸಂನ್ಯಾಸಕ್ರಮದ ಅನುಕರಣೆಯಿಂದ ಎನ್ನುವದಕ್ಕೂ ಅವಕಾಶವಿದೆ. ಬೌದ್ಧರು ವರ್ಣಾಶ್ರಮಪದ್ಧತಿ, ವೇದೋಕ್ತಕರ್ಮ- ಮುಂತಾದವುಗಳನ್ನು ಹಳಿಯುತ್ತ ಇದ್ದದ್ದರಿಂದ ಅಪ್ರಿಯರಾಗಿದ್ದರೇ ಹೊರತು ಬುದ್ಧನು ಬೋಧಿಸುತ್ತಿದ್ದ **ಪಂಚಶೀಲಗಳು** ಎಂದಿಗೂ ಜನರಿಗೆ ಬೇಡದವಾಗಿರಲಿಲ್ಲ, ವೇದದಲ್ಲಿಯೂ **ಉಪನಿಷತ್ತು**ಗಳಲ್ಲಿಯೂ ದುಶ್ಚರಿತತ್ಯಾಗವೂ ಶಾಂತಿದಾಂತ್ಯಾದಿಗಳ ಆವಶ್ಯಕತೆ ಯೂ ಪೂಜ್ಯಬುದ್ಧಿಪೂರ್ವಕವಾಗಿಯೇ ಉಪದಿಷ್ಟವಾಗಿವೆ. ಪುರಾಣೇತಿಹಾಸ ಗಳಲ್ಲಿ ಈಚಿನ ಬೌದ್ಧರಲ್ಲಿ ಪ್ರವಿಷ್ಟವಾಗಿದ್ದ ಕೆಲವು ಅನಾಚಾರಗಳನ್ನು ಕಿತ್ತು ಹಾಕುವ ಪ್ರಯತ್ನವು ನಡೆದಿರಬಹುದು ; ಅವರ ಸಂಪರ್ಕದಿಂದ ಜನರು ಧರ್ಮ ಭ್ರಷ್ಟರಾಗದಂತೆ ಕರ್ಮಶ್ರದ್ಧೆ, ಸತ್ಸಂಗ, ಭಕ್ತಿ- ಮುಂತಾದವುಗಳನ್ನು ಅವು ಗಳಲ್ಲಿ ಒತ್ತಿ ಹೇಳಿರಬಹುದು. ಆದರೆ ಪುರಾಣಗಳೆಲ್ಲವೂ ಪೂರ್ಣವಾಗಿ ಬೌದ್ಧರ ಕಾಲದಿಂದಿಚೆಗೇ ಬಂದವುಗಳೆಂದು ಹೇಳುವದು ಅಷ್ಟು ಸುಲಭಸಾಧ್ಯವಲ್ಲ. ಹೇಗೇ ಆಗಲಿ, ಇತಿಹಾಸಪುರಾಣಗಳೂ ಭಗವದ್ಗೀತೆಯೂ ಬ್ರಹ್ಮಸೂತ್ರವೂ ಜನರಲ್ಲಿ ಬಳಕೆಯಾದಮೇಲೆಯೇ ಆಚಾರ್ಯರ ಆವಿರ್ಭಾವವಾಯಿತೆಂಬುದು ನಿರ್ವಿವಾದ. ಕುಮಾರಿಲಭಟ್ಟರ ಗ್ರಂಥಗಳಲ್ಲಿ ಬೌದ್ಧಮತದ ನೇರಾದ ಖಂಡನೆ ಯು ಕಾಣುವಂತೆ ಶಂಕರರ ಗ್ರಂಥಗಳಲ್ಲಿ ಕಾಣಬರುತ್ತಿಲ್ಲ ; ಆ ಖಂಡನೆಗೆ ಅವರ ಗ್ರಂಥಗಳಲ್ಲಿ ಅಷ್ಟು ಪ್ರಾಧಾನ್ಯವೂ ಇಲ್ಲ.

## ಷಣ್ಮತಸ್ಥಾಪನೆ

೧೫೪. ಆಚಾರ್ಯರವರು **ಷಣ್ಮತಸ್ಥಾಪಕರು** ಎಂಬ ನಂಬಿಕೆಯು ಅನೇಕರಲ್ಲಿದೆ. ಶಂಕರವಿಜಯಗಳಲ್ಲಿಯೂ ಆ ನಂಬಿಕೆಗೆ ಬೆಂಬಲವಿದೆ. ಚಿದ್ವಿ **ಲಾಸ, ಆನಂದಗಿರಿ,** ಕೂಷ್ಮಾಂಡಶಂಕರವಿಜಯಕಾರ- ಇವರು ಹೀಗೆಂದು ಬಾಯಿಬಿಟ್ಟು ಹೇಳಿಯೂ ಇರುತ್ತಾರೆ. ಕೆಲವು ಮಠಗಳ ಬಿರುದಾವಳಿಯಲ್ಲಿ 'ಷಣ್ಮತಸ್ಥಾಪನಾಚಾರ್ಯ'ಎಂಬ ಬಿರುದು ಕಾಣಬರುತ್ತಿದೆ. ಆದರಲ್ಲಿಯೂ ಆಚಾ ರ್ಯರು ಶೈವಮತಕ್ಕೆ ಹೆಚ್ಚಿಗೆಯ ಪ್ರಾಶಸ್ತ್ಯವನ್ನು ಕೊಟ್ಟರೆಂಬ ನಂಬಿಕೆಯು

ಅನೇಕರಲ್ಲಿದೆ. ದಕ್ಷಿಣದೇಶದಲ್ಲಿರುವ ಶಂಕರಾನುಯಾಯಿಗಳು ಬಲುಮಟ್ಟಿಗೆ ಶೈವಾಚಾರಗಳನ್ನಿಟ್ಟುಕೊಂಡಿರುವದೇ ಕಾಣಬರುತ್ತಿದೆಯಾದ್ದರಿಂದ ಆ ನಂಬಿಕೆಯು ಈ ಕಡೆಯವರಿಗೆ ಬಲುಬೇಗನೆ ಒಗ್ಗುತ್ತದೆ. ಶಂಕರವಿಜಯಗಳಲ್ಲಿ ಆಚಾರ್ಯರು ಶಿವನ ಅವತಾರವೆಂದು ವರ್ಣಿಸಿರುವದೂ ಆಚಾರ್ಯಸ್ಥಾಪಿತವೆಂದು ಪ್ರಸಿದ್ಧವಾಗಿರುವ ಮಠಗಳಲ್ಲಿ ಲಿಂಗಪೂಜೆಗೆ ಪ್ರಾಶಸ್ತ್ಯವಿರುವದೂ ಈ ನಂಬಿಕೆಗೆ ಪುಷ್ಟಿಯನ್ನು ಕೊಡುತ್ತವೆ. ಆದರೆ ಆಚಾರ್ಯರ ಪ್ರಧಾನಗ್ರಂಥಗಳಾದ ಪ್ರಸ್ಥಾನತ್ರಯಭಾಷ್ಯಗಳಲ್ಲಿ ಶೈವವೈಷ್ಣವಾದಿಮತಗಳ ಸಾಮರಸ್ಯವಿಚಾರವಾಗಲಿ, ಅವುಗಳ ತಾರತಮ್ಯವು ಪರಾಮೃಷ್ಟವಾಗಿರುವ ವಾಸನೆಯಾಗಲಿ, ಕಾಣುವದಿಲ್ಲ. ಆಚಾರ್ಯರಾಗಲಿ, ಅವರ ಸಾಕ್ಷಾಚ್ಛಿಷ್ಯರಾದ ಸುರೇಶ್ವರರಾಗಲಿ, ಶೈವರೆಂಬುದಕ್ಕೆ ಯಾವ ಆಧಾರವೂ ಇಲ್ಲ; ಅದಕ್ಕೆ ಬದಲು ಅವರು ನಾರಾಯಣನೆಂಬ ಹೆಸರನ್ನೇ ಪರಮೇಶ್ವರನಿಗೆ ಬಳಸಿರುವದು ಕಂಡುಬರುತ್ತಿದೆ. ಅವರು ಯಾವ ಶೈವಪುರಾಣದಿಂದಲೂ ಪ್ರಮಾಣವಚನಗಳನ್ನು ಆರಿಸಿಕೊಂಡಿರುವದು ಕಾಣಬರುವದಿಲ್ಲ. ಶಾಂಕರಸಂಪ್ರದಾಯದ ಸಂನ್ಯಾಸಿಗಳು ಇಂದಿಗೂ 'ನಾರಾಯಣಸ್ಮರಣೆ'ಯನ್ನೇ ಮಾಡುತ್ತಿದಾರೆ. ಇದಲ್ಲದೆ ಆಚಾರ್ಯರು ಅದ್ವೈತಸಿದ್ಧಾಂತದಲ್ಲಿ ಆದರವನ್ನು ತೋರಿಸುತ್ತಿರುವಂತೆ ಶಿವವಿಷ್ಣುಗಳ ಸಾಮ್ಯವನ್ನು ಅವಧಾರಣೆಮಾಡುವದರಲ್ಲಿ ಎಲ್ಲಿಯೂ ಹೆಚ್ಚಿನ ಆದರವನ್ನು ತೋರಿಸುತ್ತಿರುವದು ಕಂಡುಬಂದಿಲ್ಲ; ಷಣ್ಮತಗಳ ಪರಾಮರ್ಶವಂತೂ ಭಾಷ್ಯಗ್ರಂಥಗಳಲ್ಲಿ ಎಲ್ಲಿಯೂ ಕಂಡುಬಂದಿರುವದಿಲ್ಲ. ಆಚಾರ್ಯರ ಶಿಷ್ಯರಾದ ಸುರೇಶ್ವರರೂ ಹೀಗೆಯೇ; ಅವರಿಗೂ ಅದ್ವೈತದಲ್ಲಿ ತಾತ್ಪರ್ಯವಿದೆಯೇ ಹೊರತು ಮತಗಳ ಸಾಮರಸ್ಯವನ್ನು ತೋರಿಸುವದರಲ್ಲಿ ತಾತ್ಪರ್ಯವಿರುವಂತೆ ಕಾಣಿಸುವದಿಲ್ಲ. ಆದ್ದರಿಂದ ಶಾಂಕರಮಠಗಳಲ್ಲಿ ಪ್ರಖ್ಯಾತರಾಗಿದ್ದ ಅನೇಕ 'ಶಂಕರಾಚಾರ್ಯ'ರುಗಳಲ್ಲಿ ಯಾರೋ ಒಬ್ಬರು ಅಥವಾ ಅನೇಕರು ಈ ಕಾರ್ಯದಲ್ಲಿ ಕಾಲೋಚಿತವಾಗಿ ತೊಡಗಿದ್ದೇ 'ಶಂಕರಾಚಾರ್ಯರು ಷಣ್ಮತಸ್ಥಾಪನಾಚಾರ್ಯ'ರೆಂಬ ಪ್ರಥೆಗೆ ಕಾರಣವಾಗಿರಬೇಕೆಂದು ಕಲ್ಪಿಸುವದು ಯುಕ್ತವೆಂತ ಕಾಣುತ್ತದೆ.

## ಮತಸೂಚಕಮುದ್ರಾಧಾರಣನಿಷೇಧ

೧೫೫. ಬೇರೆಬೇರೆಯ ಮತದವರು ತಮ್ಮತಮ್ಮ ಮತಾಚಾರದ ಗುರುತುಗಳ ನಾಮವನ್ನು ಮೈಗೆ ಬಳಿದುಕೊಳ್ಳುವದು, ಮತ್ತು ಕಾಯಿಸಿದ ಲೋಹಗಳಿಂದ ಅಂಥ ಗುರುತುಗಳಾಗುವಂತೆ ಮೈಯನ್ನು ಸುಟ್ಟುಕೊಳ್ಳುವದು– ಇವನ್ನು ಅನುಕರಿಸುತ್ತಿದ್ದದ್ದನ್ನು ಆಚಾರ್ಯರು ನಿಲ್ಲಿಸಿದರೆ ?– ಎಂಬುದು ಮತ್ತೊಂದು ವಿಚಾರಣೀಯವಿಷಯ. ಶಂಕರವಿಜಯಗಳಲ್ಲಿ– ಅದರಲ್ಲಿಯೂ ಮುಖ್ಯವಾಗಿ ಆನಂದಗಿರೀಯಚಿದ್ವಿಲಾಸೀಯಗಳಲ್ಲಿ– ಈ ಮತಚಿಹ್ನಧಾರಣೆಯ ಹಾವಳಿ

ಯನ್ನು ಬಹುವಾಗಿ ವರ್ಣಿಸಿ ಆಚಾರ್ಯರು ಅದನ್ನು ತಮ್ಮ ಉಪದೇಶಬಲದಿಂದ ನಿಲ್ಲಿಸಿದರೆಂದು ತಿಳಿಸಿದೆ. ಆಚಾರ್ಯರ ಭಾಷ್ಯಗ್ರಂಥಗಳಲ್ಲಿ ಈ ಮತಚಿಹ್ನೆಗಳ ಪರಾಮರ್ಶದ ವಾಸನೆಯುಕೂಡ ಕಾಣುವದಿಲ್ಲ. ಆಚಾರ್ಯರ ಕಾಲಕ್ಕೆ ಈ ಆಚರಣೆಯು ಅಷ್ಟು ಬಲವಾಗಿ ಇದ್ದಿತೆ ?–ಎಂಬುದನ್ನು ಪ್ರಮಾಣಾಂತರದಿಂದ ನಾವು ನಿಶ್ಚಯಿಸಿಕೊಳ್ಳಬೇಕಾಗಿದೆ. ಒಂದುವೇಳೆ ಅದು ಆಗ ಇದ್ದರೂ ಆಚಾರ್ಯರು ಅದಕ್ಕೆ ವಿರೋಧಿಗಳಾಗಿದ್ದರೆಂಬುದಕ್ಕೆ ಯಾವ ಪ್ರಮಾಣವೂ ನಮಗೆ ಸಿಕ್ಕಿರುವದಿಲ್ಲ. ಹೀಗಿರುವದರಿಂದ ಶಂಕರವಿಜಯಗಳ ರಚನೆಯ ಕಾಲಕ್ಕೆ ಈ ಅಂಕನವನ್ನು ಪ್ರಚಾರಗೊಳಿಸುತ್ತಿದ್ದ ಮತಗಳು ಪ್ರಬಲವಾಗಿದ್ದದ್ದರಿಂದ ಈ ಪದ್ಧತಿಯು ಆಚಾರ್ಯರಿಗೆ ಅನಭಿಮತವೆಂದು ಹೀಗೆ ಶಂಕರವಿಜಯಕಾರರು ಬರೆದಿರುವರೇನೊ, ಎಂದು ಶಂಕಿಸಬೇಕಾಗಿದೆ.

## ಶಾಕ್ತಾದಿಮತಗಳ ಸುಧಾರಣೆ

೧೫೬. ಆಚಾರ್ಯರು ಶಾಕ್ತರ, ಗಾಣಾಪತ್ಯರ ಮತ್ತು ಕಾಪಾಲಿಕರ ದುರಾಚಾರಗಳನ್ನು ನಿಲ್ಲಿಸಿದರೆ ? ಆ ಕಾರ್ಯಕ್ಕೆ ತಮ್ಮ ಕಾಲದ ಬೇರೆಬೇರೆಯ ರಾಜರುಗಳ ನೆರವನ್ನು ತೆಗೆದುಕೊಂಡರೆ?–ಎಂಬುದು ಇನ್ನೊಂದು ವಿಮರ್ಶನೀಯ ವಿಷಯ. ವಾಮಾಚಾರವನ್ನು ಅನುಸರಿಸುವವರು ಈಗಲೂ ಸಂಪೂರ್ಣವಾಗಿ ಕಣ್ಮರೆಯಾಗಿಲ್ಲ. ವೇದಾಂತವೆಂಬ ಹೆಸರಿಗೆ ಸಂಬಂಧಿಸಿ ಭಂಗಿಸೇದುವದು, ಮದ್ಯ ಪಾನಾದಿಗಳನ್ನು ಆಚರಣೆಯಲ್ಲಿಟ್ಟುಕೊಳ್ಳುವದು– ಇಂಥ ತಾಮಸಾಚಾರಗಳು ಈಗಲೂ ಅಲ್ಲಲ್ಲಿ ಕೆಲವರಲ್ಲಿ ಇವೆ. ಆಚಾರ್ಯರ ಕಾಲದಲ್ಲಿಯೂ ಅಂಥವರು ಇದ್ದರೆ ಆಶ್ಚರ್ಯವೇನೂ ಇಲ್ಲ. ಆದರೆ ಆ ದುರಾಚಾರದವರ ಹಾವಳಿ ಆಚಾರ್ಯರ ಕಾಲಕ್ಕೆ ಅಷ್ಟು ಪ್ರಬಲವಾಗಿತ್ತೆಂದಾಗಲಿ, ಅದನ್ನು ಅಡಗಿಸುವದಕ್ಕೆ ಆಚಾರ್ಯರು ಬೇರೆಬೇರೆಯ ದೊರೆಗಳ ಸಹಾಯವನ್ನು ಉಪಯೋಗಿಸಿಕೊಂಡರೆಂದಾಗಲಿ, ನಂಬುವದು ಕಷ್ಟವಾಗಿದೆ. ಶಾಕ್ತಗಾಣಾಪತ್ಯಕಾಪಾಲಿಕರ ಮತಗಳನ್ನು ಪ್ರಸ್ಥಾನ ತ್ರಯಭಾಷ್ಯಗಳಲ್ಲಿ ಪರಾಮರ್ಶಿಸಿರುವದು ಕಂಡುಬರುವದಿಲ್ಲ. ಗೀತಾಭಾಷ್ಯದಲ್ಲಿ 'ಭೂತಾನಿ ವಿನಾಯಕಮಾತೃಗಣಚತುರ್ಭಗಿನ್ಯಾದೀನಿ ಯಾನ್ತಿ ಭೂತೇಜ್ಯಾಃ'(೯–೨೫) ಎಂದೂ 'ಭೂತಗಣಾಂಶ್ಚ ಸಪ್ತಮಾತೃಕಾದೀಂಶ್ಚ ಅನ್ಯೇ ಯಜನ್ತೇ ತಾಮಸಾ ಜನಾಃ' (೧೭–೪) ಎಂಬ ವಾಕ್ಯಗಳೂ ಕಾಣುವದರಿಂದ ಆಚಾರ್ಯರು ಗಾಣಾಪತ್ಯಶಾಕ್ತಮತಗಳನ್ನು ತಾಮಸವೆಂದು ಎಣಿಸಿದ್ದರೆಂದು ಊಹಿಸುವದಕ್ಕೆ ಅವಕಾಶವಿದೆಯಾದರೂ ಆ ಮತದ ಸಿದ್ಧಾಂತಗಳನ್ನು ಖಂಡನೆಗೆ ಅರ್ಹವಾದವೆಂದಾಗಲಿ, ಅವರ ದುರಾಚಾರಗಳನ್ನು ಅಡಗಿಸುವದಕ್ಕೆ ಹೆಚ್ಚಿನ ಪ್ರಯತ್ನವು ಬೇಕೆಂದು ಎಣಿಸಿದ್ದರೆಂದಾಗಲಿ, ಹೇಳುವದಕ್ಕೆ ಬರುವದಿಲ್ಲ. ಕಾಪಾ

ಲಿಕರ ಹೆಸರಂತೂ ಆಚಾರ್ಯರ ಭಾಷ್ಯಗಳಲ್ಲಿ ಕಣ್ಣಿಗೇ ಬೀಳುತ್ತಿಲ್ಲ. ಆದ್ದರಿಂದ ಆಚಾರ್ಯರು ಈ ಮತದವರೊಡನೆ ವಾದಮಾಡಿದ್ದು, ಅವರ ಆಚಾರಗಳನ್ನು ತಿದ್ದುವದಕ್ಕೆ ಪ್ರಯತ್ನಿಸಿದ್ದು, ಅಥವಾ ಅವರೊಡನೆ ಹೋರಾಡುವದಕ್ಕೆ ರಾಜರ ನೆರವನ್ನು ಅಪೇಕ್ಷಿಸಿದ್ದು– ಇದೆಲ್ಲ ಶಂಕರವಿಜಯಕಾರರುಗಳ ಕಲ್ಪನೆಯೇ ಆಗಿರಬೇಕು ; ಅಥವಾ ಮತ್ತೆ ಯಾರೋ ಒಬ್ಬ ಶಂಕರಾಚಾರ್ಯರ ಕಾರ್ಯವಿಶೇಷವನ್ನು ಇವರಿಗೆ ಗಂಟುಹಾಕಿದ್ದು ಎಂದು ಕಲ್ಪಿಸಬೇಕಾಗಿದೆ. ಸುಧನ್ವ, ವೀರಸೇನ, ರಾಜಸೇನ, ಭೋಜಸಿಂಗ, ರತ್ನಸಿಂಗ– ಈ ಹೆಸರಿನ ರಾಜರುಗಳು ಇದ್ದರೆ ? ಅವರಿದ್ದ ಕಾಲವು ಯಾವದು ?– ಎಂಬುದನ್ನು ಇತಿಹಾಸದಿಂದ ಗೊತ್ತುಪಡಿಸಿದ ಮೇಲೆಯೇ ಅವರುಗಳಿಂದ ಆಚಾರ್ಯರಿಗೆ ಎಷ್ಟರಮಟ್ಟಿನ ಸಹಾಯವು ಯಾವ ವಿಷಯಕ್ಕೆ ಆಯಿತು ?– ಎಂಬುದನ್ನು ನಿಶ್ಚಯಿಸುವದಕ್ಕೆ ಪ್ರಯತ್ನಿಸಬಹುದಾಗಿದೆ.

## ಸಮಾಜಸುಧಾರಣೆ :

೧೫೭. ಶಂಕರಾಚಾರ್ಯರು ಬದುಕಿದ್ದ ಸ್ವಲ್ಪಕಾಲದಲ್ಲಿ ಅವರು ಮಾಡಿದರೆಂದು ಅವರ ಹೆಸರಿಗೆ ಕಥೆಗಾರರು ಗಂಟುಹಾಕಿರುವ ಎಲ್ಲಾ ಸುಧಾರಣೆಗಳನ್ನೂ ಅವರೇ ಮಾಡದೆ ಇರಬಹುದು. ಅವರು 'ಹೀಗೆ ಮಾಡತಕ್ಕದ್ದು ಎಂದು ಗೊತ್ತುಮಾಡಿಕೊಟ್ಟ ಯೋಜನೆಯ ಕ್ರಮವನ್ನು ಅನುಸರಿಸಿ ಅವರ ಅನುಯಾಯಿಗಳು ಅನೇಕ ಸಮಾಜಸಂಸ್ಕರಣಗಳನ್ನು ಮಾಡಿರಬಹುದು' ಎಂದು ಕೃಷ್ಣ ಸ್ವಾಮಿ ಅಯ್ಯರವರು (CNKS p. 81) ಬರೆದಿರುತ್ತಾರೆ. ಇದೂ ಅಸಂಭಾವಿತವಲ್ಲ. ಆದರೆ ತಮ್ಮ ವಿಶಿಷ್ಟಪ್ರಸ್ಥಾನವನ್ನು ಪ್ರತಿಪಾದಿಸುವ ಅದ್ವೈತ ಗ್ರಂಥಗಳನ್ನು ಬರೆದದ್ದು, ಮತ್ತು ಭರತಖಂಡದಲ್ಲೆಲ್ಲ ಸಂಚರಿಸಿ ತಮ್ಮ ವೇದಾಂತ ಪ್ರಕ್ರಿಯೆಗೆ ಆ ಕಾಲದ ವಿದ್ವಾಂಸರ ಸಂಮತಿಯನ್ನು ಸಂಪಾದಿಸಿಕೊಂಡದ್ದು– ಈ ಎರಡಲ್ಲದೆ, ಯಾವದಾದರೂ ಸುಧಾರಣೆಯಲ್ಲಿ ಅವರು ಪ್ರವೃತ್ತರಾಗಿದ್ದರೆಂಬುದಕ್ಕೆ ನಮಗೆ ಗೊತ್ತಾದ ಆಧಾರಗಳು ದೊರೆಯುವವರೆಗೆ ಈ ಕಲ್ಪನೆಗೂ ಅವಕಾಶವಿರುವದಿಲ್ಲವೆಂದು ನಮ್ಮ ಮತ. ಅದ್ವೈತವನ್ನು ಜನರಿಗೆ ಬೋಧಿಸಿ ಅವರು ಅಂತರ್ಧಾನವಾದಮೇಲೆ ಅವರ ಶಿಷ್ಯರುಗಳೊಳಗೆ ಒಬ್ಬೊಬ್ಬರು ಒಂದೊಂದು ಕಡೆಯಲ್ಲಿದ್ದು ದುರ್ಮತಗಳನ್ನು ತಾವೇ ಖಂಡಿಸಿ ಜನರಲ್ಲಿ ಪ್ರಚಾರದಲ್ಲಿದ್ದ ದುರಾಚಾರಗಳನ್ನು ತೆಗೆದುಹಾಕುವದಕ್ಕೂ ಪ್ರಯತ್ನಪಟ್ಟಿರಬಹುದಾಗಿದೆ. ಪರಮಾತ್ಮನೊಬ್ಬನೇ ನಾನಾರೂಪಗಳಿಂದ ಪೂಜಿತನಾಗಿರುತ್ತಾನೆಂಬ ಉದಾತ್ತ ಭಾವನೆಯಿಂದ ಪ್ರೇರಿತರಾದ ಮಹನೀಯರು ಇಂಥ ಸುಧಾರಣೆಗಳನ್ನು ಮಾಡಿ ಜನರನ್ನು ಒಳ್ಳೆಯ ಮಾರ್ಗಕ್ಕೆ ತಂದಿದ್ದರೆ ಆಶ್ಚರ್ಯವೇನು ?

## ಆಚಾರ್ಯರ ಮಹಾಕಾರ್ಯಗಳ ಬಗ್ಗೆ ಕಲ್ಪನೆ

೧೩೮. ಆಚಾರ್ಯರು ಅನೇಕರನ್ನು ವಾದದಲ್ಲಿ ಜಯಿಸಿದ್ದು ನಿಜವಾಗಿರಬೇಕು. ಬೌದ್ಧರು ಈ ದೇಶದಲ್ಲಿ ಪ್ರಬಲವಾದಂದಿನಿಂದ ಜನರನ್ನು ಮತಾಂತರಗೊಳಿಸುವದು, ಗ್ರಂಥಗಳಲ್ಲಿ ಪರಮತಗಳನ್ನು ಖಂಡಿಸುವದು, ಅಲ್ಲಲ್ಲಿ ವಾದಗೋಷ್ಠಿಗಳನ್ನು ಏರ್ಪಡಿಸುವದು– ಇವು ಪ್ರಚಾರವಾಗಿಬಿಟ್ಟಿದ್ದವು. ವೈದಿಕರು ಕುಮಾರಿಲಭಟ್ಟರ ಕಾಲದಿಂದಲೂ ತಮ್ಮ ಮತದ ಸಂರಕ್ಷಣೆಗಾಗಿಯೂ ಆ ಮತವನ್ನು ಜನಾನುರಾಗಕ್ಕೆ ಪಾತ್ರವಾಗಿಮಾಡಿಕೊಳ್ಳುವದಕ್ಕಾಗಿಯೂ ರಾಜಾಶ್ರಯವನ್ನೂ ಶ್ರೀಮಂತರ ಸಹಾಯವನ್ನೂ ಬಯಸಿರಬಹುದು. ಭಟ್ಟರ ವಾರ್ತಿಕಗಳನ್ನು ನೋಡುವವರಿಗೆ ಇದೆಲ್ಲ ನಿಜವಿರ ಹುದೆಂಬ ಕಲ್ಪನೆಯುಂಟಾಗುತ್ತದೆ. ಅದರಂತೆ ಆಚಾರ್ಯರು ತಮ್ಮ ಸಿದ್ಧಾಂತದ ಪ್ರಚಾರಕ್ಕಾಗಿ ಅನೇಕರನ್ನು ತಾವೂ ವಾದದಲ್ಲಿ ಜಯಿಸಿ ಪ್ರಸಿದ್ಧರಾಗಿದ್ದ ಪ್ರತಿವಾದಿಗಳನ್ನು ಅಥವಾ ಮುಮುಕ್ಷುಗಳನ್ನು ಸಂನ್ಯಾಸಿಗಳಾಗಿ ಮಾಡಿ ಅದ್ವೈತಗ್ರಂಥರಚನೆಗೂ ಸಿದ್ಧಾಂತಪ್ರಚಾರಕ್ಕೂ ಪ್ರೋತ್ಸಾಹವನ್ನು ಕೊಟ್ಟಿರಬಹುದು. ಇಂಥ ಸಂನ್ಯಾಸಿಗಳ ಗ್ರಂಥಗಳೇ ಈಗ ನಮಗೆ ದೊರಕುತ್ತಿರುವ ಅಮೂಲ್ಯ ಅದ್ವೈತಗ್ರಂಥಗಳೆಂದು ನಾವು ಭಾವಿಸಬಹುದಾಗಿದೆ.

ಶಂಕರಾಚಾರ್ಯರ ಶಿಷ್ಯರಾದ ಸಂನ್ಯಾಸಿಗಳು ಒಂದೇ ದೇಶದವರಲ್ಲ. ಅವರುಗಳು ಬರೆದ ಗ್ರಂಥಗಳನ್ನು ಶಂಕರಾಚಾರ್ಯಕೃತವೆಂದು ಅನೇಕರು ಭ್ರಾಂತಿಯಿಂದ ಕಲ್ಪಿಸಿರುವ ಸಂಭವವಿದೆ. ಇದಲ್ಲದೆ, ಪರಮಹಂಸಪರಿವ್ರಾಜಕರಾಗಿ ನಿಂತಲ್ಲಿ ನಿಲ್ಲದೆ ಅನೇಕ ಶಿಷ್ಯರೊಡನೆ ಸಂಚರಿಸುತ್ತಾ ಕೆಲವು ದಿವಸಗಳಲ್ಲಿ, ವಿಶೇಷವಾಗಿ ಚಾತುರ್ಮಾಸ್ಯಕಾಲಗಳಲ್ಲಿ, ಅವರು ಶ್ರುತಿಸ್ಮೃತಿಗಳ ಆಧಾರದಿಂದ ಮಾಡಿದ ಉಪದೇಶಗಳನ್ನು ಅವರ ಶಿಷ್ಯರುಗಳು ಬರೆದುಕೊಂಡು ತಮ್ಮ ಶಿಷ್ಯಪ್ರಶಿಷ್ಯರುಗಳ ಮೂಲಕ ಪ್ರಚಾರಮಾಡಿರಬಹುದು. ಕಾಲಕ್ರಮದಲ್ಲಿ ಈ ಶಿಷ್ಯರುಗಳು ಬೇರೆಬೇರೆಯ ಪ್ರಾಂತಗಳಲ್ಲಿ ನಿಂತು ಸ್ವಸಿದ್ಧಾಂತರಕ್ಷಣೆಗಾಗಿಯೋ ಬೌದ್ಧರ ಅನುಕರಣೆಯಿಂದಲೋ ಮಠಗಳನ್ನು ಅಲ್ಲಲ್ಲಿ ಸ್ಥಾಪಿಸಿಕೊಂಡಿರಬಹುದು. ಅಲ್ಲಿನ ರಾಜರುಗಳು ಅವಕ್ಕೆ ಮಾನ್ಯಗಳನ್ನೂ ಬಿರುದುಬಾವಲಿಗಳನ್ನೂ ಕೊಟ್ಟು ಗೌರವಿಸಿರಬಹುದು-ಎಂದು ಎನ್. ವೆಂಕಟರಾಮನ್‌ರವರು(NVSS pp.36-37) ಕಲ್ಪಿಸಿರುತ್ತಾರೆ. ಅದು ಸಂಭಾವಿತವೆಂದೇ ನಮಗೆ ತೋರುತ್ತಿದೆ. ಆದ್ದರಿಂದಲೇ ಆಚಾರ್ಯರು ನಿಜವಾಗಿ ಬರೆದ ಗ್ರಂಥಗಳು ಯಾವವು ? ಅವರೇ ಸ್ಥಾಪಿಸಿರುವ ಮಠಗಳು ಯಾವವು ?–ಎಂಬುದನ್ನು ನಿರ್ಣಯಿಸುವದು ಈಗ ಕಷ್ಟಕರವಾಗಿರುತ್ತದೆ. ಗ್ರಂಥಗಳ ವಿಷಯವನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸುವೆವು. ಮಠಗಳ ವಿಷಯವನ್ನು ಇನ್ನೊಂದು ಅಧ್ಯಾಯಕ್ಕೆ ಇಟ್ಟುಕೊಳ್ಳಲಾಗಿದೆ.

# ೧೪. ಆಚಾರ್ಯರ ಮುಖ್ಯಗ್ರಂಥಗಳು

## ಭಗವತ್ಪಾದರ ಗ್ರಂಥಗಳಿಗಿರುವ ಪ್ರಧಾನಸ್ಥಾನ

೧೫೯. ಶಂಕರಭಗವತ್ಪಾದರವರು ಮಾಡಿರುವ ಲೋಕೋಪಕಾರವು ಇಂದಿನವರೆಗೂ ಉಳಿದಿದ್ದರೆ, ಅದು ಅವರು ಅನುಗ್ರಹಿಸಿರುವ ಗ್ರಂಥಗಳಿಂದ ಎಂದು ಯಾರಾದರೂ ಧೈರ್ಯವಾಗಿ ಹೇಳಬಹುದು. ಅವರ ಭಾಷ್ಯಗಳ ಅರ್ಥವು ಎಲ್ಲರಿಗೂ ಅಭಿಪ್ರಾಯವಾಗದೆ ಇರಬಹುದು; ಅವರು ಬರೆದಿರುವ ಪ್ರಕರಣಗಳಲ್ಲಿ ಕೆಲವು ದುರವಗಾಹವಾಗಿರಬಹುದು. ಆದರೆ ಅವರ ಹೆಸರಿನಲ್ಲಿರುವ ಅನೇಕ ಚಿಕ್ಕಚಿಕ್ಕ ಪ್ರಕರಣಗಳೂ ಸ್ತೋತ್ರಗಳೂ ದೇಶದ ಮೂಲೆಮೂಲೆಗೂ ಹರಡಿವೆ. ಅವುಗಳನ್ನು ಭಾರತದೇಶದಲ್ಲಿ ಲಕ್ಷಗಟ್ಟಲೆ ಜನರು ಕಂಠಪಾಠಮಾಡಿ ಹೇಳಿಕೊಂಡು ನಲಿಯುತ್ತಿದಾರೆ. ಈಗ ನಮ್ಮ ಸೌಭಾಗ್ಯದಿಂದ ಆಚಾರ್ಯರ ಗ್ರಂಥಗಳು ಇಂಗ್ಲಿಷು ಮುಂತಾದ ಪಾಶ್ಚಾತ್ತ್ಯಭಾಷೆಗಳಿಗೇ ಅಲ್ಲದೆ ದೇಶಭಾಷೆಗಳಿಗೂ ಪರಿವರ್ತನೆಯಾಗಿವೆ.

ಆಚಾರ್ಯರ ಚರಿತ್ರೆಯಲ್ಲಿ ನಡೆದವೆಂದು ಜನರು ನಂಬಿರುವ ಅದ್ಭುತಗಳು, ಅವರು ಅಲ್ಲಲ್ಲಿ ಬೇರೆಬೇರೆಯ ನಿಮಿತ್ತಗಳಿಂದ ಉಪದೇಶಮಾಡಿದರೆಂದು ಜನರು ನಂಬಿರುವ ಚಿಕ್ಕಚಿಕ್ಕ ಪ್ರಕರಣಗಳು, ಅವರ ಹೆಸರಿನಲ್ಲಿ ಪ್ರಚಾರವಾಗಿರುವ ಬೇರೆಬೇರೆಯ ದೇವತಾಸ್ತೋತ್ರಗಳು, ಅವರಿಂದ ಸ್ಥಾಪನೆಯಾಗಿರುವವೆಂದು ಪ್ರಸಿದ್ಧವಾಗಿರುವ ಮಠಗಳ ಅಧಿಪತಿಗಳು ದೇಶದಲ್ಲಿ ಸಂಚರಿಸಿ ಜನರಿಗೆ ಈಗಲೂ ಮಾಡುತ್ತಿರುವ ಉಪದೇಶಗಳು, ಅವರ ಹೆಸರಿನಲ್ಲಿ ಬೇರೆಬೇರೆಯ ಮಠಾಮ್ನಾಯ ಪ್ರಭೇದಗಳನ್ನನುಸರಿಸುವ ಬಿಡಿಸಂನ್ಯಾಸಿಗಳು ಜನರ ಮುಂದಿಡುತ್ತಿರುವ ಜ್ಞಾನ ವೈರಾಗ್ಯಾದಿಗಳ ಆದರ್ಶಗಳು- ಇವುಗಳು ಭಾರತದೇಶದಲ್ಲಿ ಅನೇಕರ ಹೃದಯದಲ್ಲಿ ಅವರ ನೆನಪನ್ನು ಪ್ರತಿಷ್ಠೆಮಾಡಿರುತ್ತವೆ. ಪ್ರತಿವರ್ಷವೂ ಅಲ್ಲಲ್ಲಿ ನಡೆಯುತ್ತಿರುವ ಆಚಾರ್ಯರ ಜಯಂತಿ, ಆರಾಧನೆ-ಇವುಗಳು ಜನರ ಮನಸ್ಸಿನಲ್ಲಿ ಅವರ ನೆನಪು ಅಚ್ಚಳಿಯದಂತೆ ಅಂಕಿತವಾಗಿರುವಂತೆ ಮಾಡಿರುತ್ತವೆ. ಶಂಕರಭಗವತ್ಪಾದರೆಂದರೆ ಬ್ರಹ್ಮಚರ್ಯದಿಂದಲೇ ಸಂನ್ಯಾಸಿಗಳಾಗಿ ದೇಶವನ್ನೆಲ್ಲ ಸಂಚರಿಸಿ ಜನರಿಗೆ ಉಪಕಾರವನ್ನು ಮಾಡಿದ ಆದರ್ಶಪರಮಹಂಸಪರಿವ್ರಾಜಕಾಚಾರ್ಯರು, ಮಹಾ ತತ್ತ್ವಜ್ಞಾನಿಗಳು, ಜಗದ್ಗುರುಗಳು, ದುರಾಚಾರನಿಗ್ರಹಕರ್ತರು, ಷಣ್ಮತಸ್ಥಾಪಕರು, ಮಹಾಭಕ್ತರು, ಉತ್ತಮಕವಿಗಳು. ಲೋಕೋಪಕಾರಕ್ಕಾಗಿಯೇ ಅವತರಿಸಿ ಯಾವಜ್ಜೀವವೂ ಅದಕ್ಕಾಗಿಯೇ ದುಡಿದ ಮಹಾತ್ಮರು- ಎಂದು ನಮ್ಮ ದೇಶದವರೇ ಅಲ್ಲದೆ ಪಾಶ್ಚಾತ್ಯರಲ್ಲಿಯೂ ಅನೇಕರು ನಂಬಿರುತ್ತಾರೆ.

ಇಂಥ ಜಗದ್ವಿಖ್ಯಾತರಾದ ಆಚಾರ್ಯರ ಚರಿತ್ರೆಯನ್ನು ಬರೆಯುವ ಕೆಲಸವು ಕೆಲವು ಕವಿಗಳ ಪಾಲಿಗೆ ಮಾತ್ರ ವಿಲಾಸಲಾದದ್ದು ಶೋಚನೀಯವಾಗಿದೆ ; ಆದ ಧಿಂದ ಆಚಾರ್ಯರ ನಿಜವಾದ ಚರಿತ್ರೆ ಯಾವದೆಂಬುದನ್ನು ನಿರ್ಣಯಿಸುವದು ಬಹಳ ಕಷ್ಟದ ಕೆಲಸವಾಗಿರುತ್ತದೆ.

ಈ ಪರಿಸ್ಥಿತಿಯಲ್ಲಿ ಆಚಾರ್ಯರ ಲೋಕೋತ್ತರವಾದ ಭಾಷ್ಯಗ್ರಂಥ ಗಳಿಂದಲೇ ಭರತಖಂಡದ ಇತಿಹಾಸದಲ್ಲಿ ಅವರ ಸ್ಥಾನವನ್ನು ಗೊತ್ತುಪಡಿಸ ಬೇಕಾಗಿಬಂದಿದೆ. ಶಂಕರಾಚಾರ್ಯರೆಂಬ ಹೆಸರು ಜನಸಾಮಾನ್ಯರ ನೆನಪಿನಲ್ಲಿ ಅವರ ಮಾಹಾತ್ಮ್ಯೆಯ ಸಂಬಂಧದಿಂದ ಹೆಚ್ಚಿನ ಪ್ರಮಾಣದಲ್ಲಿ ಉಳಿದುಕೊಂಡಿರ ಬಹುದು. ಆದರೆ ವಿಚಾರಶೀಲರ ಜಗತ್ತಿನಲ್ಲಿ ಆಚಾರ್ಯರ ಗ್ರಂಥಗಳೇ ಈಗಲೂ ಅವರ ದಿಗ್ವಿಜಯಸ್ತಂಭಗಳಾಗಿ ಉಳಿದಿರುತ್ತವೆ. ನಮ್ಮ ದೇಶದ ವೇದಾಂತ ವಿದ್ವಾಂಸರುಗಳು ಈಗಲೂ ಅವುಗಳ ಪಠನಪಾಠನವಾಕ್ಯಾರ್ಥಗಳಲ್ಲಿ ವ್ಯಾಪೃತ ರಾಗಿರುತ್ತಾರೆ. ಅವುಗಳ ಮೆಚ್ಚಿಕೆ, ವಿವರಣೆ, ಅಥವಾ ಗುಣದೋಷಪರಿಶೀಲನೆ ಇವುಗಳಿಗೆ ಕೈಹಾಕದ ತತ್ತ್ವಜಿಜ್ಞಾಸುಗಳೇ ಈಗಿನ ಭೂಮಂಡಲದಲ್ಲಿಲ್ಲವೆಂದು ಹೇಳಬಹುದಾದಷ್ಟು ಪ್ರಾಮುಖ್ಯವು ಆಚಾರ್ಯರ ಗ್ರಂಥಗಳಿಗೆ ಬಂದುಬಿಟ್ಟದೆ. ಆದರೆ ಇಲ್ಲಿ ಅತ್ಯಂತದೌರ್ಭಾಗ್ಯದ ಸ್ಥಿತಿಯೇನೆಂದರೆ, ಆಚಾರ್ಯರ ಗ್ರಂಥಗಳು ಯಾವವು ?–ಎಂಬುದನ್ನು ನಿಷ್ಕೃಷ್ಟವಾಗಿ ತಿಳಿಯುವದಕ್ಕೆ ಇರುವ ಅಡಚಣೆ. ಆಚಾರ್ಯರ ಹೆಸರಿನಲ್ಲಿ ನೂರಾರು ಗ್ರಂಥಗಳು ಪ್ರಚಾರದಲ್ಲಿರುತ್ತವೆ. ಆಚಾರ್ಯರು ಪ್ರತಿಷ್ಠೆಮಾಡಿರುವವುಗಳೆಂದು ಪ್ರಸಿದ್ಧವಾಗಿರುವ ಪೀಠಾಧಿಪತಿ ಗಳನ್ನೂ ಶಂಕರಾಚಾರ್ಯರೆಂದೇ ಕರೆಯುವದು ರೂಢಿಗೆ ಬಂದಿದೆ ; ಅಂಥ ಕೆಲವರು ಪೀಠಾಧಿಪತಿಗಳಿಗೆ ಶಂಕರಾಚಾರ್ಯರೆಂದೇ ಹೆಸರು ಇದ್ದದ್ದಾಗಿ ತಿಳಿಯು ಬಂದಿದೆ. ಆಚಾರ್ಯರ ಭಾಷ್ಯಗ್ರಂಥಗಳಲ್ಲಿ ಯಾವದೊಂದರಲ್ಲಿಯೂ ಮತ್ತೊಂ ದರ ಪರಾಮರ್ಶವು ಇಲ್ಲದಿರುವದರಿಂದ ಇಂಥದ್ದೊಂದು ಗ್ರಂಥವೆಂದು ಅವರೇ ಹೇಳಿಕೊಂಡಿದಾರೆಂಬ ಆಂತರಿಕಪ್ರಮಾಣವನ್ನು ಇಲ್ಲಿ ಉಪಯೋಗಿಸುವದಕ್ಕೆ ಬರುವಂತಿಲ್ಲ. ಗ್ರಂಥದ ಭಾಷೆಯ ಮತ್ತು ಶೈಲಿಯ ಅಂತರಂಗಪರೀಕ್ಷೆಯೊಂದು ಇಲ್ಲಿ ಸಾಧನವಾಗಿ ಉಳಿದುಕೊಂಡಿದೆ. ಅದು ಹೇಗೆಂದರೆ, ಆಚಾರ್ಯರು ಅತ್ಯಂತಪ್ರೌಢವಿಚಾರಗಳನ್ನು ಅತ್ಯಂತಸುಗಮವಾದ ಶೈಲಿಯಿಂದ ಬರೆಯುವ ಪದ್ಧತಿಯನ್ನಿಟ್ಟುಕೊಂಡಿರುತ್ತಾರೆ. ಆದ್ದರಿಂದ ನವೀನತರ್ಕಬದ್ಧವಾಗಿರುವ ಕಠಿನಶೈಲಿಯ ಗ್ರಂಥಗಳೂ ದೀರ್ಘಸಮಾಸಗಳನ್ನು ಅತ್ಯಂತ ಅಪ್ರಸಿದ್ಧಶಬ್ದಗಳ ನ್ನೂ ಪ್ರಚುರವಾಗಿ ಉಪಯೋಗಿಸುವ ಗ್ರಂಥಗಳೂ ಅವರ ಕೃತಿಯಲ್ಲವೆಂದು ನಿರ್ಣಯಿಸಬಹುದಾಗಿದೆ. ಆದರೆ ಬರಿಯ ಶೈಲಿಯ ಸಾಮ್ಯದಿಂದಲೇ ಗ್ರಂಥವು ಆಚಾರ್ಯಕರ್ತೃಕವೆಂದು, ಅಥವಾ ಅವರದ್ದಲ್ಲವೆಂದು, ತೀರ್ಮಾನಿಸುವದೂ

ಕಟ್ಟಕಡೆಯ ಮಾತೆಂಬು ಹೇಳುವದಕ್ಕೆ ಬರುವದಿಲ್ಲ. ಆದ್ದರಿಂದ ಯಾವದಾದ ರೊಂದು ಗ್ರಂಥವು ಆಚಾರ್ಯರದು ಎಂದು ಪ್ರಸಿದ್ಧವಾಗಿರುವಲ್ಲಿ ಅದರಲ್ಲಿರುವ ವಿಚಾರಕ್ರಮವೂ ಪ್ರತಿಪಾದ್ಯವಿಷಯವೂ ನಿರ್ವಿವಾದವಾಗಿ ಆಚಾರ್ಯರವೆಂದು ಪ್ರಸಿದ್ಧವಾಗಿರುವ ಗ್ರಂಥಗಳ ವಿಚಾರಕ್ರಮಕ್ಕೂ ಪ್ರತಿಪಾದ್ಯವಿಷಯಕ್ಕೂ ಅವಿರುದ್ಧವಾಗಿದ್ದು ಶೈಲಿಯ ಸಾಮ್ಯವೂ ನಿಸ್ಸಂಗ್ಧವಾಗಿದ್ದು, ಮತ್ತೆ ಯಾವ ಬಾಧಕಪ್ರಮಾಣವೂ ಇಲ್ಲದಿರುವಾಗ ಅದು ಅವರ ಕೃತಿಯೆಂದೇ ನಾವು ನಂಬ ಬಹುದೆಂಬ ನಿಯಮವನ್ನು ಇಟ್ಟುಕೊಳ್ಳಬಹುದು. ಈ ದೃಷ್ಟಿಯನ್ನವಲಂಬಿಸಿ ಇಲ್ಲಿ ನಮ್ಮ ಅಭಿಪ್ರಾಯವನ್ನು ಸಂಗ್ರಹವಾಗಿ ಪ್ರಕಟಿಸುವೆವು. ಇದರ ಸಾರಾ ಸಾರತೆಯನ್ನು ನಿರ್ಣಯಿಸುವ ಭಾರವು ಗುಣದೋಷಜ್ಞರಾದ ಪಂಡಿತರಮೇಲೆ ಇರುತ್ತದೆ.

## ಪ್ರಸ್ಥಾನತ್ರಯಭಾಷ್ಯಗಳು

೧೬೦. ಆಚಾರ್ಯರ ಹೆಸರಿನಲ್ಲಿರುವ ಗ್ರಂಥಗಳನ್ನು (೧) ಭಾಷ್ಯಗಳು, (೨) ಪ್ರಕರಣಗಳು, (೩) ಸ್ತೋತ್ರಗಳು– ಎಂದು ಮೂರು ಭಾಗಗಳಾಗಿ ವಿಂಗಡಿಸ ಬಹುದು: ಭಾಷ್ಯಗಳನ್ನು ಶ್ರುತಿಪ್ರಸ್ಥಾನ ಎಂದರೆ ಉಪನಿಷತ್ತುಗಳ ಅರ್ಥವನ್ನು ಪ್ರತಿಪಾದಿಸುವದಕ್ಕೆ ಹೊರಟಿರುವ ಭಾಷ್ಯಗಳು, ಸ್ಮೃತಿಪ್ರಸ್ಥಾನ ಎಂದರೆ ಗೀತಾ ಸ್ಮೃತಿಯ ಅರ್ಥವನ್ನು ಪ್ರತಿಪಾದಿಸುವ ಭಾಷ್ಯ, ಮತ್ತು ಸೂತ್ರಪ್ರಸ್ಥಾನ ಎಂದರೆ ಶ್ರುತಿಸ್ಮೃತಿಗಳ ತಾತ್ಪರ್ಯವನ್ನು ನ್ಯಾಯದಿಂದ ನಿರ್ಣಯಿಸಿರುವ ಬಾದರಾಯಣೀಯವೇದಾಂತಸೂತ್ರಗಳ ಅಭಿಪ್ರಾಯವನ್ನು ವಿವರಿಸುವ ಭಾಷ್ಯ –ಎಂದು ಮೂರು ಪಂಗಡಗಳಾಗಿ ವಿಂಗಡಿಸಬಹುದು. ಉಪನಿಷತ್ತುಗಳಿಗೆ ವೇದಾಂತಗಳೆಂಬ ಮತ್ತೊಂದು ಹೆಸರೂ ಪಂಡಿತರಲ್ಲಿ ಬಳಕೆಯಲ್ಲಿದೆ ; ವೇದಾಂತ ಸಿದ್ಧಾಂತಕ್ಕೆ ಉಪನಿಷತ್ತುಗಳೇ ಮುಖ್ಯವಾದ ಆಧಾರ. ಗೀತೆಯು ಭಗವಂತನಾದ ಶ್ರೀಕೃಷ್ಣನು ಹೇಳಿದ್ದೆಂದು ವ್ಯಾಸರು ಬರೆದಿರುವ ಗ್ರಂಥವಾದ್ದರಿಂದ ಅದು ಸ್ಮೃತಿಯು, ಶ್ರುತ್ಯರ್ಥವನ್ನು ನೆನಪಿನಲ್ಲಿಟ್ಟುಕೊಂಡು ಬರೆದ ಪೌರುಷೇಯ ಗ್ರಂಥವು. ಸ್ಮೃತಿಗಳಿಗೆ ಶ್ರುತಿಯೇ ಮೂಲಪ್ರಮಾಣವಾಗಿರುವದರಿಂದ ಪರಮ ಪ್ರಾಮಾಣ್ಯವು ಶ್ರುತಿಗಳಿಗೇ ಸೇರಿದ್ದಾಗಿದೆ. ಇನ್ನು ಸೂತ್ರಗಳು ಶ್ರುತ್ಯರ್ಥವನ್ನು ನಿರ್ಣಯಿಸುವದಕ್ಕೆಂದೇ ಬಾದರಾಯಣರು ಬರೆದವುಗಳಾದ್ದರಿಂದ ಅವೂ ಪೌರು ಷೇಯವೇ ಆಗಿರುತ್ತವೆ ; ಮೂಲಗ್ರಂಥಗಳಾದ ಉಪನಿಷತ್ತುಗಳನ್ನೂ ಭಗವದ್ಗೀತೆ ಯನ್ನೂ ಆಧಾರವಾಗಿ ಇಟ್ಟುಕೊಂಡೇ ಸೂತ್ರಗಳು ವಿಷಯವನ್ನು ವಿಚಾರ ಮಾಡುವದರಿಂದ ಅವೂ ವೇದಾಂತದರ್ಶನಕ್ಕೆ ಸ್ವತಂತ್ರಪ್ರಮಾಣವಲ್ಲ. ಹೀಗಿದ್ದರೂ ಯುಕ್ತಿಯಿಂದ ವೇದಾಂತಾರ್ಥವನ್ನು ಗೊತ್ತುಪಡಿಸುವದಕ್ಕೆ ಹೊರಟಿರುವದರಿಂದ

ತತ್ತ್ವಪರಿಶೀಲಕರ ದೃಷ್ಟಿಯಿಂದ ಸೂತ್ರಗಳಿಗೇ ಹೆಚ್ಚಿನ ಸ್ಥಾನವಿರುತ್ತದೆ; ಏಕೆಂದರೆ ಶ್ರುತಿಸ್ಮೃತಿಗಳ ತಾತ್ಪರ್ಯವನ್ನು ನಾವು ಸರಿಯಾಗಿ ತಿಳಿದುಕೊಂಡೆವೋ, ಇಲ್ಲವೋ ? –ಎಂಬುದನ್ನು ಸೂತ್ರಗಳ ಒರೆಗಲ್ಲಿಗೆ ತಿಕ್ಕಿಯೇ ನೋಡಬೇಕಾಗಿದೆ. ಆದ್ದರಿಂದ ಸೂತ್ರಭಾಷ್ಯ, ಉಪನಿಷದ್ಭಾಷ್ಯ, ಗೀತಾಭಾಷ್ಯ– ಈ ಕ್ರಮದಲ್ಲಿಯೇ ಆಚಾರ್ಯರ ಗ್ರಂಥಗಳನ್ನು ನಾವು ವಿಚಾರಕ್ಕೆ ತೆಗೆದುಕೊಳ್ಳುವೆವು.

## ಬ್ರಹ್ಮಸೂತ್ರಭಾಷ್ಯ

೧೬೧. ಆಚಾರ್ಯರು ಸೂತ್ರಭಾಷ್ಯಕ್ಕೇ ಎಲ್ಲಕ್ಕಿಂತಲೂ ಹೆಚ್ಚಿನ ಬೆಲೆಯನ್ನು ಕಟ್ಟಿದ್ದರೆಂದು ಶಂಕರವಿಜಯಗಳೆಲ್ಲವೂ ಸಾರುತ್ತವೆ. ವಿಶ್ವೇಶ್ವರನ ಪ್ರೇರಣೆಯಿಂದ (ಮಾ.ಶಂ. ೬–೪೮), ಅಥವಾ ಗೋವಿಂದಭಗವತ್ಪಾದರ ಪ್ರೇರಣೆಯಿಂದ (ಚಿ. ಶಂ. ೯–೫೦) ಆಚಾರ್ಯರು ಆ ಗ್ರಂಥವನ್ನು ಬರೆದರು. ಆಚಾರ್ಯರು ಆ ಗ್ರಂಥವನ್ನು ಬಾದರಾಯಣರು ಸೂತ್ರವನ್ನು ಬರೆದ ಬದರಿಯಲ್ಲಿಯೇ ಬರೆದರೆಂದೂ (ಬಲ. ಶಂ. ಪು. ೫೩) ಕೆಲವರ ಅಭಿಪ್ರಾಯ. ಬಾದರಾಯಣ, ವ್ಯಾಸ– ಇವೆರಡೂ ಒಬ್ಬ ವ್ಯಕ್ತಿಯ ಹೆಸರಾಗಲಾರದೆಂದು ಆಧುನಿಕ ವಿದ್ವಾಂಸರು ಕೆಲವರ ಮತವಿದೆ ; ಸೂತ್ರಭಾಷ್ಯದಲ್ಲಿ ಸೂತ್ರಕಾರರನ್ನು ಬಾದರಾಯಣರೆಂದೇ ಪರಾಮರ್ಶಿಸಿದೆ. ಭಾರತವನ್ನೂ ಗೀತೆಯನ್ನೂ ಬರೆದಿರುವವರನ್ನು ವ್ಯಾಸರೆಂದೇ ಕರೆದಿದೆ. ಆದ್ದರಿಂದ ಕೃಷ್ಣದ್ವೈಪಾಯನವ್ಯಾಸರಿಗಿಂತ ಬಾದರಾಯಣರು ಬೇರೆ ಎಂದು ಅವರ ಮತ. ಆಚಾರ್ಯರ ಗ್ರಂಥಗಳ ನಿರ್ಣಯಕ್ಕೆ ಇದೇನೂ ಮುಖ್ಯವಲ್ಲವಾದ್ದರಿಂದ ಈ ಪ್ರಶ್ನೆಯನ್ನು ಇಲ್ಲಿಗೇ ಬಿಡೋಣ. 'ಬ್ರಹಸೂತ್ರಪದೈಶ್ಚೈವ' (ಗೀ. ೧೩–೪) ಎಂಬ ಗೀತಾವಾಕ್ಯದಲ್ಲಿ ಬ್ರಹ್ಮಸೂತ್ರದ ಪರಾಮರ್ಶವಿದೆಯಾದ್ದರಿಂದ ಸೂತ್ರಗಳನ್ನು ಬಾದರಾಯಣರು ಮೊದಲೇ ಬರೆದಿರಬೇಕು ಎಂದು ಕೆಲವರು ಪ್ರಕಟಿಸಿರುವ ಅಭಿಪ್ರಾಯವು ಗೀತಾಭಾಷ್ಯವನ್ನು ಬರೆದ ಆಚಾರ್ಯರಿಗೆ ಒಪ್ಪಿಲ್ಲವೆಂಬುದು ಸ್ಪಷ್ಟವೇ ಆಗಿದೆ ; ಏಕೆಂದರೆ ಅಲ್ಲಿ ಬ್ರಹ್ಮಸೂತ್ರಗಳು ಎಂದರೆ 'ಆತ್ಮೇತ್ಯೇವೋಪಾಸೀತ' ಮುಂತಾದವುಗಳೆಂದು ಭಾಷ್ಯದಲ್ಲಿ ಬರೆದಿದೆ, ಸೂತ್ರಗಳನ್ನು ಪರಾಮರ್ಶಿಸಿಲ್ಲ. ಇದಲ್ಲದೆ ವೇದಾಂತಸೂತ್ರಗಳಿಗೆ ಬ್ರಹ್ಮಸೂತ್ರಗಳು ಎಂಬ ಹೆಸರನ್ನು ಆಚಾರ್ಯರಾಗಲಿ ಸುರೇಶ್ವರಾಚಾರ್ಯರಾಗಲಿ ಬಳಸಿರುವದಿಲ್ಲ. ಸೂತ್ರಭಾಷ್ಯವನ್ನು ಬರೆದಿರುವ ಶಂಕರಭಗವತ್ಪಾದರು "ಏವಮಯಮನಾದಿರನನ್ತೋ ನೈಸರ್ಗಿಕೋಽಧ್ಯಾಸೋ ಮಿಥ್ಯಾಪ್ರತ್ಯಯರೂಪಃ ಕರ್ತೃತ್ವಭೋಕ್ತೃತ್ವಪ್ರವರ್ತಕಃ ಸರ್ವಲೋಕಪ್ರತ್ಯಕ್ಷಃ । ಅಸ್ಯಾನರ್ಥಹೇತೋಃ ಪ್ರಹಾಣಾಯ ಆತ್ಮೈಕತ್ವವಿದ್ಯಾಪ್ರತಿಪತ್ತಯೇ ಸರ್ವೇ ವೇದಾನ್ತಾ ಆರಭ್ಯನ್ತೇ । ಯಥಾಚಾಯಮರ್ಥಃ ಸರ್ವೇಷಾಂ ವೇದಾನ್ತಾನಾಂ, ತಥಾ ವಯಮಸ್ಯಾಂ ಶಾರೀರಕ

ಮೀಮಾಂಸಾಯಾಂ ಪ್ರದರ್ಶಯಿಷ್ಯಾಮಃ ||" ಮಿಥ್ಯಾಪ್ರತ್ಯಯ ರೂಪವಾದ ಅಧ್ಯಾಸವು ಕರ್ತೃತ್ವಭೋಕ್ತೃತ್ವಕ್ಕೆ ಪ್ರವರ್ತಕವು; ಈ ಅನರ್ಥಹೇತುವನ್ನು ನಾಶಗೊಳಿಸಿ ಆತ್ಮೈಕತ್ವವಿದ್ಯೆಯನ್ನು ಪಡೆಯಿಸುವದಕ್ಕಾಗಿ ವೇದಾಂತಗಳೆಲ್ಲವೂ ಆರಂಭವಾಗಿರುತ್ತವೆ. ಇದು ಹೇಗೆಂಬುದನ್ನು ನಾವು ಈ ಶಾರೀರಕಮೀಮಾಂಸೆಯಲ್ಲಿ ತೋರಿಸಿಕೊಡುವೆವು ಎಂದು ಬರೆದಿರುತ್ತಾರೆ. ಬ್ರಹ್ಮಸೂತ್ರಗ್ರಂಥದ ಮೊದಲನೆಯಸೂತ್ರದಲ್ಲಿ ವೇದಾಂತಶಾಸ್ತ್ರವನ್ನು ವೇದಾಂತ ಮೀಮಾಂಸಾಶಾಸ್ತ್ರವೆಂದು ಕರೆದಿರುತ್ತಾರೆ. ಈ ವಾಕ್ಯದಲ್ಲಿ ಸೂತ್ರಗಳ ಒಟ್ಟು ತಾತ್ಪರ್ಯವನ್ನು ಹಿಂಡಿಟ್ಟಿರುತ್ತದೆ ಎನ್ನಬಹುದು. ಇಲ್ಲಿರುವ ಮುಖ್ಯಾಂಶಕ್ಕೆ ವಿರುದ್ಧವಾಗಿರುವ ಅಭಿಪ್ರಾಯವನ್ನು ಹೊರಡಿಸುವ ಗ್ರಂಥವು ಆಚಾರ್ಯರ ಗ್ರಂಥವಲ್ಲ ಎಂಬ ತತ್ತ್ವವನ್ನು ನಾವು ಇಲ್ಲಿ ಅವಲಂಬಿಸಿರುತ್ತೇವೆ.

## ಉಪನಿಷದ್ಭಾಷ್ಯಗಳು

೧೬೨. ಆಚಾರ್ಯರ ಹೆಸರಿನಲ್ಲಿರುವ ದಶೋಪನಿಷತ್ತುಗಳನ್ನು ಪಠನಪಾಠನಕ್ಕೆ ಎಲ್ಲರೂ ಉಪಯೋಗಿಸುತ್ತಿರುತ್ತಾರೆ. ಇವುಗಳ ಜೊತೆಗೆ ಶ್ವೇತಾಶ್ವತರ, ನೃಸಿಂಹತಾಪನಿಗಳೂ ಅವರ ಕೃತಿಯೇ ಎಂದು ಹಲವರ ನಂಬಿಕೆ (ಪು. ೧೦೦).

ಈ ಭಾಷ್ಯಗಳೆಲ್ಲ ಆಚಾರ್ಯರ, ಸೂತ್ರಭಾಷ್ಯವನ್ನು ಬರೆದಿರುವ ಆಚಾರ್ಯರ, ಕೃತಿಗಳೆ ?– ಎಂಬುದನ್ನು ವಿಚಾರಮಾಡುವದು ಒಳ್ಳೆಯದು. ಆದ್ದರಿಂದ ಇವುಗಳಲ್ಲಿ ಕೆಲವನ್ನು ಕುರಿತು ಒಂದೆರಡು ವಾಕ್ಯಗಳನ್ನು ಬರೆಯುವೆವು. ಈಶಾವಾಸ್ಯದ(ವಾಜಸನೇಯಶಾಖೆಯವರ ಸಂಹಿತೋಪನಿಷತ್ತಿನ)ಎಂಟನೆಯ ಮಂತ್ರದಲ್ಲಿ "ಶುದ್ಧಂ ನಿರ್ಮಲಮ್, ಅವಿದ್ಯಾಮಲರಹಿತಮ್ ಇತಿ ಕಾರಣಶರೀರಪ್ರತಿಷೇಧಃ" ಶುದ್ಧವೆಂದರೆ ಅವಿದ್ಯಾಮಲವಿಲ್ಲದ್ದು; ಇದರಿಂದ ಕಾರಣಶರೀರವನ್ನು ಅಲ್ಲಗಳೆದಿದೆ– ಎಂದು ಬರೆದಿದೆ. ಸೂತ್ರಭಾಷ್ಯದಲ್ಲಿಯಾಗಲಿ ಉಳಿದ ಉಪನಿಷತ್ತುಗಳಲ್ಲಾಗಲಿ 'ಅವಿದ್ಯೆ'ಯನ್ನು ಕಾರಣಶರೀರವೆಂದು ಕರೆದಿರುವದು ಎಲ್ಲಿಯೂ ಕಾಣಿಸುವದಿಲ್ಲ. ಹನ್ನೆರಡನೆಯ ಮಂತ್ರದ ಭಾಷ್ಯದಲ್ಲಿ 'ಅಸಂಭೂತಿಃ ಪ್ರಕೃತಿಃ ಕಾರಣಮ್ ಅವಿದ್ಯಾ ಅವ್ಯಾಕೃತಾಖ್ಯಾ' ಅಸಂಭೂತಿ ಎಂದರೆ ಪ್ರಕೃತಿಯು, ಕಾರಣವು ಅವ್ಯಾಕೃತವೆಂಬ ಹೆಸರಿನ ಅವಿದ್ಯೆ– ಎಂದು ಬರೆದಿದೆ. ಅವ್ಯಾಕೃತವನ್ನು ಕಾರಣಾವಿದ್ಯೆ ಎಂದು ಬರೆದಿರುವದು ಮತ್ತೆ ಯಾವ ಭಾಷ್ಯದಲ್ಲಿಯೂ ಕಾಣುವದಿಲ್ಲ. ಕಾರಣಶರೀರವನ್ನು ಅಂಗೀಕರಿಸುವದೂ ಅವ್ಯಾಕೃತವನ್ನು ಕಾರಣಾವಿದ್ಯೆ ಅಥವಾ ಮೂಲಾವಿದ್ಯೆ– ಎಂದು ಕರೆಯುವದೂ ವ್ಯಾಖ್ಯಾನಪ್ರಸ್ಥಾನಗಳಲ್ಲಿ ರೂಢಿಯಿದೆ. ಈ ವಿಷಯವನ್ನು ಮುಂದೆ ನಾವು ವಿಸ್ತಾರವಾಗಿ

ವಿಮರ್ಶೆಮಾಡಲಿರುವೆವು. ಪ್ರಕೃತಭಾಷ್ಯವಾಕ್ಯಗಳನ್ನು ಮಿಕ್ಕ ಭಾಷ್ಯಗಳ ಅಭಿಪ್ರಾಯಕ್ಕೆ ಹೊಂದುಗಡೆಯಾಗುವಂತೆ ಹೇಗೋ ಕಷ್ಟದಿಂದ ವ್ಯಾಖ್ಯಾನ ಮಾಡಬಹುದಾದರೂ ಮಿಕ್ಕ ಭಾಷ್ಯಗ್ರಂಥಗಳಲ್ಲಿ ಎಲ್ಲಿಯೂ ಇಲ್ಲದ ಈ ಬಗೆಯ ಪರಿಭಾಷೆಯನ್ನು ಇದೊಂದೇ ಗ್ರಂಥದಲ್ಲಿ ಏತಕ್ಕೆ ಅನುಸರಿಸಿದೆ ಎಂಬುದು ವಿಚಾರಣೀಯವಾಗಿದೆ.

ಕೇನೋಪನಿಷತ್ತಿಗೆ ವ್ಯಾಖ್ಯಾನಕಾರರು ಪದಭಾಷ್ಯ, ವಾಕ್ಯಭಾಷ್ಯ- ಎಂದು ಕರೆದಿರುವ ಎರಡು ಭಾಷ್ಯಗಳಿವೆ. ವಾಕ್ಯಭಾಷ್ಯದಲ್ಲಿ ಕೊಟ್ಟಿರುವ ಅವತರಣಿಕಾವಾಕ್ಯಗಳು ಪದಭಾಷ್ಯದ ವಾಕ್ಯಗಳಿಗಿಂತ ವಿಲಕ್ಷಣವಾಗಿವೆ. 'ಶ್ರೋತ್ರಸ್ಯ ಶ್ರೋತ್ರಮ್ ಇತ್ಯಾದಿ ಪ್ರತಿವಚನಂ ನಿರ್ವಿಶೇಷಸ್ಯ ನಿಮಿತ್ತತ್ವಾರ್ಥಮ್'', 'ಯದಿ ಮನ್ಯಸೇ ಸುವೇದೇತಿ ಶಿಷ್ಯಬುದ್ಧಿವಿಚಾಲನಾ ಗೃಹೀತಸ್ಥಿರತಾಯೈ' -ಈ ಬಗೆಯ ಅವತರಣಿಕಾವಾಕ್ಯಗಳು ಮಿಕ್ಕ ಭಾಷ್ಯಗಳಲ್ಲಿ ಕಾಣಬರುವದಿಲ್ಲ. ಪದಭಾಷ್ಯದಲ್ಲಿ ಒಪ್ಪಿರುವದಕ್ಕಿಂತ ಬೇರೆಯ ಉಪನಿಷತ್ಪಾಠವನ್ನು ವಾಕ್ಯಭಾಷ್ಯದಲ್ಲಿ ಹಿಡಿದಿದೆ. ಕೆಲವು ಸಂದರ್ಭಗಳಲ್ಲಿ ಈ ಎರಡು ಭಾಷ್ಯಗಳ ವಿಷಯಪ್ರತಿಪಾದನೆಯೂ ಪರಸ್ಪರವಿರುದ್ಧವಾಗಿದೆ. ಉದಾಹರಣೆ 'ಬ್ರಾಹ್ಮೀಂ ವಾವ ತ ಉಪನಿಷದಮಬ್ರೂಮೇತಿ' (ಕೇ. ೪-೭) ಎಂಬ ವಾಕ್ಯದ ಭಾಷ್ಯಗಳನ್ನು ನೋಡಿ. ಅಬ್ರೂಮ ಎಂದರೆ ಹೇಳಿದ್ದೇವೆ ಎಂದು ಪದಭಾಷ್ಯದಲ್ಲಿದೆ ; 'ಹೇಳುವೆವು' ಎಂದರ್ಥವೆಂದು ವಾಕ್ಯಭಾಷ್ಯ. ಇಂಥ ಅನೇಕ ಕಾರಣಗಳಿಂದ ಕೇನವಾಕ್ಯಭಾಷ್ಯವು ಆಚಾರ್ಯರದ್ದಾಗಿರಲಾರದೆಂಬುದಕ್ಕೆ ಎಡೆಯನ್ನು ಕೊಡುತ್ತದೆ.

ತೈತ್ತಿರೀಯಬೃಹದಾರಣ್ಯಕಗಳೆರಡೂ ಒಂದು ಅಸಾಧಾರಶೈಲಿಯನ್ನು ಅವಲಂಬಿಸಿರುತ್ತವೆ. 'ಗತ್ಯೈಶ್ವರ್ಯಾದಿಶ್ರುತಿವಿರೋಧ ಇತಿ ಚೇತ್ । ಅಥಾಪಿ ಸ್ಯಾತ್, ಯದ್ಯಪ್ರಾಪ್ಯೋ ಮೋಕ್ಷಃ ತದಾ ಗತಿಶ್ರುತೀನಾಂ ಚ ಕೋಪಃ ಸ್ಯಾತ್ ಇತಿ ಚೇತ್ ||' (ತೈ. ಶೀಕ್ಷಾ. ಉಪಸಂಹಾರ) ; ನಿರೋಧಸ್ತರ್ಹಿ ಅರ್ಥಾನ್ತರಮ್ ಇತಿ ಚೇತ್ । ಅಥಾಪಿ ಸ್ಯಾತ್ ಚಿತ್ತವೃತ್ತಿನಿರೋಧಸ್ಯ ವೇದವಾಕ್ಯಜನಿತಾತ್ಮವಿಜ್ಞಾನಾತ್ ಅರ್ಥಾನ್ತರತ್ವಾತ್, ತನ್ತ್ರಾನ್ತರೇಷು ಚ ಕರ್ತವ್ಯತಯಾ ಅವಗತತ್ವಾತ್ ವಿಧೇಯತ್ವಮ್ ಇತಿ ಚೇತ್ ||' (ಬೃ. ಭಾ. ೧-೪-೭). ಹೇಗೆ ಚೇತ್ ಎಂಬ ಅವ್ಯಯವನ್ನು ಕೊನೆಗಿಟ್ಟಿರುವ ಪೂರ್ವಪಕ್ಷದ ಸಂಗ್ರಹವಾಕ್ಯವನ್ನು ಮತ್ತೊಮ್ಮೆ ಚೇದಂತವಾದ ವಾಕ್ಯದಿಂದ ವಿವರಿಸುವದು ಈ ಎರಡು ಭಾಷ್ಯಗಳಲ್ಲಿ ಮಾತ್ರ[1] ಕಾಣಿಸುತ್ತಿದೆ ; ಮಿಕ್ಕ ಭಾಷ್ಯಗಳಲ್ಲಿ ಅದು ಎದ್ದುಕಾಣಿಸುವದಿಲ್ಲ.

1. ಗೀತಾಭಾಷ್ಯದಲ್ಲಿ ಇಂಥ ಒಂದು ಉದಾಹರಣೆಯು ನಮಗೆ ಸಿಕ್ಕಿದೆ. 'ಮೋಕ್ಷಾಯೈವ ಇತಿ ಚೇತ್। ಸ ಕರ್ಮಣಾಂ ಕೃತನಾಶಾತ್ ಈಶ್ವರೇ ನ್ಯಾಸೋ ಮೋಕ್ಷಾಯೈವ ನ ಫಲಾನ್ತರಾಯ ಯೋಗಸಹಿತಃ । ಯೋಗಾಚ್ಚ ವಿಭ್ರಷ್ಟಃ, ಇತ್ಯತಃ ತಂ ಪ್ರತಿ ಸಾಶಾಶಜ್ಕಾಯಯುಕ್ತ್ಯೈವ ಇತಿ ಚೇತ್' ॥ (ಗೀ. ಭಾ. ೬-೧).

ಬೃಹದಾರಣ್ಯಕಭಾಷ್ಯಕ್ಕೂ ಸೂತ್ರಭಾಷ್ಯಕ್ಕೂ ಇರುವ ಕೆಲವು ಅಭಿಪ್ರಾಯ ಭೇದಗಳನ್ನು ಹಿಂದೆಯೇ (ಪು. ೨೪-೨೫)ರಲ್ಲಿ ತಿಳಿಸಿರುತ್ತೇವೆ. ಈ ಎರಡು ವೈಲಕ್ಷಣ್ಯಗಳಲ್ಲದೆ ಮತ್ತೆ ಯಾವದಾದರೂ ಈ ಭಾಷ್ಯಗಳೆರಡರಲ್ಲಿಯೂ ಇದೆಯೆ? -ಎಂಬುದನ್ನು ವಿದ್ವಾಂಸರು ಪರಿಶೀಲಿಸತಕ್ಕದ್ದಿದೆ.

ಹೀಗೆಯೇ ಛಾಂದೋಗ್ಯೋಪನಿಷದ್ಭಾಷ್ಯಕ್ಕೂ ಸೂತ್ರಭಾಷ್ಯಕ್ಕೂ ಸಣ್ಣಪುಟ್ಟವಿಷಯಗಳಲ್ಲಿ ಮತಭೇದವು ಕಾಣಿಸುತ್ತಿದೆ. ಉದಾಹರಣೆಗೆ "ಯಸ್ತ್ವೇವಂ ಪ್ರಾದೇಶಮಾತ್ರಮ್" ( ಛಾಂ. ೫-೧೮-೧ ) ಎಂದಿರುವ ವೈಶ್ವಾನರವಿದ್ಯಾವಾಕ್ಯದಲ್ಲಿರುವ 'ಪ್ರಾದೇಶಮಾತ್ರಮ್' ಎಂಬ ವಿಶೇಷಣಕ್ಕೆ ಬರೆಯುವಾಗ 'ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ' (ವೇ. ಸೂ. ೧-೨-೩೧) ಎಂಬ ಸೂತ್ರದ ಭಾಷ್ಯದಲ್ಲಿ "ಇದೇ ಪ್ರಕರಣದಲ್ಲಿ ವಾಜಸನೇಯಿ ಬ್ರಾಹ್ಮಣದಲ್ಲಿ ದ್ಯುಲೋಕವೇ ಮುಂತಾಗಿ ಪೃಥಿವೀಪರ್ಯಂತವಾಗಿರುವ ವೈಶ್ವಾನರಾವಯವಗಳನ್ನು ಅಧ್ಯಾತ್ಮವಾಗಿ ಮೂರ್ಧಾದಿಯಾಗಿ ಚುಬುಕದವರೆಗಿನ ದೇಹಾವಯವಗಳಲ್ಲಿ ಸಂಪಾದನೆಮಾಡಿ ಪರಮೇಶ್ವರನಿಗೆ ಪ್ರಾದೇಶಮಾತ್ರ ಸಂಪತ್ತಿಯನ್ನು ತಿಳಿಸಿರುತ್ತದೆ' (ಸಮಾನಪ್ರಕರಣಂ ವಾಜಸನೇಯಿಬ್ರಾಹ್ಮಣಂ ದ್ಯುಪ್ರಭೃತೀನ್ ಪೃಥಿವೀಪರ್ಯನ್ತಾನ್ ತ್ರೈಲೋಕ್ಯಾತ್ಮನೋ ವೈಶ್ವಾನರಸ್ಯ ಅವಯವಾನ್ ಅಧ್ಯಾತ್ಮಮೂರ್ಧಪ್ರಭೃತಿಷು ಚುಬುಕಪರ್ಯನ್ತೇಷು ದೇಹಾವಯವೇಷು ಸಂಪಾದಯತ್ ಪ್ರಾದೇಶಮಾತ್ರಸಂಪತ್ತಿಂ ಪರಮೇಶ್ವರಸ್ಯ ದರ್ಶಯತಿ....) ಎಂದು ಬರೆದಿದೆ. ಆದರೆ ಅದೇ ಮಂತ್ರದ ಛಾಂದೋಗ್ಯಭಾಷ್ಯದಲ್ಲಿ 'ಶಾಖಾಂತರದಲ್ಲಾದರೋ ಮೂರ್ಧಾದಿಚುಬುಕಾಂತಪ್ರತಿಷ್ಠಿತನಾಗಿರುವದರಿಂದ ಪ್ರಾದೇಶಮಾತ್ರನೆಂದು ಕಲ್ಪಿಸಿರುತ್ತಾರೆ : ಆದರೆ ಇಲ್ಲಿ ಆ ಅಭಿಪ್ರಾಯವಿಲ್ಲ' (ಶಾಖಾನ್ತರೇ ಮೂರ್ಧಾದಿಶ್ಚಿಬುಕಪ್ರತಿಷ್ಠ ಇತಿ ಪ್ರಾದೇಶಮಾತ್ರಂ ಕಲ್ಪಯನ್ತಿ | ಇಹ ತು ನ ತಥಾಭಿಪ್ರೇತಃ) ಎಂದು ಬರೆದಿದೆ.

ಹೀಗೆ ಸಣ್ಣಸಣ್ಣ ಅಭಿಪ್ರಾಯಭೇದಗಳು ಕಾಣಿಸುತ್ತಿದ್ದರೂ ಸಿದ್ಧಾಂತದ ವಿಷಯಕ್ಕೆ ಪ್ರಸಿದ್ಧವಾದ ಹತ್ತು ಉಪನಿಷದ್ಭಾಷ್ಯಗಳಿಗೂ ಸೂತ್ರಭಾಷ್ಯಕ್ಕೂ ಯಾವ ಬಲವಾದ ವಿರೋಧವೂ ಕಾಣಿಸುತ್ತಿಲ್ಲ.[1]

ಆದರೆ ಶ್ವೇತಾಶ್ವತರ, ನೃಸಿಂಹತಾಪನೀಯ- ಈ ಉಪನಿಷತ್ತುಗಳ ವಿಷಯವು ಹೀಗಿಲ್ಲ. ಆ ಉಪನಿಷತ್ತುಗಳ ಭಾಷ್ಯರಚನೆಯ ಶೈಲಿಯೂ ಮತ್ತು

1. ಮಾಂಡೂಕ್ಯೋಪನಿಷದ್ಭಾಷ್ಯವೂ ಶಾಂಕರಮತಕ್ಕೆ ವಿರುದ್ಧವಾದ ಅಭಿಪ್ರಾಯಗಳನ್ನೊಳಗೊಂಡಿದೆಯೆಂದೂ ಅದರಲ್ಲಿ ಕೆಲವು ವ್ಯಾಕರಣವಿರುದ್ಧಪ್ರಯೋಗಗಳೂ ಇವೆಯೆಂದೂ ಕೆಲವರು ಅಭಿಪ್ರಾಯಪಟ್ಟಿರುತ್ತಾರೆ. ಇದು ಸರಿಯಲ್ಲವೆಂದು ನಮ್ಮ 'ಮಾಂಡೂಕ್ಯರಹಸ್ಯವಿವೃತಿಃ' ಎಂಬ ಗ್ರಂಥದಲ್ಲಿ ಆ ಉಪನಿಷದ್ಭಾಷ್ಯದಲ್ಲಿರುವ ಅಭಿಪ್ರಾಯಗಳು ಶಾಂಕರಮತಕ್ಕೆ ಭಿನ್ನವಲ್ಲವೆಂದು ನಾವು ತೋರಿಸಿಕೊಟ್ಟಿರುತ್ತೇವೆ.

ವ್ಯಾಖ್ಯಾನಕ್ರಮವೂ ಸೂತ್ರಭಾಷ್ಯಕ್ಕಿಂತಲೂ ದಶೋಪನಿಷದ್ಭಾಷ್ಯಗಳಿಗಿಂತಲೂ ಅತಿಭಿನ್ನವಾಗಿರುತ್ತವೆ. ಶ್ವೇತಾಶ್ವತರಭಾಷ್ಯದಲ್ಲಿರುವ ಅವತರಣಿಕೆಯು ಅನವಶ್ಯನಾಗಿ ವಿಸ್ತೃತವಾಗಿದೆ. ಇದರಲ್ಲಿ ವಿಷ್ಣುಪುರಾಣ, ಲಿಂಗಪುರಾಣ, ಯೋಗವಾಸಿಷ್ಠ, ಶಿವಧರ್ಮೋತ್ತರ, ವಿಷ್ಣುಧರ್ಮೋತ್ತರ, ವಾಯುಪುರಾಣಾದಿಗಳ ದೀರ್ಘದೀರ್ಘಭಾಗಗಳನ್ನು ಉದಾಹರಿಸಿದೆ. ಒಂದುಕಡೆ (೧-ನೆಯ ವ್ಯಾಖ್ಯಾನದಲ್ಲಿ) 'ಶುಕಶಿಷ್ಯೋ ಗೌಡಪಾದಾಚಾರ್ಯಃ' ಎಂದು ಗೌಡಪಾದಾಚಾರ್ಯರನ್ನು ಹೆಸರಿಟ್ಟು ಕರೆದಿದೆ. ಈ ಕ್ರಮಗಳು ಯಾವವೂ ಮಿಕ್ಕ ಭಾಷ್ಯಗಳಲ್ಲಿಲ್ಲ. ಇವೇ ಮುಂತಾದ ಕಾರಣಗಳಿಂದ ಇದು ಆಚಾರ್ಯರ ಭಾಷ್ಯವಲ್ಲವೆನ್ನಬೇಕಾಗಿದೆ.

ನೃಸಿಂಹತಾಪನೀಯಭಾಷ್ಯವೂ ಆಚಾರ್ಯರದ್ದಾಗಿರಲಾರದೆಂಬುದಕ್ಕೆ ಕಾರಣಗಳಿವೆ. ಅದರಲ್ಲಿ ತಾಂತ್ರಿಕವಿಚಾರಗಳೇ ಹೇರಳವಾಗಿ ಬರುತ್ತವೆ. 'ಪ್ರಪಂಚಸಾರ'ದಿಂದ ಕೆಲವು ಶ್ಲೋಕಗಳನ್ನು ಇಲ್ಲಿ ಉದಾಹರಿಸಿದೆ. ಇದು ಮಿಕ್ಕ ಭಾಷ್ಯಗಳಲ್ಲಿಲ್ಲವಾದ್ದರಿಂದ ಇದು ಆಚಾರ್ಯರ ಕೃತಿಯಾಗಿರಲಾರದೆಂದು ಹಲವರು ಅಭಿಪ್ರಾಯಪಡುತ್ತಾರೆ [1]

ಒಟ್ಟಿನಮೇಲೆ ಉಪನಿಷತ್ಪ್ರಸ್ಥಾನದ ಭಾಷ್ಯಗಳಿಗೂ ಸೂತ್ರಪ್ರಸ್ಥಾನದ ಭಾಷ್ಯಕ್ಕೂ ಪ್ರತಿಪಾದ್ಯವಿಷಯದಲ್ಲಿ ಅಷ್ಟೇನೂ ಭೇದವು ಕಾಣಿಸುವದಿಲ್ಲವೆನ್ನಬಹುದು.

## ಗೀತಾಭಾಷ್ಯ

೧೬೨. ಗೀತಾಭಾಷ್ಯದಲ್ಲಿಯೂ ಮಿಕ್ಕ ಭಾಷ್ಯಗಳಿಗಿಂತ ಶೈಲಿಯಲ್ಲಾಗಲಿ ವಿಷಯಪ್ರತಿಪಾದನೆಯಲ್ಲಾಗಲಿ ವೈಲಕ್ಷಣ್ಯವು ಕಾಣಿಸುತ್ತಿಲ್ಲ. ಜ್ಞಾನಕರ್ಮಸಮುಚ್ಚಯವಾದವನ್ನು ಖಂಡಿಸುವದು, ಕೇವಲ ಕರ್ಮವು ಅಭ್ಯುದಯಕ್ಕೆ ಕಾರಣವಾದರೂ ಫಲಾಕಾಂಕ್ಷೆಯಿಲ್ಲದೆ ಪರಮೇಶ್ವರಪ್ರೀತಿಗಾಗಿ ಅನುಷ್ಠಾನಮಾಡಿದರೆ ಚಿತ್ತಶುದ್ಧಿಯ ದ್ವಾರದಿಂದ ಅದ್ವೈತಾತ್ಮಜ್ಞಾನೋತ್ಪತ್ತಿ, ಜ್ಞಾನನಿಷ್ಠಾಯೋಗ್ಯತೆ- ಇವಕ್ಕೆ ಕಾರಣವಾಗಿರುತ್ತದೆ ಎಂದು ತೋರಿಸುವದು, ಸರ್ವ

---

1. ಈ ಕಾರಣದಿಂದಲೊ, ಅಥವಾ ತಮ್ಮ ಕಾಲದಲ್ಲಿ ಶ್ವೇತಾಶ್ವತರ ಭಾಷ್ಯವು ಶಂಕರಾಚಾರ್ಯರದ್ದೇ ಎಂದು ಪ್ರಸಿದ್ಧವಾಗಿದ್ದರಿಂದಲೊ, ಏನೊ, ಶ್ರೀರಾಮಾನುಜಾಚಾರ್ಯರು ಇಲ್ಲಿ ಉದಾಹರಿಸಿರುವ ಪುರಾಣವಾಕ್ಯಗಳ ಅರ್ಥವನ್ನು ವಿಮರ್ಶಿಸಿ ಅವೂ ಅದ್ವೈತಕ್ಕೆ ಅನುಗುಣವಾಗಿಲ್ಲವೆಂಬುದನ್ನು ತೋರಿಸಿಕೊಡುವದಕ್ಕೆ ಪ್ರಯತ್ನಿಸಿರುತ್ತಾರೆ ಅವರು ಸುಪ್ರಸಿದ್ಧವಾದ ಅಧ್ಯಾಸಭಾಷ್ಯವನ್ನು ಸಮಾಲೋಚನೆಗೆ ತೆಗೆದುಕೊಂಡೇ ಇಲ್ಲ ಇದೇಕೆಂಬುದನ್ನು ಪುರಾತತ್ತ್ವಶೋಧಕರು ವಿಚಾರಮಾಡಬೇಕಾಗಿದೆ; ಪ್ರಕೃತಕ್ಕೆ ಈ ವಿಚಾರವು ಅನವಶ್ಯವಾದ್ದರಿಂದ ನಾವು ಅದನ್ನು ಇಲ್ಲಿಗೇ ಕೈಬಿಟ್ಟಿರುತ್ತೇವೆ,

ಕರ್ಮಸಂನ್ಯಾಸಪೂರ್ವಕವಾದ ಜ್ಞಾನನಿಷ್ಠೆಯಿಂದ ಸಂಸಾರಾನರ್ಥನಿವಾರಣೆ– ಇವೇ ಪ್ರಸ್ಥಾನತ್ರಯಭಾಷ್ಯಗಳಲ್ಲಿ ಎಲ್ಲೆಲ್ಲಿಯೂ ಮುಖ್ಯವಾಗಿ ಪ್ರತಿಪಾದಿತ ವಾಗಿರುವ ಸಮಾನವಿಷಯಗಳು.

ಗೀತೆಯಲ್ಲಿ ಮಾತ್ರವೇ ಭಕ್ತಿ ಎಂಬ ಶಬ್ದವು ಕಾಣುತ್ತದೆ ಎಂಬುದೊಂದು ವಿಶೇಷವು. ಆರ್ತಾದಿರೂಪಭೇದದಿಂದ ಗೌಣಭಕ್ತಿಯೆಂದೂ ಜ್ಞಾನನಿಷ್ಠಾ ರೂಪದಿಂದ ಪರಭಕ್ತಿಯೆಂದೂ ಎರಡು ಬಗೆಯಾಗಿದೆ.... ಎಂದು ಭಾಷ್ಯಕಾರರು ಇಲ್ಲಿ ವರ್ಣಿಸಿರುತ್ತಾರೆ. ಮಿಕ್ಕೆರಡು ಪ್ರಸ್ಥಾನಗಳ ಭಾಷ್ಯಗಳಲ್ಲಿ ಈ ಶಬ್ದವು ಬರುವದಿಲ್ಲವೇಕೆ ? ಪರಭಕ್ತಿಯೆಂದರೆ ಜ್ಞಾನನಿಷ್ಠೆಯೆಂಡೇ ಏತಕ್ಕೆ ಕಲ್ಪಿಸ ಬೇಕು?–ಎಂಬೀ ಪ್ರಶ್ನೆಗಳನ್ನು ಆಚಾರ್ಯರು ಇಲ್ಲಿ ಏತಕ್ಕೆ ಚರ್ಚಿಸಿಲ್ಲವೆಂಬುದು ತಿಳಿಯುವಂತಿಲ್ಲ. ಹೇಗೇ ಆಗಲಿ, ಮಿಕ್ಕೆರಡು ಪ್ರಸ್ಥಾನಗಳಿಗೆ ವಿರುದ್ಧವಾಗಿ ಇಲ್ಲಿ ಏನನ್ನೂ ಪ್ರತಿಪಾದಿಸಿಲ್ಲ. ಅದಕ್ಕೆ ಬದಲು ಸೂತ್ರಕ್ಕೂ ಉಪನಿಷತ್ತಿಗೂ ಹೊಂದುಗಡೆಯಾಗಿಯೇ ಗೀತಾವಿವರಣೆಯನ್ನು ಮಾಡುವದಕ್ಕೇ ಪ್ರಯತ್ನಿಸಿರು ತ್ತದೆ. 'ಸರ್ವದ್ವಾರಾಣಿ ಸಂಯಮ್ಯ' (ಗೀ. ೮–೧೨), 'ಅಗ್ನಿರ್ಜ್ಯೋತಿಃ' (೮–೨೪)– ಇವುಗಳನ್ನು ವ್ಯಾಖ್ಯಾನಮಾಡುವಾಗ ಉಪನಿಷತ್ಪ್ರಸ್ಥಾನಕ್ಕೂ ಸೂತ್ರಪ್ರಸ್ಥಾನಕ್ಕೂ ಉಪಾಸನೆಯ ವಿಷಯದಲ್ಲಿ ಹೊಂದುಗಡೆಯಾಗುವಂತೆಯೇ ಗೀತೋಪದೇಶವನ್ನು ವಿವರಿಸುವದಕ್ಕೆ ಪ್ರಯತ್ನಿಸಿರುವದನ್ನು ಇಲ್ಲಿ ಉದಾಹರಣೆ ಯಾಗಿ ಕೊಡಬಹುದು. ಹದಿಮೂರನೆಯ ಅಧ್ಯಾಯದಲ್ಲಿ 'ಕ್ಷೇತ್ರಕ್ಷೇತ್ರಜ್ಞ ಸಂಯೋಗಾತ್' (೧೩–೨೬) ಎಂಬ ಶ್ಲೋಕದ ವ್ಯಾಖ್ಯಾನದಲ್ಲಿ ಕ್ಷೇತ್ರಕ್ಷೇತ್ರಜ್ಞ ಸಂಯೋಗವೆಂದರೆ ಅವೆರಡರ ಇತರೇತರತದ್ಧರ್ಮಾಧ್ಯಾಸವೇ ಎಂದು ಸೂತ್ರಭಾಷ್ಯದ ಉಪೋದ್ಘಾತದಂತೆ ಸಮಾನಶಬ್ದಗಳಿಂದಲೇ ವರ್ಣಿಸಿರುವದನ್ನು ಜ್ಞಾನದ ವಿಷಯಕ್ಕೆ ಏಕವಾಕ್ಯತಾಕಲ್ಪನೆಗೆ ಉದಾಹರಣೆಯಾಗಿ ಹೇಳಬಹುದು.[1]

## ಇತರ ಭಾಷ್ಯಗಳು

೧೬೩. ಕೌಷೀತಕಿ, ಮೈತ್ರಾಯಣೀಯ, ಕೈವಲ್ಯ, ಮಹಾನಾರಾ ಯಣ–ಈ ಉಪನಿಷತ್ತುಗಳಿಗೂ ಆಚಾರ್ಯರ ಹೆಸರಿನಲ್ಲಿ ಭಾಷ್ಯಗಳಿರುವದಾಗಿ ಕೇಳುತ್ತೇವೆ. ಆದರೆ ಅವು ಆಚಾರ್ಯಕೃತವೆಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ಐತರೇಯದ ಮೊದಲನೆ ಮೂರು ಅಧ್ಯಾಯಗಳ (ಏಷ ಪನ್ಥಾಃ ಎಂಬಲ್ಲಿಂದ ಮೊದಲಾಗಿರುವ ಭಾಗದ) ಭಾಷ್ಯವೊಂದು ಆಚಾರ್ಯಕೃತವೆಂದು ಒಬ್ಬರು ಈ ಗ್ರಂಥಕರ್ತರಿಗೆ ಕೊಟ್ಟಿರುತ್ತಾರೆ. ಅದು ಶೈಲಿಯಲ್ಲಿ ಶಾಂಕರಭಾಷ್ಯಗಳಂತೆಯೇ

1. ಆಚಾರ್ಯರ ಪ್ರಸ್ಥಾನತ್ರಯಭಾಷ್ಯಗಳನ್ನು ಮೂಲ, ಅನುವಾದ, ಟಿಪ್ಪಣಿ, ಶಬ್ದಾನುಕ್ರಮಣಿಕೆ, ಪೀಠಿಕೆ– ಮುಂತಾದ ಸೌಕರ್ಯಗಳೊಡನೆ ಅಧ್ಯಾತ್ಮಪ್ರಕಾಶ ಕಾರ್ಯಾಲಯದಲ್ಲಿ ಪ್ರಕಟಿಸಲಾಗಿದೆ. ಪ್ರಸ್ಥಾನತ್ರಯಭಾಷ್ಯಗಳ ಏಕವಾಕ್ಯತೆಯನ್ನು ವಿಮರ್ಶಿಸುವ ಕುತೂಹಲವುಳ್ಳವರು ಆ ಗ್ರಂಥಗಳನ್ನು ನೋಡಬೇಕು.

ಇದೆ. ಆದರೆ ನಿಜವಾಗಿ ಅದು ಆಚಾರ್ಯಕೃತವೆ ?-ಎಂಬುದನ್ನು ವಿದ್ವಾಂಸರು ಪರಿಶೀಲಿಸಬೇಕಾಗಿದೆ.

**ವಿಷ್ಣುಸಹಸ್ರನಾಮಭಾಷ್ಯ, ಸನತ್ಸುಜಾತೀಯಭಾಷ್ಯ**- ಇವೆರಡೂ ಶ್ವೇತಾಶ್ವತರಭಾಷ್ಯಕರ್ತರವೇ ಆಗಿರಬೇಕೆಂಬುದಕ್ಕೆ ಗ್ರಂಥಾರಂಭದಲ್ಲಿ ಬರೆದಿರುವ ಭಾಷ್ಯಭಾಗದ ಶೈಲಿಯೂ ಉದಾಹರಿಸಿರುವ ಪುರಾಣವಾಕ್ಯಾದಿಗಳೂ ಸಾಕಾದಷ್ಟು ಆಧಾರವಾಗಿವೆ. ಇವು ಎಂದಿಗೂ ಆಚಾರ್ಯಕೃತವಾಗಿರಲಾರವು ಎಂಬುದಕ್ಕೆ ಶ್ವೇತಾಶ್ವತರವಿಮರ್ಶೆಯಲ್ಲಿ ಹೇಳಿರುವ ಕಾರಣಗಳೇ ಇಲ್ಲಿಯೂ ಸಾಧಕವಾಗಿರುತ್ತವೆ. ಆದರೂ ಇವೆರಡೂ ಆಚಾರ್ಯಕೃತವೆಂದೇ ಅನೇಕರ ನಂಬಿಕೆಯಿದೆ ಎಂಬುದನ್ನು ನೆನಪಿನಲ್ಲಿಡಬೇಕು.

**ಹಸ್ತಾಮಲಕಸ್ತೋತ್ರಭಾಷ್ಯ, ಅಧ್ಯಾತ್ಮಪಟಲಭಾಷ್ಯ, ಸಂಧ್ಯಾಭಾಷ್ಯ, ಗಾಯತ್ರೀಭಾಷ್ಯ** -ಇವು ಆಚಾರ್ಯರವಾಗಿರಲಾರವೆಂಬುದನ್ನು ಹೇಳಬೇಕಾದದ್ದೇ ಇಲ್ಲ.

**ಲಲಿತಾತ್ರಿಶತೀಭಾಷ್ಯ :** ಇದು ಆಚಾರ್ಯರದ್ದೆಂಬುದಕ್ಕೆ ಸಂದೇಹವಿದೆ. ಮುಂದೆ ತಾಂತ್ರಿಕಗ್ರಂಥಗಳ ವಿಷಯವಾಗಿ ಬರೆಯುವಾಗ ಇದರ ವಿಷಯವನ್ನು ಮತ್ತೆ ಪ್ರಸ್ತಾಪಿಸುವೆವು.

ಕೆಲವು ಟೀಕೆಗಳನ್ನು ಆಚಾರ್ಯಕೃತವೆಂದು ಜನರು ಹೇಳಿಕೊಳ್ಳುವದುಂಟು. ಅವುಗಳ ಸ್ವರೂಪವನ್ನು ನೋಡಿದಮಾತ್ರದಿಂದಲೇ ಅವು ಎಂದಿಗೂ ಆಚಾರ್ಯಕೃತವಲ್ಲದವೆಂದು ಗೊತ್ತಾಗುವಂತಿರುವದರಿಂದ ನಾವು ಅವನ್ನು ಹೆಸರಿಸಿಲ್ಲ. ಚಿದ್ವಿಲಾಸರು ಹೇಳಿರುವ (ಪು. ೧೦೦) ಶ್ರೀರುದ್ರಭಾಷ್ಯವೂ ಈ ಗುಂಪಿಗೇ ಸೇರಿದ್ದು. ಅವರು ಉಲ್ಲೇಖಿಸಿರುವ ಸೌಂದರ್ಯಲಹರಿಯನು ತಂತ್ರಗ್ರಂಥಗಳ ವಿಚಾರವನ್ನು ಮಾಡುವಾಗ ಮತ್ತೆ ಪ್ರಸ್ತಾಪಿಸುವೆವು.

## ಸೂತಸಂಹಿತಾದಿಗ್ರಂಥಗಳನ್ನು ಆಚಾರ್ಯರು ನೋಡಿದ್ದರೆ ?

೧೬೪. ಆಚಾರ್ಯರು **ಸೂತಸಂಹಿತೆಯನ್ನು** ಹದಿನೆಂಟು ಸಲ ಪಠಿಸಿ ತಮ್ಮ ಭಾಷ್ಯವನ್ನು ಬರೆದರು- ಎಂಬರ್ಥವುಳ್ಳ ಶ್ಲೋಕವೊಂದು ಪ್ರಚಾರದಲ್ಲಿದೆ. ಸೂತಸಂಹಿತೆಯಲ್ಲಿ ಕರ್ಮ, ಉಪಾಸನೆ, ಜ್ಞಾನ- ಈ ಮೂರು ವಿಷಯಗಳನ್ನು ಕುರಿತ ವಿಸ್ತಾರವಾದ ವಸ್ತುಪ್ರತಿಪಾದನೆ ಇರುವದರಿಂದ ಈ ಗ್ರಂಥವು ಆಚಾರ್ಯರು ಪಠಿಸಿರುವದಕ್ಕೆ ತಕ್ಕಷ್ಟು ಉತ್ತಮವಾದದ್ದು ಎಂದು ಹೊಗಳುವದಕ್ಕೆ ಯಾರೋ ಈ ಶ್ಲೋಕವನ್ನು ರಚಿಸಿರಬೇಕೆಂದು ತೋರುತ್ತದೆ. ಹಾಗಿಲ್ಲದಿದ್ದರೆ ಅನೇಕರ ಹೆಸರುಗಳನ್ನು ಉಲ್ಲೇಖಿಸಿರುವ ಸೂತಸಂಹಿತಾವ್ಯಾಖ್ಯಾನಕಾರನಾದ ಮಾಧವಮಂತ್ರಿಯು ಆಚಾರ್ಯರೂ ಈ ಗ್ರಂಥದಿಂದ ಪ್ರಯೋಜನವನ್ನು ಪಡೆದ

ರೆಂದು ಉಲ್ಲೇಖಿಸದೆ ಎಂದಿಗೂ ಬಿಡುತ್ತಿರಲಿಲ್ಲ. ಹೀಗೆಯೇ ಸೂತಸಂಹಿತಾಭಾಷ್ಯವನ್ನೂ ವಿಷ್ಣುಭಾಗವತಭಾಷ್ಯವನ್ನೂ ಆಚಾರ್ಯರು ಬರೆದಿದ್ದಾರೆಂಬ ನಂಬಿಕೆಗಳೂ, ಹಾಗೆ ಬರೆದಿದ್ದರೆ ಚೆನ್ನಾಗಿತ್ತು, ಆ ಗ್ರಂಥಗಳು ಅವರ ಭಾಷ್ಯಕ್ಕೆ ಅರ್ಹವಾದವುಗಳು' ಎಂಬ ಭಕ್ತಿವಂತಜನರ ಅಭಿಲಾಷಾಸೂಚಕಗಳೆಂದು ಮಾತ್ರ ಹೇಳಬಹುದು. ಸೂತಸಂಹಿತೆ, ವಾಸಿಷ್ಠರಾಮಾಯಣ, ಅಧ್ಯಾತ್ಮರಾಮಾಯಣ, ವಿಷ್ಣುಭಾಗವತ-ಮುಂತಾದ ಕೆಲವು ಗ್ರಂಥಗಳಲ್ಲಿ ಅದ್ವೈತವು ತುಂಬಿತುಳುಕುತ್ತಿದ್ದರೂ ಆಚಾರ್ಯರು ಆ ಗ್ರಂಥಗಳಿಂದ ಒಂದು ವಾಕ್ಯವನ್ನೂ ತಮ್ಮ ಭಾಷ್ಯಗಳಲ್ಲಿ ಉದಾಹರಿಸದೆ ಇರುವದಕ್ಕೆ ಏನಾದರೂ ಒಂದು ಕಾರಣವಿರಬೇಕಲ್ಲವೆ ? ಇದರ ತತ್ತ್ವವನ್ನು ವಿಮರ್ಶಕರು ಸಮಾಲೋಚನೆಮಾಡಬೇಕಾಗಿದೆ.

ಆಚಾರ್ಯರು ಬ್ರಹ್ಮಸೂತ್ರದ ಸಮನ್ವಯಸೂತ್ರದ ಕೊನೆಯಲ್ಲಿ ಉದಾಹರಿಸಿರುವ 'ಗೌಣಮಿಥ್ಯಾತ್ಮನೋಽಸತ್ತ್ವೇ' ಮುಂತಾದ ಮೂರು ಶ್ಲೋಕಗಳು ಸುಂದರಪಾಂಡ್ಯನವು ಎಂದು ಸೂತಸಂಹಿತೆಯ ವ್ಯಾಖ್ಯಾಕಾರನು ತಿಳಿಸಿರುತ್ತಾನೆ. ಸುಂದರಪಾಂಡ್ಯನು ತಂತ್ರವಾರ್ತಿಕದಲ್ಲಿ ಪರಾಮೃಷ್ಟನಾಗಿರುವದರಿಂದ ಆತನೊಬ್ಬ ಆಚಾರ್ಯರ ಸಂಪ್ರದಾಯದ ವೇದಾಂತಿ ಎಂದು ಅನೇಕರು ಭಾವಿಸಿರುತ್ತಾರೆ( J.O.R. Vol: No. 1 pp 1. 15). ಆಚಾರ್ಯರ ಭಾಷ್ಯಕ್ಕೆ ಅತ್ಯಂತ ಪುರಾತನವ್ಯಾಖ್ಯಾನವೆಂದು ನಮಗೆ ಸಿಕ್ಕಿರುವ ಪಂಚಪಾದಿಕೆಯಲ್ಲಿ 'ಪ್ರಸಿದ್ಧಮೇತದ್‌ಬ್ರಹ್ಮವಿದಾಮಿತಿ ಪೂರ್ವೋಕ್ತಂನ್ಯಾಯಂ ಸಂಕ್ಷೇಪತಃಶ್ಲೋಕೈಃ ಸಂಗೃಹ್ಣಾತಿ' ಎಂದಿದೆ ; ಸುಂದರಪಾಂಡ್ಯನ ಪರಾಮರ್ಶವಿಲ್ಲ. ಈಚೆಗೆ ಭಾಷ್ಯಕ್ಕೆ ವ್ಯಾಖ್ಯಾನವನ್ನು ಬರೆದಿರೆದಿರುವ ವಾಚಸ್ಪತಿಮಿಶ್ರನ ಭಾಮತಿಯಲ್ಲಿಯೂ ಸುಂದರಪಾಂಡ್ಯನ ಹೆಸರನ್ನು ಹೇಳಿಲ್ಲ; 'ಬ್ರಹ್ಮವಿದಾಂ ಗಾಥಾಮ್ ಉದಾಹರತಿ' (ಬ್ರಹ್ಮಜ್ಞಾನಿಗಳ ಉಕ್ತಿಯನ್ನು ಉದಾಹರಿಸಿರುತ್ತಾನೆಂದಿಷ್ಟೇ ಇದೆ. ಆ ವ್ಯಾಖ್ಯಾನಕ್ಕೆ ಉಪವ್ಯಾಖ್ಯಾನವನ್ನು ಬರೆದಿರುವ ಕಲ್ಪತರುಕಾರರು ಸುಂದರಪಾಂಡ್ಯನ ಕೆಲವು ವಾಕ್ಯಗಳನ್ನು ಅಲ್ಲಲ್ಲಿ ಉದಾಹರಿಸಿರುತ್ತಾರೆ ; ಆದರೂ ಅವರು ಪ್ರಕೃತ ಶ್ಲೋಕಗಳನ್ನು ಸುಂದರಪಾಂಡ್ಯನವೆಂದು ಹೇಳಿಲ್ಲ. ಮತ್ತೆ ಯಾವ ಭಾಷ್ಯವ್ಯಾಖ್ಯಾನದಲ್ಲಿಯೂ ಈತನ ಹೆಸರಿಲ್ಲ. ಇದನ್ನು ನೋಡಿದರೆ ವ್ಯಾಖ್ಯಾನಕಾರರ ಕಾಲಕ್ಕೂ ಈ ಶ್ಲೋಕಗಳು ಯಾವವೆಂಬುದು ನಿಃಸಂದಿಗ್ಧವಾಗಿ ತಿಳಿದಿರಲಿಲ್ಲವೆಂದು ಊಹಿಸಿದರೆ ತಪ್ಪಾಗಲಾರದು. ಇದೂ ಅಲ್ಲದೆ ಆಚಾರ್ಯರು ತಮ್ಮ ಭಾಷ್ಯದಲ್ಲಿ ಯಾವ ಶೈವ ಗ್ರಂಥದಿಂದಲೂ ವಾಕ್ಯಗಳನ್ನು ಉದಾಹರಿಸಿರುವದು ಕಂಡುಬರುವದಿಲ್ಲ. ಆದ್ದರಿಂದ ಒಂದುವೇಳೆ ಸುಂದರಪಾಂಡ್ಯನ ಗ್ರಂಥದಲ್ಲಿ ಇರುವದಾಗಿ ತಿಳಿದರೂ ಅವು ಆತನವೇ ಆಗಿದ್ದವೋ ಅಥವಾ ಆತನು ಮತ್ತೊಬ್ಬರಿಂದ ತೆಗೆದುಕೊಂಡವು

ಗಳೋ ಎಂದು ನಿಷ್ಕೃಷ್ಟವಾಗಿ ಹೇಳುವದಕ್ಕೆ ಬರುವಂತಿಲ್ಲ. ಈ ಪರಿಸ್ಥಿತಿಯಲ್ಲಿ ಆಚಾರ್ಯರು ಸುಂದರಪಾಂಡ್ಯನ ಸಂಪ್ರದಾಯದವರೆಂದು ನಿರ್ಣಯಿಸುವದು ಎಂದಿಗೂ ಯುಕ್ತವಾಗಲಾರದು. ಆಚಾರ್ಯರ ಸಂಪ್ರದಾಯವು ಯಾವದು ಎಂಬುದನ್ನು ನಾವು ಮತ್ತೊಂದು ಅಧ್ಯಾಯದಲ್ಲಿ ವಿಚಾರಮಾಡಲಿರುವೆವು. ಆಗ ಇದನ್ನು ಪುನರಾಲೋಚನೆಮಾಡೋಣ. ಇದು ಹೇಗೇ ಇರಲಿ, ಸೂತ್ರಭಾಷ್ಯಕ್ಕೂ ಸೂತಸಂಹಿತೆಗೂ ಯಾವ ಸಂಬಂಧವೂ ಇಲ್ಲವೆಂಬುದನ್ನು ನಾವು ನಂಬುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ. ಸೂತಸಂಹಿತೆಯ ಬ್ರಹ್ಮಗೀತೆಯಲ್ಲಿ ಕೊಟ್ಟಿರುವ ಉಪನಿಷದ್ವ್ಯಾಖ್ಯಾನವು ಕೆಲವು ಕಡೆಗಳಲ್ಲಿ ಆಚಾರ್ಯಭಾಷ್ಯದಲ್ಲಿರುವದಕ್ಕಿಂತ ಭಿನ್ನವಾಗಿರುವದೂ ಈ ನಂಬಿಕೆಗೆ ಪುಷ್ಟಿಯನ್ನು ಕೊಡುತ್ತದೆ.

---

# ೧೯. ಆಚಾರ್ಯರ ಉಪದೇಶ

## ಆಚಾರ್ಯರ ಉಪದೇಶದ ನಿರ್ಣಯಕ್ಕೆ ಆಧಾರ

೧೬೫. ಆಚಾರ್ಯರ ಹೆಸರಿನಲ್ಲಿ ಪ್ರಚಾರದಲ್ಲಿರುವ ಎಲ್ಲಾ ಪ್ರಕರಣಗಳೂ ಸ್ತೋತ್ರಗಳೂ ಅವರ ಕೃತಿಗಳೆ, ಅಲ್ಲವೆ ? ಎಂಬಿದನ್ನು ನಿರ್ಣಯಿಸುವ ಮುಂಚೆ ಅವರ ಭಾಷ್ಯಗ್ರಂಥಗಳಿಂದ ಹೊರಡುವ ಉಪದೇಶದ ಸಾರವನ್ನು ನಿಷ್ಕರ್ಷಿಸುವದು ಅವಶ್ಯ. ಏಕೆಂದರೆ ಪ್ರಸ್ಥಾನತ್ರಯಭಾಷ್ಯಗಳಿಂದ ಸಿದ್ಧವಾಗುವ ಉಪದೇಶಕ್ಕೆ ವಿರುದ್ಧವೆಂದು ಕಂಡುಬರುವ ಉಪದೇಶಗಳನ್ನೊಳಗೊಂಡ ಯಾವ ಗ್ರಂಥವೂ ಅವರದಲ್ಲ-ಎಂಬ ನಿರ್ಣಯವು ಅದರ ಮೇಲಿಂದ ತೇಲುತ್ತದೆ. ಪ್ರಸ್ಥಾನ ತ್ರಯದ ಅಭಿಪ್ರಾಯವನ್ನು ಆದಮಟ್ಟಿಗೂ ಸಾಕ್ಷಾತ್ತಾಗಿ ಭಾಷ್ಯಗಳ ಆಧಾರ ದಿಂದಲೇ ಗೊತ್ತುಪಡಿಸುವದು ಯುಕ್ತವೆಂಬುದನ್ನು ಹೇಳಬೇಕಾದದ್ದೇ ಇಲ್ಲ. ನಮ್ಮ ಸೌಭಾಗ್ಯದಿಂದ ಭಾಷ್ಯಕಾರರು ಲಲಿತವಾದ ಶೈಲಿಯಿಂದ ತಮ್ಮ ಅಭಿ ಪ್ರಾಯವನ್ನು ಬೇರೆಬೇರೆಯ ಪ್ರಕ್ರಿಯೆಗಳಿಂದ ವಿವರಿಸಿ ಸ್ಪಷ್ಟಗೊಳಿಸಿರುವದರಿಂದ ಅವರ ಮತದ ನಿರ್ಣಯಕ್ಕೆ ವ್ಯಾಖ್ಯಾನಗಳ ಸಹಾಯವೇನೂ ಅಷ್ಟಾಗಿ ಬೇಕಿರು ವದಿಲ್ಲ; ಒಂದುವೇಳೆ ಆಚಾರ್ಯರು ತಮ್ಮ ಮತವನ್ನು ಅತಿಸಂಕ್ಷಿಪ್ತವಾಗಿ, ದುರ್ಗಮವಾದ ಶೈಲಿಯಿಂದ ತಿಳಿಸಿದ್ದರೂ ವ್ಯಾಖ್ಯಾನಗಳು ನಮಗೆ ಅಷ್ಟೇನೂ ಸಹಾಯಕವಾಗುತ್ತಿರಲಿಲ್ಲವೆಂಬುದನ್ನು ನಾವು ನೆನಪಿನಲ್ಲಿಡಬೇಕು. ಏಕೆಂದರೆ ಈ ವ್ಯಾಖ್ಯಾನಗಳು ಒಂದಕ್ಕೊಂದು ವಿರುದ್ಧವಾದ ಅರ್ಥಗಳನ್ನೇ ಆಚಾರ್ಯರ ಅಭಿ ಪ್ರಾಯವೆಂದು ವರ್ಣಿಸುತ್ತಿವೆ; ಮತ್ತು ಒಂದು ವ್ಯಾಖ್ಯಾನಪ್ರಸ್ಥಾನವು ಮತ್ತೊಂದು ಪ್ರಸ್ಥಾನವನ್ನು ಖಂಡಿಸುತ್ತಲೂ ಹೋಗಿದೆ. ಇದನ್ನು ಇಷ್ಟರಲ್ಲಿಯೇ ವಿಶದ ಗೊಳಿಸುವೆವು. ಈಗ ನಾವು ಇಲ್ಲಿ ಸಂಗ್ರಹಿಸಿರುವ ಆಚಾರ್ಯರ ಉಪ ದೇಶವು ಅವರ ಪ್ರಸ್ಥಾನತ್ರಯಭಾಷ್ಯಗಳ ಆಧಾರದಿಂದಲೆ ಬರೆದದ್ದಾಗಿದೆ ಎಂಬುದನ್ನು ವಾಚಕರು ನೆನಪಿನಲ್ಲಿಡಬೇಕು.

ಇನ್ನೊಂದು ಮಾತು. ಆಧುನಿಕರೀತಿಯಿಂದ ವಿದ್ಯಾಭ್ಯಾಸವನ್ನು ಮಾಡಿ ರುವ ವಿಮರ್ಶಕರೂ ಆಚಾರ್ಯರ ಅಭಿಪ್ರಾಯವನ್ನು ತಿಳಿಸಿಕೊಡುವದಕ್ಕೆ ಇಂಗ್ಲಿಷಿನಲ್ಲಿ ಅಥವಾ ಬೇರೆಯ ಭಾಷೆಗಳಲ್ಲಿ ಬರೆದಿರುವ ಕೆಲವು ಗ್ರಂಥಗಳಲ್ಲಿ ಆಚಾರ್ಯರ ಭಾಷ್ಯಗಳು, ಪ್ರಕರಣಗಳು, ಮತ್ತು ಭಾಷ್ಯವ್ಯಾಖ್ಯಾನಗಳು- ಇವೆಲ್ಲ ಒಂದೇ ತಾತ್ಪರ್ಯವುಳ್ಳವೆಂಬ ಮತವನ್ನು ಅವಲಂಬಿಸಿಯೇ ವಿಷಯ ಸಮಾಲೋಚನೆಯನ್ನು ಮಾಡಿರುವದು ಕಂಡುಬರುತ್ತದೆ. ಮತ್ತೆ ಕೆಲವು ಇಂಥ ಗ್ರಂಥಗಳಲ್ಲಿ ಬರ್ಕ್ಲಿ, ಕ್ಯಾಂಟ್- ಮುಂತಾದ ಪಾಶ್ಚಾತ್ಯತತ್ತ್ವಶಾಸ್ತ್ರಜ್ಞರ ಅಭಿಪ್ರಾಯಗಳನ್ನೂ ವೇದಾಂತಕ್ಕೆ ಗಂಟುಹಾಕುವ ಪ್ರಯತ್ನವನ್ನು ಮಾಡಿರ್ರು ತ್ತದೆ. ಆದ್ದರಿಂದ ನಾವು ಈಗ ಕೊಡುವ ಆಚಾರ್ಯರ ಸಿದ್ಧಾಂತಸಾಧನಗಳ

ಉಪದೇಶಸಂಗ್ರಹವು ಅಂಥ ಗ್ರಂಥಗಳಲ್ಲಿರುವ ಪ್ರತಿಪಾದನೆಗೆ ಎಲ್ಲಿಯಾದರೂ ಭಿನ್ನವಾಗಿ ಅಥವಾ ವಿರುದ್ಧವಾಗಿ ಕಂಡುಬಂದರೆ, ನಾವು ಕೇವಲ ಶಾಂಕರಭಾಷ್ಯಗಳನ್ನೇ ಅನುಸರಿಸಿರುವದೂ[1] ಮಿಕ್ಕವರು ಶಂಕರಾಚಾರ್ಯರವೆಂದು ನಿರ್ಣಯ ಮಾಡದೆ ಅವರ ಹೆಸರಿನಲ್ಲಿರುವ ಗ್ರಂಥಗಳೆಲ್ಲವನ್ನೂ ಸಮಾನಪ್ರಮಾಣವಾಗಿ ಹಿಡಿದಿರುವದೂ ಕಾರಣವೆಂದು ವಾಚಕರು ತಿಳಿಯಬೇಕು.

## ಶಾಂಕರಸಿದ್ಧಾಂತದ ರೂಪರೇಖೆ

೧೬೧. ಆಚಾರ್ಯರ ಸಿದ್ಧಾಂತದಲ್ಲಿ ಮುಖ್ಯವಾದ ಅಂಶಗಳನ್ನು ಇಲ್ಲಿ ಸಂಗ್ರಹಿಸಿ ತಿಳಿಸುವೆವು :–

(೧) ನಮ್ಮೆಲ್ಲರ ಪರಮಾರ್ಥಸ್ವರೂಪವಾಗಿ ಒಬ್ಬನೇ ಆತ್ಮನಿರುತ್ತಾನೆ. ಆ ಆತ್ಮನು ಸ್ವಯಂಸಿದ್ಧನು. ಅವನನ್ನು ಯಾವ ಪ್ರಮಾಣದಿಂದಲೂ ಸಾಧಿಸಬೇಕಾದ ಆವಶ್ಯಕತೆಯಿರುವದಿಲ್ಲ. ಅವನು ಇಲ್ಲವೆಂದು ಅಲ್ಲಗಳೆಯುವದೂ ಸಾಧ್ಯವಲ್ಲ; ಏಕೆಂದರೆ ಪ್ರಮಾಣಗಳಿಂದ ಸಿದ್ಧಮಾಡುವವನ, ಅಥವಾ ಅವನು ಇಲ್ಲವೆಂದು ನಿರಾಕರಿಸುವದಕ್ಕೆ ಹೋಗುವವನ, ಪರಮಾರ್ಥಸ್ವರೂಪವೇ ಆತ್ಮನು.

[ನ ಹಿ ಆತ್ಮಾ ಆಗನ್ತುಕಃ ಕಸ್ಯಚಿತ್ । ಸ್ವಯಂಸಿದ್ಧತ್ವಾತ್ । ನ ಹ್ಯಾತ್ಮಾ ಆತ್ಮನಃ ಪ್ರಮಾಣಮಪೇಕ್ಷ್ಯ ಸಿಧ್ಯತಿ । ತಸ್ಯ ಹಿ ಪ್ರತ್ಯಕ್ಷಾದೀನಿ ಪ್ರಮಾಣಾನ್ಯಪ್ರಸಿದ್ಧಪ್ರಮೇಯಸಿದ್ಧಯ ಉಪಾದೀಯನ್ತೇ ।....ನ ಚೇದೃಶಸ್ಯ ನಿರಾಕರಣಂ ಸಂಭವತಿ । ಆಗನ್ತುಕಂ ಹಿ ವಸ್ತು ನಿರಾಕ್ರಿಯತೇ ನ ಸ್ವರೂಪಮ್ । ಯ ಏವ ಹಿ ನಿರಾಕರ್ತಾ ತದೇವ ತಸ್ಯ ಸ್ವರೂಪಮ್ ॥ ಸೂ. ಭಾ. ೨–೩–೭]

(೨) ಈ ಆತ್ಮನು ಸತ್ಯಸ್ವರೂಪನು, ಏಕೆಂದರೆ ತನ್ನ ಸ್ವರೂಪವನ್ನು ಎಂದಿಗೂ ಮಾರ್ಪಡಿಸುವವನಲ್ಲ. ಮಿಕ್ಕದ್ದೆಲ್ಲವೂ ಯಾವದೊಂದು ನಿಶ್ಚಿತವಾದ ಸ್ವರೂಪವಿಲ್ಲದೆ ಇರುವದರಿಂದ ಅನೃತ, ಮಿಥ್ಯೆ.

[ಯದ್ರೂಪೇಣ ಯನ್ನಿಶ್ಚಿತಂ ತದ್ರೂಪಂ ನ ವ್ಯಭಿಚರತಿ ತತ್ ಸತ್ಯಮ್ । ಯದ್ರೂಪೇಣ ಯನ್ನಿಶ್ಚಿತಂ ತದ್ರೂಪಂ ವ್ಯಭಿಚರತ್ ಅನೃತಮಿತ್ಯುಚ್ಯತೇ । ಅತೋ ವಿಕಾರೋಽನೃತಮ್॥ ತೈ. ೨–೧]

ಇವನು ಜ್ಞಾನಸ್ವರೂಪನು. ಇಲ್ಲಿ ಜ್ಞಾನವೆಂದರೆ ಘಟಾದಿಪದಾರ್ಥಗಳ ವಿಷಯದಲ್ಲಿ ಹುಟ್ಟಿ ಹೋಗುತ್ತಿರುವ ಅರಿವಲ್ಲ; ನಾವುಗಳು ಘಟಜ್ಞಾನವು

1. ಶ್ರೀಶಂಕರಭಗವತ್ಪಾದರವರ ಸರ್ವಸಂಮತೋಪದೇಶಗಳು, ಶಾಂಕರವೇದಾಂತ ಪ್ರಕ್ರಿಯೆ, ಪರಿಶುದ್ಧವೇದಾಂತಸಾರ, ಅನುಭವಪರ್ಯಂತವಾದ ಆತ್ಮವಿಚಾರ, ಶಂಕರವೇದಾಂತಸಾರ, ಶಂಕರನುಕ್ರಮಣಿಕ-ಈ ಗ್ರಂಥಗಳಲ್ಲಿ ಆಚಾರ್ಯರ ಪ್ರಕ್ರಿಯೆಯನ್ನು ಸಪ್ರಮಾಣವಾಗಿ ವಿವರಿಸಿದೆ.

ಉಂಟಾಯಿತು, ಹೋಯಿತು-ಎನ್ನುತ್ತಿರುವದು ಅಂತಃಕರಣದ ಒಂದು ವೃತ್ತಿ, ವಿಷಯದ ರೂಪವನ್ನು ಪಡೆಯುತ್ತಿರುವ ಅಂತಃಕರಣದ ಪರಿಣಾಮ. ಸೂರ್ಯನ ಬೆಳಕು ಅವನ ಸ್ವರೂಪವೇ ಆಗಿರುವಂತೆ ಆತ್ಮನ ಜ್ಞಾನವು ಅವರ ಸ್ವರೂಪವೇ ಆಗಿರುತ್ತದೆ; ಆತ್ಮಜ್ಞಾನಕ್ಕೆ ವಿಷಯವಾಗಿಯೇ ಅದರಿಂದ ವ್ಯಾಪ್ತವಾಗಿಯೇ ವೃತ್ತಿಗಳು ಹುಟ್ಟಿಹೋಗುತ್ತಿರುವದರಿಂದ, ಬಿಸಿಲಿಗೆ ಹೊಳೆಯುವ ತವರದ ತಗಡಿನಂತೆ, ಅವೂ ಜ್ಞಾನದಂತೆ ಹೊಳೆಯುತ್ತಿರುವವು; ಆದ್ದರಿಂದ ಅವನ್ನೇ ಜನರು ಭ್ರಾಂತಿಯಿಂದ ಆತ್ಮನ ಜ್ಞಾನವೆಂದು ವ್ಯವಹರಿಸುತ್ತಿರುವರು. ನಿಜವಾದ ಜ್ಞಾನವು ಚಿದ್ರೂಪನಾದ ಆತ್ಮನ ಸ್ವರೂಪವೇ.

[ಆತ್ಮನಃ ಸ್ವರೂಪಂ ಜ್ಞಪ್ತಿಃ, ನ ತತೋ ವ್ಯತಿರಿಚ್ಯತೇ। ಅತೋ ನಿತ್ಯೈವ । ತಥಾಪಿ ಬುದ್ಧೇರುಪಾಧಿಲಕ್ಷಣಾಯಾಃ, ಚಕ್ಷುರಾದಿ ದ್ವಾರೈರ್ವಿಷಯಾಕಾರೇಣ ಪರಿಣಾಮಿನ್ಯಾ ಯೇ ಶಬ್ದಾದ್ಯಾಕಾರಾವಭಾಸಾಃ, ತೇ ಆತ್ಮವಿಜ್ಞಾನಸ್ಯ ವಿಷಯಭೂತಾ ಉತ್ಪದ್ಯಮಾನಾ ಏವ ಆತ್ಮವಿಜ್ಞಾನೇನ ವ್ಯಾಪ್ತಾ ಉತ್ಪದ್ಯನ್ತೇ। ತಸ್ಮಾದಾತ್ಮವಿಜ್ಞಾನಾವಭಾಸಾಶ್ಚ ತೇ ವಿಜ್ಞಾನಶಬ್ದವಾಚ್ಯಾಶ್ಚ ಧಾತ್ವರ್ಥಭೂತಾ ಆತ್ಮನ ಏವ ಧರ್ಮಾ ವಿಕ್ರಿಯಾರೂಪಾ ಇತ್ಯವಿವೇಕಿಭಿಃ ಪರಿಕಲ್ಪ್ಯನ್ತೇ ॥ ತೈ. ಭಾ, ೨-೧]

(೩) ಹೀಗೆ ಸತ್ಯವಾಗಿರುವ ಚಿದ್ರೂಪನಾಗಿರುವ ಆತ್ಮನನ್ನೂ ಆ ಜ್ಞಾನಕ್ಕೆ ವಿಷಯವಾಗಿ ಅನೃತವಾಗಿರುವ ಅನಾತ್ಮವನ್ನೂ ಒಂದರಲ್ಲೊಂದನ್ನು ಕಲೆಬೆರಕೆ ಮಾಡಿಕೊಂಡು ಅವುಗಳಲ್ಲೊಂದರ ಧರ್ಮವನ್ನು ಇನ್ನೊಂದರ ಧರ್ಮವೆಂದು ಬಗೆಯುತ್ತಾ ಜನರು ಅವುಗಳನ್ನು ವಿಂಗಡಿಸಿಕೊಳ್ಳಲರಿಯದೆ ಅವಿಚಾರ ಸ್ವಭಾವದಿಂದ ಅನೃತವಾದ ದೇಹೇಂದ್ರಿಯಾದಿಗಳೇ ತಾವೆಂದೂ ದೇಹಕ್ಕಿಂತ ಹೊರಗಿರುವ ಪುತ್ರವಿತ್ತಾದಿಗಳು ತಮ್ಮವೆಂದೂ ವ್ಯವಹರಿಸುತ್ತಿರುವರು.

[ಅನ್ಯೋನ್ಯಸ್ಮಿನ್ನನ್ಯೋನ್ಯಾತ್ಮಕತಾಮ್, ಅನ್ಯೋನ್ಯಧರ್ಮಾಂಶ್ಚ ಅಧ್ಯಸ್ಯ ಇತರೇತರಾವಿವೇಕೇನ, ಅತ್ಯನ್ತವಿವಿಕ್ತಯೋರ್ಧರ್ಮಧರ್ಮಿಣೋರ್ಮಿಥ್ಯಾಜ್ಞಾನನಿಮಿತ್ತಃ ಸತ್ಯಾನೃತೇ ಮಿಥುನೀಕೃತ್ಯ 'ಅಹಮಿದಮ್, ಮಮೇದಮ್' ಇತಿ ನೈಸರ್ಗಿಕೋಽಯಂ ಲೋಕವ್ಯವಹಾರಃ ॥ ಸೂ. ಭಾ. ಅಧ್ಯಾಸವಿವರಣ ; ಗೀ. ಭಾ. ೧೩-೨೬]

ಆತ್ಮಾನಾತ್ಮಗಳನ್ನು ಹೀಗೆ ಕಲೆಬೆರಕೆಮಾಡಿಕೊಂಡಿರುವ ಅಧ್ಯಾಸಕ್ಕೆ ಅವಿದ್ಯೆ ಎಂದು ಹೆಸರು ; ಅದನ್ನಾಶ್ರಯಿಸಿಯೇ ಎಲ್ಲಾ ಲೌಕಿಕವೈದಿಕವ್ಯವಹಾರಗಳೂ ವಿಧಿಪ್ರತಿಷೇಧಮೋಕ್ಷಶಾಸ್ತ್ರಗಳೂ ಹೊರಟಿರುವವು.

[ತಮೇತಮವಿದ್ಯಾಖ್ಯಮಾತ್ಮಾನಾತ್ಮನೋಃ ಇತರೇತರಾಧ್ಯಾಸಂ ಪುರಸ್ಕೃತ್ಯ ಸರ್ವೇ ಪ್ರಮಾಣಪ್ರಮೇಯವ್ಯವಹಾರಾ ಲೌಕಿಕಾ ವೈದಿಕಾಶ್ಚ ಪ್ರವೃತ್ತಾಃ, ಸರ್ವಾಣಿ ಚ ಶಾಸ್ತ್ರಾಣಿ ವಿಧಿಪ್ರತಿಷೇಧ ಮೋಕ್ಷಪರಾಣಿ ॥ ಅಧ್ಯಾಸಭಾಷ್ಯ.]

(೪) ಈ ಅಧ್ಯಾಸವೆಂಬ ತಪ್ಪುತಿಳಿವಳಿಕೆಯು ಜನರಲ್ಲಿ ಅನಾದಿಯಾಗಿ ಅನಂತವಾಗಿದ್ದುಕೊಂಡು ಕರ್ತೃತ್ವಭೋಕ್ತೃತ್ವವನ್ನುಂಟುಮಾಡುತ್ತಾ ಇರುವದು ಸರ್ವಜನರ ಅನುಭವದಲ್ಲಿಯೂ ಇದೆ.

[ಏವಮಯಮನಾದಿರನಂತೋ ನೈಸರ್ಗಿಕೋಽಧ್ಯಾಸೋ ಮಿಥ್ಯಾ ಪ್ರತ್ಯಯರೂಪಃ ಕರ್ತೃಭೋಕ್ತೃತ್ವಪ್ರವರ್ತಕಃ ಸರ್ವಲೋಕ ಪ್ರತ್ಯಕ್ಷಃ ॥ ಅಧ್ಯಾಸಭಾಷ್ಯ.]

(೫) ಈ ಅಧ್ಯಾಸರೂಪವಾದ ಅವಿದ್ಯೆಯಿಂದಲೇ ಆತ್ಮನಲ್ಲಿ ಪ್ರಮಾತೃತ್ವವು ಸ್ವಾಭಾವಿಕವಾಗಿರುವಂತೆ ತೋರುತ್ತದೆ. ಹೇಗೆಂದರೆ ದೇಹವನ್ನು ತಾನೆಂದೂ ಇಂದ್ರಿಯಾದಿಗಳನ್ನು ತನ್ನವೆಂದೂ ತಿಳಿದುಕೊಂಡಲ್ಲದೆ ತಾನು ಪ್ರಮಾತೃ (ಅರಿಯುವವನು) ಎಂದಿಟ್ಟುಕೊಳ್ಳುವನಕ್ಕೆ ಆಗುವಂತಿಲ್ಲ; ಹಾಗೆಂದು ಭಾವಿಸಿಕೊಂಡಹೊರತು ಯಾವನೂ ಪ್ರಮಾಣಗಳಿಂದ ಪ್ರಮೇಯಗಳನ್ನು ಅರಿತುಕೊಂಡು ಅವುಗಳ ಪ್ರಾಪ್ತಿಪರಿಹಾರಕ್ಕಾಗಿ ಪ್ರಯತ್ನಿಸಲಾರನು. ಆದ್ದರಿಂದ ಕರ್ತೃತ್ವಭೋಕ್ತೃತ್ವರೂಪವಾದ ಸಂಸಾರದ ಅನರ್ಥಕ್ಕೆ ಈ ಅವಿದ್ಯೆಯೇ ಕಾರಣವೆಂದು ಗೊತ್ತಾಗುತ್ತದೆ.

[ನ ಹಿ ಇನ್ದ್ರಿಯಾಣಿ ಅನುಪಾದಾಯ ಪ್ರತ್ಯಕ್ಷಾದಿವ್ಯವಹಾರಃ ಸಂಭವತಿ । ನ ಚ ಅಧಿಷ್ಠಾನಮನ್ತರೇಣ ಇನ್ದ್ರಿಯಾಣಾಂ ವ್ಯವಹಾರಃ ಸಂಭವತಿ । ನ ಚ ಅನಧ್ಯಸ್ತಾತ್ಮಭಾವೇನ ದೇಹೇನ ಕಶ್ಚಿದ್ ವ್ಯಾಪ್ರಿಯತೇ । ನ ಚ ಏತಸ್ಮಿನ್ ಸರ್ವಸ್ಮಿನ್ ಅಸತಿ ಅಸಙ್ಗಸ್ಯಾತ್ಮನಃ ಪ್ರಮಾತೃತ್ವಮುಪಪದ್ಯತೇ ॥ ನ ಚ ಪ್ರಮಾತೃತ್ವಮನ್ತರೇಣ ಪ್ರಮಾಣಪ್ರವೃತ್ತಿರಸ್ತಿ ॥ ತಸ್ಮಾದವಿದ್ಯಾವದ್ವಿಷಯಾಣ್ಯೇವ ಪ್ರತ್ಯಕ್ಷಾದೀನಿ ಪ್ರಮಾಣಾನಿ ಶಾಸ್ತ್ರಾಣಿ ಚ ॥ ....ಅಸ್ಯಾನರ್ಥಹೇತೋಃ ಪ್ರಹಾಣಾಯ ಆತ್ಮೈಕತ್ವವಿದ್ಯಾಪ್ರತಿಪತ್ತಯೇ ಸರ್ವೇ ವೇದಾನ್ತಾ ಆರಭ್ಯನ್ತೇ ॥ ಅ. ಭಾ.]

(೬) ಮೇಲೆ ಹೇಳಿರುವಂತೆ ಅವಿದ್ಯಾವಸ್ಥೆಯಲ್ಲಿ ನಾನು ಅರಿಯುವವನು ಕರ್ಮವನ್ನು ಮಾಡುವವನು, ಫಲವನ್ನು ಅನುಭವಿಸುವವನು' ಎಂಬ ರೂಪದಿಂದ ನಮಗೆಲ್ಲ ಪ್ರಸಿದ್ಧವಾಗಿರುವ ಆತ್ಮನು, ಅಹಂಕರ್ತೃ, ಅಹಂಪ್ರತ್ಯಯನ್ನು ವಿಷಯನು ಎನಿಸಿಕೊಳ್ಳುತ್ತಾನೆ. ಅವನಿಗಿಂದ ವ್ಯತಿರಿಕ್ತನಾಗಿ ಅವನನು

ನೇರಾಗಿ ನೋಡುತ್ತಿರುವ (ಸಾಕ್ಷಿಯಾದ) ನಮ್ಮೆಲ್ಲರ ಆತ್ಮನಾದ ಪರಮಾತ್ಮನನ್ನು ಉಪನಿಷತ್ತುಗಳಿಂದ ಮಾತ್ರವೇ ತಿಳಿದುಕೊಳ್ಳಬಹುದು ; ಆ ಸಾಕ್ಷಿಯನ್ನು ಉಪನಿಷತ್ತಿನಲ್ಲಿ ಹೊರತು ವೇದದ ಕರ್ಮಕಾಂಡದಲ್ಲಾಗಲಿ, ತರ್ಕಶಾಸ್ತ್ರದಲ್ಲಾಗಲಿ ಯಾರೂ ಹೇಳಿರುವದಿಲ್ಲ. ಆದ್ದರಿಂದ ಆ ಸಾಕ್ಷಿಯನ್ನು ಔಪನಿಷದ ಪುರುಷ ಎನ್ನುವರು. ಸತ್ಯಾನೃತರೂಪವಾದ ಆತ್ಮಾನಾತ್ಮರ ಪರಸ್ಪರಾಧ್ಯಾಸದಿಂದ ನಾನು ಎಂದು ತೋರುತ್ತಿರುವ ರೂಪವನ್ನು ನಾನು ಎಂದು ವ್ಯವಹರಿಸುವದೇ ಅವಿದ್ಯೆ ; ಅದಕ್ಕೆ ವಿಪರೀತವಾಗಿ ಪರಮಾತ್ಮಸ್ವರೂಪವನ್ನು ತಿಳಿದು ಅನಾತ್ಮವೆಲ್ಲವೂ ಮಿಥ್ಯೆಯೆಂದು ನಿಶ್ಚಯಿಸಿಕೊಳ್ಳುವದೇ ವಿದ್ಯೆ. ವಿದ್ಯೆಯು ಹುಟ್ಟಲು ಅವಿದ್ಯೆ ಹೋಗುವದು, ಅದರಿಂದ ಸಂಸಾರವ್ಯವಹಾರರೂಪವಾದ ಅವಿದ್ಯೆಯೂ ತೊಲಗುವದು.

[ ನ ಹಿ ಅಹಂಪ್ರತ್ಯಯವಿಷಯಕರ್ತೃವ್ಯತಿರೇಕೇಣ ತತ್ಸಾಕ್ಷೀ ಸರ್ವಭೂತಸ್ಥಃ ಸಮ ಏಕಃ ಕೂಟಸ್ಥೋ ಪುರುಷಃ ವಿಧಿಕಾಣ್ಡೇ ತರ್ಕಸಮಯೇ ವಾ ಕೇನಚಿದಧಿಗತಃ ಸರ್ವಸ್ಯ ಆತ್ಮಾ । .... 'ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ' (ಬೃ. ೩-೯-೨೬) ಇತಿ ಔಪನಿಷದತ್ವವಿಶೇಷಣಂ ಪುರುಷಸ್ಯ ಉಪನಿಷತ್ಸು ಪ್ರಾಧಾನ್ಯೇನ ಪ್ರತಿಪಾದ್ಯಮಾನತ್ವೇ ಉಪಪದ್ಯತೇ ॥ ಸೂ. ಭಾ. ೧-೧-೪. ತಮೇತಮ್ ಏವಂಲಕ್ಷಣಮ್ ಅಧ್ಯಾಸಂ ಪಣ್ಡಿತಾ ಅವಿದ್ಯೇತಿ ಮನ್ಯನ್ತೇ ತದ್ವಿವೇಕೇನ ಚ ವಸ್ತುಸ್ವರೂಪಾವಧಾರಣಂ ವಿದ್ಯಾಮ್ ಆಹುಃ ॥ ಅ. ಭಾ.]

(೭) ಸರ್ವರಿಗೂ ಆತ್ಮನಾದ ಬ್ರಹ್ಮವನ್ನೇ ಜಗತ್ತಿನ ಜನ್ಮಸ್ಥಿತಿಲಯಗಳಿಗೆ ಕಾರಣವೆಂದು ಶ್ರುತಿಯಲ್ಲಿ ಹೇಳಿರುತ್ತದೆ ಎಂದು ತಿಳಿಸುವದಕ್ಕಾಗಿ ಬ್ರಹ್ಮವನ್ನು ಅಲ್ಲಲ್ಲಿ ಆತ್ಮನೆಂದೇ ಕರೆದಿರುತ್ತದೆ. ಸಂಸಾರಾನರ್ಥಹೇತುವಾದ ಅವಿದ್ಯೆಯನ್ನು ತೊಲಗಿಸುವದಕ್ಕಾಗಿಯೇ 'ನೀನು ಆ ಆತ್ಮನು', 'ನಾನು ಬ್ರಹ್ಮವಾಗಿದೇನೆ'–ಎಂದು ಮುಂತಾಗಿ ಬ್ರಹ್ಮಾತ್ಮೈಕತ್ವವನ್ನು ಬೋಧಿಸಿರುತ್ತದೆ. ಬ್ರಹ್ಮಕ್ಕಿಂತ ವ್ಯತಿರಿಕ್ತವಾದ ಸಂಸಾರಿಯಾದ ಆತ್ಮನು ಇರುವದೇ ಇಲ್ಲ ಆದ್ದರಿಂದ ಅದ್ವಿತೀಯವಾದ ಬ್ರಹ್ಮವೇ ನಾನು ಎಂದು ಅರಿತುಕೊಳ್ಳಬೇಕು. ಇದರಿಂದಲೇ ಅವಿದ್ಯೆಯು ತೊಲಗುತ್ತದೆ.

[ಸರ್ವಶ್ರುತಿಷು ಚ ಬ್ರಹ್ಮಣ್ಯಾತ್ಮಶಬ್ದಪ್ರಯೋಗಾತ್, ಆತ್ಮಶಬ್ದಸ್ಯ ಪ್ರತ್ಯಗಾತ್ಮಾಭಿಧಾಯಕತ್ವಾತ್, "ಏಷ ಸರ್ವಭೂತಾನ್ತರಾತ್ಮಾ' ಇತಿ ಚ ಶ್ರುತೇಃ ಪರಮಾತ್ಮವ್ಯತಿರೇಕೇಣ ಸಂಸಾರಿಣೋಽ

ಭಾವಾತ್, 'ಏಕಮೇವಾದ್ವಿತೀಯಮ್', 'ಬ್ರಹ್ಮೈವೇದಮ್', 'ಆತ್ಮೈವೇದಮ್' ಇತ್ಯಾದಿಶ್ರುತಿಭ್ಯೋ ಯುಕ್ತಮೇವ ಅಹಂ ಬ್ರಹ್ಮಾಸ್ಮೀತ್ಯವಧಾರಯಿತುಮ್ ॥ ಬೃ. ೨-೧-೨೦.

"ತಸ್ಮಾದ್ವಾ ಏತಸ್ಮಾದಾತ್ಮನಃ" ಇತಿ ಬ್ರಹ್ಮಣ್ಯೇವ ಆತ್ಮಶಬ್ದ ಪ್ರಯೋಗಾತ್ ವೇದಿತುರಾತ್ಮೈವ ಬ್ರಹ್ಮ ॥ ತೈ. ಭಾ. ೨-೧.

ಅಸ್ಯಾನರ್ಥಹೇತೋಃ ಪ್ರಹಾಣಾಯ ಆತ್ಮೈಕತ್ವವಿದ್ಯಾಪ್ರತಿಪತ್ತಯೇ ಸರ್ವೇ ವೇದಾನ್ತಾ ಆರಭ್ಯನ್ತೇ ॥ ಅ. ಭಾ.

ಯಥಾಶಾಸ್ತ್ರಮ್ ಕ್ಷೇತ್ರಕ್ಷೇತ್ರಜ್ಞಲಕ್ಷಣಭೇದಪರಿಜ್ಞಾನಪೂರ್ವಕಂ ಪ್ರಾಗ್ದರ್ಶಿತರೂಪಾತ್ ಕ್ಷೇತ್ರಾತ್ ಮುಂಜಾದಿವ ಇಷೀಕಾಂ ಯಥೋಕ್ತಲಕ್ಷಣಂ ಕ್ಷೇತ್ರಜ್ಞಂ ಪ್ರವಿಭಜ್ಯ 'ನ ಸತ್ತನ್ನಾಸದುಚ್ಯತೇ' (೧೩-೧೨) ಇತ್ಯನೇನ ನಿರಸ್ತಸರ್ವೋಪಾಧಿವಿಶೇಷಂ ಜ್ಞೇಯಂ ಬ್ರಹ್ಮ ಸ್ವರೂಪೇಣ ಯಃ ಪಶ್ಯತಿ ಕ್ಷೇತ್ರಂ ಚ ಮಾಯಾನಿರ್ಮಿತಹಸ್ತಿ ಸ್ವಪ್ನದೃಶ್ಯವಸ್ತು ಗನ್ಧರ್ವನಗರಾದಿವತ್ ಅಸದೇವ ಸದಿವ ಅವಭಾಸತೇ ಇತ್ಯೇವಂ ನಿಶ್ಚಿತವಿಜ್ಞಾನೋ ಯಃ, ತಸ್ಯ ಯಥೋಕ್ತಸಮ್ಯಗ್ದರ್ಶನವಿರೋಧಾತ್ ಅಪಗಚ್ಛತಿ ಮಿಥ್ಯಾಜ್ಞಾನಮ್ ॥ ಗೀ. ೧೩-೨೬]

(೮) ಮೋಕ್ಷಶಾಸ್ತ್ರವಾದ ಉಪನಿಷತ್ತುಗಳೂ ಮೇಲೆ (೩) ಹೇಳಿರುವಂತೆ ಅವಿದ್ಯಾಪುರಃಸರವಾಗಿಯೇ ಹೊರಟಿರುತ್ತವೆ. ಆದರೂ ಅವೇ ಬ್ರಹ್ಮರೂಪವಾದ ಆತ್ಮನನ್ನು ತಿಳಿಸಿಕೊಡುವದಕ್ಕೆ ಪ್ರಮಾಣವಾಗಿರುತ್ತವೆ. ಉಪನಿಷದುಪದೇಶದಿಂದಾದ ಜ್ಞಾನವು ಆತ್ಮನ ಪ್ರಮಾತೃತ್ವವನ್ನೇ ಅಲ್ಲಗಳೆದುಬಿಡುವದರಿಂದ ಆ ಜ್ಞಾನವುಂಟಾದ ಬಳಿಕ ಪ್ರಮಾಣವ್ಯವಹಾರವೇ ಉಳಿಯುವದಿಲ್ಲ. ಕನಸಿನ ಜ್ಞಾನವು ಎಚ್ಚರವಾದಕೂಡಲೆ ಅಪ್ರಮಾಣವಾಗಿಬಿಡುವಂತೆಯೇ ಇದನ್ನು ತಿಳಿಯಬೇಕು. ಈ ಕಾರಣದಿಂದ ಉಪನಿಷತ್ತನ್ನು ಅಂತ್ಯಪ್ರಮಾಣವೆನ್ನುತ್ತಾರೆ. ಉಪನಿಷದ್ರೂಪವಾದ ಶಾಸ್ತ್ರವು ಬ್ರಹ್ಮವನ್ನು ವಿಷಯೀಕರಿಸಿ ತಿಳಿಸುವದಿಲ್ಲ. ಅದರಿಂದ ಹುಟ್ಟುವ ಜ್ಞಾನವೂ ಬ್ರಹ್ಮವನ್ನು ವಿಷಯೀಕರಿಸುವದಿಲ್ಲ. ಏಕೆಂದರೆ ನಮ್ಮ ಆತ್ಮರೂಪವಾಗಿರುವ ಬ್ರಹ್ಮವು ಮನಸ್ಸನ್ನೂ ವಾಕ್ಕುಗಳನ್ನೂ ಬೆಳಗುವ ನಿತ್ಯವಿಷಯಿಯಾಗಿರುತ್ತದೆ. ಆತ್ಮನ ಧರ್ಮವಲ್ಲದ್ದನ್ನು ಅಲ್ಲಗಳೆಯುವದೇ ಶಾಸ್ತ್ರಪ್ರಮಾಣದ ಕೃತ್ಯ ; ಆ ನಿಷೇಧಜ್ಞಾನವುಂಟಾದರೆ ಸ್ವತಃಸಿದ್ಧನಾಗಿರುವ ಆತ್ಮನು ತಾನೇ ಬೆಳಗುತ್ತಾನೆ. ಹೀಗೆ ಅತದ್ಧರ್ಮವನ್ನು ಅಲ್ಲಗಳೆದು ಆತ್ಮವಸ್ತುವನ್ನು ತಿಳಿಸುವ ಕ್ರಮಕ್ಕೆ ಆಗಮ ಎಂದು ಹೆಸರು.

[ಶಾಸ್ತ್ರಾದೇವ ಪ್ರಮಾಣಾತ್ ಜಗತೋ ಜನ್ಮಾದಿಕಾರಣಂ ಬ್ರಹ್ಮ ಅಧಿಗಮ್ಯತೇ । ಸೂ. ಭಾ. ೧-೧-೩.

ಶಾಸ್ತ್ರಂ ತು ಅನ್ತ್ಯಂ ಪ್ರಮಾಣಮ್ ಅತದ್ಧರ್ಮಾಧ್ಯಾರೋಪಣ ಮಾತ್ರನಿವರ್ತಕತ್ವೇನ ಪ್ರಾಮಾಣ್ಯಮ್ ಆತ್ಮನಃ ಪ್ರತಿಪದ್ಯತೇ, ನ ತ್ವಜ್ಞಾತಾರ್ಥಜ್ಞಾಪಕತ್ವೇನ || ಗೀ. ಭಾ. ೨-೧೮.

ನ ಹಿ ಆತ್ಮಸ್ವರೂಪಾಧಿಗಮೇ ಸತಿ ಪುನಃ ಪ್ರಮಾಣಪ್ರಮೇಯ ವ್ಯವಹಾರಃ ಸಂಭವತಿ । ಪ್ರಮಾತೃತ್ವಂ ಹಿ ಆತ್ಮನೋ ನಿವರ್ತ ಯತಿ ಅನ್ತ್ಯಂ ಪ್ರಮಾಣಮ್ । ನಿವರ್ತಯದೇವ ಚ ಅಪ್ರಮಾಣೀ ಭವತಿ ಸ್ವಪ್ನಕಾಲಪ್ರಮಾಣಮಿವ ಪ್ರಬೋಧೇ॥ ಗೀ. ಭಾ. ೨-೬೯.
ನ ಹಿ ಶಾಸ್ತ್ರಮಿದಂತಯಾ ವಿಷಯಭೂತಂ ಬ್ರಹ್ಮ ಪ್ರತಿಪಿಪಾದ ಯಿಷತಿ । ಕಿಂ ತರ್ಹಿ ಪ್ರತ್ಯಗಾತ್ಮತ್ವೇನ ಅವಿಷಯತಯಾ ಪ್ರತಿ ಪಾದಯತ್ ಅವಿದ್ಯಾಕಲ್ಪಿತಂ ವೇದ್ಯವೇದಿತೃವೇದನಾದಿಭೇದ ಮಪನಯತಿ ॥ ಸೂ. ಭಾ. ೧-೧-೪.

ಸತ್ಯಮೇವಮ್, ಪ್ರತ್ಯಕ್ಷಾದಿಭಿಃ ಪ್ರಮಾಣೈರ್ನ ಪರಃ ಪ್ರತ್ಯಾಯ ಯಿತುಂ ಶಕ್ಯಃ । ಆಗಮೇನ ತು ಶಕ್ಯತ ಏವ ಪ್ರತ್ಯಾಯ ಯಿತುಮ್ । ತದುಪದೇಶಾರ್ಥಮಾಗಮಮ್ ಆಹ- ಅನ್ಯದೇವ ತದ್ವಿದಿತಾದಥೋ ಅವಿದಿತಾದಧೀತಿ || ಕೇ. ಭಾ. ೧-೪.

ಯದ್ಯೇವಂ ದ್ವೈತಾಭಾವೇ ಶಾಸ್ತ್ರವ್ಯಾಪಾರೋ ನಾದ್ವೈತೇ । ವಿರೋಧಾತ್ || ಗೌ. ಕಾ. ಭಾ. ೨-೩೨.]

(೯) ಈವರೆಗೆ ವರ್ಣಿಸಿರುವಂತೆ ಅಧ್ಯಾಸರೂಪವಾದ ಅವಿದ್ಯೆಯನ್ನು ಮುಂದುಮಾಡಿಕೊಂಡೇ ಮಿಕ್ಕ ಪ್ರಮಾಣಗಳಂತೆ ಶಾಸ್ತ್ರವೂ ಹೊರಟಿರುವದರಿಂದ ಶಾಸ್ತ್ರದಲ್ಲಿ ಉಪದೇಶಕ್ಕಾಗಿ ಕಲ್ಪಿಸಿರುವ ವಿದ್ಯಾವಿದ್ಯಾವ್ಯವಹಾರವೂ ಶಾಸ್ತ್ರಶಿಷ್ಯ ಗುರುವ್ಯವಹಾರವೂ ಅವಿದ್ಯಾಭೂಮಿಯಲ್ಲಿಯೇ ಇರುತ್ತವೆ- ಎಂಬುದನ್ನು ನೆನಪಿಟ್ಟವರಿಗೆ 'ಅವಿದ್ಯೆಯೆಲ್ಲಿಂದ ಬಂತು ? ವಿದ್ಯಾವಿದ್ಯಾವಿಭಾಗಗಳನ್ನೂ ಶಾಸ್ತ್ರ ಶಿಷ್ಯಾದಿವಿಭಾಗವನ್ನು ನಿಜವೆಂದು ಇಟ್ಟುಕೊಂಡರೆ ಅದ್ವೈತಕ್ಕೆ ಹಾನಿಯಲ್ಲವೆ ?' ಎಂಬ ಶಂಕೆಗಳು ಹುಟ್ಟುವದಿಲ್ಲ. ಉಪದೇಶಕ್ಕಾಗಿ ಇಂಥ ವಿಭಾಗಗಳನ್ನು ಕಲ್ಪಿಸಿ ಕೊಂಡು ತತ್ತ್ವವನ್ನುಹೇಳಿಕೊಡುವಕ್ರಮಕ್ಕೆ ಅಧ್ಯಾರೋಪಾಪವಾದನ್ಯಾಯ ವೆಂದು ಹೆಸರು. ಇಲ್ಲಿ ಅಧ್ಯಾರೋಪದೃಷ್ಟಿಯಿಂದ ಉಪದೇಶಕ್ಕಾಗಿ ಕಲ್ಪಿಸಿ ಇಟ್ಟುಕೊಂಡದ್ದು, ಅಪವಾದದೃಷ್ಟಿಯಿಂದ ಇಲ್ಲವಾಗಿಬಿಡುತ್ತದೆ ; ಆದ್ದರಿಂದ ವಿಭಾಗವು ಇಲ್ಲವೆಂಬುದೇ ಪರಮಾರ್ಥ. ದೃಗ್ದೃಶ್ಯವಿವೇಕ, ಸೃಷ್ಟಿಪ್ರಕ್ರಿಯೆ,

**ಪಂಚಕೋಶವಿವೇಕ, ಅವಸ್ಥಾತ್ರಯಪರೀಕ್ಷೆ** – ಮುಂತಾದವುಗಳೆಲ್ಲ ಅಧ್ಯಾರೋಪದೃಷ್ಟಿಯಿಂದ ಆತ್ಮನನ್ನು ಪ್ರಮಾತೃವೆಂದಿಟ್ಟುಕೊಂಡು ಹೇಳಿದವುಗಳೇ ಎಂಬುದನ್ನು ನೆನೆಪಿನಲ್ಲಿಡಬೇಕು. ಅಧ್ಯಾರೋಪವೆಂದರೆ ಲೋಕಸಿದ್ಧವಾದ ವಿಭಾಗವನ್ನು ಇಟ್ಟುಕೊಂಡು ವಿಚಾರಕ್ಕೆ ಹೊರಡುವದು, ಅಪವಾದವೆಂದರೆ ಅದು ನಿಜವಾಗಿಲ್ಲವೆಂದು ತೋರಿಸಿಕೊಡುವದು. ವಸ್ತುಸ್ಥಿತಿಯನ್ನೇ, ಹೇಳಬೇಕಾಗಿಬಂದಾಗ ಪರಮಾರ್ಥವನ್ನು ಹೀಗಲ್ಲ, ಹೀಗಲ್ಲ –ಎಂದೇ ತಿಳಿಸಬೇಕಾಗುವದು; ಅದಕ್ಕಿಂತ ಬೇರೆಯ ಮಾರ್ಗವೇ ಇರುವದಿಲ್ಲ.

[ಯಥಾ ಬುದ್ಧ್ಯಾದ್ಯಾಹೃತಸ್ಯ ಶಬ್ದಾದ್ಯರ್ಥಸ್ಯ ಅವಿಕ್ರಿಯ ಏವ ಸನ್ ಬುದ್ಧಿವೃತ್ತ್ಯವಿವೇಕವಿಜ್ಞಾನೇನ ಅವಿದ್ಯಯಾ ಉಪಲಬ್ಧಾ ಆತ್ಮಾ ಕಲ್ಪ್ಯತೇ, ಏವಮೇವ ಆತ್ಮಾನಾತ್ಮವಿವೇಕವಿಜ್ಞಾನೇನ ಬುದ್ಧಿವೃತ್ತ್ಯಾ ವಿದ್ಯಯಾ ಅಸತ್ಯರೂಪಯೈವ ಪರಮಾರ್ಥತೋಽವಿಕ್ರಿಯ ಏವ ಆತ್ಮಾ ವಿದ್ವಾನ್ ಉಚ್ಯತೇ॥ ಗೀ. ಭಾ. ೨–೨೧.

ಕಸ್ಯ ಪುನರಯಮಪ್ರಬೋಧ ಇತಿ ಚೇತ್ । ಯಸ್ತ್ವಂ ಪೃಚ್ಛಸಿ ತಸ್ಯ ತ ಇತಿ ವದಾಮಃ । ನನ್ವಹಮೀಶ್ವರ ಏವೋಕ್ತಃ ಶ್ರುತ್ಯಾ । ಯದ್ಯೇವಂ ಪ್ರತಿಬುದ್ಧೋಽಸಿ ನಾಸ್ತಿ ಕಸ್ಯಚಿದಪ್ರಬೋಧಃ । ಯೋಽಪಿ ದೋಷಶ್ಚೋದ್ಯತೇ ಕೈಶ್ಚಿತ್ ಅವಿದ್ಯಯಾ ಕಿಲ ಆತ್ಮನಃ ಸದ್ವಿತೀಯತ್ವಾತ್ ಅದ್ವೈತಾನುಪಪತ್ತಿರಿತಿ ಸೋಽಪ್ಯೇತೇನ ಪ್ರತ್ಯುಕ್ತಃ ॥ ಸೂ. ಭಾ. ೪–೧–೩.

ನನು ಶಾಸ್ತಾ, ಶಾಸ್ತ್ರಂ, ಶಿಷ್ಯಃ ಇತಿ ವಿಕಲ್ಪಃ ಕಥಂ ನಿವೃತ್ತ ಇತಿ? ಉಚ್ಯತೇ....ಯಥಾಯಂ ಪ್ರಪಞ್ಚೋ ಮಾಯಾರಜ್ಜುಸರ್ಪವತ್, ತಥಾಯಂ ಶಿಷ್ಯಾದಿಭೇದವಿಕಲ್ಪೋಽಪಿ ಪ್ರಾಕ್ ಪ್ರತಿಬೋಧಾದೇವ ಉಪದೇಶನಿಮಿತ್ತಃ । ಅತಃ ಉಪದೇಶಾದಯಂ ವಾದಃ ಶಿಷ್ಯಃ. ಶಾಸ್ತಾ, ಶಾಸ್ತ್ರಮ್ ಇತಿ । ಉಪದೇಶಕಾರ್ಯೇ ತು ಜ್ಞಾನೇ ನಿರ್ವೃತ್ತೇ ಜ್ಞಾತೇ ಪರಮಾರ್ಥತತ್ತ್ವೇ ದ್ವೈತಂ ನ ವಿದ್ಯತೇ ॥ ಗೌ. ಕಾ. ಭಾ. ೧–೧೮.

ಪ್ರಸಿದ್ಧಂ ತು ಭೇದಮನೂದ್ಯ ಬನ್ಧಮೋಕ್ಷವ್ಯವಸ್ಥಾ ಪ್ರತಿಪಾದ್ಯತೇ । ಭೇದಸ್ತು ಉಪಾಧಿನಿಮಿತ್ತೋ ಮಿಥ್ಯಾಜ್ಞಾನಕಲ್ಪಿತೋ ನ ಪಾರಮಾರ್ಥಿಕಃ ॥ ಸೂ. ಭಾ. ೧–೪–೧೦.

ತಥಾ ಚ ಸಂಪ್ರದಾಯವಿದಾಂ ವಚನಮ್ 'ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಞ್ಚಂ ಪ್ರಪಞ್ಚ್ಯತೇ' ಇತಿ॥ಗೀ.ಭಾ.೧೩–೧೩.

ಉತ್ಪತ್ತಿಪ್ರಲಯಯೋರಭಾವಾತ್ ಬದ್ಧಾದಯೋ ನ ಸನ್ತೀತ್ಯೇಷಾ ಪರಮಾರ್ಥತಾ ॥ ಗೌ.ಕಾ.ಭಾ. ೨-೩೨.
ಯಸ್ಮಾತ್ ಇತಿ ನ ಇತಿ ನ- ಇತ್ಯೇತಸ್ಮಾತ್.... ಅನ್ಯತ್ ಪರಂ ನಿರ್ದೇಶನಂ ನಾಸ್ತಿ, ತಸ್ಮಾದಯಮೇವ ನಿರ್ದೇಶೋ ಬ್ರಹ್ಮಣಃ ॥ ಬೃ. ಭಾ. ೨-೩-೬].

(೧೦) ಅವಿದ್ಯಾದೃಷ್ಟಿಯಿಂದ ಜನರಿಗೆ ತೋರುವ ನಾಮರೂಪಗಳು ಆತ್ಮನೇ ಎಂದಾಗಲಿ ಆತ್ಮನಿಗಿಂತ ಬೇರೆಯೆಂದಾಗಲಿ ಹೇಳುವದಕ್ಕೆ ಬರುವದಿಲ್ಲ. ಆದ್ದರಿಂದಲೇ ಆಚಾರ್ಯರು ನೀರಿಗಿಂತ ನೊರೆಯು ಬೇರೆಯೆಂದಾಗಲಿ ಆ ನೀರೇ ಎಂದಾಗಲಿ ಹೇಳುವದಕ್ಕೆ ಬಾರದಿರುವಂತೆ ಅವು 'ತತ್ತ್ವಾನ್ಯತ್ವಾಭ್ಯಾಮ್ ಅನಿರ್ವಚನೀಯ', ಅದೇ ಎಂದಾಗಲಿ ಬೇರೆಯೆಂದಾಗಲಿ ಹೇಳುವದಕ್ಕೆ ಬಾರದೆ ಇರುವಂಥವು, ಎಂದಿರುತ್ತಾರೆ. ನೊರೆಯು ನಿಜವಾಗಿ ನೀರೇ ಆಗಿರುವಂತೆ ಆ ನಾಮರೂಪಗಳು ನಿಜವಾಗಿ ಪರಮಾತ್ಮನೇ ಆಗಿರುತ್ತವೆ. ಅವಿದ್ಯೆಯಿಂದ ಕಲ್ಪಿತವಾಗಿರುವ ಇವನ್ನು ಅವ್ಯಾಕೃತ, ಮಾಯೆ, ಶಕ್ತಿ, ಪ್ರಕೃತಿ, ಅವ್ಯಕ್ತ, ಅಕ್ಷರ, ಆಕಾಶ, ಬೀಜ -ಮುಂತಾದ ಹೆಸರುಗಳಿಂದ ಶ್ರುತಿಸ್ಮೃತಿಗಳಲ್ಲಿ ಕರೆದಿದೆ. ಮಾಯೆ ಎಂದರೆ ಅವಿದ್ಯೆಯೇ ಅಲ್ಲ, ಅವಿದ್ಯೆಯಿಂದ ಕಲ್ಪಿತವಾದ ತೋರಿಕೆಯ ನಾಮರೂಪ. ಆಚಾರ್ಯರು ಮಾಯೆಯನ್ನು ಹೀಗೆ ಅನಿರ್ವಚನೀಯವೆಂದ ಮಾತ್ರದಿಂದ ಇದರ ಸ್ವರೂಪವನ್ನು ತಾವು ಹೇಳಲಾರೆವೆಂದಿದಾರೆಂದು ಕಲ್ಪಿಸಬಾರದು ; ಏಕೆಂದರೆ ಮಾಯೆಯ ಪರಮಾರ್ಥಸ್ವರೂಪವು ಪರಮಾತ್ಮನೇ ಎಂದು ಅವರು ಸ್ಪಷ್ಟವಾಗಿ ಹೇಳಿಬಿಟ್ಟಿರುತ್ತಾರೆ.

[ಸರ್ವಜ್ಞಸ್ಯ ಈಶ್ವರಸ್ಯ ಆತ್ಮಭೂತೇ ಇವ ಅವಿದ್ಯಾಕಲ್ಪಿತೇ ನಾಮರೂಪೇ ತತ್ತ್ವಾನ್ಯತ್ವಾಭ್ಯಾಮನಿರ್ವಚನೀಯೇ ಸಂಸಾರಪ್ರಪಞ್ಚಬೀಜಭೂತೇ ಸರ್ವಜ್ಞಸ್ಯ. ಈಶ್ವರಸ್ಯ ಮಾಯಾ, ಶಕ್ತಿಃ, ಪ್ರಕೃತಿಃ ಇತಿ ಚ ಶ್ರುತಿಸ್ಮೃತ್ಯೋರಭಿಲಪ್ಯೇತೇ ॥
ಸೂ. ಭಾ. ೨-೧-೧೪.

ಅವಿದ್ಯಾತ್ಮಿಕಾ ಹಿ ಬೀಜಶಕ್ತಿಃ, ಅವ್ಯಕ್ತಶಬ್ದನಿರ್ದೇಶ್ಯಾ ಪರಮೇಶ್ವರಾಶ್ರಯಾ ಮಾಯಾಮಯೀ ಮಹಾಸುಪ್ತಿಃ, ಯಸ್ಯಾಂ ಸ್ವರೂಪಪ್ರತಿಬೋಧರಹಿತಾಃ ಶೇರತೇ ಸಂಸಾರಿಣೋ ಜೀವಾಃ । ತದೇತದವ್ಯಕ್ತಂ ಕ್ವಚಿತ್ ಆಕಾಶಶಬ್ದನಿರ್ದಿಷ್ಟಮ್.... ಕ್ವಚಿದಕ್ಷರಶಬ್ದೋದಿತಮ್.... ಕ್ವಚಿನ್ಮಾಯೇತಿ ಸೂಚಿತಮ್ ॥
ಸೂ. ಭಾ. ೧-೪-೩.

ಯದಾ ತು ಪರಮಾರ್ಥದೃಷ್ಟ್ಯಾ ಪರಮಾರ್ಥತತ್ತ್ವಾತ್ ಶ್ರುತ್ಯನುಸಾರಿಭಿರನ್ಯತ್ವೇನ ನಿರೂಪ್ಯಮಾಣೇ ನಾಮರೂಪೇ ಮೃದಾದಿವಿಕಾರವತ್ ವಸ್ತ್ವಂತರೇ ತತ್ತ್ವತೋ ನ ಸ್ತಃ ಸಲಿಲ ಫೇನಘಟಾದಿವಿಕಾರವದೇವ, ತದಾ ತದಪೇಕ್ಷ್ಯ 'ಏಕಮೇವಾಽ ದ್ವಿತೀಯಮ್', 'ನೇಹ ನಾನಾಸ್ತಿ ಕಿಞ್ಚನ' ಇತ್ಯಾದಿಪರಮಾರ್ಥ ದರ್ಶನಗೋಚರತ್ವಂ ಪ್ರತಿಪದ್ಯತೇ। ಯದಾ ತು ಸ್ವಾಭಾವಿಕ್ಯಾ ಅವಿದ್ಯಯಾ ಬ್ರಹ್ಮಸ್ವರೂಪಂ ರಜ್ಜುಶುಕ್ತಿಕಾಗಗನಸ್ವರೂಪ ವದೇವ ಸ್ವೇನ ರೂಪೇಣ ವರ್ತಮಾನಂ ಕೇನಚಿದಸ್ಪೃಷ್ಟಸ್ವಭಾವ ಮಪಿ ಸತ್, ನಾಮರೂಪಕೃತಕಾರ್ಯಕರಣೋಪಾಧಿಭ್ಯೋ ವಿವೇಕೇನ ನಾವಧಾರ್ಯತೇ, ನಾಮರೂಪೋಪಾಧಿದೃಷ್ಟಿರೇವ ಚ ಭವತಿ ಸ್ವಾಭಾವಿಕೀ, ತದಾ ಸರ್ವೋಽಯಂ ವಸ್ತ್ವಂತರಾಸ್ತಿತ್ವ ವ್ಯವಹಾರಃ ॥ ಬೃ. ೩-೫-೧.]

(೧೧) ಬ್ರಹ್ಮಜ್ಞಾನವು ಅನುಭವದಲ್ಲಿ ಕೊನೆಗಾಣತಕ್ಕದ್ದಾಗಿದೆಯಾದ್ದ ರಿಂದ ಅದಕ್ಕೆ ಬರಿಯ ಶ್ರುತ್ಯಾದಿಗಳನ್ನೇ, ಶ್ರುತ್ಯಾದಿಗಳೆಂಬಿಷ್ಟೇ ಕಾರಣದಿಂದ ಪ್ರಮಾಣವಾಗಿ ಇಲ್ಲಿ ಹೇಳಿರುವದಿಲ್ಲ. 'ತತ್ತ್ವಮಸಿ' ಅದೇ ನೀನು- ಮುಂತಾದ ವೇದಾಂತವಾಕ್ಯಗಳಿಂದ ಅನುಭವಪರ್ಯಂತವಾದ ಅರಿವು ಆಗಿಬಿಡುವದರಿಂದ ಇಲ್ಲಿ ಸಂಶಯಪಡುವದಕ್ಕೆ ಕಾರಣವೂ ಇಲ್ಲ. ಆದ್ದರಿಂದಲೇ ಇಲ್ಲಿ ಅನುಭವಾಂಗ ವಾಗಿ ತರ್ಕವನ್ನು ಹೇಳಿರುತ್ತದೆ. ಬ್ರಹ್ಮದ ಜಗಜ್ಜನ್ಮಾದಿಕಾರಣತ್ವವಿವರಣೆಗೆ ಒಪ್ಪಿ ಅವಸ್ಥಾತ್ರಯಪರೀಕ್ಷೆ-ಮುಂತಾದ ರೂಪದಿಂದ ಶ್ರುತಿಯಲ್ಲಿ ಹೇಳಿಕೊಟ್ಟಿರುವ ಈ ತರ್ಕವೂ ಅನುಭವಕ್ಕೇ ಅಂಗವಾಗಿರುತ್ತದೆ. ಹೇಗೆಂದರೆ ಬ್ರಹ್ಮದಿಂದ ಜಗತ್ತು ಹುಟ್ಟಿ ಅದರಲ್ಲಿಯೇ ಇದ್ದು ಅದರಲ್ಲಿಯೇ ಲಯವಾಗುತ್ತಿರುವದರಿಂದ ಬ್ರಹ್ಮಕ್ಕಿಂತ ಅದು ಬೇರೆಯಲ್ಲ ; ಸ್ವಪ್ನಜಾಗರಿತಗಳು ಒಂದಿದ್ದಾಗ ಮತ್ತೊಂದು ಎಲ್ಲಿಯೂ ಇಲ್ಲದೆ ಇರುವದರಿಂದಲೂ ಆತ್ಮನು ಅವುಗಳ ಸಂಪರ್ಕವಿಲ್ಲದವನು ; ಸುಷುಪ್ತಿ ಯಲ್ಲಿ ಪ್ರಪಂಚವನ್ನೆಲ್ಲ ಬಿಟ್ಟು ಸದ್ರೂಪವಾದ ಬ್ರಹ್ಮದಲ್ಲಿಯೇ ಸೇರಿಕೊಳ್ಳುವದ ರಿಂದ ಜೀವನು ಪ್ರಪಂಚರಹಿತವಾದ ಬ್ರಹ್ಮಸ್ವರೂಪನೇ -ಎಂಬೀ ಬಗೆಯ ತರ್ಕವು ಈ ಅನುಭವವನ್ನು ತಂದುಕೊಡುತ್ತದೆ. ಇಷ್ಟೇಹೊರತು ಇಲ್ಲಿ ಪುರುಷ ಬುದ್ಧಿಯಿಂದ ಊಹಾರೂಪವಾಗಿ ಕಲ್ಪಿಸುವ ಕೇವಲ ತರ್ಕವು ಯಾವ ಪ್ರಯೋ ಜನಕ್ಕೂ ಬರುವದಿಲ್ಲ.

[ನ ಧರ್ಮಜಿಜ್ಞಾಸಾಯಾಮಿವ ಶ್ರುತ್ಯಾದಯ ಏವ ಪ್ರಮಾಣಂ ಬ್ರಹ್ಮಜಿಜ್ಞಾಸಾಯಾಮ್, ಕಿಂ ತು ಶ್ರುತ್ಯಾದಯೋಽನುಭವಾದ

ಯಶ್ಚ ಯಥಾಸಂಭವಮಿಹ ಪ್ರಮಾಣಮ್ । ಅನುಭವಾವಸಾನತ್ವಾತ್, ಭೂತವಸ್ತುವಿಷಯತ್ವಾಚ್ಚ ಬ್ರಹ್ಮಜ್ಞಾನಸ್ಯ ॥ ಸೂ. ಭಾ. ೧-೧-೨.

ಕರ್ಮಫಲೇ ಹಿ ಸ್ವರ್ಗಾದೌ ಅನುಭವಾನಾರೂಢೇ ಸ್ಯಾದಾಶಙ್ಕಾ-ಭವೇದ್ವಾ ನ ವಾ ಇತಿ । ಅನುಭವಾರೂಢಂ ತು ಜ್ಞಾನಫಲಮ್ 'ಯತ್ಸಾಕ್ಷಾದಪರೋಕ್ಷಾತ್ ಬ್ರಹ್ಮ' (ಬೃ. ಭಾ. ೩-೪-೧) ಇತಿ ಶ್ರುತೇಃ । 'ತತ್ತ್ವಮಸಿ' ಇತಿ ಚ ಸಿದ್ಧವದುಪದೇಶಾತ್ ॥ ಸೂ. ಭಾ. ೩-೩-೩೨.

ನಾನೇನ ಮಿಷೇಣ ಶುಷ್ಕತರ್ಕಸ್ಯ ಅತ್ರ ಆತ್ಮಲಾಭಃ ಸಂಭವತಿ । ಶ್ರುತ್ಯನುಗೃಹೀತ ಏವ ಹ್ಯತ್ರ ತರ್ಕೋಽನುಭವಾಙ್ಗತ್ವೇನ ಆಶ್ರೀಯತೇ । ಸ್ವಪ್ನಾನ್ತಬುದ್ಧಾನ್ತಯೋರುಭಯೋರಿತರೇತರವ್ಯಭಿಚಾರಾದಾತ್ಮನೋಽನನ್ವಾಗತತ್ವಮ್, ಸಂಪ್ರಸಾದೇ ಚ ಪ್ರಪಞ್ಚಪರಿತ್ಯಾಗೇನ ಸದಾತ್ಮನಾ ಸಂಪತ್ತೇರ್ನಿಷ್ಪ್ರಪಞ್ಚಸದಾತ್ಮತ್ವಮ್ । ಪ್ರಪಞ್ಚಸ್ಯ ಬ್ರಹ್ಮಪ್ರಭವತ್ವಾತ್ ಕಾರ್ಯಕಾರಣಾನನ್ಯತ್ವನ್ಯಾಯೇನ ಬ್ರಹ್ಮಾವ್ಯತಿರೇಕ ಇತ್ಯೇವಂಜಾತೀಯಕಃ ॥ ಸೂ. ಭಾ. ೨-೧-೬.]

## ಸಾಧನವಿವೇಕ

೧೬೭. ಬ್ರಹ್ಮವು ಎರಡನೆಯದು ಯಾವದೊಂದರ ಸಂಬಂಧವೂ ಇಲ್ಲದೆ ನಿರ್ವಿಶೇಷವೇ ಆಗಿದ್ದರೂ ಶ್ರುತಿಯಲ್ಲಿ ಅಧ್ಯಾರೋಪದೃಷ್ಟಿಯಿಂದ ಕೆಲವು ಉಪಾಧಿಗಳನ್ನು ಉಪಾಯವಾಗಿಟ್ಟುಕೊಂಡು ಅದರ ಸ್ವರೂಪವನ್ನು ತಿಳಿಸಿರುತ್ತದೆ ಎಂದು ಹೇಳಿದೆವಷ್ಟೆ? ಅವಿದ್ಯಾಕಲ್ಪಿತವಾದ ನಾಮರೂಪಗಳ ವ್ಯಾಕೃತ (ಬಿಡಿಬಿಡಿಯಾದ ರೂಪ) ಮತ್ತು ಅವ್ಯಾಕೃತ (ವಿಂಗಡವಾಗದೆ ಅವ್ಯಕ್ತವಾಗಿರುವ ರೂಪ) ಎಂಬ ಭೇದವುಳ್ಳ ನಾಮರೂಪಲಕ್ಷಣವಾದ ರೂಪವಿಶೇಷವನ್ನು ಒಪ್ಪಿ ಈಶ್ವರನಿಗೆ ಜಗಜ್ಜನ್ಮಾದಿಕಾರಣತ್ವವನ್ನು ಶ್ರುತಿಯಲ್ಲಿ ಹೇಳಿರುತ್ತದೆ. ಹೀಗೆ ತಿಳಿಸುವದಕ್ಕೆ ಉಪಾಯವಾಗಿ ನಾಮರೂಪಲಕ್ಷಣವಾದ ಉಪಾಧಿಗಳನ್ನು ಹೇಳಿದ್ದರೂ ಅವು ಆತ್ಮತತ್ತ್ವಕ್ಕೆ ಸೇರಿದವೆಂಬ ವಿವಕ್ಷೆಯೇನೂ ಇರುವದಿಲ್ಲ. ತತ್ತ್ವವನ್ನು ತಿಳಿಯುವದಕ್ಕೆಂದು ಶ್ರವಣಮನನನಿದಿಧ್ಯಾಸನಗಳನ್ನು ಮಾಡುವ ಪ್ರಮಾತೃ ಅಥವಾ ಜಿಜ್ಞಾಸು, ಮತ್ತು ಜಿಜ್ಞಾಸ್ಯವಾದ ಬ್ರಹ್ಮ-ಇವುಗಳಿಗೆ ಭೇದವನ್ನೆ ಅಧ್ಯಾರೋಪ ದೃಷ್ಟಿಯಿಂದ ಒಪ್ಪಿದರೂ ತತ್ತ್ವವನ್ನು ತಿಳಿದಬಳಿಕ, ಆ ಪ್ರಮಾತೃವೇ ಬ್ರಹ್ಮವಾಗಿಬಿಡುತ್ತಾನೆ. ಆದರೆ ಜೀವೇಶ್ವರಭೇದವನ್ನು ಹೇಳುವಾಗಲೂ ಮತ್ತು

ಕ್ರಿಯಾಕಾರಕಫಲಗಳ ಸಂಬಂಧವನ್ನು ಹೇಳುವಾಗಲೂ ನಾಮರೂಪಕೃತವಾದ ಉಪಾಧಿಗಳ ಧರ್ಮವನ್ನು ಆತ್ಮನಿಗೆ ಇರುವಂತೆ ಇಟ್ಟುಕೊಂಡೇ ಇರುತ್ತನೆ. ಈ ಉಪಾಧಿ ವಿಶಿಷ್ಟರೂಪವನ್ನೊಪ್ಪಿಯೇ ಕರ್ಮವನ್ನೂ ಉಪಾಸನೆಯನ್ನೂ ಶಾಸ್ತ್ರದಲ್ಲಿ ವಿಧಿಸಿರುತ್ತದೆ.

[ಅವಿದ್ಯಾಕಲ್ಪಿತೇನ ಚ ನಾಮರೂಪಲಕ್ಷಣೇನ ರೂಪಭೇದೇನ ವ್ಯಾಕೃತಾವ್ಯಾಕೃತಾತ್ಮಕೇನ ತತ್ತ್ವಾನ್ಯತ್ವಾಭ್ಯಾಮನಿರ್ವಚನೀಯೇನ ಬ್ರಹ್ಮ ಪರಿಣಾಮಾದಿಸರ್ವವ್ಯವಹಾರಾಸ್ಪದತ್ವಂ ಪ್ರತಿಪದ್ಯತೇ । ಪಾರಮಾರ್ಥಿಕೇನ ಚ ರೂಪೇಣ ಸರ್ವವ್ಯವಹಾರಾತೀತಮ್ ಅಪರಿಣತಮ್ ಅವತಿಷ್ಠತೇ ವಾಚಾರಂಭಣಮಾತ್ರತ್ವಾಚ್ಚ ಅವಿದ್ಯಾಕಲ್ಪಿತಸ್ಯ ರೂಪಭೇದಸ್ಯೇತಿ ನ ನಿರವಯವತ್ವಂ ಬ್ರಹ್ಮಣಃ ಕುಪ್ಯತಿ । ನ ಚೇಯಂ ಪರಿಣಾಮಶ್ರುತಿಃ ಪರಿಣಾಮಪ್ರತಿಪಾದನಾರ್ಥಾ । ತತ್ಪ್ರತಿಪತ್ತೌ ಫಲಾನವಗಮಾತ್ । ಸರ್ವವ್ಯವಹಾರಹೀನಬ್ರಹ್ಮಾತ್ಮಭಾವಪ್ರತಿಪಾದನಾರ್ಥಾ ತ್ವೇಷಾ । ತತ್ಪ್ರತಿಪತ್ತೌ ಫಲಾವಗಮಾತ್ ॥ ಸೂ. ಭಾ- ೨-೧-೨೭.

ಅವಿದ್ಯಾಕೃತನಾಮರೂಪೋಪಾಧ್ಯನುರೋಧೀ ಈಶ್ವರೋ ಭವತಿ ವ್ಯೋಮೇವ ಘಟಕರಕಾದ್ಯುಪಾಧ್ಯನುರೋಧಿ । ಸ ಚ ಸ್ವಾತ್ಮಭೂತಾನೇವ ಘಟಾಕಾಶಸ್ಥಾನೀಯಾನ್ ಅವಿದ್ಯಾಪ್ರತ್ಯುಪಸ್ಥಾಪಿತನಾಮರೂಪಕೃತಕಾರ್ಯಕರಣಸಂಘಾತಾನುರೋಧಿನೋ ಜೀವಾಖ್ಯಾನ್ ವಿಜ್ಞಾನಾತ್ಮನಃ ಪ್ರತಿ ಈಷ್ಟೇ ವ್ಯವಹಾರವಿಷಯೇ ॥ ಸೂ. ಭಾ. ೨-೧-೧೪.

ಏಕಮಪಿ ಬ್ರಹ್ಮ ಅಪೇಕ್ಷಿತೋಪಾಧಿಸಂಬನ್ಧಂ ನಿರಸ್ತೋಪಾಧಿಸಂಬನ್ಧಂ ಚ ಉಪಾಸ್ಯತ್ವೇನ ಜ್ಞೇಯತ್ವೇನ ಚ ವೇದಾನ್ತೇಷು ಉಪದಿಶ್ಯತೇ ॥ ಸೂ. ಭಾ. ೧-೧-೧೨.

ಅನ್ವೇಷ್ಟವ್ಯಾತ್ಮವಿಜ್ಞಾನಾತ್ ಪ್ರಾಕ್ಪ್ರಮಾತೃತ್ವಮಾತ್ಮನಃ ।
ಅನ್ವಿಷ್ಟಃ ಸ್ಯಾತ್ ಪ್ರಮಾತೈವ ಪಾಪ್ಮದೋಷಾದಿವರ್ಜಿತಃ ॥
ಸೂ. ಭಾ. ೧-೧-೪.

ಯಥಾಪ್ರಾಪ್ತಮೇವ ಕಾರಕಾಸ್ತಿತ್ವಮ್ ಉಪಾದಾಯ ಉಪಾತ್ತದುರಿತಕ್ಷಯಾರ್ಥಂ ಕರ್ಮಾಣಿ ವಿದಧತ್ ಶಾಸ್ತ್ರಂ ಮುಮುಕ್ಷೂಣಾಂ ಫಲಾರ್ಥಿನಾಂ ಚ ಫಲಸಾಧನಂ ನ ಕಾರಕಾಸ್ತಿತ್ವೇ ವ್ಯಾಪ್ರಿಯತೇ ॥ ತೈ. ಶೀಕ್ಷಾ. ಉಪಸಂಹಾರ.

ತತ್ರ ಅವಿದ್ಯಾವಸ್ಥಾಯಾಂ ಬ್ರಹ್ಮಣಃ ಉಪಾಸ್ಯೋಪಾಸಕಾದಿ ಲಕ್ಷಣಃ ಸರ್ವೋ ವ್ಯವಹಾರಃ || ಸೂ. ಭಾ. ೧-೧-೧೨.]

## ಸಾಧನಫಲಗಳು

೧೬೮. (೧) ವರ್ಣಾಶ್ರಮಗಳಿಗೆ ವಿಹಿತವಾಗಿರುವ ಕರ್ಮಗಳನ್ನು ಆಯಾ ವರ್ಣಾಶ್ರಮದವರು ಮಾಡುತ್ತಿದ್ದರೆ ಆಯಾ ಕರ್ಮಕ್ಕೆ ಹೇಳುವ ಸ್ವರ್ಗಾದಿಫಲಗಳು ಆಗುವವು. ಆ ಫಲಗಳನ್ನು ಭೋಗಿಸಿ ಮುಗಿದಮೇಲೆ ಅವರವರಿಗೆ ಫಲೋನ್ಮುಖವಾದ ಶೇಷಕರ್ಮಕ್ಕೆ ತಕ್ಕಂತೆ ಜನ್ಮಗಳ ಪ್ರಾಪ್ತಿಯಾಗುವದು. ಕರ್ಮಗಳನ್ನೂ ಫಲವನ್ನು ಬಯಸದೆ ಈಶ್ವರಾರ್ಚನೆಗೆಂದು ಮಾಡಿದರೆ ಚಿತ್ತಶುದ್ಧಿಯ ಮೂಲಕ ಜ್ಞಾನನಿಷ್ಠೆಗೆ ಬೇಕಾದ ಯೋಗ್ಯತೆಯನ್ನು ಪಡೆದುಕೊಳ್ಳುತ್ತಾರೆ. ಆ ಮೂಲಕ ಅವು ಮೋಕ್ಷಕ್ಕೆ ಕಾರಣವಾಗುತ್ತವೆ.

[ಏತೇಷಾಂ ಜಾತಿವಿಹಿತಾನಾಂ ಕರ್ಮಣಾಂ ಸಮ್ಯಗನುಷ್ಠಿತಾನಾಂ ಸರ್ಗಪ್ರಾಪ್ತಿಃ ಫಲಂ ಸ್ವಭಾವತಃ । "ವರ್ಣಾಃ ಆಶ್ರಮಾಶ್ಚ ಸ್ವಕರ್ಮನಿಷ್ಠಾಃ ಪ್ರೇತ್ಯ ಕರ್ಮಫಲಮ್ ಅನುಭೂಯ ತತಃ ಶೇಷೇಣ ವಿಶಿಷ್ಟದೇಶಜಾತಿಕುಲಧರ್ಮಾಯುಃಶ್ರುತವೃತ್ತವಿತ್ತಸುಖಮೇಧಸೋ ಜನ್ಮ ಪ್ರತಿಪದ್ಯನ್ತೇ" ಇತ್ಯಾದಿಸ್ಮೃತಿಭ್ಯಃ || ಗೀ. ೧೮-೪೫.

ಅಭ್ಯುದಯಾರ್ಥೋಽಪಿ ಯಃ ಪ್ರವೃತ್ತಿಲಕ್ಷಣೋ ಧರ್ಮೋ ವರ್ಣಾನ್ ಆಶ್ರಮಾಂಶ್ಚ ಉದ್ದಿಶ್ಯ ವಿಹಿತಃ ಸ ದೇವಾದಿಸ್ಥಾನಪ್ರಾಪ್ತಿಹೇತುರಪಿ ಸನ್ ಈಶ್ವರಾರ್ಪಣಬುದ್ಧ್ಯಾ ಅನುಷ್ಠೀಯಮಾನಃ ಸತ್ತ್ವಶುದ್ಧಯೇ ಭವತಿ ಫಲಾಭಿಸಂಧಿವರ್ಜಿತಃ । ಶುದ್ಧಸತ್ತ್ವಸ್ಯ ಚ ಜ್ಞಾನನಿಷ್ಠಾಯೋಗ್ಯತಾಪ್ರಾಪ್ತಿದ್ವಾರೇಣ ಜ್ಞಾನೋತ್ಪತ್ತಿಹೇತುತ್ವೇನ ಚ ನಿಃಶ್ರೇಯಸಹೇತುತ್ವಮಪಿ ಪ್ರತಿಪದ್ಯತೇ || ಗೀತಾ. ಅವತರಣಿಕೆ.]

(೨) ಕರ್ಮಿಗಳಿಗೆ ಕರ್ಮಫಲವಾಗಿ ಚಂದ್ರ(ಪಿತೃ)ಲೋಕಪ್ರಾಪ್ತಿಯಾಗಿ ಅಲ್ಲಿ ಭೋಗವು ಕ್ಷಯಿಸಿದಮೇಲೆ ಈ ಲೋಕಕ್ಕೆ ಮರಳಿ ಬಂದು ಹುಟ್ಟುವದೆಂಬ ಫಲವಾಗುವದು. ಭಗವಂತನನ್ನು ಉಪಾಸನೆಮಾಡಿದವರಿಗೆ ದೇವಯಾನ ಮಾರ್ಗದಿಂದ ಬ್ರಹ್ಮಲೋಕಪ್ರಾಪ್ತಿಯೂ ಅಲ್ಲಿ ಜ್ಞಾನವಾದರೆ ಬ್ರಹ್ಮನೊಡನೆ ಕಲ್ಪಾಂತದಲ್ಲಿ ಪರಬ್ರಹ್ಮಸಾಯುಜ್ಯವೂ ಆಗುವದು ಇದು ಕ್ರಮಮುಕ್ತಿ. ಕರ್ಮದಿಂದ ಚಿತ್ತಶುದ್ಧಿಯನ್ನು ಪಡೆದು ಜ್ಞಾನಕ್ಕಾಗಿ ಶ್ರವಣಮನನನಿದಿಧ್ಯಾಸನ

ಗಳನ್ನು ಮಾಡಿದವರಿಗೆ ನಿದಿಧ್ಯಾಸನ (ಧ್ಯಾನಯೋಗ)ದ ಫಲವಾಗಿ ಬ್ರಹ್ಮಾತ್ಮೈಕತ್ವ ದರ್ಶನದ ಮೂಲಕ ಸದ್ಯೋಮುಕ್ತಿಯಾಗುವದು, ಎಂದರೆ ಇಲ್ಲಿಯೇ ಅವರು ಬ್ರಹ್ಮದಲ್ಲಿ ಬೆರತುಹೋಗುವರು. ವ್ಯವಹಾರದೃಷ್ಟಿಯಿಂದ ಜ್ಞಾನಿಗಳಿಗೆ ಸಂಚಿತಾಗಾಮಿಕರ್ಮಗಳು ಮಾತ್ರ ನಾಶವಾಗುವವು. ಪ್ರಾರಬ್ಧಕರ್ಮವು ಫಲವನ್ನು ಕೊಟ್ಟುಬಿಟ್ಟಿರುವದರಿಂದ ಆ ಕರ್ಮವೇಗಕ್ಷಯವಾಗಿ ಈ ಶರೀರವು ಬಿದ್ದುಹೋಗುವವರೆಗೂ ಅದರ ಫಲವನ್ನು ಅನುಭವಿಸಿದ ಬಳಿಕ ಜ್ಞಾನಿಗಳು ಪರಮಾತ್ಮನಲ್ಲಿ ಸೇರಿಹೋಗುವರು ; ಮತ್ತೆ ಅವರಿಗೆ ಕರ್ಮಿಗಳಂತೆ ಜನ್ಮವಾಗುವದಿಲ್ಲ. ಪರಮಾರ್ಥದೃಷ್ಟಿಯಿಂದ ನೋಡಿದರೆ ತತ್ತ್ವಜ್ಞಾನಿಯು 'ಹಿಂದೆ,ಈಗ, ಮುಂದೆ- ಎಂದಿಗೂ ನನಗೆ ಕರ್ಮದ ಸಂಬಂಧವಿಲ್ಲ' ಎಂದೇ ನಿಶ್ಚಯಿಸಿರುತ್ತಾನಾದ್ದರಿಂದ ಜ್ಞಾನಕ್ಕೆ ಸರ್ವಕರ್ಮನಾಶವೂ ಸದ್ಯೋಮುಕ್ತಿಯೂ ಫಲವಾಗುವದು.

[ಧೂಮೋ ರಾತ್ರಿಃ ಧೂಮಾಭಿಮಾನಿನೀ ರಾತ್ರ್ಯಭಿಮಾನಿನೀ ಚ ದೇವತಾ । ತಥಾ ಕೃಷ್ಣಃ ಕೃಷ್ಣಪಕ್ಷದೇವತಾ । ಷಣ್ಮಾಸಾ ದಕ್ಷಿಣಾಯನಮ್ ಇತಿ ಚ ಪೂರ್ವವತ್ ದೇವತೈವ । ತತ್ರ ಚನ್ದ್ರಮಸಿ ಭವಂ ಚಾನ್ದ್ರಮಸಂ ಜ್ಯೋತಿಃ ಫಲಮ್ ಇಷ್ಟಾದಿಕಾರೀ ಯೋಗೀ ಕರ್ಮೀ ಪ್ರಾಪ್ಯ ಭುಕ್ತ್ವಾ ತತ್ಕ್ಷಯಾತ್ ಇಹ ಪುನಃ ನಿವರ್ತತೇ ॥ ಗೀ. ೮-೨೫.

ದೇವಯಾನೇನ ಪಥಾ ಯೇ ಬ್ರಹ್ಮಲೋಕಂ ಶಾಸ್ತ್ರೋಕ್ತ ವಿಶೇಷಣಂ ಗಚ್ಛನ್ತಿ ತೇ ತಂ ಪ್ರಾಪ್ಯ ನ ಚನ್ದ್ರಲೋಕಾದಿವ ಭುಕ್ತಭೋಗಾ ಆವರ್ತನ್ತೇ ॥ ಸೂ. ಭಾ. ೪-೪-೨೨.

ಕಾರ್ಯಬ್ರಹ್ಮಲೋಕಪ್ರಲಯಪ್ರತ್ಯುಪಸ್ಥಾನೇ ಸತಿ ತತ್ರೈವೋತ್ಪನ್ನಸಮ್ಯಗ್ದರ್ಶನಾಃ ಸನ್ತಸ್ತದಧ್ಯಕ್ಷೇಣ ಸಹ ಅತಃಪರಂ ಪರಿಶುದ್ಧಂ ವಿಷ್ಣೋಃ ಪರಮಂ ಪದಂ ಪ್ರತಿಪದ್ಯನ್ತೇ । ಇತ್ಥಂ ಕ್ರಮಮುಕ್ತಿರನಾವೃತ್ತ್ಯಾದಿಶ್ರುತ್ಯಭಿಧಾನೇಭ್ಯೋಽಭ್ಯುಪಗನ್ತವ್ಯಾ ಸೂ. ಭಾ. ೪-೩-೧೦.

ಸರ್ವಭೂತಸ್ಥಂ ಸರ್ವೇಷು ಭೂತೇಷು ಸ್ಥಿತಂ ಸ್ವಮ್ ಆತ್ಮಾನಂ ಸರ್ವಭೂತಾನಿ ಚ ಆತ್ಮನಿ ಬ್ರಹ್ಮಾದೀನಿ ಸ್ತಮ್ಬಪರ್ಯನ್ತಾನಿ ಚ ಸರ್ವಭೂತಾನಿ ಆತ್ಮನಿ ಏಕತಾಂ ಗತಾನಿ ಈಕ್ಷತೇ ಪಶ್ಯತಿ ಯೋಗಯುಕ್ತಾತ್ಮಾ ಸಮಾಹಿತಾನ್ತಃಕರಣಃ । ಸರ್ವತ್ರ ಸಮದರ್ಶನಃ । ಸರ್ವೇಷು ಬ್ರಹ್ಮಾದಿಸ್ಥಾವರಾನ್ತೇಷು ವಿಷಮೇಷು ಸರ್ವಭೂತೇಷು ಸಮಂ ನಿರ್ವಿಶೇಷಂ ಬ್ರಹ್ಮಾತ್ಮೈಕತ್ವವಿಷಯಂ

ದರ್ಶನಾದಿಜ್ಞಾನಂ ಯಸ್ಯ ಸ ಸರ್ವತ್ರಸಮದರ್ಶನಃ ||
ಗೀ. ೬-೨೯.

ತಂ ಪುರಾಣಮ್ ಪುರಾತನಮ್ ಅಧ್ಯಾತ್ಮಯೋಗಾಧಿಗಮೇನ ವಿಷಯೇಭ್ಯಃ ಪ್ರತಿಸಂಹೃತ್ಯ ಚೇತಸ ಆತ್ಮನಿ ಸಮಾಧಾನಮ್ ಅಧ್ಯಾತ್ಮಯೋಗಃ । ತಸ್ಯ ಅಧಿಗಮಃ । ತೇನ-ಮತ್ವಾ ದೇವಮ್ ಆತ್ಮಾನಂ ಧೀರೋ ಹರ್ಷಶೋಕೌ ಆತ್ಮನಃ ಉತ್ಕರ್ಷಾಪಕರ್ಷಯೋರಭಾವಾತ್ ಜಹಾತಿ || ಕಾ. ಭಾ. ೧-೨-೧೨.

ತಸ್ಮಿನ್ ಮಾರ್ಗೇ ಪ್ರಯಾತಾ ಮೃತಾಃ ಗಚ್ಛನ್ತಿ ಬ್ರಹ್ಮ ಬ್ರಹ್ಮವಿದೋ ಬ್ರಹ್ಮೋಪಾಸಕಾಃ ಬ್ರಹ್ಮೋಪಾಸನಾಪರಾ ಜನಾಃ | 'ಕ್ರಮೇಣ' ಇತಿ ವಾಕ್ಯಶೇಷಃ । ನ ಹಿ ಸದ್ಯೋಮುಕ್ತಿಭಾಜಾಂ ಸಮ್ಯಗ್ದರ್ಶನನಿಷ್ಠಾನಾಂ ಗತಿರಾಗತಿರ್ವಾ ಕ್ವಚಿದಸ್ತಿ । ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ (ಬೃ. ೪-೪-೬) ಇತಿ ಶ್ರುತೇಃ; ಬ್ರಹ್ಮಸಲ್ಲೀನಪ್ರಾಣಾ ಏವ ತೇ ಬ್ರಹ್ಮಮಯಾ ಬ್ರಹ್ಮಭೂತಾ ಏವ ತೇ|| ಗೀ. ಭಾ. ೮-೨೪.

ನ ತಾವದನಾರಬ್ಧಕಾರ್ಯಂ ಕರ್ಮಾಶಯಮ್ ಜ್ಞಾನೋತ್ಪತ್ತಿರುಪಪದ್ಯತೇ ಆಶ್ರಿತೇ ಚ ತಸ್ಮಿನ್ ಕುಲಾಲಚಕ್ರವತ್ ಪ್ರವೃತ್ತವೇಗಸ್ಯ ಅನ್ತರಾಲೇ ಪ್ರತಿಬನ್ಧಾಸಂಭವಾತ್, ಭವತಿ ವೇಗಕ್ಷಯ ಪ್ರತಿಪಾಲನಮ್ || ಸೂ. ಭಾ. ೪-೧-೧೫.

ಪೂರ್ವಸಿದ್ಧಕರ್ತೃತ್ವಭೋಕ್ತೃತ್ವವಿಪರೀತಂ ಹಿ ತ್ರಿಷ್ವಪಿ ಕಾಲೇಷು ಅಕರ್ತೃತ್ವಾಭೋಕ್ತೃತ್ವಸ್ವರೂಪಂ ಬ್ರಹ್ಮಾಹಮಸ್ಮಿ, ನೇತಃಪೂರ್ವಮಪಿ ಕರ್ತಾ ಭೋಕ್ತಾ ವಾ ಅಹಮಾಸಂ ನೇದಾನೀಮ್ ನಾಪಿ ಭವಿಷ್ಯತ್ಕಾಲೇ ಇತಿ ಬ್ರಹ್ಮವಿದವಗಚ್ಛತಿ ||
ಸೂ. ಭಾ. ೪-೧-೧೩.]

(೩) ಪರಮೇಶ್ವರನು ಜನ್ಮರಹಿತನೂ ಅವ್ಯಯನೂ ಆದರೂ ತನ್ನ ತ್ರಿಗುಣಾತ್ಮಕಮಾಯೆಯನ್ನು ವಶದಲ್ಲಿಟ್ಟುಕೊಂಡು ದೇಹವುಳ್ಳವನಂತೆಯೂ ಹುಟ್ಟಿದವನಂತೆಯೂ ಕಾಣಿಸಿಕೊಂಡು ಲೋಕಾನುಗ್ರಹವನ್ನು ಮಾಡುತ್ತಾನೆ. ಇದು ಅವನಿಗೆ ಮಿಕ್ಕ ಜೀವರಿಗೆ ಆಗುವಂಥ ಜನ್ಮವಲ್ಲ. ಅಪಾಂತರತಮಸ್ಸು ಮುಂತಾದ ಕೆಲವರು ಜ್ಞಾನವಾದಮೇಲೂ ಪರಮೇಶ್ವರನಿಂದ ನಿಯುಕ್ತರಾಗಿ ತಮ್ಮತಮ್ಮ ಅಧಿಕಾರವಿರುವವರೆಗೂ ಬದುಕಿರುತ್ತಾರೆ ; ಅವರು ತಮ್ಮ ಪ್ರಾರಬ್ಧಕರ್ಮವು ಮುಗಿಯದೆ ಇರುವವರಿಂದ ಅನೇಕ ಶರೀರಗಳನ್ನು ಸ್ವತಂತ್ರ

ರಾಗಿಯೇ ಪಡೆಯುತ್ತಾರಾದ್ದರಿಂದ, 'ಮುಕ್ತರಿಗೂ ಆವೃತ್ತಿಯಾಗಲಿ !'–ಎಂದು ಶಂಕಿಸುವಡಕ್ಕೆ ಬರುವದಿಲ್ಲ. ಇನ್ನು ಕೆಲವರು ಮಹರ್ಷಿಗಳು ಸಗುಣವಿದ್ಯೆಯಲ್ಲಿ ಆಸಕ್ತರಾಗಿದ್ದು ಜನ್ಮಾಂತರವನ್ನು ಪಡೆದು, ಆ ಫಲದಲ್ಲಿ ವೈರಾಗ್ಯವನ್ನು ಹೊಂದಿ ಪರಮಾತ್ಮಜ್ಞಾನದಿಂದ ಮುಕ್ತರಾಗುತ್ತಾರೆ. ಆದ್ದರಿಂದ ಅವರ ಉದಾಹರಣೆಯೂ ಜ್ಞಾನಕ್ಕೆ ಸದ್ಯೋಮುಕ್ತಿಯುಂಟೊ, ಇಲ್ಲವೊ ?–ಎಂಬ ಶಂಕೆಗೆ ಅವಕಾಶವನ್ನು ಕೊಡುವದಿಲ್ಲ.

[ಸ ಚ ಭಗವಾನ್ ಜ್ಞಾನೈಶ್ವರ್ಯಶಕ್ತಿಬಲವೀರ್ಯತೇಜೋಭಿಃ ಸದಾ ಸಂಪನ್ನಃ ತ್ರಿಗುಣಾತ್ಮಿಕಾಂ ವೈಷ್ಣವೀಂ ಮಾಯಾಂ ಮೂಲಪ್ರಕೃತಿಂ (?) ವಶೀಕೃತ್ಯ ಅಜೋಽವ್ಯಯೋ ಭೂತಾನಾಮ್ ಈಶ್ವರೋ ನಿತ್ಯಶುದ್ಧಬುದ್ಧಮುಕ್ತಸ್ವಭಾವೋಽಪಿ ಸನ್ ಸ್ವಮಾಯಯಾ ದೇಹವಾನಿವ ಜಾತ ಇವ ಚ ಲೋಕಾನುಗ್ರಹಂ ಕುರ್ವನ್ ಲಕ್ಷ್ಯತೇ ॥ ಗೀ. ಅವತರಣಿಕೆ.

ಏವಮ್ ಅಪಾನ್ತರತಮಃಪ್ರಭೃತಯೋಽಪಿ ಈಶ್ವರಾಃ ಪರಮೇಶ್ವರೇಣ ತೇಷು ತೇಷು ಅಧಿಕಾರೇಷು ನಿಯುಕ್ತಾಃ ಸನ್ತಃ ಸತ್ಯಪಿ ಸಮ್ಯಗ್ದರ್ಶನೇ ಕೈವಲ್ಯಹೇತೌ ಅಕ್ಷೀಣಕರ್ಮಾಣಃ, ಯಾವದಧಿಕಾರಮ್ ಅವತಿಷ್ಠನ್ತೇ । ತದವಸಾನೇ ಚ ಅಪವೃಜ್ಯನ್ತೇ ಇತ್ಯವಿರುದ್ಧಮ್ ॥ ಸೂ. ಭಾ. ೩-೩-೩೨.

ಜ್ಞಾನಾನ್ತರೇಷು ಚ ಐಶ್ವರ್ಯಾದಿಫಲೇಷು ಆಸಕ್ತಾಃ ಸ್ಯುರ್ಮಹರ್ಷಯಃ । ತೇ ಪಶ್ಚಾತ್ ಐಶ್ವರ್ಯಕ್ಷಯದರ್ಶನೇನ ನಿರ್ವಿಣ್ಣಾಃ ಪರಮಾತ್ಮಜ್ಞಾನೇ ಪರಿನಿಷ್ಠಿತಾಃ ಕೈವಲ್ಯಂ ಪ್ರಾಪುಃ ಇತ್ಯುಪಪದ್ಯತೇ ॥ ಸೂ. ಭಾ ೩-೩-೩೨.]

(೪) ಮುಕ್ತಿಗೆ ಸಾಧನವೇನು ? –ಎಂಬ ಪ್ರಶ್ನೆಗೆ ಆಚಾರ್ಯರು ಕೊಟ್ಟಿರುವ ಉತ್ತರವಿದು : ಸ್ವವರ್ಣಾಶ್ರಮಾಚಾರಧರ್ಮವನ್ನು ಈಶ್ವರಾರ್ಪಣಬುದ್ಧಿಯಿಂದ ಮಾಡುವದು, ಸಾಧನಚತುಷ್ಟಯಸಂಪತ್ತಿ, ಸರ್ವಕರ್ಮಸಂನ್ಯಾಸಪೂರ್ವಕವಾಗಿ ಶ್ರವಣಮನನನಿರಂತರಪರಮಾತ್ಮಧ್ಯಾನ– ಇವು ಒಂದಕ್ಕಿಂತ ಒಂದು ಹೆಚ್ಚುಹೆಚ್ಚು ಅಂತರಂಗಸಾಧವಾಗಿರುತ್ತವೆ. ಇದರಿಂದ ಜ್ಞಾನೋತ್ಪತ್ತಿಯಾಗಿ ಮೋಕ್ಷವು ಲಭಿಸುತ್ತದೆ. ಇದೆಲ್ಲ ಅಧ್ಯಾರೋಪದೃಷ್ಟಿಯಿಂದಲೇ ಹೇಳಿದ್ದು. ಪರಮಾರ್ಥದೃಷ್ಟಿಯಿಂದಲಾದರೆ ಸಾಧನ, ಬಂಧ, ಮುಕ್ತಿ– ಎಲ್ಲವೂ ಅಪರಮಾರ್ಥವೇ, ಬ್ರಹ್ಮವೊಂದೇ ಸತ್ಯ.

[ತಸ್ಮಾತ್, ಯಜ್ಞಾದೀನಿ ಶಮದಮಾದೀನಿ ಚ ಯಥಾಶ್ರಮಂ ಸರ್ವಾಣ್ಯೇವ ಆಶ್ರಮಕರ್ಮಾಣಿ ವಿದ್ಯೋತ್ಪತ್ತಾ ಅಪೇಕ್ಷಿ

ತವ್ಯಾನಿ । ತತ್ರಾಪಿ ಏವಂವಿತ್ ಇತಿ ವಿದ್ಯಾಸಂಯೋಗಾತ್ ಪ್ರತ್ಯಾಸನ್ನಾನಿ ವಿದ್ಯಾಸಾಧನಾನಿ ಶಮಾದೀನಿ, ವಿವಿದಿಷಾಸಂಯೋಗಾತ್ತು ಬಾಹ್ಯತರಾಣಿ ಯಜ್ಞಾದೀನಿ ಇತಿ ವಿವೇಕ್ತವ್ಯಮ್ ॥
ಸೂ. ಭಾ. ೩-೪-೨೭.

ತಸ್ಮಾತ್, ವಿದ್ಯಾಸಂಯುಕ್ತಂ ನಿತ್ಯಮ್ ಅಗ್ನಿಹೋತ್ರಾದಿ ವಿದ್ಯಾವಿಹೀನಂ ಚ ಉಭಯಮಪಿ ಮುಮುಕ್ಷುಣಾ ಮೋಕ್ಷ ಪ್ರಯೋಜನೋದ್ದೇಶೇನ ಇಹಜನ್ಮನಿ ಜನ್ಮಾನ್ತರೇ ಚ ಪ್ರಾಗ್ ಜ್ಞಾನೋತ್ಪತ್ತೇಃ ಕೃತಂ ಯತ್ ತದ್ ಯಥಾಸಾಮರ್ಥ್ಯಂ ಬ್ರಹ್ಮಾಧಿಗಮಪ್ರತಿಬನ್ಧಕಾರಣೋಪಾತ್ತದುರಿತಕ್ಷಯಹೇತುತ್ವ ದ್ವಾರೇಣ ಬ್ರಹ್ಮಾಧಿಗಮಕಾರಣತ್ವಂ ಪ್ರತಿಪದ್ಯಮಾನಂ ಶ್ರವಣಮನನ ಶ್ರದ್ಧಾತಾತ್ಪರ್ಯಾದ್ಯನ್ತರಙ್ಗ ಕಾರಣಾಪೇಕ್ಷಂ ಬ್ರಹ್ಮವಿದ್ಯಯಾ ಸಹ ಏಕಕಾರ್ಯಂ ಭವತೀತಿ ಸ್ಥಿತಮ್ ॥
ಸೂ. ಭಾ. ೪-೧-೧೮.

ಬ್ರಹ್ಮಜ್ಞಾನಪರಿಪಾಕಾಙ್ಗತ್ವಾಚ್ಚ ಪಾರಿವ್ರಾಜ್ಯಸ್ಯ ॥
ಸೂ. ಭಾ. ೩-೪-೨೦.]

## ೨೧. ಆಚಾರ್ಯರ ವೇದಾಂತಸಂಪ್ರದಾಯ

### ಆಚಾರ್ಯರ ಸಂಪ್ರದಾಯದ ಪೂರ್ವಾಚಾರ್ಯರುಗಳು

೧೫೩. ಆಚಾರ್ಯರು ಅದ್ವೈತಸಿದ್ಧಾಂತವನ್ನು ಹೊಸದಾಗಿ ಸ್ಥಾಪನೆ ಮಾಡಿದರೆ?–ಎಂದರೆ ಇಲ್ಲವೆಂದು ಎಲ್ಲರೂ ಒಕ್ಕೊರಲಿನಿಂದ ಸಾರಿರುತ್ತಾರೆ. ಆಚಾರ್ಯರ ಹಿಂದೆ ಗೋವಿಂದಭಗವತ್ಪಾದರೂ ಗೌಡಪಾದರೂ ಇದ್ದರು. ಗೌಡಪಾದರು ಮಾಂಡೂಕ್ಯೋಪನಿಷತ್ತಿನ ಮೇಲೆ ಬರೆದಿರುವ ನಾಲ್ಕು ಪ್ರಕರಣಗಳ ರೂಪವಾದ ಕಾರಿಕೆಗಳು-ಇಂದಿಗೂ ಆಚಾರ್ಯರ ಅದ್ವೈತಕ್ಕೆ ಆಧಾರವಾಗಿರುವ ಅತ್ಯಂತ ಪ್ರಾಚೀನವಾದ ಆಕರಗ್ರಂಥವೆಂದು ಎಲ್ಲರೂ ಮನ್ನಿಸಿರುತ್ತಾರೆ. ಸೂತ್ರಭಾಷ್ಯದಲ್ಲಿ ಗೌಡಪಾದರನ್ನು 'ಹಾಗೆಂದು ಸಂಪ್ರದಾಯವನ್ನು ಬಲ್ಲವರು ಹೇಳಿಯೂ ಇರುತ್ತಾರೆ' (ತಥಾ ಚ ಸಂಪ್ರದಾಯವಿದೋ ವದನ್ತಿ ಸೂ. ಭಾ. ೧–೪–೧೪), 'ಈ ವಿಷಯದಲ್ಲಿ ವೇದಾಂತಾರ್ಥದ ಸಂಪ್ರದಾಯವನ್ನು ಬಲ್ಲ ಆಚಾರ್ಯರಿಂದ ಹೀಗೆಂದು ಉಕ್ತವಾಗಿದೆ' (ಅತ್ರೋಕ್ತಂ ವೇದಾನ್ತಾರ್ಥಸಂಪ್ರದಾಯವಿದ್ಭಿರಾಚಾರ್ಯೈಃ ಸೂ ಭಾ. ೨–೧–೯) ಎಂದು ಗೌರವಿಸಿರುವದು ಕಂಡುಬರುತ್ತದೆ.

ಇದರ ಜೊತೆಗೆ ಆಚಾರ್ಯರು ಇಂಥವರೆಂದು ನಿಶ್ಚಿತವಾಗಿ ಗೊತ್ತಾಗದ ಕೆಲವು ಆಚಾರ್ಯರುಗಳ ಸಂಮತಿಯನ್ನು ತಮ್ಮ ಭಾಷ್ಯಗಳಲ್ಲಿ ಅಲ್ಲಲ್ಲಿ ಉದಾಹರಿಸಿರುತ್ತಾರೆ. ಉದಾಹರಣೆಗೆ ಗೀತಾಭಾಷ್ಯದಲ್ಲಿ ಈ ವಾಕ್ಯಗಳಿವೆ. 'ಆದ್ದರಿಂದ ಸಂಪ್ರದಾಯವನ್ನರಿಯುವದನು ಸರ್ವಶಾಸ್ತ್ರಗಳನ್ನೂ ಬಲ್ಲವನಾದರೂ ಅವನನ್ನು ಮೂರ್ಖನಂತೆಯೇ ಉಪೇಕ್ಷಿಸಬೇಕು' (ತಸ್ಮಾದಸಂಪ್ರದಾಯವಿತ್ ಸರ್ವಶಾಸ್ತ್ರವಿದಪಿ ಮೂರ್ಖವದೇವ ಉಪೇಕ್ಷಣೀಯಃ ಗೀ. ಭಾ ೧೩–೨), 'ಗುರುಸಂಪ್ರದಾಯವಿಲ್ಲದವರಿಗೆ ಹೀಗೇ ಸರಿ' (ಸತ್ಯಮೇವಂ ಗುರುಸಂಪ್ರದಾಯರಹಿತಾನಾಮ್ ಗೀ. ಭಾ. ೧೮–೫೦), 'ಆದ್ದರಿಂದಲೇ ಅಧ್ಯಾರೋಪಾಪವಾದಗಳಿಂದ ನಿಷ್ಪ್ರಪಂಚವಾದದ್ದನ್ನು ಬಿತ್ತರಿಸಲಾಗುತ್ತದೆ' ಎಂದು ಸಂಪ್ರದಾಯವನ್ನು ಬಲ್ಲವರ ವಚನವಿದೆ (ತಥಾ ಹಿ ಸಂಪ್ರದಾಯವಿದಾಂ ವಚನಮ್–ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಞ್ಚಂ ಪ್ರಪಞ್ಚ್ಯತ ಇತಿ|| ಗೀ. ಭಾ. ೧೩–೧೩) ಎಂಬ ವಾಕ್ಯಗಳಿವೆ. ಬೃಹದಾರಣ್ಯಕಭಾಷ್ಯದಲ್ಲಿ 'ಇಲ್ಲಿ ಸಂಪ್ರದಾಯವನ್ನು ಬಲ್ಲವರು ಒಂದು ಕಥೆಯನ್ನು ಹೇಳಿರುತ್ತಾರೆ' (ಅತ್ರ ಚ ಸಂಪ್ರದಾಯವಿದ ಆಖ್ಯಾಯಿಕಾಮಾಚಕ್ಷತೇ ಬೃ ಭಾ. ೨-೧-೨೦), ಬ್ರಹ್ಮಸೂತ್ರದಲ್ಲಿ ಸಮನ್ವಯಸೂತ್ರಭಾಷ್ಯದ ಕೊನೆಯಲ್ಲಿ ಕೆಲವು ಅದ್ವೈತಸಂಪ್ರದಾಯದ ಶ್ಲೋಕಗಳನ್ನು ಉದಾಹರಿಸಿದೆಯೆಂದೂ ಆ ಶ್ಲೋಕಗಳು ಸುಂದರಪಾಂಡ್ಯನವೆಂದು ಕೆಲವರ ಹೇಳಿಕೆಯಿದೆ ಎಂದೂ ಹಿಂದೆ* (ಪು.೨೫೫) ಹೇಳಿರುತ್ತೇವೆ. ಈ ಎಲ್ಲಾ ಕಾರಣ

* ಗ್ರಂಥಕರ್ತರ ಲಕ್ಷ್ಯಕ್ಕೆ ಬರದೆಯೇ ಈವರೆಗಿನ ಖಂಡಸಂಖ್ಯೆಗಳು ತಪ್ಪಾಗಿ ಅಚ್ಚಾಗಿಟ್ಟವೆ ; ಆದ್ದರಿಂದ ಇನ್ನುಮುಂದೆ ಖಂಡಸಂಖ್ಯೆಯ ಬದಲು ಪುಟಸಂಖ್ಯೆಯನ್ನು ಕೊಡಲಾಗುತ್ತದೆ. ಈ ವಿಷಯಕ್ಕೆ ಶುದ್ಧಾಶುದ್ಧಪತ್ರಿಕೆಯನ್ನು ನೋಡಿರಿ.

ಗಳಿಂದ ಆಚಾರ್ಯರ ವೇದಾಂತಪ್ರಕ್ರಿಯೆಯು ಅವರ ಸ್ವತಃಕಲ್ಪನೆಯಲ್ಲವೆಂದೂ ಆ ಸಂಪ್ರದಾಯದವರು ಹಿಂದೆಯೇ ಅನೇಕ ಆಚಾರ್ಯರು ಆಗಿಹೋಗಿದ್ದರೆಂದೂ ನಾವು ಧಾರಾಳವಾಗಿ ನಂಬಬಹುದಾಗಿದೆ.

## ದ್ರವಿಡಾಚಾರ್ಯ, ಬ್ರಹ್ಮನಂದಿ, ಉಪವರ್ಷ

೧೫೪. ಆಚಾರ್ಯರು ಹೆಸರಿಸದೆ ಉದಾಹರಿಸಿರುವ ಪೂರ್ವಾಚಾರ್ಯರು ಗಳಲ್ಲಿ ದ್ರವಿಡಾಚಾರ್ಯರು ಒಬ್ಬರು. ಮಾಂಡೂಕ್ಯೋಪನಿಷತ್ತಿನ ಭಾಷ್ಯದಲ್ಲಿ 'ಸಿದ್ಧಂ ತು ನಿವರ್ತಕತ್ವಾತ್ ಇತಿ ಆಗಮವಿದಾಂ ಸೂತ್ರಮ್' (ಆತ್ಮನಲ್ಲಿ ಅಧ್ಯಾರೋಪವಾಗಿರುವ ಧರ್ಮಗಳನ್ನು ನಿವೃತ್ತಿಮಾಡುವದರಿಂದಲೇ ಶಾಸ್ತ್ರಕ್ಕೆ ಪ್ರಾಮಾಣ್ಯವು ಎಂದು ಆಗಮವನ್ನು ಬಲ್ಲವರ ಸೂತ್ರವಿದೆ)- ಎಂದು ಬರೆದಿರುತ್ತದೆ. ಇಲ್ಲಿ ಪರಾಮೃಷ್ಟರಾಗಿರುವ ಆಚಾರ್ಯರು ದ್ರವಿಡಾಚಾರ್ಯರೆಂದು ಟೀಕಾಕಾರ ಆನಂದಗಿರಿಯು ಬರೆದಿರುತ್ತಾನೆ. ಸೃಷ್ಟಿಯನ್ನು ಹೇಳುವದು ಆತ್ಮೈಕತ್ವವನ್ನು ತಿಳಿಸಿಕೊಡುವದಕ್ಕೆ ಎಂದು ಸಂಪ್ರದಾಯವನ್ನು ಬಲ್ಲವರ ವಚನವಿದೆ ಎಂದು ಬೃಹದಾರಣ್ಯಕಭಾಷ್ಯದಲ್ಲಿರುವದನ್ನು ಆಗಲೆ ತಿಳಿಸಿರುತ್ತೇವಷ್ಟೆ ? ಅದೂ ದ್ರವಿಡಾಚಾರ್ಯರ ವಾಕ್ಯವೆಂದು ಟೀಕಾಕಾರ ಆನಂದಗಿರಿ ಹೇಳಿರುತ್ತಾನೆ. ಈ ದ್ರವಿಡಾಚಾರ್ಯರು ಛಾಂದೋಗ್ಯದಮೇಲೆ ಒಂದು ವಿಸ್ತಾರವಾದ ಭಾಷ್ಯವನ್ನು ಬರೆದಿದ್ದರೆಂದು ಭಾಷ್ಯಟೀಕಾಕಾರನು ತಿಳಿಸಿರುತ್ತಾನೆ. ಈ ದ್ರವಿಡಾಚಾರ್ಯರು ಯಾರೆಂಬುದು ಗೊತ್ತಾಗಿ ತಿಳಿದಿಲ್ಲ ; ವಿಶಿಷ್ಟಾದ್ವೈತಿಗಳು ಹೇಳುವ ದ್ರಮಿಡಾಚಾರ್ಯರು ಇವರಲ್ಲ- ಎಂಬುದಕ್ಕೆ ಪ್ರಮಾಣವಿದೆ. ಏಕೆಂದರೆ ದ್ರಮಿಡಾಚಾರ್ಯರು ಸಗುಣಬ್ರಹ್ಮವಾದಿಗಳು, ಆಚಾರ್ಯರು ಉದಾಹರಿಸಿರುವ ದ್ರವಿಡಾಚಾರ್ಯರು ಅದ್ವೈತಿಗಳು.

ಬ್ರಹ್ಮನಂದಿ ಎಂಬ ವಾಕ್ಯಕಾರನು ಛಾಂದೋಗ್ಯಾಭಿಪ್ರಾಯವನ್ನು ವಿವರಿಸಿದ್ದನಂತೆ. ಈತನೂ ಅದ್ವೈತಿಯೇ, ವಿವರ್ತವಾದಿಯೇ- ಎಂಬುದು ಸಂಕ್ಷೇಪಶಾರೀರಕದ (೩-೨೧೭) ಮೇಲೆ ವ್ಯಾಖ್ಯಾನವನ್ನು ಬರೆದಿರುವ ಮಧುಸೂದನಸರಸ್ವತಿಗಳು ಉದಾಹರಿಸಿರುವ ವಾಕ್ಯಗಳಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಭಾಸ್ಕರರು 'ಪರಿಣಾಮಸ್ತು ಸ್ಯಾದ್ದಧ್ಯಾದಿವತ್' ಎಂದು ಉದಾಹರಿಸಿರುವ ವಾಕ್ಯಕಾರನಿಗಿಂತಲೂ ರಾಮಾನುಜಾಚಾರ್ಯರು ವೇದಾರ್ಥಸಂಗ್ರಹದಲ್ಲಿ ಪರಾಮರ್ಶಿಸಿರುವ ವಿಶಿಷ್ಟಾದ್ವೈತಿ ಟಂಕನೆಂಬ ವಾಕ್ಯಕಾರನಿಗಿಂತಲೂ ಈತನು ಭಿನ್ನನು ಎಂದೇ ತಿಳಿಯಬೇಕಾಗಿದೆ.

ಸೂತ್ರಭಾಷ್ಯದಲ್ಲಿ 'ಅತ ಏವ ಚ ಭಗವತಾ ಉಪವರ್ಷೇಣ ಪ್ರಥಮೇ ತನ್ತ್ರೇ ಆತ್ಮಾಸ್ತಿತ್ವಾಭಿಧಾನಪ್ರಸಕ್ತೌ ಶಾರೀರಕೇ ವಕ್ಷ್ಯಾಮಃ ಇತಿ ಉದ್ಧಾರಃ

ಕೃತಃ (ಆದ್ದರಿಂದಲೇ ಭಗವಂತನಾದ ಉಪವರ್ಷನು ಪ್ರಥಮತಂತ್ರವಾದ ಮೀಮಾಂಸದಲ್ಲಿ ಆತ್ಮನಿಧಾನವನ್ನು ಹೇಳುವ ಪ್ರಸಂಗ ಬಂದಾಗ ಶಾರೀರಕ ದಲ್ಲಿ ಹೇಳುವೆವು ಎಂದು ಬಿಟ್ಟಿರುತ್ತಾರೆ (ಸೂ. ಭಾ. ೩-೩-೫೩) -ಎಂಬ ವಾಕ್ಯ ವಿದೆ. ಇದರಿಂದ ಉಪವರ್ಷರೆಂಬವರು ಪೂರ್ವೋತ್ತರಮೀಮಾಂಸಗಳೆರಡಕ್ಕೂ ವಿವರಣೆಯನ್ನು ಬರೆದ ವೃತ್ತಿಕಾರರೆಂದೂ ಅವರು ಆಚಾರ್ಯರ ಸಂಪ್ರದಾಯದ ಅದ್ವೈತಕ್ಕೆ ಸೇರಿದವರೆಂದೂ ತಿಳಿದುಬರುತ್ತದೆ. ಶಬರಸ್ವಾಮಿಗಳೂ ಇವರನ್ನು (ಜೈ. ಸೂ. ೧-೧-೫) 'ಭಗವಾನ್ ಉಪವರ್ಷಃ' ಎಂದೇ ಬರೆದಿರುವದರಿಂದ ಈ ಆಚಾರ್ಯರು ಬಹಳ ಹಿಂದಿನವರೆಂದು ಒಪ್ಪಬೇಕಾಗುತ್ತದೆ. ಇವರೇ 'ಬೋಧಾ ಯನ'ರೆಂಬ ವಿಶಿಷ್ಟಾದ್ವೈತಸಂಪ್ರದಾಯದ ವೃತ್ತಿಕಾರರೆಂಬ ಕೆಲವರ ನಂಬಿಕೆಗೆ ಆಧಾರವಿಲ್ಲ ; ಏಕೆಂದರೆ ಹಾಗಿದ್ದರೆ ಶಂಕರಾಚಾರ್ಯರು ಇವರನ್ನು ಭಗವಾನ್ ಎಂಬ ಗೌರವಯುಕ್ತವಿಶೇಷಣದಿಂದ ಎಂದಿಗೂ ಕರೆಯುತ್ತಿರಲಿಲ್ಲ.

## ಆಚಾರ್ಯರ ಹಿಂದಿನ ಸಂಪ್ರದಾಯಾಂತರದ ವೃತ್ತಿಕಾರರುಗಳು

೧೫೫. ಶಂಕರಭಗವತ್ಪಾದರಿಗಿಂತ ಹಿಂದೆಯೇ ಬೇರೆಬೇರೆಯ ಸಂಪ್ರ ದಾಯದ ಅದ್ವೈತಿಗಳು ತಮ್ಮತಮ್ಮ ವೃತ್ತಿಗಳನ್ನು ಬರೆದಿದ್ದರೆಂಬುದಕ್ಕೆ ಪ್ರಸ್ಥಾನ ತ್ರಯಭಾಷ್ಯಗಳಲ್ಲಿಯೇ ಆಧಾರವಿದೆ. ಉದಾಹರಣೆಗೆ (೧) ಸಮನ್ವಯ ಸೂತ್ರಭಾಷ್ಯದಲ್ಲಿ ಉಪಾಸನಾವಿಧಿಗೆ ಶೇಷವಾಗಿರುವ ಬ್ರಹ್ಮವನ್ನು ಶಾಸ್ತ್ರ ಪ್ರಮಾಣವು ತಿಳಿಸಿಕೊಡುತ್ತದೆ ಎಂಬುವರ ಪಕ್ಷವನ್ನು ಖಂಡಿಸಿದೆ. (೨) ಆನಂದ ಮಯಾಧಿಕರಣದಲ್ಲಿ (೧-೧-೧೯) ಆನಂದಮಯನು ಪರಮಾತ್ಮನೇ ಎಂಬ ವೃತ್ತಿಕಾರರ ಮತವನ್ನು ಖಂಡಿಸಿದೆ. (೩) ಉಭಯಲಿಂಗಾಧಿಕರಣಭಾಷ್ಯ ದಲ್ಲಿ (೩-೨-೨೧) ಬ್ರಹ್ಮವು ಪ್ರತ್ಯಸ್ತಮಿತಾಶೇಷಪ್ರಪಂಚವಾದ ಒಂದೇ ಆಕಾರ ವುಳ್ಳದ್ದೊ ಅಥವಾ ಪ್ರಪಂಚದಂತೆ ಅನೇಕಾಕಾರವುಳ್ಳದ್ದೊ ? -ಎಂದು ವಿಮರ್ಶಿ ಸುವ ಒಂದು ಅಧಿಕರಣ : ಬ್ರಹ್ಮವು ಸಲ್ಲಕ್ಷಣವೊ, ಬೋಧಲಕ್ಷಣವೊ, ಅಥವಾ ಸದ್ಬೋಧಲಕ್ಷಣವೊ ? -ಎಂದು ವಿಮರ್ಶಿಸುವ ಮತ್ತೊಂದು ಅಧಿಕರಣ -ಹೀಗೆ ಎರಡು ಅಧಿಕರಣಗಳನ್ನು ಕಲ್ಪಿಸಿರುವ ವೃತ್ತಿಕಾರರ ಮತದ ಖಂಡನೆ ಯಿದೆ. ಅಲ್ಲಿಯೇ ಪ್ರಪಂಚವಿಲಯವಾದಿಗಳ ಮತವನ್ನು ಖಂಡಿಸಿರುತ್ತದೆ. (೪) ಆವೃತ್ತ್ಯಧಿಕರಣದಲ್ಲಿ (೪-೧-೨) ಒಂದು ಸಲ ಮಾಡಿದ ಶಾಸ್ತ್ರಶ್ರವಣಮಾತ್ರ ದಿಂದ ಬ್ರಹ್ಮಾತ್ಮಜ್ಞಾನವಾಗಲಾರದಾದ್ದರಿಂದ ಶಾಸ್ತ್ರಯುಕ್ತಿಗಳ ಅಭ್ಯಾಸವನ್ನು ಮಾಡಬೇಕು-ಎಂದು ವಾದಿಸುತ್ತಿದ್ದ ಪ್ರಸಂಖ್ಯಾನವಾದಿಗಳ ಮತವನ್ನು ಖಂಡಿಸಿದೆ. (೫) ಕಾರ್ಯಾಧಿಕರಣದಲ್ಲಿ (೪-೩-೧೪) ದೇವಯಾನಮಾರ್ಗ ದಿಂದ ಹೋಗುವವರನ್ನು ಅಮಾನವಪುರುಷನು ಪರಬ್ರಹ್ಮದ ಬಳಿಗೆ ಕರೆದು ಕೊಂಡು ಹೋಗುತ್ತಾನೆಂಬವರ ಪಕ್ಷವನ್ನು ಖಂಡಿಸಿದೆ. (೬) ತದನನ್ಯತ್ವಾಧಿ

ಕರಣಭಾಷ್ಯದಲ್ಲಿ (೨-೧-೧೪) ಭೇದಾಭೇದವಾದಿಗಳ ಮತವನ್ನು ಖಂಡಿಸಿದೆ ; ಆ ಮತವನ್ನು ಬೃಹದಾರಣ್ಯಕಾದಿಭಾಷ್ಯಗಳಲ್ಲಿಯೂ ಖಂಡಿಸಿದೆ.

ಈ ಮೇಲೆ ಹೇಳಿದ ಪೂರ್ವಪಕ್ಷಿಗಳೆಲ್ಲರೂ ಮೋಕ್ಷದಲ್ಲಿ ಅದ್ವೈತಬ್ರಹ್ಮವನ್ನೇ ಜೀವನು ಪಡೆಯುತ್ತಾನೆ ಎನ್ನುವವರಾಗಿದ್ದರು. ಆಚಾರ್ಯರು, ಮೋಕ್ಷದಲ್ಲಿಯೂ ಜೀವನು ಬ್ರಹ್ಮಕ್ಕಿಂತ ವ್ಯತಿರಿಕ್ತನಾಗಿಯೇ ಇರುತ್ತಾನೆನ್ನುವ ವೇದಾಂತಿಗಳನ್ನು ಪರಾಮರ್ಶಿಸಿಯೇ ಇಲ್ಲ-ಎಂಬುದನ್ನು ಲಕ್ಷಿಸಬೇಕಾಗಿದೆ. ಬೃಹದಾರಣ್ಯಕದಲ್ಲಿ ಮತ್ತೆಮತ್ತೆ ಖಂಡನೆಗೆ ತೆಗೆದುಕೊಂಡಿರುವ ಭರ್ತೃಪ್ರಪಂಚರು ದ್ವೈತಾದ್ವೈತಿಗಳಾಗಿದ್ದರೂ ಮೋಕ್ಷದಲ್ಲಿ ಅದ್ವೈತವನ್ನೇ ಒಪ್ಪಿದ್ದರು ಇಷ್ಟೇ ಅಲ್ಲ. 'ಸರ್ವೋಪನಿಷತ್ಸು ಹಿ ವಿಜ್ಞಾನಾತ್ಮನಃ ಪರಮಾತ್ಮನಾ ಏಕತ್ವಪ್ರತ್ಯಯೋ ವಿಧೀಯತ ಇತ್ಯವಿಪ್ರತಿಪತ್ತಿಃ ಸರ್ವೇಷಾಮುಪನಿಷದ್ವಾದಿನಾಮ್' (ಬೃ. ಭಾ. ೪-೧-೨೦) ಎಂಬ ವಾಕ್ಯವೊಂದು ಬೃಹದಾರಣ್ಯಕಭಾಷ್ಯದಲ್ಲಿ ಕಂಡುಬರುತ್ತದೆ. ಆಚಾರ್ಯರ ಕಾಲಕ್ಕಿದ್ದ ಉಪನಿಷದ್ವಾದಿಗಳೆಲ್ಲರೂ ಜೀವೇಶ್ವರೈಕ್ಯವನ್ನೇ ಒಪ್ಪುತ್ತಿದ್ದರೆಂದೇ ಇದರಿಂದ ಏರ್ಪಡುತ್ತದೆ.

ಈವರೆಗೆ ಹೇಳಿರುವ ಎಲ್ಲಾ ಕಾರಣಗಳಿಂದ ಆಚಾರ್ಯರು ಹೊಸದಾಗಿ ಅದ್ವೈತವನ್ನು ಪ್ರತಿಷ್ಠಾಪನೆಮಾಡುವದಕ್ಕೆ ಹೊರಟವರಲ್ಲ ; ವೇದಾಂತವಾಕ್ಯಜನ್ಯಜ್ಞಾನಮಾತ್ರದಿಂದ ಸದ್ಯೋಮುಕ್ತಿಯಾಗುವದೆಂದೂ ಅವಿದ್ಯಾನಿವೃತ್ತಿಮಾತ್ರದಿಂದ ಬದುಕಿರುವಾಗಲೇ ಮುಕ್ತಿಯಾಗುವದೆಂದೂ ಸಂಸಾರಿಯಾಗಿರುವ ಜೀವನು ಬಂಧದಶೆಯಲ್ಲಿಯೂ ನಿಜವಾಗಿ ಪರಮಾತ್ಮನೇ ಆಗಿದ್ದರೂ ಅದನ್ನರಿಯದೆ ಅವಿದ್ಯಾಮಾತ್ರದಿಂದ ತಾನು ಬದ್ಧನೆಂದು ಭಾವಿಸಿಕೊಂಡಿರುತ್ತಾನೆಂದೂ-ಹೇಳುವ ಒಂದಾನೊಂದು ವಿಶಿಷ್ಟಸಂಪ್ರದಾಯದ ಅದ್ವೈತವನ್ನು ಸ್ಥಾಪಿಸಿ ಪ್ರಸ್ಥಾನತ್ರಯದಲ್ಲಿರುವ ಸಿದ್ಧಾಂತಸಾಧನವಾಕ್ಯಗಳಿಗೆ ಏಕವಾಕ್ಯತೆಯನ್ನುಂಟುಮಾಡುವದಕ್ಕೆಂದೇ ಅವರು ಶ್ರಮಿಸಿರುತ್ತಾರೆಂದು ಹೇಳಬೇಕಾಗಿದೆ. ಈ ದೃಷ್ಟಿಯಿಂದಲೇ ನಾವು ಅದ್ವೈತವೇದಾಂತದ ವ್ಯಾಖ್ಯಾನಪ್ರಸ್ಥಾನಗಳನ್ನೂ ಆಚಾರ್ಯರ ಹೆಸರಿನಲ್ಲಿ ಪ್ರಚಾರಕ್ಕೆ ಬಂದಿರುವ ಪ್ರಕರಣಗಳನ್ನೂ ಸ್ತೋತ್ರಾದಿಗಳನ್ನೂ ಸಮಾಲೋಚನೆಮಾಡಬೇಕಾದೆ.

---

# ೨೧. ಅದ್ವೈತವ್ಯಾಖ್ಯಾನಪ್ರಸ್ಥಾನಗಳು

## ವಾರ್ತಿಕಪ್ರಸ್ಥಾನ

೧೫೬. ಮಂಡನಮಿಶ್ರನೂ ಸುರೇಶ್ವರಾಚಾರ್ಯರೂ ಒಂದೇ ವ್ಯಕ್ತಿ- ಎಂಬ ವಿಷಯಕ್ಕೆ ಇರುವ ಮತಭೇದವನ್ನೂ ಆ ವಿಷಯದಲ್ಲಿ ನಮ್ಮ ಅಭಿಪ್ರಾಯವನ್ನೂ ಹಿಂದೆ (ಪು. ೧೩೦ರಿಂದ ೧೩೬) ತಿಳಿಸಿರುತ್ತೇವೆ. ಸುರೇಶ್ವರಾಚಾರ್ಯರು ಮಂಡನನ ಹಲವು ಅಭಿಪ್ರಾಯಗಳನ್ನು ಸ್ವೀಕರಿಸಿದ್ದರೂ ಅತನು ವಿವೇಚಿಸದೆ ಇರುವ ಹಲವು ವಾದಗಳನ್ನು ಅವರು ಪ್ರತಿಪಾದಿಸಿರುತ್ತಾರೆಂಬುದನ್ನು ಅಲ್ಲಿ ಹೇಳಿರುತ್ತೇವೆ. ಸುರೇಶ್ವರಾಚಾರ್ಯರು ವೇದಾಂತಸೂತ್ರಗಳಮೇಲೆ ವಾರ್ತಿಕವನ್ನು ಬರೆಯುವದಕ್ಕೆ ಪ್ರಯತ್ನಿಸಿದ್ದು, ಆದಕ್ಕೆ ಆಚಾರ್ಯರ ಮಿಕ್ಕ ಶಿಷ್ಯರಿಂದ ಅಡ್ಡಿಯಾದದ್ದು, ಆಮೇಲೆ ಆಚಾರ್ಯರ ಅಪ್ಪಣೆಯಂತೆ ಸುರೇಶ್ವರರು ಎರಡು ವಾರ್ತಿಕಗಳನ್ನು ಬರೆದದ್ದು- ಇದನ್ನು (ಪು. ೨೨೭ರಿಂದ ೨೪೯) ತಿಳಿಸಿದ್ದಾಗಿದೆ. ಈ ವಾರ್ತಿಕಗಳಲ್ಲಿರುವ ಪ್ರಕ್ರಿಯೆಯನ್ನೇ ನಾವು ವಾರ್ತಿಕಪ್ರಸ್ಥಾನ ಎಂದು ಕರೆದಿರುರುವದು. ನೈಷ್ಕರ್ಮ್ಯಸಿದ್ಧಿಯೂ ಈ ಪ್ರಸ್ಥಾನಕ್ಕೇ ಸೇರಿದ ಗ್ರಂಥವು. ಈ ಪ್ರಸ್ಥಾನದ ಮುಖ್ಯೋಪದೇಶಗಳನ್ನು ನಾವು ಈ ಮುಂದೆ ಸಂಗ್ರಹಿಸುವೆವು.

## ವಾಕ್ಯಾರ್ಥಜ್ಞಾನದಿಂದಲೇ ಆತ್ಮಜ್ಞಾನ

೧೫೭. ಭಾಷ್ಯಕಾರರು ಉತ್ತಮಾಧಿಕಾರಿಗಳಿಗೆ ವೇದಾಂತವಾಕ್ಯಶ್ರವಣಮಾತ್ರದಿಂದಲೇ ಬ್ರಹ್ಮಾತ್ಮಜ್ಞಾನವು ಆಗಬಹುದೆಂದು ಹೇಳಿರುವದನ್ನು ಸುರೇಶ್ವರರು ಮತ್ತೊಮ್ಮೆ ನೈಷ್ಕರ್ಮ್ಯಸಿದ್ಧಿಯಲ್ಲಿ ಸ್ಪಷ್ಟಪಡಿಸಿರುತ್ತಾರೆ. ಬ್ರಹ್ಮಸಿದ್ಧಿಯಲ್ಲಿ (ಪು. 35) ಆತ್ಮಜ್ಞಾನವು ವಾಕ್ಯಮಾತ್ರದಿಂದ ಆಗಲಾರದು, ಕರ್ಮಜ್ಞಾನಸಮುಚ್ಚಯವು ಮೋಕ್ಷಕ್ಕೆ ಅವಶ್ಯ- ಎಂಬ ಎರಡು ಶಾಂಕರಭಾಷ್ಯವಿರುದ್ಧಾಭಿಪ್ರಾಯಗಳನ್ನು ಪ್ರತಿಪಾದಿಸಿರುತ್ತದೆ. ನೈಷ್ಕರ್ಮ್ಯಸಿದ್ಧಿಯಲ್ಲಿ ಈ ಎರಡು ವಾದಗಳನ್ನು ಖಂಡಿಸುವದನ್ನೇ ಗುರಿಯಾಗಿಟ್ಟುಕೊಂಡಿದೆ ಎಂದು ಹೇಳಿದರೂ ತಪ್ಪಾಗದು. ಗೌಡಪಾದಕಾರಿಕೆ, ಆಚಾರ್ಯರ ಉಪದೇಶಸಾಹಸ್ರಿ- ಈ ಎರಡರ ಪ್ರಮಾಣಗಳನ್ನು ತಮ್ಮ ಅಭಿಪ್ರಾಯಕ್ಕೆ ಪ್ರಮಾಣವಾಗಿ ಕೊಟ್ಟು ತಮ್ಮ ಪ್ರಕ್ರಿಯೆಯು ಸಂಪ್ರದಾಯಾಗತವೆಂಬುದನ್ನು ಸುರೇಶ್ವರರು ದೃಢಪಡಿಸಿಕೊಂಡಿರುತ್ತಾರೆ.

## ವಾರ್ತಿಕಪ್ರಸ್ಥಾನದಲ್ಲಿ ಅವಿದ್ಯೆ

೧೫೮. ವಾರ್ತಿಕಪ್ರಸ್ಥಾನದಲ್ಲಿ ಅವಿದ್ಯೆ ಎಂದರೆ ಆತ್ಮನನ್ನು ಅರಿಯದ್ದೇ (ಐಕಾತ್ಮ್ಯಾಪ್ರತಿಪತ್ತಿಃ ನೈ.ಸಿ. ೧೭ ತತ್ಪ್ರತಿಷೇಧಾತ್ಮಕಮಜ್ಞಾನಮ್ ನೈ. ಸಿ. ೩-೧, ನ ಜಾನಾಮೀತ್ಯವಿದ್ಯಾ ತೈ.ವಾ. ೨-೧-೧೭೬). ಇದು ಮಿಥ್ಯಾಜ್ಞಾನಕ್ಕೆ

ಕಾರಣವು ; ಮಿಥ್ಯಾಜ್ಞಾನಕ್ಕಿಂತ ಬೇರೆಯಾದ ಅಜ್ಞಾನವಿಲ್ಲವೆಂಬ ಮತವು ಸುರೇಶ್ವರರಿಗೆ ಒಪ್ಪಿಲ್ಲ (ಬೃ. ವಾ. ೧–೪–೪೨೦). ಮಿಥ್ಯಾಜ್ಞಾನವಾಗಲಿ ಸಂಶಯವಾಗಲಿ ಈ ಅಜ್ಞಾನಕ್ಕಿಂತ ಬೇರೆಯಲ್ಲ (ಬೃ. ವಾ. ೧–೪–೪೪೦)– ಎಂಬುದು ಸುರೇಶ್ವರರ ಮತ. ಆಚಾರ್ಯರು ಸೂತ್ರಭಾಷ್ಯದಲ್ಲಿ ಹೇಳಿರುವ ಅನ್ಯೋನ್ಯಾಧ್ಯಾಸವನ್ನು ಏತಕ್ಕೆ ಸುರೇಶ್ವರರು ಸ್ಪಷ್ಟೋಕ್ತಿಗಳಿಂದ ವಿವರಿಸ ಲಿಲ್ಲವೋ ನಮಗೆ ತಿಳಿಯದು. ಭ್ರಾಂತಿಗೆ ವಿಷಯವಾದ ಶುಕ್ತಿರಜತಾದಿಗಳು ಎಲ್ಲಿಯೂ ಇಲ್ಲ ಎಂಬುದನ್ನು (ಬೃ. ವಾ. ೧–೪–೬೭೫, ೨೭೬) ಅವರು ಸ್ಪಷ್ಟ ಪಡಿಸಿರುವದರಿಂದ ಮಿಥ್ಯಾರಜತೋತ್ಪತ್ತಿಯನ್ನಾಗಲಿ ಅದಕ್ಕೆ ಉಪಾದಾನ ಕಾರಣವಾದ ಅವಿದ್ಯೆಯನ್ನಾಗಲಿ ಅವರು ಒಪ್ಪಿಲ್ಲವೆಂದು ಧೈರ್ಯವಾಗಿ ಹೇಳ ಬಹುದು. ಅವಿದ್ಯೆಯಿಂದ ತೋರುವ ಅನಾತ್ಮವೂ ಒಂದರ್ಥದಲ್ಲಿ 'ಅವಿದ್ಯೆ' ಎಂದು ಸುರೇಶ್ವರರು (ತೈ. ವಾ. ೨–೧೭೪, ಬೃ. ವಾ. ೪–೪–೮೯೬) ಹೇಳಿರು ತ್ತಾರೆ. ಅವಿದ್ಯೆಗಿಂತ ಬೇರೆಯಾದ ಸ್ವಾಂತರೂಪವು ಅನಾತ್ಮಕ್ಕಿಲ್ಲದ್ದರಿಂದ ಅದನ್ನು ಅವಿದ್ಯೆಯೆಂದು ಕರೆಯಬಹುದು (ತೈ. ವಾ. ೨–೧೭೯) ಎಂದು ಅವರ ಮತ. ಅಜ್ಞಾನದಿಂದ ಪ್ರಪಂಚವಾಗಿರುತ್ತದೆ ಎಂದರೆ ಅಜ್ಞಾತಬ್ರಹ್ಮದಿಂದ ಆಗಿರುತ್ತದೆ ಎಂದರ್ಥ ; ಅಭಾವದಿಂದಲೇನೂ ಅದು ಉಂಟಾಗಿಲ್ಲ (ನೈ. ಸಿ. ೩–೭) ಎಂದು ಅವರು ಬರೆದಿರುವ ರಿಂದ ಅವರಿಗೆ ಮೂಲಾವಿದ್ಯಾವಾದದಲ್ಲಿಯೂ ಅಭಿಮಾನ ವಿಲ್ಲ. ಹೀಗಿದ್ದರೂ ಈಗಿನ ಕೆಲವರು "ದ್ವೈತೇಂದ್ರಜಾಲಕ್ಕೆ ಅವಿದ್ಯೆಯು ಉಪಾದಾನ" (ಬೃ. ವಾ. ೧–೪–೩೭೧) ಎಂದು ಮುಂತಾಗಿ ಅವರು ಬರೆದಿರುವ ವಾಕ್ಯಗಳ ಬಲದಿಂದ ಮೂಲಾವಿದ್ಯಾವಾದವನ್ನು ಅವರ ತಲೆಗೂ ಕಟ್ಟಿರುತ್ತಾರೆ. ಈ ವಿಷಯವನ್ನು ವಿವರಣಪ್ರಸ್ಥಾನದ ವಿಮರ್ಶೆಯನ್ನು ಬರೆಯುವಾಗ ನಾವು ಇನ್ನಷ್ಟು ಸ್ಪಷ್ಟಪಡಿಸುವೆವು. ಆತ್ಮನೇ ಅವಿದ್ಯೆಗೆ ಆಶ್ರಯನೂ ವಿಷಯನೂ ಆಗಿರುತ್ತಾನೆಂದು ಭಾಷ್ಯಕಾರರಂತೆಯೇ ಅವರು ಹೇಳಿರುವರಲ್ಲದೆ, ಅವಿದ್ಯೆಯು ಅನುಭವಮಾತ್ರಗಮ್ಯವೆಂದು ತಿಳಿಸುವದರಿಂದ ಅವಿದ್ಯೆಗೆ ಮತ್ತೆಯಾವ ಪ್ರಮಾ ಣವೂ ಇಲ್ಲವೆಂಬುದನ್ನು ಸ್ಪಷ್ಟಪಡಿಸಿರುತ್ತಾರೆ. ಆತ್ಮಾವಿದ್ಯೆಗಿಂತ ವ್ಯತಿರಿಕ್ತವಾದ ಅನಾತ್ಮವಿಷಯಕವಾದ ಅವಿದ್ಯೆಯೊಂದುಂಟೆಂಬ ವಾದವನ್ನು ಅವರು ಸ್ಪಷ್ಟವಾಗಿ (ಬೃ. ವಾ. ೨-೪-೨೦೦) ಖಂಡಿಸಿರುತ್ತಾರೆ.

## ಪಂಚಕೋಶವಿವೇಕ, ಅವಸ್ಥಾತ್ರಯವಿಮರ್ಶೆ

೧೫೯. ಪಂಚಕೋಶಗಳನ್ನು ಪರಿಶೀಲಿಸುವಾಗ ಸಮಷ್ಟಿರೂಪದಿಂದ ನೋಡುವದು, ಕಾರ್ಯಾತ್ಮನನ್ನು ಕಾರಣಾತ್ಮನಲ್ಲಿ ಲಯಮಾಡುವದು– ಹೀಗೆ ಕಾರ್ಯಕಾರಣವಿಲಕ್ಷಣವಾದ ಬ್ರಹ್ಮವನ್ನು ಅರಿತುಕೊಳ್ಳಬಹುದೆಂಬುದನ್ನು ಸುರೇಶ್ವರರು ತೈತ್ತಿರೀಯವಾರ್ತಿಕದಲ್ಲಿ ಸ್ಪಷ್ಟಪಡಿಸಿರುತ್ತಾರೆ.

ಅವಸ್ಥಾತ್ರಯಪರೀಕ್ಷೆಯನ್ನು ಪ್ರತ್ಯಗ್ದೃಷ್ಟಿಯ ಅವಲಂಬನೆಗೆ ಸಹಕಾರಿಯಾಗಿ ಉಪಯೋಗಿಸಿರುವದೊಂದು ವಾರ್ತಿಕದಲ್ಲಿ ವಿಶೇಷ. ಈ ದೃಷ್ಟಿಯಿಂದ ನೋಡಿದಾಗ ಮೂರು ಅವಸ್ಥೆಗಳೂ ಆತ್ಮನಲ್ಲಿಲ್ಲವೇ ಇಲ್ಲ, ಅವು ಆತ್ಮಸ್ವರೂಪವೇ (ಬೃ. ವಾ. ೨-೧-೨೬೪). ಸುಷುಪ್ತಿ ಎಂದು ಜನರು ಕರೆಯುತ್ತಿರುವ ಅವಸ್ಥೆಯು ಅವಿದ್ಯಾರಹಿತ, ನಿರ್ಭೇದ, ಕೇವಲ ಆತ್ಮಸ್ವರೂಪ (ಬೃ. ವಾ. ೪-೩-೧೫೧೭ ರಿಂದ ೧೫೨೦, ತೈ. ವಾ. ೨-೪೬೬). ತನಿನಿದ್ರೆಯಲ್ಲಿ ನಾನು ಏನನ್ನೂ ಅರಿಯಲಿಲ್ಲ ಎಂಬುದು ಸ್ಮರಣೆಯಲ್ಲ, ವಿಕಲ್ಪಮಾತ್ರವು; ಅದು ಆತ್ಮಾನುಭವದ ಬಲದಿಂದಲೇ ನಮಗೆ ಆಗುತ್ತಿರುವದು (ಬೃ. ವಾ. ೧-೪-೨೯೯, ೩೦೦; ೩-೪-೧೭೩). ಹೀಗೆ ಅವಸ್ಥಾತ್ರಯಪರೀಕ್ಷೆಯಿಂದ ವಾರ್ತಿಕಕಾರರು ಅನುಭವಾನುಸಾರಿಯಾದ ಹಲವು ಉತ್ತಮತೀರ್ಮಾನಗಳನ್ನು ಮಾಡಿರುತ್ತಾರೆ.

## ಮೋಕ್ಷದ್ವಯವಾದಖಂಡನೆ

೧೬೦. ಶರೀರವಿರುವಾಗ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದುಕೊಳ್ಳುವದು, ಸತ್ತಬಳಿಕ ಬ್ರಹ್ಮದಲ್ಲಿ ಲಯವಾಗುವದು – ಎಂದು ಎರಡು ಬಗೆಯ ಮೋಕ್ಷಗಳಿರುವವೆಂಬ ಭರ್ತೃಪ್ರಪಂಚರ ವಾದವನ್ನು ವಾರ್ತಿಕಕಾರರು (ಬೃ. ವಾ. ೪-೨,೧೦೨) ಖಂಡಿಸಿರುತ್ತಾರೆ. ಈ ಕಾರಣದಿಂದ ಜೀವನ್ಮುಕ್ತಿ, ವಿದೇಹಮುಕ್ತಿ- ಎಂಬ ಮುಕ್ತಿಭೇದಗಳನ್ನು ಈಗಿನ ವೇದಾಂತಿಗಳು ಕೆಲವರು ಒಪ್ಪಿರುವದು ಅವರಿಗೆ ಅಭಿಮತವಲ್ಲವೆಂದೇ ಹೇಳಬೇಕಾಗಿದೆ. ವಾಕ್ಯಜ್ಞಾನದಿಂದ ಮಾತ್ರವೇ ಅಜ್ಞಾನನಿವೃತ್ತಿಯಾಗುವದಿಲ್ಲ, ಅದರ ಅಭ್ಯಾಸದಿಂದ ಉಂಟಾದ ಸಾಕ್ಷಾತ್ಕಾರದಿಂದಲೇ ಮೋಕ್ಷ ಎಂಬವರ ವಾದವನ್ನು (ಬೃ. ವಾ. ೪-೪-೮೧೧ರಿಂದ ೮೨೯) ಅವರು ಖಂಡಿಸಿರುತ್ತಾರೆ.

## ಮೋಕ್ಷಸಾಧನ

೧೬೧. ಜ್ಞಾನವೇ ಮೋಕ್ಷಕ್ಕೆ ಸಾಧನವೆಂದು ಆಚಾರ್ಯರಂತೆಯೇ ವಾರ್ತಿಕಕಾರರು ಹೇಳಿ, ಹಾಗೆ ಒಪ್ಪದೆ, ಜ್ಞಾನವಾದ ಬಳಿಕವೂ ಮಾಡತಕ್ಕದ್ದು ಉಳಿದಿರುತ್ತದೆ ಎಂಬ ವಾದಿಗಳ ಮತವನ್ನು ಅವರು ತೀಕ್ಷ್ಣವಾದ ಯುಕ್ತಿಗಳಿಂದ ಖಂಡಿಸಿರುತ್ತಾರೆ. ಸಂಬಂಧವಾರ್ತಿಕದಲ್ಲಿಯೂ ಬೃಹದಾರಣ್ಯಕಭಾಷ್ಯವಾರ್ತಿಕದ ಬೇರೆಯ ಕಡೆಗಳಲ್ಲಿಯೂ ಹಿಂದಿನ ಅದ್ವೈತಪ್ರಕ್ರಿಯೆಗಳನ್ನು ಅವರು ವಿಸ್ತಾರವಾಗಿ ಖಂಡಿಸಿರುವರಿಂದ ಆಚಾರ್ಯರ ಪ್ರಕ್ರಿಯೆಯೊಂದೇ ಅದ್ವೈತಸಿದ್ಧಿಗೆ ನಿರ್ದಿಷ್ಟವಾದ ಸಾಧನವೆಂಬುದು ಅವರ ಅಭಿಪ್ರಾಯವಾಗಿತ್ತೆಂದು ನಾವು ಧಾರಾಳವಾಗಿ ನಂಬಬಹುದಾಗಿದೆ. ಶ್ರವಣಮನನಗಳನ್ನು ವಿಧಿಸಿದೆ ಎಂಬುದನ್ನು ಮಾತ್ರ ಅವರು ಒಪ್ಪಿರುತ್ತಾರೆ. ನಿದಿಧ್ಯಾಸನವೆಂದರೆ ಶ್ರವಣಮನನ

ಗಳಿಂದಾದ ಸ್ವಾಯತ್ತವಾದ ಜ್ಞಾನವೇ ಎಂಬುದು ಅವರ ಮತ (ಬೃ. ವಾ. ೨-೪-೨೧೩ರಿಂದ ೨೨೧). ಆಚಾರ್ಯರು ನಿದಿಧ್ಯಾಸನವನ್ನು ಸಾಧನವಾಗಿ (ಸೂ. ಭಾ. ೪-೧-೧) ಹೇಳಿರುವದನ್ನು ಅವರು ಏತಕ್ಕೆ ಒಪ್ಪಲಿಲ್ಲವೋ ನಮಗೆ ತಿಳಿಯದು.

## ವಾರ್ತಿಕಪ್ರಸ್ಥಾನವಿಚಾರದ ಉಪಸಂಹಾರ

೧೬೨. ಒಟ್ಟಿನಲ್ಲಿ ಸುರೇಶ್ವರಾಚಾರ್ಯರು ಆಚಾರ್ಯರ ಮತವನ್ನೇ ಸ್ಪಷ್ಟಗೊಳಿಸಿ ಬಲಪಡಿಸಿರುತ್ತಾರೆ ಎಂದು ಹೇಳಬಹುದು. ಬ್ರಹ್ಮಸಿದ್ಧಿಕಾರನಾದ ಮಂಡನನ ಹಲವು ಯುಕ್ತಿಗಳನ್ನು ಅವರು ಸ್ವೀಕರಿಸಿರುತ್ತಾರಾದರೂ ಭಾಷ್ಯಪ್ರಕ್ರಿಯೆಗೆ ವಿರುದ್ಧವಾದ ಎಲ್ಲಾ ವಾದಗಳನ್ನೂ ಕಟ್ಟುನಿಟ್ಟಾಗಿ ಖಂಡಿಸಿರುತ್ತಾರೆ. ವಾರ್ತಿಕಪ್ರಸ್ಥಾನದ ವಿಚಾರವನ್ನು ಇನ್ನೂ ಹೆಚ್ಚಾಗಿ ತಿಳಿಯಬೇಕೆನ್ನುವವರು 'ವೇದಾಂತವಿಚಾರದ ಇತಿಹಾಸ' ಮತ್ತು 'ನೈಷ್ಕರ್ಮ್ಯಸಿದ್ಧಿಯ ಅನುವಾದ'[1] – ಇವುಗಳನ್ನು ನೋಡಬೇಕು.

## ಪಂಚಪಾದಿಕಾ ಮತ್ತು ವಿವರಣ– ಇವುಗಳ ಪ್ರಸ್ಥಾನ

೧೬೩. ಪದ್ಮಪಾದಾಚಾರ್ಯರು ಸನಂದನನೆಂಬ ಹೆಸರಿನಿಂದ ಆಚಾರ್ಯರಿಂದ ಆಶ್ರಮಸ್ವೀಕಾರಮಾಡಿದ್ದು, ಅವರಿಗೆ ಪದ್ಮಪಾದರೆಂಬ ಹೆಸರು ಬಂದದ್ದಕ್ಕೆ ಕಾರಣ–ಇವನ್ನು ಅವರ ಚರಿತ್ರೆಯಲ್ಲಿ (ಪು. ೧೧೧) ತಿಳಿಸಿರುತ್ತೇವೆ. ಅವರೇ ಭಾಷ್ಯಕ್ಕೆ ವಾರ್ತಿಕವನ್ನು ಬರೆಯಬೇಕೆಂದು ಆಚಾರ್ಯರ ಶಿಷ್ಯರು ಬಿನ್ನವಿಸಿದ್ದು, ಆಚಾರ್ಯರು ಟೀಕೆಯನ್ನು ಮಾತ್ರ ಬರೆಯಲಿ ಎಂದದ್ದು, ಅದು ಕಾರಣಾಂತರದಿಂದ ಸುಟ್ಟುಹೋದದ್ದು, ಅದರ ಭಾಗವು ಮಾತ್ರ ಪಂಚಪಾದಿಕೆ ಎಂಬ ಹೆಸರಿನಿಂದ ಪ್ರಸಿದ್ಧವಾದದ್ದು– ಈ ಕಥೆಯನ್ನು ಹಿಂದೆ (ಪು. ೨೨೭ ರಿಂದ ೨೨೯) ಸಂಗ್ರಹಿಸಿರುತ್ತೇವೆ. ಹೆಸರು ಪಂಚಪಾದಿಕೆ ಎಂದಿದ್ದರೂ ಗ್ರಂಥವು ಶಾರೀರಕದ ನಾಲ್ಕೇ ಸೂತ್ರಗಳ ಭಾಷ್ಯದ ಟೀಕೆಯಾಗಿರುತ್ತದೆಯೆಂದೂ ಅಲ್ಲಿ ತಿಳಿಸಿರುತ್ತೇವೆ. ಪ್ರಕಾಶಾತ್ಮರೆಂಬವರು ಈ ಪಂಚಪಾದಿಕೆಗೆ ವಿವರಣವನ್ನು ಬರೆದಿರುತ್ತಾರೆ. ಪಂಚಪಾದಿಕೆಗೂ ವಿವರಣಕ್ಕೂ ಕೆಲವು ಅಂಶಗಳಲ್ಲಿ ಮತಭೇದವು ತೋರುತ್ತಿದ್ದರೂ ಒಟ್ಟಿನಲ್ಲಿ ಪಂಚಪಾದಿಕೆಯಲ್ಲಿ ಪ್ರತಿಪಾದಿತವಾಗಿರುವ ವಿಷಯಗಳನ್ನು ವಿವರಿಸುವದೇ ಪ್ರಕಾಶಾತ್ಮರ ಗುರಿಯಾಗಿರುವದರಿಂದ ಈ ಎರಡು ಗ್ರಂಥಗಳನ್ನೂ ಒಂದೇ ಅಭಿಪ್ರಾಯದವೆಂದು ಹಿಡಿದು ಈ ಪ್ರಕ್ರಿಯೆಯನ್ನು ವಿವರಣಪ್ರಸ್ಥಾನವೆಂದೇ ಕರೆಯುವದು ವಾಡಿಕೆಯಲ್ಲಿದೆ.

1. ಇವು ಅಧ್ಯಾತ್ಮಪ್ರಕಾಶಕಾರ್ಯಾಲಯದಲ್ಲಿ ಪ್ರಕಾಶಿತವಾಗಿವೆ; ನೈಷ್ಕರ್ಮ್ಯಸಿದ್ಧಿಗೆ 'ಕ್ಲೇಶಾಪಹಾರಿಣೀ' ಎಂಬ ವಿಸ್ತಾರವಾದ ಸಂಸ್ಕೃತವ್ಯಾಖ್ಯಾನವೂ ಈ ಗ್ರಂಥಕರ್ತರಿಂದ ಬರೆದು ಸಿದ್ಧವಾಗಿದೆ.

## ವಿವರಣಪ್ರಸ್ಥಾನದ ಮುಖ್ಯವಿಷಯಗಳು

೧೬೪. ಪಂಚಪಾದಿಕೆ ಮತ್ತು ವಿವರಣ- ಇವೆರಡೂ ಶ್ರೀ ಶಂಕರ ಭಗವತ್ಪಾದರ ಸೂತ್ರಭಾಷ್ಯದ ಅಭಿಪ್ರಾಯವನ್ನು ವಿವರಿಸುವದಕ್ಕೆಂದೇ ಹೊರಟ್ಟಿದ್ದರೂ ಅವುಗಳಲ್ಲಿ ಕೆಲವು ಹೊಸ ಅಭಿಪ್ರಾಯಗಳನ್ನು ಹೊರಕ್ಕೆ ತರಲಾಗಿದೆ. ಅವುಗಳನ್ನು ಅತಿಸಂಕ್ಷೇಪವಾಗಿ ಇಲ್ಲಿ ವಾಚಕರ ಮುಂದೆ ಇಡುವೆವು.

ಭಾಷ್ಯಕಾರರು ಸತ್ಯವಾದ ಅದ್ವಿತೀಯಾತ್ಮ, ಅನೃತವಾದ ಅನಾತ್ಮ- ಇವೆರಡನ್ನೂ ಒಂದರಲ್ಲೊಂದನ್ನು ಕಲಬೆರಕೆಮಾಡಿಕೊಂಡು ಒಂದರ ಧರ್ಮವನ್ನು ಮತ್ತೊಂದರಲ್ಲಿ ಜನರು ಅಧ್ಯಾಸಮಾಡುತ್ತಿರುವದರಿಂದಲೇ ಅವರಿಗೆ ಪ್ರಮಾತೃತ್ವವೂ ಕರ್ತೃತ್ವಭೋಕ್ತೃತ್ವಗಳೂ ಕಾಣುತ್ತಿರುವವೆಂದು ಸುಸ್ಪಷ್ಟವಾಗಿ ಸೂತ್ರಭಾಷ್ಯದ ಉಪೋದ್ಘಾತದಲ್ಲಿ ಬರೆದಿರುತ್ತಾರೆ. ಆದರೆ ಪಂಚಪಾದಿಕಾಕಾರರು

೧. 'ಲೋಕವ್ಯವಹಾರವು ಮಿಥ್ಯಾಜ್ಞಾನನಿಮಿತ್ತವಾಗಿದೆ' ಎಂಬ ಭಾಷ್ಯವಾಕ್ಯವನ್ನು ಮಿಥ್ಯಾ ಎಂದರೆ ಅನಿರ್ವಚನೀಯವಾದ ಅಜ್ಞಾನವು, ಎಂದರೆ ಜಡಸ್ವರೂಪವಾದ ಅವಿದ್ಯಾಶಕ್ತಿಯು ಅಧ್ಯಾಸರೂಪವಾದ ವ್ಯವಹಾರಕ್ಕೆ ಉಪಾದಾನಕಾರಣವು ಎಂದು (ಪಂ. ಪು. ೪) ವ್ಯಾಖ್ಯಾನಮಾಡಿರುತ್ತಾರೆ. ವಿವರಣಕಾರರು ಅದನ್ನು ಒಪ್ಪಿ ಈ ಅಜ್ಞಾನವು ಅಧ್ಯಾಸಕ್ಕೆ ಉಪಾದಾನವು ಹೇಗೆಂಬುದಕ್ಕೆ ಯುಕ್ತಿಯನ್ನು ಕೊಟ್ಟಿರುತ್ತಾರೆ (ವಿ. ೧೧)

೨. ಈ ಮಿಥ್ಯಾಜ್ಞಾನರೂಪವಾದ ಅವಿದ್ಯಾಶಕ್ತಿಯು ಹೊರಗಿನ ವಸ್ತುಗಳನ್ನು ಬೇರೆಯಾಗಿ ಕಾಣುವದಕ್ಕೆ ಮಾತ್ರ ಕಾರಣವಾಗಿದೆ ; ಆತ್ಮನು ಬ್ರಹ್ಮಸ್ವರೂಪನಾಗಿದ್ದರೂ ಹಾಗೆ ಕಾಣದಂತೆ ಅಡ್ಡಿಮಾಡಿ ಅಹಂಕಾರವೇ ಮುಂತಾದ ಬೇರೆ ರೂಪದಲ್ಲಿ ಕಾಣುವಂತೆಯೂ ಮಾಡುತ್ತದೆ ಎಂದು ಪಂಚಪಾದಿಕಾಕಾರರು (ಪಂ. ಪು. ೪-೫) ವಾದಿಸಿರುತ್ತಾರೆ. ಆತ್ಮಾಶ್ರಯವೂ ಆತ್ಮವಿಷಯಕವೂ ಆಗಿರುವ ಈ ಅಜ್ಞಾನವು ಶುಕ್ತಿರಜತಾದ್ಯುಪಾದಾನವೂ ಆಗಿದೆ ಎಂದು ವಿವರಣಕಾರರು (ವಿ. ಪು. ೧೨) ಹೇಳಿರುತ್ತಾರೆ.

೩. ಅವಿದ್ಯಾಶಕ್ತಿಯನ್ನು ಒಪ್ಪದಿದ್ದರೆ ಮಿಥ್ಯಾರ್ಥವು ಕಾಣಿಸಲಾರದು ಎಂದು ಪಂಚಪಾದಿಕಾಕಾರರು(ಪಂ.ಪು. ೪) ಹೇಳಿರುವಲ್ಲಿ ಭಾವರೂಪಾಜ್ಞಾನವಾದ ಆ ಮೂಲಾವಿದ್ಯೆಗೆ ಪ್ರತ್ಯಕ್ಷ, ಅನುಮಾನ, ಅರ್ಥಾಪತ್ತಿ – ಎಂಬ ಪ್ರಮಾಣಗಳನ್ನೂ ವಿವರಣಕಾರರು (ವಿ. ಪು. ೧೨-೧೪) ಕೊಟ್ಟಿರುತ್ತಾರೆ.

೪. ಅವಿದ್ಯಾಶಕ್ತಿಯು ಸುಷುಪ್ತಿಯಲ್ಲಿ ಸಂಸ್ಕಾರಶೇಷವಾಗಿ ನಿದ್ರೆಯಲ್ಲಿದ್ದುಕೊಂಡು ಎಚ್ಚರದಲ್ಲಿ ಮತ್ತೆ ಅಹಂಕಾರಾದಿರೂಪದಿಂದ ತೋರಿಕೊಳ್ಳುತ್ತದೆ (ಪಂ. ೪, ೨೦) ಎಂದು ಪಂಚಪಾದಿಕಾಕಾರರು ಹೇಳಿರುವಲ್ಲಿ ಅಗ್ರಹಣ, ಮಿಥ್ಯಾಜ್ಞಾನ, ಅದರ ಸಂಸ್ಕಾರ- ಈ ಮೂರಕ್ಕಿಂತ ಬೇರೆಯಾದ ಅವಿದ್ಯೆಯು ಸುಷುಪ್ತಿಯಲ್ಲಿರುತ್ತದೆ (ವಿ. ಪು. ೧೬) ಎಂದು ವಿವರಣಾಚಾರ್ಯರು ಯುಕ್ತಿ

ಯಿಂದ ಸಾಧಿಸಿರುತ್ತಾರೆ. ನಾಮರೂಪ, ಅವ್ಯಾಕೃತ, ಅವಿದ್ಯೆ, ಮಾಯೆ, ಪ್ರಕೃತಿ, ಅಗ್ರಹಣ, ಅವ್ಯಕ್ತ, ತಮಸ್ಸು, ಕಾರಣ, ಲಯಶಕ್ತಿ, ಮಹಾಸುಪ್ತಿ, ನಿದ್ರೆ, ಅಕ್ಷರ, ಆಕಾಶ– ಎಂದು ಬೇರೆಬೇರೆಯ ಹೆಸರುಗಳಿಂದ ಕರೆಯಲ್ಪಡುವ ಅವಿದ್ಯೆಯೇ ಚೈತನ್ಯಕ್ಕೆ ಸ್ವಭಾವದಿಂದಿರುವ ಬ್ರಹ್ಮಸ್ವರೂಪವನ್ನು ಮುಚ್ಚಿ ಹಾಕಿ ಜೀವತ್ವವನ್ನುಂಟುಮಾಡುತ್ತದೆ ಎಂದು ಪಂಚಪಾದಿಕೆಯಲ್ಲಿ (ಪಂ. ಪು ೨೦) ಹೇಳಿರುತ್ತದೆ. ವಿವರಣಾಚಾರ್ಯರು ಮಾಯಾವಿದ್ಯೆಗಳು ಒಂದೇ ಪದಾರ್ಥದ ಹೆಸರೆಂದು ಯುಕ್ತಿಯನ್ನು ಕೊಟ್ಟು ಮಿಕ್ಕ ಕೆಲವು ಗ್ರಂಥಕಾರರ ಸಮ್ಮತಿಯನ್ನೂ (ವಿ. ಪು. ೩೧ರಿಂದ ೩೨) ಉದಾಹರಿಸಿರುತ್ತಾರೆ. ಈ ವಾದವು ಮಾಯೆಯು ಅವಿದ್ಯಾಕಲ್ಪಿತವೆಂದು ಹೇಳುವ ಭಾಷ್ಯಕ್ಕೆ (ಪು. ೩೦೪) ವಿರುದ್ಧ ವೆಂಬುದು ಸ್ಫುಟವಾಗಿಯೇ ಇದೆ.

೫. ಶ್ರವಣಮನನನಿದಿಧ್ಯಾಸನಗಳು ಅರ್ಥವಾದಗಳೆಂದೂ ಬಹಿರ್ಮುಖತ್ವ ವನ್ನು ತಡೆಗಟ್ಟುವ ವಿಧಿಕಾರ್ಯದ ಲೇಶವಿರುವದರಿಂದ ವಿಧಿಗಳಂತೆ ಕಾಣುತ್ತಿರುವ ವೆಂದೂ ಪಂಚಪಾದಿಕೆಯಲ್ಲಿ (ಪಂ. ಪು. ೯೩) ಸ್ಪಷ್ಟವಾಗಿ ಹೇಳಿದ್ದರೂ ವಿವರಣಕಾರರು ಶ್ರವಣವಿಧಿಯನ್ನು ವಿಚಾರಮಾಡುವದಕ್ಕೆಂದೇ ಶಾರೀರಕ ಮೀಮಾಂಸಾಶಾಸ್ತ್ರವು ಪ್ರಾರಂಭವಾಗಿದೆ (ವಿ.ಪು. ೧–೨) ಎಂತ ಹೇಳಿರುವದಲ್ಲದೆ ಶ್ರವಣಕ್ಕೆ ಮನನನಿದಿಧ್ಯಾಸನಗಳು ಅಂಗವೇ ಎಂಬುದನ್ನು ಯುಕ್ತಿಯಿಂದಲೂ ಸಾಧಿಸಿರುತ್ತಾರೆ (ವಿ.ಪು. ೧೦೪), ಅಪರೋಕ್ಷಜ್ಞಾನವಾದಮೇಲೂ ಪರೋಕ್ಷತಾ ಭ್ರಾಂತಿಯಾಗಬಹುದೆಂಬ ಪಂಚಪಾದಿಕಾಕಾರರ ಅಭಿಪ್ರಾಯವನ್ನು(ಪಂ.ಪು.೩೯) ಒಪ್ಪಿ ಮನನನಿದಿಧ್ಯಾಸನಗಳಿಗೆ ಪ್ರತಿಬಂಧಕವಾದ ಚಿತ್ತದೋಷವನ್ನು ತೆಗೆದು ಹಾಕುವ ಕೆಲಸವನ್ನೇ ಕೊಟ್ಟಿರುತ್ತಾರೆ. ಪಂಚಪಾದಿಕಾಕಾರರೂ ಶ್ರವಣವಿಧಿ ಯನ್ನೇ ಒಪ್ಪಿದಂತೆ ಕಲ್ಪಿಸಿಕೊಂಡು ವಿಧಿಗಳಾಗಿದ್ದರೂ ಇವು ಸ್ತುತಿಗಳೆಂದು ಹೇಳಿ ದ್ದಾರೆ ಎಂದು (ವಿ. ಪು. ೨೦೩) ತಿಳಿಸಿರುತ್ತಾರೆ.

೬. ಬ್ರಹ್ಮಜ್ಞಾನದಿಂದ ಅವಿದ್ಯೆಯು ಹೋದಮೇಲೂ ಅವಿದ್ಯೆಯ ಸಂಸ್ಕಾರವು ಉಳಿದುಕೊಂಡಿದ್ದು ಅಹಂಕಾರಗ್ರಂಥಿಗೆ ಕಾರಣವಾಗಿರಬಹುದು (ಪಂ. ಪು. ೪೮) ಎಂದು ಪಂಚಪಾದಿಕೆಯ ಹೇಳಿಕೆ. ವಿವರಣಕಾರರು ಈ ಪಕ್ಷಕ್ಕೆ ಯುಕ್ತಿಯನ್ನು ಕೊಟ್ಟಿರುವರಲ್ಲದೆ, ಅವಿದ್ಯಾಲೇಶವೇ ಇಲ್ಲಿ ಹೇಳಿರುವ ಸಂಸ್ಕಾರವೆಂಬ ಮತ್ತೊಂದು ಪಕ್ಷವನ್ನು (ವಿ. ಪು. ೧೦೬) ಇಷ್ಟಸಿದ್ಧಿಯನ್ನಾಶ್ರ ಯಿಸಿ ಇಲ್ಲಿ ಕೊಟ್ಟಿರುತ್ತಾರೆ ; ಹೀಗೆ ಜೀವನ್ಮುಕ್ತಿಗೆ ಅವಿದ್ಯೆಯನ್ನು ಒಪ್ಪಿ ವಿದೇಹಮುಕ್ತಿಗೇ ಪ್ರಾಧಾನ್ಯವನ್ನು ಕಲ್ಪಿಸಿರುತ್ತಾರೆ.

ಈ ಮೇಲೆ ಭಾಷ್ಯಕ್ಕೆ ಬಿಡುವ ವಿವರಣಪ್ರಸ್ಥಾನದ ಮುಖ್ಯವಾದ ಗಳನ್ನು ಸಂಗ್ರಹಿಸಿರುತ್ತೇವೆ. ಇಲ್ಲಿ ಹಿಡಿದಿರುವ ಮೂಲಾವಿದ್ಯಾವಾದವು

ಭಾಷ್ಯಕ್ಕೆ ವಿರುದ್ಧವೆಂಬುದನ್ನು ವಾಚಕರು ಈ ಸಂಗ್ರಹದಿಂದ ತಿಳಿದಿರಬಹುದು.[1]

## ಭಾಮತೀಪ್ರಸ್ಥಾನ

೧೬೫. ವಾಚಸ್ಪತಿಮಿಶ್ರನೆಂಬಾತನು ರಚಿಸಿರುವ 'ಭಾಮತೀ' ಎಂಬ ಭಾಷ್ಯಟೀಕೆಯಲ್ಲಿ ಅಡಗಿರುವ- ಮತ್ತು ಅದರ ವ್ಯಾಖ್ಯಾನಕಾರರು ಬೆಳೆಯಿಸಿರುವ-ಪ್ರಕ್ರಿಯೆಯು ಭಾಮತೀಪ್ರಸ್ಥಾನವೆನಿಸಿಕೊಂಡಿದೆ. ಪಂಚಪಾದಿಕೆಯ ಕೆಲವು ಯುಕ್ತಿಗಳು ಭಾಮತಿಯಲ್ಲಿಯೂ ಕಾಣುತ್ತಿದ್ದರೂ ಮುಖ್ಯವಾಗಿ ಮಂಡನಮಿಶ್ರನ ಬ್ರಹ್ಮಸಿದ್ಧಿಯನ್ನು ಅನುಸರಿಸಿ ಭಾಷ್ಯಕ್ಕೆ ಟೀಕೆಯನ್ನು ಬರೆದು-ಕೊಂಚಮಟ್ಟಿಗೆ ಶಂಕರಮಂಡನರಿಬ್ಬರಿಗೂ ಹೊಂದುಗಡೆಮಾಡುವ ಹೊಸ ಪ್ರಕ್ರಿಯೆಯೊಂದನ್ನು ವಾಚಸ್ಪತಿಮಿಶ್ರನು ತೆಗೆದಿರುತ್ತಾನೆ. ಮಂಡನಮಿಶ್ರನು ಆಚಾರ್ಯರೊಡನೆ ವಾದವನ್ನು ಮಾಡಿ ಸೋತಬಳಿಕ ಸುರೇಶ್ವರಾಚಾರ್ಯನೆಂಬ ಹೆಸರನ್ನು ಪಡೆದನೆಂಬ ಕಥೆಯು ಅವಿಶ್ವಸನೀಯವೆಂಬುದನ್ನು ಹಿಂದೆ (ಪು. ೧೩೩) ಸಕಾರಣವಾಗಿ ವಿವರಿಸಿರುತ್ತೇವೆ. ಸುರೇಶ್ವರಾಚಾರ್ಯರು ಸೂತ್ರಭಾಷ್ಯದಮೇಲೆ ವಾರ್ತಿಕವನ್ನು ಬರೆಯಬೇಕೆಂದು ಸಂಕಲ್ಪಿಸಿದ್ದು, ಅದಕ್ಕೆ ಅಡ್ಡಿಯಾದ ಘಟನೆಯ ಸಂದರ್ಭ, 'ನೀನು ಮುಂದೆ ವಾಚಸ್ಪತಿಯಾಗಿ ಭಾಷ್ಯಕ್ಕೆ ಭವ್ಯವಾದ ಟೀಕೆಯನ್ನು ಮಾಡುವೆ' ಎಂದು ಆಚಾರ್ಯರು ಅವರನ್ನು ಸಮಾಧಾನಗೊಳಿಸಿದ ಪ್ರಕಾರ- ಇವುಗಳನ್ನು ವಿಮರ್ಶೆಮಾಡಿ ಇದೂ ವಿಶ್ವಸನೀಯವಲ್ಲವೆಂಬುದನ್ನು ಹಿಂದೆ (ಪು: ೨೩೫) ತೋರಿಸಿರುತ್ತೇವೆ. ಈಗ ಸುರೇಶ್ವರಾಚಾರ್ಯರ ವಾರ್ತಿಕ ಪ್ರಸ್ಥಾನವನ್ನು ಓದಿದ ವಾಚಕರಿಗೆ ಮುಂದೆ ಕೊಡುವ ಭಾಮತೀಪ್ರಸ್ಥಾನದ ಸಾರವನ್ನು ಓದಿದಬಳಿಕ ನಮ್ಮ ಅಭಿಪ್ರಾಯವು ಸಾಧಾರವೆಂಬುದು ಹೊಳೆದೀತೆಂದು ನಮ್ಮ ನಂಬಿಕೆ.

೧೬೬. ಈ ಪ್ರಸ್ಥಾನದಲ್ಲಿ ಕಾರಣಾವಿದ್ಯೆ, ಕಾರ್ಯಾವಿದ್ಯೆ ಎಂದು ಎರಡು ಅನಿರ್ವಾಚ್ಯವಾದ ಅವಿದ್ಯೆಗಳನ್ನೊಪ್ಪಿದೆ ಎಂಬುದು ಮಂಗಳಶ್ಲೋಕದಲ್ಲಿಯೇ ಸ್ಫುಟವಾಗಿರುತ್ತದೆ. ಕಾರ್ಯಕಾರಣಾವಿದ್ಯಾದ್ವಯುವೆಂಬ ಮಾತು ಮತ್ತೆ ಮತ್ತೆ (ಭಾ. ೪೫, ೫೮, ೫೫, ೧೨೧ ........) ಮುಂತಾದ ಅನೇಕ

1. ಈ ವಿಷಯದಲ್ಲಿ ಇನ್ನೂ ಹೆಚ್ಚಿಗೆ ತಿಳಿಯಬೇಕೆನ್ನುವವರು ಅಧ್ಯಾತ್ಮಪ್ರಕಾಶ ಕಾರ್ಯಾಲಯದಲ್ಲಿ ಪ್ರಕಟವಾಗಿರುವ 'ಶಂಕರಸಿದ್ಧಾಂತ', 'ವೇದಾಂತವಿಚಾರದ ಇತಿಹಾಸ' ಎಂಬ ಕನ್ನಡಗ್ರಂಥಗಳನ್ನೂ 'ಮೂಲಾವಿದ್ಯಾನಿರಾಸಃ', 'ಸುಗಮಾ', ಮಾಣ್ಡೂಕ್ಯರಹಸ್ಯವಿವೃತಿಃ' ಮುಂತಾದ ಸಂಸ್ಕೃತಗ್ರಂಥಗಳನ್ನೂ ಓದಬೇಕು, ಪ್ರಸ್ಥಾನತ್ರಯಭಾಷ್ಯಗಳ ಕನ್ನಡಾನುವಾದದ ಪೀಠಿಕೆಗಳಲ್ಲಿಯೂ ಹೆಚ್ಚು ವಿಷಯಗಳು ತಕ್ಕಮಟ್ಟಿಗೆ ಸಿಕ್ಕುವವು.

ಗಳಲ್ಲಿ ಬಂದಿರುವದರಿಂದ ಮಂಡನಮಿಶ್ರನು ಒಪ್ಪಿರುವ ಅಗ್ರಹಣ, ಅನ್ಯಥಾ ಗ್ರಹಣ- ಎಂಬೀ ಎರಡೇ ಈ ಅವಿದ್ಯೆಗಳೆಂಬುದು ಯುಕ್ತವಾಗಿಯೂ ಕಾಣು ತ್ತದೆ. ಆದರೆ ಕಲ್ಪತರುವ್ಯಾಖ್ಯಾನದಲ್ಲಿ ಅನಾದಿಯಾದ ಭಾವಾವಿದ್ಯೆಯೊಂದು, ಪೂರ್ವಾಪೂರ್ವಭ್ರಮೆಯ ಸಂಸ್ಕಾರವು ಇನ್ನೊಂದು – ಇವೆರಡೇ ಭಾಮತೀ ಪ್ರಸ್ಥಾನದಲ್ಲಿ ಒಪ್ಪಿರುವ ಅವಿದ್ಯೆಗಳೆಂದು (ಕ. ತ. ಪು. ೩) ಬರೆದಿದೆ. ಅವಿದ್ಯಾ ದ್ವಯ ಮತ್ತು 'ಅವಿದ್ಯಾತತ್ಸಂಸ್ಕಾರ' ಎಂಬ ಮಾತು ಅಲ್ಲಲ್ಲಿ ಭಾಮತೀಗ್ರಂಥ ದಲ್ಲಿ ಸಿಕ್ಕುವದರಿಂದ 'ಸಂಸ್ಕಾರವೇ ಅವಿದ್ಯೆ' ಎಂಬ ಕಲ್ಪತರುವಾಕ್ಯವನ್ನು ಪ್ರಮಾಣೀಕರಿಸುವದಕ್ಕೆ ಇಲ್ಲವಾದರೂ 'ಅವಿದ್ಯಾಪ್ರತ್ಯುಪಸ್ಥಾಪಿತನಾಮರೂಪ- ಮಾಯಾವೇಶೇನ' ಎಂಬ (ಸೂ. ಭಾ. ೨-೨-೨) ಭಾಷ್ಯವಾಕ್ಯವನ್ನು ವಿವರಿಸು ವಾಗ '**ಕಾರಣಭೂತಯಾ ಲಯಲಕ್ಷಣಯಾ ಅವಿದ್ಯಯಾ ಪ್ರಾಕ್ಸ ರ್ಗೋಪಚಿತೇನ ಚ ವಿಕ್ಷೇಪಸಂಸ್ಕಾರೇಣ ಯತ್ ಪ್ರತ್ಯುಪಸ್ಥಾಪಿತಂ ನಾಮರೂಪಂ ತದೇವ ಮಾಯಾ**' (ಭಾ. ಪು. ೪೯೪) ಕಾರಣವಾಗಿರುವ ಲಯಸ್ವರೂಪವಾದ ಅವಿದ್ಯೆಯಿಂದಲೂ ಸೃಷ್ಟಿಗೆ ಪೂರ್ವದಲ್ಲಿರುವ ವಿಕ್ಷೇಪ ಸಂಸ್ಕಾರದಿಂದಲೂ ತಂದೊಡ್ಡಲ್ಪಟ್ಟಿರುವ ನಾಮರೂಪವೇ ಮಾಯೆ – ಎಂದು ಸ್ಪಷ್ಟವಾಗಿ ಬರೆದಿರುವದರಿಂದ ಕಾರಣಾವಿದ್ಯೆ, ಲಯಲಕ್ಷಣಾವಿದ್ಯೆ – ಇವೆರಡೂ ಒಂದೇ ಎಂದಂತೆ ಆಗಿದೆ. ಮಹಾಪ್ರಲಯದಲ್ಲಿ ಅಂತಃಕರಣಾದಿಗಳು 'ತಮ್ಮ ಕಾರಣವಾದ ಅನಿರ್ವಾಚ್ಯಾವಿದ್ಯೆಯಲ್ಲಿ ಲಯವಾಗಿ ಸೂಕ್ಷ್ಮವಾದ ಶಕ್ತಿರೂಪದಿಂದ ಕರ್ಮವಿಕ್ಷೇಪಕವಾದ ಅವಿದ್ಯಾವಾಸನೆಗಳಿಂದೊಡಗೂಡಿರುತ್ತವೆ (ಭಾ. ಪು. ೩೩೩)' ಎಂದು ಹೇಳಿರುವದನ್ನು ಆಧಾರವಾಗಿಟ್ಟುಕೊಂಡು 'ಭ್ರಮೆಗಿಂತಲೂ ಸಂಸ್ಕಾರ ಕ್ಕಿಂತಲೂ ಅನ್ಯವಾದ ಭಾವರೂಪಾವಿದ್ಯೆಯನ್ನು ಇಲ್ಲಿ ಒಪ್ಪಿರುತ್ತದೆ' ಎಂದು ಕಲ್ಪತರುಕಾರರು ಹೇಳಿರುವದನ್ನು ತಿರಸ್ಕರಿಸುವದಕ್ಕೆ ಬರುವಂತಿಲ್ಲ. ಅವಿದ್ಯೆಯು ಜೀವರುಗಳಿಗೆಲ್ಲ ಸಮಾನವಾದ ಒಂದೇ ಇಲ್ಲ, ಒಬ್ಬೊಬ್ಬ ಜೀವನಿಗೊಂದೊಂದು ಅವಿದ್ಯೆ (ಪು. ೩೭೭); ಇದು ಅನೇಕವಾಗಿಯೇ ಇದ್ದರೂ ಎಲ್ಲವೂ ಅವಿದ್ಯೆಯೇ ಎಂಬ ಕಾರಣದಿಂದ 'ಅವ್ಯಕ್ತ', 'ಅವ್ಯಾಕೃತ' ಎಂದು ಕರೆಯುತ್ತಾರೆ (ಭಾ. ೩೭೮) ಎಂದು ಸ್ಪಷ್ಟವಾಗಿ ಭಾಮತೀಕಾರರು ಬರೆದಿರುವದರಿಂದ ಅವರ ಮತದಲ್ಲಿಯೂ ಅವಿದ್ಯೆಯೆಂದರೆ ಮೂಲಾವಿದ್ಯೆಯೆಂದೇ ಫಲಿತವಾಗುತ್ತದೆ. ಅದು ಅನೇಕ ವೆಂಬುದೊಂದು ಅವರಲ್ಲಿ ವಿಶೇಷ. ಅಂತೂ ಈ ಮತವೂ ಭಾಷ್ಯಕ್ಕೆ ವಿರುದ್ಧ ವೆಂದೇ ಆಯಿತು.

## ಭಾಮತೀವಿವರಣಪ್ರಸ್ಥಾನಗಳ ವೈಲಕ್ಷಣ್ಯ

೧೬೭. ಭಾಮತೀವಿವರಣಗಳು ಭಾಷ್ಯಾಭಿಪ್ರಾಯವನ್ನೇ ವಿವರಿಸುವದಕ್ಕೆ ಹೊರಟದ್ದರೂ ಇವೆರಡಕ್ಕೂ ಕೆಲವು ಮುಖ್ಯವಿಷಯಗಳಲ್ಲಿ ಮತಭೇದವಿರುತ್ತದೆ.

ಪರಮಲಕ್ಷ್ಯವಾದ ಅದ್ವೈತದಲ್ಲಿ ಇಬ್ಬರಿಗೂ ಮತಭೇದವಿಲ್ಲದ್ದರಿಂದ ಈ ಭೇದವು ಅದ್ವೈತಕ್ಕೆ ಹಾನಿಯನ್ನು ತರುವದಿಲ್ಲ-ಎಂದು ಈಗಿನ ವೇದಾಂತಿಗಳು ಸಮಾಧಾನವನ್ನು ಹೇಳುತ್ತಾರೆ. ಆದರೆ ಈ ಪ್ರಸ್ಥಾನಗಳೆರಡನ್ನೂ ಒಂದಕ್ಕೊಂದು ವಿರುದ್ಧವಾಗಿಯೇ ಇರುವದರಿಂದಲೂ, ಇವಕ್ಕೆ ಏಕವಾಕ್ಯತೆಯನ್ನೂ ಮಾಡುವದಕ್ಕೆ ಬರುವಂತೆಯೇ ಇಲ್ಲವಾದ್ದರಿಂದಲೂ ಇವೆರಡೂ ಭಾಷ್ಯಾಭಿಪ್ರಾಯವನ್ನೇ ಹೇಳುತ್ತವೆ ಎಂಬುದು ವಿಚಾರಸಹವಲ್ಲವೆಂದೇ ತೀರ್ಮಾನಿಸಬೇಕಾಗಿದೆ. ವಾಚಕರ ಸೌಕರ್ಯಕ್ಕಾಗಿ ಈ ಎರಡು ಪ್ರಸ್ಥಾನಗಳ ಮುಖ್ಯಮತಭೇದಗಳನ್ನು ಇಲ್ಲಿ ಸಂಗ್ರಹಿಸಿ ಕೊಟ್ಟಿರುತ್ತೇನೆ. ಇದನ್ನು ನಾವು ಶಾಸ್ತ್ರರತ್ನಾಕರ ಪೋಲಕಮ್ ಸು. ಶ್ರೀರಾಮಶಾಸ್ತ್ರಿಗಳ ಪಂಚಪಾದಿಕಾ ಭೂಮಿಕೆ (ಪೋ. ಪಂ. ಭೂ. ಪು. ೧೧೬ರಿಂದ ೧೩೫) ಯಿಂದ ತೆಗೆದುಕೊಂಡಿರುತ್ತೇವೆ.

೧. ಕರ್ಮಗಳಿಂದ ವಿವಿದಿಷೆ – ತತ್ತ್ವವನ್ನು ತಿಳಿಯಬೇಕೆಂಬ ಇಚ್ಛೆ-ಉಂಟಾಗುವದೆಂದು ಭಾಮತೀಪ್ರಸ್ಥಾನ; ಅವುಗಳಿಂದ ವಿದ್ಯೆ– ಜ್ಞಾನವೇ – ಆಗುವದೆಂದು ವಿವರಣ. ೨. ಬ್ರಹ್ಮಸಾಕ್ಷಾತ್ಕಾರಕ್ಕೆ ಮನಸ್ಸೇ ಕರಣವು ಎಂದು ಭಾಮತಿ; ಶಬ್ದವೇ ಅದಕ್ಕೆ ಕರಣವೆಂದು ವಿವರಣ. ೩. ಶ್ರವಣಾದಿಗಳು ವಿಧಿಸ್ವರೂಪವಾಗಿರುವ ವೇದಾಂತವಾಕ್ಯಗಳಿಂದ ಉಕ್ತವಾಗಿವೆ ಎಂಬುದು ವಾಚಸ್ಪತಿಯ ಮತ; ಶ್ರವಣಾದಿಗಳು ವಿಹಿತವಾಗಿವೆ, ವಿಧಿಪ್ರಯುಕ್ತವಾಗಿಯೇ ಬ್ರಹ್ಮಜಿಜ್ಞಾಸೆಯು ಉಂಟಾಗುತ್ತದೆ ಎಂದು ವಿವರಣ. ೪. ಶ್ರವಣಮನನನಿದಿಧ್ಯಾಸನಗಳಲ್ಲಿ ನಿದಿಧ್ಯಾಸವೇ ಅಂಗಿಯೆಂದು ಭಾಮತಿ; ಶ್ರವಣವೇ ಅಂಗಿ-ಉಳಿದೆರಡೂ ಅಂಗಗಳು ಎಂದು ವಿವರಣ. ೫. ಜೀವನು ಅಜ್ಞಾನಾಂತಃಕರಣಾದಿಗಳಿಂದ ಅವಚ್ಛಿನ್ನನಾಗಿರುತ್ತಾನೆಂದು ಭಾಮತಿ; ಅವುಗಳಲ್ಲಿ ಪ್ರತಿಬಿಂಬಿತನಾಗಿರುತ್ತಾನೆಂದು ವಿವರಣ. ೬. ಅವಿದ್ಯೆಗೆ ಆಶ್ರಯನು ಜೀವನು, ವಿಷಯವು ಬ್ರಹ್ಮ - ಎಂಬುದು ವಾಚಸ್ಪತಿಮತ; ಅದಕ್ಕೆ ಆಶ್ರಯವೂ ವಿಷಯವೂ ಒಂದೇ ಎಂದು ವಿವರಣ. ೭. ಅವಿದ್ಯೆಯು ಒಬ್ಬೊಬ್ಬ ಜೀವರಿಗೂ ಒಂದೊಂದು ಎಂಬುದು ಭಾಮತಿಗೆ ಒಪ್ಪು; ಅವಿದ್ಯೆಯು ಅನೇಕವಲ್ಲ, ಒಂದೇ ಎಂಬುದು ವಿವರಣಕ್ಕೆ ಸಂಮತ. ೮. ಅಖಂಡಾಕಾರವೃತ್ತಿಗೆ ಉಪಹಿತಬ್ರಹ್ಮವು ವಿಷಯವು ಎಂದು ಭಾಮತೀಕಾರರ ಮತ; ಶುದ್ಧಬ್ರಹ್ಮವೇ ವೃತ್ತಿಗೆ ವಿಷಯವೆಂದು ವಿವರಣಕಾರರ ಮತ. ೯. ಸಾಧನಚತುಷ್ಟಯದಲ್ಲಿ ಹೇಳಿರುವ ವಿವೇಕವು ಸತ್ಯಾಸತ್ಯವಿವೇಕವೇ ಎಂದು ಭಾಮತಿ; ಅದು ಸತ್ಯಾಸತ್ಯವಿವೇಕವಲ್ಲ, ನಿತ್ಯಾನಿತ್ಯವಿವೇಕವೇ ವಿಂದು ವಿವರಣ. ೧೦. ಸ್ವಾಧ್ಯಾಯವನ್ನು ಅಧ್ಯಯನ ಮಾಡಬೇಕು ಎಂಬ ಶ್ರುತಿಯಲ್ಲಿ ಅರ್ಥಜ್ಞಾನವೂ ಸೇರಿದೆ ಎಂದು ಭಾಮತಿ; ಕೇವಲ ಅಕ್ಷರಾವಾಪ್ತಿಯನ್ನು ಹೇಳುತ್ತದೆ ಎಂದು ವಿವರಣ.

ಈ ಹತ್ತು ವಿಷಯಗಳಿಗಿಂತ ಬೇರೆಯ ಕೆಲವು ವಿಷಯಗಳಲ್ಲಿಯೂ ಮತಭೇದವಿವೆ. ಹೀಗಿದ್ದರೂ ಈ ಎರಡು ಪ್ರಕ್ರಿಯೆಗಳೂ ಒಂದೇ ಸಿದ್ಧಾಂತ ವನ್ನು ಹೇಳುವದರಿಂದ ಇವೆರಡಕ್ಕೂ ವಿರೋಧವಿಲ್ಲ ಎಂದು ಈಗಿನ ವೇದಾಂತಿ ಗಳನೇಕರ ಅಭಿಪ್ರಾಯ. ಆದರೆ ಸಂಬಂಧವಾರ್ತಿಕದಲ್ಲಿ ಅದ್ವೈತಸಿದ್ಧಾಂತ ವನ್ನೊಪ್ಪಿದ್ದ ಪ್ರಾಚೀನವೇದಾತಿಗಳ ಅನೇಕ ಪ್ರಕ್ರಿಯೆಗಳನ್ನು ಸುರೇಶ್ವರಾ ಚಾರ್ಯರು ಖಂಡಿಸಿರುತ್ತಾರೆ; ಭಾಷ್ಯಕಾರರೂ ಕೆಲವು ಅದ್ವೈತಪ್ರಕ್ರಿಯೆ ಗಳನ್ನು ತಮ್ಮ ಭಾಷ್ಯಗಳಲ್ಲಿ ಖಂಡನೆಗೆ ತೆಗೆದುಕೊಂಡಿರುತ್ತಾರೆಂದು ಹಿಂದೆಯೇ (ಪು. ೩೦೪-೩೧೫) ತಿಳಿಸಿರುತ್ತೇವೆ. ಆದ್ದರಿಂದ ಗುರಿಯು ಒಂದೇ ಆದಮಾತ್ರ ದಿಂದ ಪ್ರಕ್ರಿಯೆಗಳಿಗೆ ವಿರೋಧವಿಲ್ಲವೆಂಬುದನ್ನು ಒಪ್ಪಲಾಗುವದಿಲ್ಲ. ಇದೂ ಅಲ್ಲದೆ ಭಾಮತೀಕಾರರೂ ವಿವರಣಾಚಾರ್ಯರೂ ಭಾಸ್ಕರಮತವನ್ನು ಖಂಡಿಸು ವದರಲ್ಲಿ ಐಕಮತ್ಯವುಳ್ಳವರಾಗಿರುತ್ತಾರಾದರೂ ಅವರಿಬ್ಬರಿಗೂ, ಈ ಎರಡು ಪ್ರಸ್ಥಾನಗಳನ್ನೂ ಅನುಸರಿಸುವ ಈಚಿನ ಅದ್ವೈತಗ್ರಂಥಕರ್ತರುಗಳಿಗೂ, ಪರಸ್ಪರಖಂಡನಗಳು ನಡೆದೇ ಇರುವದು ಪ್ರತ್ಯಕ್ಷವಾಗಿರುತ್ತದೆ. ಆದ್ದರಿಂದ ಈ ಪ್ರಸ್ಥಾನಗಳು ಆಚಾರ್ಯರ ಅಭಿಪ್ರಾಯವನ್ನೇ ತಿಳಿಸುತ್ತವೆ ಎಂಬುದಕ್ಕೆ ಇಬ್ಬರಿಗೂ ಕೊನೆಯಲ್ಲಿ ಅದ್ವೈತದಲ್ಲಿಯೇ ಪರಮತಾತ್ಪರ್ಯವಿದೆ ಎಂಬುದಿಷ್ಟೇ ಎಂದಿಗೂ ಪ್ರಮಾಣವಾಗಲಾರದು.

೧೬೮. ವಾರ್ತಿಕಪ್ರಸ್ಥಾನವನ್ನೂ ವಿವರಣಪ್ರಸ್ಥಾನವನ್ನೂ ಭಾಮತೀ ಪ್ರಸ್ಥಾನವನ್ನೂ ವಿವರವಾಗಿ 'ವೇದಾಂತವಿಚಾರದ ಇತಿಹಾಸ'ದಲ್ಲಿ ತಕ್ಕ ಮಟ್ಟಿಗೆ ವಿವರಿಸಿರುತ್ತದೆ. ಅವುಗಳನ್ನು ನೋಡಿದವರಿಗೆ ಪಂಚಪಾದಿಕಾಕರ್ತ ರಾದ ಪದ್ಮಪಾದರೂ ವಾರ್ತಿಕಕರ್ತರಾದ ಸುರೇಶ್ವರರೂ ಒಬ್ಬರೇ ಆಚಾರ್ಯರ ಶಿಷ್ಯರೆಂದು ನಿರ್ಣಯಿಸುವದು ಕಷ್ಟವಾಗುತ್ತದೆ. ಪದ್ಮಪಾದರಿಗೂ ಸುರೇಶ್ವರ ರಿಗೂ ಮತವೈಷಮ್ಯವನ್ನು ಗಂಟುಹಾಕಿರುವ ಶಂಕರವಿಜಯಕಾರರಿಗೆ ಈ ಇಬ್ಬ ರಲ್ಲಿ ಯಾರು ಶಂಕರಾಚಾರ್ಯರ ಪ್ರಿಯತರಶಿಷ್ಯರೆಂಬ ಬಗ್ಗೆ ನಿರ್ಣಯವಾಗದೆ ತಮ್ಮ ಕಾಲಕ್ಕೆ ಪ್ರಚಲಿತವಾಗಿದ್ದ ದಂತಕಥೆಗಳನ್ನೇ ಅವರೂ ವರ್ಣಿಸಿರು ತ್ತಾರೆಂದು ಹೇಳಬೇಕಾಗಿದೆ. ವಾರ್ತಿಕಪ್ರಸ್ಥಾನಕ್ಕೂ ಭಾಮತೀಪ್ರಸ್ಥಾನಕ್ಕೂ ಅನೇಕ ವಿಷಯಗಳಲ್ಲಿ ವೈಮತ್ಯವೇ ಇರುವದರಿಂದ ಸುರೇಶ್ವರರೇ ವಾಚಸ್ಪತಿ ಯಾಗಿ ಹುಟ್ಟಿದರೆಂದು ಮಾಧವೀಯದಲ್ಲಿ ಕಲ್ಪಿಸಿರುವದು ಕಲ್ಪನಾಮಾತ್ರವೇ ಎಂದೂ ಸಿದ್ಧವಾಗುತ್ತದೆ. ವಾರ್ತಿಕಗಳನ್ನು ಪೂರ್ಣವಾಗಿ ಅಭ್ಯಾಸಮಾಡುವದು ಈಗ ಕಡಿಮೆ ; ಪಂಚಪಾದಿಕೆಯನ್ನು ಓದುವವರೂ ಬಹಳ ಕಡಿಮೆ. ಆದರೂ ವಿವರಣಪ್ರಸ್ಥಾನವೇ ಬಲುಮಟ್ಟಿಗೆ ಪ್ರಚಲಿತವೇದಾಂತವಿಚಾರಕ್ರಮದಲ್ಲಿ ಪ್ರಬಲವಾಗಿದೆ ಎಂದು ಹೇಳಿದರೆ ತಪ್ಪಾಗದು. ಭಾಮತೀಪ್ರಸ್ಥಾನವನ್ನು ಅಭ್ಯಾಸಮಾಡುವವರೂ ತಕ್ಕಮಟ್ಟಿನ ಸಂಖ್ಯೆಯಲ್ಲಿ ಸಿಕ್ಕುತ್ತಾರಾದರೂ ಈ

ಎರಡು ಪ್ರಸ್ಥಾನಗಳಿಗೂ ಹೇಗೋ ಏಕವಾಕ್ಯತೆಯನ್ನು ಮಾಡಿಕೊಂಡು ಎರಡೂ ಪರಮಾರ್ಥದೃಷ್ಟಿಯಿಂದ ಒಂದೇ ವಿಷಯದಲ್ಲಿ ತಾತ್ಪರ್ಯವುಳ್ಳವಾಗಿವೆ ಎಂದು ಒಳ ಭೇದಗಳ ಕಡೆಗೆ ಅಷ್ಟು ಲಕ್ಷ್ಯವನ್ನು ಕೊಡದೆ ಇರುವವರೇ ಈಗ ಬಹಳ ವಾಗಿರುತ್ತಾರೆ. ವ್ಯಾಖ್ಯಾನಪ್ರಸ್ಥಾನಗಳ ಪರಸ್ಪರವೈಲಕ್ಷಣ್ಯವನ್ನು ನಾವು ಇಲ್ಲಿ ಪ್ರಸ್ತಾಪಿಸಿರುವದು ನಿಜವಾಗಿ ಆಚಾರ್ಯರ ಗ್ರಂಥಗಳು ಯಾವವು ?– ಎಂದು ನಿಶ್ಚಯಿಸಬೇಕೆನ್ನುವವರಿಗೆ ಸಹಾಯಕವಾಗಿರಲೆಂಬ ಉದ್ದೇಶದಿಂದಲೇ ಹೊರತು ಈ ಪ್ರಸ್ಥಾನದ ಗ್ರಂಥಗಳಲ್ಲಿ ಉಪಾದೇಯವಾದ ವಿಷಯಗಳೇ ಇಲ್ಲವೆಂಬ ಅಭಿಪ್ರಾಯದಿಂದಲ್ಲವೆಂಬುದನ್ನು ಓದುಗರು ನೆನಪಿನಲ್ಲಿಡಬೇಕು.



# ೨೨. ಆಚಾರ್ಯಕೃತ ಪ್ರಕರಣಗಳು

## ಪ್ರಕರಣಗಳ ವಿಭಾಗಕರಣ

೧೬೯. ಶಾಸ್ತ್ರದ ಒಂದಂಶಕ್ಕೆ ಸಂಬಂಧಪಟ್ಟು, ಶಾಸ್ತ್ರದಲ್ಲಿ ವಿಶದವಾಗಿ ಹೇಳದೆ ಇರುವ ಯಾವದಾದರೊಂದು ಮುಖ್ಯವಿಷಯವನ್ನು ವಿವರಿಸುವದಕ್ಕೆ ಹೊರಟಿರುವ ಚಿಕ್ಕ ಗ್ರಂಥಗಳಿಗೆ ಪ್ರಕರಣಗಳು ಎಂದು ಹೆಸರು. ಆಚಾರ್ಯರ ಹೆಸರಿನಲ್ಲಿ ಇಂಥ ಅನೇಕ ಪ್ರಕರಣಗಳು ಪ್ರಚಾರದಲ್ಲಿರುತ್ತವೆ. ಇವುಗಳಲ್ಲಿ ನಿಜವಾಗಿ ಆಚಾರ್ಯರವು ಯಾವವು ?–ಎಂಬುದನ್ನು ನಿರ್ಣಯಿಸುವದು ಕಷ್ಟವಾಗಿದೆ. ದೊಡ್ಡವರ ಹೆಸರಿನಲ್ಲಿದ್ದರೆ ಜಿಜ್ಞಾಸುಗಳು ಆದರದಿಂದ ಓದುವರೆಂಬ ಕಾರಣದಿಂದ ಅನೇಕರು ಇಂಥ ಗ್ರಂಥಗಳಿಗೆ ಆಚಾರ್ಯರ ಹೆಸರನ್ನು ಕೊಟ್ಟಿರುತ್ತಾರೆ. ಈ ವಿಷಯದಲ್ಲಿ ನಾವು ವಿಮರ್ಶಿಸಿ ಮಾಡಿಕೊಂಡಿರುವ ತೀರ್ಮಾನಗಳನ್ನು ಇಲ್ಲಿ ಬರೆಯುತ್ತೇವೆ. ಇದನ್ನು ಪ್ರತಿಯೊಬ್ಬರೂ ಸ್ವಂತವಾಗಿ ವಿಚಾರ ಮಾಡಿಯೇ ನಿಶ್ಚಯಿಸಬೇಕಾಗಿದೆಯೆಂಬುವದನ್ನು ಹೇಳಬೇಕಾಗಿಲ್ಲ.

ಪ್ರಕರಣಗಳಲ್ಲಿ ಕೆಲವನ್ನು ಅಧ್ಯಾತ್ಮಪ್ರಕಾಶಕಾರ್ಯಾಲಯದಲ್ಲಿ ಪ್ರಕಟಿಸಲಾಗಿದೆ. ಅವನ್ನು ಮೊದಲು ಬರೆದು ಮಿಕ್ಕವನ್ನು ಆ ಮೇಲೆ ವಿಮರ್ಶಿಸುವೆವು. ಆಯಾ ಗ್ರಂಥಗಳ ಪೀಠಿಕೆಯಲ್ಲಿ ಕೊಟ್ಟಿರುವ ಗ್ರಂಥಕರ್ತೃವಿನ ನಿರ್ಣಯದ ವಿಚಾರವನ್ನು ವಾಚಕರು ಓದಿಕೊಳ್ಳುವದಕ್ಕೆ ಇದರಿಂದ ಸಹಾಯವಾದೀತೆಂದು ನಂಬಲಾಗಿದೆ.

## ಕಾರ್ಯಾಲಯದಲ್ಲಿ ಪ್ರಕಟಿತವಾದ ಪ್ರಕರಣಗಳು

೧೭೦. ಈ ಕೆಳಗಿನ ಪ್ರಕರಣಗಳು ಈವರೆಗೆ ಅಧ್ಯಾತ್ಮಪ್ರಕಾಶ ಕಾರ್ಯಾಲಯದಲ್ಲಿ ಹೊರಕ್ಕೆ ಬಂದಿವೆ :

(೧,೨) **ಉಪದೇಶಸಾಹಸ್ರೀ :** ಇದು ಗದ್ಯಬಂಧ, ಪದ್ಯಬಂಧ–ಎಂದು ಎರಡು ವಿಭಾಗವಾಗಿ ಪ್ರಕಟವಾಗಿದೆ. ಗದ್ಯದಲ್ಲಿ ಶ್ರವಣಮನನನಿದಿಧ್ಯಾಸನಗಳ ಕ್ರಮವನ್ನು ವಿಸ್ತಾರವಾಗಿ ಹೇಳಿದೆ. ಶೈಲಿಯು ಪ್ರೌಢವಾಗಿದೆ; ಭಾಷ್ಯಕ್ಕೆ ಎಲ್ಲಿಯೂ ವಿರುದ್ಧವಾಗಿಲ್ಲ. ಪದ್ಯಭಾಗದಲ್ಲಿ ಹತ್ತೊಂಬತ್ತು ಉಪಪ್ರಕರಣಗಳಿವೆ. ಈ ಗ್ರಂಥದ ಹಲವು ಶ್ಲೋಕಗಳನ್ನು ಸುರೇಶ್ವರಾಚಾರ್ಯರು ನೈಷ್ಕರ್ಮ್ಯಸಿದ್ಧಿಯಲ್ಲಿಯೂ ವಾರ್ತಿಕಗಳಲ್ಲಿಯೂ ಬಳಸಿಕೊಂಡಿರುತ್ತಾರೆ. ಗ್ರಂಥವು ಆಚಾರ್ಯರದ್ದೆಂದು ನಿಸ್ಸಂದೇಹವಾಗಿ ಹೇಳಬಹುದು.

(೩,೪) **ವಿವೇಕಚೂಡಾಮಣಿ, ಮಹಾವಾಕ್ಯದರ್ಪಣ :** ವಿವೇಕಚೂಡಾಮಣಿಯು ಭಗವತ್ಪಾದರದ್ದೇ ಎಂದು ಪ್ರಸಿದ್ಧವಾಗಿದೆ. ಇದರ ಶೈಲಿಯು ಲಲಿತವಾಗಿದ್ದು ವಿಷಯಪ್ರತಿಪಾದನವು ಮನಮೋಹಕವಾಗಿದೆ. ‘ಮಹಾವಾಕ್ಯ



ದರ್ಪಣ'ಕ್ಕೂ ವಿವೇಕಚೂಡಾಮಣಿಗೂ ವಿಷಯಪ್ರತಿಪಾದನೆಯಲ್ಲಿಯೂ ಶೈಲಿಯಲ್ಲಿಯೂ ಹೋಲಿಕೆಯಿದೆ. ಇವೆರಡೂ 'ಗೀತಾತಾತ್ಪರ್ಯಬೋಧಿನಿ'ಯನ್ನು ಬರೆದ ಶಂಕರಾನಂದರ ಕೃತಿಗಳೇ ಎಂಬುದನ್ನು ನಾವು ಸಕಾರಣವಾಗಿ ಗ್ರಂಥಭೂಮಿಕೆಗಳಲ್ಲಿ ತೋರಿಸಿಕೊಟ್ಟಿರುತ್ತೇವೆ.

(೫) ಅಪರೋಕ್ಷಾನುಭೂತಿ : ಆತ್ಮತತ್ತ್ವವನ್ನು ನೇರಾಗಿ ಇಲ್ಲಿಯೇ ಈಗಲೇ ಅನುಭವಕ್ಕೆ ತಂದುಕೊಳ್ಳುವ ಬಗೆಯನ್ನು ತಿಳಿಸುವ ಪ್ರಕರಣ. ಇದು ಆಚಾರ್ಯರ ಗ್ರಂಥವಾಗಿರಲಾರದೆಂಬುದಕ್ಕೆ ಕಾರಣಗಳನ್ನು ಭೂಮಿಕೆಯಲ್ಲಿ ಕೊಟ್ಟಿದೆ. ಆಚಾರ್ಯರು ಪ್ರಸ್ಥಾನತ್ರಯಭಾಷ್ಯದಲ್ಲಿ ಬಳಸದೆ ಇರುವ ಪಾರಿಭಾಷಿಕಶಬ್ದಗಳೂ ಇಲ್ಲಿ ಕೆಲವು ಇವೆ. ಗ್ರಂಥದಲ್ಲಿ ತತ್ತ್ವಪ್ರತಿಪಾದನೆಯು ಬಹುಸುಂದರವಾಗಿದೆ.

(೬) ಅದ್ವೈತಾನುಭೂತಿ : ಇದರಲ್ಲಿ ಕೆಲವು ದೃಷ್ಟಾಂತಗಳನ್ನು ಉಪಯೋಗಿಸಿರುವ ರೀತಿ, ಕೆಲವು ಹೊಸ ಪಾರಿಭಾಷಿಕಶಬ್ದಗಳು- ಇವುಗಳಿಂದ ಇದು ಆಚಾರ್ಯರದ್ದಾಗಿರಲಾರದೆನ್ನಬೇಕು.

(೭) ಸ್ವಾತ್ಮನಿರೂಪಣ : ಇದರಲ್ಲಿ ಸದಾಶಿವಬ್ರಹ್ಮೇಂದ್ರರ 'ಅದ್ವೈತತಾರಾವಳಿ'ಯ ಆರ್ಯಗಳೆಲ್ಲವೂ ಅಡಕವಾಗಿರುವದರಿಂದಲೂ ಭಾಷ್ಯಕ್ಕೂ ಶಾಂಕರ ವೇದಾಂತಪ್ರಕ್ರಿಯೆಗೂ ವಿರುದ್ಧವಾದ ಅಂಶಗಳು ಕೆಲವು ಇರುವದರಿಂದಲೂ ಇದು ಆಚಾರ್ಯರದ್ದಲ್ಲವೆನ್ನಬೇಕಾಗಿದೆ.

(೮) ಮನೀಷಾಪಂಚಕ : ಇದು ಯಾವದೋ ಶಂಕರವಿಜಯದಿಂದ ತೆಗೆದುಕೊಂಡ ಪ್ರಕರಣವಾಗಿರಬೇಕೆಂದು ನಮ್ಮ ಊಹೆ. ಭಗವತ್ಪಾದರ ಚರಿತ್ರೆಯನ್ನೂ (ಪು. ೯೬-೯೭) ೮ನೆಯ ಪರಿಶಿಷ್ಟವನ್ನೂ ನೋಡಿ.

(೯) ನಿರ್ವಾಣಷಟ್ಕ : ಇದಕ್ಕೆ 'ಆತ್ಮಷಟ್ಕ'ವೆಂದೂ ಹೆಸರುಂಟು. ಮನೀಷಾಪಂಚಕ'ದಂತೆ ಜನಾನುರಾಗಕ್ಕೆ ಪಾತ್ರವಾಗಿದೆ. ಇದರ ಕೆಲವು ಶಬ್ದಗಳು ಭಾಷ್ಯದಲ್ಲಿ ಪ್ರಚುರವಾಗಿ ಪ್ರಯೋಗವಾಗಿಲ್ಲ.

(೧೦) ಬ್ರಹ್ಮಾನುಚಿಂತನ : ತತ್ತ್ವಾನುಸಂಧಾನಕ್ಕೆ ಸಹಾಯಕವಾದ ಗ್ರಂಥ. ನಾನು ಬ್ರಹ್ಮವೇ ಎಂದು ಭಾವಿಸಬೇಕು, ಅದಾಗದಿದ್ದರೆ ಈ ವಾಕ್ಯವನ್ನೇ ಅಭ್ಯಾಸಮಾಡಬೇಕು ಎಂದು (೧೮) ಹೇಳಿರುವದರಿಂದ ಈ ಗ್ರಂಥವು ಆಚಾರ್ಯರದ್ದಲ್ಲ.

(೧೧) ಸದಾಚಾರಾನುಸಂಧಾನ : ಗ್ರಂಥವು ಆಚಾರ್ಯರದ್ದಾಗಿರಲಾರದೆಂಬುದಕ್ಕೆ ಮೂಲದ ವಿಷಯಪ್ರತಿಪಾದನೆಯಿಂದಲೂ ಇಲ್ಲಿ ಬಳಸಿರುವ ಶಬ್ದಗಳಿಂದಲೂ ವ್ಯಕ್ತವಾಗುತ್ತದೆ.

(೧೨) **ದಶಶ್ಲೋಕೀ :** ಮಧುಸೂದನಸರಸ್ವತಿಗಳ 'ಸಿದ್ಧಾಂತಬಿಂದು' ಮತ್ತು ಅದರ ಮೇಲೆ ಗೌಡಬ್ರಹ್ಮಾನಂದರು ಬರೆದಿರುವ 'ನ್ಯಾಯರತ್ನಾವಳಿ' ಇವುಗಳಿಂದ ಗ್ರಂಥಕ್ಕೆ ಹೆಚ್ಚಿನ ಪ್ರಾಶಸ್ತ್ಯವು ಬಂದಿದೆ. ಗ್ರಂಥವು ಆಚಾರ್ಯರದ್ದೆಂದು ನಿಶ್ಚಯಿಸುವದಕ್ಕೆ ಆಧಾರವು ಸಿಕ್ಕಿಲ್ಲ; ಇದರ ಕೆಲವು ಶಬ್ದಗಳು ಭಾಷ್ಯದಲ್ಲಿ ಪ್ರಚುರವಾಗಿಲ್ಲ.

(೧೩) **ವಾಕ್ಯವೃತ್ತಿ ಮತ್ತು ಲಘುವಾಕ್ಯವೃತ್ತಿ :** ವಾಕ್ಯವೃತ್ತಿಯನ್ನು ಪಂಚದಶಿಯಲ್ಲಿ ಪ್ರಮಾಣವಾಗಿ ಉದಾಹರಿಸಿರುತ್ತದೆ. 'ಶ್ರೀವಲ್ಲಭಂ ವಿಮಲಬೋಧಘನಂ ನಮಾಮಿ' ಎಂಬ ಮಂಗಲಶ್ಲೋಕವು ಆಚಾರ್ಯರದ್ದಲ್ಲವೆಂದು ಹೇಳುತ್ತಾರೆ. ಲಘುವಾಕ್ಯವೃತ್ತಿಯಲ್ಲಿ ಮಹಾವಾಕ್ಯದ ವಿಚಾರವೇ ಇಲ್ಲ!

(೧೪) **ದೃಗ್ದೃಶ್ಯವಿವೇಕ :** ಇದಕ್ಕೆ 'ವಾಕ್ಯಸುಧಾ' ಎಂಬ ಅನ್ವರ್ಥವಲ್ಲದ ಹೆಸರೂ ಉಂಟು. ಗ್ರಂಥವು ಆಚಾರ್ಯರ ಅಭಿಪ್ರಾಯಗಳಿಗಿಂತ ವಿಲಕ್ಷಣವಾದ ಪ್ರಸ್ಥಾನವನ್ನು ಅಲ್ಲಲ್ಲಿ ಸ್ವೀಕರಿಸಿದೆ ಎಂಬುದನ್ನು ಪೀಠಿಕೆಯಲ್ಲಿ ತಿಳಿಸಲಾಗಿದೆ. ವಾಣೀವಿಲಾಸಮುದ್ರಣಾಲಯದ ಪ್ರಕಟನೆಯಲ್ಲಿ ಇದರ ಹೆಸರಿಲ್ಲ. ಇದು ಆಚಾರ್ಯಕೃತ, ವಿದ್ಯಾರಣ್ಯಕೃತ- ಎಂದು ಮುಂತಾಗಿ ಮತವಿಕಲ್ಪಗಳೂ ಇವೆ.

(೧೫) **ಸವಾರ್ತಿಕಪಂಚೀಕರಣ :** ಪಂಚೀಕರಣವೇನೂ ಗ್ರಂಥದ ಮುಖ್ಯವಿಷಯವಲ್ಲ. ಓಂಕಾರದ ಮೂಲಕ ಸಮಾಧಿಯನ್ನು ಪಡೆಯುವ ಬಗೆಯನ್ನು ತಿಳಿಸುವದೇ ಇದರ ಉದ್ದೇಶ. ವಾರ್ತಿಕಕ್ಕೂ ಮೂಲಕ್ಕೂ ಹೊಂದುಗಡೆಯಿಲ್ಲ. ಗ್ರಂಥವು ಆಚಾರ್ಯರದ್ದಾಗಿರಬಹುದೆ ?– ಎಂಬುದು ಸಂಶಯಗ್ರಸ್ತ.

(೧೬) **ಸ್ವಾತ್ಮಪ್ರಕಾಶಿಕಾ :** ಭಾಷ್ಯವಿರುದ್ಧವಾದ ಅಭಿಪ್ರಾಯಗಳೂ ಇದರಲ್ಲಿವೆ.

(೧೭) **ಮೋಹಮುದ್ಗರ :** ಇದನ್ನು 'ಭಜಗೋವಿಂದಸ್ತೋತ್ರ'ವೆಂದೂ ಕರೆಯುತ್ತಾರೆ.

(೧೮) **ಅದ್ವೈತಪಂಚರತ್ನ :** 'ಆತ್ಮಪಂಚಕ'ವೆಂದೂ ಇದಕ್ಕೆ ಹೆಸರು. ಅದ್ವೈತದ ಸಿದ್ಧಾಂತವನ್ನು ಸಂಗ್ರಹಿಸಿ ತಿಳಿಸುವ ಐದು ಶ್ಲೋಕಗಳಿವೆ.

(೧೯) **ಆತ್ಮಬೋಧ :** ಇಲ್ಲಿ 'ಅನಿರ್ವಾಚ್ಯವಾದ ಅನಾದ್ಯವಿದ್ಯೆ' ಎಂಬ ಶಬ್ದವಿರುವದರಿಂದ ಇದು ಆಚಾರ್ಯರ ಕೃತಿಯಲ್ಲ. ಆತ್ಮತತ್ತ್ವವನ್ನು ಸುಂದರವಾಗಿ ತಿಳಿಸುತ್ತದೆ.

(೨೦) **ಜೀವನ್ಮುಕ್ತಾನಂದಲಹರಿ :** 'ಗುರುವಿನ ದೀಕ್ಷೆ'ಯನ್ನು ಹೊಂದಿ ಅಜ್ಞಾನವನ್ನು ಕಳೆದುಕೊಂಡವನು ಮೋಹವನ್ನು ಹೊಂದುವದಿಲ್ಲ- ಎಂಬರ್ಥದ ಚರಣವು ಪ್ರತಿಯೊಂದು ಶ್ಲೋಕದಲ್ಲಿಯೂ ಇದೆ. ಮಹಾವಾಕ್ಯಗಳ ಅರ್ಥದ ಜ್ಞಾನಾಭ್ಯಾಸವನ್ನು (೧೬) ಹೇಳಿರುವದರಿಂದ ಆಚಾರ್ಯರದ್ದಲ್ಲ.

(೨೧) **ಯತಿಪಂಚಕ ಅಥವಾ ಕೌಪೀನಪಂಚಕ :** ಇದರಲ್ಲಿ ಪಂಚಾಕ್ಷರೀಮಂತ್ರವನ್ನು ಸಂನ್ಯಾಸಿಗಳು ಜಪಿಸುತ್ತಿರುವರೆಂದು ಹೇಳಿರುವದರಿಂದ ಆಚಾರ್ಯರದ್ದಾಗಿರಲಾರದು.

(೨೨) **ಮಾಯಾಪಂಚಕ :** ಪಾರಿಭಾಷಿಕಶಬ್ದಗಳನ್ನು ನೋಡಿದರೆ ಆಚಾರ್ಯರದ್ದಲ್ಲವೆನಿಸುತ್ತದೆ.

(೨೩) **ನಿರ್ವಾಣಮಂಜರಿ :** ಹನ್ನೆರಡು ಶ್ಲೋಕಗಳ ಪ್ರಕರಣ. ಕೆಲವು ಪಾಠಗಳಲ್ಲಿ ಶ್ಲೋಕಸಂಖ್ಯೆ ಕಡಿಮೆ ಇದೆ. ಪಲ್ಲವಿಯಲ್ಲಿ 'ಶಿವೋಽಹಮ್' ಎಂದು ಮತ್ತೆಮತ್ತೆ ಬರುತ್ತದೆ

(೨೪) **ಬ್ರಹ್ಮಜ್ಞಾನಾವಳೀಮಾಲೆ :** ಈ ಪ್ರಕರಣದಲ್ಲಿಯೂ ಹಿಂದಿನ ಪ್ರಕರಣದಲ್ಲಿಯೂ ಭಾಷ್ಯದಲ್ಲಿ ಬಳಕೆಯಲ್ಲಿಲ್ಲದ ಅನೇಕ ಶಬ್ದಗಳ ಪ್ರಯೋಗವಿದೆ.

(೨೫) **ಅನಾತ್ಮಶ್ರೀವಿಗರ್ಹಣ :** ಇದೂ ಹಿಂದಿನ ಪ್ರಕಾರದಂತೆಯೇ.

(೨೬) **ತತ್ತ್ವೋಪದೇಶ :** ಇದು ಆಚಾರ್ಯರದ್ದಲ್ಲವೆಂದೇ ತೋರುತ್ತಿದೆ. ಭಾಷ್ಯದಲ್ಲಿ ಪ್ರಚಾರವಿಲ್ಲದ ಶಬ್ದಗಳ ಪ್ರಯೋಗ, ಜಹಲ್ಲಕ್ಷಣೆಯೇ ಮುಂತಾದವುಗಳನ್ನು ತತ್ತ್ವಮಸಿವಾಕ್ಯಾರ್ಥದ ವಿವರಣೆಗೆ ಉಪಯೋಗಿಸಿರುವದು- ಇವು ಸಂಶಯಕ್ಕೆ ಎಡೆಯನ್ನುಂಟುಮಾಡುತ್ತದೆ.

(೨೭) **ಪ್ರೌಢಾನುಭೂತಿ :** ಇದರಲ್ಲಿ (೫೨) ಶ್ರವಣಮನನನಿದಿಧ್ಯಾಸನಗಳಾದಮೇಲೆ ಸಮಾಧಿಯು ಅವಶ್ಯವೆಂಬ ಬೋಧೆಯಿದೆ. ಆಚಾರ್ಯರದ್ದಲ್ಲ.

(೨೮) **ಉಪದೇಶಪಂಚಕ ·** ಸಾಧನಸೋಪಾನವನ್ನು ವಿವರಿಸುವ ಗ್ರಂಥ. ಇದರ ವಾಕ್ಯವೊಂದನ್ನು -ಶ್ರೀಶಂಕರಾನಂದರು ತಮ್ಮ 'ಗೀತಾತಾತ್ಪರ್ಯಬೋಧಿನಿ'ಯಲ್ಲಿ ಉದಾಹರಿಸಿರುತ್ತಾರೆ. ಆದ್ದರಿಂದ ಇದು ಅವರಿಗಿಂತ ಪ್ರಾಚೀನವೆನ್ನಬೇಕು. ಆಚಾರ್ಯರದ್ದೆ?- ಎಂಬುದು ಮಾತ್ರ ನಿಶ್ಚಿತವಲ್ಲ.

(೨೯) **ಸ್ವರೂಪಾನುಸಂಧಾನ :** 'ವಿಜ್ಞಾನನೌಕೆ'ಯೆಂದೂ ಇದನ್ನು ಕರೆಯುವದುಂಟು. ಕೊನೆಯ ಶ್ಲೋಕದಲ್ಲಿ ಇದನ್ನು 'ಸ್ತುತಿ'ಯೆಂದು ಕರೆದಿದೆ. ಸಮಾಧಿಯಲ್ಲಿಯೇ ಪೂರ್ಣತತ್ತ್ವದ ದರ್ಶನವಾಗುವದೆಂದು ಇಲ್ಲಿ ಹೇಳಿದೆ.

(೩೦) **ಧನ್ಯಾಷ್ಟಕ** : ಬ್ರಹ್ಮಜ್ಞಾನದಿಂದ ಧನ್ಯರಾದವರ ವರ್ಣನೆ ಯಿರುವ ಎಂಟು ಶ್ಲೋಕಗಳಿವೆ. ಇವರ ಜೊತೆಗೆ ಕೆಲವು ಕಡೆಗಳಲ್ಲಿ ಹನ್ನೆರಡು ಶ್ಲೋಕಗಳಿರುವದುಂಟು.

(೩೧) **ಲಕ್ಷ್ಮೀನರಸಿಂಹಪಂಚರತ್ನ** ; ಇದರಲ್ಲಿ ಪರಮಾತ್ಮನನ್ನು ಲಕ್ಷ್ಮೀನರಸಿಂಹನೆಂಬ ಹೆಸರಿನಿಂದ ಕರೆದಿದೆ. ಆತನನ್ನು ಭಜಿಸುವಂತೆ ಚಿತ್ತಕ್ಕೆ ಉಪದೇಶಿಸಿದ ಐದು ಶ್ಲೋಕಗಳಿವೆ.

## ಇನ್ನೂ ಪ್ರಕಟವಾಗದಿರುವ ಪ್ರಕರಣಗಳು

೧೭೧. ಈ ಕೆಳಗಿನ ಪ್ರಕರಣಗಳು ಕಾರ್ಯಾಲಯದಲ್ಲಿ ಇನ್ನುಮುಂದೆ ಪ್ರಕಾಶವಾಗಲಿರುವವು. ಇವುಗಳನ್ನು ಶ್ರೀರಂಗದ ವಾಣೀವಿಲಾಸಮುದ್ರಣಾಲಯ ದಲ್ಲಿ ಪ್ರಕಟಿಸಿರುತ್ತಾರೆ.

(೧) **ಶತಶ್ಲೋಕೀ** : ಇದರಲ್ಲಿ ಉದ್ದುದ್ದನೆಯ ವೃತ್ತಗಳ ಶ್ಲೋಕ ಗಳಿಂದ ವೇದಾಂತಸಿದ್ಧಾಂತವನ್ನು ನಿಶದಗೊಳಿಸಿರುತ್ತದೆ. ಇವರ ಪ್ರತಿಪಾದನ ಕ್ರಮವನ್ನೂ ಭಾಷಾಶೈಲಿಯನ್ನೂ ದೃಷ್ಟಾಂತಾದಿಗಳನ್ನೂ ನೋಡಿದರೆ ಇದು ಆಚಾರ್ಯರದ್ದಾಗಿರಲಾರದೆಂದೆನಿಸುತ್ತದೆ.

(೨) **ಸರ್ವವೇದಾಂತಸಿದ್ಧಾಂತಸಾರಸಂಗ್ರಹ** : ಇದು ೧೦೦೬ ಶ್ಲೋಕಗಳಿಂದೊಡಗೂಡಿರುವ ದೊಡ್ಡ ಪ್ರಕರಣ. ಗುರುಶಿಷ್ಯಸಂವಾದರೂಪವಾಗಿ ರುವ ಇದನ್ನೂ ವಿವೇಕಚೂಡಾಮಣಿಯನ್ನೂ ಬರೆದಿರುವ ಶಂಕರಾನಂದರೇ ಬರೆ ದಿರಬೇಕೆನ್ನಿಸುವದು. ಏಕೆಂದರೆ ವಿಷಯಪ್ರತಿಪಾದನೆಯು ಅದೇ ಪ್ರಕಾರದಲ್ಲಿ ರುತ್ತದೆ; ಇದರಲ್ಲಿಯೂ 'ಗೋವಿಂದ'ನಮಸ್ಕಾರವಿದೆ. ಆದರೆ ವಿವೇಕಚೂಡಾ ಮಣಿಯ ಪ್ರಕ್ರಿಯೆಗೂ ಪ್ರತಿಪಾದನೆಯ ಕ್ರಮಕ್ಕೂ ವೈಲಕ್ಷಣ್ಯವಿದ್ದು ಮಹಾ ವಾಕ್ಯದರ್ಪಣದಷ್ಟು ಇದು ಚೂಡಾಮಣಿಗೆ ಹತ್ತಿರವಿರುವದಿಲ್ಲ. ವಿದ್ವಾಂಸರು ಇನ್ನಷ್ಟು ಈ ಗ್ರಂಥವನ್ನು ಒಳಹೊಕ್ಕು ಪರಿಶೀಲಿಸುವದು ಅವಶ್ಯ.

(೩) **ಸರ್ವಸಿದ್ಧಾಂತಸಾರಸಂಗ್ರಹ** : ಇದನ್ನು ಮದರಾಸಿನಲ್ಲಿ ಪ್ರೊ|| ರಂಗಾಚಾರ್ಲುರೆಂಬವರು ಪ್ರಕಟಿಸಿದರು. ಇದನ್ನು ಮಾಧವಾಚಾರ್ಯರು ತಮ್ಮ 'ಸರ್ವದರ್ಶನಸಂಗ್ರಹ'ದಲ್ಲಿ ಪರಾಮರ್ಶಿಸಿಲ್ಲ. ಇಲ್ಲಿ ವೇದವ್ಯಾಸಪಕ್ಷ ಮತ್ತು ವೇದಾಂತಪಕ್ಷ– ಎಂದು ಎರಡು ಮತಗಳನ್ನು ಪ್ರತಿಪಾದಿಸಿರುತ್ತದೆ. ಗೋವಿಂದಯೋಗಿಯು ವೇದಾಂತಸೂತ್ರಗಳಿಗೆ ಭಾಷ್ಯವನ್ನು ಬರೆದಂತೆ ಸೂಚಿಸಿದೆ. ಇನ್ನೂ ಅನೇಕ ಕಾರಣಗಳಿಂದ ಇದು ಆಚಾರ್ಯಕೃತವಲ್ಲವೆನ್ನ ಬೇಕಾಗಿದೆ. ಇದು ವಾಣೀವಿಲಾಸಪ್ರಕಟಿತಗ್ರಂಥಗಳಲ್ಲಿ ಸೇರಿಲ್ಲ.

(೪) **ಪ್ರಬೋಧಸುಧಾಕರ :** ಇದರಲ್ಲಿ ೧೯ ಉಪಪ್ರಕರಣಗಳಿವೆ. ಮಂಗಲಶ್ಲೋಕದಲ್ಲಿ 'ವನ್ದೇ ಶ್ರೀಯಾದವಾಧೀಶಮ್' ಎಂದಿದೆ. ಗ್ರಂಥಕರ್ತನು ಕೃಷ್ಣಭಕ್ತನೆಂದು ಕಾಣುತ್ತದೆ.

(೫) **ಪ್ರಶ್ನೋತ್ತರರತ್ನಮಾಲಿಕಾ :** ಇದು ಲಲಿತವಾದ ಬಂಧದ ೬೭ ಶ್ಲೋಕಗಳುಳ್ಳದ್ದು. ಇದು ಶಂಕರಾನಂದರ ಕೃತಿಯೆಂದು ಕೆಲವರು ಹೇಳುತ್ತಾರೆ.

(೬) **ಯೋಗತಾರಾವಳಿ :** ಇದರಲ್ಲಿ ನಾದಾನುಸಂಧಾನ, ಸಮಾಧಿ, ಜಾಲಂಧರಾದಿಬಂಧಗಳು— ಮುಂತಾದ ವಿಷಯಗಳಿವೆ. ಆಚಾರ್ಯರದ್ದಲ್ಲ.

(೭) **ಏಕಶ್ಲೋಕೀ :** ಇದು ಒಂದು ಸ್ವತಂತ್ರಗ್ರಂಥವೆಂಬಂತೆ ವಾಣೀವಿಲಾಸಗ್ರಂಥಾವಳಿಯಲ್ಲಿ ತೋರಿಸಿದ್ದರೂ ಆಚಾರ್ಯರ ಹೆಸರಿನಲ್ಲಿ ಇರುವ ಮತ್ತೊಂದು ಪ್ರಕರಣದ ಭಾಗವಾಗಿರುವಂತೆ ನೋಡಿದ ನೆನಪಿದೆ.

(**ಸೂಚನೆ :** (೧) ಏಕಶ್ಲೋಕಿ (೨) ಶತಶ್ಲೋಕಿ (೩) ಸರ್ವಸಿದ್ಧಾಂತ ಸಂಗ್ರಹ (೪) ಯೋಗತಾರಾವಳಿ—ಇವುಗಳನ್ನು ಬಿಟ್ಟು ಉಳಿದೆಲ್ಲ ಪ್ರಕರಣ ಗ್ರಂಥಗಳೂ ಈಚೆಗೆ ಕಾರ್ಯಾಲಯದಲ್ಲಿ ಪ್ರಕಟವಾಗಿವೆ.)



# ೨೩. ಆಚಾರ್ಯರ ಹೆಸರಿನಲ್ಲಿರುವ ಸ್ತೋತ್ರಗಳು

೧೭೨. ಆಚಾರ್ಯರು ಅದ್ವೈತಿಗಳೇ ಆಗಿದ್ದರೂ ಸಗುಣೋಪಾಸನೆಗೆ ವಿರೋಧಿಗಳಲ್ಲ. ಉತ್ತಮಾಧಿಕಾರಿಗಳಲ್ಲದವರು ಉಪಾಸನೆಯನ್ನು ಮಾಡಲೆಂದೇ ಶ್ರುತಿಯಲ್ಲಿ ಅದನ್ನು ಹೇಳಿದೆ ಎಂಬುದು ಅವರ ಅಭಿಪ್ರಾಯ. ಕರ್ಮೋಪಾಸನೆಯುಳ್ಳವರಿಗೆ ಕರ್ಮಸಮೃದ್ಧಿಗಾಗಿ ಉಪಯೋಗವಾಗಲೆಂದು ಕರ್ಮಾಂಗವಾದ ಉಪಾಸನೆಗಳನ್ನೂ ಮಧ್ಯಮಾಧಿಕಾರಿಗಳಿಗೆ ಸತ್ತ್ವಶುದ್ಧಿಯ ಮೂಲಕವಾಗಿ ಅದ್ವೈತಜ್ಞಾನಕ್ಕೆ ಉಪಕಾರಕವಾಗಲೆಂದು ಮತ್ತೆ ಕೆಲವು ಉಪಾಸನೆಗಳನ್ನೂ ಶ್ರುತಿಯಲ್ಲಿ ಹೇಳಿದೆ. ಉಪಾಸನೆಗಳಿಗೆ ಅಭ್ಯುದಯವೂ ಅಪರಬ್ರಹ್ಮದ ಉಪಾಸನೆಯಿಂದ ಕೈವಲ್ಯಕ್ಕೆ ಸಮೀಪವಾದ ಫಲವೂ ಆಗುವವು–ಎಂದು ಛಾಂದೋಗ್ಯ ಭಾಷ್ಯದಲ್ಲಿದೆ. ಹೀಗಿದ್ದರೂ ಆಚಾರ್ಯರ ಹೆಸರಿನಲ್ಲಿರುವ ಅನೇಕ ಸ್ತೋತ್ರಗಳು ಅವರೇ ಮಾಡಿದವೋ, ಅಥವಾ ಮತ್ತೆ ಯಾರಾದರೂ ಮಠಾಧಿಪರಾದ ಶಂಕರಾಚಾರ್ಯಬಿರುದಾಂಕಿತರು ಮಾಡಿದವೋ– ಹೇಳುವದಕ್ಕೆ ಬರುವದಿಲ್ಲ. ಆಚಾರ್ಯರು ಅರ್ಚಾ(ಪ್ರತಿಮಾ)ಪೂಜೆಯನ್ನೇನೂ ತಿರಸ್ಕರಿಸಿಲ್ಲ; ಆದರೂ ಈಗ ಪ್ರಚಲಿತವಾಗಿರುವ ವಿವಿಧದೇವತಾಸ್ತೋತ್ರಗಳನ್ನೆಲ್ಲ ಅವರೇ ಮಾಡಿದರೆಂದು ನಿರ್ಧರಿಸುವದು ಕಷ್ಟವಾಗಿದೆ.

## ಸ್ತೋತ್ರಗಳ ವರ್ಗೀಕರಣ

೧೭೩. ಆಚಾರ್ಯಕೃತಸ್ತೋತ್ರಗಳನ್ನು ಶ್ರೀರಂಗದ ವಾಣೀವಿಲಾಸ ಮುದ್ರಣಾಲಯದವರು ಪ್ರಕಾಶಗೊಳಿಸಿರುತ್ತಾರೆ. ಅವುಗಳು ಈ ಕೆಳಗೆ ಕಂಡಂತೆ ಇವೆ :

೧. ಗಣೇಶಸ್ತೋತ್ರಗಳು : (೧) ಗಣೇಶಪಂಚರತ್ನ, (೨) ಗಣೇಶಭುಜಂಗ.

೨. ಸುಬ್ರಹ್ಮಣ್ಯಸ್ತೋತ್ರಗಳು : (೩) ಸುಬ್ರಹ್ಮಣ್ಯಭುಜಂಗ.

೩. ಶಿವಸ್ತೋತ್ರಗಳು : (೪) ಶಿವಭುಜಂಗ, (೫) ಶಿವಾನಂದಲಹರೀ, (೬) ಶಿವಪಾದಾದಿಕೇಶಾಂತವರ್ಣನ. (೭) ಶಿವಕೇಶಾದಿಪಾದಾಂತವರ್ಣನ, (೮)ವೇದಸಾರಶಿವಸ್ತೋತ್ರ, (೯)ಶಿವಾಪರಾಧಕ್ಷಮಾಪಣ,(೧೦) ಸುವರ್ಣಮಾಲಾಸ್ತುತಿ,. (೧೧) ದಶಶ್ಲೋಕೀಸ್ತುತಿ, (?) (೧೨) ದಕ್ಷಿಣಾಮೂರ್ತಿವರ್ಣಮಾಲಾ, (೧೩) ದಕ್ಷಿಣಾಮೂರ್ತ್ಯಷ್ಟಕ, (೧೪) ದಕ್ಷಿಣಾಮೂರ್ತಿಸ್ತೋತ್ರ, (೧೫) ಕಾಲಭೈರವಾಷ್ಟಕ, (೧೬) ಶಿವಪಂಚಾಕ್ಷರ

ನಕ್ಷತ್ರಮಾಲಾ, (೧೭) ದ್ವಾದಶಲಿಂಗ, (೧೮) ಅರ್ಧನಾರೀಶ್ವರ, (೧೯) ಮೃತ್ಯುಂಜಯಮಾನಸಿಕಪೂಜಾ, (೨೦) ಶಿವನಾಮಾವಳಿ, (೨೧) ಶಿವಪಂಚಾಕ್ಷರ, (೨೨) ಉಮಾಮಹೇಶ್ವರ.

೪. ದೇವೀಸ್ತೋತ್ರಗಳು : (೨೩) ಸೌಂದರ್ಯಲಹರೀ, (೨೪) ದೇವೀ ಭುಜಂಗ, (೨೫) ಆನಂದಲಹರೀ, (೨೬) ತ್ರಿಪುರಸುಂದರೀವೇದಪಾದ ಸ್ತೋತ್ರ, (೨೭) ತ್ರಿಪುರಸುಂದರೀಮಾನಸಪೂಜಾ, (೨೮) ದೇವೀ ಚತುಷ್ಷಷ್ಟ್ಯುಪಚಾರಪೂಜಾ, (೨೯) ತ್ರಿಪುರಸುಂದರ್ಯಷ್ಟಕ, (೩೦) ಲಲಿತಾಪಂಚರತ್ನ, (೩೧) ಕಲ್ಯಾಣವೃಷ್ಟಿಸ್ತವ, (೩೨) ನವರತ್ನ ಮಾಲಿಕಾ, (೩೩) ಮಾತೃಮಾತೃಕಾಪುಷ್ಪಮಾಲಾಸ್ತವ, (೩೪) ಗೌರೀ ದಶಕ, (೩೫) ಭವಾನೀಭುಜಂಗ, (೩೬) ಕನಕಧಾರಾಸ್ತುತಿ, (೩೭)ಅನ್ನ ಪೂರ್ಣಾಷ್ಟಕ, (೩೮) ಮೀನಾಕ್ಷೀಪಂಚರತ್ನ, (೩೯) ಭ್ರಮರಾಂಬಾ ಷ್ಟಕ, (೪೦) ಶಾರದಾಭುಜಂಗಪ್ರಯಾತ.

೫. ವಿಷ್ಣುಸ್ತೋತ್ರಗಳು : (೪೧) ರಾಮಭುಜಂಗಪ್ರಯಾತ, (೪೨) ಲಕ್ಷ್ಮೀ ನರಸಿಂಹಪಂಚರತ್ನ ಮತ್ತು ಕರುಣಾರಸ, (೪೩) ವಿಷ್ಣುಭುಜಂಗ ಪ್ರಯಾತ, (೪೪) ವಿಷ್ಣುಪಾದಾದಿಕೇಶಾಂತಸ್ತೋತ್ರ, (೪೫) ಪಾಂಡು ರಂಗಾಷ್ಟಕ, (೪೬) ಅಚ್ಯುತಾಷ್ಟಕ, (೪೭) ಕೃಷ್ಣಾಷ್ಟಕ, (೪೮) ಹರಿ ಸ್ತುತಿ, (೪೯) ಗೋವಿಂದಾಷ್ಟಕ, (೫೦) ಭಗವನ್ಮಾನಸಪೂಜಾ, (೫೧) ಜಗನ್ನಾಥಾಷ್ಟಕ, (೫೨) ಷಟ್ಪದೀಸ್ತೋತ್ರ.

೬. ಹನುಮತ್‌ಸ್ತೋತ್ರ : (೫೩) ಹನುಮತ್ಪಂಚರತ್ನ.

೭. ನದ್ಯಾದಿಸ್ತೋತ್ರಗಳು : (೫೪) ನರ್ಮದಾಷ್ಟಕ, (೫೫–೫೬) ಯಮು ನಾಷ್ಟಕ (ಎರಡು ಪ್ರಕಾರ), (೫೭) ಗಂಗಾಷ್ಟಕ, (೫೮) ಮಣಿಕರ್ಣಿಕಾ ಷ್ಟಕ, (೫೯) ಕಾಶೀಪಂಚಕ, (೬೦) ಗುರ್ವಷ್ಟಕ.

೮. ಇತರ : (೬೧) ಪ್ರಾತಃಸ್ಮರಣ, (೬೨) ನಿರ್ಗುಣಮಾನಸಪೂಜಾ.

## ಸ್ತೋತ್ರಗಳ ವಿಷಯಕ್ಕೆ ವಿದ್ವಾಂಸರ ಅಭಿಪ್ರಾಯ

೧೭೩. ಶಂಕರಾಚಾರ್ಯರ ಹೆಸರಿನಿಂದ ಕನಿಷ್ಠಪಕ್ಷ ೨೪೦ ಸ್ತೋತ್ರಗಳು ಹಸ್ತಲಿಖಿತಪುಸ್ತಕಗಳಲ್ಲಿವೆ. ಇವುಗಳ ಶೈಲಿ ಮತ್ತು ವಿಷಯ– ಇವನ್ನು ಪರೀ ಕ್ಷಿಸಿದರೆ ಅಧಿಕಾಂಶವು ಕೃತ್ರಿಮವಾಗಿಯೇ ಇದೆ. ಆದ್ದರಿಂದ ಇವು ಶಂಕರಕೃತ ವೆಂಬುದು ಸಂದೇಹಾಸ್ಪದ. ಕನಿಷ್ಠಪಕ್ಷ ಹದಿನೈದು ಭುಜಂಗಪ್ರಯಾತಗಳಿವೆ. ಅವು ಗಣೇಶ, ಗಂಡಕೀ, ದಕ್ಷಿಣಾಮೂರ್ತಿ, ದತ್ತ, ದೇವೀ, ನರಸಿಂಹ, ಭವಾನೀ, ರಾಮ, ವಿಷ್ಣು, ಸಾಂಬ, ಶಿವ, ಸುಬ್ರಹ್ಮಣ್ಯ, ಹನುಮಂತ– ಮುಂತಾದ ದೇವತೆ

ಗಳ ಸ್ತೋತ್ರವಾಗಿವೆ. ಇವುಗಳ ಮೇಲೆ ಯಾವ ಪ್ರಾಚೀನವ್ಯಾಖ್ಯಾನಗಳೂ ಇಲ್ಲ. ಶಿವಭುಜಂಗಪ್ರಯಾತವನ್ನು ಬಿಟ್ಟರೆ (?) ಮಿಕ್ಕವು ಶಂಕರಕೃತವೆಂದು ಹೇಳುವದು ಕಷ್ಟ. ಇವುಗಳಲ್ಲದೆ ಮೂವತ್ತೈದು ಅಷ್ಟಕಗಳಿವೆ; ಅವು ಅಚ್ಯುತ, ಅನ್ನಪೂರ್ಣಾ, ಅಂಬಾ, ಅರ್ಧನಾರೀಶ್ವರ, ಕಾಲಭೈರವ, ಕೃಷ್ಣ, ಗಂಗಾ, ಗಣೇಶ, ಗೋವಿಂದ, ಚಿದಾನಂದ, ಜಗನ್ನಾಥ, ತ್ರಿಪುರಸುಂದರೀ, ದಕ್ಷಿಣಾಮೂರ್ತಿ, ನರ್ಮದಾ, ಪಾಂಡುರಂಗ, ಬಾಲಕೃಷ್ಣ, ಬಿಂದುಮಾಧವ, ಭವಾನೀ, ಭೈರವ, ಭ್ರಮರಾಂಬ, ಮಣಿಕರ್ಣಿಕೆ, ಯಮುನಾ, ರಾಘವ, ರಾಮ, ಲಿಂಗ, ಶಾರದಾಂಬಾ, ಶಿವ, ಶ್ರೀಚಕ್ರ, ಸಹಜಾ, ಹಾಲಾಸ್ಯ– ಮುಂತಾದ ದೇವತೆಗಳ ಸ್ತೋತ್ರಗಳು (ಬಲ. ಶಂ. ಪು.೧೩೪). ಬಲದೇವ ಉಪಾಧ್ಯಾಯರ ಅಭಿಪ್ರಾಯದಲ್ಲಿ ದಕ್ಷಿಣಾಮೂರ್ತಿಸ್ತೋತ್ರ ಮತ್ತು ಗೋಪಾಲಾಷ್ಟಕ –ಇವೆರಡಕ್ಕೂ ಪ್ರಾಚೀನವ್ಯಾಖ್ಯಾನಗಳಿರುವದರಿಂದ ಇವು ನಿಶ್ಚಿತವಾಗಿ ಆಚಾರ್ಯರ ರಚನೆಗಳೇ; ಷಟ್ಪದೀ ಮತ್ತು ದಶಶ್ಲೋಕೀ ಇವು ನಿಃಸಂದೇಹ ವಾಗಿ ಆಚಾರ್ಯರವೆಂದು ಅವರೆನ್ನುತ್ತಾರೆ. ಇದರಂತೆ ಆನಂದಲಹರೀ, ಗೋವಿಂದಾಷ್ಟಕ, ಹರಿಮೀಡೇ– ಇವೂ ಆಚಾರ್ಯರವೇ ಎಂದು ಅಭಿ ಪ್ರಾಯಪಟ್ಟಿರುತ್ತಾರೆ (ಬಲ.ಶಂ.ಪು. ೧೩೫–೧೩೭). ಈ ವಿಷಯಕ್ಕೆ ವಿದ್ವಾಂಸರ ಶೋಧನೆಯು ಅವಶ್ಯವಾಗಿದೆ ಎಂದು ನಮಗೆ ತೋರುತ್ತಿದೆ.

—

# ೨೪. ಶಂಕರಾಚಾರ್ಯರೂ ತಂತ್ರಶಾಸ್ತ್ರವೂ

## ಆಚಾರ್ಯರು ತಂತ್ರಗ್ರಂಥಗಳನ್ನು ಬರೆದಿದ್ದಾರೆಯೆ ?

೧೭೪. ಆಚಾರ್ಯರು ಶಾಕ್ತತಂತ್ರಗ್ರಂಥಗಳನ್ನು ಬರೆದಿದಾರೆಯೆ ?– ಎಂಬುದೊಂದು ಬಿಡಿಸಲಾಗದ ಸಮಸ್ಯೆಯಾಗಿದೆ. ಅವರು ತುಂಗಾನದಿಯ ಎಡ ದಡದ ಮೇಲೆ ಶ್ರೀಚಕ್ರದ ಮೇಲೆ(ಪು. ೨೨೦, KRTTW 14) ಬ್ರಹ್ಮವಿದ್ಯಾ ರೂಪಿಣಿಯಾದ ಶಾರದಾದೇವಿಯನ್ನು ಪ್ರತಿಷ್ಠಿಸಿರುತ್ತಾರೆಂದು ಅನೇಕರ ನಂಬಿಕೆ ಯಿದೆ. ಕಾಂಚಿಯಲ್ಲಿ ಶ್ರೀಚಕ್ರವನ್ನು ಬರೆದು ಕಾಮಾಕ್ಷಿಯನ್ನು ಪ್ರತಿಷ್ಠೆಮಾಡಿ ಸಿದ ವಿಚಾರವನ್ನು ಹಿಂದೆ (ಪು. ೨೪೭) ಕೊಟ್ಟಿರುತ್ತೇವೆ. ಶ್ರೀಚಕ್ರವು ಶಿವಶಕ್ತಿ ಯರ ಐಕ್ಯವನ್ನು ಸೂಚಿಸುತ್ತದೆ ಎಂದು ಚಿದ್ವಿಲಾಸರು ಅಭಿಪ್ರಾಯಪಟ್ಟಿರುತ್ತಾ ರೆಂದೂ (ಪು. ೨೪೯) ಹೇಳಿರುತ್ತೇವೆ. ಆನಂದಲಹರೀ, ಸೌಂದರ್ಯಲಹರೀ– ಈ ಗ್ರಂಥಗಳು ಆಚಾರ್ಯರೇ ಬರೆದವು ಎಂದು ಪ್ರಸಿದ್ಧಿ. ಕೈಲಾಸದಿಂದ ಆಚಾರ್ಯರು ಶಿವನಿಂದ ಪಡೆದುಕೊಂಡು ಇದನ್ನು ತಂದರೆಂದೂ ನಂಬಿಕೆ ಇದೆ (ಬಲ. ಶಂ, ೧೩೫.) ಈಗ್ಗೆ ಒಂದೊಂದು ಮಠದಲ್ಲಿಯೂ ಒಂದೊಂದು 'ಶಕ್ತಿ' ಯನ್ನು ಪೂಜೆಮಾಡುವ ಪದ್ಧತಿಯೂ ಇದೆ. ಈ ಎಲ್ಲಾ ಕಾರಣಗಳಿಂದ ಆಚಾರ್ಯರು ತಂತ್ರಗ್ರಂಥಗಳನ್ನು ಬರೆದಿರಬಹುದೆಂಬುದು ಸಂಭಾವಿತ ವಾಗುತ್ತದೆ.

## ಆಚಾರ್ಯರಿಗೆ ಗೃಹಸ್ಥಶಿಷ್ಯರೂ ಇದ್ದರೆ ?

೧೭೫. ಆಚಾರ್ಯರ ಮಠಾಧಿಪತಿಶಿಷ್ಯಪರಂಪರೆಯನ್ನು ಮುಂದೆ ವಿಮ ರ್ಶಿಸುವೆವು. ಸದ್ಯಕ್ಕೆ ಅವರಿಗೆ ಗೃಹಸ್ಥಶಿಷ್ಯಪರಂಪರೆಯೂ ಇದ್ದಿತೆ? –ಎಂಬು ದನ್ನು ಪರಿಶೀಲಿಸಬೇಕಾಗಿದೆ. 'ಶ್ರೀವಿದ್ಯಾರ್ಣವ' ಎಂಬ ಗ್ರಂಥದಲ್ಲಿ 'ಶಂಕರಾ ಚಾರ್ಯಶಿಷ್ಯಾಶ್ಚ ಚತುರ್ದಶ ದೃಢವ್ರತಾಃ | ದೇವ್ಯಾತ್ಮಾನೋ ದೃಢಾತ್ಮಾನೋ ನಿಗ್ರಹಾನುಗ್ರಹಕ್ಷಮಾಃ ||' (೧–೬೦) ಎಂಬ ಶ್ಲೋಕವಿದೆಯಂತೆ. ಆಚಾರ್ಯ ರಿಗೆ ೧೪ ಶಿಷ್ಯರು ; ಪದ್ಮಪಾದ, ಬೋಧ, ಗೀರ್ವಾಣ, ಆನಂದತೀರ್ಥ, ಶಂಕರ, ಸುಂದರ, ವಿಷ್ಣುಶರ್ಮ, ಲಕ್ಷ್ಮಣ, ಮಲ್ಲಿಕಾರ್ಜುನ, ತ್ರಿವಿಕ್ರಮ, ಶ್ರೀಧರ, ಕಪರ್ದಿ, ಕೇಶವ, ದಾಮೋದರ– ಇವರೆಲ್ಲರೂ ದೇವಿಯ ಉಪಾಸಕರು, ಪರಮ ಸಿದ್ಧರು. ಇವರಿಗೆ ಪ್ರಶಿಷ್ಯರೂ ಅನೇಕರಿದ್ದರು. ವಿಷ್ಣುಶರ್ಮನ ಪ್ರಧಾನ ಶಿಷ್ಯನು ಪ್ರಗಲ್ಭಾಚಾರ್ಯ ; ಈತನ ಶಿಷ್ಯನಾದ ವಿದ್ಯಾರ್ಣವಯತಿಯೇ ವಿದ್ಯಾರ್ಣವಕರ್ತ. ವಿದ್ಯಾರ್ಣವಕಾರನು 'ಕಾಮರಾಜವಿದ್ಯೆ'ಯಲ್ಲಿ ಹೀಗೆಂದು ಬರೆದಿದ್ದಾನಂತೆ :

ಸಂಪ್ರದಾಯೋ ಹಿ ನಾನ್ಯೋಽಸ್ತಿ ಲೋಕೇ ಶ್ರೀಶಂಕರಾದ್ ಬಹಿಃ ।
ವಾದಿಶಕ್ತಿಮತೇ ತನ್ತ್ರಂ ತನ್ತ್ರರಾಜಂ ಸುದುರ್ಲಭಮ್ ॥ ೯೮ ॥
ಮಾತೃಕಾರ್ಣವಸಂಜ್ಞಂ ತು ತ್ರಿಪುರಾರ್ಣವಸಂಜ್ಞಕಮ್ ।
ಯೋಗಿನೀಹೃದಯಂ ಚೈವ ಖ್ಯಾತಂ ಗ್ರನ್ಥಚತುಷ್ಟಯಮ್ ॥ ೯೯ ॥

**ಬಲದೇವ ಉಪಾಧ್ಯಾಯರ** ಗ್ರಂಥ (ಪು. ೧೬೧-೧೬೨)ದಿಂದ ಈ ಮೇಲಿನ ಅಂಶವನ್ನು ತೆಗೆದುಕೊಂಡಿರುತ್ತೇವೆ. **'ಮಹಾನುಶಾಸನ'**ವೆಂಬ ಗ್ರಂಥವು ಆಚಾರ್ಯಕೃತವೆಂದು ಪ್ರಸಿದ್ಧವಾಗಿದೆ ; ಅದನ್ನು ಮಠಗಳ ವಿಚಾರ ದಲ್ಲಿ ಪರಿಶೀಲಿಸುವೆವು. ಅದರಲ್ಲಿ ಮಠಾಧಿಪತಿಯು ಶುಚಿಯೂ ಜಿತೇಂದ್ರಿಯನೂ ವೇದವೇದಾಂತವಿಶಾರದನೂ ಯೋಗಜ್ಞನೂ ಶಾಸ್ತ್ರಜ್ಞನೂ ಆಗಿರಬೇಕು ; ಹಾಗಿಲ್ಲದಿದ್ದರೆ ಮನೀಷಿಗಳು ಅವನನ್ನು ನಿಗ್ರಹಿಸಬೇಕು (೧೦) –ಎಂಬರ್ಥದ ಶ್ಲೋಕವಿದೆ. ಅಲ್ಲಿ ಮನೀಷಿಗಳು ಎಂಬುದಕ್ಕೆ ಗೃಹಸ್ಥಶಿಷ್ಯರು ಎಂಬರ್ಥವನ್ನು ವ್ಯಾಖ್ಯಾನಕಾರರು ಕೊಟ್ಟಿದಾರಂತೆ. ಪೀಠದ ಲೌಕಿಕವ್ಯಾವಹಾರಿಕ ರೀತಿನೀತಿ ಗಳನ್ನು ನೋಡುವ ಭಾರವು ಇಂದಿಗೂ ಗೃಹಸ್ಥಶಿಷ್ಯರಿಗೇ ಇದೆ. ಆದರೆ ಹಿಂದೆ ಗೃಹಸ್ಥಶಿಷ್ಯರೇ ಕಾರ್ಯಕರ್ತರಾಗಿದ್ದರು. ಆಚಾರ್ಯರವರು ಶ್ರೀವಿದ್ಯೆಯ ಉಪಾಸಕರಾಗಿದ್ದರು ; ಆ ವಿದ್ಯೆಯ ಪರಂಪರೆಯಲ್ಲಿ ಗೃಹಸ್ಥಶಿಷ್ಯರೂ ಅನೇಕರಿರು ತ್ತಾರೆ. ಮೇಲೆ ಹೇಳಿದ **ಸುಂದರಾಚಾರ್ಯರ** ಶಿಷ್ಯರು ಗೃಹಸ್ಥರು, ಸಂನ್ಯಾಸಿ ಗಳು, ಪೀಠನಾಯಕರು– ಎಂದು ಮೂರು ಬಗೆಯಾಗಿದ್ದರು. ಅವರಿಂದಲೇ ಸುಪ್ರಸಿದ್ಧ ಭಾಸ್ಕರರಾಯರಿಗೆ ಶ್ರೀವಿದ್ಯೆ ಬಂತು. ಈ ಗುರುಪರಂಪರೆಯೂ ಅವಿಚ್ಛಿನ್ನವಾಗಿದೆ– ಎಂದು **ಸಾಹಿತ್ಯಾಚಾರ್ಯ, ಪಂಡಿತ, ನಾರಾಯಣಶಾಸ್ತ್ರಿ ಖಿಸ್ತೆ**– ಇವರ ವಚನದ ಪ್ರಮಾಣದಿಂದ **ಬಲದೇವ ಉಪಾಧ್ಯಾಯರು** (ಪು. ೧೬೩, ೧೬೪) ಬರೆದಿರುತ್ತಾರೆ.

ಇದೇ ವಿಷಯಕ್ಕೆ **ಕೆ. ಆರ್. ವೆಂಕಟರಾಮನ್**ರವರು ಮತ್ತೊಂದು ಬಗೆಯ ಅಭಿಪ್ರಾಯವನ್ನು ಕೊಟ್ಟಿರುತ್ತಾರೆ : ರಾಜೇಂದ್ರಲಾಲ್ ಮಿತ್ರರು ಬಿಹಾರಿನ ಮುಸ್‌ಫರ್‌ಪುರ್ ಜಿಲ್ಲೆಯ ಸೀತಾಮುರ್ಢಿಯಲ್ಲಿ ಕಂಡುಹಿಡಿದಿರುವ **ಗದ್ಯವಲ್ಲರಿ** ಎಂಬ ನ್ಯಾಸಜಪಾದಿಸಹಿತ ಶ್ರೀವಿದ್ಯಾಪರಗ್ರಂಥದಲ್ಲಿ ಒಂದು ಗುರು ಪರಂಪರೆಯನ್ನು ಬರೆದಿದೆಯಂತೆ. ಅದರಲ್ಲಿ ಶಿವವಿಷ್ಣುಬ್ರಹ್ಮವಶಿಷ್ಠಶಕ್ತಿಪರಾಶರ ವ್ಯಾಸಶುಕರಾದ ಬಳಿಕ ಗೌಡಪಾದರೇ ಮೊದಲಾಗಿ ವಿದ್ಯಾರಣ್ಯರವರೆಗಿನ– ಶೃಂಗೇರಿಯ ಶಾರದಾಪೀಠದ– ಗುರುಗಳನ್ನೇ ಅನುಕ್ರಮದಿಂದ ಹೇಳಿ **ಶ್ರೀಮಲ ಯಾನಂದದೇವತೀರ್ಥಸರಸ್ವತಿ** ಎಂಬ ವಿದ್ಯಾರಣ್ಯಶಿಷ್ಯರನ್ನು **ಆನಂದ ಚಿತ್ಪ್ರತಿಬಿಂಬರವರಿಗೆ** ಹೇಳಿ ಅವರ ಶಿಷ್ಯರು **ಶ್ರೀನಿಜಾತ್ಮಪ್ರಕಾಶಾನಂದನಾಥ ಮಲ್ಲಿಕಾರ್ಜುನಯೋಗೀಂದ್ರ**ರೆಂದು ತಿಳಿಸಿದೆಯಂತೆ (KRTTW pp. 42–43). ಈ ಗುರುಪರಂಪರೆಯು ನಿಜವೆಂದಾದರೆ ಬಲದೇವ ಉಪಾಧ್ಯಾಯರು

ತಿಳಿಸಿರುವ ಗೃಹಸ್ಥಶಿಷ್ಯಪರಂಪರೆಯು ಗತಿ ಏನೆಂಬುದನ್ನು ನಾವು ವಿಚಾರಿಸಬೇಕಾಗುವದು.

## ಆಚಾರ್ಯರ ಗುರುಪರಂಪರೆಯಲ್ಲಿ ಶ್ರೀವಿದ್ಯೆಯಿತ್ತೆ ?

೧೭೬. ಶ್ರೀಗೌಡಪಾದರು, ಶ್ರೀಶಂಕರರು-ಮುಂತಾದವರು ವಿವರಿಸಿರುವ ಶ್ರೀವಿದ್ಯೆಯು ಉಪನಿಷತ್ತಿನ ಬ್ರಹ್ಮವಿದ್ಯೆಗಿಂತ ಭಿನ್ನವಲ್ಲವೆಂಬುದಕ್ಕೆ ಈ ಬಗೆಯ ಗ್ರಂಥಗಳೇ ಸಾಕ್ಷಿ ಎಂದು **ಕೆ. ಆರ್. ವೆಂಕಟರಾಮನ್‌ರವರು** (KRTTW p. 43) ಬರೆದಿದಾರೆ. ಆಚಾರ್ಯರು ಶ್ರೀವಿದ್ಯೆಯ ಉಪಾಸಕರೇ ಆಗಿದ್ದರೆಂಬುದು ಪ್ರಸಿದ್ಧವಾಗಿದೆ- ಎಂದು **ಬಲದೇವ ಉಪಾಧ್ಯಾಯರು.** (ಬಲ. ಶಂ. ಪು. ೧೬೩). ಸೌಂದರ್ಯಲಹರಿಯ ಕರ್ತರು ಯಾರೆಂಬ ವಿಷಯಕ್ಕೆ **ಟೀಕಾಕಾರರಲ್ಲಿ ಮತಭೇದ**ವಿದ್ದರೂ ಲಕ್ಷ್ಮೀಧರ, ಭಾಸ್ಕರರಾಯ, ಕೈವಲ್ಯಾಶ್ರಮ- ಮುಂತಾದ ಟೀಕಾಕಾರರು ಆ ಗ್ರಂಥವು ಭಗವತ್ಪಾದರದ್ದೇ ಎಂದು ಅಂಗೀಕರಿಸಿರುತ್ತಾರೆ ; ಈ ಸೌಂದರ್ಯಲಹರಿಯಲ್ಲಿ (ಶ್ಲೋಕ ೭೫ ರಲ್ಲಿ) **'ದ್ರವಿಡಶಿಶು'** ಎಂಬ ಪರಾಮರ್ಶವಿದೆ ; ಆ ಶಿಶುವಿಗೆ ಭಗವತಿಯು ತಾನೇ ಸ್ತನಪಾನವನ್ನು ಮಾಡಿಸಿದ್ದಳಂತೆ. (ತವ ಸ್ತನ್ಯಂ ಮನ್ಯೇ ....ದಯಾವತ್ಯಾ ದತ್ತಂ ದ್ರವಿಡಶಿಶುರಾಸ್ವಾದ್ಯ ತವ ಯತ್) ಆ ಶಿಶು 'ಜ್ಞಾನಸಂಬಂಧರ್' ಎಂಬ ಶೈವಾಚಾರ್ಯನೆಂದೂ ಕೆಲವರು ಹೇಳುತ್ತಾರೆ.[1] ಅವರು ನಮ್ಮ ಆಚಾರ್ಯರೇ ಎಂದು ಮತ್ತೆ ಕೆಲವರ ಮತ ! ಈ ದ್ರವಿಡಶಿಶುವಾದ ಜ್ಞಾನಸಂಬಂಧರ ಕಾಲದಿಂದ ಆಚಾರ್ಯರ ಕಾಲವನ್ನು ನಿರ್ಣಯಿಸುವದಕ್ಕೆ ಹೋಗಿರುವವರೂ ಉಂಟು (ಬಲ. ಶಂ- ಪು. ೧೪೫). ಆದರೆ ಸೌಂದರ್ಯಲಹರಿಯು ಆಚಾರ್ಯರದ್ದೇ ಎಂದು ನಿರ್ಣಯವಾದಮೇಲಷ್ಟೆ, ಈ ವಾದಕ್ಕೆ ಅವಕಾಶ? ಹೀಗೆಯೇ ಪ್ರಪಂಚಸಾರವು ಶಂಕರಾಚಾರ್ಯಕೃತವೆಂದೂ ಅದರ **ವಿವರಣ**ವ್ಯಾಖ್ಯಾನವು **ಪದ್ಮಪಾದಾಚಾರ್ಯರದೆಂದೂ** ಪ್ರಸಿದ್ಧಿಯಿದೆ. ಪ್ರಪಂಚಸಾರವು ಪ್ರಪಂಚಾಗಮವೆಂಬ ಗ್ರಂಥದ ಸಾರವೆಂದು ಕೆಲವರ ಮತ (ಬಲ. ಶಂ. ಪು. ೧೬೬). ಆಚಾರ್ಯರು ವೇದಾಂತಸೂತ್ರ ೧-೩-೩೩ರಲ್ಲಿ ಉದಾಹರಿಸಿರುವ ಯೋಗಮಾಹಾತ್ಮ್ಯಪ್ರತಿಪಾದಕದ ಶ್ವೇತಾಶ್ವತರ (ಶ್ವೇ. ೨-೧೪)ರ ವಿವರವನ್ನು ಮಾಡುವಾಗ **ಕಲ್ಪತರುಕಾರರಾದ ಅಮಲಾನಂದರು** ಪ್ರಪಂಚಸಾರದಶ್ಲೋಕವನ್ನು ಆಚಾರ್ಯಕೃತವೆಂದು ಉದಾಹರಿಸಿರುತ್ತಾರೆ ; ನೃಸಿಂಹಪೂರ್ವತಾಪಿನಿಯಲ್ಲಿ ಭಾಷ್ಯಕಾರರು ಪ್ರಪಂಚಸಾರವು ತಮ್ಮ ಗ್ರಂಥವೇ ಎಂದು ಒಪ್ಪಿರುತ್ತಾರೆ. ಈ ಕಾರಣಗಳಿಂದ ಪ್ರಪಂಚಸಾರವು ಆಚಾರ್ಯರದೆಂದೇ ಹಿಡಿಯುವದು ಯುಕ್ತ

1. ಜ್ಞಾನಸಂಬಂಧರೇ ಬರೆದಿರುವ ಒಂದು ತಮಿಳುಗ್ರಂಥದಲ್ಲಿ "ನಿನ್ನ ಸ್ತನ್ಯವು ಯಾವ ಮಾನವನಿಗೂ ದೊರೆತದ್ದಿಲ್ಲ" ಎಂದಿದೆಯಂತೆ !

ಎಂತ ಬಲದೇವ ಉಪಾಧ್ಯಾಯರು (ಬು. ಶಂ. ಪು. ೧೪೬, ೧೪೭) ಅಭಿಪ್ರಾಯಪಡುತ್ತಾರೆ.

ಆದರೂ ಗೌಡಪಾದರೂ ಶ್ರೀಶಂಕರರೂ ಶ್ರೀವಿದ್ಯೆಯನ್ನು ಉಪಾಸನೆ ಮಾಡುತ್ತಿದ್ದರೆಂಬುದಕ್ಕೆ ನಮಗೆ ಇನ್ನೂ ಸಾಕಾಷ್ಟು ಆಧಾರವು ಸಿಕ್ಕಿಲ್ಲವೆಂದೇ ಹೇಳಬೇಕಾಗಿದೆ. ಗೌಡಪಾದಕಾರಿಕೆಯಲ್ಲಾಗಲಿ ಆಚಾರ್ಯರ ಪ್ರಸ್ಥಾನತ್ರಯ ಭಾಷ್ಯದಲ್ಲಾಗಲಿ ತಾಂತ್ರಿಕವಿಚಾರಗಳ ಪರಾಮರ್ಶವೇ ಇರುವದಿಲ್ಲ. ಅವರು ಶಾಕ್ತೇಯಮತವನ್ನು ಖಂಡನೆಗಾಗಲಿ ಮಂಡನೆಗಾಗಲಿ ಹೆಸರಿಸಿಲ್ಲವೆಂಬುದು ಅರ್ಥಗರ್ಭಿತವಾಗಿದೆ. ಆಚಾರ್ಯರು ಗೀತಾಭಾಷ್ಯದಲ್ಲಿ ಭೂತೇಜ್ಯರು ಎಂದರೆ ವಿನಾಯಕ, ಮಾತೃಗಣ ಚತುರ್ಭಗಿನ್ಯಾದಿಗಳನ್ನು ಪೂಜಿಸುವವರು (ಗೀ. ಭಾ. ೯–೨೫) ಎಂದಿದೆ. ಸಪ್ತಮಾತೃಕೆಯರೇ ಮುಂತಾದ ಭೂತಗಣಗಳನ್ನು 'ತಾಮಸರು ಪೂಜಿಸುತ್ತಾರೆ' (ಗೀ. ಭಾ. ೧೭–೪) ಎಂದು ಈ ವಾಕ್ಯಗಳಲ್ಲಿ ಮಾತೃಕಾದಿಪೂಜೆಗಳನ್ನು ಕಡೆಗಣಿಸಿ ಬರೆದಿರುತ್ತದೆ. ಇದನ್ನು ಹಿಂದೆ (ಪು. ೨೮೨) ತಿಳಿಸಿರುತ್ತೇವೆ. ಶಾಕ್ತಪೂಜೆಯ ವಿಚಾರವು ಮತ್ತೆಲ್ಲಿಯೂ ಭಾಷ್ಯದಲ್ಲಿ ಬಂದಿರುವದಿಲ್ಲ. ಶ್ರೀವಿದ್ಯೆಯು ಬ್ರಹ್ಮವಿದ್ಯೆಗೆ ಸಮಾನವಾಗಿದ್ದು ಆಚಾರ್ಯರೂ ಶ್ರೀವಿದ್ಯೋಪಾಸಕರೇ ಆಗಿದ್ದಿದ್ದರೆ ಅವರು ಎಂದಿಗೂ ಹೀಗೆ ಇಂಥ ಮುಖ್ಯ ವಿಚಾರವನ್ನು ಇಷ್ಟು ಅನಾದರದಿಂದ ನೋಡುತ್ತಿರಲಿಲ್ಲ– ಎಂಬುದು ಕೆಲವರ ಅಭಿಪ್ರಾಯ. ಆಚಾರ್ಯರ ಪೀಠಾಧಿಪತಿಗಳ ಪರಂಪರೆಯಲ್ಲಿ ಶ್ರೀವಿದ್ಯೆಯಿದೆ ಎಂಬ ಕಾರಣದಿಂದಲೂ ಸೌಂದರ್ಯಲಹರಿ ಮತ್ತು ಪ್ರಪಂಚಸಾರಗಳ ಗ್ರಂಥಗಳು ಶಂಕರಾಚಾರ್ಯರದ್ದೆಂದು ಕರೆದಿರುವ ಕಾರಣದಿಂದಲೂ ಮತ್ತೆ ಯಾರೋ ಶಂಕರಾಚಾರ್ಯರು ಬರೆದ ಈ ಗ್ರಂಥಗಳನ್ನು ಆಚಾರ್ಯರದ್ದೆಂದು ಈಚಿನವರು ಭ್ರಮಿಸಿರಬೇಕೆಂದೇ ನಮಗೆ ತೋರುತ್ತಿದೆ. ಪಂಚಪಾದಿಕೆಯನ್ನು ಬರೆದಿರುವವರು ಪದ್ಮಪಾದರೆ, ಅಲ್ಲವೆ ?–ಎಂಬುದೇ ವಾದಗ್ರಸ್ತವಾಗಿದೆ; ಒಂದುವೇಳೆ ಅದು ಪದ್ಮಪಾದರ ಕೃತಿಯೇ ಆಗಿದ್ದರೂ ಪ್ರಪಂಚಸಾರದ ವ್ಯಾಖ್ಯಾನವನ್ನು ಬರೆದ ಪದ್ಮಪಾದರೂ ಅವರೇ ಎಂಬುದಕ್ಕೆ ನಮಗೆ ಈವರೆಗೆ ಯಾವ ಪ್ರಮಾಣವೂ ಸಿಕ್ಕಿರುವದಿಲ್ಲ. ಸರ್ ಜಾನ್ ವುಡ್ರಾಫ್ ಎಂಬವರು ಆರ್ಥರ್ ಆವೆಲಾನ್ (Atthur Avalon) ಎಂಬ ಹೆಸರಿನಿಂದ ಪ್ರಕಟಿಸಿರುವ ಪ್ರಪಂಚಸಾರದ ಭೂಮಿಕೆಯಲ್ಲಿಯೂ ( ಪ್ರ. ಸಾ. ಭೂಮಿಕೆ ೧೭ ) ಶಂಕರಾಚಾರ್ಯರೆಂಬ ಹೆಸರಿನವರು ಅನೇಕತಾಂತ್ರಿಕರಿದ್ದರೆಂದೂ ದೊಡ್ಡವರ ಹೆಸರಿನಲ್ಲಿ ಬರೆದರೆ ಪ್ರಖ್ಯಾತವಾಗುವದೆಂದು ಯಾರಾದರೂ ಆಚಾರ್ಯರ ಹೆಸರಿನಲ್ಲಿ ಗ್ರಂಥವನ್ನು ಬರೆದಿರಲೂಬಹುದೆಂದೂ ಬರೆದವರು ಆ ಗ್ರಂಥದ ಎರಡನೆಯ ಸಂಸ್ಕರಣದ ಭೂಮಿಕೆಯಲ್ಲಿ ( ಪು. 71 ) ಅಮಲಾನಂದ, ರಾಘವಭಟ್ಟ, ಭಾಸ್ಕರರಾಯ, ಸೂತಸಂಹಿತೆಯ ವ್ಯಾಖ್ಯಾತೃ ಮಾಧವಾಚಾರ್ಯ– ಇವರನ್ನು

ಪ್ರಮಾಣವಾಗಿ ಹಿಡಿದು ಗ್ರಂಥವು ಶಂಕರಾಚಾರ್ಯರದ್ದೇ ಆಗಿರಬೇಕೆಂದು ಬರೆದಿರುತ್ತಾರೆ. ಆದರೆ ಈ ಗ್ರಂಥಕರ್ತೃಗಳೆಲ್ಲ ಆಚಾರ್ಯರಿಗಿಂತ ಬಹಳ ಈಚಿನವರೆಂಬುದನ್ನು ಅವರು ಕಡೆಗಣಿಸಿರುತ್ತಾರೆ.

ಡಿಂಡಿಮವೆಂಬ ವ್ಯಾಖ್ಯಾನವನ್ನು ಬರೆದಾತನ ಕಾಲದಲ್ಲಿ ಸೌಂದರ್ಯಲಹರಿಯು ಶಿವಕೃತವೆಂದು ಪ್ರಸಿದ್ಧವಾಗಿತ್ತು ; ಅದು ಶ್ರೀಶಂಕರಾಚಾರ್ಯರದ್ದೇ ಎಂಬ ಸಂಪ್ರದಾಯವೂ ಇತ್ತು : ಅದು ಲಲಿತಾದೇವಿಯ ಕೃತಿಯೆಂದೇ ಮತ್ತೊಂದು ಸಂಪ್ರದಾಯವಿತ್ತು. ಸುಧಾವಿದ್ಯೋತಿನೀ ಎಂಬ ವ್ಯಾಖ್ಯಾನವನ್ನು ಬರೆದ ಮತ್ತೊಬ್ಬ ವ್ಯಾಖ್ಯಾನಕಾರನು ದ್ರವಿಡರ ಅರಸನಾದ ಪ್ರವರಸೇನನು ಬರೆದದ್ದು ಅದು ಎಂದೂ ಹೇಳಿರುತ್ತಾನೆ. 'ಶಂಕರಾಚಾರ್ಯರು ಶಾಕ್ತಮತವನ್ನು ಪರಿಶುದ್ಧಗೊಳಿಸಿರುವರಾದ್ದರಿಂದಲೂ ಅದ್ವೈತಮಠಗಳಲ್ಲಿ ಶಾಕ್ತಪೂಜೆಯು ಇನ್ನೂ ನಡೆಯುತ್ತಿರುವದರಿಂದಲೂ, ದೇವಿಗೂ ಜೀವನಿಗೂ ಐಕ್ಯವನ್ನೂ (ಶ್ಲೋಕ ೨೨), ವೇದಾಂತವನ್ನೂ (ಶ್ಲೋಕ ೮೪) ಪರಾಮರ್ಶೆ ಮಾಡಿರುವದರಿಂದಲೂ ಈ ಸ್ತೋತ್ರಶೈಲಿಯ ವಿಮರ್ಶೆಯಿಂದಲೂ ಸಮಯ ಕೌಲಮಾರ್ಗಗಳ ಏಕವಾಕ್ಯತೆಗೆ ಇಲ್ಲಿ ಮಾಡಿರುವ ಪ್ರಯತ್ನದಿಂದಲೂ ಲಕ್ಷ್ಮೀಧರಾದಿಗಳು ಇದನ್ನು ಆಚಾರ್ಯರದ್ದೇ ಎಂದು ಹೇಳಿರುವದರಿಂದ ನಾನು ಇದು ಶಂಕರಾಚಾರ್ಯರದ್ದೆಂದೇ ನಂಬುವ ಕಡೆಗೆ ಒಲಿಯುತ್ತಿದೇನೆ' (ಪು.11) ಎಂದು ಮಹದೇವಶಾಸ್ತ್ರಿಗಳು ಸ್ತೋತ್ರದ ಪೀಠಿಕೆಯಲ್ಲಿ ಹೇಳಿರುವ ಯುಕ್ತಿಗಳು ಯಾವವೂ ನಿರ್ಣಯವಾಗಿ ನಮಗೆ ಕಾಣಿಸುತ್ತಿಲ್ಲ. ಏಕೆಂದರೆ ಜೀವಪರಮಾತ್ಮೈಕ್ಯವನ್ನು ಆಚಾರ್ಯರೇನೂ ಮೊದಲುಬಾರಿಗೆ ಹೇಳಿದವರಲ್ಲ ; ವೇದಾಂತವೆಂಬ ಸಾಮಾನ್ಯನಾಮವು ಆಚಾರ್ಯರನ್ನು ಪರಾಮರ್ಶಿಸುವದೆಂದು ಹೇಳುವದಕ್ಕೆ ಬರುವದಿಲ್ಲ ; ಸಮಯಕೌಲಮಾರ್ಗಗಳ ಸಮನ್ವಯವನ್ನು ಮಾಡಿದ ಆಚಾರ್ಯರು ಈಚಿನ ಯಾರೋ ಒಬ್ಬ ತಾಂತ್ರಿಕಾಚಾರ್ಯರಾಗಿರಬಹುದಾಗಿದೆ ; ಆದ್ಯಶಂಕರಾಚಾರ್ಯರೇ ಹಾಗೆ ಮಾಡಿದರೆಂಬುದಕ್ಕೆ ನಮಗೆ ಯಾವ ಪ್ರಮಾಣವೂ ಇಲ್ಲ. ವ್ಯಾಖ್ಯಾನಕಾರರು ಕೆಲವರು ಇದು ಶಂಕರಾಚಾರ್ಯರದ್ದೇ ಎಂದು ಹೇಳಿದ್ದ ಈ ವಿಷಯಕ್ಕೆ ಮತಭೇದವಿದೆ ಎಂಬುದನ್ನು ಮಹಾದೇವಶಾಸ್ತ್ರಿಗಳೇ ತಿಳಿಸಿಕೊಟ್ಟಿರುತ್ತಾರೆ. ಈ ಎಲ್ಲಾ ಕಾರಣಗಳಿಂದ ಶಂಕರನಾಮಧೇಯಮಾತ್ರದಿಂದಲೇ ಆಚಾರ್ಯರು ತಾಂತ್ರಿಕಗ್ರಂಥಗಳನ್ನು ಬರೆದರೆಂದಾಗಲಿ, ಅವರು ಬ್ರಹ್ಮವಿದ್ಯೆಯೂ ತಾಂತ್ರಿಕವಿದ್ಯೆಯೂ ಒಂದೇ ಎಂದು ಒಪ್ಪಿದ್ದರೆಂದಾಗಲಿ, ನಿರ್ಣಯಿಸಿ ಹೇಳುವದು ನಮಗೆ ಅಷ್ಟು ಯುಕ್ತಿಯುಕ್ತವೆಂದು ತೋರುವದಿಲ್ಲವೆಂದೇ ಸದ್ಯಕ್ಕೆ ಹೇಳಬೇಕಾಗಿದೆ.

---

# ೨೫. ಆಚಾರ್ಯರು ಸ್ಥಾಪಿಸಿರುವ ಮಠಗಳು

## ಮಠವಿಚಾರದಲ್ಲಿರುವ ಕ್ಲೇಶ

೧೭೭. ಆಚಾರ್ಯರು ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಪೀಠಗಳನ್ನು ಸ್ಥಾಪಿಸಿದರೆಂದು ಪ್ರಸಿದ್ಧವಾಗಿರುತ್ತದೆ. ಅಲ್ಲಿಯ ಮಠಾಧಿಪತಿಗಳು ಶಂಕರಾಚಾರ್ಯರ ಪ್ರತಿನಿಧಿಗಳೆಂಬ ಕಾರಣದಿಂದ ಅವರನ್ನೂ ಶಂಕರಾಚಾರ್ಯರೆಂದೇ ಕರೆಯುತ್ತಿದ್ದಾರೆ. ಹೀಗಿದ್ದರೂ ಆಚಾರ್ಯರು ಯಾವ ಮಠವನ್ನು ಮೊದಲು ಸ್ಥಾಪಿಸಿದರು ? ಅವರೇ ಸ್ಥಾಪಿಸಿರುವ ಮಠಗಳು ಎಷ್ಟು ? ಈಚೆಗೆ ಆಗಿರುವ ಶಾಖಾಮಠಗಳು ಅಥವಾ ಸ್ವತಂತ್ರವಾಗಿರುವ ಮಠಗಳು ಯಾವವು-ಎಂಬಿದನ್ನು ನಿಶ್ಚಯಿಸುವದು ಬಲುಕಷ್ಟವಾಗಿರುತ್ತದೆ. ಸಾಲದಕಡಿಮೆಗೆ ಮಠಗಳ ಅಧಿಪತಿಗಳೂ ಈ ಶೋಧನಕಾರ್ಯಕ್ಕೆ ಸಾಕಾದಷ್ಟು ಸಹಾಯವನ್ನು ನೀಡುತ್ತಿಲ್ಲವಾಗಿ ನಮಗೆ ಬೇಕಾದ ವಿಷಯಗಳೆಲ್ಲ ಸಿಕ್ಕುವಹಾಗಿಲ್ಲ. ಮಠಗಳ ಅನುಯಾಯಿಗಳಿಂದ ಪರಸ್ಪರಸ್ಪರ್ಧೆಯಿಂದ ಪ್ರಸಿದ್ಧವಾಗಿರುವ ವಾಙ್ಮಯಕ್ಕೇನೂ ಕಡಿಮೆಯಿಲ್ಲ. ಈ ಕಾರಣದಿಂದಲೂ ಮಠಗಳ ವಿಷಯವನ್ನು ನಿಶ್ಚಿತರೀತಿಯಿಂದ ತಿಳಿಸುವದು ಆಗುವಂತಿಲ್ಲ. ಈ ಕಾರಣಗಳಿಂದ ನಾವು ಮಠಗಳ ವಿವರವನ್ನು ಹೆಚ್ಚಾಗಿ ಕೊಡದೆ ಆಚಾರ್ಯರ ಚರಿತ್ರೆಗೆ ಸಂಬಂಧಪಟ್ಟಂತೆ ಓದುಗರು ಅವಶ್ಯವಾಗಿ ತಿಳಿದಿರಬೇಕಾದಷ್ಟು ವಿಷಯಗಳನ್ನು ಅತಿಸಂಕ್ಷೇಪವಾಗಿ ಕೊಡುವೆವು.

## ಮಠಾಮ್ನಾಯಗಳು

೧೭೮. ಆಚಾರ್ಯರು ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಮಠಗಳನ್ನು ಸ್ಥಾಪಿಸಿ ಅವುಗಳಲ್ಲಿ ತಮ್ಮ ನಾಲ್ವರು ಶಿಷ್ಯರನ್ನು ಮಠಾಧಿಪತಿಗಳನ್ನಾಗಿ ನಿಯಮಿಸಿದರೆಂದೂ ಮಠಾಮ್ನಾಯವೆಂಬ ಗ್ರಂಥವನ್ನು ಬರೆದು ಅವರ ಆಚಾರವಿಚಾರಗಳ ನಿಯಮಗಳನ್ನೂ ಕ್ಷೇತ್ರವನ್ನೂ ಗೊತ್ತುಪಡಿಸಿಕೊಟ್ಟರೆಂದೂ ಪ್ರಸಿದ್ಧಿಯಿದೆ. ಆದರೆ ನಮ್ಮ ದೌರ್ಭಾಗ್ಯದಿಂದ ಮಠಾಮ್ನಾಯವೆಂಬ ಹೆಸರಿನ ಅನೇಕ ಗ್ರಂಥಗಳಿವೆ ; ಅವುಗಳ ಪಾಠವೂ ಭಿನ್ನಭಿನ್ನವಾಗಿರುವದರಿಂದ ಆಚಾರ್ಯರು ಆ ಹೆಸರಿನ ಗ್ರಂಥಗಳನ್ನು ಬರೆದರೊ ಇಲ್ಲವೊ, ಅವರೇ ಈ ಮಠಗಳ ಕ್ಷೇತ್ರಾದಿಗಳ ನಿರ್ಣಯವನ್ನು ಮಾಡಿದರೊ ಇಲ್ಲವೊ ?-ನಿಸ್ಪಷ್ಟವಾಗಿ ಹೇಳುವದಕ್ಕೆ ಬರುವದಿಲ್ಲ. ಉದಾಹರಣಾರ್ಥವಾಗಿ ನಮಗೆ ಸಿಕ್ಕಿರುವ ಮಠಾಮ್ನಾಯಗಳು ಕೆಲವನ್ನು (೯ನೆಯ) ಪರಿಶಿಷ್ಟದಲ್ಲಿ ಕೊಟ್ಟಿರುವೆವು. ಅವುಗಳನ್ನು ನೋಡಿದರೆ ಈ ಪ್ರಶ್ನೆಯು ಎಷ್ಟರಮಟ್ಟಿಗೆ ಬಿಡಿಸಲಾರದ ಕಗ್ಗಂಟಾಗಿದೆ ಎಂಬುದು ವಾಚಕರಿಗೆ ಮನದಟ್ಟಾಗುವದರಲ್ಲಿ ಸಂಶಯವಿಲ್ಲ.

## ಮಠಾಮ್ನಾಯಗಳ ಸ್ಥಿತಿ

೧೭೯. ನಾವು ಕೊಟ್ಟಿರುವ ಉದಾಹರಣೆಗಳಿಂದ ಮಠಾಮ್ನಾಯಗಳೆಂಬಿವು ಆಯಾ ಮಠದವರು ಬೇರೆಬೇರೆಯ ಕಾಲಗಳಲ್ಲಿ ತಮ್ಮತಮ್ಮ ಸಂಪ್ರದಾಯಕ್ಕೆ ಅನುಗುಣವಾಗಿ ಬರೆಯಿಸಿಕೊಂಡಿರುವ ಗ್ರಂಥಗಳೇ ಎಂದು ಕಲ್ಪಿಸುವದಕ್ಕೆ ಅವಕಾಶವಿದೆ. ಅವು ಆಚಾರ್ಯಕೃತವೆಂದು ಹೇಳುವದಕ್ಕೆ ಬರುವಂತೆಯೇ ಇಲ್ಲ. ಆಚಾರ್ಯರು ಈ ಮಠಗಳನ್ನು ಸ್ಥಾಪಿಸಿ ಮಠಾಧಿಪತಿಗಳಿಗೆ 'ಮಹಾನುಶಾಸನ'ವೊಂದನ್ನು ಅನುಗ್ರಹಿಸಿದರೆಂದು ಜನರಲ್ಲಿ ಪ್ರತೀತಿಯಿದೆ. ಈ ಮಹಾನುಶಾಸನವನ್ನೊಳಗೊಂಡ ಮಠಾಮ್ನಾಯಸೇತುವೆಂಬ ಗ್ರಂಥವೊಂದನ್ನು (ಶಕೆ ೧೮೧೮ರಲ್ಲಿ) ಮದ್ರಾಸ್ ಕಲಾರತ್ನಾಕರ ಮುದ್ರಾಕ್ಷರಶಾಲೆಯಲ್ಲಿ ಅಚ್ಚುಮಾಡಿಸಿ ಕಾಂಚೀಮಠದ ಏಜಂಟರು 'ಕುಪ್ಪುಸ್ವಾಮಯ್ಯರ್'ರೆಂಬವರು ಪ್ರಚುರಪಡಿಸಿರುತ್ತಾರೆ. ಅದನ್ನು (೯ನೆಯ) ಪರಿಶಿಷ್ಟದಲ್ಲಿ ಹಾಕಿರುತ್ತೇವೆ. ಅದನ್ನು ಬಲದೇವ ಉಪಾಧ್ಯಾಯರು ಮಹಾನುಶಾಸನವೆಂಬ ಹೆಸರಿನಿಂದ ತಮ್ಮ ಗ್ರಂಥದಲ್ಲಿ (ಪು. ೨೦೯) ಹಾಕಿರುತ್ತಾರೆ. ನವಭಾರತೀಕಾರ್ಯಾಲಯದಲ್ಲಿ (1957) 'ಮಠಾಮ್ನಾಯ ತಥಾ ಮಹಾನುಶಾಸನ' ಎಂಬ ಹೆಸರಿನಿಂದ ಅದೇ ಪ್ರಕಟಿತವಾಗಿದೆ. ಇವೆರಡಕ್ಕೂ ಮೂಲವಾಗಿರುವ ಸೇತುವಿಗೂ ಇವೆರಡರ ಪಾಠಕ್ಕೂ ಇರುವ ತಾರತಮ್ಯವನ್ನು ವಾಚಕರು ನೋಡಿದರೆ ಮಹಾನುಶಾಸನವೂ ಸರ್ವಸಾಮಾನ್ಯವಾಗಿರದೆ ಪಾಠಾಂತರಗಳಿಗೆಡೆಯಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಆ ಸೇತುವನ್ನೂ (೯ನೆಯ) ಪರಿಶಿಷ್ಟದಲ್ಲಿ ಕೊಟ್ಟಿರುತ್ತೇವೆ.

ಬಲದೇವ ಉಪಾಧ್ಯಾಯರು (ಬಲ.ಶಂ.ಪು. ೧೭೭) ಉದಾಹರಿಸಿರುವ ಮಠಾಮ್ನಾಯವೊಂದರ ಭಾಗವನ್ನು ಆ ಪರಿಶಿಷ್ಟದಲ್ಲಿ ಹಾಕಿರುತ್ತೇವೆ. ಅದರಲ್ಲಿ ಪದ್ಮಪಾದರನ್ನು 'ಮಾಧವನ ಮಗ'ನೆಂದು ಹೇಳಿರುವದನ್ನು ಲಕ್ಷಿಸಬೇಕು. ಹಿಂದೆ ಹೇಳಿದ ಪದ್ಮಪಾದರ ವರ್ಣನೆಗೆ (ಪು. ೧೦೧) ಅದನ್ನು ಹೋಲಿಸಬೇಕಾಗಿದೆ. ಪದ್ಮಪಾದರನ್ನು ಶೃಂಗೇರಿಗೆ ಕೆಲವರು, ದ್ವಾರಕೆಗೆ ಕೆಲವರು, ಗೋವರ್ಧನಕ್ಕೆ ಕೆಲವರು–ಹೀಗೆ ಸ್ಥಲಾಂತರಗೊಳಿಸಿರುವದರಲ್ಲಿ ಏನೋ ರಹಸ್ಯವಡಗಿರಬೇಕು. ಬಲದೇವ ಉಪಾಧ್ಯಾಯರು ದ್ವಾರಕೆಗೆ ಹಸ್ತಾಮಲಕರನ್ನು ಹಾಕಿರುತ್ತಾರೆ. ಅವರಿಗೆ ದ್ವಾರಕೆಯ ಶಾರದಾಪೀಠಪರಂಪರೆಯನ್ನು ರಾಜರಾಜೇಶ್ವರಾಶ್ರಮರೆಂಬವರು ಒದಗಿಸಿಕೊಟ್ಟಂತೆ ಕಾಣುತ್ತದೆ. ಆದ್ದರಿಂದಲೇ ಅವರು ಹೊಸದಾಗಿ ಸರಕಾರದವರಿಂದ ನಿಯಮಿತವಾದ ಸ್ವಾಮಿಗಳು ನಿಜವಾದ ಅಧಿಪತಿಗಳಲ್ಲವೆಂಬ ಧ್ವನಿ ಬರುವಹಾಗೆ (ಪು. ೧೭೭) ಬರೆದಿರುತ್ತಾರೆ. ಅವರೂ ಅವರು ಆ ಪೀಠದ ಪ್ರಥಮಮಠಾಧಿಪತಿಗಳು ಸುರೇಶ್ವರಾಚಾರ್ಯರೆಂದು ಅಲ್ಲಿ

ಬರೆದುಬಿಟ್ಟಿದಾರೆ. ಇದರ ಗುಟ್ಟೇನೊ ಅವರಿಗೇ ಗೊತ್ತು ! ಪದ್ಮಪಾದರು ಯಾವ ಮಠಕ್ಕಾದರೂ ನಿಜವಾಗಿ ಅಧಿಪತಿಗಳಾಗಿದ್ದರೆ ? -ಎಂಬುದನ್ನು ಶೋಧಕರು ಇನ್ನಷ್ಟು ಬಿಡಿಸಿ ನೋಡಬೇಕಾಗಿದೆ. ಇದು ಹೇಗೇ ಇರಲಿ, ಮಠಾಮ್ನಾಯಗಳ ಈಗಿನ ಅವ್ಯವಸ್ಥಿತಸ್ಥಿತಿಯಲ್ಲಿ ಅವುಗಳಿಗೆ ಏಕವಾಕ್ಯತೆಯನ್ನು ಕಲ್ಪಿಸುವದು ಕಪ್ಪೆಗಳನ್ನು ತಕ್ಕಡಿಯಲ್ಲಿಟ್ಟು ತೂಗುವ ಪ್ರಯತ್ನವೇ ಸರಿ ಎಂದು ನಮಗೆನಿಸಿದೆ.

## ಶೃಂಗೇರೀಮಠದ ಗುರುಪರಂಪರೆ

೧೮೦. ಮಠಗಳು ನಾಲ್ಕೇ ಎಂದು ಬಹಳ ಆಮ್ನಾಯಗಳೂ, ಐದೆಂದು ಕಾಂಚೀಸಂಪ್ರದಾಯದ ಸೇತುವೂ, ಹೇಳುತ್ತಿದ್ದರೂ ಜನರಿಗೆ ಅಷ್ಟಾಗಿ ತಿಳಿಯದ ಹೆಸರಿನ ಹಲವು ಮಠಗಳೂ ಇವೆ. ಈಗ್ಗೆ ಹೆಚ್ಚಾಗಿ ಜನರಿಗೆ ಗ್ರಂಥಗಳ ಮೂಲಕ ಪರಿಚಿತವಾಗಿರುವ ಶೃಂಗೇರಿ, ಕಾಂಚಿ- ಇವುಗಳ ವಿಷಯವನ್ನು ಪ್ರಧಾನವಾಗಿ ಉಲ್ಲೇಖಿಸಿ ಮಿಕ್ಕವುಗಳ ವಿಚಾರವನ್ನು ಬಳಿಕ ಕೈಕೊಳ್ಳುವೆವು.

ಆಚಾರ್ಯರ ಚರಿತ್ರೆಗೆ ಮಠಗಳ ಗುರುಪರಂಪರೆಯೇನೂ ಅಷ್ಟು ಪ್ರಧಾನ ವಲ್ಲ. ಆದರೂ ಮಠಗಳಲ್ಲಿ ಇತಿಹಾಸಪ್ರಸಿದ್ಧರಾದ ಅದ್ವೈತಾಚಾರ್ಯರು ಯಾರಾದರೂ ಆ ಮಠಗಳಲ್ಲಿದ್ದರೆ ಅಷ್ಟನ್ನು ಸ್ವಲ್ಪಮಟ್ಟಿಗಾದರೂ ನಾವು ಮನದಂದುಕೊಳ್ಳುವದು ಅವಶ್ಯ. ಈ ಕೆಲಸವೂ ಅಷ್ಟು ಸುಲಭವಲ್ಲ. ಉದಾ ಹರಣೆಗೆ ಶೃಂಗೇರೀಮಠದ ಪರಂಪರೆಯ ಪಟ್ಟಿಗಳು ನಾಲ್ಕು ಇವೆ ಎಂದು ಬೋಡಸ್[1] (ಪ್ರ. ೯೧) ಬರೆದಿರುತ್ತಾರೆ. ಆ ಗುರುಪರಂಪರೆಯ ವಿಸ್ತಾರವಾದ ಇತಿಹಾಸವು ಸದ್ಯಕ್ಕೆ ಕೆ. ಆರ್. ವೆಂಕಟರಾಮನ್ನರವರ 'The Throne of Transcendental Wisdom' ಎಂಬ ಇಂಗ್ಲಿಷು ಪುಸ್ತಕದಲ್ಲಿದೆಯಾದ್ದ ರಿಂದ ಅವರು ಅನುಸರಿಸಿದ ಕ್ರಮವನ್ನೇ ನಾವು ಹಿಂಬಾಲಿಸುವೆವು.

ಈ ಪರಂಪರೆಯಲ್ಲಿ ಮೊದಲಿನ ಹನ್ನೆರಡು ಗುರುಗಳೊಳಗೆ ಶಂಕರವರೆಗಿನವರು ಋಷಿಗಳ ಗುಂಪಿನಲ್ಲಿ ಸೇರಿರುತ್ತಾರೆ ; ಆಚಾರ್ಯರ ಇತಿಹಾಸವನ್ನು ವಿವೇಚಿಸು ವದಕ್ಕೆಂದೇ ಈ ಗ್ರಂಥವು ಹೊರಟಿರುವದರಿಂದ ಅಪರುಗಳನ್ನು ಇಲ್ಲಿ ಕೈಬಿಡ ಬಹುದು. ಸುರೇಶ್ವರರನ್ನು ಶೃಂಗೇರಿಯವರು, ಕಾಂಚೀಪರಂಪರೆಯವರು, ದ್ವಾರಕಾಪೀಠದವರು -ಎಲ್ಲರೂ ತಮ್ಮತಮ್ಮ ಪೀಠದಲ್ಲಿದ್ದರೆಂದು ಹೇಳಿಕೊಳ್ಳು ತ್ತಿರುವದರಿಂದ ಅವರದೂ ಲೆಕ್ಕಕ್ಕೆ ಬರುವಂತಿಲ್ಲ. ಶೃಂಗೇರಿಯವರು ಹೇಳುತ್ತಿರು ವಂತೆ ಅವರು ಎಂಟುನೂರು ವರ್ಷಗಳವರೆಗೂ ಪೀಠಾಧಿಪರಾಗಿದ್ದರೆಂಬುದನ್ನು ಈಗಿನವರು ನಂಬುವಂತಿಲ್ಲವಾದ್ದರಿಂದ ಅವರನ್ನೂ ಬಿಟ್ಟುಬಿಡಬಹುದು. ಗುರುಗಳ

೧. ಬೋಡಸ್‌ರವರು ಕೊಟ್ಟಿರುವ ಪಟ್ಟಿಗಳನ್ನು ೯ನೆಯ ಪರಿಶಿಷ್ಟದಲ್ಲಿ ಕಾಣಬಹುದು.

ಕಾಲಕ್ರಮವನ್ನು ವೆಂಕಟರಾಮನ್‌ರವರು ಕೊಟ್ಟಿರುತ್ತಾರಾದರೂ ನಿತ್ಯಬೋಧಘನಾಚಾರ್ಯರನ್ನು ಹಿಡಿದು ನೃಸಿಂಹತೀರ್ಥರವರೆಗಿನವರಿಗೆ ಅವರೂ ಕಾಲವನ್ನು ಕೊಟ್ಟಿಲ್ಲ.

ಬೋಡಸ್ ಮುಂತಾದವರು ಕಾಲವನ್ನು ಕೊಟ್ಟಿರುತ್ತಾರಾದರೂ ಅದರ ವಿವರಣೆಯು ವಾಚಕರಿಗೆ ಅಷ್ಟು ಬೇಕಾಗಿರಲಾರದೆಂದು ಇಲ್ಲಿ ನಾವು ಆ ಕಾಲದ ವಿಚಾರವನ್ನೇ ಬಿಟ್ಟುಬಿಟ್ಟಿರುತ್ತೇವೆ. ಚರ್ಚೆಗೆ ವಿಷಯವಾದ ಸಂದರ್ಭದಲ್ಲಿ ಮಾತ್ರವೇ ಕಾಲಮಾನವನ್ನು ಲೆಕ್ಕಕ್ಕೆ ಹಿಡಿದಿರುತ್ತೇವೆ. ಇದೇ ಕಾರಣದಿಂದ ನಾವು ಎಲ್ಲಾ ಪೀಠಾಧಿಪರ ಹೆಸರುಗಳನ್ನೂ ಇಲ್ಲಿ ಕೊಟ್ಟಿಲ್ಲ

## ಶೃಂಗೇರೀಪೀಠದ ಕೆಲವು ಮುಖ್ಯಗುರುಗಳ ಹೆಸರುಗಳು

೧೮೧. (೩) ನಿತ್ಯಬೋಧಘನಾಚಾರ್ಯರ್. ಸುರೇಶ್ವರರ ತರುವಾಯ ಬಂದಿರುವ ಹೆಸರು ಇವರದಾದ್ದರಿಂದ ಇವರನ್ನು ಕೆಲವರು ಸಂಕ್ಷೇಪಶಾರೀರಕವನ್ನು ಬರೆದ ಸರ್ವಜ್ಞಾತ್ಮಮುನಿಗಳೆಂದು ಕಲ್ಪಿಸಿರುತ್ತಾರೆ. ಸರ್ವಜ್ಞಾತ್ಮರ ಗುರುಗಳು ಸುರೇಶ್ವರರಲ್ಲವೆಂದು ಈಗ ಗೊತ್ತಾಗಿದೆ.

(೪) ಜ್ಞಾನಘನ. ಇವರು 'ತತ್ತ್ವಶುದ್ಧಿ' ಎಂಬ ಗ್ರಂಥವನ್ನು ಬರೆದಿದಾರಂತೆ.

(೫) ಜ್ಞಾನೋತ್ತಮಶಿವಾಚಾರ್ಯರ್. ಇವರ ಶಿಷ್ಯರು ಸುಪ್ರಸಿದ್ಧರಾದ 'ತತ್ತ್ವದೀಪಿಕಾ'ಕರ್ತರಾದ ಚಿತ್ಸುಖರ ಗುರುಗಳು. ನೈಷ್ಕರ್ಮ್ಯಸಿದ್ಧಿ, ಇಷ್ಟಸಿದ್ಧಿ-ಗಳಿಗೆ ವ್ಯಾಖ್ಯಾನವನ್ನು ಬರೆದವರು ಇವರಲ್ಲವೆಂದು ವಿದ್ವಾಂಸರು ನಿಶ್ಚಯಿಸಿರುತ್ತಾರೆ. ಶಾರದಮ್ಮನವರ ಹಳೆಯ ದೇವಸ್ಥಾನಕ್ಕೂ ತುಂಗಾನದಿಗೂ ನಡುವೆ ಕೆಲವು ಸಮಾಧಿಗಳು ಅಥವಾ ಕಲ್ಲಾಮಂಟಪಗಳು ಇರುತ್ತವೆ. ವಿಶೇಷದಿನಗಳಲ್ಲಿ ಮಠದ ಆಚಾರ್ಯರುಗಳು– ಈ ಪವಿತ್ರಸ್ಥಾನಗಳಿಗೆ ಹೋಗಿ ಪೂಜಾದಿಗಳನ್ನು ಮಾಡುವ ಪದ್ಧತಿಯುಂಟಂತೆ ; ಆದರೆ ಜ್ಞಾನೋತ್ತಮರ ಸಮಾಧಿಯನ್ನು ಹೀಗೆ ಪೂಜಿಸುವ ವಾಡಿಕೆಯು ನಿಂತುಹೋಗಿದೆಯಂತೆ. ಅವರು ಗೌಡಸಾರಸ್ವತರೆಂಬುದೇ ಇದಕ್ಕೆ ಕಾರಣವೆಂದು ಜಿ. ಶ್ರೀನಿವಾಸಯ್ಯರ್‌ರವರು 'ಗೌಡೇಶ್ವರ ಜ್ಞಾನೋತ್ತಮಶಿವಾಚಾರ್ಯರ್' ಎಂಬ ಇಂಗ್ಲಿಷ್ ಪುಸ್ತಿಕೆಯಲ್ಲಿ (GGS P. 11) ಬರೆದಿರುತ್ತಾರೆ ; ಗೌಡ, ಮಧ್ಯದೇಶ, ಕಾಶ್ಮೀರ, ಪಶ್ಚಿಮಭಾರತ–ಪ್ರಾಂತಗಳಿಂದ ಅನೇಕ ಬ್ರಾಹ್ಮಣರು ಬಂದು ದಕ್ಷಿಣದೇಶದಲ್ಲಿ ನಿಂತರು. ರಾಜರಾಜ, ರಾಜೇಂದ್ರಚೋಳ–ಎಂಬ ಅರಸರು ಅವರಿಗೆ ಭೂದಾನಮಾಡಿದ್ದರು. ಅವರಲ್ಲಿ ಕೆಲವರು ವೇದಾಂತಾನುಯಾಯಿಗಳಾದ ಶೈವಾಚಾರ್ಯರೂ ಇದ್ದರು– ಎಂದು ಕೆ. ಆರ್. ವೆಂಕಟರಾಮನ್ನರು (KRTTW p .24)

ಬರೆದಿದ್ದಾರೆ. ಇದು ನಿಜವಾದರೆ ಜ್ಞಾನೋತ್ತಮಶಿವಾಚಾರ್ಯರ ಕಾಲದಿಂದಲೇ ಶೃಂಗೇರಿಯಲ್ಲಿ "ಲಿಂಗಪೂಜೆ"ಯು ಪ್ರಾರಂಭವಾಗಿರಬಹುದೆಂದು ಐತಿಹಾಸಿಕ ದೃಷ್ಟಿಯಿಂದ ಕಲ್ಪಿಸುವದಕ್ಕೆ ಅವಕಾಶವಿರುತ್ತದೆ.

(೬-೯) ಜ್ಞಾನಗಿರಿ, ಸಿಂಹಗಿರಿ, ಈಶ್ವರತೀರ್ಥ, ನೃ(ನರ?) ಸಿಂಹ ತೀರ್ಥ- ಮಧ್ವಾಚಾರ್ಯರನ್ನು ಜಯಿಸಿದವರು ವಾದಪ್ರಿಯರಾಗಿದ್ದ ಈ ನಾಲ್ವರಲ್ಲಿ ಕೊನೆಯವರೋ ಅವರ ಮುಂದಿನವರೋ ಆಗಿರಬೇಕೆಂದು ವೆಂಕಟ ರಾಮನ್ನರ ಕಲ್ಪನೆ (KRTTW p. 36). ಮಠಗಳು ಹಲವು ಈ ಕಾಲಕ್ಕೆ ಹುಟ್ಟಿದವಂತೆ ; ವೇದಾಂತದ ಅಭ್ಯಾಸಕ್ಕೆ ಪ್ರೋತ್ಸಾಹವಾಯಿತು.

(೧೦) ವಿದ್ಯಾಶಂಕರ ಅಥವಾ ವಿದ್ಯಾತೀರ್ಥ. ಏಕಶಿಲನಗರ (ಓರಗಲ್ಲ) ದಿಂದ ಬಂದ ಬ್ರಾಹ್ಮಣಸಹೋದರರಿಬ್ಬರಿಗೆ ಇವರು ಸಂನ್ಯಾಸವನ್ನು ಕೊಟ್ಟು ಭಾರತೀಕೃಷ್ಣತೀರ್ಥ (ಭಾರತೀತೀರ್ಥ), ವಿದ್ಯಾರಣ್ಯ- ಎಂಬ ಯೋಗಪಟ್ಟ ಗಳನ್ನು ಕೊಟ್ಟರಂತೆ. ಭಾರತೀತೀರ್ಥರು ಸ್ವಾಮಿಗಳಾಗಿ ಶೃಂಗೇರಿಯಲ್ಲಿದ್ದಾಗ ವಿದ್ಯಾರಣ್ಯರು ಸಂಚಾರದಲ್ಲಿರುತ್ತಿದ್ದರಂತೆ. ಸಿಂಹಗಿರಿಯಲ್ಲಿರುವ ಚತುರ್ಮೂರ್ತಿ ವಿದ್ಯೇಶ್ವರವಿಗ್ರಹ[1]ವನ್ನು ನಿರ್ಮಾಣಮಾಡಿಸಿ ವಿದ್ಯಾಶಂಕರರು ನೆಲಮಾಳಿಗೆ ಯಲ್ಲಿ ಹನ್ನೆರಡು ವರ್ಷಗಳು ಯೋಗವನ್ನು ಮಾಡಿದಮೇಲೆ ತಮ್ಮ ಶರೀರವು ಈ ವಿಗ್ರಹದ ರೂಪವನ್ನು ತಳೆಯುವದು ಎಂದು ಭವಿಷ್ಯವನ್ನು ನುಡಿದಿದ್ದರಂತೆ. ಸೇವಕರು ಕುತೂಹಲದಿಂದ ಮೂರು ವರ್ಷಗಳಾದ ಬಳಿಕ ನೆಲಮಾಳಿಗೆಯ ಬಾಗಿಲು ತೆರೆದುನೋಡಲು ವಿಗ್ರಹದ ಮೇಲುಗಡೆಯ ಲಿಂಗವು ಮಾತ್ರ ಉಳಿದಿತ್ತು. ಭಾರತೀತೀರ್ಥರು ಲಿಂಗಪ್ರತಿಷ್ಠೆಮಾಡಿಸಿ ಅದರ ಮೇಲುಗಡೆ ಒಂದು ದೇವಾಲಯವನ್ನು ಕಟ್ಟಿಸಿದರು. ವಿದ್ಯಾಶಂಕರರ ಪ್ರಭಾವವು ಈಗಲೂ ಆ ಬಳಿ ಕಾಣಬರುತ್ತಿದೆ. ಇಂದಿಗೂ ಈ ಮಠದ ಮುದ್ರೆಯಲ್ಲಿ 'ಶ್ರೀವಿದ್ಯಾ ಶಂಕ'- ಎಂದೇ ಉಲ್ಲೇಖವಿರುತ್ತದೆ. ಈ ವಿದ್ಯಾತೀರ್ಥರು ಕಾಂಚೀಪೀಠ ದಲ್ಲಿಯೂ ಇದ್ದರು ಎಂದು ಕೆಲವರ ಮತ.

(೧೧-೧೨) ಭಾರತೀಕೃಷ್ಣತೀರ್ಥ, ವಿದ್ಯಾರಣ್ಯ. ವಿದ್ಯಾರಣ್ಯರು ಯಾರೆಂಬ ಬಗ್ಗೆ ವಿವಾದವಿದೆ :

---

1. ಮುಂಭಾಗದಲ್ಲಿ ಭಾರತೀತೀರ್ಥವಿದ್ಯಾರಣ್ಯರೊಡಗೂಡಿ ವಿದ್ಯಾತೀರ್ಥರು ಸಿದ್ಧಾಸನದಲ್ಲಿ ಉತ್ತರಾಭಿಮುಖವಾಗಿರುವಂತೆ ಪೂರ್ವಭಾಗದಲ್ಲಿ ಬ್ರಹ್ಮ, ದಕ್ಷಿಣದಲ್ಲಿ ವಿಷ್ಣು, ಪಶ್ಚಿಮದಲ್ಲಿ ಪಂಚಮುಖಶಿವ, ಮೇಲುಗಡೆ ಲಕ್ಷ್ಮೀನರಸಿಂಹ, ಅದರ ಮೇಲೆ ಲಿಂಗ- ಹೀಗೆ ವಿಗ್ರಹವಿದೆ. (ಶ್ರೀಸಚ್ಚಿದಾನಂದಶಿವಾಭಿನವನೃಸಿಂಹಭಾರತೀಸ್ವಾಮಿಗಳ ಚರಿತ್ರೆ- ಶ್ರೀಕಂಠಶಾಸ್ತ್ರಿಗಳು ಬರೆದದ್ದು.)

(a) ತಿಥಿದೀಪಿಕೆ, ಪ್ರಯೋಗಪಾರಿಜಾತ, ವೀರಮಿತ್ರೋದಯ, ವ್ಯಾಸಸೂತ್ರವೃತ್ತಿ, ಆಂಧ್ರಭಾಷಾವ್ಯಾಕರಣ (ಮಾಧವನ ಸೋದರಳಿಯ ಬರೆದದ್ದು), ಪ್ರಯೋಗರತ್ನಮಾಲಿಕೆ– ಈ ಗ್ರಂಥಗಳಲ್ಲಿರುವ ಪರಾಮರ್ಶಿಕೆಗಳಿಂದಲೂ 1386 ರಲ್ಲಿ ಬರೆದ ಒಂದು ತಾಮ್ರಶಾಸನದಲ್ಲಿ ವೇದಭಾಷ್ಯಪ್ರವರ್ತಕರಾದ ಮೂವರು ಪಂಡಿತರಿಗೆ ವಿದ್ಯಾರಣ್ಯರ ಸಮಕ್ಷದಲ್ಲಿ ಅಗ್ರಹಾರದಾನಮಾಡಿದಂತೆ ಇರುವದರಿಂದಲೂ ಮಾಧವನೇ ವಿದ್ಯಾರಣ್ಯ– ಎಂದು (ಬಲ. ಶಂ. ಪು. ೧೭೩ರಿಂದ ೧೭೪) ಬಲದೇವ ಉಪಾಧ್ಯಾಯರೆನ್ನುತ್ತಾರೆ.

ಶ್ರೀ|| ಡಿ.ವಿ. ಗುಂಡಪ್ಪನವರು ಬರೆದಿರುವ 'ವಿದ್ಯಾರಣ್ಯಸಮಕಾಲೀನರು' ಎಂಬ ಗ್ರಂಥದಲ್ಲಿ 'ಸರ್ವದರ್ಶನಸಂಗ್ರಹ'ವನ್ನು ಬರೆದ ಮಾಧವನೇ ವಿದ್ಯಾರಣ್ಯರು' ಎಂಬುದನ್ನು, ಕೆಲವು ಯುಕ್ತಿಗಳನ್ನು ಕೊಟ್ಟು, ಪರಿಪೋಷಿಸಿದೆ.

(d) ಕೆ. ಆರ್. ವೆಂಕಟರಾಮನ್ನರವರ ಅಭಿಪ್ರಾಯವೇನೆಂದರೆ (KRTTW pp. 35–37) ಆ ಕಾಲಕ್ಕೆ ಮಾಧವನೆಂಬ ಹೆಸರಿನವರು ಅನೇಕರಿದ್ದರು. (1) ಪಾದರಸ ಒಡೆಯರ್ ಎಂಬ ಅಡ್ಡಹೆಸರಿನ ಮಾಧವ ಮಂತ್ರಿಯೊಬ್ಬ. ಆತನು ಸೂತಸಂಹಿತೆಗೆ ವ್ಯಾಖ್ಯಾನವನ್ನು ಬರೆದಿದ್ದಾನೆ. ಬುಕ್ಕನು ಈತನ ಮೂಲಕ ಶೃಂಗೇರಿಗೆ ದಾನಗಳನ್ನು ಮಾಡುತ್ತಿದ್ದನು. (2) ಮಾಧವ, ಸಾಯಣ, ಭೋಗನಾಥ– ಎಂಬೀ ಅಣ್ಣತಮ್ಮಂದಿರು ಶ್ರೀಮತೀ ಮಾಯಣರ ಮಕ್ಕಳು, ಈ ಸಾಯಣನ ಮಗನಾದ ಮಾಧವನು ಅಥವಾ ಮಾಯಣ್ಣನು ಸರ್ವದರ್ಶನಸಂಗ್ರಹಕರ್ತನು.[1] ಮಾಯಣ್ಣನ ಮಗ ಮಾಧವಾಚಾರ್ಯನು ಪರಾಶರಸ್ಮೃತಿವ್ಯಾಖ್ಯೆ, ವ್ಯವಹಾರಮಾಧವೀಯ, ಕಾಲಮಾಧವೀಯ, ಜೀವನ್ಮುಕ್ತಿವಿವೇಕ (?), ಜೈಮಿನೀಯ ನ್ಯಾಯಮಾಲಾವಿಸ್ತರ– ಇವುಗಳ ಕರ್ತನು. ಸಾಯಣನ ಕೃತಿಗಳು : ವೇದಭಾಷ್ಯ, ಧಾತುವೃತ್ತಿ ಮುಂತಾದವು. ಮಾಧವನು ಕಾಂಡತ್ರಯದ ಮೀಮಾಂಸಾಶಾಸ್ತ್ರಜ್ಞ, ಪ್ರತಿ ಪಶುರತಸೋಮಯಾಜಿ– ಎಂದು ತನ್ನನ್ನು ಹೇಳಿಕೊಂಡಿರುತ್ತಾನೆ; ಸಾಯಣನೂ ಅವನನ್ನು ಅನಂತಭೋಗಸಂಸಕ್ತ, ಮಹಾಯಜ್ಞಗಳನ್ನು ಮಾಡಿದವನು ಎಂದು ಹೊಗಳಿರುತ್ತಾನೆ. ಹದಿನಾಲ್ಕನೆಯ ಅಥವಾ ಮುಂದಿನ ಕೆಲವು ಶತಮಾನಗಳ ಯಾವ ಶಾಸನದಲ್ಲಿಯೂ ಮಾಧವವಿದ್ಯಾರಣ್ಯೈಕ್ಯವನ್ನು ಉಲ್ಲೇಖಿಸಿಲ್ಲ. ಆದ್ದರಿಂದ ಮಾಧವನು ಗೃಹಸ್ಥನಾಗಿಯೇ ಉಳಿದಿದ್ದನು.

1. 'ಸಾಯಣದುಗ್ಧಾಬ್ಧಿಕೌಸ್ತುಭ'ನೆಂದು ಗ್ರಂಥಕರ್ತನು ಹೇಳಿಕೊಂಡಿರುವದು ಸಾಯಣಕುಲದವನು– ಎಂಬರ್ಥದಲ್ಲಿ ಎಂದು ಶ್ರೀ|| ಡಿ. ವಿ, ಗುಂಡಪ್ಪನವರ ವಾದ; ಆದರೆ ಕ್ಷೀರಾಬ್ಧಿಯಲ್ಲಿ ಕೌಸ್ತುಭವು ನೇರಾಗಿ ಹುಟ್ಟಿತು, ಪರಂಪರೆಯಿಂದಲ್ಲ. ಆದ್ದರಿಂದ ಅವನು ಸಾಯಣನ ಮಗನೇ ಎಂಬವರಿಗೆ ಅಲ್ಲಿ ಆಘಾತವಿರುವಂತೆ ತೋರುತ್ತದೆ.

ಮಾಧವವಿದ್ಯಾರಣ್ಯೈಕ್ಯವನ್ನು ಒಪ್ಪಿರುವ ಶೋಧಕರು 1370ರಲ್ಲಿ ಅಥವಾ 1377ರಲ್ಲಿ ಭಾರತೀತೀರ್ಥರ ವಿದೇಹಮುಕ್ತಿಯ (1380) ಮುಂಚೆ ಸಂನ್ಯಾಸ ಸ್ವೀಕಾರವೆಂದು ಒಪ್ಪಿರುತ್ತಾರೆ. ಶಾಸನಗಳನ್ನು ನೋಡಿದರೆ, ಹರಿಹರ, ಬುಕ್ಕ, ಹರಿಹರ (ದ್ವಿತೀಯ)– ಈ ಮೂವರೂ ವಿದ್ಯಾರಣ್ಯರನ್ನು ಸಂನ್ಯಾಸಿಗಳೆಂದೇ ಎಣಿಸಿದ್ದರೆಂದು ಗೊತ್ತಾಗುತ್ತದೆ. ಫೆರಿಷ್ಟ, ಬುಕಾನನ್–ಮೊದಲಾದವರು ಹರಿಹರ ಬುಕ್ಕರು ಒಬ್ಬ ಸಂನ್ಯಾಸಿಯ ಪ್ರಭಾವಕ್ಕೊಳಗಾಗಿದ್ದರೆಂದೇ ಹೇಳಿರುತ್ತಾರೆ. ಶ್ರೀ ವಿ ದ್ಯಾ ರ ಣ್ಯ ರು ವೇದಭಾಷ್ಯ, ಧಾತುವೃತ್ತಿ–ಮುಂತಾದವುಗಳನ್ನು ಮಾಧವಸಾಯಣರಿಗೆ ಕೊಟ್ಟು ಇವನ್ನು ಪರಿಪೂರ್ತಿಗೊಳಿಸಿ ನಿಮ್ಮ ಹೆಸರಿನಲ್ಲಿ ಪ್ರಕಟಿಸಿಕೊಳ್ಳಿರಿ– ಎಂದು ಅಪ್ಪಣೆಕೊಡಿಸಿದರೆಂಬ ಗುರುವಂಶಕಾವ್ಯವಚನವೇ ಇಲ್ಲಿ ಯುಕ್ತಿಯುಕ್ತವೆಂದು ಹೇಳಬೇಕು.

ಈ ವಾದವು ಇನ್ನೂ ಇಷ್ಟು ವಿಚಾರಣೀಯವಾಗಿದೆ ಎನ್ನುವದಕ್ಕೆ ಸಂಶಯವಿಲ್ಲ. ಭಾರತೀತೀರ್ಥರೂ ವಿದ್ಯಾರಣ್ಯರೂ ಬರೆದಿರುವ ವೈಯಾಸಿಕನ್ಯಾಯಮಾಲಾ, ಪಂಚದಶಿ– ಮುಂತಾದ ಗ್ರಂಥಗಳು ಅತ್ಯಂತಪ್ರಸಿದ್ಧವಾಗಿದ್ದರೂ ಅವರ ವ್ಯಕ್ತಿಗತ ವಿಚಾರಗಳು ಇಷ್ಟು ಸಂಶಯಾಸ್ಪದವಾಗಿರುವದು ಯುಕ್ತವಲ್ಲ. ಭಾರತೀತೀರ್ಥರು ನೂರಿಪ್ಪತ್ತು ಜನ ವಿದ್ವಾಂಸರಿಗೆ ವೃತ್ತಿಗಳನ್ನು ಹಂಚಿಕೊಟ್ಟರಂತೆ.[1] ಹರಿಹರನೇ ಮುಂತಾದ ರಾಜರುಗಳು ಕೊಟ್ಟ ಪ್ರೋತ್ಸಾಹದಿಂದ ಶೃಂಗೇರಿಯ ಪೀಠವು ಸಂಸ್ಥಾನವಾಗಿ ಬೆಳೆಯಿತು ಇವುಗಳ ವಿವರವನ್ನು ವೆಂಕಟರಾಮನ್ ಅವರು ಕೊಟ್ಟಿರುವದನ್ನು (pp. 45–48) ಇಂಗ್ಲಿಷುಬಲ್ಲವರು ಅವಶ್ಯವಾಗಿ ಓದಬೇಕು.

ವಿಜಯನಗರದ ರಾಜ್ಯವು ವಿದ್ಯಾರಣ್ಯರ ಆಶೀರ್ವಾದದಿಂದಲೇ ಸ್ಥಾಪಿತವಾಗಿ ಬೆಳೆಯಿತು. ಅವರ ಅನುಜ್ಞೆಯಿಂದ ತುಂಗಭದ್ರಾತೀರದಲ್ಲಿ ಆನೆಗೊಂದಿಗೆ ಅಭಿಮುಖವಾಗಿ ವಿದ್ಯಾನಗರವೆಂಬ ಪಟ್ಟಣವನ್ನು ಅವರ ಹೆಸರಿನಲ್ಲಿ ಹರಿಹರಬುಕ್ಕರು ಸ್ಥಾಪಿಸಿದರು. ಶಾ. 1238 (ಧಾತು ವೈಶಾಖ ಶುಕ್ಲದಲ್ಲು, 18-4-1336) ಶ್ರೀಚಕ್ರದ ಆಕಾರದಲ್ಲಿ ಆ ನಗರವು ಸ್ಥಾಪಿತವಾಯಿತಂತೆ. ಅದಕ್ಕೆ ವಿಜಯನಗರವೆಂಬುದು ಈಚೆಗೆ ಬಂದ ಹೆಸರು. ಚಕ್ರವರ್ತಿಗೆ ವಿಜಯದ ಮೇಲೆ ವಿಜಯವು ದೊರೆತದ್ದರ ಸ್ಮಾರಕವಾಗಿ ತಮ್ಮ ರಾಜಚಿಹ್ನೆಗಳನ್ನೆಲ್ಲ

1. ಬುಕ್ಕರಾಯನು ಕೊಟ್ಟ ದಾನವನ್ನು ಅವರು ಈ ಕಾರ್ಯಕ್ಕೆ ಉಪಯೋಗಿಸಿಕೊಂಡರು. ರಾಯನು 'ವಿದ್ಯಾಶಂಕರ ತೀರ್ಥಶ್ರೀಪಾದರುಗಳ ದರ್ಶನ' ಮಾಡಿದನೆಂಬ ಶಾಸನವನ್ನು ಕೆಲವರು ಸಾಕ್ಷಿತ್ತಾಗಿ ಅವರನ್ನೇ ಕಂಡನೆಂದು ತಪ್ಪಾಗಿ ಅರ್ಥಮಾಡಿಕೊಂಡಿರುತ್ತಾರೆ. ನಿಜವಾಗಿ ಅವನಿಗೆ ಆದದ್ದು ವಿದ್ಯಾಶಂಕರಲಿಂಗದರ್ಶನ (KRTTW p. 45).

ವಿದ್ಯಾರಣ್ಯರಿಗೆ[1] ಅರ್ಪಿಸಿದನು ; ಅಲ್ಲಿಂದ ಮುಂದಕ್ಕೆ ಶೃಂಗೇರೀ ಜಗದ್ಗುರು ಗಳಿಗೆ 'ಕರ್ಣಾಟಕಸಿಂಹಾಸನ ಸ್ಥಾಪನಾಚಾರ್ಯ' ಎಂಬ ಬಿರುದು ಬಂದಿತು. ವಿದ್ಯಾಶಂಕರ- ಭಾರತೀತೀರ್ಥ- ವಿದ್ಯಾರಣ್ಯರ ಕಾಲದಲ್ಲಿ ಶಾರದಾಪೀಠವು ಅತ್ಯುನ್ನತಿಯನ್ನು ಪಡೆದ ಸಂಸ್ಥಾನವಾಯಿತು (KRTTW p. 32).

ಶೃಂಗೇರಿಯ ಪೀಠಕ್ಕೆ ವಿಜಯನಗರದ ರಾಜ್ಯವು ನಾಶವಾದ ಬಳಿಕವೂ ಕೆಳದಿ ಅರಸರು, ಮುಸಲ್ಮಾನ ನವಾಬರು, ಮಹಾರಾಷ್ಟ್ರದ ಅಧಿಕಾರಿಗಳು, ಮೈಸೂರು ರಾಜರುಗಳು ಎಲ್ಲರೂ ಸಮಾನವಾಗಿ ಗೌರವವನ್ನು ತೋರಿಸುತ್ತಾ ಬಂದಿರುತ್ತಾರೆ. ರಾಜಕೀಯಕಾರಣಗಳಿಂದ ಮಠವನ್ನು ಮುಸಲಮಾನರೇ ಅಲ್ಲದೆ ಮಹಾರಾಷ್ಟ್ರದ ಪೇಷ್ವೆಗಳ ಕಡೆಯವರೂ ಮುತ್ತಿ ನಷ್ಟವನ್ನು ಮಾಡಿದ ರಾದರೂ ಒಟ್ಟಿನಲ್ಲಿ ಈ ಪೀಠಕ್ಕೆ ಭರತಖಂಡದ ಎಲ್ಲಾ ರಾಜ್ಯಗಳಿಂದಲೂ ಮಾನ್ಯತೆ ದೊರೆಯುತ್ತಾ ಬಂದಿದೆ ಎನ್ನಬಹುದು. ಈ ವಿವರವನ್ನು ಕೆ. ಆರ್. ವೆಂಕಟರಾಮನ್ನರವರ ಗ್ರಂಥದಿಂದ ವಿಸ್ತಾರವಾಗಿ ತಿಳಿಯಬಹುದು. ಈ ವೃತ್ತಾಂತದ ಸಾರವನ್ನು ಇಲ್ಲಿ ಅತಿಸಂಕ್ಷಿಪ್ತವಾಗಿ ಕೊಟ್ಟಿರುತ್ತದೆ.

ಈ ಗುರುಪರಂಪರೆಯಲ್ಲಿ ೧೬ನೆಯವರಾದ ಶ್ರೀಶಂಕರಾನಂದಭಾರತಿ ಗಳ ಶಿಷ್ಯರುಗಳಲ್ಲೊಬ್ಬನಾದ ಮಾಧವಭಾರತಿ ಎಂಬುವರು ಗೋಕರ್ಣದಲ್ಲಿ ಒಂದು ಮಠವನ್ನು ಸ್ಥಾಪಿಸಿದರೆಂದು ಕೆ. ಆರ್ ವೆಂಕಟರಾಮನ್‌ರವರು (KRTTW p. 52) ಬರೆದಿರುತ್ತಾರೆ. ಆದರೆ ಈ ವಿಷಯವು ವಾದಗ್ರಸ್ತ ವೆಂದು ತೋರುತ್ತದೆ. ಆ ವಿಚಾರವನ್ನು ಪರಿಶಿಷ್ಟ (೯)ದಲ್ಲಿ ಪ್ರಸ್ತಾಪಿಸುವೆವು. ಈ ಶಂಕರಾನಂದರ ಶಿಷ್ಯರುಗಳಿಗೆ ಬೇರೆಬೇರೆಯ ಮಾನ್ಯಗಳು ಲಭಿಸಿರುವದಾಗಿ ತಿಳಿಯಬರುತ್ತದೆ. ಕ್ರಿ. ಶ. 1 99ರೊಳಗೆ ಶೃಂಗೇರಿಸಂಸ್ಥಾನವು ವಿಸ್ತೃತವಾಗಿ ಪೀಠಾಧಿಪತಿಗಳು ಅನೇಕ ಬಿರುದುಬಾವಲಿಗಳನ್ನು ರಾಜರುಗಳಿಂದ ಪಡೆದು ಕೊಂಡಿದ್ದರು. ಅನೇಕ ಉಪಮಠಗಳನ್ನು ಸ್ಥಾಪಿಸಿದ್ದರು. ಶ್ರೀ ಅಭಿನವ ನೃಸಿಂಹಭಾರತೀಸ್ವಾಮಿಗಳ ಕಾಲದಲ್ಲಿ ಶಿವಗಂಗೆಯ ಮಠವು ಸ್ಥಾಪಿತ ವಾಯಿತು. ಅವನೀಮಠವೂ (?) ಇವರ ಕಾಲದಲ್ಲಿಯೇ ಸ್ಥಾಪಿತವಾಗಿರ

1. ಶಂಕರವಿಜಯವನ್ನು ಬರೆದಾತನೇ ವಿದ್ಯಾರಣ್ಯರೆಂಬ ಹೆಸರಿನಿಂದ ಸಂನ್ಯಾಸಿ ಯಾಗಿ ಪ್ರಸಿದ್ಧನಾದನೆಂಬ ಮತದಲ್ಲಿ ಕೆಲವರು ತೋರಿಸುವ ದೋಷಗಳನ್ನು ಹಿಂದೆ(ಪು.೪) ನಾವು ಸಂಗ್ರಹಿಸಿಕೊಟ್ಟಿರುತ್ತೇವೆ. ನವಕಾಳಿದಾಸನೆಂಬ ಬಿರುದನ್ನು ಪಡೆದಿದ್ದ ಭಾಗವತ ಚಂಪೂಕಾರನೇ ಈ ಮಾಧವನೆಂದು ಅನೇಕರ ಮತವಿದೆ. ಆದರೆ ಅಭಿನವಪದಪೂರ್ವಃ ಕಾಳಿದಾಸಃ, ಪ್ರಗಲ್ಭತ್ರಿನಯನದಯಿತಾಯಾಃ ಪ್ರೇಮಡಿಮ್ಭಸ್ತ್ಯತೀಯಃ' (೧-೭) ಎಂದು ಚಂಪೂಕರ್ತನು ತನ್ನನ್ನು ಹೊಗಳಿಕೊಂಡಿರುವದನ್ನು ನೋಡಿದರೆ ಮಾಧವನು ಅವನೇ ಎನ್ನುವದಕ್ಕೆ ಬರುವಂತಿಲ್ಲ; ಏಕೆಂದರೆ ಮಾಧವನು ಗೌರಿಯ ಭಕ್ತನೆಂದು ತನ್ನನ್ನು ಕರೆದುಕೊಂಡಿಲ್ಲ.

ಬಹುದೆಂದು ಊಹಿಸಲಾಗಿದೆ. ಹರಿಹರಪುರ, ತೀರ್ಥಮತ್ತೂರು, ಮತ್ತು ಕೂಡಲಿಮಠ--ಇವುಗಳೂ ಹದಿನಾಲ್ಕನೆಯ ಶತಮಾನಗಳಲ್ಲಿ ಶೃಂಗೇರಿಗುರುಗಳ ಪ್ರೋತ್ಸಾಹದಿಂದ ಸ್ಥಾಪಿತವಾದವೆಂದು ವೆಂಕಟರಾಮನ್‌ರವರ ಹೇಳಿಕೆ (KRTTW p. 44). ಆದರೆ ಕೂಡಲಿಮಠದವರು ಇದನ್ನು ಒಪ್ಪುತ್ತಿಲ್ಲ. ಈ ವಿಷಯಕ್ಕೆ (೯ನೆಯ) ಪರಿಶಿಷ್ಟವನ್ನು ನೋಡಿರಿ.

ಶೃಂಗೇರೀಸಂಸ್ಥಾನವು ಬೆಳೆದಂತೆಲ್ಲ ಶಾರದಾಪೀಠದ ಪ್ರಯೋಜನವು ಮಹಾಜನರಿಗೆ ಹೆಚ್ಚುಹೆಚ್ಚಾಗಿ ದೊರೆಯುತ್ತಾಬಂತು; ಶಾರದಾಮಠವೂ ಉಪಮಠಗಳೂ ಯತಿಗಳು, ಸಾಧಕರು, ವಿದ್ವಾಂಸರು ಮೊದಲಾದವರ ನೆರವಿಗೂ ದೇವಸ್ಥಾನಗಳು, ಅನ್ನಸತ್ರಗಳು-ಮುಂತಾದ ದಾನಧರ್ಮಗಳಿಗೂ ನೆಲೆವೀಡಾದವು. ೧೭ನೆಯ ಮತ್ತು ೧೮ನೆಯ ಶತಮಾನದ ಆದಿಭಾಗದಲ್ಲಿ ರಾಜಕೀಯವಿಪ್ಲವಗಳು ಬಹಳವಾಗಿ ಆಗುತ್ತಿದ್ದರೂ- ಈ ಕಾರಣದಿಂದ ಶೃಂಗೇರಿಯ ಪೀಠಾಧಿಪತಿಗಳು ನಾಸಿಕದಲ್ಲಿ ಹತ್ತುವರ್ಷಗಳವರೆಗೆ ಇರಬೇಕಾಗಿಬಂದರೂ-ಕರ್ಣಾಟಕದ ರಾಜರುಗಳ ಪ್ರೋತ್ಸಾಹವು ಶೃಂಗೇರೀಪೀಠಕ್ಕೆ ಒದಗಿತ್ತು. ಈ ಕಾಲದಲ್ಲಿ ದಕ್ಷಿಣಭಾರತದಲ್ಲಿ ಕರ್ಣಾಟಕದ ವೀರಶೈವರು, ತಮಿಳುನಾಡಿನ ಸಿದ್ಧಾಂತಿಗಳು-ಈ ಶೈವರ, ಮತ್ತು ವಿಶಿಷ್ಟಾದ್ವೈತದ್ವೈತಸಿದ್ಧಾಂತಗಳನ್ನವಲಂಬಿಸಿದ ವೈಷ್ಣವರ, ಮಠಗಳು ತುಂಬಿಕೊಂಡಿದ್ದವು. ಈ ಮಠಗಳೆಲ್ಲ ಪರಸ್ಪರಸ್ಪರ್ಧೆಯಿಂದ ವಾದವಿವಾದಗಳನ್ನು ಮಾಡುತ್ತಲಿದ್ದರೂ ಜನರಲ್ಲಿ ಉತ್ತಮವಾದ ನಡತೆಯೂ ಈಶ್ವರನಲ್ಲಿ ಶ್ರದ್ಧಾಭಕ್ತಿಗಳೂ ಉಂಟಾಗುವಂತೆ ಪ್ರೋತ್ಸಾಹಿಸುತ್ತಿದ್ದವು.

ಶೃಂಗೇರೀಪೀಠದಲ್ಲಿ ಆಗಿಹೋದ ಮಠಾಧಿಪತಿಗಳ ಚರಿತ್ರೆಯನ್ನೆಲ್ಲ ವಿವರಿಸುವದು ಈ ಗ್ರಂಥದ ಉದ್ದೇಶಕ್ಕೆ ಸೇರಿದ್ದಲ್ಲ. ಈ ಪೀಠವು ಅನೇಕ ರಾಜರುಗಳ ಪ್ರೋತ್ಸಾಹದಿಂದ ಅಭಿವೃದ್ಧಿಯನ್ನು ಹೊಂದಿದ ಬಗೆಯನ್ನು ವರ್ಣಿಸುವದರಿಂದ ಆಚಾರ್ಯರ ಚರಿತ್ರೆಗೆ ಪೋಷಣೆಯೇನೂ ದೊರೆಯುವಂತಿಲ್ಲ. ಕ್ರಿ.ಶ. 1910 ನೆಯ ಫೆಬ್ರುವರಿ 21 (ಸೌಮ್ಯಸಂವತ್ಸರದ ಮಾಘ ಶುಕ್ಲ ೧೨)ರಲ್ಲಿ ಶ್ರೀಸಚ್ಚಿದಾನಂದಶಿವಾಭಿನವನೃಸಿಂಹಭಾರತಿಸ್ವಾಮಿಗಳವರು ಶ್ರೀಶಂಕರಾಚಾರ್ಯರ ಮತ್ತು ಶ್ರೀಶಾರದಾಂಬೆಯ ಪ್ರತಿಷ್ಠೆಯನ್ನು ಮಾಡಿದ್ದೊಂದು ವಿಷಯವು ಇಲ್ಲಿ ಅವಶ್ಯವಾಗಿ ಪ್ರಸ್ತಾಪಿಸತಕ್ಕದ್ದಾಗಿದೆ. ಜ್ಞಾನಭಕ್ತಿವೈರಾಗ್ಯಗಳಿಂದಲೂ ಯೋಗಾಭ್ಯಾಸದಿಂದಲೂ ಶ್ರೀಶಂಕರರ ಅಪರಾವತಾರವೆಂದು ಅನೇಕರು ನಂಬುವಷ್ಟು ಉಚ್ಚಸ್ಥಾನಕ್ಕೇರಿದ್ದ ಈ ಸ್ವಾಮಿಗಳವರ ಚರಿತ್ರೆಯು ವಿವರವಾಗಿ ಓದುವದಕ್ಕೆ ಅರ್ಹವಾಗಿರುತ್ತದೆ. ಇವರಲ್ಲಿ ಅನೇಕ ಸುಪ್ರಸಿದ್ಧ ಸಂನ್ಯಾಸಿಗಳು ಶಿಷ್ಯವೃತ್ತಿಯನ್ನು ಮಾಡಿಕೊಂಡಿದ್ದರು. ಶ್ರೀರಂಗದ ವಾಣೀವಿಲಾಸಮುದ್ರಣಾಲಯದಲ್ಲಿ ಈ ಜಗದ್ಗುರುಗಳ ಅಪ್ಪಣೆಯಂತೆ ಶಂಕರಭಗವ

ತ್ಪಾದರ ಹೆಸರಿನಲ್ಲಿರುವ ಗ್ರಂಥಗಳನ್ನೆಲ್ಲ ಪ್ರಕಟಿಸಲಾಯಿತು. ಇವರ ತರುವಾಯ ಶ್ರೀಚಂದ್ರಶೇಖರಭಾರತೀಸ್ವಾಮಿಗಳವರು ಪೀಠಾಧಿಪರಾದರು ; ಈಗ್ಗೆ ಶ್ರೀ ಅಭಿನವವಿದ್ಯಾತೀರ್ಥಸ್ವಾಮಿಗಳವರು ಪೀಠದಲ್ಲಿರುತ್ತಾರೆ.

## ಕಾಂಚೀಕಾಮಕೋಟಿಪೀಠದ ಗುರುಪರಂಪರೆ

೧೮೨. ಕಾಂಚೀಪೀಠವು ಹೆಸರಿಗೆ ತಕ್ಕಂತೆ ಕಂಚಿಯಲ್ಲಿ ಸ್ಥಾಪಿತವಾಗಿದ್ದು ಹದಿನೆಂಟನೆಯ ಶತಮಾನದ ಕೊನೆಯಲ್ಲಿ ಕಾರಣಾಂತರಗಳಿಂದ ತಂಜಾವೂರು ಜಿಲ್ಲೆಯಲ್ಲಿರುವ ಕುಂಭಕೋಣಕ್ಕೆ ಬಂದಿತು. ಅಲ್ಲಿಯ ಪೀಠಾಧಿಪತಿಗಳ ವಿಷಯವನ್ನು 'ಪುಣ್ಯಶ್ಲೋಕಮಂಜರಿ' (ಕಾಂಚೀಪೀಠದ ೫ನೆಯ ಗುರುಗಳು ಬರೆದದ್ದು), 'ಗುರುರತ್ನಮಾಲೆ' (೫೫ನೆಯ ಗುರುಗಳಾದ ಪರಮಶಿವೇಂದ್ರರ ಶಿಷ್ಯರು ಸದಾಶಿವಬ್ರಹ್ಮೇಂದ್ರರು ಬರೆದದ್ದು). ಸುಷಮಾ (ಗುರುರತ್ನಮಾಲಿಕೆಯ ಮೇಲೆ ೬೧ನೆಯ ಗುರುಗಳಾದ ಮಹಾದೇವೇಂದ್ರರ ಶಿಷ್ಯರಾದ ಆತ್ಮಬೋಧರು ಬರೆದದ್ದು)—ಈ ಗ್ರಂಥಗಳ ಆಧಾರವಿದೆ. ಪುಣ್ಯಶ್ಲೋಕಮಂಜರಿಯಲ್ಲಿ ಗುರುಗಳು ಸಮಾಧಿಸ್ಥರಾದ ಸಂವತ್ಸರ, ಪಕ್ಷ, ತಿಥಿಗಳನ್ನು ಕೊಟ್ಟಿರುವದರಿಂದ ಇವುಗಳು ವಿಶ್ವಾಸಾರ್ಹವೆಂದು ಎನ್. ವೆಂಕಟರಾಮನ್‌ರವರು (NVSSK) ಬರೆದಿರುತ್ತಾರೆ ; ಅದರಲ್ಲಿಯೂ ಕೊನೆಕೊನೆಯ ಭಾಗಕ್ಕೆ ವಿದ್ಯಾಘನರ ವಿದೇಹಮುಕ್ತಿಯ ಕಾಲದಿಂದ ಮುಂದೆ ಈ ಗ್ರಂಥಗಳಲ್ಲಿರುವ ಕಾಲಮಾನವು ಹೆಚ್ಚು ವಿಶ್ವಾಸಾರ್ಹವೆಂತ ಅವರ ನಂಬಿಕೆ. ಶ್ರೀಭಗವತ್ಪಾದಾಚಾರ್ಯರು ಕಾಂಚಿಯಲ್ಲಿಯೇ ಸಿದ್ಧಿಯನ್ನು ಹೊಂದಿದರು ಎಂದು ಈ ಮಠದವರು ಹೇಳುತ್ತಾರೆ. ಕಾಂಚಿಯಲ್ಲಿಯೇ ಸರ್ವಜ್ಞಪೀಠವಿತ್ತೆಂದು ಅವರ ಮತ. ಇಲ್ಲಿ ಆಚಾರ್ಯರು ಶ್ರೀಚಕ್ರವನ್ನು ಸ್ಥಾಪಿಸಿದರೆಂಬುದಕ್ಕೆ ಬಹುಜನರ ಸಮ್ಮತಿಯಿದೆ. ಕಾಂಚೀಮಠವೇ ಮೂಲಮಠವೆಂಬವರೆಗೂ ಆ ಮಠದವರ ಅಭಿಪ್ರಾಯವು ಹೋಗುತ್ತದೆ. ಈ ವಿಷಯಕ್ಕೆ ಪ್ರತಿವಾದಿಗಳು ಏನು ಹೇಳುತ್ತಾರೆಂಬುದನ್ನು ಪರಿಶಿಷ್ಟದಲ್ಲಿ ಕೊಡುವೆವು. ಸದ್ಯಕ್ಕೆ ಎನ್. ವೆಂಕಟರಾಮನ್‌ರವರು ಬರೆದಿರುವಂತೆ ಈ ಪೀಠದ ಕೆಲವು ಮುಖ್ಯಗುರುಗಳ ಹೆಸರನು ಇಲ್ಲಿ ಉಲ್ಲೇಖಿಸಿದೆ.

## ಕಾಮಕೋಟಿಪೀಠದ ಮುಖ್ಯಗುರುಗಳು

೧೮೩. ಶ್ರೀಶಂಕರಾಚಾರ್ಯ ಮತ್ತು ಸುರೇಶ್ವರಾಚಾರ್ಯರನ್ನು ಬಿಟ್ಟರೆ ಮುಂದಕ್ಕೆ ೬೬ ಗುರುಗಳು ಈ ಪೀಠದಲ್ಲಿ ಅಧಿಪತಿಗಳಾಗಿರುತ್ತಾರೆ. ವೆಂಕಟರಾಮನ್‌ರವರನ್ನು ಅನುಸರಿಸಿ ನಾವೂ ಸರ್ವಜ್ಞಾತ್ಮರಿಂದ ಗುರುಪರಂಪರೆಯನ್ನು ಎಣಿಸಿ ಮುಖ್ಯರಾದವರ ಹೆಸರುಗಳನ್ನು ಮಾತ್ರ ಇಲ್ಲಿ ಕೊಡುತ್ತೇವೆ. ಹೆಚ್ಚು ವಿವರಕ್ಕೆ ಅವರ ಇಂಗ್ಲಿಷು ಪುಸ್ತಕವನ್ನಾಗಲಿ ಅಥವಾ ಸಂಸ್ಕೃತಪುಣ್ಯಶ್ಲೋಕಮಂಜರಿಯನ್ನಾಗಲಿ ನೋಡಬೇಕು.

(೧) ಸರ್ವಜ್ಞಾತ್ಮ : ಶಂಕರಾಚಾರ್ಯರೊಡನೆ ವಾದಿಸಿದ ಇವರ ಮಹಿಮೆಯನ್ನು ಕಂಡು ಆಚಾರ್ಯರು ಏಳನೆಯ ವರ್ಷದಲ್ಲಿಯೇ ಇವರನ್ನು ಪೀಠಾಧಿಪತಿಗಳನ್ನಾಗಿ ಮಾಡಿ ಸುರೇಶ್ವರರನ್ನು ಮೇಲುವಿಚಾರಣೆಗೆ ಮಠದಲ್ಲಿಟ್ಟರಂತೆ (NVSSK.p 50), ಸರ್ವಜ್ಞಾತ್ಮರು ಸುರೇಶ್ವರಾಚಾರ್ಯರ ಶಿಷ್ಯರಲ್ಲವೆಂದು ಈಗ ಗೊತ್ತಾಗಿದೆ ; ಅವರ ಗುರುಗಳಾದ ದೇವೇಶ್ವರರು ದೇವಾನಂದರ ಶಿಷ್ಯರು ; ದಕ್ಷಿಣ ತಿರುವಾಂಕೂರಿನ ರಾಜನಾದ ಮನುಕುಲಾದಿತ್ಯನ ಕಾಲದಲ್ಲಿ ಸಂಕ್ಷೇಪಶಾರೀರಕವು ಮುಗಿಯಿತೆಂದು ಗ್ರಂಥದ ಅಂತ್ಯದಲ್ಲಿರುವ ಒಂದು ಶ್ಲೋಕದಿಂದ ತಿಳಿಯಬರುತ್ತದೆ. ಆದ್ದರಿಂದ ಸುರೇಶ್ವರರು ಇವರ ಕಾಲದಲ್ಲಿ ಕಾಂಚಿಯಲ್ಲಿದ್ದರೆಂಬುದಕ್ಕೆ ಆಧಾರವು ಸಾಲದೆಂದು ಹೇಳಬೇಕಾಗಿದೆ.

(೩) ಜ್ಞಾನಾನಂದ : ನೈಷ್ಕರ್ಮ್ಯಸಿದ್ಧಿಯಮೇಲೆ "ಚಂದ್ರಿಕೆ" ಎಂಬ ವ್ಯಾಖ್ಯಾನವನ್ನು ಬರೆದ ಜ್ಞಾನೋತ್ತಮರು ಇವರೇ ಎಂದು ವೆಂಕಟರಾಮನ್ನರ ನಂಬಿಕೆ. ಶೃಂಗೇರೀಪರಂಪರೆಯಲ್ಲಿ ೫ನೆಯ ಗುರುಗಳೇ ಚಂದ್ರಿಕಾಕರ್ತರೆಂದು ಜಿ. ಶ್ರೀನಿವಾಸಯ್ಯರ್ ರವರು ಬರೆದಿದ್ದಾರೆ. (GGS. p. 11) ನಿಜವು ಯಾವದೊ !

(೫) ಆನಂದಜ್ಞಾನ : ಆಚಾರ್ಯರ ಭಾಷ್ಯಗಳಿಗೆ ಟೀಕೆಯನ್ನು ಬರೆದಿರುವ ಆನಂದಗಿರಿಗಳೇ ಇವರೆಂದು ಎನ್. ವೆಂಕಟರಾಮನ್‌ರವರ ಮತ. ಆದರೆ ಆನಂದಜ್ಞಾನ ಅಥವಾ ಆನಂದಗಿರಿ ಎಂಬ ಹೆಸರಿನ ಟೀಕಾಕರ್ತರು ಅನೇಕರಿದ್ದರೆಂದು ನಮ್ಮ ಅಭಿಪ್ರಾಯವಿದೆ. ಸಂಸ್ಕೃತದಲ್ಲಿ ಬರೆದಿರುವ ಉಪನಿಷತ್ತುಗಳ ಟಿಪ್ಪಣಿಗಳಲ್ಲಿ ಇದನ್ನು ನಾವು ಸ್ಪಷ್ಟಪಡಿಸಿರುತ್ತೇವೆ.

(೯) ಕೃಪಾಶಂಕರ : ಇವರೇ ಷಣ್ಮತಸ್ಥಾಪನಾಚಾರ್ಯರೆಂದು ವೆಂಕಟರಾಮನ್‌ರವರ ಕಲ್ಪನೆ

(೧೮) ಮೂಕಶಂಕರ : ಜನ್ಮದಿಂದಲೂ ಮೂಕರಾಗಿದ್ದು ಇವರಿಗೆ ವಿದ್ಯಾಘನರ ಅನುಗ್ರಹದಿಂದ ಮಾತು ಬಂದಿತಂತೆ. ಇವರಿಗೆ ಕಾಶ್ಮೀರದ ಮಾತೃಗುಪ್ತ, ಪ್ರವರಸೇನ- ಇವರು ಭಕ್ತರಾಗಿದ್ದರಂತೆ. 'ಮೂಕಪಂಚಾಶತೀ' ಮತ್ತು 'ಪ್ರಾಚೀನಶಂಕರವಿಜಯ' ಇವುಗಳನ್ನು ರಚಿಸಿದವರು ಈ ಗುರುಗಳಂತೆ. ಆತ್ಮಬೋಧರು ಆ ಶಂಕರವಿಜಯದಿಂದ ಹಲವು ಶ್ಲೋಕಗಳನ್ನು ಉದಾಹರಿಸಿರುತ್ತಾರೆ ; ಅವುಗಳನ್ನು ನೋಡಿದರೆ ಕಾಂಚೀಮಠವು ಬಗ್ಗೆ ಉತ್ತಮಸ್ಥಿತಿಯಲ್ಲಿದ್ದ ಸಂಸ್ಥೆಯಾಗಿದ್ದಿತೆಂದು ಹೇಳಬೇಕಾಗುವದು. ಈ ಮೂಕಶಂಕರರು ಇದ್ದ ಕಾಲವು (ಕಲಿ೩೫೩೩) ಅವುಗಳಿಂದ ತಿಳಿಯಬರುವದಲ್ಲದೆ ಕಾಂಚೀಸಂಪ್ರದಾಯದಂತೆ ಅವರ ಕಾಲದಲ್ಲಿ ನಡೆದ ಮುಖ್ಯಘಟನೆಗಳನ್ನೂ ಪರಾಮರ್ಶಿಸುತ್ತದೆ- ಎಂದು ವೆಂಕಟರಾಮನ್‌ರವರು (NVSSK. p. 74) ಬರೆದಿರುತ್ತಾರೆ.

(೩೬) ಧೀರ (ಅಥವಾ ಅಭಿನವ) ಶಂಕರ: ಇವರು ಚಿದಂಬರದಲ್ಲಿದ್ದ ವಿಶ್ವಜಿತ್ತಿನ ಮಕ್ಕಳು. ಇದು ವಾಕ್ಪತಿಭಟ್ಟನ 'ಶಂಕರೇಂದ್ರವಿಲಾಸ'ದಿಂದ ತಿಳಿಯಬರುತ್ತದೆ. ಇವರ ವಿಷಯಕ್ಕೆ ವಿವರವನ್ನು ಹಿಂದೆ (ಪು. ೪೦) ಬರೆದಿದೆ.

(೪೫) ತೃತೀಯ ಚಂದ್ರಶೇಖರ ಅಥವಾ ಚಂದ್ರಚೂಡ: ಇವರಿಗೆ 'ಶ್ರೀಕಂಠಚರಿತ'ವನ್ನು ಬರೆದ ಮಂಖ, 'ಪ್ರಬೋಧಚಂದ್ರೋದಯ'ವನ್ನು ಬರೆದ ಕೃಷ್ಣಮಿಶ್ರ, 'ಪ್ರಸನ್ನರಾಘವ'ವೇ ಮುಂತಾದ ಗ್ರಂಥಗಳನ್ನು ಬರೆದ ಜಯದೇವ ಮುಂತಾದವರು ಭಕ್ತರಾಗಿದ್ದರಂತೆ.

(೪೬) ಅದ್ವೈತಾನಂದಬೋಧ: ಇವರಿಗೆ ಚಿಗ್ವಿಲಾಸರೆಂದೂ ಹೆಸರು. 'ಖಂಡನಖಂಡನಖಾದ್ಯ'ದ ಕರ್ತೃವಾದ ಶ್ರೀಹರ್ಷನನ್ನೂ ತಂತ್ರಶಾಸ್ತ್ರದ ಹಲವು ಗ್ರಂಥಗಳನ್ನು ಬರೆದಿದ್ದ ಅಭಿನವಗುಪ್ತನನ್ನೂ ವಾದದಲ್ಲಿ ಜಯಿಸಿದವರಾದ ಇವರು 'ಬ್ರಹ್ಮವಿದ್ಯಾಭರಣ, ಶಾಂತಿವಿವರಣ, ಗುರುಪ್ರದೀಪ' ಎಂಬ ಗ್ರಂಥಗಳನ್ನು ರಚಿಸಿದರು.

(೫೯) ವಿದ್ಯಾತೀರ್ಥ : ಇವರು ವೇದಭಾಷ್ಯವನ್ನು ಬರೆದ ಸಾಯಣನ ಗುರುಗಳು. ಮುಂದೆ ವಿದ್ಯಾರಣ್ಯರೆಂದು ಪ್ರಸಿದ್ಧರಾದ ಮಾಧವ, ಮತ್ತು ಶೃಂಗೇರಿ ಮಠವು ಉಜ್ಜೀವನವಾದ ಮೇಲೆ ಪ್ರಥಮಪೀಠಾಧಿಪರಾದ ಭಾರತೀಕೃಷ್ಣ– ಇವರಿಗೂ ಗುರುಗಳು. ಮಾಧ್ವರ ಮತಪ್ರಚಾರವನ್ನೂ ರೋಮನ್ ಕ್ಯಾಥೊಲಿಕರು ಪೋರ್ಚುಗೀಸ್ ಇಂಡಿಯದಲ್ಲಿ ಮಾಡುತ್ತಿದ್ದ ಹಾವಳಿಯನ್ನೂ ತಡೆಗಟ್ಟುವದಕ್ಕಾಗಿ ವಿದ್ಯಾತೀರ್ಥರು ಎಂಟು ಮಠಗಳನ್ನು ಸ್ಥಾಪಿಸಿ ತಮ್ಮ ಎಂಟು ಜನ ಶಿಷ್ಯರನ್ನು ಅವುಗಳಿಗೆ ಅಧಿಪತಿಗಳನ್ನಾಗಿ ನಿಯಮಿಸಿದರು ;ವಿದ್ಯಾರಣ್ಯರನ್ನು ವಿಜಯನಗರ ಚಕ್ರಾಧಿಪತ್ಯದ ರಾಜಧಾನಿಯ ಬಳಿಯಲ್ಲಿದ್ದ ವಿರೂಪಾಕ್ಷಿಮಠಕ್ಕೆ ಅಧಿಪತಿಗಳನ್ನಾಗಿ ಮಾಡಿದರು. ಕಾಂಚೀಮಠದಲ್ಲಿ ೭೩ ವರ್ಷಗಳಿದ್ದು ವಿದ್ಯಾತೀರ್ಥರು ತಪಸ್ಸುಮಾಡುವದಕ್ಕೆಂದು ಹಿಮಾಲಯಕ್ಕೆ ಹೋದರು. ವಿದ್ಯಾತೀರ್ಥರು ಸ್ಥಾಪಿಸಿದರೆಂದು ಹೇಳಲಾಗಿರುವ ಎಂಟು ಮಠಗಳೊಳಗೆ ವಿರೂಪಾಕ್ಷಿ, ಪುಷ್ಪಗಿರಿ– ಈ ಎರಡು ಮಠಗಳು ಮಾತ್ರ ಇರುತ್ತವೆ.

ಈ ಮಠಗಳೆಲ್ಲ ಮಠಗಳ ಮುದ್ರೆಯಲ್ಲಿ 'ವಿದ್ಯಾರಣ್ಯ' ಅಥವಾ 'ವಿದ್ಯಾಶಂಕರ' ಎಂಬ ಹೆಸರುಗಳನ್ನಿಟ್ಟುಕೊಂಡಿವೆ; ಈ ಎರಡು ಹೆಸರುಗಳೂ ಒಬ್ಬರದೇ. ಶೃಂಗೇರೀಮಠದ ಗುರುಪರಂಪರೆಯಲ್ಲಿ ಮಠದ ೯ನೆಯರಾದ ವಿದ್ಯಾಶಂಕರರು ಬೇರೆ. ಅವರು ನಿರ್ಮಲ ಎಂಬಲ್ಲಿ 491ರಲ್ಲಿ ಮುಕ್ತರಾದರು.

ಈ ಮೇಲೆ ಬರೆದ ವಿವರವು ಎನ್. ವೆಂಕಟರಾಮನ್‌ರು ಬರೆದಂತೆ ಕೊಟ್ಟಿದ್ದು. ಈ ವಿಷಯದಲ್ಲಿ ಹಿಂದೆ (ಪು. ೩೪೫–೩೪೭) ಶೃಂಗೇರೀಮಠದ

ವಿಷಯಕ್ಕೆ ಬರೆದಿರುವವದನ್ನೂ ಪರಿಶಿಷ್ಟ (೯) ರಲ್ಲಿ ಕೊಟ್ಟಿರುವ ವಿಷಯಗಳನ್ನೂ ಓದಿದರೆ ವಿಚಾರವು ಬಹಳ ವಾದಗ್ರಸ್ತವೆಂಬುದು ಸ್ಪಷ್ಟವಾಗುವದು.

(೫೦) **ಶಂಕರಾನಂದ :** ಇವರು ವಿದ್ಯಾರಣ್ಯರಿಗೆ ಹೊಸ ಮಠಗಳನ್ನು ಸ್ಥಾಪಿಸುವದಕ್ಕೆ ಸಹಾಯವನ್ನು ಮಾಡಿದರು. ಕೆಲವು ಉಪನಿಷತ್ತುಗಳಿಗೆ 'ದೀಪಿಕೆ'ಗಳನ್ನೂ ಭಗವದ್ಗೀತೆಗೆ 'ತಾತ್ಪರ್ಯದೀಪಿಕೆ' ಎಂಬ ವ್ಯಾಖ್ಯಾನವನ್ನೂ 'ಆತ್ಮಪುರಾಣ'ವೆಂಬ ಗ್ರಂಥವನ್ನೂ ಬರೆದಿರುತ್ತಾರೆ. ಬೃಹದಾರಣ್ಯಕೋಪನಿಷತ್ತಿಗೆ ಇವರು ಬರೆದಿರುವ 'ದೀಪಿಕೆ'ಯಲ್ಲಿರುವ ಒಂದಾನೊಂದು ಶ್ಲೋಕದ ಆಧಾರದಿಂದ ವಿದ್ಯಾತೀರ್ಥರು ಕಾಂಚೀಪೀಠಕ್ಕೆ ಗುರುಗಳಾಗಿದ್ದರೆಂಬುದು ನಿಃಸಂಶಯವೆಂದು ಎನ್. ವೆಂಕಟರಾಮನ್‌ರವರು ಬರೆದಿರುತ್ತಾರೆ. ಆದರೆ ಇದುಕೂಡ ವಾದ ಗ್ರಸ್ತವಾಗಿರುತ್ತದೆ. ಪರಿಶಿಷ್ಟ (೯)ನ್ನು ನೋಡಿರಿ.

(೫೧) **ಮಹಾದೇವ (ಚತುರ್ಥ.** ಇವರು ವ್ಯಾಸಾಚಲದಲ್ಲಿದ್ದದ್ದರಿಂದ ಇವರಿಗೆ ವ್ಯಾಸಾಚಲರೆಂದೂ ಹೆಸರು. ವ್ಯಾಸಾಚಲೀಯವೆಂಬ ಶಂಕರವಿಜಯ ವನ್ನು ಇವರು ಬರೆದರು. ಹಿಂದೆ (ಪು.೫) ಈ ವಿಷಯವನ್ನು ಪ್ರಸ್ತಾಪಿಸಿದೆ. ಇವರಿಗೂ ಮುಂದಿನ ಕೆಲವರು ಪೀಠಾಧಿಪತಿಗಳಿಗೂ ರಾಜರು ಕೊಟ್ಟ ಉಂಬಳಿ ಗಳ ವಿಷಯಕ್ಕೆ ತ್ರಾಮುಶಾಸನಗಳಿವೆ. ಶಾಸನಗಳ ವಿಷಯಕ್ಕೆ ಪರಿಶಿಷ್ಟ (೯)ವನ್ನು ನೋಡಿ.

(೫೫) **ಪರಮಶಿವ : (ದ್ವಿತೀಯ).** ಇವರು 'ಆತ್ಮವಿದ್ಯಾವಿಲಾಸ' ವನ್ನು ಬರೆದಿರುವ ಸದಾಶಿವಬ್ರಹ್ಮೇಂದ್ರರ ಗುರುಗಳು. ಸದಾಶಿವಬ್ರಹ್ಮರು "ಗುರುರತ್ನಮಾಲಿಕೆ"ಯನ್ನು ಬರೆದಿರುತ್ತಾರೆ. ಈ ಗ್ರಂಥದ ವಿಷಯಕ್ಕೆ ಹಿಂದೆ (ಪು. ೧೩ರಲ್ಲಿ) ಬರೆದಿದೆ.

(೬೬) **ಆತ್ಮಬೋಧರು, ವಿಶ್ವಾಧಿಕರು :** ಇವರು 'ರುದ್ರಭಾಷ್ಯ' ವನ್ನು ಬರೆದಿರುತ್ತಾರೆ. ಇವರು 'ಗುರುರತ್ನಮಾಲಿಕೆ'ಯನ್ನು ಬರೆಯಿಸುವದಕ್ಕೆ ಪ್ರಚೋದಕರಂತೆ.

(೫೯) **ಮಹಾದೇವ (ಪಂಚಮ).** ಇವರು ದೊಡ್ಡಯೋಗಿಗಳು. ಆತ್ಮಬೋಧರು ಇವರ ಕಾಲದಲ್ಲಿ ಗುರುರತ್ನಮಾಲಿಕೆಯ ಮೇಲಿನ ಸುಷುಮಾ ವ್ಯಾಖ್ಯಾನವನ್ನು ಬರೆದರು.

(೬೦) **ಚಂದ್ರಶೇಖರ (ಚತುರ್ಥ).** ಕಾಮಕೋಟಿಯ ಪೀಠವು ಕಂಚಿಯನ್ನು ಬಿಟ್ಟೇಬಿಟ್ಟು ಕುಂಭಕೋಣಕ್ಕೆ ಬಂದುಬಿಟ್ಟದ್ದು ಇವರ ಕಾಲದಲ್ಲಿ. ಕಾಮಾಕ್ಷೀವಿಗ್ರಹವು ಮೊದಲು ಒಡೆಯರ ಪಾಳ್ಯಕ್ಕೆ ಬಂದು, ಆಮೇಲೆ ತಂಜಾ ವೂರಿಗೆ ಹೋಗಿ ಅಲ್ಲಿಯೇ ನಿಂತುಬಿಟ್ಟಿದೆ. ರಾಜ ಪ್ರತಾಪಸಿಂಹನ

(1770–1763) ಕಾಲಕ್ಕೆ ತಂಜಾವೂರಿಗೆ ಬಂದು ಮಠವು ಕಾವೇರಿತೀರದಲ್ಲಿದೆ ಯೆಂಬ ಕಾರಣದಿಂದ ಕುಂಭಕೋಣಕ್ಕೆ ಬಂದು ಈವರೆಗೂ ಅಲ್ಲಿಯೇ ನಿಂತಿದೆ.

(೬೬) ಜಗದ್ಗುರು ಶ್ರೀಚಂದ್ರಶೇಖರೇಂದ್ರಸರಸ್ವತೀಸ್ವಾಮಿಗಳವರು ಈಗ ಪೀಠದಲ್ಲಿರುತ್ತಾರೆ. ಅವರು ಶ್ರೀಜಯೇಂದ್ರಸರಸ್ವತೀಸ್ವಾಮಿಗಳವರನ್ನು ಶಿಷ್ಯಸ್ವಾಮಿಗಳಾಗಿ ಮಾಡಿಕೊಂಡಿರುತ್ತಾರೆ. ಈ ಸ್ವಾಮಿಗಳ ಮಹಿಮೆಯಿಂದ ಮಠದ ಪ್ರಖ್ಯಾತಿಯು ಹೆಚ್ಚುತ್ತಲಿದೆ.

ಇಲ್ಲಿಯವರೆಗೆ ಬರೆದಿರುವನ್ನು ಎನ್. ವೆಂಕಟರಾಮನ್‌ರವರ ಇಂಗ್ಲಿಷು ಗ್ರಂಥದ ಆಧಾರದಿಂದಲೇ ನಾವು ಬರೆದುಕೊಂಡಿರುತ್ತೇವೆ. ಈ ವಿಷಯದಲ್ಲಿರುವ ಭಿನ್ನಾಭಿಪ್ರಾಯಗಳಿಗೆ ವಾಚಕರು ಪರಿಶಿಷ್ಟವನ್ನು ನೋಡಬೇಕು.

## ದ್ವಾರಕಾ, ಗೋವರ್ಧನ, ಜ್ಯೋತಿರ್ಮಠ ಮುಂತಾದ ಮಠಗಳು

೧೮೪. ಆಚಾರ್ಯರು ಸ್ಥಾಪಿಸಿರುವವೆಂದು ಪ್ರಸಿದ್ಧವಾಗಿರುವ ಮಿಕ್ಕ ಮಠಗಳ ವಿಷಯಕ್ಕೆ ಗುರುಪರಂಪರೆಯ ಪಟ್ಟಿಗಳಿದ್ದರೂ ಅವುಗಳಲ್ಲಿ ಪ್ರಸಿದ್ಧವಾಗಿ ನಡೆದಿರುವ ಐತಿಹಾಸಿಕಘಟನೆಗಳು ಯಾವವೂ ಇರುವದಿಲ್ಲ. ಶಂಕರಚರಿತ್ರೆಗೆ ಸಂಬಂಧಪಡಿಸಬಹುದಾದ ಹೆಚ್ಚಿನ ವಿಷಯಗಳಂತೂ ನಮಗೆ ಸಿಕ್ಕದೆ ಇರುವದರಿಂದ ಅವುಗಳ ವಿಷಯವನ್ನು ಇಲ್ಲಿ ಬರೆಯಲಾಗಲಿಲ್ಲ ಹೆಚ್ಚಿನ ವಿಷಯಕ್ಕೆ ಪರಿಶಿಷ್ಟವನ್ನು ನೋಡಿರಿ.

## ಮಠಗಳ ವಿಚಾರದ ಉಪಸಂಹಾರ

೧೮೫. ಆಚಾರ್ಯರು ಸ್ಥಾಪಿಸಿದರೆಂದು ಪ್ರಖ್ಯಾತವಾಗಿರುವ ಮಠಗಳ ಅಧಿಪತಿಗಳು ಕೆಲವು ವರ್ಷಗಳಿಂದೀಚೆಗೆ. ಮಠದ ಮುಖ್ಯಕಾರ್ಯಗಳನ್ನು ಉಜ್ಜ್ವಲಗೊಳಿಸುವದಕ್ಕಾಗಲಿ, ಅದ್ವೈತಸಿದ್ಧಾಂತವನ್ನು ಮುಮುಕ್ಷುಗಳಿಗೆ ಬೋಧಿಸುವದಕ್ಕಾಗಲಿ ಅದ್ವೈತಗ್ರಂಥಗಳ ಪ್ರಕಾಶಕ್ಕಾಗಲಿ ಯಾವ ಪ್ರಯತ್ನವನ್ನೂ ಮಾಡದೆ ಸುಮ್ಮನೆ ತಮ್ಮತಮ್ಮ ಪೀಠದ ಪ್ರತಿಷ್ಠೆಗಳಿಗೆ ಮಾತ್ರವೇ ಲಕ್ಷ್ಯವನ್ನೂ ಕೊಡುತ್ತಾಬಂದದ್ದರ ಫಲವಾಗಿ ಶಿಷ್ಯಜನರಲ್ಲಿ ಮಠಗಳ ವಿಷಯಕ್ಕೆ ಔದಾಸೀನ್ಯವೂ ಸರಕಾರದವರಿಗೆ ಮಠಗಳ ಆಸ್ತಿಗಳ ಮತ್ತು ಉತ್ಪತ್ತಿಯ ಬಗ್ಗೆ ವಕ್ರದೃಷ್ಟಿಯೂ ಉಂಟಾಗುವದಕ್ಕೆ ಕಾರಣವಾಯಿತು. ಶ್ರೀ ಭಗವಂತನ ದಯದಿಂದ ಈಗೀಗಿನ ಮಠಾಧಿಪತಿಗಳು ವಿದ್ಯಾಪ್ರಚಾರವೇ ಮುಂತಾದ ಸಾರ್ವಜನಿಕಕಾರ್ಯಗಳಲ್ಲಿಯೂ ಜನರಿಗೆ ಆಚಾರ್ಯರಲ್ಲಿ ಶ್ರದ್ಧಾಭಕ್ತಿಗಳನ್ನು ಉಂಟುಮಾಡುವದರಲ್ಲಿಯೂ ಆದರವನ್ನು ತೋರಿಸುತ್ತಲಿದ್ದಾರೆ. ಸಕಲಗುರುಗಳಿಗೂ ಗುರುಗಳಾದ ಶ್ರೀಶಂಕರಭಗವತ್ಪಾದರವರ ಕರುಣಾಕಟಾಕ್ಷವು ಮಠಗಳ ಮೇಲೆ ಬಿದ್ದು ಶಿಷ್ಯರುಗಳಿಗೆಲ್ಲ ತಮ್ಮತಮ್ಮ ಮಠದಲ್ಲಿಯೂ ಭಗವತ್ಪಾದರವರ ಉಪದೇಶದಲ್ಲಿಯೂ ಶ್ರದ್ಧಾಭಕ್ತಿಗಳು ಹೆಚ್ಚುವಂತಾಗಲೆಂದು ಹಾರೈಸೋಣ.

---

# ೨೬. ಉಪಸಂಹಾರ

೧೮೬. ಶ್ರೀಮನ್ನಾರಾಯಣನ ಅನುಗ್ರಹದಿಂದಲೂ ಶ್ರೀಶಂಕರಭಗವತ್ಪಾದಾಚಾರ್ಯರವರ ಕೃಪಾಕಟಾಕ್ಷದ ಬಲದಿಂದಲೂ ಆಚಾರ್ಯರ ವೃತ್ತಾಂತದ ಈ ಸಾರಸರ್ವಸ್ವವು ಸಮಾಪ್ತಿಯಾಯಿತು; ಎಂದರೆ ನಮಗೆ ಸಿಕ್ಕಿದಷ್ಟು ಕಥೆಗಳ, ಮತ್ತು ಅವುಗಳನು ಕುರಿತು ಬೇರೆಬೇರೆಯ ಭಾಷೆಗಳಲ್ಲಿ ಹಲವರು ಬರೆದಿರುವ ಗ್ರಂಥಗಳ, ಆಧಾರದಿಂದ ವಿಷಯಗಳನ್ನು ಸಂಗ್ರಹಿಸಿ ಜೋಡಿಸಿ ವಿಮರ್ಶಕ ದೃಷ್ಟಿಯಿಂದ ವಿಚಾರಮಾಡಿ ನೋಡಿ ನಮ್ಮ ಅಭಿಪ್ರಾಯವನ್ನು ಒಂದು ರೂಪಕ್ಕೆ ಇಳಿಸಿಕೊಂಡು ಬರೆದದ್ದಾಯಿತು.

ಈ ಚರಿತ್ರೆಯಿಂದ ಓದುಗರಿಗೆ ಎಷ್ಟರಮಟ್ಟಿಗೆ ಪ್ರಯೋಜನವಾಗಿದೆಯೋ ಅವರೇ ನೋಡಿಕೊಳ್ಳಬೇಕು. ನಮಗಂತೂ ವಿಷಯವನ್ನು ಪೂರ್ಣಭಕ್ತಿಯಿಂದ ಸಂಗ್ರಹಿಸಿ ಪಕ್ಷಪಾತವಿಲ್ಲದ ನಿರ್ಣಯಕ್ಕೆ ಬಂದು, ತಿಳಿದದ್ದನ್ನು ನಿರ್ಭೀತಿಯಿಂದ ಬರೆದಿದೇವೆಂಬ ತೃಪ್ತಿಯುಂಟಾಗಿರುತ್ತದೆ. ಆಚಾರ್ಯರ ವಿಷಯಕ್ಕೆ ಬರೆದಿರುವ ಗ್ರಂಥಗಳೆಲ್ಲವೂ ಅವರು ಈ ಲೋಕವನ್ನು ಬಿಟ್ಟು ಪರಂಧಾಮಕ್ಕೆ ತೆರಳಿದಮೇಲೆ ಹಲವು ಶತಮಾನಗಳ ಈಚೆಗೆ ಹೇಳಿಂಡ ಕೇಳಿಂದ- ಎಂಬ ದಂತೆಕಥೆಗಳಿಂದಲೂ ಕಲ್ಪನಾಕಥೆಗಳಿಂದಲೂ ಅಲ್ಪಸ್ವಲ್ಪವಾಗಿ ಸಾಂಪ್ರದಾಯಿಕವಾಗಿ ದೊರೆತ ಸಂಗತಿಗಳಿಂದಲೂ ಆಯಾ ಗ್ರಂಥಕರ್ತೃಗಳು ಬರೆದ ಕಾವ್ಯಗಳಾಗಿರುತ್ತವೆ. ಆದ್ದರಿಂದ ಅವುಗಳನ್ನು ಇತಿಹಾಸಗ್ರಂಥಗಳೆಂದು ನಂಬುವದಕ್ಕೆ ಆಗುವಂತಿಲ್ಲ. ಇದರ ಜೊತೆಗೆ ಬೇರೆಬೇರೆಯ ಮತಗಳ ಸಂಪ್ರದಾಯದ ಹೆಚ್ಚುಗಾರಿಕೆಯನ್ನು ತೋರಿಸಬೇಕೆಂಬ ಅಂಧಶ್ರದ್ಧಾವಂತರು ಬರೆಯಿಸಿದ ಅಥವಾ ಬರೆದ ಗ್ರಂಥಗಳೂ ಅವುಗಳೊಳಗೆ ಕೆಲವು ಇವೆ.. ಆದ್ದರಿಂದ ಆಚಾರ್ಯರ ಚರಿತ್ರೆಯ ವಿಷಯಕ್ಕೆ ನಮಗೆ ತಿಳಿದಿರುವದು ಬಹು ಸ್ವಲ್ಪ ಎಂದು ವಿಷಾದದಿಂದ ಒಪ್ಪಿಕೊಳ್ಳಬೇಕಾಗಿದೆ.

ಆಚಾರ್ಯರು ಬರೆದಿರುವ ಅತ್ಯಮೋಘಭಾಷ್ಯಗ್ರಂಥಗಳಲ್ಲಿ ಜೀವಿತವಾಗಿ ಇದಿಗೂ ಜನರಿಗೆ ಜೀವನ್ಮುಕ್ತಿಯ ದಿಗ್ದರ್ಶನವನ್ನು ಮಾಡುತ್ತಿರುವ ವಿಚಾರಗಳನ್ನು ಅಷ್ಟಾಗಿ ಗಣಿಸದೆ, ಪ್ರಚಾರದಲ್ಲಿರುವ ವೇದಾಂತೋಪದೇಶವನ್ನು ತುಂಬಿ ಅವೇ ಆಚಾರ್ಯರ ಅಭಿಪ್ರಾಯಗಳೆಂದು ಸಾರುವ ಧಾರ್ಷ್ಟ್ಯವನ್ನೂ ಕೆಲವರು ಮಾಡಿರುತ್ತಾರೆ. ಆಚಾರ್ಯರು ಸ್ಪಷ್ಟವಾಗಿ ಬರೆದಿರುವ ಆಚಾರವಿಚಾರಗಳ ವಿಷಯಕ್ಕೆ ನಾವು ಯಾವದೊಂದು ಶಂಕರವಿಜಯವನ್ನೂ ಪ್ರಮಾಣವಾಗಿ ಹಿಡಿಯದೆ, ಭಾಷ್ಯಗಳ ಆಧಾರದಿಂದಲೇ ಅವರ ಅಭಿಪ್ರಾಯಗಳನ್ನು ವಿವರಿಸಿ, ಅದಕ್ಕೆ ವಿರುದ್ಧವಾಗಿರುವ ಅಭಿಪ್ರಾಯಗಳನ್ನು ಸ್ಪಷ್ಟೋಕ್ತಿಗಳಿಂದ ಖಂಡಿಸುತ್ತಾ ಬಂದಿರುತ್ತೇವೆ.

ಚರಿತ್ರೆ, ಉಪದೇಶ– ಈ ಎರಡು ವಿಭಾಗಗಳಲ್ಲಿಯೂ ನಮ್ಮ ನಿಶ್ಚಿತೋಕ್ತಿಗಳು ಕಟುವಾಗಿ ಕಂಡದ್ದರಿಂದ ಕೆಲವರು ಔದಾಸೀನ್ಯವನ್ನೂ ಮತ್ತೆ ಕೆಲವರು ಅಸಮಾಧಾನವನ್ನೂ ತೋರಿಸುವರೆಂಬುದು ನಿರೀಕ್ಷಿಸತಕ್ಕದ್ದೇ ಆಗಿದೆ. ಆದರೆ ಅದೇನೂ ನಮಗೆ ಮುಖ್ಯವಲ್ಲ. ಆಚಾರ್ಯರ ವಿಷಯದಲ್ಲಿ ಶಂಕರವಿಜಯಗಳನ್ನು ಓದುವವರು ಅವುಗಳು ಇತಿಹಾಸಪುರಾಣಗಳಿಗೆ ಸರಿಗಟ್ಟುವ ಧರ್ಮಗ್ರಂಥಗಳೆಂದು ವಿಶ್ವಾಸವಿಡದೆ ಕಾವ್ಯಗಳೆಂದು ಮಾತ್ರ ಓದಿ, ಸಾರಗ್ರಹಣವನ್ನು ಮಾಡುವುದಕ್ಕೆ ಈ ಚರಿತ್ರೆಯು ಒಂದಿಷ್ಟಾದರೂ ಸಹಾಯವಾದರೆ ನಾವು ಧನ್ಯರು. ಆಚಾರ್ಯರ ಅಮೋಘವಾದ ಅನುಗ್ರಹವೆನಿಸಿರುವ ಔಪನಿಷದದರ್ಶನದ ಬೆಲೆಯನ್ನೂ ಜ್ಞಾನಭಕ್ತಿವೈರಾಗ್ಯಾದಿಗಳ ವೀರ್ಯವನ್ನೂ ಓದುಗರು ಒಂದಿಷ್ಟಾದರೂ ಮನಗಂಡರೆ ನಾವು ಧನ್ಯರು.

ಆಚಾರ್ಯರು ದಕ್ಷಿಣದಲ್ಲಿ ಸದ್ವಂಶದಲ್ಲಿ ಹುಟ್ಟಿ ಚಿಕ್ಕವಯಸ್ಸಿನಲ್ಲಿಯೇ ಪರಮಹಂಸಪರಿವ್ರಾಜಕರಾಗಿ ಗುರೂಪದೇಶದಿಂದ ತಮಗೆ ದೊರೆತ ಅದ್ವೈತಸಿದ್ಧಾಂತದ ಕೆಚ್ಚನ್ನು ತೋರಿಸುದಕ್ಕಾಗಿ ಭಾಷ್ಯಗಳನ್ನು ಬರೆದು ಕಾಲುನಡಗೆಯಿಂದ ಭರತಖಂಡದಲ್ಲೆಲ್ಲ ಸಂಚರಿಸಿ ವೈದಿಕಧರ್ಮದ ಉಜ್ಜೀವನಕ್ಕೆ ಅಸಮಾನಸಂಪ್ರದಾಯಕರ್ತೃಗಳೆನಿಸಿರುತ್ತಾರೆ. ನಿಜವಾದ ಅವರ ಇತಿಹಾಸವು ವಿವರವಾಗಿ ನಮಗೆ ದೊರೆಯದೆ ಇದ್ದರೂ ತಮ್ಮ ಹೆಸರು ಕಿವಿಗೆ ಬಿದ್ದಮಾತ್ರದಿಂದ ಶ್ರದ್ಧಾಗೌರವಗಳೂ ಭಕ್ತಿಗಳೂ ಉಜ್ಜ್ವಲವಾಗುವಂಥ ಪಾಪಹರವಾದ ಕೀರ್ತಿಯನ್ನು ನಾಲ್ಕುದಿಕ್ಕಿನಲ್ಲಿಯೂ ಹರಿಡಿರುತ್ತಾರೆ. ಆ ಮಹನೀಯರು ಸ್ಥಾಪಿಸಿರುವ ಪೀಠಗಳೆಂದು ಪ್ರಖ್ಯಾತಿಯನ್ನು ಹೊಂದಿರುವ ಮಠಗಳಿಗೆ ಸಲ್ಲುತ್ತಿರುವ ಗೌರವಗಳೆಲ್ಲವೂ ಅವರಿಗೇ ಮೂಲತಃ ಸಲ್ಲತಕ್ಕವಾಗಿರುತ್ತವೆ. ಜಗತ್ತಿನಲ್ಲಿ ಇಂದಿಗೂ ಶಾಂತಿಯು ದೊರಕಿ, ಭೂಲೋಕವು ವೈಕುಂಠವೆನಿಸಬೇಕಾದರೆ, ಅವರು ಉಪದೇಶಿಸಿರುವ ಅನುಭವಾನುಸಾರಿಯಾದ ಅದ್ವೈತದ ತಿಳಿವಳಿಕೆಯನ್ನು ಪ್ರಚಾರಮಾಡುವದೊಂದೇ ಪರಮೋಪಾಯವಾಗಿರುತ್ತದೆಯೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಈಗಿನ ಮಠಗಳೂ ಅಧ್ಯಾತ್ಮಸಂಸ್ಥೆಗಳೂ ಸಾಧುಸಂನ್ಯಾಸಿಗಳೂ ಈ ಮಹಾಕಾರ್ಯಕ್ಕೆ ಕಟ್ಟೆಬದ್ಧರಾಗುವಂತೆ ಅವರ ಅನುಗ್ರಹವಾಗಲೆಂದು ಪ್ರಾರ್ಥಿಸಿ ಅನಂತದಂಡಪ್ರಣಾಮಗಳನ್ನು ಮಾಡಿ ಈ ಬರೆವಣಿಗೆಯನ್ನು ಸಮಾಪ್ತಿಗೊಳಿಸುವೆವು.

**ಓಂ ನಮಃ ಶಂಕರಾಯ, ಓಂ ನಮೋ ನಾರಾಯಣಾಯ !**

---

# ಪರಿಶಿಷ್ಟಗಳು

---

## ೧. ಶಂಕರಪರಾಮರ್ಶಕಪುರಾಣಗಳು



( ಚರಿತ್ರೆ. ಪು. ೧೪ )

### (ಅ) ಶಿವರಹಸ್ಯ

ಈ ಗ್ರಂಥವು ಈಗ "ಶ್ರೀಜಯಚಾಮರಾಜೇಂದ್ರಗ್ರಂಥರತ್ನಮಾಲೆ"ಯಲ್ಲಿ ಮೈಸೂರಿನಲ್ಲಿ ಪ್ರಕಟವಾಗಿದೆ. ಶಂಕರವಿಜಯದ ವ್ಯಾಖ್ಯಾನಕಾರರಾದ ಅಚ್ಯುತರಾಯ ಮೋಡಕರವರು ಇದರ ಶ್ಲೋಕಗಳನ್ನು ಉದಾಹರಿಸಿರುತ್ತಾರೆ. ನಿರ್ಣಯಸಿಂಧುವಿನಲ್ಲಿ (ಪು ೧೫೪, ೧೫೪, ೧೭೩) ಇದನ್ನು ಅಲ್ಲಲ್ಲಿ ಪ್ರಮಾಣವಾಗಿ ಉದಾಹರಿಸಿದೆ.

ಸ್ಕಂದ ಉವಾಚ–

ತದಾ ಗಿರಿಜಯಾ ಪೃಷ್ಟಸ್ತ್ರಿಕಾಲಜ್ಞಸ್ತ್ರಿಲೋಚನಃ ।
ಭವಿಷ್ಯಚ್ಛಿವಭಕ್ತಾನಾಂ ಭಕ್ತಿಂ ಸಂವೀಕ್ಷ್ಯ ವಿಸ್ಮಯನ್[1] ॥ ೧ ॥
ಮೌಲಿಮಾನ್ದೋಲಯನ್ ದೇವೋ ಬಭಾಷೇ ವಚನಂ ಮುನೇ ।
ಶೃಣು ತ್ವಂ[2] ನೇಭಿರ್ಗಣಪೈರ್ಮುನೀಶೈಶ್ಚ ಸುರೈಸ್ತಥಾ ॥ ೨ ॥
ಪ್ರಭಾವಂ ಶಿವಭಕ್ತಾನಾಂ ಭವಿಷ್ಯಾಣಾಂ ಕಲಾವಪಿ ।

೧-೨. ಸ್ಕಂದನಿಂತೆಂದನು : ಎಲೈ ಮುನಿಯೆ,[3] ಆಗ ಗಿರಿಜೆಯು ಕೇಳಲು ತ್ರಿಕಾಲಜ್ಞನಾದ ಮುಕ್ಕಣ್ಣದೇವನು, ಮುಂದೆ ಬರಲಿರುವ ಶಿವಭಕ್ತರ ಭಕ್ತಿಯನ್ನು ಕಂಡು ಅಚ್ಚರಿಪಡುತ್ತಾ ತಲೆದೂಗುತ್ತಾ ಈ ವಚನವನ್ನು ಹೇಳಿದನು : ಈ ಗಣಾಧಿಪರೊಡನೆಯೂ ಮುನೀಶ್ವರರೊಡನೆಯೂ ದೇವತೆಗಳೊಡನೆಯೂ ಕಲಿಯುಗದಲ್ಲಿಕೂಡ ಮುಂದೆ ಬರಲಿರುವ ಶಿವಭಕ್ತರ ಪ್ರಭಾವವನ್ನು ನೀನು ಕೇಳು.

ಈಶ್ವರ ಉವಾಚ–

ಶೃಣು ದೇವಿ ಭವಿಷ್ಯಾಣಾಂ[4] ಭಕ್ತಾನಾಂ ಚರಿತಂ ಕಲೌ ॥ ೩ ॥
ವದಾಮಿ ಸಂಗ್ರಹೇಣೈವ[5] ಶ್ರವಣಾದ್[6] ಭಕ್ತಿವರ್ಧನಮ್ ।

---

1. 'ವಿಸ್ಮಯನ್' ಎಂದು ಆರ್ಷಪ್ರಯೋಗ. 'ವಿಸ್ಮಯೀ' ಎಂಬ ಪಾಠವನ್ನು ಮಾಧವೀಯಟೀಕಾಕಾರನು ಒಪ್ಪಿ ಆಶ್ಚರ್ಯವುಂಡಾಗಲು ಎಂಬರ್ಥವನ್ನು ತೆಗೆದಿರುತ್ತಾನೆ.
2. 'ಶೃಣುಧ್ವಮ್' ಎಂಬುದಕ್ಕಿಂತ ಇದು ಮೇಲು.
3. ಸ್ಕಂದನು ಒಬ್ಬ ಋಷಿಗೆ ಹೇಳುತ್ತಿದಾನೆ.
4. 'ಭವಿಷ್ಯತ್ಸದ್ಭಕ್ತಾನಾಂ' ಪಾ॥
5. 'ಸಂಗ್ರಹೇಣಾಹಮ್' ಪಾ॥
6. 'ಶೃಣ್ವತಾಂ' ಪಾ॥

ಗೋಪನೀಯಂ ಪ್ರಯತ್ನೇನ ನಾಖ್ಯೇಯಂ ಯಸ್ಯ ಕಸ್ಯಚಿತ್ ॥ ೪ ॥
ಪಾಪಘ್ನಂ ಪುಣ್ಯಮಾಯುಷ್ಯಂ ಶ್ರೋತೄಣಾಂ ಮಙ್ಗಲಾವಹಮ್ ।

೩–೪. ದೇವಿಯೆ, ಕಲಿಯಲ್ಲಿ ಬರಲಿರುವ ಭಕ್ತರ ಚರಿತೆಯನ್ನು ಹೇಳುವೆನ ಕೇಳು. ಇದು ಕೇಳಿದಮಾತ್ರದಿಂದ ಭಕ್ತಿಯನ್ನು ಹೆಚ್ಚಿಸತಕ್ಕದ್ದು ; ಪ್ರಯತ್ನ ಪೂರ್ವಕವಾಗಿ ಗುಟ್ಟುಮಾಡಿಡತಕ್ಕದ್ದು ; ಯಾರಿಗೆಂದರೆ ಅವರಿಗೆ ಹೇಳತಕ್ಕದ್ದಲ್ಲ, ಪಾಪವನ್ನು ಕಳೆಯತಕ್ಕದ್ದು, ಪುಣ್ಯಕರವಾದದ್ದು, ಆಯುಸ್ಸನ್ನು ಕೊಡತಕ್ಕದ್ದು, ಕೇಳುವವರಿಗೆ ಮಂಗಳವನ್ನುಂಟುಮಾಡತಕ್ಕದ್ದು.

ಪಾಪಕರ್ಮೈಕನಿರತಾನ್ ವಿರತಾನ್ ಸರ್ವಕರ್ಮಸು[1] ॥ ೫ ॥
ವರ್ಣಾಶ್ರಮಪರಿಭ್ರಷ್ಟಾನ್ ಧರ್ಮಪ್ರಸ್ರವಣಾನ್[2] ಜನಾನ್ ।
ಕಲ್ಯಬ್ಧೌ ಮಜ್ಜಮಾನಾಂಸ್ತಾನ್ ದೃಷ್ಟ್ವಾನುಕ್ರೋಶತೋಽಮ್ಬಿಕೇ ॥
ಮದಂಶಜಾತಂ ದೇವೇಶಿ ಕಲಾವಪಿ ತಪೋಧನಮ್ ।
ಕೇರಲೇಷು ತದಾ[3] ವಿಪ್ರಂ ಜನಯಾಮಿ ಮಹೇಶ್ವರಿ ॥ ೭ ॥

೫–೭. ಪಾಪಕರ್ಮದಲ್ಲಿ ನಿರತರಾಗಿ, ಸರ್ವಕರ್ಮಗಳಲ್ಲಿಯೂ ವಿರಕ್ತ ರಾಗಿ, ವರ್ಣಾಶ್ರಮಗಳಿಂದ ತೀರ ಭ್ರಷ್ಟರಾಗಿ, ಧರ್ಮದಿಂದ ಜಾರುತ್ತಿರುವ ಜನ ಗಳು ಕಲಿಸಮುದ್ರದಲ್ಲಿ ಮುಳುಗುತ್ತಿರುವದನ್ನು ಕಂಡು ಕನಿಕರದಿಂದ, ಎಲೌ ಅಂಬಿಕೆ, ದೇವೇಶಿ, ಮಹೇಶ್ವರಿ, ನನ್ನ ಅಂಶದಿಂದ[4] ಕೇರಳದಲ್ಲಿ ಒಬ್ಬ ತಪೋ ಧನನಾದ ವಿಪ್ರನನ್ನು ಆಗ ಹುಟ್ಟಿಸುವೆನು.

ತಸ್ಯೈವ ಚರಿತಂ ತೇಽದ್ಯ ವಕ್ಷ್ಯಾಮಿ ಶೃಣು ಶೈಲಜೇ ।
ಕಲ್ಯಾದಿಮೇ[5] ಮಹಾದೇವಿ ಸಹಸ್ರದ್ವಿತಯಾತ್ ಪರಮ್ ॥ ೮ ॥
ಸಾರಸ್ವತಾಸ್ತಥಾ ಗೌಡಾ ಮಿಶ್ರಾಃ ಕಾರ್ಣಾಜ್ಞಿನೋ[6] ದ್ವಿಜಾಃ ।
ಆಮಮೀನಾಶನಾ ದೇವಿ ಹ್ಯಾಯಾರ್ವತಾಸು[7] ವಾಸಿನಃ ॥ ೯ ॥
ಔತ್ತರಾ ವಿನ್ಧ್ಯನಿಲಯಾ ಭವಿಷ್ಯನ್ತಿ ಮಹೀತಲೇ ।

೮–೯. ಪಾರ್ವತಿಯೆ, ಅವನ ಚರಿತ್ರೆಯನ್ನು ನಿನಗೆ ಈಗ ಹೇಳುವೆನು, ಕೇಳು. ಮಹಾದೇವಿಯೆ, ಕಲಿಯ ಆದಿಭಾಗದಲ್ಲಿ ಎರಡು ಸಾವಿರ ವರ್ಷಗಳಾದ

---

1. 'ಧರ್ಮಕರ್ಮಸು' ಪಾ॥
2. 'ವರ್ಣಪ್ರಸ್ರವಣಾನ್', 'ಅಧರ್ಮಪ್ರವಣಾನ್' (ಅಧರ್ಮಕ್ಕೆ ಒಲಿಯುವ).
3. 'ತಥಾ'
4. 'ನನ್ನ ಅಂಶದಿಂದ' ಎಂಬುದು ೭, ೧೪, ೧೫, ೩೭, ೩೯– ಈ ಶ್ಲೋಕಗಳಲ್ಲಿದೆ, 'ಶಂಕರ ಏವ ಸಾಕ್ಷಾತ್' ಮಾ. ಶಂ. (ಚ. ಪು. ೧೦೮) ಎಂಬುದಕ್ಕೆ ಇದು ವಿರುದ್ಧ.
5. 'ಕಲಾವಿಮೇ' 6. 'ಕರ್ಣಾಜ್ಞಾನಾ', 'ಕರ್ಣಾಜಿನಾ'
7. 'ಹಿ' ಎಂಬುದಿಲ್ಲದೆ 'ಆರ್ಯಾವರ್ತಾ...' ಪಾ॥

ಬಳಿಕ ಸಾರಸ್ವತರೂ ಗೌಡರೂ ಕಾರ್ಣಾಚಿನ (ಕರ್ಣಾಜಿನ ?)ರೂ ಆದ ದ್ವಿಜರು ಹಸಿಯ ಮಾನನ್ನು ತಿನ್ನುವವರಾಗಿ, ಎಲೌ ದೇವಿಯೆ, ಆರ್ಯಾವರ್ತದಲ್ಲಿರುವ ಉತ್ತರದಿಕ್ಕಿನವರೂ ವಿಂಧ್ಯವಾಸಿಗಳೂ ಭೂಮಿಯಮೇಲೆ ಜನಿಸುವರು.

ಶಬ್ದಾರ್ಥ-ಜ್ಞಾನಕುಶಲಾಸ್ತರ್ಕಕರ್ಕಶಬುದ್ಧಯಃ ॥ ೧೦ ॥
ಜೈನಾ ಬೌದ್ಧಾ ಬುದ್ಧಿಯುಕ್ತಾ[1] ಮೀಮಾಂಸಾನಿರತಾಃ ಕಲೌ ।
ವೇದಬೋಧಿತವಾಕ್ಯಾನಾಮನ್ಯಥೈವ ಪ್ರರೋಚಕಾಃ ॥ ೧೧ ॥
ಪ್ರತ್ಯಕ್ಷವಾದಕುಶಲಾಃ ಶಲ್ಯಭೂತಾಃ ಕಲೌ ಯುಗೇ ।
ಮಿಶ್ರಾಃ ಶಾಸ್ತ್ರಮಹಾಶಸ್ತ್ರೈರದ್ವೈತಚ್ಛೇದಿನೋಽಮ್ಬಿಕೇ ॥ ೧೨ ॥
ಕರ್ಮೈವ ಪರಮಂ ಶ್ರೇಯೋ ನೈವೇಶಃ ಫಲದಾಯಕಃ ।
ಇತಿ ಯುಕ್ತಿಪರಾಮೃಷ್ಟವಾಕ್ಯೈರುದ್ಬೋಧಯನ್ತಿ ಚ ॥ ೧೩ ॥
ತೇನ ಘೋರಕುಲಾಚಾರಾಃ ಕರ್ಮಸಾರಾ ಭವನ್ತಿ ಚ[2] ॥ ೧೩ ॥

೧೦–೧೩. ಶಬ್ದಾರ್ಥಜ್ಞಾನದಲ್ಲಿ ಕುಶಲರಾಗಿ, ತರ್ಕದಿಂದ ಕರ್ಕಶವಾದ ಬುದ್ಧಿಯುಳ್ಳವರಾಗಿ, ಜೈನರು, ಬೌದ್ಧರು, ಮತ್ತು ಮೀಮಾಂಸಕರು[3]– ಇಂಥ ಪಂಡಿತರು ಕಲಿಯಲ್ಲಿ ಹುಟ್ಟುವರು. ವೇದದಲ್ಲಿರುವ (ಜ್ಞಾನ)ವಾಕ್ಯಗಳಿಗೆ[4] ಬೇರೆ ರೀತಿಯ ಅರ್ಥವನ್ನು ಹೇಳಿ ರುಚಿಯನ್ನು ಹುಟ್ಟಿಸುತ್ತಾ[5] ಶಿವೆಯೆ ಪ್ರತ್ಯಕ್ಷವಾದದಲ್ಲಿ ಕುಶಲರಾಗಿ, ಕಲಿಯಲ್ಲಿ ಕಂಟಕರಾಗಿ ಮಿಶ್ರರು,[6] ಶಾಸ್ತ್ರವೆಂಬ ಮಹಾಶಸ್ತ್ರಗಳಿಂದ ಅದ್ವೈತವನ್ನು ಕತ್ತರಿಸುತ್ತಾ, ಎಲೌ ಅಂಬಿಕೆಯೆ, ಕರ್ಮವೇ ಎಲ್ಲಕ್ಕಿಂತ ಹೆಚ್ಚಿನ ಶ್ರೇಯಸ್ಸು, ಫಲವನ್ನು ಕೊಡುವ ಈಶ್ವರನು ಇಲ್ಲವೇ ಇಲ್ಲ– ಎಂದು ಯುಕ್ತಿಪೂರ್ವಕವಾಕ್ಯಗಳಿಂದ ಜನರಿಗೆ ಬೋಧನೆಮಾಡುತ್ತಲೂ ಇರುವರು. ಅದರಿಂದ ಘೋರವಾದ ಕುಲಾಚಾರವುಳ್ಳವರಾಗಿ ಕರ್ಮವೇ (ವೇದದ) ಸಾರವೆನ್ನುವವರಾಗುವರು.

ತೇಷಾಮುತ್ಪಾಟನಾರ್ಥಾಯ[7] ಸೃಜಾಮೀಶೇ ಮದಂಶತಃ ॥ ೧೩ ॥
ಕೇರಳೇಶ ಶಲಗ್ರಾಮೇ ವಿಪ್ರಪತ್ನ್ಯಾಂ ಮದಂಶತಃ ।
ಭವಿಷ್ಯತಿ ಮಹಾದೇವಿ ಶಙ್ಕರಾಖ್ಯೋ ದ್ವಿಜೋತ್ತಮಃ ॥ ೧೪ ॥
ಉಪನೀತಸ್ತದಾ ಮಾತ್ರಾ ವೇದಾನ್ ಸಾಙ್ಗಾನ್ ಗ್ರಹೀಷ್ಯತಿ ॥ ೧೪ ॥

---

1. 'ಬುದ್ಧಿಯುತಾ' 2. 'ಕರ್ಮಭಾರಾ ಭವಂಸ್ತಥಾ' ಮಾಧವೀಯ ಟೀಕಾಪಾಠ
3, ವೇದಾಂತಿಗಳನ್ನು ಇಲ್ಲಿ ಹೇಳಿಲ್ಲ.
4. ಬೋಧಿತ' ( ? )– ಎಂಬುದರ ಅರ್ಥವಿದು.
5. ಕರ್ಮವಿಧಿಗೆ ಇವು ಅರ್ಥವಾದಗಳೆನ್ನುತ್ತಾ.
6. ಇವರು ಮಂಡನಮಿಶ್ರರನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳಿದೆ . ಹಿಂದೆ ಸೆಯ್ಯ ಶ್ಲೋಕದಲ್ಲಿಯೂ ಬಂದಿದೆ. 7. 'ಉದ್ಘಾಟನಾರ್ಥಾಯ'

೧೪–೧೫. ಅವರನ್ನು ನಾಶಗೊಳಿಸುವದಕ್ಕಾಗಿ, ಎಲೌ ಈಶ್ವರಿಯೆ, ನನ್ನ ಅಂಶದಿಂದ ಸೃಷ್ಟಿಸುವೆನು. ಕೇರಲದಲ್ಲಿ ಶಶಲಗ್ರಾಮದಲ್ಲಿ[1] ಬ್ರಾಹ್ಮಣಪತ್ನಿಯಲ್ಲಿ ನನ್ನ ಅಂಶದಿಂದ ಮಹಾದೇವಿಯೆ, ಶಂಕರನೆಂಬ ದ್ವಿಜೋತ್ತಮನು ಹುಟ್ಟುವನು. ಆಗ ತಾಯಿಯಿಂದ ಉಪನೀತನಾಗಿ[2] ಸಾಂಗವೇದಗಳನ್ನು ಗ್ರಹಿಸುತ್ತಾನೆ.

ಆಬ್ದಾವಧಿ ತತಃ ಶಬ್ದೇ ವಿಹೃತ್ಯ[3] ಸ ತು ತರ್ಕಜಾಮ್ ॥ ೧೬ ॥
ಮತಿಂ ಮೀಮಾಂಸಮಾನೋಽಸೌ ಕೃತ್ವಾ ಶಾಸ್ತ್ರೇಷು ನಿಶ್ಚಯಮ್ ।
ವಾದಿಮತ್ತದ್ವಿಪವರಾನ್ ಶಙ್ಕರೋತ್ತಮಕೇಸರೀ ॥ ೧೭ ॥
ಭಿನತ್ತ್ಯೇವ ತದಾ ಬುದ್ಧಾನ್[4] ಸಿದ್ಧವಿದ್ಯಾನಪಿ ದ್ರುತಮ್ ।
ಜೈನಾನ್ ವಿಜಿಗ್ಯೇ[5] ತರಸಾ ತಥಾಽನ್ಯಾನ್ ಕುಮತಾನುಗಾನ್ ॥ ೧೮ ॥

೧೬–೧೮. ಒಂದು ವರ್ಷದವರೆಗೆ ಶಬ್ದಶಾಸ್ತ್ರದಲ್ಲಿ ವಿಹರಿಸಿ ಅವನು ತರ್ಕಜನ್ಯಮತಿಯನ್ನು ಮೀಮಾಂಸಮಾಡಲೆಳಸಿ, ಶಾಸ್ತ್ರಗಳಲ್ಲಿ ನಿಶ್ಚಯವನ್ನು ಮಾಡಿಕೊಂಡು, ಶಂಕರನೆಂಬ ಆ ಉತ್ತಮಸಿಂಹವು ವಾದಿಗಳೆಂಬ ಮದ್ದಾನೆಗಳಾದ ಬೌದ್ಧರನ್ನು ಅವರು ಸಿದ್ಧವಿದ್ಯರಾಗಿದ್ದರೂ ಸೀಳುವನು. ಜೈನರನ್ನೂ ಮತ್ತು ಕುಮತಗಳನ್ನನುಸರಿಸುವ ಇತರರನ್ನೂ ಬೇಗನೆ ಜಯಿಸುವನು.

ತದಾ ಮಾತರಮಾಮನ್ತ್ರ್ಯ ಪರಿವ್ರಾಟ್ಸ ಭವಿಷ್ಯತಿ ।
ಪರಿವ್ರಾಜಕರೂಪೇಣ ಮಿಶ್ರಾನಾಶ್ರಮದೂಷಕಾನ್ ॥ ೧೯ ॥
ದಣ್ಡಹಸ್ತಸ್ತಥಾ ಕುಣ್ಡೀ[6] ಕಾಷಾಯವಸನೋಜ್ಜ್ವಲಃ
ಭಸ್ಮದಿಗ್ಧತ್ರಿಪುಣ್ಡ್ರಾಙ್ಕಃ ರುದ್ರಾಕ್ಷಾಭರಣೋಜ್ಜ್ವಲಃ ॥ ೨೦ ॥
ತಾರರುದ್ರಾರ್ಥ[7] ಪಾರೀಣಃ ಶಿವಲಿಙ್ಗಾರ್ಚನಪ್ರಿಯಃ ।
ಸ್ವಶಿಷ್ಯೈಸ್ತಾದೃಶೈರ್ಘುಷ್ಯನ್ ಭಾಷ್ಯವಾಕ್ಯಾನಿ ಸೋಽವ್ರಿಕೇ ॥ ೨೧ ॥
ಮದ್ದತ್ತವಿದ್ಯಯಾ ಭಿಕ್ಷುರ್ವಿರಾಜತಿ[8] ಶಶಾಙ್ಕವತ್ ॥

೧೯–೨೧. ಆಮೇಲೆ ತಾಯಿಯ ಅನುಮತಿಯನ್ನು ಪಡೆದುಕೊಂಡು ಆತನು ಪರಿವ್ರಾಜಕನಾಗುವನು. ಪರಿವ್ರಾಜಕರೂಪದಿಂದ ಆಶ್ರಮವನ್ನು ನಿಂದೆ ಮಾಡಿದ ಮಿಶ್ರರನ್ನು[9] ಭಸ್ಮವನ್ನು ಬಳಿದ ತ್ರಿಪುಣ್ಡ್ರಾಂಕಿತನಾಗಿ[10] ರುದ್ರಾಕ್ಷಾಭರಣದಿಂದ ಹೊಳೆಯುತ್ತಾ[11] ತಾರಕರುದ್ರಾರ್ಥಗಳಲ್ಲಿ ಪಾರೀಣನಾಗಿ ಶಿವ

1. ಚ. ಪು. ೩೨. 2. ಇದು ವಾದಗ್ರಸ್ತ. ಚ. ಪು. ೫೧,

3. 'ವಿಹೃತೇ'

4. 'ಮಹಾವಿದ್ಯಾನ್' ಎಂಬ ಟೀಕಾಪಾಠಕ್ಕಿಂತ ಮೇಲು ; ಮುಂದೆ 'ಜೈನರು' ಬಂದಿದಾರೆ. 5. ಭೂತವಾದರೂ ಭವಿಷ್ಯಾರ್ಥ. 6. 'ಕುಂಭೀ'

7. 'ರುದ್ರಾಕ್ಷಪಾರೀಣಃ' 8. ಆತ್ಮನೇಪದವಿರಬೇಕು ; ಆರ್ಷ.

9. ಮಿಶ್ರಪದವು ಮತ್ತೆ ಬಂದಿದೆ. 10–11. ಆಚಾರ್ಯರು ಶೈವರ? ಚ.ಪು. ೯೧.

ಲಿಂಗಾರ್ಚನೆಯಲ್ಲಿ ಪ್ರೀತಿಯಿಟ್ಟವನಾಗಿ[1] ಅಂಥ ಸ್ವಶಿಷ್ಯರಿಂದೊಡಗೂಡಿ ಭಾಷ್ಯ ವಾಕ್ಯಗಳನ್ನು ಘೋಷಿಸುತ್ತಾ ಎಲೌ ಅಂಬಿಕೆಯೆ, ನಾನು ಕೊಟ್ಟ ವಿದ್ಯೆಯಿಂದ[2] ಆ ಭಿಕ್ಷುವು ಚಂದ್ರನಂತೆ ಪ್ರಕಾಶಿಸುತ್ತಿರುವನು.

ಸೋ*ದ್ವೈತೋಚ್ಛೇದಕಾನ್ ಪಾಪಾನುಚ್ಛಿದ್ಯಾಕ್ಷಿಪ್ಯ ತರ್ಕತಃ ॥೨೨॥
ಸ್ವಮತಾನುಗತಾನ್ ದೇವಿ ಕರೋತ್ಯೇವ ನಿರರ್ಗಳಮ್ ।
ತಥಾಪಿ ಪ್ರತ್ಯಯಸ್ತೇಷಾಂ ನೈವಾಸೀಚ್ಛ್ರುತಿದರ್ಶನೇ[3] ॥೨೩॥
ಮಿಶ್ರಾಃ ಶಾಸ್ತ್ರಾರ್ಥಕುಶಲಾಸ್ತರ್ಕಕರ್ಕಶಬುದ್ಧಯಃ ।
ತೇಷಾಮುದ್ಬೋಧನಾರ್ಥಾಯ ಶಿಷ್ಯೇ[4] ಭಾಷ್ಯಂ ವದಿಷ್ಯತಿ ॥೨೪॥
ಭಾಷ್ಯಗುಪ್ತಮಹಾವಾಕ್ಯೈಸ್ತಿಷ್ಯಜಾತಾನ್ ಹನಿಷ್ಯತಿ ॥೨೪॥

೨೨–೨೪. ಆತನು ಅದ್ವೈತವನ್ನು ನಾಶಗೊಳಿಸುವ ಪಾಪಿಗಳನ್ನು ತರ್ಕದಿಂದ ಆಕ್ಷೇಪಿಸಿ ನಾಶಮಾಡಿ ಯಾವ ಅಡ್ಡಿಯೂ ಇಲ್ಲದೆ, ದೇವಿಯೆ, ಸ್ವಮತಾನುಯಾಯಿಗಳನ್ನಾಗಿ ಮಾಡುವನು. ಆದರೂ ಅವರಿಗೆ ಶ್ರುತಿದರ್ಶನ ದಲ್ಲಿ ನಂಬಿಕೆಯುಂಟಾಗಲಿಲ್ಲ.[5] ಮಿಶ್ರರು[6] ಶಾಸ್ತ್ರಾರ್ಥದಲ್ಲಿ ಕುಶಲರು; ತರ್ಕ ಕರ್ಕಶಬುದ್ಧಿಗಳು ; ಅವರಿಗೆ ಬೋಧನೆಮಾಡುವದಕ್ಕಾಗಿ ಕಲಿಯುಗದಲ್ಲಿ (ಯತಿಯು) ಭಾಷ್ಯವನ್ನು ಮಾಡುವನು. ಭಾಷ್ಯದಲ್ಲಿ ಘೋಷಿಸಿರುವ ಮಹಾವಾಕ್ಯಗಳಿಂದ[7] ಕಲಿಯಲ್ಲಿ ಹುಟ್ಟಿದ (ಮತ)ದವರನ್ನು ನಾಶಗೊಳಿಸು ವನು.

ವ್ಯಾಸೋಪದಿಷ್ಟಸೂತ್ರಾಣಾಂ ದ್ವೈತವಾಕ್ಯಾತ್ಮನಾಂ ಶಿವೇ ॥೨೫॥
ಅದ್ವೈತಮೇವ ಸೂತ್ರಾರ್ಥಂ ಪ್ರಾಮಾಣ್ಯೇನ ಕರಿಷ್ಯತಿ ।
ಅವಿಮುಕ್ತೇ ಸಮಾಸೀನಂ ವ್ಯಾಸಂ ವಾಕ್ಯೈರ್ವಿಜಿತ್ಯ ಚ ॥
ಶಙ್ಕರಂ ಸ್ತೌತಿ ಹೃಷ್ಟಾತ್ಮಾ ಶಙ್ಕರಾಖ್ಯೋಽಥ ಮಸ್ಕರೀ ॥೨೬॥

೨೫–೨೬. ವ್ಯಾಸೋಪದಿಷ್ಟವಾದ ದ್ವೈತವಾಕ್ಯರೂಪಗಳಾಗಿರುವ[8] ಸೂತ್ರ

---

1. ಚ. ಪು. ೮೮,

2. ಇದರ ಅಭಿಪ್ರಾಯವೇನೆಂಬುದು ತಿಳಿಯಲಿಲ್ಲ. ಈಶ್ವರನಿಂದ ನೇರಾಗಿ ಯಾವ ವಿದ್ಯೆ ಆಚಾರ್ಯರಿಗೆ ಬಂತು ?

3. ಈ ಶ್ಲೋಕದಮೇಲೆ 'ಸೂತ ಉವಾಚ' ಎಂದು ಮೂಲದಲ್ಲಿದೆ ; ಏಕೋ ತಿಳಿಯಲಿಲ್ಲ, 4. 'ಯತಿರ್ಭಾಷ್ಯಮ್'

5. ಭವಿಷ್ಯದರ್ಥದಲ್ಲಿ ಭೂತಕಾಲದ ಕ್ರಿಯಾಪದ.

6. ಮೂರನೆಯ ಸಲಕ್ಕೆ ಇದೇ ಶಬ್ದ ಬಂದಿದೆ.

8. ತತ್ತ್ವಮಸ್ಯಾದಿ ವಾಕ್ಯಗಳೆಂಬ ಅಭಿಪ್ರಾಯವಿರಬಹುದೆ ? ಚರಿತ್ರೆಯ ೮೦ ನೆಯ ಪುಟವನ್ನು ನೋಡಿ.

6. ದ್ವೈತಪರವಾದ ಎಂಬರ್ಥವೂ ಇದೆ ; ಪ್ರಕೃತಕ್ಕೆ ಹೊಂದದು,

ಗಳಿಗೆ, ಎಲೌ ಶಿವೆಯೆ, ಅದ್ವೈತವೇ[1] ಸೂತ್ರಾರ್ಥವೆಂದು ಪ್ರಮಾಣಯುಕ್ತವಾಗಿ ಅರ್ಥವನ್ನು ಮಾಡುವನು. ಅವಿಮುಕ್ತಕ್ಷೇತ್ರದಲ್ಲಿರುವ ವ್ಯಾಸರನ್ನು ವಾಕ್ಯಗಳಿಂದ ಜಯಿಸಿ ಆ ಬಳಿಕ[2] ಶಂಕರನೆಂಬ ಯತಿಯು ಶಂಕರರನ್ನು ಸ್ತುತಿಸುತ್ತಾನೆ.

ಶಙ್ಕರ ಉವಾಚ–

ಸತ್ಯಂ ಸತ್ಯಂ ನೇಹ ನಾನಾಸ್ತಿ ಕಿಞ್ಚಿ–
ದೀಶಾವಾಸ್ಯಂ ಬ್ರಹ್ಮ ಸತ್ಯಂ ಜಗದ್ಧಿ ।
ಬ್ರಹ್ಮೈವೇದಂ ಬ್ರಹ್ಮ ಪಶ್ಚಾತ್ಪುರಸ್ತಾ–
ದೇಕೋ ರುದ್ರೋ ನ ದ್ವಿತೀಯಾಯ[3] ತಸ್ಥೇ ॥೨೮[4]॥

೨೮. ಶಂಕರನಿಂತೆಂದನು : ಸತ್ಯವಾಗಿ ಸತ್ಯವಿದು ; ಇದರಲ್ಲಿ ಒಂದಿಷ್ಟಾದರೂ ನಾನಾತ್ವವಿಲ್ಲ. ಜಗತ್ತು ಈಶಾವಾಸ್ಯಸತ್ಯವಾದ ಬ್ರಹ್ಮವೇ. ಇದು ಬ್ರಹ್ಮವೇ, ಹಿಂದಕ್ಕೂ ಮುಂದಕ್ಕೂ ಬ್ರಹ್ಮವೇ. ಎರಡನೆಯದಕ್ಕೆ ಅವಕಾಶವಿಲ್ಲದಂತೆ ಒಬ್ಬನೇ ರುದ್ರನಿರುತ್ತಾನೆ.

ಏಕೋ ದೇವಃ ಸರ್ವಭೂತೇಷು ಗೂಢೋ
ನಾನಾಕಾರೋದ್ಭಾಸಿ ಭಾನೈಸ್ತ್ವಮಾತ್ಮಾ ।
ಪೂರ್ಣಾಽಪೂರ್ಣೋ ನಾಮರೂಪೈರ್ವಿಹೀನೋ
ವಿಶ್ವಾತೀತೋ ವಿಶ್ವರೂಪೋ[5] ಮಹೇಶಃ ॥೨೯॥

೨೯. ಒಬ್ಬ ದೇವನೇ ಸರ್ವಭೂತಗಳಲ್ಲಿಯೂ ಅಡಗಿರುತ್ತಾನೆ. ಆತ್ಮನಾದ ನೀನೇ ಭಾನಗಳಿಂದ ನಾನಾಕಾರವಾಗಿ ತೋರುತ್ತಿರುವೆ. ಪೂರ್ಣನು, ಅಪೂರ್ಣನು, ನಾಮರೂಪಗಳಿಂದ ರಹಿತನಾದವನು ; ವಿಶ್ವಾತೀತನು, ವಿಶ್ವರೂಪನಾದ ಮಹೇಶ್ವರನು.

ಭವ್ಯಂ ಭವ್ಯಂ ವರ್ತಮಾನಂ ತ್ವಮೀಶೇ[5]
ಸಾಮಾನ್ಯಂ ವೈ ದೇಶಕಾಲಾದಿಹೀನಃ ।
ನೋ ತೇ[6] ಮೂರ್ತಿರ್ವೇದವೇದ್ಯಸ್ತ್ವಸಙ್ಗಃ
ಸಙ್ಗೀವ ತ್ವಂ ಲಿಙ್ಗಸಂಸ್ಥೋ ವಿಭಾಸಿ ॥೩೦॥

---

1. ಆಚಾರ್ಯರ ಹಿಂದೆ ಅದ್ವೈತವು ಇತ್ತೆಂಬ ಸೂಚನೆ ಇಲ್ಲಿಲ್ಲ. ಚರಿತ್ರೆಯ ಪುಟ ೩೧೪ ನೋಡಿ.

2. ವ್ಯಾಸದರ್ಶನವಾದಬಳಿಕ; ಆದರೆ ಚರಿತ್ರೆಯ ೯೪, ೧೦೪ನೆಯ ಪುಟಗಳನ್ನು ನೋಡಿರಿ.

3. 'ದ್ವಿತೀಯೋಽವತಸ್ಥೇ' (?) 4. 'ವಿಶ್ವನಾಥೋ' 5. 'ತ್ವಯೀಶೇ'

6. 'ನಾತೋ'

೩೦. ಭೂತಭವಿಷ್ಯದ್ವರ್ತಮಾನಗಳನ್ನು ನೀನೇ ಆಳುತ್ತಿರುವೆ. ದೇಶಕಾಲಾದಿಗಳಿಲ್ಲದ ಸಾಮಾನ್ಯವು ನೀನು. ನಿನಗೆ ಮೂರ್ತಿಯಿಲ್ಲ, ವೇದವೇದ್ಯನೂ ಅಸಂಗನೂ ಆಗಿದ್ದು ಲಿಂಗದಲ್ಲಿರುವಾಗ[1] ಸಂಗಿಯಂತೆ ಕಾಣುವೆ.

ತ್ವದ್ಭಾಸಾ ತ್ವೈ ಸೋಮಸೂರ್ಯಾನಲೇನ್ದ್ರಾ
ಭೀಷೈವೋದೇತ್ಯೇಷ ಸೂರ್ಯಶ್ಚ ದೇವಃ ।
ತ್ವಂ ವೇದಾದೌ ಸ್ವರ ಏಕೋ[2] ಮಹೇಶೋ
ವೇದಾನ್ತಾನಾಂ ಸಾರವಾಕ್ಯಾರ್ಥವೇದ್ಯಃ ॥ ೩೧ ॥

೩೧. ನಿನ್ನ ಬೆಳಕಿನಿಂದಲೇ ಚಂದ್ರ, ಸೂರ್ಯ, ಅಗ್ನಿ, ಇಂದ್ರ— ಇವರು. ನಿನ್ನ ಅಂಜಿಕೆಯಿಂದಲೇ ಈ ಸೂರ್ಯದೇವನೂ ಉದಯಿಸುತ್ತಿರುವನು. ನೀನೇ ವೇದದ ಆದಿಯಲ್ಲಿರುವ ಸ್ವರವು ; ಮಹೇಶನು. ವೇದಾಂತಗಳ ಸಾರವಾಕ್ಯಾರ್ಥವು,[3] ವೇದ್ಯನು.

ವೇದ್ಯೋ ವೈದ್ಯಃ[4] ಸರ್ವವೇದಾತ್ಮವಿದ್ಯೋ[5]
ಭಿದ್ಯೇದ್ದೃಷ್ಟ್ಯಾ ದ್ಯೋತವದ್[6] ಹೃತ್ತಮೋಽದ್ಯ ।
ಓಂಕಾರಾರ್ಥಃ ಪುರುಷಸ್ತ್ವಂ[7] ಋತಂ ಚ
ಸತ್ಯಜ್ಞಾನಾನನ್ದಭೂಮಾಸಿ ಸೋಮ ॥ ೩೨ ॥

೩೨. ವೇದ್ಯನು, ತಿಳಿದವನು, ಸರ್ವವೇದರೂಪವಾದ ಆತ್ಮವಿದ್ಯಾಸ್ವರೂಪನು, ನಿನ್ನ ದೃಷ್ಟಿಯಿಂದ ಹೃದಯದ ತಮಸ್ಸು ನಾಶವಾಗುವದು. ಓಂಕಾರದ ಅರ್ಥವಾದ ಪುರುಷನು, ಋತವೂ ನೀನು, ಎಲೈ ಉಮಾಸಹಿತನೆ, ಸತ್ಯಜ್ಞಾನಾನಂದಭೂಮನೇ ನೀನು.

ಬದ್ಧೋ ಮುಕ್ತೋ ನಾಸಿ ಸಙ್ಗೀ ತ್ವಸಙ್ಗಃ[8]
ಪ್ರಾಣಪ್ರಾಣೋ ಮನಸಸ್ತ್ವಂ ಮನಶ್ಚ ।
ತ್ವತ್ತೋ ವಾಚೋ ಮನಸಾ ಸಂನಿವೃತ್ತಾ
ಸ್ತವಾ[9]ನನ್ದಜ್ಞಾನಿನೋ ಬದ್ಧಭಾವಾಃ[10] ॥ ೩೩ ॥

1. ಲಿಂಗದೇಹದಲ್ಲಿರುವಾಗ ಎಂತಲೆ (?) 2, ಛಂದಸ್ಸು ಸರಿಯೆ ?}

3. ಸಾರವಾಕ್ಯವೆಂದರೆ ಮಹಾವಾಕ್ಯವೆಂದೋ, ಅಥವಾ ವಸ್ತುಬೋಧಕವಾಕ್ಯವೆಂದೋ ಅರ್ಥವಿರಬೇಕೆಂತ ಕಾಣುತ್ತದೆ.

4. 'ವೇದ್ಯೋಽಭೇದ್ಯಃ' 5. 'ಸರ್ವಭೂತಾತ್ಮವಿದ್ಯೋ'

6. 'ಭಿದ್ಯದ್ದೃಷ್ಟ್ವಾ ತವ ಮೋ' 7. 'ಪೂರುಷಃ' ಎಂದಿದ್ದರೆ ಚೆನ್ನಾಗಿತ್ತು.

8. 'ಸಙ್ಗೀಷ್ಟಸಙ್ಗಃ', ಸಙ್ಗೋ ಹ ಸಙ್ಗೋ'

9. 'ತ್ವಯ್ಯಾನನ್ದಜ್ಞಾನೇ' ಎಂದಿದ್ದರ ಛಂದಸ್ಸೂ ಅನ್ವಯವೂ ಸರಿಯಾಗಿರುತ್ತಿತ್ತೆಂದು ತೋರುತ್ತದೆ. 10. 'ಬುದ್ಧಭಾವಾಃ'

೩೩. ಬದ್ಧನಲ್ಲ, ಮುಕ್ತನಲ್ಲ, ಸಂಗಿಯಲ್ಲ, ಅಸಂಗನು (?) ಪ್ರಾಣಕ್ಕೆ ಪ್ರಾಣನು, ಮನಸ್ಸಿಗೆ ಮನಸ್ಸು, ನಿನ್ನಿಂದ ವಾಕ್ಕುಗಳು ಮನಸ್ಸಿನೊಡನೆ ಹಿಂತಿರುಗುತ್ತವೆ ನಿನ್ನ ಆನಂದವನ್ನು ತಿಳಿದವರು ಭಾವಯುಕ್ತರಾಗುವರು.

ತ್ವತ್ತೋ ಜಾತಂ ಭೂತಜಾತಂ ಮಹೇಶ
ತ್ವಯಾ ಜೀವತ್ಯೇವಮೇವಂ ವಿಚಿತ್ರಮ್ ।
ತ್ವಯ್ಯೇವಾನ್ತೇ[1] ಸಂವಿಶತ್ಯೇವ ವಿಶ್ವಂ
ತ್ವಾಂ ವೈ ಕೋ ವಾ ಸ್ತೌತಿ[2] ತಂ ಸ್ತವ್ಯಮೀಶಮ್ ॥ ೩೪ ॥
ಕಿಞ್ಚಿಜ್ಜ್ಞಾತ್ವಾ ಸರ್ವಭಾಸ್ಯೇವ (?)[3] ಬುದ್ಧ್ಯಾ ।
ತ್ವಾಮಾತ್ಮಾನಂ ವೇದ್ಮಿ[4] ದೇವಂ ಮಹೇಶಮ್ ॥ ೩೫ ॥

೩೪–೩೫. ಮಹೇಶನೆ, ನಿನ್ನಿಂದಲೇ ಭೂತಸಮೂಹವು ಹುಟ್ಟಿದೆ. ನಿನ್ನಿಂದಲೇ ಹೀಗೆ ವಿಚಿತ್ರವಾಗಿರುವ ಇದು ಜೀವಿಸಿಕೊಂಡಿದೆ. ನಿನ್ನಲ್ಲಿಯೇ ಕೊನೆಯಲ್ಲಿ ಎಲ್ಲವೂ ಪ್ರವೇಶಿಸುವದು. ಅಂಥ ಸ್ತವ್ಯನಾದ ಈಶನನ್ನು ಯಾವನು ಸರಿಯಾಗಿ ಹೊಗಳಿಯಾನು ? ಸರ್ವಾವಭಾಸವಾದಂತೆ ಇರುವ ಬುದ್ಧಿಯಿಂದ ಒಂದಿಷ್ಟು ತಿಳಿದು ನಿನ್ನನ್ನು ಪರಮಾತ್ಮನಾದ ದೇವನೆಂದೇ, ಮಹೇಶ್ವರನೆಂದೇ ತಿಳಿದಿದ್ದೇನೆ.

ಈಶ್ವರ ಉವಾಚ–
ಇತಿ ಶಙ್ಕರವಾಕ್ಯೇನ ವಿಶ್ವೇಶಾಖ್ಯಾದಹಂ ತದಾ ।
ಪ್ರಾದುರ್ಬಭೂವ ಲಿಙ್ಗಾತ್ಸ್ವದಲಿಙ್ಗೋಽಪಿ ಮಹೇಶ್ವರಿ ॥ ೩೬ ॥

೩೬. ಈ ಶಂಕರವಾಕ್ಯವನ್ನು ಕೇಳಿ ನಾನು ಅಲಿಂಗನಾದರೂ 'ವಿಶ್ವೇಶ' ನೆಂಬ ನನ್ನ ಲಿಂಗದಿಂದ ಹೊರತೋರಿಕೊಂಡೆನು.[5]

ತ್ರಿಪುಣ್ಡ್ರವಿಲಸತ್ಫಾಲಶ್ಚನ್ದ್ರಾರ್ಧಕೃತಶೇಖರಃ ।
ನಾಗಾಜಿನೋತ್ತರಾಸಙ್ಗೋ ನೀಲಕಣ್ಠಸ್ತ್ರಿಲೋಚನಃ ॥ ೩೭ ॥

---

1. 'ತ್ವಾಮೇವಾನ್ತೇ'
2. 'ಸ್ತುಪತೇ' ಎಂದು ತಪ್ಪುಪಾಠ. 3, 'ಸರ್ವಭಾಸೇವ' ಎಂದಿರಬೇಕೆ ?
4. 'ವೇತ್ತಿ'. ಈವರೆಗಿನ ಸ್ತೋತ್ರದಲ್ಲಿ ಬೇರೆಬೇರೆಯ ಶ್ರುತಿಗಳ ಅರ್ಥವನ್ನು ಸಂಗ್ರಹಿಸಿದೆ.
5. ಈ ವಿಷಯವು ಮಾಧವೀಯದಲ್ಲಿಲ್ಲ ; ಚಿದ್ವಿಲಾಸೀಯದಲ್ಲಿದೆ, ಜಗಿತ್ರ ಪು. ೯೪–೯೬.

ವರಕಾಕೋದರಾನದ್ಧ (?)[1] ರಾಜದ್ಧಾರಸ್ತ್ವಯಾಮ್ಬಯಾ |
ತಮುಬ್ರುವಂ ಮಹಾದೇವಿ ಪ್ರಣತಂ ಯತಿನಾಂ ವರಮ್ || ೩೮ ||
ಶಿಷ್ಯೈಶ್ಚತುರ್ಭಿಃ ಸಂಯುಕ್ತಂ ಭಸ್ಮರುದ್ರಾಕ್ಷಭೂಷಣಮ್ || ೩೯ ||

೩೬–೩೯. ತ್ರಿಪುಂಡ್ರದಿಂದ ಹೊಳೆಯುತ್ತಿರುವ ಹಣೆಯುಳ್ಳವನೂ ಅರ್ಧ ಚಂದ್ರನನ್ನು ತಲೆಯಮೇಲೆ ಧರಿಸಿದವನೂ, ಗಜಚರ್ಮದ ಹೊದಿಕೆಯುಳ್ಳವನೂ ನೀಲಕಂಠನೂ ಮುಕ್ಕಣ್ಣನೂ ಶ್ರೇಷ್ಠವಾದ ಹಾವಿನಿಂದ ಕಟ್ಟಿದ ಹೊಳೆಯುವ (ರುಂಡದ) ಹಾರವುಳ್ಳವನೂ ಆದ ನಾನು ಅಂಬಿಕಾದೇವಿಯಾದ ನಿನ್ನೊಡನೆ, ಶಿಷ್ಯರು ನಾಲ್ವರೊಡನೆ ಕೂಡಿದ್ದ[2] ಭಸ್ಮರುದ್ರಾಕ್ಷಭೂಷಣನಾದ ನಮಸ್ಕರಿಸಿದ ಆ ಯತಿಶ್ರೇಷ್ಠನನ್ನು ಕುರಿತು ಇಂತೆಂದೆನು[3] :

ಈಶ್ವರ ಉವಾಚ–
ಮದಂಶತಸ್ತ್ವಂ ಜಾತೋಽಸಿ ಭುವಿ ಚಾದ್ವೈತಸಿದ್ಧಯೇ |
ಪಾಪಮಿಶ್ರಾಶ್ರಿತೈರ್ಮಾರ್ಗೈರ್ಜೈನದುರ್ಬುದ್ಧಿಬೋಧಕೈಃ[5] || ೪೦ ||
ಭಿನ್ನೇ ವೈದಿಕಸಂಸಿದ್ಧೇ[6] ಅದ್ವೈತೇ ದ್ವೈತವಾಕ್ಯತಃ |
ತದ್ಭೇದಗಿರಿವಜ್ರಸ್ತ್ವಂ ಸಞ್ಜಾತೋಽಸಿ ಮದಂಶತಃ || ೪೧ ||

೪೦–೪೧. ನೀನು ನನ್ನ ಅಂಶದಿಂದ[7] ಅದ್ವೈತಸಿದ್ಧಿಗಾಗಿ ನೆಲದಮೇಲೆ ಹುಟ್ಟಿರುವೆ. ಪಾಪಿಗಳಾದ ಮಿಶ್ರರು[8] ಆಶ್ರಯಿಸಿರುವ ಮಾರ್ಗಗಳಿಂದಲೂ ಜೈನರ ದುರ್ಬುದ್ಧಿಯ ಬೋಧನೆಯಿಂದಲೂ ದ್ವೈತವಾಕ್ಯದಿಂದ ವೈದಿಕರಿಗೆ (ವೇದದಿಂದ) ಸಂಸಿದ್ಧವಾದ ಅದ್ವೈತವು ನಾಶವಾಗಲು[9] ಆ ಭೇದವೆಂಬ ಬೆಟ್ಟಕ್ಕೆ ವಜ್ರಾಯುಧದಂತಿರುವ ನೀನು ನನ್ನಂಶದಿಂದ[7] ಹುಟ್ಟಿರುವೆ.

[ದೂರ್ವಾಸಃ ಶಾಪತೋ ಭೂಮೌ ಜಾತಾಂ ವಾಣೀಂ ವಿಜಿತ್ಯ ತಾಮ್ |
ಅಗಸ್ತ್ಯಚರಿತೇ ದೇಶೇ ತುಙ್ಗಾತೀರೇ ಸುನಿರ್ಮಲೇ ||

1. ಹಾವಿಗೆ ರುಂಡಮಾಲೆಗಳನ್ನು ಕಟ್ಟಿತ್ತೆಂದು ಅರ್ಥವೊ, ಕಟ್ಟಿಕೊಂಚ ಹಾವಿಗಿ ತಗಲುವಂತೆ ರುಂಡದ ಹಾರವಿತ್ತೆಂದು ಅರ್ಥವೊ ?

2. ಈಶ್ವರದರ್ಶನವಾದಾಗ ನಾಲ್ವರು ಶಿಷ್ಯರಿದ್ದರೆಂಬುದು ಶಂಕರವಿಜಯಗಳಿಗೆ ಹೊಂದುವದಿಲ್ಲ.

3. ಇಲ್ಲಿಂದ ಮುಂದಕ್ಕೆ ಭೂತಕಾಲಕ್ರಿಯಾಪದಗಳೇ.

4. ಇದು ಕೆಲವು ಪಾಠಗಳಲ್ಲಿ ಇಲ್ಲಿಲ್ಲ.

5. ಯೋಧಕೈಃ

6. 'ವೇದೈಕಸಂಸಿದ್ಧೇ'

7. ಶಿವನ ಅಂಶವೆಂಬ ಮಾತು ಮತ್ತೆ ಮತ್ತೆ ಬಂದಿದೆ.

8. ಮಿಶ್ರಶಬ್ದವು ಮತ್ತೆ ಬಂದಿದೆ.

9. ಆಚಾರ್ಯರಿಗಿಂತ ಹಿಂದೆ ಅದ್ವೈತವಿತ್ತೆಂಬ ಸೂಚನೆಯೆಂದು ಇದನ್ನು ಭಾವಿಸಬಹುದೆ ?

ಪುಣ್ಯಕ್ಷೇತ್ರೇ ದ್ವಿಜವರ ಸ್ಥಾಪಯಿತ್ವಾ ಸುಪೂಜಯ ।
ಯತ್ರಾಸ್ತೇ ಋಷ್ಯಶೃಙ್ಗಸ್ಯ ಮಹರ್ಷೇರಾಶ್ರಮೋ ಮಹಾನ್
ಕಲಾವಪಿ ತತೋಽದ್ವೈತಮಾರ್ಗಃ ಖ್ಯಾತೋ ಭವಿಷ್ಯತಿ ॥][1]
ದ್ವಾತ್ರಿಂಶತ್ಪರಮಾಯುಸ್ತೇ ಶೀಘ್ರಂ ಕೈಲಾಸಮಾವಸ ॥ ೪೨ ॥

೪೨. ದೂರ್ವಾಸರ ಶಾಪದಿಂದ ಭೂಮಿಯಮೇಲೆ ಹುಟ್ಟಿದ ಸರಸ್ವತಿಯನ್ನು ಜಯಿಸಿ ಆಕೆಯನ್ನು ಅಗಸ್ತ್ಯರು ಸಂಚರಿಸುತ್ತಿದ್ದ ದೇಶದಲ್ಲಿ ಸುನಿರ್ಮಲವಾದ ತುಂಗಾತೀರದಲ್ಲಿ[2] ಪುಣ್ಯಕ್ಷೇತ್ರದಲ್ಲಿ ಸ್ಥಾಪಿಸಿ ಎಲೈ ದ್ವಿಜವರನೆ, ಚೆನ್ನಾಗಿ ಪೂಜೆಮಾಡು ಅಲ್ಲಿ ಋಷ್ಯಶೃಂಗನೆಂಬ ಋಷಿಯ ಮಹಾ ಆಶ್ರಮವಿದೆ. ಹಾಗೆ ಸ್ಥಾಪಿಸಿ ಪೂಜಿಸುವದರಿಂದ ಕಲಿಯುಗದಲ್ಲಿಯೂ ಅದ್ವೈತಮಾರ್ಗವು ಪ್ರಖ್ಯಾತವಾಗುತ್ತದೆ[3] ನಿನಗೆ ಮೂವತ್ತೆರಡೇ[4] ಪರಮಾಯುಸ್ಸು ; ಬೇಗನೆ ಕೈಲಾಸಕ್ಕೆ ಬಂದು ನಿಲ್ಲು.[5]

ವಿಶಸ್ಪ್ರತಿಗೃಹಾಣ ತ್ವಂ ಪಞ್ಚಲಿಙ್ಗಂ ಸುಪೂಜಯ ।
ಭಸ್ಮರುದ್ರಾಕ್ಷಸಂಪನ್ನಃ ಪಞ್ಚಾಕ್ಷರಪರಾಯಣಃ ॥ ೪೩ ॥
ಶತರುದ್ರಾವರ್ತನೈಶ್ಚ ತಾರೇಣ ಭಸಿತೇನ ಚ ।
ಬಿಲ್ವಪತ್ರೈಶ್ಚ ಕುಸುಮೈರ್ನೈವೇದ್ಯೈರ್ವಿವಿಧೈರಪಿ ।
ತ್ರಿವಾರಂ ಸಾವಧಾನೇನ ಗಚ್ಛ ಸರ್ವಜಯಾಯ ಚ ॥ ೪೪ ॥
ತ್ವದರ್ಥೇ ಕೈಲಾಸಾಚಲವರ ಸುಪಾಲೀಗತಮಹಾ
ಸಮುದ್ಯಚ್ಚನ್ದ್ರಾಭಂ ಸ್ಫಟಿಕಧವಲಂ ಲಿಙ್ಗಕಾಲಕಮ್ ।

---

1. ಕಂಸದಲ್ಲಿಟ್ಟಿರುವಷ್ಟು ಭಾಗವು ಕೆಲವು ಪಾಠಗಳಲ್ಲಿಲ್ಲ ; ಇವಿರುವ ಪಾಠಗಳಲ್ಲಿ ಇವುಗಳ ಮುಂದೆ 'ದ್ವಾತ್ರಿಂಶತಾ'

2. ಮಾಧವೀಯದಲ್ಲಿ 'ತುಂಗಭದ್ರಾ' ಎಂದಿದೆ ; ಶೃಂಗೇರೀಪೀಠದ ವಿಚಾರದಲ್ಲಿ ಇದನ್ನು ಪ್ರಸ್ತಾಪಿಸುವೆವು.

3. 'ಕಲಿಯುಗದಲ್ಲಿಯೂ' ಎಂದದ್ದರಿಂದ ಈ ಯುಗದಲ್ಲಿ ಇದಕ್ಕಿಂತ ಮೊದಲು ಇರಲಿಲ್ಲವೆಂಬ ಧ್ವನಿ ಬರುತ್ತದೆ. ಇಲ್ಲಿಯವರೆಗಿನ (ಕಂಸದಲ್ಲಿರುವ) ಭಾಗವು ಅಪ್ರಮಾಣವೆಂದು ಆತ್ಮಬೋಧರು ಬರೆದಿದ್ದಾರೆ ; ಚರಿತ್ರೆ, ಪುಟ ೧೬೨–೧೬೩ ನೋಡಿರಿ. ಆದ್ದರಿಂದ ಇದು 'ಭಟ್ಟನಾರಾಯಣಶಾಸ್ತ್ರಿ'ಗಳೆಂಬವರು ಕಲ್ಪಿಸಿದ್ದೆಂಬ ಕೆಲವರ ಮತವು (ಶಾಂ.ಪೀ, ತ. ಭೂ. ಪು. ೧೬) ಸರಿಯಲ್ಲವೆಂದಾಯಿತು.

4. ಆಯುಸ್ಸಿನ ವಿಷಯಕ್ಕೆ ಚರಿತ್ರೆಯ ಪುಟ ೧೦೫–೧೦೭ ನೋಡಿರಿ.

5. 'ಕೈಲಾಸಕ್ಕೆ ಹೊರಡು' ಎಂದಿದ್ದರೂ ಮುಂದೆ ಕಂಚಿಯಲ್ಲಿ ಸಿದ್ಧಿಹೊಂದಿದರು ಎಂದು ಹೇಳಿದ್ದು ಹೇಗೋ? ಗೋವಿಂದನಾಥನು 'ಭಾನುಬಿಂಬದಲ್ಲಿರುವ ಪರಮಾನಂದವನ್ನು ಹೊಕ್ಕರು' (ಚರಿತ್ರೆ. ಪುಟ. ೨೭೬) ಎಂದಿದಾನೆ.

ಸಮಾನೀತಂ[1] ಸೋಪೋದ್ಯತವಿಮಲಮೌಲ್ಯರ್ಚನಪರಂ ।
ಕಲೌ ಲಿಙ್ಗಾರ್ಚಾಯಾಂ ಭವತಿ ಹಿ ವಿಮುಕ್ತಿಃ ಪರತಯಾ[2] ॥೪೫॥

೪೪–೪೫. ಈ ಪಂಚಲಿಂಗವನ್ನು[3] ತೆಗೆದುಕೊ. ಭಸ್ಮರುದ್ರಾಕ್ಷಸಂಪನ್ನನಾಗಿ ಶತರುದ್ರೀಯವನ್ನೂ ಆವರ್ತನೆಮಾಡುತ್ತಾ ತಾರ (ಓಂಕಾರ)ಪೂರ್ವಕವಾಗಿ ಭಸ್ಮದಿಂದಲೂ ಬಿಲ್ವಪತ್ರಗಳಿಂದಲೂ ಹೂಗಳಿಂದಲೂ ನೈವೇದ್ಯಗಳಿಂದಲೂ ಮೂರು ಬಾರಿ[4] ಸಾವಧಾನವಾಗಿ ಪೂಜಿಸು. ಸರ್ವವನ್ನೂ ಜಯಿಸುವದಕ್ಕೆ ಹೊರಡು ![5] ನಿನಗಾಗಿ ತಂದಿರುವ ಕೈಲಾಸಪರ್ವತದ ಶ್ರೇಷ್ಠವಾದ ಶಿಖರದ ಮೇಲೆ ಉದಯಿಸುವ ಚಂದ್ರನ ಬೆಳಕಿರುವ ಸ್ಫಟಿಕದಂತೆ ಬೆಳ್ಳಗಿರುವ ಉದಯಿಸುವ ಚಂದ್ರನಂತೆ ನಿರ್ಮಲವಾಗಿರುವ ಈ ಲಿಂಗಸಮೂಹವನ್ನು ಅರ್ಚಿಸು. ಕಲಿಯುಗದಲ್ಲಿ ಲಿಂಗಾರ್ಚನೆಮಾಡಿದರೆ ಹೆಚ್ಚಿನ ಮುಕ್ತಿಯಾಗುವದಷ್ಟೆ ?

ಸ ಶಙ್ಕರೋ[6] ಮಾಂ ಪ್ರಣನಾಮ ಮಸ್ಕರೀ
ಮಯಸ್ಕರಂ ತಸ್ಕರವರ್ಯಮಾರ್ಯೋ ।
ಸಂಗೃಹ್ಯ ಲಿಙ್ಗಾನಿ ಜಗಾಮ ವೇಗಾದ್
ಭೂಮೌ ಸ ಬುದ್ಧಾರ್ಹತಮಿಶ್ರಜೈನಾನ್ ॥೪೬॥

೪೬. ಆ ಶಂಕರಯತಿಯು ಸುಖಕರನೂ ತಸ್ಕರವರ್ಯನೂ[7] ಆದ ನನ್ನನ್ನು ನಮಸ್ಕರಿಸಿದನು. ಲಿಂಗಗಳನ್ನು ತೆಗೆದುಕೊಂಡು ವೇಗದಿಂದ ಭೂಮಿಯ ಮೇಲಿದ್ದ ಬುದ್ಧ, ಅರ್ಹತ, ಜೈನ, ಮಿಶ್ರ–ಇವರ ಬಳಿಗೆ ಹೋದನು.[8]

ತದ್ಯೋಗಭೋಗವರಮುಕ್ತಿಸುಮೋಕ್ಷಯೋಗ–
ಲಿಙ್ಗಾರ್ಚನಾತ್ ಪ್ರಾಪ್ತಜಯಃ ಸ್ವಕಾಶ್ರಮೇ ।[9]

1. 'ಸಮಾಸೀನಃ' ಎಂದು ಪಾ॥ 2. 'ಪರತರಾ' ಪಾ॥

3. ಐದು ಲಿಂಗಗಳನ್ನು ಶಿವನು ಕೊಟ್ಟನೆಂದು ಇಲ್ಲಿದೆ. ಆನಂದಗಿರೀಯದಲ್ಲಿ (ಪ್ರ. ೫೫ ಪು. ೨೦೯. ದೇ. ಪಾಠದಲ್ಲಿಲ್ಲ !) ಆಚಾರ್ಯರೇ ಕೈಲಾಸಕ್ಕೆ ಯೋಗಬಲದಿಂದ ಹೋಗಿ ಅವನ್ನು ತಂದರೆಂದಿದೆ. ಚಿದ್ವಿಲಾಸೀಯದಲ್ಲಿ ಗೋವಿಂದಭಗವತ್ಪಾದರು ಅವರಿಗೆ ಕೊಟ್ಟರೆಂದಿದೆ.

4. ಈಗ ಮಠಗಳಲ್ಲಿ ಮೂರು ಬಾರಿ ಪೂಜೆಯಿರುವಂತೆ ಕಾಣಲಿಲ್ಲ.

5, ಲಿಂಗಾರ್ಚನೆಯ ಬಲದಿಂದ ವಾದಿಗಳನ್ನು ಜಯಿಸಿದ ಆಚಾರ್ಯರು ಸಾಟಿಗ್ರಾಮವನ್ನು ಉಪಾಹರಿಸಿರುವಂತೆ ಲಿಂಗವನ್ನು ಒಂದುಸಲವೂ ಏಕೆ ಉದಾಹರಿಸಲಿಲ್ಲವೊ ॥ (ಚರಿತ್ರೆ. ಪುಟ ೯೦–೯೧). 6. 'ವಶಙ್ಕರೋ' ಎಂದು ಪಾ॥

7. 'ತಸ್ಕರಾಣಾಂ ಪತಯೇ' ಎಂಬುದರ ಪರಾಮರ್ಶವೆ ?

8. ಬೌದ್ಧ, ಜೈನ, ಮಿಶ್ರ– ಈ ಹೆಸರುಗಳು ಮತ್ತೆಮತ್ತೆ ಬಂದಿರುವದರಿಂದ ಇವರೆಲ್ಲರ ಪ್ರಾಬಲ್ಯಕಾಲವನ್ನು ಐತಿಹಾಸಿಕರು ಶೋಧಿಸಬೇಕಾಗಿದೆ.

9, 'ಸ ಕಾಮಮ್'

ತಾನ್ ವೈ ವಿಜಿತ್ಯ ತರಸಾಽಕ್ಷಿತಶಾಸ್ತ್ರವಾದೈ-
ರ್ಮಿಶ್ರಾನ್ ಸ ಕಾಞ್ಚ್ಯಾಮಥ ಸಿದ್ಧಿಮಾಪ[1] ॥೪೭॥

೪೭. ಯೋಗ, ಭೋಗ, ವರ, ಮುಕ್ತಿ, ಸುಮೋಕ್ಷ-ಇವುಗಳನ್ನು ಕೊಡುವ ಲಿಂಗಗಳ[2] ಅರ್ಚನೆಯಿಂದ ಜಯವನ್ನು ಹೊಂದಿ 'ತನ್ನ ಆಶ್ರಮದಲ್ಲಿ' (?) ಬೇಗನೆ ಅಕ್ಷಿತವಾದ ಶಾಸ್ತ್ರಗಳಿಂದ 'ಮಿಶ್ರ'ರನ್ನು ಗೆದ್ದಬಳಿಕ ಅವನು ಕಾಂಚಿಯಲ್ಲಿ ಸಿದ್ಧಿಯನ್ನು ಹೊಂದಿದನು.[3]

[4][ಕಾಞ್ಚ್ಯಾಂ ತಪಃಸಿದ್ಧಿಮವಾಪ್ಯ ದಣ್ಡೀ
ಚಣ್ಡೀಶರೂಪೋ ಜಗದಾಕಲಯ್ಯ ।
ಬ್ರಹ್ಮೈಕ(")ವಿದ್ಯಾಂ ರಚಯನ್ ಸಭಾಷ್ಯಂ
ಶಾರೀರಕಂ ನಾಮ ಜಗಾದ ಮೋದಾತ್ ॥೧॥

೧. ಕಾಂಚಿಯಲ್ಲಿ ತಪಃಸಿದ್ಧಿಯನ್ನು[5] ಹೊಂದಿ ಆ ಚಂಡೀಶ್ವರರೂಪನಾದ ದಂಡಿಯು[6] ಜಗತ್ತನ್ನು ನೋಡಿ (?) ಬ್ರಹ್ಮೈಕವಿದ್ಯೆಯನ್ನು[7]—ಶಾರೀರಕ ಭಾಷ್ಯವನ್ನು—ರಚಿಸಿ ಹೇಳಿದನು.

ವ್ಯಾಸೇನ ಸಂಭಾಷ್ಯ ಸಮೇತ್ಯ ಕಾಶೀಂ
ತನ್ಮಣ್ಡನಾರ್ಯಂ ಪರಿಖಣ್ಡ್ಯ ವಾಣೀಮ್ ।
ಜೇತುಂ ಶರೀರಾನ್ತರಮೇತ್ಯ ಕಾಮ-
ಕಲಾಂ ಜಗಾಹೇ ಪ್ರಮದಾವರಾಭ್ಯಃ

೨. ಕಾಶಿಗೆ ಹೋಗಿ[8] ವ್ಯಾಸರೊಡನೆ ಸಂಭಾಷಣೆಮಾಡಿ[9] ಆ ಮಂಡನನಾರ್ಯನನ್ನು[10] ಖಂಡಿಸಿ ವಾಣಿಯನ್ನು ಜಯಿಸುವದಕ್ಕೆಂದು ಶರೀರಾಂತರವನ್ನು ಸೇರಿ[11] ಉತ್ತಮಸ್ತ್ರೀಯರಿಂದ ಕಾಮುಕಲೆಯನ್ನು ಕಲಿತನು.[12]

1. 'ತತೋ ಲೋಕಮವಾಪ ಶೈವಮ್', ,ತತೋ ನೈಜಮವಾಪ ಲೋಕಮ್' —ಎಂಬ ಪಾಠಗಳೂ ಇವೆ. ಕಾಂಚಿಯವರು ಇಲ್ಲಿರುವ ಪಾಠವನ್ನು ಒಪ್ಪಿರುತ್ತಾರೆ.

ಈ ಲಿಂಗಗಳ ವಿಷಯಕ್ಕೆ ಇದೇ ಪರಿಶಿಷ್ಟದ ಕೊನೆಯನ್ನು ನೋಡಿ.

3. ಕಾಂಚಿಯಲ್ಲಿ ಆಚಾರ್ಯರ 'ಆಶ್ರಮ'ವಿತ್ತೆಂದಾಯಿತು. ಅಲ್ಲಿ ಸಿದ್ಧಿಯನ್ನು ಹೊಂದಿದರು ಎಂದರೆ ದೇಹವನ್ನಿಟ್ಟರು ಎಂದು ಕಾಂಚೀಸಂಪ್ರದಾಯದವರ ಪಾಠ.

4. ಕಂಸದಲ್ಲಿಟ್ಟಿರುವ ಭಾಗವನ್ನು ಎಲ್ಲಾ ಮಠದವರೂ ಒಪ್ಪುವದಿಲ್ಲ; ಆದ್ದರಿಂದ ಶ್ಲೋಕಗಳಿಗೆ ಬೇರೆಯ ಅನುಕ್ರಮಸಂಖ್ಯೆಯನ್ನು ಕೊಟ್ಟಿದೆ. ಉಪಸಂಹಾರ ವಾಕ್ಯವನ್ನು ನೋಡಿ.

5. ಸಿದ್ಧಿಶಬ್ದಕ್ಕೆ ಶೃಂಗೇರೀಸಂಪ್ರದಾಯದವರು ಕೊಟ್ಟ ಅರ್ಥವಿದು.

6. ಆಚಾರ್ಯರಿಗೆ ದಂಡವಿತ್ತೆ? ಚರಿತ್ರೆ ೭೯—೮೦ನೆಯ ಪುಟವನ್ನು ನೋಡಿ.

7. ಭಾಷ್ಯಗಳಲ್ಲಿ ಈ ಹೆಸರು ಬಂದಿಲ್ಲ.

8–9 ಇದು ೩೬ನೆಯ ಶ್ಲೋಕದ ಅಭಿಪ್ರಾಯಕ್ಕೆ ವಿರುದ್ಧ.

10. ಚರಿತ್ರೆಯ ೮–೯ನೆಯ ಅಧ್ಯಾಯ, 11. ೧೦ನೆಯ ಅಧ್ಯಾಯ ಪು. ೧೮೯.

12. ಚರಿತ್ರೆಯ ಪುಟ ೧೯೪ ನೋಡಿರಿ.

ಪುನಃ ಸ್ವಕಂ ದೇಹಮವಾಪ್ಯ ತೂರ್ಣಂ
ಪೂರ್ಣಂ ನಿಜಂ ಕಾಮಮಥಾಕಲಯ್ಯ ।
ವಾಣೀಂ ಸ ಜಿತ್ವೈವ ತು ತಾಂ ಮಠೇ
ಸ್ವೇ ಶೃಙ್ಗೇರಿಕಾಖ್ಯೇ ಪ್ರಣಿವೇಶ್ಯ ತುಷ್ಟಃ[1] ॥ ೩ ॥

೩. ಮತ್ತೆ ಬೇಗನೆ ತನ್ನ ದೇಹವನ್ನು ಸೇರಿ ತನ್ನ ಇಚ್ಛೆಯು ಪೂರ್ಣವಾಯಿತೆಂದು ತಿಳಿದು ವಾಣಿಯನ್ನು ಗೆದ್ದೇ ಆಕೆಯನ್ನು ಶೃಂಗೇರಿಯ ತನ್ನ ಮಠದಲ್ಲಿಟ್ಟು[2] ಸಂತುಷ್ಟನಾದನು.

ಕಾಪಾಲಿಕಂ ತಂ ಕ್ರಕಚಂ ಮಹೋಗ್ರಂ
ಕರ್ಣಾಟದೇಶೇ ನಿಖಿಲಂ ವಿಜಿತ್ಯ ।
ಗೋಕರ್ಣಮಾಸಾದ್ಯ ತಮೀಶಮೀಡ್ಯಂ
ಸ್ತುತ್ವಾ ಮಹಾರಾಷ್ಟ್ರಪದಂ ಪ್ರಪೇದೇ ॥ ೪ ॥

೪. ಕ್ರಕಚನೆಂಬ ಮಹೋಗ್ರಕಾಪಾಲಿಕನನ್ನು[3] ಕರ್ಣಾಟಕದೇಶದಲ್ಲಿ ಸಂಪೂರ್ಣವಾಗಿ ಗೆದ್ದು ಗೋಕರ್ಣಕ್ಕೆ ಹೋಗಿ ಈಡ್ಯನಾದ ಈಶ್ವರನನ್ನು ಸ್ತುತಿಸಿ ಮಹಾರಾಷ್ಟ್ರದೇಶಕ್ಕೆ ಹೋದನು.

ತತ್ರ ಸ್ಥಿತಾನ್ ಭಾಸ್ಕರಭಟ್ಟಮುಖ್ಯಾನ್
ತಂ ನೀಲಕಣ್ಠಂ ಚ ತೃಣೀಕರಿಷ್ಯನ್ ।
ಕಾಶ್ಮೀರಮಾಸಾದ್ಯ ಸ ಶಾರದಾಯಾಃ
ಸರ್ವಜ್ಞಪೀಠಂ ಪದಮಾರುರುಕ್ಷನ್ ॥ ೫ ॥
ತತ್ರ ಸ್ಥಿತಾನ್ ಸಂಪ್ರತಿ ಸರ್ವಪಣ್ಡಿತಾನ್
ಚಾರ್ವಾಕಮುಖ್ಯಾನ್ ವಿಪುಲಾನ್ ವಿಜಿತ್ಯ ।
ಸ ದಕ್ಷಿಣದ್ವಾರಕವಾಟಭೇದಂ
ಕೃತ್ವಾ ಸ ದೇವ್ಯಾ ವಿನಿಶಙ್ಕ್ಯಮಾನಃ ॥ ೬ ॥
ಶಙ್ಕಾಂ ನಿರಾಕೃತ್ಯ ನಿವಿಶ್ಯ ಪೀಠೇ
ತತೋ ಬದರ್ಯಾಶ್ರಮಮಾಪ ದಣ್ಡೀ ॥ ೭ ॥

೫–೭. ಅಲ್ಲಿದ್ದ ಭಾಸ್ಕರಭಟ್ಟನೇ ಮುಂತಾದವರನ್ನೂ ನೀಲಕಂಠನನ್ನೂ ತೃಣೀಕರಿಸಿ[4] ಕಾಶ್ಮೀರವನ್ನು ಸೇರಿ ಶಾರದೆಯ ಸರ್ವಜ್ಞಪೀಠವನ್ನು ಹತ್ತ

1. 'ತಿಷ್ಠತಿ' ಎಂದು ಪಾ॥

2. ಕಂಸದಲ್ಲಿರುವ ವಾಕ್ಯಸಂದರ್ಭಕ್ಕೆ ಹೊಂದುವದಕ್ಕೆ ತನ್ನ ಮಠವೆಂದರೆ ಶೃಂಗೇರೀಮಠವೆಂದೇ ಅರ್ಥ ; ಆದರೆ ಮಾಧವೀಯದಲ್ಲಿ ಈ ಮಠದ ಪ್ರಸ್ತಾಪವಿಲ್ಲ. ಚರಿತ್ರೆಯ ೨೨೦–೨೨೧ ಪುಟಗಳನ್ನು ನೋಡಿರಿ.

3. ಕಾಪಾಲಿಕನ ಜಯದ ವಿಷಯಕ್ಕೆ ಚರಿತ್ರೆಯ ಪುಟ ೨೫೩–೨೫೪ನ್ನು ನೋಡಿರಿ.

4. ಇದಕ್ಕೂ ಮಾಧವೀಯಕ್ಕೂ ಹೋಲಿಕೆಯಿದೆ.

ಬೇಕೆಂದು ಅಲ್ಲಿದ್ದ ಚಾರ್ವಾಕರೇ ಮೊದಲಾದ ಸರ್ವಪಂಡಿತರನ್ನೂ ಜಯಿಸಿ ಶಾರದಾದೇವಿಯ ದಕ್ಷಿಣದ್ವಾರವನ್ನು ತೆರೆಯಿಸಿ ದೇವಿಯ ಶಂಕೆಯನ್ನು ನಿರಾಕರಿಸಿ ಪೀಠದಲ್ಲಿ ಕುಳಿತು, ಆ ಬಳಿಕ ದಂಡಿಯು ಬದರ್ಯಾಶ್ರಮವನ್ನು ಸೇರಿದನು.

ನಾರಾಯಣಂ ತತ್ರ ಶಪಜ್ಜಲೌಘಂ
ಕುಣ್ಡಂ ಪ್ರಶೀತಸ್ಯ ನಿವಾರಣಾಯ ॥ ೭ ॥

ಧ್ಯಾತ್ವಾ ಶಿವಂ ತತ್ರ ನಿವಿಶ್ಯ ತಸ್ಥೌ
ಕೈಲಾಸದೇಶಾದ್ ವೃಷಭಶ್ಚ ದೇವಾಃ ।
ಸಮೇತ್ಯ ಸಂಸ್ತುತ್ಯ ಯದಾಯುಷಸ್ತೇ
ಕಾಲೋಽಗಮತ್ತ್ವಂ ವೃಷಭೇಽಧಿರೋಹ[1] ॥ ೮ ॥

ಇತಿ ಪ್ರಚೀರ್ಣಂ(?) ಪ್ರಭುರಾತ್ಮನಿ ಸ್ವೇ
ವಿಚಿನ್ತ್ಯ ಶಿಷ್ಯಾನ್ ನಿಜಗಾದ ಮೋದಾತ್ ॥ ೮ ॥

೭–೮. ಅಲ್ಲಿ ನಾರಾಯಣನನ್ನು ತಪ್ತಜಲಕುಂಡವನ್ನು– ಶೀತನಿವಾರಣೆಗಾಗಿ, ಧ್ಯಾನಿಸಿಕೊಂಡು ಕುಳಿತುಕೊಂಡಿದ್ದನು. ಕೈಲಾಸದೇಶದಿಂದ ವೃಷಭವೂ ದೇವತೆಗಳೂ ಬಂದು ಸ್ತೋತ್ರಮಾಡಿ, "ನಿನ್ನ ಆಯುಸ್ಸಿನ ಕಾಲವು ಆಗಿಹೋಯಿತಾದ್ದರಿಂದ ವೃಷಭವನ್ನು ಏರು" ಎಂದು ಕೇಳಿಕೊಳ್ಳಲು ಆ ಪ್ರಭುವು ತನ್ನಲ್ಲಿಯೇ ಆಲೋಚನೆಮಾಡಿ ಶಿಷ್ಯರನ್ನು ಕುರಿತು ಸಂತೋಷದಿಂದ ಇಂತೆಂದನು :

ಯೂಯಂ ಚತುರ್ದಿಕ್ಷು ಮಠೇಷು ಲಿಙ್ಗೈಃ ।
ಸಾಕಂ ವಸನ್ತ್ವಿತ್ಯುಪದಿಶ್ಯ ಹರ್ಷಾತ್ ॥ ೯ ॥
ವಿವೇಶ ಪೃಷ್ಠಂ ವೃಷಭಸ್ಯ ಹಸ್ತಂ
ಸಂಗೃಹ್ಯ ವೈರಿಞ್ಚಮಥಾಸ್ಯ ದತ್ತಮ್ ।
ಸರ್ವೈಃ ಸ್ತುತಶ್ಚ ದೇವೈರಭಿನನ್ದ್ಯಮಾನಃ
ಸ ಶಙ್ಕರಸ್ತನ್ನಿಜಗಾಮ ದೇವಃ ॥ ೧೦ ॥

ವಿವೇಶ ಕೈಲಾಸನಿವೇಶಮುಚ್ಚಂ
ಸಚ್ಛಬ್ದವೃನ್ದಾರಕವೃನ್ದಪೂರ್ಣಮ್ ।
ತದಾದಿ ತಚ್ಛಙ್ಕರಭಾಷ್ಯಮೇತದ್
ಭೂಮೌ ಜನಂ ಮುಕ್ತಿಪದಂ ದದಾತಿ ॥ ೧೧ ॥

೯–೧೧. ನೀವು ನಾಲ್ಕುದಿಕ್ಕುಗಳಲ್ಲಿಯೂ ಮಠಗಳಲ್ಲಿ ಲಿಂಗಗಳೊಡನೆ ಇರಬೇಕು– ಎಂದು ಉಪದೇಶಿಸಿ ಹರ್ಷದಿಂದ ಬ್ರಹ್ಮನು ಕೊಟ್ಟ ಹಸ್ತಾವಲಂಬನೆ

---

೧. ಕಂಸದಲ್ಲಿರುವ ಈ ಗ್ರಂಥದ ಭಾಗವು ಅಷ್ಟು ವ್ಯಾಕರಣಬದ್ಧವಾಗಿ ಅರ್ಥವು ಹೊಂದುಗಡೆಯಾಗುವಂತೆ ಕಾಣಿಸುವದಿಲ್ಲ.

ದಿಂದ ವೃಷಭದಮೇಲೆ ಕುಳಿತನು. ಎಲ್ಲಾ ದೇವತೆಗಳಿಂದಲೂ ಅಭಿನಂದಿತನಾಗಿ ಆ ಶಂಕರದ್ದೇವನು ಅಲ್ಲಿಗೆ ಹೋದನು. ನಿರ್ಮಲವಾದ, ಮತ್ತು ಉತ್ತಮವಾದ ಮಾತುಗನ್ನಾಡುವ (?) ದೇವತೆಗಳಿಂದ ತುಂಬಿದ ಕೈಲಾಸಪ್ರದೇಶವನ್ನು ಹೊಕ್ಕನು. ಅಂದಿನಿಂದ ಈ ಶಾಂಕರಭಾಷ್ಯವು ಭೂಮಿಯಮೇಲೆ ಜನರಿಗೆ ಮುಕ್ತಿಪದವನ್ನು ಕೊಡುತ್ತಿದೆ.

ಏತತ್ತೇಽಭಿಹಿತಂ ದೇವಿ ಮುಖ್ಯಂ ಮುಕ್ತಿಪದಾವಹಮ್ ।
ಶಾಙ್ಕರಂ ಚರಿತಂ ಲೋಕೇ ಭವಿಷ್ಯತಿ ನ ಸಂಶಯಃ ॥ ೧೨ ॥
ಇತಿ ಶ್ರುತ್ವಾ ಮಹೇಶಾನಾಚ್ಚರಿತಂ ಶಙ್ಕರಸ್ಯ ಸಾ ।
ಪುಲಕಾಙ್ಕುರಸಂಹೃಷ್ಟಾ ಪ್ರಣನಾಮ ಮಹೇಶ್ವರಮ್ ॥ ೧೩ ॥

೧೨–೧೩. ದೇವಿಯೆ, ನಿನಗೆ ಹೇಳಿದ ಮುಖ್ಯವಾದ ಈ ಶಂಕರಚರಿತೆಯು ಲೋಕದಲ್ಲಿ ಮುಕ್ತಿಪದವನ್ನು ಕೊಡುವದೆಂಬುದಕ್ಕೆ ಸಂಶಯವಿಲ್ಲ. ಹೀಗೆಂದು ಮಹೇಶ್ವರನಿಂದ ಶಂಕರಚರಿತೆಯನ್ನು ಕೇಳಿದ ಆ ದೇವಿಯು ರೋಮಾಂಚದಿಂದ ಹೃಷ್ಟಳಾಗಿ ಮಹೇಶ್ವರನನ್ನು ನಮಸ್ಕರಿಸಿದಳು. ]

ಕಂಸದಲ್ಲಿರುವ ಭಾಗವು ಅಚ್ಚಿನ ಪುಸ್ತಕಗಳಲ್ಲಿದೆ ಎಂದು ಕಳೆದಾಲ ಎಸ್. ಸುಂದರರಾಮಯ್ಯನವರು 1958ನೆಯ ಇಸವಿಯಲ್ಲಿ ಶ್ರೀರಂಗಂ ಮುದ್ರಣಾಲಯದಲ್ಲಿ ಅಚ್ಚುಮಾಡಿಸಿದ ಪುಸ್ತಕದ ಪರಿಶಿಷ್ಟದಲ್ಲಿ ಬರೆದಿರುತ್ತಾರೆ. ಇದರಲ್ಲಿ ಬಲುಮಟ್ಟಿಗೆ ಮಾಧವೀಯಶಂಕರವಿಜಯದಲ್ಲಿರುವ ವಿಷಯಗಳೇ ಪ್ರಧಾನವಾಗಿ ಕಾಣುತ್ತವೆ. ಇಲ್ಲಿಯೂ ಭಾಸ್ಕರಭಟ್ಟ, ನೀಲಕಂಠ –ಮೊದಲಾದವರನ್ನು ಆಚಾರ್ಯರ ಸಮಕಾಲಿಕರನ್ನಾಗಿ ಮಾಡಿದೆ. ಚರಿತ್ರೆಯ ೨೫೫, ೨೫೭ನೆಯ ಪುಟಗಳನ್ನು ನೋಡಿ. ಕಾಂಚೀಪೀಠದವರಿಗೂ ಶೃಂಗೇರೀಮಠದವರಿಗೂ ಆದ ವಾದದ ಫಲವಾಗಿ ಇಂಥ ಅಧಿಕಪಾಠಗಳು ಸೇರಿಕೊಂಡಿವೆ ಎಂಬುದು ಸ್ಪಷ್ಟ. ಕೆಲವು ಪುಸ್ತಕಗಳಲ್ಲಿ ಈ ವಿಜ್ಞಾಪನೆಯಿದೆಯಂತೆ :

## ವಿಜ್ಞಾಪನಾ

ಏತದ್ದೇಶೀಯೇಷು ಕೇಷುಚಿತ್ಪುಸ್ತಕೇಷು 'ಕಾಷ್ಠಾಮಥ ಸಿದ್ಧಿಮಾಪ' ಇತಿ ಶ್ಲೋಕ ಏವ ಅಧ್ಯಾಯಪರಿಸಮಾಪ್ತಿರ್ದೃಶ್ಯತೇ । ಉತ್ತರದೇಶೀಯೇಷು ಪುಸ್ತಕೇಷು 'ಪ್ರಣನಾಮ ಮಹೇಶ್ವರಮ್' ಇತಿ ಶ್ಲೋಕಾನ್ತ ಅಧ್ಯಾಯಪರಿಸಮಾಪ್ತಿರ್ದೃಶ್ಯತೇ । ಶ್ರೀಚಿತ್ಸುಖಾಚಾರ್ಯಮಾಧವೀಯಾದಿಕೃತಶಙ್ಕರವಿಜಯಾದೌ ಔತ್ತರಪಾಠಮನುಸೃತ್ಯೈವ ಕಥಾಸಂದರ್ಭಸ್ಯ ಪ್ರದರ್ಶಿತತ್ವೇನ ಏತಾದೃಶ ಔತ್ತರಾಹಪಾಠ ಏವ ಜ್ಯಾಯಾನ್ । ಏತದ್ದೇಶೀಯೇಷು ಕೇಷುಚಿತ್ ಪುಸ್ತಕೇಷು

'ಕಾಞ್ಚ್ಯಾಂ ತಪಃಸಿದ್ಧಿಮವಾಪ್ಯ ವಹ್ನೇ' ಇತಿ ಉತ್ತರಗ್ರನ್ಥಭಾಗಃ (ಭಾರತೇ ಕೃಷ್ಣಾರ್ಜುನಯೋಃ ಶ್ರೀಕೃಷ್ಣಸ್ಯ ಮಹಾದೇವಪ್ರಸಾದೋದ್ದೇಶ್ಯಕಕೈಲಾಸಯಾತ್ರಾಪ್ರತಿಪಾದಕೋ ಗ್ರನ್ಥಭಾಗೋ ಯಥಾ ಕೈಶ್ಚಿದುದ್ಧೃತಃ, ತಥಾ) ಸ್ವಾಭಿಪ್ರಾಯವಿರೋಧಿತ್ವಾತ್ ಕೈಶ್ಚಿದ್ದೇಶಿಕೈರುದ್ಧೃತ ಇತಿ ನಿಶ್ಚಿತ್ಯ ಔತ್ತರೀಯಪಾಠಾನುಸಾರೇಣೈವ ಮುದ್ರಿತೋಽಯಂ ಗ್ರನ್ಥಃ ||

ಮೇಲೆ ಕೊಟ್ಟಿರುವ ಸಂಸ್ಕೃತಭಾಗದ ಅಭಿಪ್ರಾಯವೇನೆಂದರೆ : 'ಉತ್ತರದೇಶದ ಕೆಲವು ಪಾಠಗಳಲ್ಲಿದ್ದರೂ ಕಂಸದಲ್ಲಿರುವ ಭಾಗವನ್ನು ತಮ್ಮ ಮತಕ್ಕೆ ವಿರೋಧವೆಂದು ಕೆಲವರು ಬಿಟ್ಟುಬಿಟ್ಟಿರುತ್ತಾರೆ. ನಾವು ಅದನ್ನು ಸೇರಿಸಿರುತ್ತೇವೆ.' ಆದರೆ ಈ ಪಾಠವು ಉತ್ತರದೇಶದ ಪಾಠದಲ್ಲಿಯೂ ಇಲ್ಲ ; ಪಂಡಿತ ಲಕ್ಷ್ಮಣಶಾಸ್ತ್ರಿಗಳಲ್ಲಿರತಕ್ಕ ಕೈಬರಹದ ಪುಸ್ತಕ ಮತ್ತು ಕಾಶಿಯ ರಾಜಕೀಯಾಗಾರದಲ್ಲಿರುವ ಪುಸ್ತಕ- ಇವುಗಳಲ್ಲಾಗಲಿ, ಆನಂದಾಶ್ರಮದಲ್ಲಿ ಪ್ರಕಟವಾಗಿರುವ ಶಂಕರವಿಜಯದ ವ್ಯಾಖ್ಯಾನದಲ್ಲಿಯಾಗಲಿ, ಮೈಸೂರು ರಾಜಕೀಯಪುಸ್ತಕಾಲಯದಲ್ಲಿರುವ ಕೈಬರಹದ ಪುಸ್ತಕದಲ್ಲಾಗಲಿ ಇಲ್ಲ; 'ಕಾಞ್ಚ್ಯಾಮಥ ಸಿದ್ಧಿಮಾಪ' ಎಂಬಲ್ಲಿಗೇ ಶಿವರಹಸ್ಯದ ಅಧ್ಯಾಯವು ಸಮಾಪ್ತವಾಗಿದೆ- ಎಂದು "ಶ್ರೀಶಂಕರಪೀಠ ತತ್ತ್ವದರ್ಶನ"ದ ಭೂಮಿಕೆಯಲ್ಲಿದೆ (ಪು. ೧೨ಂದ ೨೦). ನಿಜವನ್ನು ಇನ್ನೂ ಶೋಧಿಸಿ ತಿಳಿಯಬೇಕಾಗಿರುತ್ತದೆ.

'ತದ್ಯೋಗಭೋಗ' ಎಂಬ (೪೭) ಶ್ಲೋಕದಲ್ಲಿ ಹೇಳಿರುವ ಲಿಂಗಗಳ ವಿಚಾರವು ಆನಂದಗಿರೀಯದಲ್ಲಿದೆ. ಕೇದಾರದಲ್ಲಿ ಮುಕ್ತಿಲಿಂಗ (ಪ್ರ. ೫೫ ಪು. ೨೮೯, ದೇ. ಇಲ್ಲ) ; ನೀಲಕಂಠದಲ್ಲಿ ವರಲಿಂಗ (ಪು. ೫೫, ಪು. ೨೧೦, ದೇ. ಇಲ್ಲ) ; ಶೃಂಗೇರಿಯಲ್ಲಿ ಭೋಗಲಿಂಗ ಪ್ರ. ೬೩, ಪು ೧೨೫ ; ದೇ. ಇಲ್ಲ); ಕಂಚಿಯಲ್ಲಿ ಯೋಗಲಿಂಗ (ಪ್ರ. ೬೫, ಪು. ೨೩೧, ದೇ. ಇಲ್ಲ); ಚಿದಂಬರದಲ್ಲಿ ಮೋಕ್ಷಲಿಂಗ (ಪ್ರ. ೮೪, ಪು. ೩೫೫, ದೇ. ಇಲ್ಲ) ಎಂದು ತೆಲುಗುಪುಸ್ತಕದಲ್ಲಿ ಸುಸ್ಪಷ್ಟವಾಗಿದ್ದರೂ ಲಿಂಗಗಳ ವಿವರವು ದೇವನಾಗರೀಪ್ರತಿಯಲ್ಲಿಲ್ಲದಿರುವದಕ್ಕೆ ಏನೋ ಕಾರಣವಿರಬೇಕು. ದೇವನಾಗರೀಪ್ರತಿಯು ತೆಲುಗುಪ್ರತಿಗಿಂತ ಅಲ್ಲಲ್ಲಿ ಭಿನ್ನವಾಗಿರುವದಕ್ಕೆ ಕಾರಣವೇನೆಂಬುದನ್ನು ತಿಳಿಯುವದು ಅವಶ್ಯ. ಮೊದಲಿನ ತೆಲುಗುಪ್ರತಿಯಲ್ಲಿ ಇಲ್ಲದ್ದರಿಂದ ದೇವನಾಗರಿಯಲ್ಲಿ ಪ್ರಕಟಿಸಿದವರಿಗೆ ಅದು ತಿಳಿಯದೆಹೋಗಿರಬಹುದು ; ಅಥವಾ ದೇವನಾಗರಿಯಲ್ಲಿ ಮುದ್ರಿಸುವಾಗ ಅದರ ಆವಶ್ಯಕತೆಯಿಲ್ಲವೆಂದು ಬೇಕೆಂತಲೇ ಯಾರೋ ಬಿಟ್ಟಿರಬಹುದು. ನಿಜವನ್ನು ದೇವರೇ ಬಲ್ಲ "ಗಂಗಾದಿತೀರ್ಥವಿಜಯಯಾತ್ರಾ" ಎಂಬ (ಕಾಂಚೀಪೀಠಾಧ್ಯಕ್ಷರ ಯಾತ್ರೆಯ ವಿವರದ) ಪುಸ್ತಕದಲ್ಲಿ ಪರಿಶಿಷ್ಟದಲ್ಲಿ ಕೊಟ್ಟಿರುವ

ಶಿವಸಂಹಿತೆಯ ಟಿಪ್ಪಣಿಗಳಲ್ಲಿರುವ ಆನಂದಗಿರೀಯಪಾಠದಲ್ಲಿ ತೆಲುಗುಪುಸ್ತಕದಂತೆಯೇ ಇದೆ !

ಮೇಲೆ ಉದಾಹರಿಸಿರುವ 'ವಿಜ್ಞಾಪನಾ'ದಲ್ಲಿ ಅಧ್ಯಾಯಸಮಾಪ್ತಿರ್ದೃಶ್ಯತೇ' ಎನ್ನುವವರೆಗಿನ ಭಾಗವು ಶ್ರೀಮುಖಸಂವತ್ಸರಾಶ್ವಯುಜ ಬಹುಳ ೧೦ ಸೌಮ್ಯವಾಸರ ಮದ್ರಾಸಿನಲ್ಲಿ ತೆಲುಗುಅಕ್ಷರಗಳಿಂದ ಅಚ್ಚುಮಾಡಿಸಿದ ವೇ|| ಕಲ್ಯಾಣರಾಮಶಾಸ್ತ್ರಿಯವರು ಪ್ರಕಟಿಸಿರುವ "ಶಿವರಹಸ್ಯ"ದ ಕೊನೆಯಲ್ಲಿದೆ ಎಂದು ಸೋಮನಾಥಯ್ಯನವರು ( ಸೋ. ಶಂ. ಪು. ೭ ) ಬರೆದಿರುತ್ತಾರೆ. ಇದರ ಮುಂದಿನ ಭಾಗದಲ್ಲಿ 'ಚಿತ್ಸುಖಾಚಾರ್ಯ, ಮಾಧವಾರ್ಯ-ಮುಂತಾದವರು ಮಾಡಿರುವ ಶಂಕರವಿಜಯಗಳಲ್ಲಿರುವ ಕಥೆಯು ಉತ್ತರದ ಪಾಠಕ್ಕೆ ಅನುಗುಣವಾಗಿಯೇ ಇದೆ' ಎಂದು ಬರೆದಿರುವದು ಯುಕ್ತಿಯುಕ್ತವಾಗಿದೆ. ಆದರೆ ಈ ಭಾಗವನ್ನು ಚಿತ್ಸುಖಾಚಾರ್ಯ (?) ಮತ್ತು ಮಾಧವೀಯ- ಇವುಗಳಿಗನುಗುಣವಾಗುವಂತೆ ಯಾರೋ ಸೇರಿಸಿರಬಹುದು-ಎಂಬ ವಾದಕ್ಕೂ ಅವಕಾಶವನ್ನು ಕೊಡುವಂತಿದೆ.

ಅಂತು ಶಿವರಹಸ್ಯದ ರಹಸ್ಯವು ದುರ್ಭೇದ್ಯವಾಗಿಯೇ ಇದೆ. ಈ ಭಾಗವು ಎಲ್ಲ ಕೈಬರಹಪ್ರತಿಗಳಲ್ಲಿಯೂ ಇದೆಯೆ ? ಅಲ್ಲಿಯ ಪಾಠವು ಹೇಗಿದೆ "- ಎಂಬುದನ್ನು ಶೋಧಿಸುವದು ಅವಶ್ಯ. ಎಷ್ಟೇ ಆಗಲಿ, ಇದು ಭವಿಷ್ಯತ್ಕಾಲದ ವಿಷಯದ ಪುರಾಣಭಾಗವೆಂದು ನಾವು ಚರಿತ್ರೆಯ ೧೪ನೆಯ ಪುಟದಲ್ಲಿ ಬರೆದಿರುವದನ್ನು ವಾಚಕರು ಮರೆಯದೆ ಇರಬೇಕು.

## (ಅ) ಮಾರ್ಕಣ್ಡೇಯಸಂಹಿತಾ

(ಚರಿತ್ರೆ. ಪುಟ. ೧೪)

ಶ್ರೀಶಙ್ಕರಗುರುಚರಣಸ್ಮರಣ
ಮಭೀಷ್ಟಾರ್ಥಕರಣಮಖಿಲಾನಾಮ್ (?)[1] ।
ಸಂಭವತು ಸರ್ವದಾ ಮಮ ಸಮರಸ
ಸುಖಭಾಗ್ಯದಾನನಿಪುಣತರಮ್ ॥೧॥
ಶ್ರೀಶಙ್ಕರಾಚಾರ್ಯಪದಾರವಿನ್ದ
ಸೇವಾ ಹಿ ಸರ್ವೇಪ್ಸಿತಕಲ್ಪವಲ್ಲೀ ।
ಲಭ್ಯೇತ ಜನ್ಮಾನ್ತರಪುಣ್ಯಯೋಗಾತ್
ಸುಜನ್ಮಭಿಃ ಶುದ್ಧಮನೋಭಿಷಙ್ಗೈಃ ॥೨॥

1. ಪ್ರಾರಂಭದ ೫ ಶ್ಲೋಕಗಳಿಗೆ ಅನುಕ್ರಮಸಂಖ್ಯೆಯಿಲ್ಲ' ಏಕೆಂಬುದು ತಿಳಿಯಲಿಲ್ಲ. ಶ್ಲೋಕಗಳಲ್ಲಿ ಅಲ್ಲಲ್ಲಿ ಏನೋ ಹೆಚ್ಚುಕಡಿಮೆಯಾದಂತೆ ಕಾಣುತ್ತದೆ.

ಶಙ್ಕರಗುರುಚರಣಾಮ್ಬುಜಮಖಿಲ
ಜಗನ್ಮಙ್ಗಲಂ ಮನಸ್ಯನಿಶಮ್ ।
ಕಲಯಾಮಿ ಕಲಿಮಲಾಪಹಮಮಿತ
ಸ್ಸುಖದಾಯಕಂ ಬುಧೇನ್ದ್ರಾಣಾಮ್ ||೩||

ಲೋಕಾನುಗ್ರಹತತ್ಪರಃ ಪರಶಿವಃ ಸಂಪ್ರಾರ್ಥಿತೋ ಬ್ರಹ್ಮಣಾ
ಚಾರ್ವಾಕಾದಿಮತಪ್ರಭೇದನಿಪುಣಾಂ ಬುದ್ಧಿಂ ಸದಾ ಧಾರಯನ್ ।
ಕಾಲಟ್ಯಾಖ್ಯಪುರೋತ್ತಮೇ ಶಿವಗುರುರ್ವಿದ್ಯಾಧಿರಾಧಿಷ್ಟ ಯ
ಸ್ತತ್ಪತ್ನ್ಯಾಂ ಶಿವತಾರಕೇ ಸಮುದಿತಃ ಶ್ರೀಶಙ್ಕರಾಖ್ಯಾಂ ವಹನ್ ||೪||
ಜ್ಞಾತ್ವಾ ಷಣ್ಮಹಾಯನೇ ಚ ನಿಖಿಲಂ ಶಾಸ್ತ್ರಾರ್ಥತತ್ತ್ವಂ ಸುಖಾ
ದಷ್ಟಿನ್ಯಾಹ್ವಯತಾರಕೇ ಯತಿವರೋ ಭೂತ್ವಾ ನದೀಮಧ್ಯಗಃ ।
ಶ್ರೀಗೋವಿನ್ದಗುರುಪ್ರಸಾದಸಿತಯಾಬುರ್ಧ್ಯಾ(?) ಮುಹುರ್ವಿದ್ವಿಷೋ
ಜಿಗ್ಯೇ(?) ತಿಲ್ಲವನೇ(?) ಪ್ರಶಸ್ತತರಧೀಃ ಶ್ರೀಶಙ್ಕರಾಖ್ಯಃ ಸುಧೀಃ ||೫||

ಪರಿತಪ್ತ[1] ಪಂಚಲೋಹಸ್ರುತಿ
ನಾನೇನಾ(?) ತಿಪ್ತಿಸ್ಮಿತಾನ್ ।
ಪರಿಹೃತ್ಯ ಪರಮಯೋಗೀ ಪರಸ್ಯೈ-
ಕಾನ್ತಾನಿ(?) ಸುಖಮಗಾದಖಿಲಮ್ ||೧||

ನೇಪಾಳೇಶ್ವರಮಾಕಲಯ್ಯ[2] ತದನು ಶ್ರೀನೀಲಕಣ್ಠೇಶ್ವರಂ
ಹೈಮಂ ಶೈಲಮಪಾರಪುಣ್ಯಬದರೀಕೇದಾರಮಾರಾದಗಾತ್ ।
ಶ್ರೀಶೈಲಂ ಕನಕಾಚಲಂ ಶುಭಮಹಾಕೈಲಾಸಮಾಸೇದಿವಾನ್
ಲೋಕಾನುಗ್ರಹಕಾಮ್ಯಯಾ ನಿರುಪಮಶ್ಶ್ರೀಶಙ್ಕರಾರ್ಯೋ ಗುರುಃ
ನೇಪಾಳೇಶ್ವರಪಞ್ಚವಕ್ತ್ರಕಮಲಾಮೋದಾತಿಭಾರೋಲ್ಲಸ-
ತ್ಪಞ್ಚದ್ವಾರಶುಭಾಲಯೇ ನಿವಸಿತಂ ಕೃತ್ವಾಥ ಯೋಗೀಶ್ವರಃ ।

---

1, "ಪರಿತೃಪ್ತ" ಎಂಬುದಕ್ಕಿಂತ ಈ ಪಾಠವು ಮೇಲೆಂತ ಕಾಣುತ್ತದೆ,

2, ನೇಪಾಳವಾಜನಾದ ಶಂಕರನೆಂಬಾತನ ಪ್ರಾರ್ಥನೆಯಂತೆ ಆಚಾರ್ಯರು ಅಲ್ಲಿಗೆ ಹೋದರಂತೆ. ಅಲ್ಲಿ ಆಗ ಸೂರ್ಯವಂಶದ ವೃಷದೇವನೆಂಬಾತನಿದ್ದನೆಂದೂ ತನ್ನ ಮಗನು ಆಚಾರ್ಯರ ಆಗಮನಕಾಲಕ್ಕೆ ಹುಟ್ಟಿದ್ದರಿಂದ ಶಂಕರನೆಂದೇ ಅವನಿಗೆ ನಾಮಕರಣವಾಯಿತೆಂದೂ ಕೆಲವರು ಹೇಳುತ್ತಾರೆ. (ಬಲ. ಶಂ. ಪು. ೦೧೮), ಇಲ್ಲಿ ಪಶುಪತೀಶ್ವರದೇವಾಲಯಕ್ಕೆ ನಂಬೂದಿಯವರು ಪೂಜಾರಿಗಳಂತೆ. ನೇಪಾಳದ ರಾಜರು ಪ್ರತಿವರ್ಷವೂ ಕಾಂಚೀಪೀಠಕ್ಕೆ ಕಾಣಿಕೆಕೊಡುತ್ತಾರೆಂದು ಕೆಲವರು ಆ ಪೀಠದ ಅಭಿಮಾನಿಗಳು ಬರೆದದ್ದನ್ನು ಆರ್. ಕೃಷ್ಣಸ್ವಾಮಿ ಅಯ್ಯರು ( P. 17. ) ತಮ್ಮ ಪುಸ್ತಕದಲ್ಲಿ (K. M. C,) ಅಲ್ಲಗಳೆದಿದ್ದಾರೆ.

ವಾಞ್ಛಾಸಿದ್ಧಿಮವಾಪ್ಯ ವಿಶ್ವಜನಕಂ ಶ್ರೀನೀಲಕಣ್ಠೇಶ್ವರಂ
ಪ್ರಾಪ್ಯ ಪೌರ್ಣಿಕಶತಪಕ್ಷ ಚಾರ ಚ ತತಃ ಶ್ರೀಮೇರುಶೈಲಂ[1] ಯಯೌ ॥
ತತ್ರ ಸ್ವರ್ಣಶಿಖೋಚ್ಚಸಾನುಶಿಖರಪ್ರತ್ಯನ್ತಶೈಲಾನ್ (?) ಗುಹಾಃ (?)
ವೇದಾನ್ತಾಗಮಸಪ್ತಕೋಟಿಸುಮಹಾಮನ್ತ್ರಾನ್[3] ಮಹಾಘಾಪಹಾನ್
ಸಂಭಾವ್ಯಾತಿತರಾಂ ಪುರಶ್ಚರಣಯಾ ಲಬ್ಧ್ವಾಷ್ಟಸಿದ್ಧೀಸ್ತತಃ
ಕೃತ್ವಾ ಮೇರುನುತಿಂ(?) ಮಹಾರ್ಥಜನಿಕಾಂ ಕೈಲಾಸಶೈಲಂ ಯಯೌ

ಗತ್ವಾ ಕೈಲಾಸಶೈಲಂ ಜಗದಖಿಲಗುರುಃ
ಶಙ್ಕರಾಚಾರ್ಯಯೋಗೀ ।
ದೃಷ್ಟ್ವಾ ಸಾಮ್ಬಂ ಶಿವಂ ತಂ ಸ್ತುಯಮಿತಿ
ಸುಚಿರಂ ಚಿನ್ತಯನ್ನನ್ತರಙ್ಗೇ ।
ಲಬ್ಧ್ವಾ ಪಞ್ಚಾತ್ಮಲಿಙ್ಗಾನ್ಯ[3]ಮಲತರ-
ಶುಭಾಲಿಙ್ಗಿತಾನ್ಯಙ್ಗಭಾಜಾಮ್ |
ಭೂತ್ಯೈ ಸೌನ್ದರ್ಯಸಾರಂ[4] ಹಿಮಗಿರಿ-
ದುಹಿತುಃ ಸ್ತಾಪಯನ್ ಗಾಮಯಾಸೀತ್ ॥೫॥

ಕಾಞ್ಚ್ಯಾಂ ಶ್ರೀಕಾಮಕೋಟಿಂ[5]
ಕಲಿಮಲಶಮನೀಂ ಕಲ್ಪಯಿತ್ವಾ ಸುರೇಶೇ[6] |
ಶ್ರೀವಿದ್ಯಾರಾಜ[7] ಪೀಠಾರ್ಚನಮಹಿತ-
ಮಹಾರಾಜ್ಯಸಾಮ್ರಾಜ್ಯಲಕ್ಷ್ಮೀಮ್ ।
ಸಂವೇಶ್ಯಾತ್ಮೀಯಶಿಷ್ಯೇ ಸಕಲಭುವನ-
ಸಂತೋಷಹೇತೋರ್ಮಹಾತ್ಮಾ ।
ಚಿದ್ರೂಪಸ್ವಾನುಭೂತಿಂ ಭಜತಿ ಭವ
ಮಹಾಂಭೋಧಿಸಂತಾರಣಾಯ ॥೬॥

---

1. ಆಚಾರ್ಯರು ಮೇರುಪರ್ವತಕ್ಕೆ ಹೋದದ್ದು ಶಂಕರವಿಜಯಗಳಲ್ಲಿಲ್ಲ.
2. ಮಂತ್ರಪುರಶ್ಚರಣೆಯಿಂದ ಅಷ್ಟಸಿದ್ಧಿಗಳನ್ನು ಪಡೆದ ವೃತ್ತಾಂತ ಇಲ್ಲಿ ಮಾತ್ರ ಇದೆ. ವಿಜಯಗಳಲ್ಲಿಲ್ಲ.
3. ಆನಂದಗಿರೀಯದಲ್ಲಿರುವ ಪಂಚಲಿಂಗಗಳ ವೃತ್ತಾಂತಕ್ಕೆ ಇದು ಮೂಲವೆ ?
4. ಸೌಂದರ್ಯಲಹರಿಯೆ ? ಚರಿತ್ರೆ ಪುಟ ೩೮೦.
5. ಕಾಮಕೋಟಿ ಎಂಬ ಹೆಸರು ಇಲ್ಲಿ ಸ್ಪಷ್ಟವಾಗಿದೆ.
6. ಸುರೇಶ್ವರರನ್ನು ಸರ್ವಜ್ಞಾತ್ಮರ ರಕ್ಷಣೆಗೆ ಇಟ್ಟರೆಂದು ಸುಷಮಾ (ಗು. ರ. 22).
7. ಶ್ರೀವಿದ್ಯೆಗೆ ಮಠಗಳಲ್ಲಿ ಹೆಚ್ಚಿನ ಸ್ಥಾನ ; ಚರಿತ್ರೆ ಪುಟ ೩೨೩–೩೩೯.

ಶಿವಲಿಙ್ಗಂ ಪ್ರತಿಷ್ಠಾಪ್ಯ ಚಿದಮ್ಬರಸಭಾತಲೇ[1] ।
ಮೋಕ್ಷನಂ ಸರ್ವಜನ್ತೂನಾಂ ಭುವನತ್ರಯಸುನ್ದರಮ್ ॥೭॥
ವೈದಿಕಾನ್ ದೀಕ್ಷಿತಾನ್ ಶುದ್ಧಾನ್ ಶೈವಸಿದ್ಧಾನ್ತಪಾರಗಾನ್[2] ।
ಪೂಜಾರ್ಥಂ ಯುಯುಜೇ ಶಿಷ್ಯಾನ್ ಪುಣ್ಯಾರಣ್ಯವಿಹಾರಿಣಃ ॥೮॥
ಮುಕ್ತಿಲಿಂಗಂ[3] ತು ಕೇದಾರೇ ನೀಲಕಣ್ಠೇ ವರೇಶ್ವರಮ್[4] ।
ಪ್ರತಿಷ್ಠಾಪ್ಯ ಮಹಾಯೋಗೀ ಪರಾಂ ಪ್ರೀತಿಮವಾಪ ಸಃ ॥೯॥
ಕಾಞ್ಚ್ಯಾಂ ಶ್ರೀಕಾಮಕೋಟ್ಯಾಂ ತು ಯೋಗಲಿಙ್ಗ[5]ಮನುತ್ತಮಮ್ ।
ಪ್ರತಿಷ್ಠಾಪ್ಯ ಸುರೇಶಾರ್ಯಂ ಪೂಜಾರ್ಥಂ[6] ಯುಯುಜೇ ಗುರುಃ ॥
ಶ್ರೀಶಙ್ಕರಾರ್ಯಯೋಗೀ ಶೃಙ್ಗಗಿರಿಸ್ಥಾನ[7]ಮಗಮದಖಿಲೇ ದಶಃ ।
ಶ್ರೀಶಾರದಾಖ್ಯಪೀಠೇ ಶಿವಲಿಙ್ಗಂ ಭೋಗನಾಮಕಂ[8] ಚಕ್ರೇ ॥೧೧॥
ಅಹೋಬಲನೃಸಿಂಹಾಖ್ಯಸ್ಥಲೇ ಶ್ರೀಶಙ್ಕರೋ ಗುರುಃ ।
ನೃಸಿಂಹಯನ್ತ್ರೋದ್ಧರಣಂ ಚಕಾರ ಜಗತಾಂ ಮುದೇ ॥೧೨॥
ಶ್ರೀವೇಙ್ಕಟೇಶವೃಷಶೈಲಮುಪೇತ್ಯ ಯೋಗೀ
ಯನ್ತ್ರಂ ಜಗತ್ತ್ರಯವಶೀಕರಣೋದ್ಯತಂ ತತ್ ।
ಚಕ್ರೇ ಚರಾಚರಗುರುರ್ಜಗತಾಂ ವಿಭೂತ್ಯೈ
ಶ್ರೀಶಙ್ಕರೋ ನಿಗಮಶೇಖರಸಾರಗೋಽಯಮ್ ॥೧೩॥

---

1. ಆನಂದಗಿರೀಯಕ್ಕೆ ಹೊಂದುತ್ತದೆ.

2, ಆಚಾರ್ಯಭಾಷ್ಯಗಳಲ್ಲಿ ಶೈವಮತಕ್ಕೆ ಹೆಚ್ಚಿನ ಪ್ರಾಶಸ್ತ್ಯವಿಲ್ಲ.

3–5. ಆ॥ ಗೀ॥. ಇದೇ ಪರಿಶಿಷ್ಟದ ೩೭೨ನೆಯ ಪುಟವನ್ನು ನೋಡಿ.

6. 'ಪೂಜೆಗೆ' ಇಟ್ಟರೆಂದು ಬರೆದಿರುವದನ್ನು ಲಕ್ಷಿಸಬೇಕು; ಸುರೇಶ್ವರರು ಪೀಠಕ್ಕೆ ಅರ್ಹರಾಗಿರಲಿಲ್ಲವೆಂಬ ಆತ್ಮಬೋಧರ ಅಭಿಪ್ರಾಯಕ್ಕೆ ಇದು ಹೊಂದುಗೆಯಾಗಿದೆ (1) ಸುರೇಶ್ವರಸ್ಯ ಸಕಲವಿಬುಧಶಿರೋಮಣಿತ್ವೇಽಪಿ ಶಪಥಪಥ್ಯೈಕಪ್ರಾಪಿತಾಶ್ರಮತಯಾ ಸ್ವಯಮಪರಮಹಂಸತಯಾ ಚ ನ ಕ್ವಾಪಿ ಆಚಾರ್ಯತಯಾ ಪ್ರತಿಷ್ಠಿತಾ । ಸುಷಮಾ ಪು. ೩೭. (2) ಅಯಂ ಸುರೇಶ್ವರಃ ಸ್ವಯಮಪರಮಹಂಸತಯಾ ಪರಮಹಂಸೈಕಸಮಧ್ಯಾಸನೀಯೇ ಜಗದ್ಗುರುಣಾ ಸ್ವಪೀಠೇ ಶಿಷ್ಯಪೀಠೇಷು ವಾ ನ ನಿವೇಶಿತೋಽಪಿ ಸ್ವಸಮಾನವೈದುಷ್ಯಭಾವೇನ ಭಾಜನತಯಾ ಮಹಾಯೋಗಿತಯಾ ಚ ಸರ್ವಪೀಠವ್ಯವಸ್ಥಾಗೋಪನೇ ನಿಯುಕ್ತಸ್ತತ್ರ ತತ್ರ ಕಿಯನ್ತಙ್ಕಾಲಮುವಾಸ ॥ ಗು. ರ. ೩೪, ಸುಷಮಾ, ಪು. ೬೦.

7. ಕಾಂಚೀಪೀಠಸ್ಥಾಪನೆಯಾದಮೇಲೆ ಶೃಂಗೇರಿಯಪೀಠದ ಸ್ಥಾಪನೆಯೆಂದಾಯಿತೆ ?

8. ಭೋಗಲಿಂಗದ ವಿಚಾರಕ್ಕೆ ಶಿವರಹಸ್ಯದ ಕೊನೆಯಲ್ಲಿ ಕೊಟ್ಟಿರುವ ವಿಚಾರವನ್ನು ನೋಡಿ. 9. ಭಾಷ್ಯಗ್ರಂಥಗಳಲ್ಲಿ ಯಂತ್ರಗಳ ಪರಾಮರ್ಶವಿಲ್ಲ,

ಯೇ ವಾ ರಾಜಕುಲೋದ್ಭವಾ ಗುರುಪದಾಮ್ಭೋಜಾರ್ಚನಂ ಭಕ್ತಿತೋ
ನಾತನ್ವನ್ತಿ ನ ಮಾನಯನ್ತಿ ನ ಚ ವಾ ಸಂಮೋದಮಾಯಾನ್ತಿ ವೈ ।
ಸತ್ಯೈರ್ನಿರ್ವಿಭವೇ ತ ಏವ ಧನಧಾನ್ಯೈಶ್ವರ್ಯಹೀನಾಃ ಕ್ಷಣಾತ್"
ಕ್ಷೀಣಾ ಯಾನ್ತಿ[3] ಪರಾಜಯಂ ನನು ತತಃ ಶ್ರೀದೇಶಿಕಂ ಪೂಜಯೇತ್
ಯೇ ವಾ ಗುರುಚರಣಾಮ್ಬುಜವಿದ್ವೇಷಂ ತನ್ವತೇ ದುರಾತ್ಮಾನಃ ।
ತೇ ದುರ್ಗತಿಮಚಿರೇಣ ಪ್ರಾಪ್ಯ ಪತೇನ್ತ್ಯನ್ಧತಾಮಿಸ್ರೇ ॥೧೫॥
ಯೇ ರುದ್ರಾಕ್ಷವಿಭೂತಿಭಿಃ[2] ಕೃತಶುಭಾಲಙ್ಕಾರದೇಹಾ ಮಹಾ-
ದೇವಧ್ಯಾನಜಪಾರ್ಚನಾಸು ನಿರತಾಸ್ತೈಃ ಶಙ್ಕರಾರ್ಯೋ ಗುರುಃ ।
ಸಂಪೂಜ್ಯಃ ಸತತಂ ಸುದೂರಭರಣಾ(?)ವಪ್ಯಾಸ್ಥಿತಃ ಶ್ರೀಪತಿಃ
ಬ್ರಹ್ಮಾ ಸಾಮ್ಬಸದಾಶಿವೋಽಪಿ ವಿತರನ್ತ್ಯೇತೇಷು ರಾಜ್ಯಶ್ರಿಯಮ್[3] ॥
ಸಂಕಟಸಮುದಯೇ ಜಗತಾಂ ಶಙ್ಕರಗುರುಚರಣಪಙ್ಕಜಂ ಶರಣಮ್ ।
ಇತಿ ಜಯಘಣ್ಟಾಘೋಷಃ ಕಸ್ಯ ಮನೋಹಸ್ತಿನಃ(?) ನ ಭೂಷಯತಿ
ಕಾಶೀಪ್ರಮುಖಮಹಾಸ್ಥಲಸಂಸ್ಥಾಪಿತಸಕಲಧರ್ಮಸಾರೋಽಯಮ್ ।
ಗುರುರಪಿ ಚ ಮೇರುಮನ್ದರಕೈಲಾಸಾದಿಷ್ವಮೇಯಮ-
ಮಹಿಮಾಽವ್ಯಾತ್* ॥
ಮಹಾತ್ರಿಪುರಸುನ್ದರೀರಮಣಚನ್ದ್ರಮೌಲೀಶ್ವರ-
ಪ್ರಸಾದಪರಿಲಬ್ಧವಾಙ್ಮಯವಿಭೂಷಿತಾಶಾನ್ತರಮ್ ।
ನಿರನ್ತರಮುಪಾಸ್ಮಹೇ ನಿರುಪಮಾತ್ಮವಿದ್ಯಾನದೀ-
ನದೀನದಪತಿಪ್ರಭಂ ಮನಸಿ ಶಙ್ಕರಾರ್ಯಂ ಗುರುಮ್* ॥
ಸ್ಮರಾಮೋ ಮಾನಸೇ ನಿತ್ಯಂ ಶಙ್ಕರಾಚಾರ್ಯಪಾದುಕಾಮ್ ।
ಭವಾಮ್ಭೋಧಿಮಹಾನೌಕಾಂ ಭಕ್ತಶ್ರೀಕಾಮಧೇನುಕಾಮ್ ॥೨೦॥
ಆದಿತ್ಯಂ ಜಗದಮ್ಬಿಕಾಂ ಹರಿಮಿಭೇನ್ದ್ರಾಸ್ಯಂ ಮಹೇಶಂ ಗುರುಃ
ಪೂಜಾಯೈ ಪರಿಪೂರ್ಣಮಾನಸತಯಾ ಮೇನೇ ಯತಿಃ ಶಙ್ಕರಃ ।
ಶಿಷ್ಯೇಭ್ಯಶ್ಚ ದದೌ ಮುದಾ ಸುವಿಮಲಾಂ ಶ್ರೀಶೈವಪಞ್ಚಾಕ್ಷರೀಮ್[4] ।
ವಿದ್ಯಾವೈದಿಕಮಾರ್ಗದರ್ಶನಗುರುಃ ಶ್ರೀಷಣ್ಮತಸ್ಥಾಪಕಃ[5] ॥೨೨॥

---

1. ಶಂಕರಾಚಾರ್ಯರನ್ನು ಗೌರವಿಸದ ರಾಜರಿಗೆ ಶಾಪ.
2. ಶೈವರೇ ಆಚಾರ್ಯರ ಪೂಜೆಗೆ ವಿಶಿಷ್ಟಾಧಿಕಾರಿಗಳು.
3. ಆಚಾರ್ಯರನ್ನು ಪೂಜಿಸಿದವರಿಗೆ ಶುಭಫಲ.
*. ಹೀಗೆ ಗುರುತು ಹಾಕಿರುವ ವಾಕ್ಯಗಳ ಅರ್ಥವು ಸ್ಫುಟವಾಗಿಲ್ಲ.
4. ಪಂಚಾಯತನ ಶಿವಪಂಚಾಕ್ಷರಿಗಳ ಪರಾಮರ್ಶವೂ ಭಾಷ್ಯಗಳಲ್ಲಿಲ್ಲ.
5. ಆಚಾರ್ಯರು ಷಣ್ಮತಸ್ಥಾಪಕರೆಂಬ ಅಭಿಪ್ರಾಯ ಇಲ್ಲಿದೆ ; ಚ. ಪು. ೨೮೦ ನೋಡಿ.

ಜಗದಖಿಲಗುರುರವಾದೀದಖಿಲಾನ್ ಶಿಷ್ಯಾನ್ ಪ್ರತಿ ಪ್ರಸನ್ನಮುಖಃ ।
ಅದ್ವೈತಮತನಿವಿಷ್ಟೈಃ ಪಞ್ಚಾಯತನಾರ್ಚನಂ[1] ಪ್ರಕರ್ತವ್ಯಮ್ ॥
ಏವಂ ನಿರ್ಣಯಮತನೋದ್ ವೈದಿಕಮಾರ್ಗಪ್ರವರ್ತಕೋ ಯೋಗೀ।
ತಸ್ಮಾದ್ ಗುರುವರಚರಣೇ ಚೇತಃ ಸನ್ಧಾಯ ತನ್ಮತೇ ತಿಷ್ಠೇತ್ ॥೨೩॥
ಶ್ರೀಶಙ್ಕರಾಚಾರ್ಯಪದಾರವಿನ್ದಭಕ್ತೇಷು ಭದ್ರಾಣಿ ಭವನ್ತಿ ನಿತ್ಯಮ್
ಏದ್ರಾಂ ವಿಹಾಯಾಥ ಸಮಸ್ತಲೋಕೈರ್ಮುದ್ರಾ ತದೀಯಾ ಶಿರಸೈವ
ಧಾರ್ಯಾ ॥೨೪॥

ಶಙ್ಕರಗುರುವರಚರಿತಂ ನ್ಯಙ್ಕಮತೀನಾಂ ದುರಾಸದಂ ಭರಿತಮ್ ।
ಪರಮಾಮೃತರಸಪೂರ್ಣೈಃ ಪರಮಾನನ್ದೈಕದಾಯಿ ಪಠನೀಯಮ್ ॥

ಗುರುಪಾದಭಜನಸಂಭ್ರಮಸಮರಸಸುಖಭರಿತಮಾನಸಾಃ ಸರಸಾಃ ।
ಸಂಸೃತಿಮಹಾಸಮುದ್ರಂ ಸಂತೀರ್ಯಾನನ್ದರೂಪತಾಂ ಯಾನ್ತಿ ॥೨೬॥

ಇತಿ ಶ್ರೀ ಮಾರ್ಕಂಡೇಯಸಂಹಿತಾಯಾಂ ಶತಖಣ್ಡಾತ್ಮಿಕಾಯಾಂ
ದ್ವಿಸಪ್ತತಿತಮಖಣ್ಡೇ ಸಪ್ತಮಪರಿಸ್ಪನ್ದಃ

---

ಶ್ರೀದೇಶಿಕಃ ಪದ್ಮಪದಂ[2] ಸ್ವಶಿಷ್ಯಂ
ಪಾಷಣ್ಡಷಣ್ಡಾರ್ಥ (?) ಮತಿಪ್ರಚಣ್ಡಮ್ ।
ಶೃಙ್ಗಾದ್ರಿದೇಶೇ ಶ್ರಿತತುಙ್ಗಭದ್ರೇ
ನಿಯೋಜಯಾಮಾಸ ಸ ಶಙ್ಕರಾರ್ಯಃ ॥೧॥

ಸುರೇಶ್ವರಾಚಾರ್ಯವರಂ[3] ಸ್ವಶಿಷ್ಯಂ
ಕಾಞ್ಚೀಪುರೀಸುನ್ದರಕಾಮಕೋಟೌ ।
ಶ್ರೀಚನ್ದ್ರಮೌಲೀಶ್ವರಪೂಜನಾರ್ಥಂ
ನಿಯೋ.ಜ್ಯ ಚಕ್ರೇಽಸ್ಯ ಧರಾಧಿಪತ್ಯಮ್ ॥೨॥

ಶ್ರೀಕಾಞ್ಚೀಕಾಮಕೋಟೀನಿಲಯ
ಶಶಿಕಲೋತ್ತಂಸಪೂಜಾಧುರೀಣಂ ।

---

1. ಪಂಚಾಯತನಪೂಜಾಕ್ರಮವು ದಕ್ಷಿಣದೇಶದ ಸ್ಮಾರ್ತರಲ್ಲಿ ಪ್ರಚುರವಾಗಿದೆ ; ಭಾಷ್ಯಗಳಲ್ಲಿ ಆದರ ಪರಾಮರ್ಶವಿಲ್ಲ.

2. ಪದ್ಮಪಾದರನ್ನು ಶೃಂಗೇರಿಯಲ್ಲಿಟ್ಟರೆಂದು ಆನಂದಗಿರಿಯ ಒಂದು ಪಾಠ. ಚ. ಪು. ೨೨೦.

3, ಸುರೇಶ್ವರಾಚಾರ್ಯರನ್ನು ಪೂಜೆಗೆ ಇಟ್ಟರೆಂದು ಆಗಲೆ ಹೇಳಿದೆ. ಹಿಂದಿನ ಪರಿಸ್ಪಂದದ ೧೦ನೆಯ ಶ್ಲೋಕವನ್ನು ನೋಡಿ.

ಪಾರೀಣಂ ಶ್ರೀಕಲಾಯಾಃ
 ಪರಮಗುರುಪದಾಧೀಶ್ವರಂ ಯೋಗಿರಾಜಮ್ ।
ಯೇ ವಾ ನಾರ್ಚನ್ತಿ ಭೂಮೌ
 ಶುಭತರಪರಮಾದ್ವೈತಸಿದ್ಧಾನ್ತಮಾರ್ಗೋ-
ದ್ದ್ಯೋತಂ ಶ್ರೀರಾಜ್ಯಸಿಂಹಾಸನಪದಗ-
 ಮಹೋ ಪಾಮರಾಸ್ತೇ ಪತನ್ತಿ[1] ॥ ೩ ॥

ಯೇ ಸೇವನ್ತೇ ಗುರುಂ ತಂ
 ಸತತಮನುಗತಾ ಯೋಜನಾನಾಂ ಶತೇಽಪಿ
ಪ್ರಾಪ್ಯ ಸ್ಥಾನಂ ಪ್ರಕಾಮಂ
 ನಿರವಧಿಧನಧಾನ್ಯಾದ್ಯ(?) ರಾಜ್ಯಂ ಶ್ರಯನ್ತೇ ।
ಪುತ್ರಾನ್ ಪೌತ್ರಾನ್ ಪ್ರಪೌತ್ರಾನ್
 ದುಹಿತೃಜನಮಪಿ ಪ್ರೌಢಭಾಗ್ಯಂ ಚ ಭೋಗ್ಯಂ ।
ಯೋಗ್ಯಾಗಾರಾಣಿ ರಾಮಾಃ ಶರದ್ಯು
 (ಪ) ಮುಖೀಃ(?)ಮೋಕ್ಷಸಾಮ್ರಾಜ್ಯ ಲಕ್ಷ್ಮೀಮ್ ॥ ೪ ॥

ಕಾಞ್ಚೀಪೀಠಾಧಿಪಂ ಯೇ
 ಯತಿಪತಿಮಖಿಲಾಚಾರ್ಯಮಾಖಣ್ಡಲಶ್ರೀ-
ಸಂಪನ್ನಂ ಪನ್ನಗಾರಿಧ್ವಜವಿಧಿಹರ(?)
 ಭಿರ್ಭಾವ್ಯಮಾನಂ ಶರಣ್ಯಮ್ ॥
ತೇ ಸಾತತ್ಯಂ ರಮನ್ತೇ ಕಲಶಜಲಧಿ
 ಜ್ಯಾಽಽಯುರಾರೋಗ್ಯಯುಕ್ತಾ
ಸ್ಥಾನೇಷ್ವಾನನ್ದಭೂಮಸ್ವನವರತ
 ಶುಭೈಶ್ವರ್ಯಭಾಜೋ ಮಹೀಶಾಃ[2] ॥ ೫ ॥

ಯೇ ಚೋನ್ಮತ್ತಾನ್ತರಜ್ಞಾ ಗುರುವರಚರಣಾಮ್ಭೋಜಸೇವಾವಿಹೀನಾ
ಹೀನಾಸ್ತೇ ಸರ್ವಸೌಖ್ಯೈರ್ನಿರಯನಿಸತಯೋ ನಿನ್ದಿತಾಃ ಸರ್ವಲೋಕೈಃ ।
ಕೃತ್ವಾಕೃತ್ವಾನ್ಯದೇವಾರ್ಚನಮಪಿ ಸುಕೃತಾನ್ಯಾತತಾನ್ಯಾತ್ಮವಿದ್ಯಾ
ರಾಹಿತ್ಯಾದಾತ್ಮಹಾನಾದಹಹ ಕುಜನನಂ ಪ್ರಾಪ್ನುವನ್ತೀಹ ತೇ ವೈ ॥[3]

1. ಸುರೇಶ್ವರಾಚಾರ್ಯರು ಶ್ರೀವಿದ್ಯೆಯಲ್ಲಿ ಧುರೀಣರೆಂದು ಹೇಳಿ ಅವರನ್ನು ಕಾಂಚಿಯಲ್ಲಿಟ್ಟರೆಂದೂ ಇಲ್ಲಿ ಹೇಳಿದೆ.

2. ಕಾಂಚೀಪೀಠದ ಹೊಗಳಿಕೆಯ ಶ್ಲೋಕಗಳಿವು.

3. ಕಾಂಚಿಯ ಗುರುವನ್ನು ಪೂಜಿಸದೆ ಬೇರೆಯ ದೇವತೆಗಳನ್ನು ಪೂಜಿಸಿದವರಿಗೂ ಕುಜನ್ಮವಾಗುವದೆಂದು ಇಲ್ಲಿ ಹೇಳಿದೆ.

ತಸ್ಮಾತ್ ಸರ್ವಾತ್ಮನಾ ಸರ್ವಪುರುಷಾರ್ಥೈಕಹೇತವೇ ।
ಸೇತವೇ ಸರ್ವಧರ್ಮಾಣಾಂ ಗುರವೇ ಸ್ಪೃಹಯೇದ್ ಬುಧಃ ‖ ೭ ‖

ಇತಿ ಶ್ರೀ ಮಾರ್ಕಣ್ಡೇಯಸಂಹಿತಾಯಾಂ ಶತಖಣ್ಡಾತ್ಮಿಕಾಯಾಂ
ದ್ವಿಸಪ್ತತಿತಮಖಣ್ಡೇ- ಅಷ್ಟಮಪರಿಸ್ಪನ್ದಃ

ಮಾರ್ಕಂಡೇಯಸಂಹಿತೆಯ ಪೂರ್ಣಪ್ರತಿಯನ್ನು ನಾವು ನೋಡಿಲ್ಲ. ಈ ಗ್ರಂಥವೇನು ಪುರಾಣವೋ, ಕಾವ್ಯವೋ, ತಿಳಿಯದು. ಸಮಾಪ್ತಿವಾಕ್ಯದಿಂದ ಬಹಳ ದೊಡ್ಡ ಗ್ರಂಥವಾಗಿರಬೇಕೆಂದು ಕಲ್ಪಿಸಬೇಕಾಗಿದೆ. ಇದು ಸಂವಾದರೂಪವಾಗಿಲ್ಲ; ಪದ್ಯಗಳು ದೀರ್ಘವಾದ ಪಾದಗಳ ರೂಪದಲ್ಲಿ ಕಾವ್ಯದ ಶೈಲಿಯಲ್ಲಿವೆ. ಬಂಧವೂ ಅಷ್ಟು ಬಿಗಿಯಾಗಿಲ್ಲ. ಅಲ್ಲಲ್ಲಿ ಸ್ಖಾಲಿತ್ಯಗಳು ಕಾಣುತ್ತಿವೆ. ಬಲುಮಟ್ಟಿಗೆ ಕಾಂಚೀಪೀಠಕ್ಕೆ ಹೊಂದುವ ಆನಂದಗಿರೀಯಶಂಕರವಿಜಯಕ್ಕೆ ಒಪ್ಪಾಗಿರುವ ವಿಷಯಗಳೇ ಎದ್ದುಕಾಣುತ್ತಿವೆ.

ಇಲ್ಲಿ ಅದ್ವೈತಕ್ಕೆ ಅಷ್ಟು ಪ್ರಾಧಾನ್ಯವಿಲ್ಲ. ಮಂತ್ರಶಾಸ್ತ್ರ, ಶ್ರೀವಿದ್ಯೆ ಸ್ಮಾರ್ತರ ಶೈವಸಂಪ್ರದಾಯ, ಯೋಗಭೋಗಾದಿಲಿಂಗಗಳ ಸ್ಥಾಪನೆಯ ವಿವರ, ಕಾಂಚಿಯಲ್ಲಿ ಸುರೇಶ್ವರರನ್ನಿಟ್ಟ ವಿಚಾರ, ಕಾಂಚೀಪೀಠಕ್ಕೆ ಗೌರವವನ್ನು ತೋರಿಸದವರ ನಿಂದೆ, ಆ ಪೀಠವನ್ನು ಗೌರವಿಸುವವರ ಪ್ರಶಂಸೆ- ಇವುಗಳ ವಿಷಯವೇ ಮುಖ್ಯವಾಗಿರುವದರಿಂದ ಇದನ್ನು ಕಾಂಚೀಪೀಠದ ಸಂಪ್ರದಾಯದವರೇ ಆದರಿಸುತ್ತಿರುವದು ಸ್ವಾಭಾವಿಕವಾಗಿದೆ.

---

## (ಇ) ಪುರಾಣಾಂತರವಚನಗಳು

### (೧) ಲಿಂಗಪುರಾಣ

ನಿನ್ದನ್ತಿ ವೇದವಿದ್ಯಾಂ ಚ ದ್ವಿಜಾಃ ಕರ್ಮಾಣಿ ವೈ ಕಲೌ ।
ಕಲೌ ರುದ್ರೋ[1] ಮಹಾದೇವಃ ಶಙ್ಕರೋ ನೀಲಲೋಹಿತಃ ।
ಪ್ರಕಾಶತೇ ಪ್ರತಿಷ್ಠಾರ್ಥಂ ಧರ್ಮಸ್ಯ ವಿಕೃತಾಕೃತೇ ।
ಯೇ ತಂ ವಿಪ್ರಾ ನಿಷೇವನ್ತೇ ಯೇನ ಕೇನಾಪಿ ಶಙ್ಕರಮ್ ।
ಕಲಿದೋಷಾನ್ ವಿನಿರ್ಜಿತ್ಯ ಪ್ರಯಾನ್ತಿ ಪರಮಂ ಪದಮ್ ‖

ಪೂರ್ವಾರ್ಧ- ಅಧ್ಯಾಯ ೪೦-೨೦, ೨೧, ೨೨,

---

1. 'ದೇವೋ' ಎಂದು ಪಾ॥

## (೨) ಕೂರ್ಮಪುರಾಣ

ಕಲೌ ರುದ್ರೋ ಮಹಾದೇವೋ ಲೋಕಾನಾಮೀಶ್ವರಃ ಪರಃ |
ತದೇವ (?) ಸಾಧಯೇನ್ನೃಣಾಂ ದೇವತಾನಾಂ ಚ ದೈವತಮ್ ||
ಕರಿಷ್ಯತ್ಯವತಾರಂ[1] ಸ್ವಂ ಶಙ್ಕರೋ ನೀಲಲೋಹಿತಃ |
ಶ್ರೌತಸ್ಮಾರ್ತಪ್ರತಿಷ್ಠಾರ್ಥೇ[2] ಭಕ್ತಾನಾಂ ಹಿತಕಾಮ್ಯಯಾ ||
ಉಪದೇಕ್ಷ್ಯತಿ ತಜ್ಜ್ಞಾನಂ ಶಿಷ್ಯಾಣಾಂ ಬ್ರಹ್ಮಸಂಮಿತಮ್[3] |
ಸರ್ವವೇದಾನ್ತಸಾರಂ ಹಿ ಧರ್ಮಾನ್ (?) ವೇದಾನ್ತದರ್ಶನಾತ್[4] ||
ಯೇ ತಂ ಪ್ರೀತ್ಯಾ ನಿಷೇವನ್ತೇ ಯೇನಕೇನೋಪಚಾರತಃ |
ವಿಜಿತ್ಯ ಕಲಿಜಾನ್ ದೋಷಾನ್ ಯಾನ್ತಿ ತೇ ಪರಮಂ ಪದಮ್ ||

ಕೂರ್ಮ–ಅ. ೩೦–೩೨ರಿಂದ ೩೫

## (೩) ವಾಯುಪುರಾಣ

ಚತುರ್ಭಿಃ ಸಹ ಶಿಷ್ಯೈಸ್ತು ಶಙ್ಕರೋಽವತರಿಷ್ಯತಿ ||

## (೪) ಸೌರಪುರಾಣ

ಚತುರ್ಭಿಃ ಸಹ ಶಿಷ್ಯೈಶ್ಚ ಶಙ್ಕರೋಽವತರಿಷ್ಯತಿ ||
ವ್ಯಾಕುರ್ವನ್ ವ್ಯಾಸಸೂತ್ರಾಣಿ ಶ್ರುತೇರರ್ಥಂ ಯಥೋದಿತಮ್ |
ಸ ಏವಾರ್ಥಃ ಶ್ರುತೇರ್ಗ್ರಾಹ್ಯಃ ಶಂಕರಪ್ರತಿಪಾದಿತಃ ||

## (೫) ಭವಿಷ್ಯೋತ್ತರಪುರಾಣ

ಕಲ್ಯಾದೌ ದ್ವಿಸಹಸ್ರಾಂತೇ ಲೋಕಾನುಗ್ರಹಕಾಮ್ಯಯಾ |
ಚತುರ್ಭಿಃ ಸಹ ಶಿಷ್ಯೈಸ್ತು ಶಂಕರೋಽವತರಿಷ್ಯತಿ ||

೩೬ನೆಯ ಅಧ್ಯಾಯ

ವಿಶೇಷ : ಲಿಂಗಪುರಾಣ ಮತ್ತು ಕೂರ್ಮಪುರಾಣಗಳನ್ನು ನಾವು ನೋಡಿರುತ್ತೇವೆ. ವಾಯು, ಸೌರ, ಭವಿಷ್ಯೋತ್ತರ–ಇವುಗಳಿಗೆ ಮುಖ್ಯವಾಗಿ ಶ್ರೀಪ್ಪಲೂರು ಕೃಷ್ಣಸ್ವಾಮಯ್ಯರು (ಶ್ರೀ. ಶಂ. ಪು. ೧೭–೧೮) ಮತ್ತು ಬಲದೇವ ಉಪಾಧ್ಯಾಯ (ಬಲ. ಶಂ. ೧೫–೧೬)–ಇವರುಗಳ ಗ್ರಂಥಗಳೇ ನಮಗೆ ಮುಖ್ಯ ಆಧಾರ. ನಮಗೆ ಸಿಕ್ಕಿರುವ ಪಾಠಾಂತರಗಳನ್ನು ಕೆಳಗೆ ಕೊಟ್ಟಿದೆ. ಲಿಂಗಕೂರ್ಮವಚನವ್ಯಕ್ತಿಗಳಿಗೂ ಮತ್ತು ವಾಯುಕೂರ್ಮವ್ಯಕ್ತಿಗಳಿಗೂ ಇರುವ ಸಾಮ್ಯವು ಲಕ್ಷಿಸತಕ್ಕದ್ದಾಗಿದೆ.

---

1. 'ಅವತಾರಾಣಿ' ಎಂದು ಪಾ||
2. 'ಪ್ರತಿಷ್ಠಾರ್ಥಂ' ಎಂದು ಮುದ್ರಿತಪಾಠ. 3. 'ಬ್ರಹ್ಮಸಂಜ್ಞಿತಮ್'
4. 'ವೇದನಿದರ್ಶಿತಾನ್'

## ೨. ಆಚಾರ್ಯರುಗಳನ್ನು ನಿಂದಿಸುವ ಪುರಾಣಗಳು

### (೧) ಪದ್ಮಪುರಾಣ

(ಚರಿತ್ರೆ. ಪುಟ ೧೫)

ಶೃಣು ದೇವಿ ಪ್ರವಕ್ಷ್ಯಾಮಿ ತಾಮಸಾನಿ ಯಥಾಕ್ರಮಮ್ |
ಯೇಷಾಂ ಶ್ರವಣಮಾತ್ರೇಣ ಪಾತಿತ್ಯಂ ಜ್ಞಾನಿನಾಮಪಿ ||
ಪ್ರಥಮಂ ಹಿ ಮಯೈವೋಕ್ತಂ[1] ಶೈವಂ ಪಾಶುಪತಾದಿಕಮ್ |
ಮಚ್ಛಕ್ತ್ಯಾ[2] ವೇಶಿತೈರ್ವಿಪ್ರೈಃ ಸಂಪ್ರೋಕ್ತಾನಿ[3] ತತಃ ಪರಮ್[4] ||
ಕಣಾದೇನ ತು ಸಂಪ್ರೋಕ್ತಂ ಶಾಸ್ತ್ರಂ ವೈಶೇಷಿಕಂ ಮಹತ್ |
ಗೌತಮೇನ ತಥಾ ನ್ಯಾಯಂ ಸಾಂಖ್ಯಂ ತು ಕಪಿಲೇನ ವೈ ||
ದ್ವಿಜನ್ಮನಾ ಜೈಮಿನಿನಾ ಪೂರ್ವಂ ವೇದಮಪಾರ್ಥಕಮ್ |
ನಿರೀಶ್ವರೇಣ ವಾದೇನ ಕೃತಂ ಶಾಸ್ತ್ರಂ ಮಹತ್ತರಮ್[5] ||
ಧೀಷಣೇನ ತಥಾ ಪ್ರೋಕ್ತಂ ಚಾರ್ವಾಕಮತಿಗರ್ಹಿತಮ್ |
ದೈತ್ಯಾನಾಂ ನಾಶನಾರ್ಥಾಯ ವಿಷ್ಣುನಾ ಬುದ್ಧರೂಪಿಣಾ ||
ಬೌದ್ಧಶಾಸ್ತ್ರಮಸತ್ ಪ್ರೋಕ್ತಂ ನಗ್ನನೀಲಪಟಾದಿಕಮ್ |
ಮಾಯಾವಾದಮಸಚ್ಛಾಸ್ತ್ರಂ ಪ್ರಚ್ಛನ್ನಂ ಬೌದ್ಧಮೇವ ಚ[6] ||
ಮಯೈವ ಕಥಿತಂ ದೇವಿ ಕಲೌ ಬ್ರಾಹ್ಮಣರೂಪಿಣಾ |
ಅಪಾರ್ಥಂ ಶ್ರುತಿವಾಕ್ಯಾನಾಂ ದರ್ಶಯನ್ ಲೋಕಗರ್ಹಿತಮ್ ||
ಕರ್ಮಸ್ವರೂಪತ್ಯಾಜ್ಯತ್ವಮತ್ರ ಚ[7] ಪ್ರತಿಪಾದ್ಯತೇ |
ಸರ್ವಕರ್ಮಪರಿಭ್ರಂಶಾನ್ನೈಷ್ಕರ್ಮ್ಯಂ ತತ್ರ ಚೋಚ್ಯತೇ[8] ||
ಪರಾತ್ಮ[9] ಜೀವಯೋರೈಕ್ಯಂ ಮಯಾ ತು ಪ್ರತಿಪಾದ್ಯತೇ |
ಬ್ರಹ್ಮಣೋಽಸ್ಯ ಪರಂ ರೂಪಂ[10] ನಿರ್ಗುಣಂ ದರ್ಶಿತಂ[11] ಮಯಾ ||
ಸರ್ವಸ್ಯ ಜಗತೋಽಪ್ಯಸ್ಯ[12] ನಾಶನಾರ್ಥಂ[13] ಕಲೌ ಯುಗೇ |

---

1. 'ಮಯಾ ಚೋಕ್ತಮ್'
2. 'ಮಚ್ಛಕ್ತ್ಯಾವೇಶಿತೈಃ' 3. 'ಪ್ರೋಕ್ತಾನಿ ಚ' 4. 'ಶೃಣು'
5. ಈ ಶ್ಲೋಕವು ಪದ್ಮಪುರಾಣದಲ್ಲಿ ೭೫ನೆಯ ಶ್ಲೋಕವಾಗಿದೆ.
6. 'ಬೌದ್ಧಮುಚ್ಯತೇ' 7. 'ವೈ' ಎಂದು ಮುದ್ರಿತಪಾಠ
8. 'ಸರ್ವಕರ್ಮಪರಿಭ್ರಷ್ಟಂ ವೈಧರ್ಮ್ಯತ್ವಂ ತದುಚ್ಯತೇ'
9. 'ಪರೇಶ' ಎಂದು ಮುದ್ರಿತಪಾಠ.
10. 'ಸ್ವಯಂ' ಎಂದು ಮುದ್ರಿತಪಾಠ.
11. 'ವಕ್ಷ್ಯತೇ' ಎಂದು ಮುದ್ರಿತಪಾಠ.
12. 'ಅತ್ರ' ಎಂದು ಪಾ|| 13. 'ಮೋಹನಾರ್ಥಂ'

ವೇದಾರ್ಥವನ್ಮಹಾಶಾಸ್ತ್ರಂ ಮಾಯಾವಾದಮವೈದಿಕಮ್[1] ||
ಮಯೈವ ರಕ್ಷ್ಯತೇ ದೇವಿ ಜಗತಾಂ ನಾಶಕಾರಣಾತ್ |

ಉತ್ತರಖಂಡ– ಅಧ್ಯಾಯ ೨೬೪ರಲ್ಲಿ ೬೬ರಿಂದ ೭೫

ವಿಶೇಷ ; ಮೇಲಿನ ಶ್ಲೋಕಗಳನ್ನು ಸಾಂಖ್ಯಪ್ರವಚನಭಾಷ್ಯದ ಮೊದಲಲ್ಲಿ (ಸಾಂ. ಪ್ರ. ಪು. ೫–೬) ವಿಜ್ಞಾನಭಿಕ್ಷುವೆಂಬಾತನು ಉದಾಹರಿಸಿರುತ್ತಾನೆ. ಆತನು ಶಂಕರಾಚಾರ್ಯರ ಅದ್ವೈತಪ್ರಕ್ರಿಯೆಯನ್ನು ಖಂಡಿಸುವದರಲ್ಲಿ ಬಲವಾದ ಅಭಿನಿವೇಶವುಳ್ಳಾತನು. ಇಲ್ಲಿ (೧)ಪಾಶುಪತಾದಿಶೈವಶಾಸ್ತ್ರಗಳು, (೨) ವೈಶೇಷಿಕ, (೩) ನ್ಯಾಯ, (೪) ಸಾಂಖ್ಯ, (೫) ಪೂರ್ವಮೀಮಾಂಸೆ, (೬) ಬೌದ್ಧಶಾಸ್ತ್ರಗಳು– ಇವುಗಳನ್ನೆಲ್ಲ ತಾಮಸವೆಂದು ಹೇಳಿದ ಬಳಿಕ ಮಾಯಾವಾದವೆಂಬ ಅಸಚ್ಛಾಸ್ತ್ರವನ್ನು ಶಿವನೇ ಹೇಳಿರುತ್ತಾನೆಂದಿದೆ ! ಶಂಕರಾಚಾರ್ಯರ ಹೆಸರು ಇಲ್ಲಿಲ್ಲವಾದರೂ ಕರ್ಮತ್ಯಾಗ, ನಿರ್ಗುಣಬ್ರಹ್ಮಪ್ರತಿಪಾದನೆ, ಮಾಯಾವಾದ– ಇವೆಲ್ಲ ಅವೈದಿಕಗಳೆಂದು ಹೇಳಿರುವದರಿಂದ ಇದು ಆಚಾರ್ಯಮತದ ಪರಾಮರ್ಶವೇ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಈ ಸಕಲತಾಮಸದರ್ಶನಗಳನ್ನೂ ಕಿವಿಗೆ ಹಾಕಿಕೊಂಡಮಾತ್ರದಿಂದ ಜ್ಞಾನಿಗಳೂ (?) ಪತಿತರಾಗುವರೆಂದು ಇಲ್ಲಿ ಹೇಳಿದೆ !

ಈ ಅಧ್ಯಾಯದ ೪–೫ ಶ್ಲೋಕಗಳಲ್ಲಿ ಶಂಖ, ಚಕ್ರ, ಊರ್ಧ್ವಪುಂಡ್ರ –ಮುಂತಾದ ಹರಿಗೆ ಪ್ರಿಯತಮವಾದ ಚಿಹ್ನೆಗಳು ಯಾರಿಗಿಲ್ಲವೋ ಅವರು ಪಾಷಂಡಿಗಳು ಎಂದಿದೆ. ೧೯ರಿಂದ ೫೧ರವರೆಗಿನ ಶ್ಲೋಕಗಳಲ್ಲಿ ದೇವತೆಗಳಿಂದ ಜಯಿಸುವದಕ್ಕಾಗದೆ ಇದ್ದ ನಮುಚಿಯೇ ಮುಂತಾದ ದೈತ್ಯರುಗಳ ಮೋಹನಾರ್ಥವಾಗಿ ತಾಮಸಪುರಾಣಗಳನ್ನು ಮಾಡೆಂದೂ ಅಶುಚಿಯಾದ ಆಚಾರಗಳನ್ನು ಹೊರತೋರಿಸೆಂದೂ ವಿಷ್ಣುವು ಶಿವನಿಗೆ ಅಪ್ಪಣೆಮಾಡಿದಂತೆ ಬರೆದಿದೆ. ಇವೆಲ್ಲ ಯಾರೋ ಮತಾಂಧರಾದ ವೀರವೈಷ್ಣವರು ಸೇರಿಸಿರುವ ಭಾಗಗಳೆಂದು ಹೇಳದೆ ಗತ್ಯಂತರವಿಲ್ಲ. ಆದರೆ ಮಾಯಾವಾದವನ್ನು ಹಳಿದ ಭಾಗವನ್ನು ಸೇರಿಸಿದ ಶಂಕರದ್ವೇಷಿಗಳು ಯಾರೊ! ಪದ್ಮಪುರಾಣದಲ್ಲಿ ನಾಲ್ಕು ಸಂಸ್ಕರಣಗಳಾಗಿವೆಯೆಂದು ಜ್ವಾಲಾಪ್ರಸಾದಮಿಶ್ರರು (ಅ.ಪು.ಪು. ೧೦೪–೧೦೫) ಬರೆದಿದಾರೆ.

## (೨) ಮಧ್ವಪರಾಮರ್ಶಕಪುರಾಣವಾಕ್ಯಗಳು

ಕೂರ್ಮಪುರಾಣ (ಮುಷ್ಣಮಾಹಾತ್ಮ್ಯ), ಸ್ಕಾಂದಪುರಾಣ (ಮುಷ್ಣಮಾಹಾತ್ಮ್ಯ)– ಇವುಗಳಲ್ಲಿ ರಾಕ್ಷಸರು ಕಲಿಯುಗದಲ್ಲಿ ಮಾಡುವ ಮಿಥ್ಯಾಶಾಸ್ತ್ರಗಳನ್ನು ವಾಯುದೇವರು ಮಧ್ವಾಚಾರ್ಯರಾಗಿ ಅವತರಿಸಿ ಖಂಡಿಸುವರೆಂಬ ಭವಿಷ್ಯವನ್ನು ಹೇಳಿದೆಯಂತೆ. ನಮ್ಮಲ್ಲಿರುವ ಕೂರ್ಮಪುರಾಣದಲ್ಲಿ ಮುಷ್ಣಮಾಹಾತ್ಮ್ಯವಿಲ್ಲ.

ಸೌರಪುರಾಣ (೩೯,೪೦ನೆಯ ಅಧ್ಯಾಯಗಳಲ್ಲಿ) ಮಧ್ವಾಚಾರ್ಯರನ್ನು ನಿಂದಿಸುವ ವಾಕ್ಯಗಳಿವೆಯಂತೆ !

"ಮಧ್ವತಂತ್ರಮುಖಮರ್ದನವ್ಯಾಖ್ಯಾನ"ದ ೯–೧೦ನೆಯ ಪುಟಗಳನ್ನು ನೋಡಿ.

---

1. 'ಮಾಯಯಾ ಯದವೈದಿಕಮ್'

## (೩) ಮಧ್ವರಾಮಾನುಜರು ಕಲಿಯ ಅಮಾತ್ಯರಾದ ಕಾಮಕ್ರೋಧಾಂಶಾವತಾರರೆಂಬ ಕಥೆ

(ಸ್ಕಂದ, ಕೇದಾರಖಂಡ, ೬೧ನೆಯ ಅಧ್ಯಾಯ, ಯುಗಧರ್ಮಪ್ರಸ್ತಾವದಲ್ಲಿ ಕಲಿಧರ್ಮವನ್ನು ಭಗವಂತನು ಗರುಡನಿಗೆ ಹೇಳಿರುವದು)

ಕಾಮಸ್ತು ದ್ರಾವಿಡೇ ದೇಶೇ ವರ್ಧಮಾನೋ ಮಹಾದ್ಯುತಿಃ ।
ಕಲಿಪೂರುಷಸಂದೇಶಾತ್ ವಿಷ್ಣುಪಾಷಣ್ಡನಾಮಕಮ್ ॥
ವ್ಯಾಖ್ಯಾಸ್ಯತಿ ದುರಾತ್ಮಾಸೌ ಮೋಹಯಿತ್ವಾ ಜನಾನ್ ಭೃಶಮ್ ।
ಭಙ್ಕ್ತ್ವಾ ಸೂತ್ರಾಣಿ ಸರ್ವಾಣಿ ಬ್ರಹ್ಮಾದ್ವೈತಪರಾಣಿ ಚ ॥
ಶ್ರುತಿಸ್ಮೃತೀಸ್ತಥಾ ಭಙ್ಕ್ತ್ವಾ ದ್ವೈತೇ ಸಂಸ್ಥಾಪಯಿಷ್ಯತಿ ।
ಕಾರಯಿಷ್ಯತಿ ಪುಣ್ಡ್ರಾಣಿ ದ್ವಿಜಾದ್ಯೈಃ ಶ್ವೇತಮೃತ್ಸ್ನಯಾ ॥
ತಪ್ತಲೋಹೈರ್ದ್ವಿಜಾತೀನಾಂ ದಹಿಷ್ಯತಿ ಕಲೇವರಾನ್ ।
ತ್ಯಾಜಯಿಷ್ಯತಿ ಕರ್ಮಾಣಿ ವೈದಿಕಾನಿ ದುರಾತ್ಮವಾನ್ ॥
ಭಾಷಾಕೃತಪ್ರಬನ್ಧಾನಿ ಪಾಠಯಿಷ್ಯತಿ ಸರ್ವಶಃ ।
ಅಭೇದವಾದಿನಃ ಸಾಧೂನ್ ದೂಷಯಿಷ್ಯತಿ ದುರ್ಮತಿಃ ॥
ಕ್ರೋಧಃ ಕರ್ಣಾಟದೇಶೀಯಃ ಕಾಮಶಾಸ್ತ್ರಂ ಸಮಾಕ್ಷ್ಯ ಚ ।
ಸ್ವಯಂ ವ್ಯಾಖ್ಯಾಸ್ಯತೇ ಪುತ್ರ ತದ್ವಿರುದ್ಧಮತೇ ಸ್ಥಿತಃ ॥
ತತ್ತ್ವವಾದಸಮಾಖ್ಯಾಂ ಚ ಕೃತ್ವಾ ತಸ್ಮಿನ್ನಿಜಾಗಮೇ ।
ಶ್ರುತಿಸ್ಮೃತಿಪುರಾಣಾನಿ ಭಞ್ಜಯಿಷ್ಯತಿ ಸರ್ವಶಃ ॥
ಸ್ವಯಂ ಕರಿಷ್ಯತೇ ಧೀರಃ ಪುರಾಣಾನಿ ಶ್ರುತಿಸ್ಮೃತೀಃ ।
ಅಷ್ಟಾದಶಪುರಾಣೇಷು ಸ್ಮೃತಿಷ್ವಷ್ಟಾದಶಸ್ವಪಿ ॥
ಅದ್ವೈತನಿರತಂ ಸರ್ವಂ ವಾಕ್ಯಮುತ್ಪಾಟಯಿಷ್ಯತಿ ।
ಕಾರಯಿಷ್ಯತಿ ಪುಣ್ಡ್ರಾಣಿ ವೇಣುಪತ್ರಾಕೃತೀನಿ ಚ ॥
ಸ್ವಕಲ್ಪಿತಪುರಾಣಾನಿ ಖ್ಯಾಪಯಿಷ್ಯತಿ ಭೂತಲೇ ।
ತತ್ತ್ವವಾದಮತೇ ಸ್ಥಿತ್ವಾ ಕೇಚಿದ್ ಬ್ರಾಹ್ಮಣಬಾನ್ಧವಾಃ ॥
ದಾಹಯಿಷ್ಯನ್ತಿ ಗಾತ್ರಾಣಿ ತಪ್ತಲೋಹೈರ್ದ್ವಿಜಾಧಮಾನ್ (ಮಾಃ ?) ।
ದಗ್ಧದೇಹಾಶ್ಚ ತೇ ಸರ್ವೇ ತ್ಯಕ್ತವೈದಿಕಸತ್ಕ್ರಿಯಾಃ ॥
ಬ್ರಾಹ್ಮಣಾನೇವ ನಿನ್ದನ್ತಃ ಶ್ರಾದ್ಧಯಜ್ಞಾನ್ ಮಹಾರುಷಃ ।
ದುರಾತ್ಮಾನೋ ದುರಾಚಾರಾಃ ಕ್ರಿಮಿಕೂಪೇ ಭಯಙ್ಕರೇ ॥
ಪತಿಷ್ಯನ್ತಿ ನ ಸಂದೇಹೋ ಭೋಕ್ಷ್ಯನ್ತೇಽಪಿ ಚ ಯಾತನಾಃ ।

—ಶಂಕರಾಶಂಕರಭಾಷ್ಯವಿಮರ್ಶಃ. ಪು. ೩-೪

"ವೆಲ್ಲಂಕೊಂಡೋಪನಾಮಕ ರಾಮರಾಯಕವೀಂದ್ರ"ನೆಂಬಾತನು ರಚಿಸಿರುವ ಗ್ರಂಥದಲ್ಲಿ ಬರೆದಿರುವಂತೆ ಈ ಮೇಲಿನ ಶ್ಲೋಕಗಳನ್ನು ಬರೆದುಕೊಂಡಿದೇವೆ.

ವಿಶೇಷ: ಈ ಶ್ಲೋಕಗಳಲ್ಲಿ ರಾಮಾನುಜರನ್ನು ಕಾಮನ ಅಂಶವೆಂದೂ ಮಧ್ವಾಚಾರ್ಯರನ್ನು ಕ್ರೋಧನ ಅಂಶವೆಂದೂ ವರ್ಣಿಸಿಹೆ. ಈ ಇಬ್ಬರು ವೈಷ್ಣವಾಚಾರ್ಯರ ಮತವನ್ನು ಸಹಿಸದೆ ಯಾವನೋ ಮತಾಂಧನು ಈ ಶ್ಲೋಕಗಳನ್ನು ಪುರಾಣದಲ್ಲಿ ಸೇರಿಸಿರಬೇಕೆಂಬುದು ಸ್ಪಷ್ಟ. ನಾವು ನೋಡಿರುವ ಸ್ಕಾಂದಪುರಾಣದ ಮೊದಲನೆಯ ಮಾಹೇಶ್ವರಖಂಡದ ಭಾಗವಾದ ಕೇದಾರಖಂಡದಲ್ಲಿ ೩೫ ಅಧ್ಯಾಯಗಳಿವೆ. ಅದರಲ್ಲಿ ಯುಗಧರ್ಮದ ಪ್ರಸ್ತಾಪವೇ ಇಲ್ಲ! ಆದ್ದರಿಂದ ರಾಮರಾಯಕವೀಂದ್ರನು ಹೇಳುವ ಕೇದಾರಖಂಡವು ಇದಲ್ಲವೆಂದಾಯಿತು. ಉಪಪುರಾಣವಾದ ಸ್ಕಾಂದಪುರಾಣವು ಮತ್ತೊಂದಿದೆಯಂತೆ. ಅದರಲ್ಲೇನಾದರೂ ಈ ಭಾಗವಿದೆಯೋ ಇಲ್ಲವೋ ತಿಳಿಯದು.

## (೪) ಸಂಸ್ಕೃತಚಂದ್ರಿಕೆ

ಈ ಹೆಸರಿನ ಪತ್ರಿಕೆಯ ಎರಡು ಜೀರ್ಣವಾದ ಹಾಳೆಗಳು ನಮಗೆ ದೊರೆತಿರುತ್ತವೆ. ಅದರಲ್ಲಿ ಹೀಗಿದೆ :—

ಸ್ಕಾಂದಪುರಾಣ ಉತ್ತರಕಾಂಡದಲ್ಲಿ ಈ ಕೆಳಗಿನ ಶ್ಲೋಕಗಳಿವೆಯಂತೆ:

ಸ್ಕಂದ ಉವಾಚ–
ಮಣಿಮತ್ಪೂರ್ವಕಾ ದುಷ್ಟಾ ದೈತ್ಯಾ ಆಸನ್ ಕಲೌ ಯುಗೇ |
ತೇ ಕುಶಾಸ್ತ್ರಂ ಪ್ರಕುರ್ವನ್ತೋ ಹರಿಮಾಯಾವಿರೋಧಿನಃ ||
ತೇಷಾಂ ಮಧ್ಯೇ ಸಂಕರಸ್ತು ಪೂರ್ವಂ ಯೋ ಮಣಿಮಾನ್ ಖಲಃ |
ಸೌಗನ್ಧಿಕವನೇ ದಿವ್ಯೇ ಭೀಮಸೇನಹತೋಽಸುರಃ ||
ಯಃ ಕ್ರೋಧತನ್ತ್ರಕೋ ದುಷ್ಟೋ ಮಿಥ್ಯಾಶಾಸ್ತ್ರಂ ವದನ್ ಪುನಃ |
ಕೃಷ್ಣೇ ಭೀಮೇ ಚ ವಿದ್ವೇಷಂ ಕುರ್ವನ್ ಭೂಮಾವಜಾಯತ ||
ಕಾಲಡೀಗ್ರಾಮಕೇ ರುದ್ರವರಾಜ್ಜಗದ್ವಿಮೋಹಯನ್ |
ಬೌದ್ಧಶಾಸ್ತ್ರಪರೋ ವಿಪ್ರೋ ಯಃ ಕಶ್ಚಿದ್ ದ್ವಾಪರಶಿಷ್ಯಕಃ ||
ಸ ಸಂಕರಸ್ಯ ಸಂನ್ಯಸ್ಯ ತಸ್ಮಾತ್ಸಂನ್ಯಾಸರೂಪಿಣಃ |
ವೇದಾನ್ತಮತಮಿತ್ಯೇತದ್ದುಷ್ಟಶಾಸ್ತ್ರಂ ಚಕಾರ ಹ ||

–ಎಂಬುದಾಗಿ ಶಂಕರಾಚಾರ್ಯರನ್ನು ನಿಂದಿಸುವ ವಾಕ್ಯಗಳನ್ನು ವೇದವ್ಯಾಸರು ತಮ್ಮ ಪುರಾಣಗಳಲ್ಲಿ ಬರೆದಿರುವದು ಸರಿಯೆ ? ಎಂದು ಒಬ್ಬ ಮಾಧ್ವಜಿಜ್ಞಾಸುವು ಕೇಳಿದ್ದಕ್ಕೆ ಪತ್ರಿಕಾಸಂಪಾದಕರು ಕೊಟ್ಟಿರುವ ಉತ್ತರದಲ್ಲಿ ಅದೇ ಸ್ಕಂದಪುರಾಣದ ಕೇದಾರಖಂಡದಲ್ಲಿ "ಕ್ರೋಧಃ ಕರ್ಣಾಟದೇಶೀಯಃ" ಎಂಬ ಶ್ಲೋಕಗಳನ್ನು ನೋಡು– ಎಂದು ಬರೆದಿದ್ದಾರೆ. ಈ ಶ್ಲೋಕಗಳು ಪುಟ ೩೮೪ರಲ್ಲಿ ನಾವು

ಕೊಟ್ಟಿರುವ ಶ್ಲೋಕಗಳಂತೆಯೇ ಇವೆ. ಜೊತೆಗೆ ಇನ್ನೊಂದು ಶ್ಲೋಕವನ್ನೂ ಹೆಚ್ಚಾಗಿ ಕೊಟ್ಟಿದ್ದಾರೆ. ಅದು ಹೀಗಿದೆ :

ಧೃತ್ವಾ ಕೈರಾತವೇಷಂ ಮನಸಿಜರಿಪುಣಾ
ದಾನವೋ ಮೂಕನಾಮಾ |
ರಕ್ಷಾರ್ಥಂ ಪಾಣ್ಡುಸೂನೋಃ ಪ್ರಕಟಕಿಟವಪುಃ
ಯೋ ಹತಃ ಪೂರ್ವಮದ್ರೌ ||
ಸೋಽಯಂ ಪಾಷಣ್ಡವಾದೀ ಸಮಜನಿ ತುಲವಃ
ಕ್ರೋಧನೋ ನಿಷ್ಕ್ರಿಯಾರ್ಥಂ |
ಗರ್ಭೇ ಮಾತ್ಸರ್ಯಬುದ್ಧಿರ್ಧರಣಿತಲಗತೋ
ಭೇದವಾದಾನ್ ಜಜಲ್ಪ ||

– ಎಂದೂ ಇದೆಯಂತೆ !

ಈ ಪತ್ರಿಕೆಯ ಎಲ್ಲಾ ಹಾಳೆಗಳೂ ನಮಗೆ ದೊರಕಿಲ್ಲವಾದ್ದರಿಂದ ಹೆಚ್ಚಿಗೆ ಏನೂ ಹೇಳಲು ಅವಕಾಶವಿಲ್ಲ. ಇವೆಲ್ಲ ಮತಾಂಧರ ಕುಕಲ್ಪನೆಗಳೆಂಬುದಂತೂ ಸ್ಪಷ್ಟ.

---

## ೩. ಪರಮತದವರ ಅಭಿಪ್ರಾಯಗಳು

### (೧) ಮಧ್ವಾಚಾರ್ಯರ ಮಹಾಭಾರತ-ತಾತ್ಪರ್ಯನಿರ್ಣಯ

ತತ್ರಾಸುರಾಂಶ್ಚೈವ ಬಹೂನಸತ್ಯಂ
ನಿರೀಶ್ವರಂ ಚಾಪ್ರತಿಷ್ಠಂ ಚ ಲೋಕಮ್ |
ಸಿದ್ಧೋಽಹಮೀಶೋಽಹಮಿತಿ ಬ್ರುವಾಣಾನ್
ಗುಣಾನ್ವಿಷ್ಣೋಃ ಖ್ಯಾಪಯನ್ಪ್ರಾವದತೋಽಜೈತ್ || ೨೨-೩೦೪

[ಈ ಶ್ಲೋಕದಲ್ಲಿ ಗೀತೆಯಲ್ಲಿ ಹೇಳಿರುವ ಆಸುರಸಂಪತ್ತಿನವರ ಸ್ವಭಾವ ವನ್ನು ಸೌಗಂಧಿಕಾವನದಲ್ಲಿದ್ದ ರಾಕ್ಷಸರಿಗೆ ಅಂಟಿಸಿ ಅವರು 'ನಾನು ಸಿದ್ಧನು', 'ನಾನೇ ಈಶ್ವರನು'–ಎನ್ನುತ್ತಿದ್ದರೆಂದು ಹೇಳಿದೆ. ರಾಕ್ಷಸರಿಗೂ ಭೀಮಸೇನ ನಿಗೂ ಸಗುಣನಿರ್ಗುಣವಿಷಯದಲ್ಲಿಯೂ ಜೀವೇಶ್ವರಭೇದಾಭೇದಗಳ ವಿಷಯ ದಲ್ಲಿಯೂ ವಾದವಾದಂತೆ ಕಲ್ಪಿಸಿದೆ.]

ಅಗ್ರೇ ನಿಧಾಯ ಮಣಿಮನ್ತಮಜೇಯಮುಗ್ರಂ
ಶರ್ವೋರ್ವರಾದ್ವಿವಿಧಶಸ್ತ್ರಮಹಾಭಿವೃಷ್ಟ್ಯಾ !
ತಾನ್ ಸರ್ವರಾಕ್ಷಸಗಣಾನ್ ಮಣಿಮತ್ಸಮೇತಾನ್
ಭೀಮೋ ಜಘಾನ ಸಪದಿ ಪ್ರವರೈಃ ಶರಾಗ್ರೈಃ || ೩೧೫ ||

ತೇ ಹತಾ ಭೀಮಸೇನೇನ ಪ್ರಾಪುರನ್ಧಂತಮೋಽಖಿಲಾಃ ॥ ೩೧೭ ॥
ಹತಾಃ ಸೌಗನ್ಧಿಕವನೇ ಮಣಿಮಾಂಶ್ಚ ಪುನಃ ಕಲೌ ।
ಜಾತೋಃ ಮಿಥ್ಯಾಮತಿಂ ಸಮ್ಯಗಾಸ್ತೀರ್ಯಾಪ ತಮೋಽಧಿಕಮ್ ॥ ೩೧೮

[ಇಲ್ಲಿ ಮಣಿಮಂತನು ಮಿಕ್ಕ ಪದ್ಮತ್ರಯಸಂಖ್ಯಾತರಾಕ್ಷಸರೊಡನೆ ಹತನಾಗಿ ಕಲಿಯುಗದಲ್ಲಿ ಹುಟ್ಟಿ ಮಿಥ್ಯಾಮತಿಯನ್ನು ಚೆನ್ನಾಗಿ ಹರಡಿ ಅಧಿಕವಾಗಿ ಅಂಧಂತಮಸ್ಸನ್ನು ಹೊಂದಿದನೆಂದಿದೆ. ಶಂಕರಾಚಾರ್ಯರ ಜಗನ್ಮಿಥ್ಯಾವಾದವು ಮಣಿಮಂತನದೆಂದು ಧ್ವನಿಯಿಂದ ಸೂಚಿಸಿದೆ. ಈ ಅಭಿಪ್ರಾಯಕ್ಕೆ ಭಾರತದಲ್ಲಿ ಆಧಾರವೇನೂ ಇಲ್ಲ.]

## (೨) ಮಣಿಮಂಜರಿ

ಮಧ್ವಾಚಾರ್ಯರ ಪ್ರಿಯಶಿಷ್ಯ ತ್ರಿವಿಕ್ರಮಪಂಡಿತಾಚಾರ್ಯರು ಶಕೆ ೧೧೮೦ರ ಕೊನೆಯ ಭಾಗದಲ್ಲಿ ರಾಣಿಬೆನ್ನೂರು ತಾಲ್ಲೂಕು ಕೊಡೆಯಾಲಗ್ರಾಮದಲ್ಲಿ ಲಿಕುಚನೆಂಬ ಮಹಾಪಂಡಿತನ ವಂಶದಲ್ಲಿ ಹುಟ್ಟಿದರಂತೆ. ಮಧ್ವಾಚಾರ್ಯರೊಡನೆ ೧೫ ದಿನಗಳು ವಾದವನ್ನು ಮಾಡಿ ಸೋತಬಳಿಕ ದ್ವೈತಿಗಳಾದರಂತೆ. ಇವರ ಮಗ ನಾರಾಯಣಪಂಡಿತನೆಂಬಾತನು[1] ಬರೆದ "ಮಣಿಮಂಜರಿ" ಯಲ್ಲಿ ಮಣಿಮಂತನು ಶಂಕರಾಚಾರ್ಯರಾಗಿ ಮಾಯಾವಾದವನ್ನು ಹರಡಿದ ಬಗೆಯನ್ನು ವಿಸ್ತಾರವಾಗಿ ವರ್ಣಿಸಿದೆ.

ಈ ಗ್ರಂಥದ ಮೊದಲನೆಯ ನಾಲ್ಕು ಸರ್ಗಗಳಲ್ಲಿ ರಾಮಾಯಣಭಾರತಗಳ ಕಥೆಯು ಸಂಗ್ರಹವಿದೆ. ಹನುಮಂತನು ರಾಮಕಾರ್ಯಕ್ಕಾಗಿಯೂ ಭೀಮನು ಕೃಷ್ಣಕಾರ್ಯಕ್ಕಾಗಿಯೂ ದೈತ್ಯರನ್ನು ಸಂಹರಿಸಿದಂತೆ ಮಧ್ವಾಚಾರ್ಯರು ದೈತ್ಯರಾದ ಅದ್ವೈತಿಗಳನ್ನು ವಾಗ್ಯುದ್ಧದಲ್ಲಿ ಸೋಲಿಸಿದರೆಂದು ತಿಳಿಸುವದಕ್ಕಾಗಿ ಈ ಭಾಗವು ಬಂದಿದೆಯೆಂಬುದು ನಿಃಸಂಶಯ. ಮಧ್ವಾಚಾರ್ಯರು ತಾವು ಹನುಮಂತ ಮತ್ತು ಭೀಮ- ಇವರ ಅವತಾರವೆಂತ ಹೇಳಿಕೊಂಡಿರುವದು ಈ ಕಥೆಗೆ ಆಧಾರವಾಯಿತು.

ಅಸುರರು ರಹಸ್ಯವಾಗಿ ಆಲೋಚನೆಮಾಡಿ ಮಣಿಮಂತನನ್ನು ಕುರಿತು 'ಅಣ್ಣ, ಭೂಮಿಯಮೇಲೆ ಹುಟ್ಟಿ ವಿದ್ಯಾವೇದಪುರಾಣಗಳನ್ನು ಹೊಲಗೆಡಿಸಿ ವಿಷ್ಣುಗುಣಗಳನ್ನು ದೂಷಿಸು, ವಿಷ್ಣುವಿಗೆ ಜೀವೈಕ್ಯವನ್ನು ಹೇಳು. ಈಗ ಭೀಮನ ಅಂಜಿಕೆಯಿಲ್ಲ' ಎಂದು ಪ್ರೋತ್ಸಾಹಿಸಿ (೫-೧೯) ಪರತೀರ್ಥರೆಂಬ

1. ಈ ಪಂಡಿತನ ವಂಶದವರು ಈಗಲೂ ತುಳುವದೇಶದಲ್ಲಿದಾರೆಂದೂ ಮಾಧ್ವಮತವನ್ನು ಬಿಟ್ಟು ಮತ್ತೆ ಸ್ಮಾರ್ತರಾಗಿದಾರೆಂದೂ ತಿಳಿಯಬಂದಿರುವದಾಗಿ ಸೋಮನಾಥಯ್ಯನವರು (ಸೋ. ಶಂ. ಪು. ೨೨೬) ಬರೆದಿದಾರೆ. ಅದಕ್ಕೆ ಆಧಾರವೇನೋ ತಿಳಿಯಲಿಲ್ಲ.

ತಪಸ್ವಿಗಳಾದ ಯತಿಗಳನ್ನು ಆಶ್ರಯಿಸಿ ಅದ್ವೈತವನ್ನು ಹರಡಿದರೆ ಜನರಲ್ಲಿ ಸಂಭಾವಿತನಾಗುವೆ ಎಂದು (೫-೨೨) ತಿಳಿವಳಿಕೆಹೇಳಿದರು. ಮಣಿಮಂತನು ಶಂಕರಾಚಾರ್ಯರಾಗಿ ಹುಟ್ಟಿದನೆಂಬುದನ್ನು 'ಪಾದತಲೋಟಜ' (೬-೫೫), 'ಪತ್ತೆಲಜನ್ಮನಾ' (೮-೧)-ಎಂಬ ವಿಶೇಷಗಳಿಂದ ಗ್ರಂಥಕರ್ತನು ಸೂಚಿಸಿರುತ್ತಾನೆ. ಆದ್ದರಿಂದ ಮಧ್ವತೀರ್ಥರೆಂಬ ವೈಷ್ಣವಸಂನ್ಯಾಸಿಗಳ ಕಾಲವನ್ನು ಗೊತ್ತುಮಾಡಿದರೆ ನಾರಾಯಣಪಂಡಿತನಿಗೆ ಅಭಿಮತರಾಗಿರುವ ಶಂಕರಾಚಾರ್ಯರು ಯಾವ ಕಾಲದವರೆಂಬುದನ್ನು ನಿರ್ಣಯಿಸುವದಕ್ಕೆ ಸಹಾಯವಾಗುವಂತಿದೆ.

ಗೋವಿಂದಭಗತ್ಪಾದರ ಕಥೆಯನ್ನು ೫ನೆಯ ಸರ್ಗದಲ್ಲಿ ವರ್ಣಿಸಿರುವದು ಹೀಗೆ !

ತತೋ ಗೋವಿನ್ದನಾಮಾಭೂದ್ದ್ವಿಜೋ ವಿದ್ಯಾವಿಶಾರದಃ ।
ಸ ಚತುರ್ವರ್ಣಜಾಃ ಕನ್ಯಾ ಊಢ್ವಾ ಪುತ್ರಾನಜೀಜನತ್ ॥ ೩೧ ॥
ಶಬರೋ ವಿಕ್ರಮಾದಿತ್ಯೋ ಹರಿಶ್ಚನ್ದ್ರೋಽಥ ಭರ್ತೃಹಾ ।
ಇತ್ಯೇತೇ ಕೋವಿದಾ ಆಸನ್ ಧೃತವರ್ಣಾಶ್ರಮವ್ರತಾಃ ॥ ೩೨ ॥

"ಪತಂಜಲಿಚರಿತ"ವನ್ನನುಸರಿಸಿ ಹಿಂದೆ (೮೨ನೆಯ ಪುಟದಲ್ಲಿ) ಕೊಟ್ಟಿರುವ ವಿವರದಲ್ಲಿ ಗೋವಿಂದಭಗವತ್ಪಾದರಿಗೆ ಪೂರ್ವಾಶ್ರಮದಲ್ಲಿ ಚಂದ್ರಶರ್ಮನೆಂದು ಹೆಸರು. ಆತನಿಗೆ ವರರುಚಿ, ವಿಕ್ರಮ, ಭಟ್ಟಿ, ಭರ್ತೃಹರಿ-ಎಂಬ ಹೆಸರಿನ ಮಕ್ಕಳಾದರು ಎಂದಿರುವಲ್ಲಿ ಇಲ್ಲಿ ಶಬರ, ವಿಕ್ರಮಾದಿತ್ಯ, ಹರಿಶ್ಚಂದ್ರ, ಭರ್ತೃಹರಿ- ಎಂಬ ಮಕ್ಕಳನ್ನು ಕಲ್ಪಿಸಿದೆ. ಶಬರನು ಜೈಮಿನಿಯ ಸೂತ್ರಗಳಿಗೆ ಭಾಷ್ಯವನ್ನು ಬರೆದನು, ವಿಕ್ರಮಾದಿತ್ಯನು ರಾಜ್ಯವನ್ನಾಳಿದನು, ಹರಿಶ್ಚಂದ್ರನು ದೇವತೆಗಳಿಂದ ಆಯುರ್ವೇದ(?)ವನ್ನು ಕಲಿತುಕೊಂಡನು, ಭರ್ತೃಹರಿಯು ಯಜ್ಞಹೃದಯವನ್ನು (?) ಅರಿತುಕೊಂಡನು ; ಶಬರನಿಗೆ ಭಟ್ಟಕುಮಾರ, ಭಟ್ಟನಾರಾಯಣ ಎಂದು ಇಬ್ಬರು ಮಕ್ಕಳು (೫-೩೮ರಿಂದ ೩೬). ಹೀಗೆ ಪಂಡಿತನು ಕಲ್ಪಿಸುವದಕ್ಕೆ ಯಾವ ಆಧಾರವಿತ್ತೋ ತಿಳಿಯದು.

ಕುಮಾರಿಲಭಟ್ಟನು ಬೌದ್ಧರನ್ನು ಸೋಲಿಸಿದ ಬಳಿಕ ಅವರು ಮೊದಲೇ ಒಪ್ಪಿದಂತೆ ರಾಜಾಜ್ಞೆಯಿಂದ ಅವರಿಗೆ ಅಗ್ನಿಪ್ರವೇಶವನ್ನು ಮಾಡಿಸಿದನು. ಬೌದ್ಧರಲ್ಲಿ ಕೆಲವರು ಹಡಗನ್ನು ಹತ್ತಿ ದ್ವೀಪಾಂತರಕ್ಕೆ ಹೋದರು ; ಕೆಲವರು ಅಲ್ಲಲ್ಲಿ ಅಡಗಿಕೊಂಡರು, ಬಕ್ಕನೇ ಮೊಲಾದ ಕೆಲವರು ವೇಷಾಂತರದಿಂದ ರಾಜ್ಯದ ಹೊರಪ್ರಾಂತಕ್ಕೆ ಹೋದರು (೫-೩೮ರಿಂದ೫೧)- ಎಂದು ತಿಳಿಸಿ ಐದನೆಯ ಸರ್ಗವನ್ನು ಮುಗಿಸಿರುತ್ತದೆ.

ಆರನೆಯ ಸರ್ಗದಲ್ಲಿ ನಾರಾಯಣಪಂಡಿತನು ಭಾರವಿ, ಪ್ರಭಾಕರ, ಮಾಘ, ವರರುಚಿ, ಬಾಣ, ಮಯೂರ, ಕಾಲಿದಾಸ, ದಂಡಿ, ಉಂಬೇಕ

ಮಣ್ಡನ, ರೇಫಣ–ಎಂಬಿವರನ್ನು (೬–೨ರಿಂದ ೫) ಶಾಸ್ತ್ರಜ್ಞರೆಂದು ಹೆಸರಿಸಿ ಮೀಮಾಂಸಾಶಾಸ್ತ್ರದ ವಿಷಯಕ್ಕೆ ತನಗಿದ್ದ ತಿಳಿವಳಿಕೆಯ ಮಟ್ಟವನ್ನು ಹೊರ ಪಡಿಸಿಕೊಂಡಿರುತ್ತಾನೆ.

ಶಂಕರರ ಜನ್ಮವು ಬ್ರಾಹ್ಮಣಿಯಲ್ಲಿ ಜಾರನಿಂದ ಆಯಿತೆಂದು ಈತನು ಹೇಳಿರುವದನ್ನು ಚರಿತ್ರೆಯ (೪೪ನೆಯ ಪುಟದ)ಲ್ಲಿ ಕೊಟ್ಟಿರುತ್ತೇವೆ ; ಹೆಸರನ್ನು ಸಂಕರನೆಂಬ ಅಶ್ಲೀಲಶಬ್ದದಿಂದ ಕರೆದಿರುವ ಈತನ ವಿವೇಕವನ್ನೂ ಅಲ್ಲಿ ವಿಮರ್ಶಿಸಿರುತ್ತೇವೆ. ಶಂಕರಾಚಾರ್ಯರ ಮನಸ್ಸು ತಾಮಸವೆಂದು ತಿಳಿಸುವದಕ್ಕೆ ಒಂದು ಕಥೆಯನ್ನು ಈತನು ಕಲ್ಪಿಸಿರುತ್ತಾನೆ: ಐದಾರು ಬದನೆಯಕಾಯಿಗಳನ್ನು ತೆಗೆದು ಕೊಂಡು ಬಾ ಎನ್ನಲು ಶಂಕರನು ಒಂದೊಂದು ಬದನೆಕಾಯಿಯೂ ಒಂದೊಂದೇ; ಎರಡನೆಯದಿಲ್ಲವೇ ಇಲ್ಲವಲ್ಲ ! (೬–೧೦) ಎಂದುಕೊಂಡನಂತೆ. ಅವನಿಗೆ ತಾಯಿಯು ತಾಮಸಪದಾರ್ಥಗಳನ್ನು ತಿನ್ನಿಸಿದ್ದರಿಂದ ಇಂಥ ತಾಮಸಬುದ್ಧಿಯುಂಟಾಯಿತಂತೆ ! 'ಏಕಮೇವಾದ್ವಿತೀಯಮ್' ಎಂಬ ಶ್ರುತಿಯ ಅರ್ಥವನ್ನು ಅದ್ವೈತಿಗಳು ಹೀಗೆ ಅವಿವೇಕರೀತಿಯಿಂದ ಮಾಡುತ್ತಾರೆಂಬುದನ್ನು ತಿಳಿಯುವ ಈತನ ಸೂಕ್ಷ್ಮಮತಿಯೂ ತವಕವೂ ಇಲ್ಲಿ ಸೇರಿರುತ್ತವೆ. ಹುಡುಗನು ದಡ್ಡನೆಂದ ಮರುಕ್ಷಣದಲ್ಲಿಯೇ 'ಈ ಜಾಣನಾದ ವಾಗ್ಮಿಯಾದ ಹುಡುಗನಿಗೆ' (೬–೧೩) ಒಬ್ಬನು ಉಪನಯನವನ್ನು ಮಾಡಿಸಿದನೆಂದಿರುವದರಿಂದ ದಡ್ಡನೆಂದಿರುವದು ಅಸೂಯಾ ಮಾತ್ರದ ಫಲವೆಂದಾಗುತ್ತದೆ ; ಆಚಾರ್ಯರು ದಡ್ಡರೂ ಜಾಣರೂ ಏಕಕಾಲಕ್ಕೆ ಆಗಿರಲಾರರಷ್ಟೆ ? ಅವರು ಸೌರಾಷ್ಟ್ರಕ್ಕೆ (೬–೧೩)ಹೋಗಿ ಶಾಸ್ತ್ರಾಭ್ಯಾಸವನ್ನು ಮಾಡಿದರೆಂದಿರುವದಕ್ಕೆ ಆಧಾರವು ಗ್ರಂಥಕರ್ತನಿಗೆ ಮಾತ್ರವೇ ಗೊತ್ತು.

ಶಂಕರರು ಪರಮಹಂಸರಾದ ಬಗೆಯನ್ನು ಈ ನಾರಾಯಣನು ವರ್ಣಿಸಿರುವದು ಇನ್ನೂ ಸೊಗಸಾಗಿದೆ. ಉತ್ತರದೇಶಕ್ಕೆ ಹೋಗುತ್ತಿರುವ ಅವರ ಜನಿವಾರವು ನದಿಯ ಪ್ರವಾಹದಿಂದ ಕೊಚ್ಚಿಹೋಯಿತಂತೆ. ಆಗ 'ಎಲೈ ಸೂತ್ರವೆ, ನಿನ್ನನ್ನು ನಾನು ಮೊದಲೇ ಬಿಟ್ಟಿದ್ದೆನು ; ಕರ್ಮವಿಲ್ಲದ ನನಗೆ ನಿನ್ನಿಂದೇನಾಗಬೇಕು ?' ಎಂದುಕೊಂಡು ಬೇಗನೆ ಮುಂದಕ್ಕೆ ಹೋಗಿಬಿಟ್ಟರಂತೆ! ಹೀಗೆ ಸೂತ್ರಹೀನನಾಗಿ 'ಪರತೀರ್ಥರ' ಬಳಿಗೆ ಹೋಗಲು ಅವರು ಈತನನ್ನು ಮಾತನಾಡಿಸಲೇ ಇಲ್ಲ. ಆಮೇಲೆ ಗೋದಾವರಿಯನ್ನು ದಾಟಿ ಶಂಕರರು ಬದರಿಗೆ ಹೋಗಿ ಪರತೀರ್ಥರ ಶಿಷ್ಯರಾದ ಸತ್ಯಪ್ರಜ್ಞರಲ್ಲಿ 'ನಿಮ್ಮ ಗುರುಗಳ ಶಿಷ್ಯನು ನಾನು ; ಅವರ ಅಪ್ಪಣೆಯಂತೆ ನಿಮ್ಮಲ್ಲಿಗೆ ಬಂದೆನು' ಎಂದು ಸುಳ್ಳುಹೇಳಿದರಂತೆ. (೬–೧೮ರಿಂದ ೨೧) ಇಂಥ ಸುಳ್ಳುಕಥೆಯನ್ನು ಕಲ್ಪಿಸಿರುವ ಗ್ರಂಥಕರ್ತನ ವಿಷಯಕ್ಕೆ ಯಾರಿಗೆತಾನೆ ಬೇಸರವುಂಟಾಗದಿರದು ?

ಸತ್ಯಪ್ರಜ್ಞರನ್ನು ಬಿಟ್ಟು ಈ ದೈತ್ಯನು 'ಹಿಂದಿನ ಜನ್ಮದ ಸಂಸ್ಕಾರದಿಂದ ಶೂನ್ಯವೆಂದು ಅಥವಾ ನಿರ್ಗುಣನೆಂದು ಐಕಾತ್ಮ್ಯಭಾವನೆಯನ್ನು ಮಾಡುತ್ತಿದ್ದನು' (೬-೨೨) ಎಂಬ ವಾಕ್ಯದಿಂದ ಅದ್ವೈತಿಗಳು ಒಪ್ಪಿರುವ ನಿರ್ಗುಣ ಬ್ರಹ್ಮವಾದದ ಮರ್ಮವು ತನಗೆ ಎಳ್ಳಷ್ಟೂ ತಿಳಿಯದೆಂಬುದನ್ನು ಪ್ರಕಟಿಸಿಕೊಂಡಿರುತ್ತಾನೆ.

'ದ್ವೀಪಾಂತರಕ್ಕೆ ಓಡಿಹೋಗಿದ್ದ ಬಕ್ಕನು ಗೌಡಪಾದರಿಗೆ ಸಂನ್ಯಾಸವನ್ನು ಕೊಟ್ಟು ತತ್ತ್ವವನ್ನು ಉದೇಶಿಸಿದನಂತೆ ; ಅವರಿಂದ ಗೋವಿಂದನು ಸಂನ್ಯಾಸವನ್ನು ಪಡೆದುಕೊಂಡಿರುತ್ತಾನೆ; ಸಂಪ್ರದಾಯಾಗತವಾದ ಈ ನಮ್ಮ ತತ್ತ್ವವನ್ನು ಅವನಿಂದ ನೀನು ತಿಳಿದುಕೊ, ವಿಷ್ಣುಗುಣಗಳನ್ನು ದೂಷಿಸು' ಎಂದು (೬-೨೬ರಿಂದ ೩೯) ಅಸುರರು ಶಂಕರಾಚಾರ್ಯರಿಗೆ ದುರ್ಬೋಧನೆಮಾಡಿ ಹೋದರೆಂದು ಒಂದು ಕಲ್ಪನೆ. ಶಂಕರಾಚಾರ್ಯರು ಬೌದ್ಧಸಂಪ್ರದಾಯದವರೆಂದು ಅಪಪ್ರಚಾರವನ್ನು ಮಾಡುವದೇ ಈ ಪಂಡಿತನ ಉದ್ದೇಶ. ಗೌಡಪಾದರ ಬೌದ್ಧ ಗುರುವು 'ಬಕ್ಕ'ನು ಎಂದು ಕನ್ನಡದ ಹೆಸರಿನಿಂದ ಕರೆದಿರುವದನ್ನು ಓದುಗರು ಲಕ್ಷಿಸಬೇಕು. ಗೌಡಪಾದಾಚಾರ್ಯರು ಬಕ್ಕನಿಂದ ಉಪದೇಶವನ್ನು ಹೊಂದಿದ ಬಳಿಕ ಮನನಮಾಡಲಾಗಿ ಅವರಿಗೆ ನಿರ್ವಿಶೇಷವಾದ ಸರ್ವಾಭಾವವು ಹೊರತು ಮತ್ತೇನೂ ಕಾಣಿಸಲಿಲ್ಲವಂತೆ (೬-೩೬). ಗೌಡಪಾದಾಚಾರ್ಯರು ಬರೆದಿರುವ ಮಾಂಡೂಕ್ಯಕಾರಿಕೆಗಳು ಜಗತ್ಪ್ರಸಿದ್ಧವಾಗಿರುತ್ತವೆ ; ಅವುಗಳಲ್ಲಿ ಅವರು ಪ್ರತಿಪಾದಿಸಿರುವ ಅದ್ವೈತತತ್ತ್ವವನ್ನು ಸರ್ವಾಭಾವವೆಂದು ತಿಳಿಯುವಷ್ಟು ಮದ್ದು ಪಂಡಿತನು ಈತನು ! ನಿರ್ವಿಶೇಷ, ನಿರ್ಗುಣ, ಶೂನ್ಯ, ಸರ್ವಾಭಾವ- ಇವೆಲ್ಲ ಈ ಪಂಡಿತಂಮನ್ಯನಿಗೆ ಪರ್ಯಾಯಗಳು !

ಶಂಕರಾಚಾರ್ಯರು ಗೋವಿಂದರ ಬಳಿಗೆ ಹೋಗಿ ಅವರ ಶಿಷ್ಯರಾದಬಳಿಕ 'ಮಾಯಿ' (ಮಾಯಾವಾದಿ)ಗಳಾದ ಶಂಕರಾಚಾರ್ಯರು ಶೂನ್ಯವಾದಿತ್ವವನ್ನು ಮುಚ್ಚಿಹಾಕಿ ವೇದಾಂತಿಗಳೆಂದು ಹೇಳಿಕೊಳ್ಳುತ್ತಾ ನಮ್ಮ ಮತವನ್ನು ಹರಡೋಣ ! ಇಲ್ಲದಿದ್ದರೆ ಜನರು ನಮ್ಮನ್ನು ನಿಂದಿಸಿಯಾರು !- ಎಂದು ಗೋವಿಂದರಿಗೆ ಹೇಳಿ (೬-೩೩) ಬ್ರಹ್ಮದತ್ತನ ಬಳಿಗೆಹೋಗಿ ಪ್ರಭಾಕರ, ಭಟ್ಟಕುಮಾರ, ಭಾಸ್ಕರ- ಇವರೊಡನೆ ಆ ತ್ರಿದಂಡಿಯಲ್ಲಿ ಶ್ರವಣಮಾಡಿದರಂತೆ ! (೬-೪೩)ಅವರೆಲ್ಲರಿಗೂ ಭಿನ್ನಭಿನ್ನಾಭಿಪ್ರಾಯವಾದದ್ದರಿಂದ ಒಬ್ಬೊಬ್ಬರು ಒಂದೊಂದು ದಿಕ್ಕಿಗೆ ಹೋದರು ! ಇವರೆಲ್ಲರೂ ಸಮಕಾಲಿಕರೆಂದರೆ ತನ್ನ ಅವಿವೇಕಕ್ಕೆ ಯಾರಾದರೂ ನಕ್ಕಾರು ಎಂಬ ಅಂಜಿಕೆಯೂ ಇಲ್ಲ, ಈ ಮಹಾಶಯನಿಗೆ. ಸುಳ್ಳಿಗೆ ಸಾವಿರಕಾಲುಗಳಲ್ಲವೆ ?

ಆಮೇಲೆ ಶಂಕರಾಚಾರ್ಯರು ಬೌದ್ಧಮತವನ್ನೇ ಸೂತ್ರಗಳ ಮೂಲಕ ವಿವರಿಸಿ ಭಾಷ್ಯವನ್ನು ಮಾಡಿದರು. ಬ್ರಹ್ಮದತ್ತನು ಇವನ್ನು ಕೇಳಿ ಕಿವಿಗಳನ್ನು ಮುಚ್ಚಿಕೊಂಡನು ! ಭಾಸ್ಕರನು ಆ ಭಾಷ್ಯವನ್ನು ಖಂಡಿಸಿದನು. ಶಂಕರಾಚಾರ್ಯರು ಜನರನ್ನು ಪ್ರತಿವಾದಿಗಳನ್ನು ಗೆಲ್ಲುವದಕ್ಕಾಗಿ ಶಾಕ್ತೇಯಮಂತ್ರಗಳನ್ನು ಸೇವಿಸಿದರು. ಭೈರವಿಯು ಅವರ ದೂತಿಯಾದಳು ! –ಎಂದು ಆರನೆಯ ಸರ್ಗವನ್ನು ಸಮಾಪ್ತಿಗೊಳಿಸಿರುತ್ತಾನೆ.

ಶಂಕರಾಚಾರ್ಯರಿಗೂ ವಿಶ್ವರೂಪನಿಗೂ ಆದ ವಾದವನ್ನು ಈ ಪಂಡಿತನು ಅತ್ಯಂತಜುಗುಪ್ಸಾವಹವಾದ ಕಥೆಯ ಕಲ್ಪನೆಯ ಮೂಲಕ ವರ್ಣಿಸಿರುತ್ತಾನೆ. ವಿಶ್ವರೂಪನು ಸಂನ್ಯಾಸಿಯಾದನು. ಈ ಸಂದರ್ಭದಲ್ಲಿ ಇವನು ಆಚಾರ್ಯರಿಗೂ ಅವನ ಹೆಂಡತಿಗೂ ಸಂಬಂಧವನ್ನು ಕಲ್ಪಿಸಿ ಬರೆದಿರುವ ಭಂಡತನದ ಮಾತುಗಳನ್ನು ಬರೆಯಲು ನಮ್ಮ ಲೇಖನಿ ಹಿಂಜಗ್ಗುತ್ತದೆ. ಇದನ್ನು ಕೇಳಿದಮೇಲೂ ಯಾರಾದರೂ ಕುತೂಹಲದಿಂದ ಮೂಲಗ್ರಂಥವನ್ನು ಓದುವಷ್ಟು ಧೈರ್ಯವನ್ನು ಮಾಡಿಕೊಂಡರೆ ನಾರಾಯಣನನ್ನು ಪಂಡಿತನೆನ್ನುವದಕ್ಕಿಂತ ಭಂಡನೆಂದೇ ಕರೆಯುವರೆಂಬುದರಲ್ಲಿ ಸಂಶಯವಿಲ್ಲ. ಇದಾದಬಳಿಕ ಭಟ್ಟನಿಂದ ಪರಾಜಿತನಾಗಿದ್ದ (!) ಮಂಡನನು ಆನೆಯನ್ನೇರಿ ಬರುತ್ತಿರುವಲ್ಲಿ ಶಂಕರಾಚಾರ್ಯರಿಗೂ ಅವರಿಗೂ ಆದ ವಾಗ್ವಾದದಲ್ಲಿರುವ 'ಕುತೋ ಮುಣ್ಡೀ' ಮುಂತಾದ ವಾಕ್ಯಗಳು ಮಾಧವೀಯಶಂಕರವಿಜಯದಿಂದ ಕದ್ದವುಗಳಾದ್ದರಿಂದ ಆ ವಿಷಯದಲ್ಲಿ ಇಲ್ಲಿ ಹೇಳಬೇಕಾದದ್ದೇನೂ ಉಳಿದಿರುವದಿಲ್ಲ. ಈ ಪಂಡಿತನಿಗೆ ವಿಶ್ವರೂಪನೂ ಮಂಡನನೂ ಬೇರೆಬೇರೆ ಎಂಬ ವಿಷಯವು ಎಲ್ಲಿಯೋ ಕಿವಿಗೆ ಬಿದ್ದಿತ್ತೆಂದೂ ಹೇಳಬೇಕಾಗಿದೆ. ಶಂಕರರು ಭೈರವೀಶಕ್ತಿ ಮತ್ತು ಕುಕ್ಕುಟಮಂತ್ರ– ಇವುಗಳ ಬಲದಿಂದ ವಾದಮಾಡುತ್ತಿದ್ದರೆಂದು ದೂರಿರುವದು ಪಂಡಿತನಿಗೇ ಮೀಸಲು.

ಶಂಕರಾಚಾರ್ಯರಿಗೆ ನಾಲ್ವರು ಶಿಷ್ಯರು : ತೋಟಕ, ಪದ್ಮಪಾದ, ಜ್ಞಾನೋತ್ತಮ, ಬೀಜಭುಕ್ (ಅಥವಾ ಬೀಜಾದ). ಅವರು ಮೂರು ಸಿದ್ಧಿಗಳನ್ನೂ (?) ತೋಟಕವೇ ಮುಂತಾದ ತಾಮಿಸ್ರಕ್ಕೆ ದ್ವಾರವಾದ (?) ನಾಲ್ಕು ಶಾಸ್ತ್ರಗಳನ್ನೂ ಮಾಡಿದರಂತೆ. ಬೀಜಾದನ ಹೆಸರು ಯಾವ ಕನಸಿನಲ್ಲಿ ಪಂಡಿತನ ಕಿವಿಗೆ ಬಿದ್ದಿತ್ತೋ ತಿಳಿಯದು.

ಶಂಕರರ ಶಿಷ್ಯಪ್ರಶಿಷ್ಯರ ಮೂಲಕ ಸಂನ್ಯಾಸಿಗಳ ಪರಂಪರೆಯು ಬೆಳೆಯಿತು. ಅವರು ದಕ್ಷಿಣಕ್ಕೆ ಹೋಗಿ ತಾಯಿಯ ಶರೀರವನ್ನು ದಹಿಸಿ ತಮ್ಮ ಮಠಕ್ಕೆ ಬಂದು ಶ್ವಾಸಜ್ವರ ಭಗಂದರಗಳಿಂದ ನರಳುತ್ತಿದ್ದರು (೭–೧೬, ೧೭). ಅವರು ಸಾಯುವಾಗಲೂ 'ಪರತೀರ್ಥರ ಶಿಷ್ಯರನ್ನು ನಾಶಗೊಳಿಸಿರಿ' ಎಂದು ಶಿಷ್ಯರಿಗೆ

ಹೇಳಿದರಂತೆ (೭-೧೯)! ಹೊಂಗೇರಿಯಲ್ಲಿ ಚುಡಾಡುತ್ತಿರುವಾಗ ಶಂಕರರ ಸುದ್ದಿ ಯು ಅವರಿಗೆ ತಿಳಿದಾಗ ಅಲ್ಲಿ 'ಸಂಕರನಿಗೆ ಎರಡು, ಪದ್ಮಪಾದನಿಗೆ ಒಂದು, ನನಗೆ ಒಂದೂ ಇಲ್ಲ' (೭-೨೮) ಎಂದು ಆಚಾರ್ಯರಿಗೆ ಇನ್ನೂ ಎರಡು ಜನ್ಮಗಳಿವೆ ಎಂದು ತಿಳಿಸಿದರಂತೆ. ಅವರು 'ಹಾಹಾ ! ಬೀಜಾದನೆ, ಇದು ನನ್ನ ಗುಟ್ಟು: ಅಪ್ಪ, ನಾನು ಬಹಳವಾಗಿ ಗುಣಗಳಲ್ಲಿ ವ್ಯಾಪೃತನಾದೆನು. ನನಗೆ ಏನಾಗು ವದೋ, ಯಾವ ಗತಿಯಾಗುವದೋ !'-ಎಂದು ಹೇಳಿಕೊಳ್ಳುತ್ತಾ ಸತ್ತರಂತೆ ! ಇಲ್ಲಿಗೆ ಶಂಕರರನ್ನು ನಿಂದಿಸಿ ತೀರಿಸಿದ್ದಾಯಿತು.

ಕೊನೆಯ ಸರ್ಗದಲ್ಲಿ ಜ್ಞಾನೋತ್ತಮಾದಿಗಳು ನಂದಿಗ್ರಾಮಕ್ಕೆ ಹೋಗಿ ಹಂಸರ ಮಠವನ್ನುಸುಟ್ಟದ್ದು, ಗೋಗಳನ್ನು ಕೊಂದದ್ದು, ಭೈರವೀಶಕ್ತಿಯಿಂದ ಬಾಲಕರನ್ನು ಕೊಂಡದ್ದು. ಪ್ರಾಜ್ಞತೀರ್ಥರ ದಂಡಕಮಂಡಲುಗಳನ್ನು ಒಡೆದು ಹಾಕಿದ್ದು, ಅವರೂ ಅವರ ಕಡೆಯವರೂ ಜಗನ್ನಾಥಕ್ಕೆ ಹೋಗುತ್ತಿರಲು ದಾರಿ ಯಲ್ಲಿ ಅವರನ್ನು ಅಡ್ಡಗಟ್ಟಿ ನಮ್ಮ ಮಠಕ್ಕೆ ಸೇರುವಿರೊ, ಸಾಯುವಿರೊ ?- ಎಂದು ಬೆದರಿಸಿದ್ದು, ಅವರು ಅಂಜಿ ಹೊರಗೆ ನೋಡುವದಕ್ಕೆ ಇವರ ಮತವನ್ನು ಅವಲಂಬಿಸಿದಂತೆ ನಟಿಸಿ ಪ್ರಚ್ಛನ್ನವೇಷದಿಂದ ತಮ್ಮ ಮತವನ್ನು ಕಾಪಾಡಿ ಕೊಂಡದ್ದು, ಆ ಸಂಪ್ರದಾಯದ ಅಚ್ಯುತಪ್ರೇಕ್ಷರಲ್ಲಿ ಮಧ್ವಾಚಾರ್ಯರು ಆಶ್ರಮಸ್ವೀಕಾರ ಮಾಡಿದ್ದು- ಇವುಗಳನ್ನು ವರ್ಣಿಸಿದೆ. ಇಲ್ಲಿ ಶೃಂಗೇರಿಮಠದ ವರಿಗೂ ವೈಷ್ಣವರಿಗೂ ಆದ ಯಾವದಾದರೂ ಅಭಿಪ್ರಾಯವೈಷಮ್ಯವನ್ನು ಮನಸ್ಸಿನಲ್ಲಿಟ್ಟು ಈ ಕಥೆಯನ್ನು ಕಲ್ಪಿಸಿರುತ್ತಾನೆಯೋ, ಅಥವಾ ಅದ್ವೈತಿಗಳ್ಳ ಮತಾಂಧರೆಂದು ತಿಳಿಸಿಕೊಡುವದಕ್ಕೆ ಪ್ರಯತ್ನಿಸಿದ್ದಾನೆಯೋ ನಾವು ನಿಶ್ಚಯಿಸ ಲಾರೆವು.

ದೇವತಾನಿಂದೆ, ಗುರುಜನನಿಂದೆ, ದ್ವೈತ್ಯಸ್ಮರಣೆ, ಬ್ರಾಹ್ಮಣರಲ್ಲಿ ವಿಭಾಗ ವನ್ನೇರ್ಪಡಿಸುವ ಬುದ್ಧಿ, ರಾಗದ್ವೇಷಗಳ ವಾಸನೆ- ಇವುಗಳನ್ನು ಬಾಲಕರ ಅಂತಃಕರಣದಲ್ಲಿ ಬಿತ್ತುವ, ಇಂಥ ಗ್ರಂಥಗಳನ್ನು ಮಾಧ್ವರಾಗಲಿ ಸ್ಮಾರ್ತರಾಗಲಿ ಮತ್ತೆಯಾವ ಬ್ರಾಹ್ಮಣರಾಗಲಿ ಪ್ರಚಾರದಲ್ಲಿಡುವದು ಮಹಾಪಾಪಕೃತ್ಯವೆಂದು ದನ್ನು ಹೇಳಬೇಕಾದದ್ದೇ ಇಲ್ಲ. ಇದಕ್ಕೆ ಬದಲು ಭಗವದ್ಭಕ್ತಿಯನ್ನು ಪ್ರಚಾರ ಮಾಡಿ ಬ್ರಾಹ್ಮಣರನ್ನೂ ತನ್ಮೂಲಕ ಹಿಂದೂಸಮಾಜವನ್ನೂ ಉನ್ನತಿಗೇರಿಸುವ ಪ್ರಯತ್ನವನ್ನು ಮಾಡುವಂತೆ ಗ್ರಂಥಪ್ರಕಾಶಕರಿಗೆಲ್ಲ ಶ್ರೀಮನ್ನಾರಾಯಣನ ಪ್ರೇರಣೆ ಇರಲೆಂದು ಹಾರೈಸೋಣ !

—o—

# (ಇ) ಥಿಯಸಾಫಿಕಲ್ ಸೊಸೈಟಿಯವರ ಅಭಿಪ್ರಾಯ

## (1) ಮ್ಯಾಡಮ್ ಬ್ಲಾವಟ್ಸ್ಕಿ

'ಥಿಯಾಸಫಿ' ಎಂಬ ಮಾತಿಗೆ 'ಈಶ್ವರವಿದ್ಯೆ' ಎಂದು ಅಕ್ಷರಾರ್ಥ. 'ಥಿಯಸಾಫಿಕಲ್ ಸೊಸೈಟಿ' ಎಂಬ ಮಾತನ್ನು 'ಬ್ರಹ್ಮವಿದ್ಯಾಸಮಾಜ' ಎಂದು ಆ ಸಂಘದವರು ಅನುವಾದಮಾಡಿಕೊಳ್ಳುತ್ತಿದಾರೆ. ಆ ಸಮಾಜದ ಸ್ಥಾಪಕರಲ್ಲೊಬ್ಬರಾದ ಬ್ಲಾವಟ್ಸ್ಕಿಯವರು 'ರಹಸ್ಯೋಪದೇಶ' (Secret Doctrine) ಎಂಬ ತಮ್ಮ ಇಂಗ್ಲಿಷು ಗ್ರಂಥದಲ್ಲಿ ( ಪುಟ 271, ಒಂದನೆಯ ಸಂಪುಟ ) ಹೀಗೆಂದು ಬರೆದಿರುತ್ತಾರೆ :

(a) 'ಕಪಿಲವಸ್ತುವಿನ ಯುವರಾಜನಾದ ಗೌತಮನು ಬ್ರಾಹ್ಮಣರ ರಹಸ್ಯದಲ್ಲಿ, ಎಂದರೆ ಉಪನಿಷತ್ತುಗಳಲ್ಲಿ, ಇದ್ದ ಬ್ರಾಹ್ಮಣರ ಶಾಸ್ತ್ರವನ್ನೆಲ್ಲ ಕಲಿತುಕೊಂಡು ನೋಡಲಾಗಿ ಅದು ಹಿಮಾಲಯದಲ್ಲಿ ಮಂಜಿನಬೆಟ್ಟಸಾಲುಗಳಲ್ಲಿ ವಾಸವಾಗಿದ್ದ ಜೀವನತತ್ತ್ವಗುರುಗಳ ಅಭಿಪ್ರಾಯಕ್ಕಿಂತ ಬೇರೆಯಲ್ಲವೆನ್ನುವಷ್ಟು ಅದಕ್ಕೆ ಹತ್ತಿರವಾಗಿತ್ತು. ಆಗ ಬ್ರಾಹ್ಮಣರಿಗಲ್ಲದೆ ಮತ್ತೆಯಾರಿಗೂ ಸಿಕ್ಕದಂತೆ ಇಟ್ಟುಕೊಂಡಿದ್ದನ್ನು ಕಂಡು ಈ ಬ್ರಾಹ್ಮಣ ಶಿಷ್ಯನು ಅಸಮಾಧಾನದಿಂದ ಅದನ್ನು ಎಲ್ಲರಿಗೂ ತಿಳಿಯುವಂತೆ ಮಾಡಿ ಲೋಕವನ್ನು ರಕ್ಷಿಸಬೇಕೆಂದು ನಿಶ್ಚಯಿಸಿದನು. ಆಗ ಬ್ರಾಹ್ಮಣರು....ಉಪನಿಷತ್ತುಗಳ ಮೂಲವನ್ನು ಸಂಕ್ಷೇಪಗೊಳಿಸಿದರು.... ಕೈಬರಹದ ಪುಸ್ತಕಗಳಲ್ಲಿ ಪರಮಾರ್ಥರಹಸ್ಯದ ಸಿದ್ಧಾಂತವನ್ನೊಳಗೊಂಡಿದ್ದ ಭಾಗಗಳನ್ನು ತೆಗೆದುಹಾಕಿದರು....'

(b) ಶ್ರೀಶಂಕರಾಚಾರ್ಯರು ಐತಿಹಾಸಿಕರಲ್ಲಿ ಜೀವಿಸಿದ್ದ ಅತ್ಯಂತ ಹೆಚ್ಚಿನ ಅನುಭವಿಗಳು. "ಅವರು ಉಪನಿಷತ್ತುಗಳಮೇಲೆ ಅನೇಕ ಭಾಷ್ಯಗಳನು ಬರೆದರು. ಆದರೆ ಅವರ ಮೂಲಗ್ರಂಥಗಳು ಇನ್ನೂ ನಾಸ್ತಿಕರ ಕೈಗೆ ಬಿದ್ದಿಲ್ಲವೆಂದು ನಂಬುವದಕ್ಕೆ ಕಾರಣವಿದೆ ; ಅವನ್ನು ಎಚ್ಚರಿಕೆಯಿಂದ ಮಠಗಳಲ್ಲಿ ರಕ್ಷಿಸಿಕೊಂಡಿರುತ್ತಾರೆ. ಆ ಆಚಾರ್ಯರು ಬ್ರಾಹ್ಮಣರ ರಹಸ್ಯವಿದ್ಯೆಯ ಅಮೋಘಭಾಷ್ಯಗಳು ಸ್ಮಾರ್ತಬ್ರಾಹ್ಮಣರಿಗೇ ಹೊರತು ಮತ್ತೆಯಾರೊಬ್ಬರಿಗೂ ಇನ್ನೂ ಅನೇಕ ವರ್ಷಗಳವರೆಗೆ ಸಿಕ್ಕದೆಇರುವವೆಂದು ನಂಬುವದಕ್ಕೆ ಅವಕಾಶವಿದೆ....(ಪುಟ 271). ಆ (ಸ್ಮಾರ್ತ)ಗುಂಪಿನವರೇ ಶೃಂಗಗಿರಿಯಂಥ ಮಠಗಳಲ್ಲಿ ಆಗಿಂದಾಗ್ಗೆ ನಿಜವಾದ ತತ್ತ್ವಜ್ಞಾನಿಗಳಾದ ಮಠಾಧಿಪತಿಗಳು ಬರುತ್ತಾರಂತೆ."

(c) ಅದ್ವೈತಿಗಳನ್ನು ಮಹಾಯಾನಿಕಬೌದ್ಧರು ಪ್ರಚ್ಛನ್ನಬೌದ್ಧರೆಂದು ಕರೆಯುತ್ತಾರೆ ; ಬೌದ್ಧರನ್ನು ವೇದಾಂತಿಗಳು ಪ್ರಚ್ಛನ್ನವೇದಾಂತಿಗಳೆಂದು ಕರೆ

ಯುತ್ತಾರೆ–ಎಂದು ತಿಳಿಸಿದಬಳಿಕ 'ಚೆನ್ನಾಗಿ ವಿವೇಚನೆಮಾಡಿ ಹೋಲಿಸಿದರೆ ಗೌತಮಬುದ್ಧನಿಗೂ ಶಂಕರಾಚಾರ್ಯರಿಗೂ ಅತ್ಯಂತನಿಕಟಸಂಬಂಧವಿರುವಂತೆಯೇ, ಇವರಿಬ್ಬರ ರಹಸ್ಯೋಪದೇಶವೂ ಒಂದೇ ಆಗಿರಬೇಕೆಂದು ಗೊತ್ತಾಗುವದು. ಅಂತೂ ಇವರಿಬ್ಬರಿಗೂ ಇರುವ ವೈಲಕ್ಷಣ್ಯವು ಆಕಾರದಲ್ಲಿರುವದೇ ಹೊರತು ವಸ್ತುತತ್ತ್ವದಲ್ಲಿರುವದಿಲ್ಲ (II Vol. ಪುಟ 637) ಎಂದು ಬರೆದಿದೆ

(d) "ತನಗೆ ಉಪದಿಷ್ಟವಾಗಿದ್ದದ್ದನ್ನೆಲ್ಲ ತನ್ನ ವಾಗ್ದಾನಗಳ ನಿಮಿತ್ತದಿಂದ ಹೇಳುವದಕ್ಕೆ ಆಗದ್ದರಿಂದ....ಬೌದ್ಧನು (ರಹಸ್ಯದ) ಹೊರಮೈಯನ್ನು ಮಾತ್ರ ಪ್ರಪಂಚಕ್ಕೆ ಕೊಟ್ಟನು, ಅದರ ಆತ್ಮವನ್ನು ಅವನ ಪ್ರಿಯಶಿಷ್ಯರಿಗೆ ಮಾತ್ರ ಇರಿಸಿಕೊಂಡನು. 'ಆತ್ಮವಾದ'ದ ವಿಷಯವೂ ಅನೇಕ ಚೀನಾತತ್ತ್ವಶೋಧಕರಾದ ವಿದ್ವಾಂಸರ ಕಿವಿಗೆ ಬಿದ್ದಿವೆ, ಅದರ ನಿಜವಾದ ಅರ್ಥವನ್ನಾಗಲಿ ಪ್ರಾಧಾನ್ಯವನ್ನಾಗಲಿ ಯಾರೊಬ್ಬರೂ ಅರಿತುಕೊಂಡಿರುವಂತೆ ಕಾ ಣ ಲಿ ಲ್ಲ. (Vol. I ಪುಟ XXI)"

ಈ ಮೇಲೆ ಕೊಟ್ಟಿರುವ ಮೂಲಗ್ರಂಥದ ಸಾರವು ಈ ಚರಿತ್ರಕಾರರೇ ಸರಳಾನುವಾದಮಾಡಿ ಬರೆದದ್ದು.

## (2) ಎ. ಪಿ. ಸಿನೆಟ್

ಈತನು 'ಪಾರಮಾರ್ಥಿಕಬೌದ್ಧಮತ' (Esoteric Buddhism; A. C. 1883. Chap. IX, pp. 148 to 155) ಎಂಬ ಗ್ರಂಥದಲ್ಲಿ ಈ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುತ್ತಾನಂತೆ :

(1) ಶಂಕರಾಚಾರ್ಯರು ಸಕಲಾಂಶಗಳಲ್ಲಿಯೂ ನವೀನದೇಹಧಾರಿಯಾದ ಗೌತಮಬುದ್ಧನೇ– ಎಂಬುದು ರಹಸ್ಯವು. ಇದು ನನಗೆ ದಕ್ಷಿಣದೇಶದ ಒಬ್ಬ ಅದ್ವೈತಿಬ್ರಾಹ್ಮಣನಿಂದ ತಿಳಿಯಿತು. (2) ಬುದ್ಧನ ಅಪರಾವತಾರಗಳಲ್ಲಿ ಕೆಲವು ಬುದ್ಧನ ಆತ್ಮಚ್ಛಾಯೆಗಳೆಂದು ವರ್ಣಿತವಾಗಿವೆ ; ಆದರೆ ಶಂಕರಾಚಾರ್ಯರು ಸ್ವತಃ ಬುದ್ಧನ ಅವತಾರವೇ. (3) ತಾನು ಮೊದಲು ಬೋಧಿಸಿದ್ದದ್ದರಲ್ಲಿದ್ದ ಕೆಲವು ರಂಧ್ರಗಳನ್ನು ಮುಚ್ಚಿ ಕೆಲವು ತಪ್ಪುಗಳನ್ನು ತಿದ್ದುವದೇ ಅವನ ಮುಖ್ಯೋದ್ದೇಶವಾಗಿತ್ತು. (4) ಶಂಕರಾವತಾರಗಳಲ್ಲಿ ಬುದ್ಧನು ಈ ದೇಶದಲ್ಲಿ ಒದಗಲಿದ್ದ ಮತದ್ವೇಷವನ್ನು ಮಟ್ಟಹಾಕುವದಕ್ಕೆ ವ್ಯವಸಾಯವನ್ನು ಮಾಡಿದನು. (5) ಶಂಕರರು ಇಂಡಿಯಾದೇಶದ ಸರ್ವಪ್ರಾಂತಗಳಲ್ಲಿಯೂ ಸಂಚರಿಸಿ ಅನೇಕ ಮುಖ್ಯಸ್ಥಾನಗಳಲ್ಲಿ ಮಠಗಳನ್ನು ಸ್ಥಾಪಿಸಿದರು. (6) ಶಂಕರಾಚಾರ್ಯರು ತಮ್ಮ ಗ್ರಂಥಗಳಲ್ಲಿ ಜ್ಞಾನವು ಮೋಕ್ಷಕ್ಕೆ ಅವಶ್ಯವೆಂಬುದನ್ನು ಒತ್ತಿಹೇಳಿದರು.

## (3) ಡಾಕ್ಟರ್ ಆನಿ ಬೆಸೆಂಟ್

ಇವರು ಅದ್ವೈತವನ್ನನುಸರಿಸಿಯೇ ಅನೇಕಗ್ರಂಥಗಳನ್ನು ಸ್ವತಂತ್ರವಾಗಿ ಬರೆದಿರುತ್ತಾರೆ. ಇವರ ಕೆಲವು ಅಭಿಪ್ರಾಯಗಳು ಕುತೂಹಲಜನಕವಾಗಿವೆ :

(1) ಶಂಕರಾಚಾರ್ಯರು ಮೂವತ್ತೆರಡು ವರ್ಷಗಳಕಾಲ ಒಂದು ಜ್ವಾಲೆಗೆ ಗೇಹವಾಗಿದ್ದರು. (2) ಮಹಾತ್ಮರಲ್ಲಿ ಮಹಾತ್ಮರಾದ ಇವರು ಈಗಲೂ ಹಿಮವತ್ಪರ್ವತಗಳಿಂದ ಆಚೆಗೆ ಷಾಂಬಲ್ಲ ಭ್ರಾತೃಕೂಟದಲ್ಲಿ ಅಗೋಚರರಾಗಿ ವಾಸಮಾಡುತ್ತಿದಾರೆ. (3) ಪಾಶ್ಚಾತ್ಯಪಂಡಿತರು ಹೇಳುತ್ತಿರುವ ಶಂಕರಾಚಾರ್ಯರು ಇವರಲ್ಲ, ಇವರ ಪರಂಪರೆಯವರಲ್ಲೊಬ್ಬರು (The Theosophist May 1908).

## (4) ಸರ್ ಎಸ್. ಸುಬ್ರಹ್ಮಣ್ಯ ಅಯ್ಯರ್‌ರವರು

ಥಿಯಸಾಫಿಕಲ್ ಸೊಸೈಟಿಗೆ ಸೇರಿದ್ದ ಸರ್. ಎಸ್. ಸುಬ್ರಹ್ಮಣ್ಯಯ್ಯರವರು ಒಂದು ಪತ್ರಿಕೆಯಲ್ಲಿ (The Indian Review for Aug. 1911) ಪ್ರಕಟಿಸಿದ ಅಭಿಪ್ರಾಯಗಳು ಕೆಲವು ವಿಚಿತ್ರವಾಗಿವೆ :

(1) ಶಂಕರಾಚಾರ್ಯರು ಲೋಕಪಾಲಕರುಗಳಲ್ಲಿ ಉನ್ನತಪದವಿಯನ್ನು ಪಡೆದ ಒಬ್ಬ ಸಿದ್ಧಪುರುಷರ ಅವತಾರ. (2) ಮನುಷ್ಯರೂಪವನ್ನು ಧರಿಸಿ ಶಂಕರನಾಮಧೇಯದಿಂದ ಜ್ಞಾನಬೋಧನೆಮಾಡಿದ ಈ ವ್ಯಕ್ತಿಯು ಜ್ವಾಲಾದ್ವೈತ್ರಯದಲ್ಲಿ ಕುಮಾರರೆಂಬುವರಲ್ಲಿ ಒಂದಾಗಿದೆ. ಈ ವ್ಯಕ್ತಿಗಳು ಗುರುಕುಲದ ಅಧ್ಯಕ್ಷನ ಸಾಕ್ಷಾಚ್ಛಿಷ್ಯರು. (3) ಮೊದಲು ಗೌತಮನು ಬುದ್ಧರೂಪದಲ್ಲಿ, ಅನಂತರ ಕುಮಾರನು ಶಂಕರರೂಪದಲ್ಲಿ, ಕೊನೆಗೆ ಮಹರ್ಷಿ ಮೈತ್ರೇಯನು ಇಂಡಿಯಾದೇಶದಲ್ಲಿ ಗೋಪಿನಾಥಕೃಷ್ಣನ ರೂಪದಲ್ಲಿ, ಪ್ಯಾಲಸ್ಟೈನ್‌ದೇಶದಲ್ಲಿ ಕ್ರಿಸ್ತರೂಪದಲ್ಲಿ ಅವತರಿಸಿದರು. (4) ಥಿಯಸಾಫಿಕಲ್ ಸಂಘದ ಗುರುಗಳು ಈ ವಿಷಯದಲ್ಲಿ ನಡೆಯಿಸುತ್ತಿರುವ ಅನ್ವೇಷಣೆಯಲ್ಲಿ ನನಗೆ ಸಂಪೂರ್ಣವಾದ ನಂಬಿಕೆಯಿರುವದರಿಂದ ಅವರ ದ್ವಾರಾ ತಿಳಿಯಬಂದ ಸಂಗತಿಗಳನ್ನು ಪ್ರಕಟಿಸಿದೇನೆ. (5) ಕರ್ಮಮಾರ್ಗವನ್ನು ಉದ್ಧಾರಮಾಡುವದಕ್ಕೋಸ್ಕರ ಬುದ್ಧನು, ಜ್ಞಾನಮಾರ್ಗವನ್ನು ಬೋಧಿಸುವದಕ್ಕೋಸ್ಕರ ಶಂಕರನು, ಭಕ್ತಿಮಾರ್ಗವನ್ನು ಉಪದೇಶಿಸುವದಕ್ಕೋಸ್ಕರ ಕೃಷ್ಣಕ್ರಿಸ್ತರು ಅವತರಿಸಿದರು. (6) ಶಂಕರನಾಮಾಂಕಿತರು ಇಬ್ಬರು. ಅವರಲ್ಲಿ ಆದಿಶಂಕರರು ಸ್ವಯಂಜ್ಞಾನಿಯಾಗಿದ್ದ ಕಾರಣ ಯಾವ ಗುರುವಿಗು ಶಿಷ್ಯನಾಗಲಿಲ್ಲ, ಮತ್ತು ಇವರು ಗ್ರಂಥಗಳನ್ನು ಬರೆಯಲಿಲ್ಲ, ವಾಙ್ಮುಖವಾಗಿ ಮಾತ್ರ ಬೋಧಿಸಿದರು. ಎರಡನೆಯ ಅಭಿನವಶಂಕರರು

ಗೋವಿಂದಭಗವತ್ಪಾದರ ಶಿಷ್ಯರು. ಅದರು ಭಾಷ್ಯವನ್ನು ರಚಿಸಿದರು. (7) ಈ ಇಬ್ಬರೂ ಅದ್ವೈತವನ್ನೇ ಬೋಧಿಸಿದರು. (8) ಆದಿಶಂಕರರು 'ಕುಮಾರನ' ಅವತಾರ. ಉಪನಿಷದ್ವಾಕ್ಯಗಳಿಗೆ ಸಮನ್ವಯಮಾಡುವದರಲ್ಲಿಯಾಗಲಿ ಭಾಷ್ಯಗಳನ್ನು ರಚಿಸುವದರಲ್ಲಿಯಾಗಲಿ ಕಾಲವನ್ನು ವ್ಯರ್ಥವಾಗಿ ಕಳೆಯಲಿಲ್ಲ. ಅಭಿನವ ಶಂಕರರು ರಚಿಸಿದ ಭಾಷ್ಯಗಳಿಂದ ಅವರೂ ಪ್ರಸಿದ್ಧರಾದರು. ಇವರಿಬ್ಬರೂ ಒಂದೇ ವ್ಯಕ್ತಿಯೆಂದು ಭಾವಿಸುವದು ತಪ್ಪು.

ಈ ಮೇಲಿನ ವಿಷಯಗಳನ್ನು ನಾವು ಸೋಮನಾಥಯ್ಯನವರ (ಸೋ. ಶಂ. ಪುಟ ೨೨೬ರಿಂದ ೨೩೦) ಗ್ರಂಥದಿಂದ ಸಂಗ್ರಹಿಸಿದೇವೆ. ಥಿಯಸಾಫಿಕಲ್ ಸಮಾಜವು ಅತ್ಯಂತಪ್ರಭಾವಶಾಲಿಯಾಗಿದ್ದಾಗ ಬರೆದ ಬರೆವಣಿಗೆಗಳಿವು. ಕಲ್ಪನಾಧುರೀಣರು ಏನೇನು ಹೇಳಬಹುದೆಂಬುದಕ್ಕೆ ಉದಾಹರಣೆಗಾಗಿ ಇವುಗಳನ್ನು ಇಲ್ಲಿ ಸಂಗ್ರಹಿಸಿದೆ. ದಿವ್ಯಚಕ್ಷುಸ್ಸಿನಿಂದ ತ್ರಿಕಾಲಜ್ಞರಾದವರು ಕಂಡುಹಿಡಿಯುವ ಇಂಥ ವಿಷಯಗಳ ವಿಷಯಕ್ಕೆ ಚರ್ಮಚಕ್ಷುಗಳಾದ ನಮ್ಮಂಥವರು ಏನೂ ಹೇಳುವದಕ್ಕೂ ಬರುವಂತಿಲ್ಲ.

---

## ೪. ಆಚಾರ್ಯರ ಕಾಲನಿರ್ಣಯಕರ ವಿವಿಧಾಭಿಪ್ರಾಯಗಳು

(ಚರಿತ್ರೆ. ಪು. ೨೩)

### (೧) ಶಂಕರವಿಜಯಗಳು

(1) ಮಾಧವೀಯ (೨-೭೧)ದಲ್ಲಿ ಜನನದ ವರ್ಷವನ್ನು ಕೊಟ್ಟಿಲ್ಲವೆಂದು ಚರಿತ್ರೆಯಲ್ಲಿ (ಪು. ೨೨). ಆಗಲೆ ಹೇಳಿರುತ್ತೇವೆ. ಇದೇ ಶ್ಲೋಕವು ನಮ್ಮಲ್ಲಿರುವ ವ್ಯಾಸಾಚಲೀಯದಲ್ಲಿಯೂ ಇದೆ. ಇಲ್ಲಿ ಹೇಳಿರುವ ಗ್ರಹಗಳ ಸಂಪತ್ತಿಯು ಕ್ರಿ. ಶ. 805ಕ್ಕೆ ಆಗಿತ್ತೆಂದು ಕೇರಳ (ಕೊಚ್ಚಿ) ರಾಜ್ಯದ ಆಸ್ಥಾನವಿದ್ವಾನ್ ಜ್ಯೋತಿಷಶಿರೋಮಣಿ ವಿ. ಪಿಚ್ಚು ಅಯ್ಯರ್, ದಿವಾನ್‌ಬಹದ್ದೂರ್ ಸ್ವಾಮಿ ಕಣ್ಣು ಪಿಳ್ಳೆಯವರೂ ಅನುಮೋದಿಸಿರುವದಾಗಿಯೂ ತಿಳಿಯಬಂದಿದೆ. (ಸೋ. ಶಂ. ಪು. ೨೬, ಶ್ರೀ.ಶಂ.ಅನು. ೨,ಪು.೭). ಇದರಂತೆ ರಾಶಿಕುಂಡಲಿಯು ಪಕ್ಕದಲ್ಲಿ

| | | | |
|---|---|---|---|
| | ರ | ಬು,ಶು | ಚಂ |
| | | | ಲ<br>ಗು |
| ಕು | | | |
| | | ಶ | |

ಕೊಟ್ಟಿರುವಂತೆ ಆಗುವದಂತೆ.[2] (ಸೋ.ಶ್ರೀ.ಶಂ.) ಇದಕ್ಕನುಗುಣವಾಗಿ 'ಅನುಭೂತ ಜಾತಕತರಂಗಿಣಿ'ಯಲ್ಲಿ ಕಲಿ ೩೯೦೭, ಶಾಲಿವಾಹನಶಕ ೭೨೭ ಕ್ರಿ.ಶ. 805ನೆಯ ಈಶ್ವರ ಸಂವತ್ಸರದ ವೈಶಾಖ ಶುದ್ಧ ಪಂಚಮೀ ಸೋಮವಾರ, ಕರ್ಕಾಟಕ ಲಗ್ನ ಅಭಿಜಿನ್ಮುಹೂರ್ತ, ಆರ್ದ್ರಾ ೧ನೇ ಚರಣ ಕರ್ಕಾಟಕ ತೃತೀಯದ್ರೇಕ್ಕಾಣ ಶುಭಷಡ್ವರ್ಗಗಳಿರುವಂದು ಜನನ ಎಂದಿದೆಯಂತೆ; ಆದರೆ ಇದು ಈಶ್ವರಸಂವತ್ಸರಕ್ಕೆ ಹೊಂದುವಬದಲು ಪಾರ್ಥಿವವತ್ಸರಕ್ಕೆ ಹೊಂದುತ್ತದೆ ಎಂದು ಶ್ರೀ. ಶಂ. ಪು. ೩ರಲ್ಲಿ ಬರೆದಿದೆ. ಶ್ರೀರಾಜೇಂದ್ರನಾಥಘೋಷ್ ಎಂಬವರು "ಆಚಾರ್ಯ ಶಂಕರ ಮತ್ತು ರಾಮಾನುಜ" (ಪು.೮೦೩-೮೦೭) ಎಂಬ ಗ್ರಂಥದಲ್ಲಿ ೬೦೮ನೆ ಶಕ ವೈಶಾಖ ಶುಕ್ಲ ತೃತೀಯದಲ್ಲಿ ಜನ್ಮ ಎಂದೂ ಆಚಾರ್ಯರು ೩೪ವರ್ಷ ಬಾಳಿದರೆಂದೂ ಬರೆದಿದೆಯಂತೆ ! (ಬಲ.ಶಂ.ಪು. ೩೯) ಈ ಯೋಗವು ಕಲ್ಯಾದಿ ೬೦೫ ವೈಶಾಖ ಶುದ್ಧ ೫ ಮತ್ತು ಕಲ್ಯಾದಿ ೨೮೧೫ವರ್ಷದ ಕರ್ಕಲಗ್ನದಲ್ಲಿ ಬರುವದೆಂದು ಕೆಲವರು ಹೇಳುತ್ತಾರೆ. (ಕೂ.ಶಂ.ಉಪ.ಪು.೮). ಇಲ್ಲಿಗೆ ಮಾಧವನು ಕೊಟ್ಟ ಜನ್ಮಕಾಲವಿಷಯಕ್ಕೆ ಜ್ಯೋತಿಷ್ಕರ ತರ್ಕದ ಮತಭೇದಗಳನ್ನು ತಿಳಿಸಿದ್ದಾಯಿತು. ಚರಿತ್ರೆಯಲ್ಲಿ (ಪು. ೧೯ರಲ್ಲಿ) ಉದಾಹರಿಸಿರುವ ವ್ಯಾಸಾಚಲೀಯದಿಂದಲೇ ಮಾಧವನು ತನ್ನ ಶ್ಲೋಕವನ್ನು ತೆಗೆದುಕೊಂಡದ್ದೆಂದು ಕಲ್ಪಿಸುವವರ ಮತವು ಸಿದ್ಧವಾದರಂತೂ, ಕಲಿ ೨೫೯೩ನೆಯ ನಂದನಸಂವತ್ಸರದ ಉತ್ತರಾಯಣ, ವೈಶಾಖ ಶುಕ್ಲ ಪಂಚಮೀ ಭಾನುವಾರ ಪುನರ್ವಸುನಕ್ಷತ್ರದಲ್ಲಿ ಜನನವೆಂದಾಗುತ್ತದೆ. ಆಗ ರಾಶಿಕುಂಡಲಿಯು ಯಾವ ರೂಪವನ್ನು ತಳೆಯುವದೊ !

## (2) ಚಿತ್ಸುಖಾಚಾರ್ಯರ ಬೃಹಚ್ಛಂಕರವಿಜಯದಲ್ಲಿ

ತತಃ ಸಾ ದಶಮೇ ಮಾಸೇ ಸಂಪೂರ್ಣಶುಭಲಕ್ಷಣೇ ।
ಷಡ್ವಿಂಶೇ ಶತಕೇ ಶ್ರೀಮದ್ಯುಧಿಷ್ಠಿರಶಕಸ್ಯ ವೈ ॥
ಏಕತ್ರಿಂಶೇಽಥ ವರ್ಷೇ ತು ಹಾಯನೇ ನನ್ದನೇ ಶುಭೇ ।
ಮೇಷರಾಶಿಂ ಗತೇ ಸೂರ್ಯೇ ವೈಶಾಖೇ ಮಾಸಿ ಶೋಭನೇ ॥

---

1. ಆದರೆ ಈ ಕುಂಡಲಿಯಲ್ಲಿ ರಾಹು ಕೇತುಗಳ ಸ್ಥಾನವನ್ನು ನಿರ್ದೇಶಿಸಿರುವದಿಲ್ಲವಾದ್ದರಿಂದ ಇದು ಸ್ವಲ್ಪಮಟ್ಟಿಗೆ ಅಪೂರ್ಣವೆಂದೇ ಹೇಳಬೇಕಾಗಿದೆ.

ಶುಕ್ಲಪಕ್ಷೇ ಚ ಪಞ್ಚಮ್ಯಾಂ ತಿಥ್ಯಾಂ ಭಾಸ್ಕರವಾಸರೇ |
ಪುನರ್ವಸುಗತೇ ಚನ್ದ್ರೇ ಲಗ್ನೇ ಕರ್ಕಾಟಕಾಹ್ವಯೇ ||
ಮಧ್ಯಾಹ್ನೇ ಚಾಭಿಜಿನ್ನಾಮ ಮುಹೂರ್ತೇ ಶುಭವೀಕ್ಷಿತೇ |
ಸ್ವೋಚ್ಚಸ್ಥೇ ಕೇನ್ದ್ರಸಂಸ್ಥೇ ಚ ಗುರೌ ಮನ್ದೇ ಕುಜೇ ರವೌ ||
ನಿಜತುಙ್ಗಗತೇ ಶುಕ್ರೇ ರವಿಣಾ ಸಂಗತೇ ಬುಧೇ |
ಪ್ರಾಸೂತ ತನಯಂ ಸಾಧ್ವೀ ಗಿರಿಜೇವ ಷಡಾನನಮ್ ||

| | | | |
|---|---|---|---|
| ಶು | ರ ಬು | | ಚಂ |
| | | | ಲ ಗು |
| ಕು | | | |
| | | ಶ | |

ಇದರ ಪ್ರಕಾರ ಪಕ್ಕದಲ್ಲಿರುವಂತೆ ರಾಶಿ ಕುಂಡಲಿಯಾಗುವದು[1]; ಚಿತ್ಸುಖರು ಆಚಾರ್ಯರ ಸಮಕಾಲಿಕರೆಂದು ಆತ್ಮಬೋಧರು 'ಸುಷಮಾ'ಗ್ರಂಥದಲ್ಲಿ (ಗು. ರ. ಶ್ಲೋ. ೧೪) ಬರೆದಿರುತ್ತಾರೆ. ಆತ್ಮಬೋಧರು ಕಾಂಚೀಸಂಪ್ರದಾಯದವರೆಂಬ ಕಾರಣದಿಂದ ಇದನ್ನು ಕಡೆಗಣಿಸುವದಕ್ಕೆ ಬರುವದಿಲ್ಲ. ಏಕೆಂದರೆ ಮಾಧವನೂ "ಪದ್ಮಪಾದಸತೀರ್ಥ್ಯರಾದ ಚಿತ್ಸುಖನೇ ಮೊದಲಾದವರು ಗುಟ್ಟಿನಲ್ಲಿ ಹೀಗೆಂದು ಹೇಳಿದರು" (ಮಾ. ಶಂ. ೧೩-೫) ಎಂದಿರುತ್ತಾನೆ. ಈ ಪರಿಸ್ಥಿತಿಯಲ್ಲಿ ಚಿತ್ಸುಖಾಚಾರ್ಯರ ಬೃಹಚ್ಛಂಕರವಿಜಯವು ತನ್ನ ಕಾಲದಲ್ಲಿದ್ದರೂ ಅದು ಕಾಂಚೀಸಂಪ್ರದಾಯದ್ದೆಂಬ ಕಾರಣದಿಂದ ಮಾಧವನು ಅದನ್ನು ಕೈಬಿಟ್ಟನೆಂದೋ ಅಥವಾ ಬೃಹಚ್ಛಂಕರವಿಜಯವೆಂಬುದೇ ಮಾಧವನಿಂದೀಚೆಗೆ ಕಲ್ಪಿತವಾದ ಕೃತ್ರಿಮಗ್ರಂಥವೆಂದೋ ಹೇಳಬೇಕಾಗಿರುತ್ತದೆ. ಇದರ ನಿಜವನ್ನು ಗೊತ್ತುಪಡಿಸುವದು ತತ್ತ್ವಶೋಧಕರಿಗೆ ಸೇರಿದ್ದು.

(3) "ಶಂಕರಮಂದಾರಸೌರಭ"ದಲ್ಲಿ ಆಚಾರ್ಯರು ವಿಭವಸಂವತ್ಸರದ ವೈಶಾಖ ಶುದ್ಧ ದಶಮಿಯ ದಿನ ಅವತರಿಸಿದರೆಂದು ಬರೆದಿರುವದನ್ನು ಚರಿತ್ರದಲ್ಲಿ (ಪುಟ ೨೨) ಹೇಳಿರುತ್ತೇವೆ. ವಾಕ್ಪತಿ ಭಟ್ಟೋದ್ಭಟ ವಿರಚಿತ 'ಶಂಕರೇಂದ್ರವಿಲಾಸ' ಎಂಬ ಗ್ರಂಥದಲ್ಲಿಯೂ

ಹಾಯನೇಽಥ ವಿಭವೇ ವೃಷಮಾಸೇ ಶುಕ್ಲಪಕ್ಷ ದಶಮೀದಿನಮಧ್ಯೇ |
ಶೇವಧಿದ್ವಿಪದಿಶಾನಲವರ್ಷೇ ಶಿಷ್ಯ ಏನಮುದಸೋಽಸ್ತ ವಿಶಿಷ್ಟಾ ||

ವಿಶಿಷ್ಟಾದೇವಿಯು ಕಲಿ ೩೮೮೯ನೆಯ ವಿಭವಸಂವತ್ಸರದ (ಕ್ರಿ. 7೮8) ವೃಷಭಮಾಸದಲ್ಲಿ ಶುಕ್ಲಪಕ್ಷ ದಶಮಿಯಲ್ಲಿ ಈತನನ್ನು ಹಡೆದಳು- ಎಂದಿದೆ

1. ಈ ಕುಂಡಲಿಯಲ್ಲಿ ರಾಹುಕೇತುಗಳ ಸ್ಥಾನವನ್ನು ತೋರಿಸಿಲ್ಲ.

ಯಂತೆ. ( ಗು. ರ. ಸುಷಮಾ. ೬೦ ) ಇದು ಅಭಿನವಶಂಕರಾಚಾರ್ಯರ ವಿಷಯವೆಂದು ಕಾಂಚೀಸಂಪ್ರದಾಯದವರ ಮತ ( ಚರಿತ್ರೆ. ಪುಟ ೪೦–೪೧ ).

## (4) ಕೇರಳೀಯಶಂಕರವಿಜಯ

ಪ್ರವೃದ್ಧೇ ತತ್ರ ಚಾಸೂತ ನನ್ದನಂ ನನ್ದನೇ ಶುಭೇ ।
ವೈಶಾಖೇ ಮಾಸಿ ಪಞ್ಚಮ್ಯಾಂ ಶುಕ್ಲಪಕ್ಷೇ ಪುನರ್ವಸೌ ॥೨–೫೩.

(5) ಡಾ|| ಕೆ. ಬಿ. ಪಾಠಕ್ ಎಂಬವರಿಗೆ ಬೆಳಗಾವಿಯಲ್ಲಿ ಗೋವಿಂದ ಭಟ್ಟ ಎರ್ಲೇಕರ್ ಎಂಬವರಲ್ಲಿ ಮೂರು ಹಾಳೆಗಳ ಒಂದು ಕೈಬರಹದ ಪುಸ್ತಕವು ಸಿಕ್ಕಿತಂತೆ. ಅದರಲ್ಲಿ :

ದುಷ್ಟಾಚಾರವಿನಾಶಾಯ ಪ್ರಾದುರ್ಭೂತೋ ಮಹೀತಲೇ ।
ಸ ಏವ ಶಙ್ಕರಾಚಾರ್ಯಃ ಸಾಕ್ಷಾತ್ ಕೈವಲ್ಯನಾಯಕಃ ॥
ಅಷ್ಟವರ್ಷೇ ಚತುರ್ವೇದಾನ್(ದೀ ?) ದ್ವಾದಶೇ ಸರ್ವಶಾಸ್ತ್ರಕೃತ್ ।
ಷೋಡಶೇ ಕೃತವಾನ್ ಭಾಷ್ಯಂ ದ್ವಾತ್ರಿಂಶೇ ಮುನಿರಭ್ಯಗಾತ್ ॥
ನಿಧಿನಾಗೇಭವಹ್ನ್ಯಬ್ದೇ ವಿಭವೇ ಶಙ್ಕರೋದಯಃ ।
ಗುಹಾಪ್ರವೇಶಃ ಕಲ್ಯಬ್ದೇ ಚನ್ದ್ರನೇತ್ರಾಙ್ಕವಹ್ನಿಗೇ ॥
ವೈಶಾಖಃ ಪೂರ್ಣಿಮಾಯಾಂ ತು ಶಙ್ಕರಃ ಶಿವತಾಮಗಾತ್ ।

ಇದರಲ್ಲಿ ಕ್ರಿ. ಶ. 788ರಿಂದ 820 ರವರೆಗೆ ಆಚಾರ್ಯರ ಕಾಲವೆಂದಿದೆ. ಈ ಗ್ರಂಥವನ್ನು ಅಥವಾ ಅದರಲ್ಲಿರುವ ಕಾಲವನ್ನು ಈಗಿನವರು ಅನೇಕರು ಒಪ್ಪುತ್ತಾರೆ. ಇದರ ಪ್ರಾರಂಭದಲ್ಲಿ 'ಆದೌ ಶಿವಃ' ಎಂದು ಪ್ರಾರಂಭಿಸಿ ಶಂಕರಾಚಾರ್ಯರವರೆಗೆ ಗುರುಪರಂಪರೆಯನ್ನು ಹೇಳಿದೆ. ಶಂಕರಾಚಾರ್ಯರು ತುಂಗಭದ್ರಾತೀರದಲ್ಲಿ ಪೃಥಿವೀಧರನನ್ನು ಪೀಠಾಧಿಪರನ್ನಾಗಿ ಮಾಡಿ "ಭಾರತೀ" ಎಂಬ ಬಿರುದನ್ನು ಕೊಟ್ಟು

ಆಗತ್ಯ ಸ್ವೇಚ್ಛಯಾ ಕಾಞ್ಚೀಂ ಪರ್ಯಟನ್ ಪೃಥಿವೀತಲೇ ।
ತತ್ರ ಸಂಸ್ಥಾಪ್ಯ ಕಾಮಾಕ್ಷೀಂ ಜಗಾಮ ಪರಮಂ ಪದಮ್ ॥[2]

---

1. ನಿಧಿನಾಗೇಭವಹ್ನ್ಯಬ್ದೇ ವಿಭವೇ ಮಾಸಿ ಮಾಧವೇ । ಶುಕ್ಲೇ ತಿಥೌ ದಶಮ್ಯಾಂ ತು ಶಙ್ಕರಾರ್ಯೋದಯಃ ಸ್ಮೃತಃ ॥ ಎಂಬ ಯಜ್ಞೇಶ್ವರಶಾಸ್ತ್ರಿವಿರಚಿತ, 'ಆರ್ಯವಿದ್ಯಾಸುಧಾಕರ'ದ ವಾಕ್ಯಕ್ಕೆ ಇದೇ ಮೂಲವಾಗಿರಬೇಕೆಂದು ತೋರುತ್ತದೆ. ಕಾಂಚೀಗುರುಪರಂಪರೆಯ ಕೊನೆಗೆ (೯ನೆಯ ಪರಿಶಿಷ್ಟ) ಬರೆದಿರುವ 'ಭಾರತೀಗುರುಪರಂಪರಾಸ್ತೋತ್ರ'ವನ್ನು ನೋಡಿ.

ಎಂದಿದೆಯಂತೆ. ಶಂಕರಾಚಾರ್ಯರು ಕೂಷ್ಮಾಂಡಜಾತರೆಂದು ಬರೆದಿದೆಯಂತೆ. (ಸೋ. ಶಂ. ಪು. ೨೧೧) ಇದರಿಂದ ಇದು ಕಾಂಚೀಸಂಪ್ರದಾಯದವರು ಯಾರೋ ಬರೆದದ್ದೆಂದೂ ಮುಂದೆ ಹೇಳುವ 'ಕೂಷ್ಮಾಂಡಶಂಕರವಿಜಯ'ದ ಆಧಾರದಿಂದಲೇ ರಚಿತವಾಗಿರಬೇಕೆಂದೂ ಸಿದ್ಧವಾಗುತ್ತದೆ. ಇದೂ ಅಲ್ಲದೆ

ಶ್ರೀಯಾದವಪ್ರಕಾಶಸ್ಯ ಶಿಷ್ಯೋ ರಾಮಾನುಜೋ ಯತಿಃ ।
ತೇನ ವೈಷ್ಣವಸಿದ್ಧಾನ್ತಃ ಸ್ಥಾಪಿತೋ ಗುರುಸನ್ಮಿತಃ ॥ ೯ ॥
ಅಚ್ಯುತಪ್ರೇಕ್ಷನಾಮ್ನಸ್ತು ಶಿಷ್ಯೋ ಮಧ್ವಾಭಿಧೋ ಯತಿಃ ।
ತೇನೈವ ಭೇದಸಿದ್ಧಾನ್ತಃ ಸ್ಥಾಪಿತೋ ಗುರ್ವ(?)ಸಂಮತೇ ॥ ೧೦ ॥

ಎಂದಿದೆಯಂತೆ ! (ಸೋ. ಶಂ. ಪು. ೨೧೪). ಆನಂದಗಿರಿಯು, ಆಚಾರ್ಯರು ಶಿಷ್ಯರ ಮೂಲಕ ಷಣ್ಮತಸ್ಥಾಪನೆಮಾಡಿದ್ದನ್ನು ವರ್ಣಿಸಿರುವ ಬಗೆಯನ್ನು (ಚರಿತ್ರೆ. ಪುಟ ೨೯೩-೨೬೫) ಹೇಳಿರುತ್ತೇವೆ. ಇಲ್ಲಿಯೂ ಅದಕ್ಕನುಸಾರ ವಾಗಿಯೇ ಬರೆದಿರುವದರಿಂದ ಈ ಗ್ರಂಥವು ಮಧ್ವಾಚಾರ್ಯರಕಾಲದಿಂದ ಈಚೆಗೆ ಯಾರೋ ಕಾಂಚೀಸಂಪ್ರದಾಯದವರು ಬರೆದಿದ್ದಿರಬೇಕೆಂಬುದು ಸ್ಪಷ್ಟ. (ಪಾಠಕರ ಲೇಖನವು (The Indian Antiquary 1882 pp 173--175 ಎಂಬ ಪ್ರತಿಕೆಯಲ್ಲಿದೆಯಂತೆ) (ಬಲ. ಪು. ೩೫).

## (6) ಕೇರಳೋತ್ಪತ್ತಿ

ಚೇರುಮಾನ ಪೇರುಮಲ್ಲನ ವಿಜಯಕಾಲದಲ್ಲಿ ಕಲಿಯುಗದ ೩೬೦೧ನೆಯ ಆರ್ದ್ರಾನಕ್ಷತ್ರದಲ್ಲಿ ಕೆಸೆಲಿಗ್ರಾಮದಲ್ಲಿ ಶಂಕರರ ಅವತಾರವಾಯಿತು. (ಕೂ.ಶಂ. ಪು. ೨) ಪೇರುಮಲ್ಲನು ಆನೆಗೊಂದಿ ಕೃಷ್ಣರಾಜನಿಂದ ಸಿಂಹಾಸನದಲ್ಲಿ ಪ್ರತಿಷ್ಠಿತನಾಗಿದ್ದನು. ಅವನು ಮಹಮ್ಮದೀಯ ಮತವನ್ನು ಸ್ವೀಕರಿಸಿ ಮಕ್ಕಾಯಾತ್ರೆಯನ್ನು ಮಾಡಿದನು. ಅರಬ್ಬಿಸ್ಥಾನದ ಜಫಾರ್ ಎಂಬಲ್ಲಿ ಅಬ್ದುಲ್ ರಹೆಮಾನ್ ಎಂಬ ಹೆಸರಿನಿಂದ ಅವನಿಗೆ ಸಮಾಧಿಯಾಯಿತು. ಎ. ಹೆಚ್. ೨೧೬ಕ್ಕೆ ಬಂದು ೨೧೬ರಲ್ಲಿ ಮೃತನಾದನು ; ಕ್ರಿ. ಶ. 827-28, 831-32ಕ್ಕೆ ಈ ವರ್ಷಗಳು ಸಮವಾಗಿವೆ ಎಂದು ಲೋಗನ್‌ನು Indian Antiquary, February 4) ಬರೆದಿದಾನಂತೆ. (ಶಂ. ಜೂ. ಪೂರ್ವಪೀಠಿಕಾ ಪುಟ ೯-೧೦) ಆದರೆ ಇಲ್ಲಿಯೂ ಮತಭೇದವಿದೆ.

## (೨) ಅನ್ಯಮತಸ್ಥರ ಗ್ರಂಥಗಳು

### (1) ಜಿನವಿಜಯ

ಋಷಿರ್ಬಾಣಸ್ತಥಾ ಭೂಮಿರ್ಮರ್ತ್ಯಾಕ್ಷೌ ವಾಮಮೇಳನಾತ್ ।
ಏಕತ್ವೇನ ಲಭೇದಙ್ಕೋ ರಕ್ತಾಕ್ಷ[1]ಸ್ತದ್ಧಿ ವತ್ಸರಃ ॥
ವಿಶ್ವಜಿಚ್ಚ ಪಿತಾ ಯಸ್ಯ ವಿಖ್ಯಾತಶ್ಚ ಚಿದಮ್ಬರೇ ।
ತಸ್ಯ ಭಾರ್ಯಾಮ್ಬಿಕಾದೇವೀ ಪ್ರಸೂತಾ(?)ಲೋಕಶಙ್ಕರಮ್ ॥
(ಕೂ. ಶಂ. ಪು. ೮)

ಇಲ್ಲಿ ಯುಧಿಷ್ಠಿರ ಶಕೆ ೨೧೫೭ನೆಯ ರಕ್ತಾಕ್ಷಿಸಂವತ್ಸರದ "ಮಾಘ ಕೃಷ್ಣ ೧ಳ ಸೋಮವಾರ ನಡುರಾತ್ರಿಯಲ್ಲಿ"(?) ವಿಶ್ವಜಿತ್ ಅಂಬಿಕೆ ಎಂಬ ಮಾತಾಪಿತೃಗಳಿಂದ ಚಿದಂಬರದಲ್ಲಿ ಆಚಾರ್ಯರು ಜನಿಸಿದರು ಎಂದಿದೆ. " " ಚಿಹ್ನೆಯೊಳಗಿರುವ ಭಾಗಕ್ಕೆ ಪ್ರಮಾಣವೇನೋ ತಿಳಿಯಲಿಲ್ಲ. ಇದು ಕ್ರಿ. ಪೂ. 477ಕ್ಕೆ ಸರಿಯಾಗುವದಂತೆ. (ಶ್ರೀ. ಶಂ. ಅಭಿ. ೨–೩೩).

[ಶ್ರೀ. ಶಂ. ಅನುಬಂಧ ೨ ಪುಟ ೩೧ರಲ್ಲಿ ಹೀಗಿದೆ :

ಋಷಿರ್ವಾರಸ್ತಥಾ ಪೂರ್ಣಂ ಮರ್ತ್ಯಾಕ್ಷೌ ವಾಮಮೇಲನಾತ್।
ಏಕೀಕೃತ್ಯ ಲಭೇತಾಙ್ಕಃ ಕ್ರೋಧೀ ಸ್ಯಾತ್ ತತ್ರ ವತ್ಸರಃ ॥
ಭಟ್ಟಾಚಾರ್ಯಕುಮಾರಸ್ಯ ಕರ್ಮಕಾಣ್ಡೈಕವಾದಿನಃ ।
ಜ್ಞೇಯಃ ಪ್ರಾದುರ್ಭವಸ್ತಸ್ಮಿನ್ ವರ್ಷೇ ಯೌಧಿಷ್ಠಿರೇ ಶಕೇ ॥

ಯುಧಿಷ್ಠಿರ ೨೦೭೭ನೆಯ ಕ್ರೋಧಿಸಂವತ್ಸರದಲ್ಲಿ ಕುಮಾರಿಲಭಟ್ಟರು ಹುಟ್ಟಿದರು. ]

ಪಶ್ಚಾತ್ಪಞ್ಚದಶೇ ವರ್ಷೇ ಶಙ್ಕರಸ್ಯ ಗತೇ ಸತಿ ।
ಭಟ್ಟಾಚಾರ್ಯಕುಮಾರಸ್ಯ ದರ್ಶನಂ ಕೃತವಾನ್ ಶಿವಃ ॥

ಶಂಕರರಿಗೆ ೧೫ ವರ್ಷವಾದಾಗ ಕುಮಾರಿಲಭಟ್ಟರನ್ನು ಕಂಡರು ಎಂದಿದೆ. ಇದರಂತೆ ಆಚಾರ್ಯರ ಜನ್ಮಕಾಲವು ಕ್ರಿ. ಪೂ. 509 ಆಗುವದಂತೆ. (ಶ್ರೀ. ಶಂ. ಅನು. ೨ ಪು. 32)

ಸುಧನ್ವನಾಮಕೋ ರಾಜಾ ಸೋಽಪಿ ದುಷ್ಟಸ್ತಥಾ ಭುವಿ ।
ಜಿನಾನಾಂ ಯೇನ ಸಾಧೂನಾಂ ಕೃತಂ ಕದನಮದ್ಭುತಮ್ ॥

ಇಲ್ಲಿ ಸುಧನ್ವನೂ ಜಿನರನ್ನು ಹಿಂಸಿಸಿದನು ಎಂದಿದೆ. ಈ ಗ್ರಂಥವು ಮಾಧವೀಯಕ್ಕೆ ಪೂರ್ವದ್ದೊ, ಈಚಿನದೊ ಗೊತ್ತುಪಡಿಸುವದು ಒಳ್ಳೆಯದು.

1. 'ತಾಮ್ರಾಕ್ಷಃ' ಪಾ॥ ಶ್ರೀ. ಶಂ. ಅನು. ೨ ಪು. ೩೩

## (2) ಶಂಕರಪದ್ಧತಿ

ಮಹಾನುಭಾವ ಸಂಪ್ರದಾಯದ 'ದರ್ಶನಪ್ರಕಾಶ'ದಲ್ಲಿ (ಕ್ರಿ. ಶ. 1658 ) ಈ ಹೆಸರಿನ ಗ್ರಂಥದಿಂದ ಉದಾಹರಿಸಿರುವ ಶ್ಲೋಕವಿದು :

ಯುಗ್ಮಪಯೋಧಿರಸಾನ್ವಿತಶಾಕೇ ರೌದ್ರಕವತ್ಸರ ಊರ್ಜಕಮಾಸೇ ।
ವಾಸರ ಈಜ್ಯ ಉತಾಚಲ ಮಾನೇ ಕೃಷ್ಣತಿಥೌ ದಿವಸೇ ಶುಭಯೋಗೇ ।
ಶಙ್ಕರ ಲೋಕಮಗಾನ್ನಿಜದೇಹಂ ಹೇಮಗಿರೌ ಪ್ರವಿಹಾಯ ಹಠೇನ ॥

ಇಲ್ಲಿ ಶಂಕರರ ಮೃತ್ಯುಕಾಲ ೬೪೨ ಶಕೆ (ಕ್ರಿ.ಶ. 720) ಎಂದಿರುವದರಿಂದ ಜನ್ಮವು ೬೧೦ ಶಕೆ (ಕ್ರಿ. ಶ. 688) ಎಂದಾಗುತ್ತದೆ. ಆದರೆ ಇಲ್ಲಿ ಹಠಯೋಗ ದಿಂದ ಹೇಮಗಿರಿಯಲ್ಲಿ ದೇಹವನ್ನು ಬಿಟ್ಟರೆಂದು ಹೇಳಿರುವದರಿಂದ ಇವರು ಯಾವ ಶಂಕರರೊ ! ಈ ಪ್ರಮಾಣವನ್ನು ಬಲದೇವ ಉಪಾಧ್ಯಾಯರು (ಪು. 39) ಉದಾಹರಿಸಿರುತ್ತಾರೆ. ಇದಕ್ಕೆ ಎಷ್ಟು ಬೆಲೆಕೊಡಬಹುದೆಂಬುದನ್ನು ವಾಚಕರೇ ನಿರ್ಣಯಿಸಬೇಕು.

## (೩) ಆಧುನಿಕವಿದ್ವಾಂಸರ ಕಲ್ಪನೆಗಳು

ಈಗ ಆಧುನಿಕ ವಿದ್ವಾಂಸರು ಕೆಲವರ ತರ್ಕಗಳನ್ನು ಇಲ್ಲಿ ಕೊಡುವೆವು. ಡಾಕ್ಟರ್ ಪಾಠಕ್‌ರ ತರ್ಕಕ್ಕಿಂತ ಇವಕ್ಕೆ ಹೆಚ್ಚಿಗೆ ಬೆಲೆಯಿದೆ ಎಂದೇನೂ ನಮ್ಮ ಅಭಿಪ್ರಾಯವಲ್ಲ. ಆದರೂ ವಾಚಕರಿಗೆ ತಿಳಿದಿರಲೆಂದು ಇಲ್ಲಿ ಇವನ್ನು ಸಂಗ್ರಹಿಸಿರುತ್ತೇವೆ.

(1) ಕ್ರಿ. ಪೂ. 509ರಲ್ಲಿ ಜನನವೆಂಬವರು :—

(ಅ) ಮದರಾಸ್ ಹೈಕೋರ್ಟ್ ವಕೀಲರಾಗಿದ್ದ ಟಿ. ಎಸ್. ನಾರಾಯಣ ಶಾಸ್ತ್ರಿಗಳು : ಬೃಹಚ್ಛಂಕರವಿಜಯವೇ ಮೊದಲಾದವುಗಳ ಆಧಾರ ದಿಂದ. The Age of Shankara (ಶ್ರೀ. ಶಂ. ಪು. 9 ; ಚರಿತ್ರೆಯ ೨೦ನೆಯ ಪುಟವನ್ನು ನೋಡಿ. )

(ಆ) ಎನ್. ಕೆ. ವೆಂಕಟೇಶ ಪಂತುಲು ಇವರ ಅಭಿಪ್ರಾಯ: ಗೋವರ್ಧನ, ದ್ವಾರಕಾ, ಕಾಂಚೀ– ಈ ಮಠಗಳ ಗುರುಪರಂಪರೆಯವರ ಕಾಲ ವನ್ನು ವಿಮರ್ಶಿಸಿದರೆ ಇದೇ ಸರಿಯೆಂದು ಗೊತ್ತಾಗುತ್ತದೆ. ಭಗವಾನ್ ಲಾಲ್ ಇಂದ್ರಜಿಯವರು ಒಬ್ಬ ಬೌದ್ಧಭಿಕ್ಷುವಿನಿಂದ ತಂದ 'Inscription From Nepal' (ನೇಪಾಳ ಶಾಸನಗಳು) ಎಂಬ ಕೈಬರಹದ ಪುಸ್ತಕವನ್ನು ನೋಡಿದರೆ ನೇಪಾಲಕ್ಕೆ ವೃಷಭದೇವವರ್ಮನ ಕಾಲಕ್ಕೆ ಆಚಾರ್ಯರು ಹೋಗಿದ್ದರೆಂದೂ ಆ ರಾಜನು ಅದ್ವೈತವನ್ನವಲಂಬಿಸಿ ತನ್ನ ಮಗನಿಗೆ ಶಂಕರದೇವ ವರ್ಮ ಎಂಬ ಹೆಸರನ್ನಿಟ್ಟನೆಂದೂ ತಿಳಿಯಬರುತ್ತದೆ. (NKVS pp. 6–6) ಚರಿತ್ರೆಯ ೨೧ನೆಯ ಪುಟವನ್ನು ನೋಡಿ.

(೨) ಕೆ. ಎಸ್ ರಾಮಸ್ವಾಮಿಶಾಸ್ತ್ರಿಗಳು. (ಶ್ರೀ. ಶಂ. ಅನು. ೨ ಪು. ೧೦) ಇವರೂ ವೃಷಸೇನ ಕಥೆಯ ಆಧಾರದಿಂದಲೇ ಕ್ರಿ. ಪೂ. 509ನ್ನು ಒಪ್ಪಿರುತ್ತಾರೆ.

(೨) ಕ್ರಿಸ್ತಶಕದ ಆದಿಭಾಗ. ಕಾಂಚಿಯ ಮತ್ತು ದ್ವಾರಕೆಯ ಗುರು ಪರಂಪರೆಯ ಆಧಾರದ ಮೇಲೆ ಈ ಕಾಲವಾಗುತ್ತದೆ. ಈಗ ವಿದ್ವಾಂಸರು ನಿಶ್ಚಯಿಸಿರುವ ಕ್ರಿ. ಶ. 788 ಅಭಿನವ ಶಂಕರರದ್ದು. ಹಾಲ (ಮಗಧ)ರಾಜನ ಕಾಲಕ್ಕೆ ಆಚಾರ್ಯರಿದ್ದರೆಂದು ಗುರುರತ್ನಮಾಲಿಕೆಯಿಂದ ತಿಳಿಯಬರುತ್ತದೆ. (ಶ್ಲೋ. ೨೧) 'ಮಾಣಿಕ್ಯ ವಾಚಗರ್' ಎಂಬಾತನು ಅದ್ವೈತವೇದಾಂತದಿಂದ ಪ್ರಭಾವಿತನಾಗಿರುವಂತೆ ಕಂಡುಬಂದಿದೆ. (NVSSK Pp. 17–22) (ಗುರು ಪರಂಪರೆಯ ವಿಷಯಕ್ಕೆ ೯ನೆಯ ಪರಿಶಿಷ್ಟವನ್ನು ನೋಡಿ ; ಗುರುರತ್ನ ಮಾಲಿಕೆಯ ಪ್ರಾಮಾಣ್ಯವನ್ನೂ ಅಲ್ಲಿಯೇ ಚರ್ಚಿಸಿದೆ.)

(3) ಕ್ರಿ. ಶ. 4ನೆಯ ಶತಮಾನ. ಆರ್. ಜಿ. ಭಂಡಾರಕರ್ (KRTTW p. ೯)

(4) ಕ್ರಿ. ಶ. 6ನೆಯ ಶತಮಾನ. ಕಾಶಿನಾಥ ತ್ರ್ಯಂಬಕ ತೆಲಂಗ್ (KRTTW p. 6) ಚರಿತ್ರೆಯ ೨೭ನೆಯ ಪುಟವನ್ನು ನೋಡಿ. ಅವರು ಉದಾಹರಿಸಿರುವ ಸ್ರುಘ್ನ, ಮಧುರಾ, ಪಾಟಲೀಪುತ್ರಗಳ ಉದಾಹರಣೆಗಳು ಪಾತಂಜಲಮಹಾಭಾಷ್ಯ (ನಿರ್ಣಯಸಾಗರಮುದ್ರಣ, Vol. II Pages 3, 95) ದಲ್ಲಿವೆ.

(5) ಕ್ರಿ. ಶ. 7ನೆಯ ಶತಮಾನ. ಡಾಕ್ಟರ್ ಫ್ಲೀಟ್ (The Indian Antiquary Vol. IV p. 350) ತಾರಾನಾಥನೆಂಬ ಬೌದ್ಧನ ಗ್ರಂಥದ ಆಧಾರದಿಂದ. ಡಾಕ್ಟರ್ ಬರ್ನೆಲ್ (Dr. Burnell) ಎಂಬವರು "ದಕ್ಷಿಣಹಿಂದೂಸ್ಥಾನದ ಪ್ರಾಚೀನಲೇಖನಗಳ ಪ್ರಧಾನಾಂಶಗಳು" (Elements of South Indian Paleology) ಎಂಬ ಗ್ರಂಥದಲ್ಲಿ (p. 37) ಇದೇ ಅಭಿಪ್ರಾಯವನ್ನು ಪ್ರಕಟಿಸಿರುತ್ತಾರೆ. (ಶ್ರೀ. ಶಂ. ಅನು. ೨. ಪುಟ. ೧೧)

(6) 8ನೆಯ ಶತಮಾನದ ಅಂತ್ಯಭಾಗ. ಪ್ರೊಫೆಸರ್ ವಿಲ್ಸನ್ (Professor Wilson) ಎಂಬಾತನು ರಾಜಾ ರಾಮಮೋಹನರಾಯನ ಮತ ದಂತೆ Wilson's Essays Vol. I p. 194, ಶ್ರೀ. ಶಂ. ಅನು. ೨, ಪುಟ ೧೨). ಕೃಷ್ಣಸ್ವಾಮಿ ಅಯ್ಯರ್‌ರವರು (C. N. K. S. pp. 17–18) ಶೃಂಗೇರಿ ಗುರುಪರಂಪರೆಯ ಆಧಾರದಿಂದಲೂ ಮಾಧವೀಯಶಂಕರ ವಿಜಯದಲ್ಲಿ ಬೌದ್ಧರನ್ನು ಕಾಶ್ಮೀರದಲ್ಲಿ ಹೇಳಿರುವದರ ಆಧಾರದಿಂದಲೂ

'ಸೌಂದರ್ಯಲಹರಿ'ಯಲ್ಲಿ ಸಂಬಂಧಾರ್ ಎಂಬ ತಮಿಳುಸಂತನ ಪರಾಮರ್ಶವಿರು ವದರಿಂದಲೂ ಕ್ರಿ. ಶ. 788 ಶಂಕರರ ಜನ್ಮಕಾಲವಿರಬೇಕು- ಎನ್ನುತ್ತಾನೆ. ಕೆ. ಆರ್. ವೆಂಕಟರಾಮಯ್ಯರವರು (K R T T W p. 7) ಫ್ಲೀಟ್, ಲೋಗನ್, ಡಾ|| ಭಂಡಾರಕರ್, ಮ್ಯಾಕ್ಸಮುಲರ್, ಮ್ಯಾಕ್‌ಡೊನಾಲ್ಡ್, ಭೂಲರ್ ಮತ್ತು ಬಾರ್- ಇವರ ಮತವನ್ನನುಸರಿಸಿ ಕ್ರಿ. ಶ. 788ರಿಂದ 820 ಕಾಲವೇ ಶಂಕರರದು, ಅಥವಾ ಅವರು ಕ್ರಿ. 805–837 (8) ರವರೆಗೆ ಇದ್ದರು ಎಂಬುದೇ ಉತ್ತಮಪಕ್ಷವೆಂದು ಕ್ಯಾಮ್ಬೋಡ್ಗೆಯ ಶಾಸನದಿಂದ ಗೊತ್ತಾಗುತ್ತದೆ. (ಯೇನಾಧೀತಾನಿ ಶಾಸ್ತ್ರಾಣಿ ಭಗವಚ್ಛಂಕರಾಹ್ವಯಾತ್) ರಾಜಗುರುವಾದ ಶಿವಸೋಮನು ಭಗವಚ್ಛಂಕರರಿಂದ ಶಾಸ್ತ್ರಗಳನ್ನು ಅಧ್ಯಯನಮಾಡಿದ್ದನೆಂದು ಆ ಶಾಸನದಲ್ಲಿದೆ- ಎಂದು ಬರೆದಿರುತ್ತಾರೆ. ಇದೇ ವಿಷಯದಲ್ಲಿ ಬಲದೇವ ಉಪಾಧ್ಯಾಯರು (ಬಲ. ಶಂ. ೩೬) ಈ ಶಾಸನದ ಬಗ್ಗೆ (Inscription on Cambodge) ಹೀಗೆ ಬರೆದಿದಾರೆ : ಚಂಪಾ ಅಧಿಪತಿಯಾದ ಇಂದ್ರ ವರ್ಮ (ಕ್ರಿ. ಶ. 877–880)ನ ಗುರುವಾದ ಶಿವಸೋಮನು ಕಂಭೋಜರಾಜ ನಾದ ದ್ವಿತೀಯ ಜಯವರ್ಮನ (ಕ್ರಿ. ಶ. 802–869) ಮಾತುಲನ ಪೌತ್ರನು ಎಂದಿರುತ್ತಾನೆ. ಶಾಸನದಲ್ಲಿ 'ಭಗವಚ್ಛಂಕರಾಹ್ವಯಾತ್' ಎಂದಿರುವದರಿಂದ ಇದು ಆದ್ಯಶಂಕರರ ವಿಷಯಕವೆಂದೇ ಅವರ ತರ್ಕ! ಬಲದೇವ ಉಪಾಧ್ಯಾಯರು ಕೊಟ್ಟಿರುವ ಬೇರೆಯ ಮತಭೇದಗಳು ಹೀಗಿವೆ : (ಬಲ. ಶಂ. ಪುಟ. ೩೯) ಕೋಲ್‌ಬ್ರೂಕ್ ಕ್ರಿ. ಶ. 800–900 ಟೇಲರ್ ಕ್ರಿ. ಶ. 900 ಹಾಗ್ಸನ್ ಕ್ರಿ. ಶ. 800 ವಿಲ್ಸನ್ ಕ್ರಿ. ಶ. 809–900 ಮೆಕೆನ್‌ಜೀ ಕ್ರಿ.ಶ. 500 ಮ್ಯಾಕ್ಸ್ ಮುಲ್ಲರ್, ಕೃಷ್ಣಸ್ವಾಮಿ ಮತ್ತು ಪಾಠಕ್ ಕ್ರಿ. ಶ. 578 ; ರಾಮಾವತಾರ ಶರ್ಮ : ಶಕ ೭೦೧ರಿಂದ ೭೬೫ ; ತೆಲಂಗ್ ಮತ್ತು ತಿಲಕರು: ಕ್ರಿ. ಶ. 688 ; ರಾಜೇಂದ್ರನಾಥಘೋಷ್ : ಕ್ರಿ. ಶ. 686 (ಶಕ ೬೦೮)- ಇವುಗಳ ವಿವರವನ್ನು ಇನ್ನೂ ಕೊಡುವದಕ್ಕೆ ನಮಗೆ ಮನಸ್ಸು ಬರಲಿಲ್ಲ.

ನಮಗೆ ಈಚೆಗೆ ದೊರೆತಿರುವ "ದ್ವಾರಕಾ ಶ್ರೀಶಾರದಾಪೀಠಗುರು ಪರಂಪರೆ" ಎಂಬ ಪುಸ್ತಕದಲ್ಲಿ ಈ ಕೆಳಗಿನ ವಿವರಗಳು ಇರುತ್ತವೆ :

ಯುಧಿಷ್ಠಿರಶಕೆ ೨೬೩೧ ವೈಶಾಖ ಶುಕ್ಲ ಪಂಚಮಿಯಲ್ಲಿ ಶ್ರೀಮಚ್ಛಂಕ ರಾವತಾರ.

೨೬೩೬ ಚೈತ್ರ ಶು. ೯ ಉಪನಯನ.

೨೬೩೯ ಕಾರ್ತಿಕ ಶುಕ್ಲೈಕಾದಶಿಯಲ್ಲಿ ಸಂನ್ಯಾಸಸ್ವೀಕಾರ.

೨೬೪೦ ಫಾಲ್ಗುನ ಶುಕ್ಲ ದ್ವಿತೀಯೆಯಲ್ಲಿ ಗೋವಿಂದಭಗವತ್ಪಾದರಿಂದ ಉಪದೇಶ, ಅಲ್ಲಿ ಜ್ಯೇಷ್ಠಾಮಾವಾಸ್ಯೆಯವರೆಗೆ ಬದರ್ಯಾಶ್ರಮದಲ್ಲಿ ೧೬ ಭಾಷ್ಯಗಳ ರಚನೆ, ನಾರಾಯಣಪ್ರತಿಷ್ಠೆ, ಜ್ಯೋತಿರ್ಮಠ ನಿರ್ಮಾಣ.

೨೬೪೭ ಕಾರ್ತಿಕ ಶುಕ್ಲ ೮ ಬಾದರಾಯಣಾಚಾರ್ಯರೊಡನೆ ಸಂಭಾಷಣೆ, ಸನಂದನರು ಬಂದದ್ದು.

೨೬೪೭ ಮಾರ್ಗಶೀರ್ಷ ಕೃಷ್ಣ ೩ ಮಂಡನನೊಡನೆ ವಾದಾರಂಭ.

೨೬೪೮ ಚೈತ್ರ ಶುಕ್ಲ ೪ ಮಂಡನಪರಾಜಯ.

೨೬೪೮ ಚೈತ್ರ ಶುಕ್ಲ ೬ ಸರಸ್ವತಿಯೊಡನೆ ವಾದ.

೨೬೪೮ ಚೈತ್ರ ಕೃಷ್ಣ ೮ ಅಮರುಕಕಾಯಪ್ರವೇಶ.

೨೬೪೮ ಕಾರ್ತಿಕ ಶುಕ್ಲ ೧೩ ತಮ್ಮ ದೇಹಕ್ಕೆ ಪ್ರವೇಶ.

೨೬೪೮ ಕಾರ್ತಿಕ ಕೃಷ್ಣ ೧ ಭಾರತೀಪರಾಜಯ.

೨೬೪೮ ಕಾರ್ತಿಕ ಕೃಷ್ಣ ೧ ಆಕಾಶಮಾರ್ಗದಿಂದ ತನ್ನ ಲೋಕಕ್ಕೆ ಹೋಗುತ್ತಿದ್ದ ಆಕೆಯನ್ನು ಚಿಂತಾಮಣಿಮಂತ್ರದಿಂದ ದ್ವಾರಕೆಯಲ್ಲಿ ಆಕರ್ಷಣೆ ಮಾಡಿದ್ದು.

೨೬೪೮ ಕಾರ್ತಿಕ ಕೃಷ್ಣ ೫ ಅಲ್ಲಿ ಆಕೆಯನ್ನು ಸ್ಥಾಪಿಸಿದ್ದು.

೨೬೪೮ ಕಾರ್ತಿಕ ಕೃಷ್ಣ ೧೩ರಿಂದ ಮಾಘ ಶುಕ್ಲ ೧೦ರವರೆಗೆ ಶಾರದಾಮಠ ನಿರ್ಮಾಣ, ರುದ್ರಮಾಲಾಕಾರದಿಂದ ಭಗವದಾಲಯ ನಿರ್ಮಾಣ, ಯಾದವೇಂದ್ರಪ್ರತಿಷ್ಠೆ, ಸಿದ್ಧೇಶ್ವರಾಲಯಪ್ರತಿಷ್ಠೆ.

೨೬೪೮ ಫಾಲ್ಗುನ ಶುಕ್ಲ ೯ರಂದು ವೈಧವ್ಯಭೀತಿಯಿಂದ ಮತ್ತೆ ಕಲಾಷ್ಟಕರೂಪದಿಂದ ತನ್ನ ಲೋಕಕ್ಕೆ ಹೋಗುತ್ತಿದ್ದ ಸರಸ್ವತಿಯನ್ನು ಅದೇ ಮಂತ್ರದಿಂದ ಶೃಂಗೇರಿಯಲ್ಲಿ ಆಕರ್ಷಣಮಾಡಿ ಮಠವನ್ನು ನಿರ್ಮಿಸಿ ಅಲ್ಲಿ ಮತ್ತೆ ಆಕೆಯನ್ನು ಸ್ಥಾಪಿಸಿದ್ದು.

೨೬೪೯ ಚೈತ್ರ ಶುಕ್ಲ ೯ ಮಂಡನನು ಸಂನ್ಯಾಸಾಶ್ರಮವನ್ನು ಸ್ವೀಕರಿಸಿದ್ದು.

೨೬೪೯ ಮಾರ್ಗಶೀರ್ಷ ಶುಕ್ಲ ೧೦ ಸುಧನ್ವರಾಜನು ಶಿಷ್ಯನಾದದ್ದು.

೨೬೪೯ ಮಾಘ ಶುಕ್ಲ ೭ ಸುರೇಶ್ವರಾಚಾರ್ಯರನ್ನು ಶಾ ರ ದಾ ಪೀ ಠ ದ ಲ್ಲಿ ಅಭಿಷೇಕಮಾಡಿದ್ದು.

೨೬೫೦ ವೈಶಾಖ ಶುಕ್ಲ ೩ರಿಂದ ದಿಗ್ವಿಜಯಕ್ಕೆ ಆರಂಭ:

೨೬೫೮ ಶ್ರಾವಣ ಶುಕ್ಲ ೭ ಮತ್ತು ಆಶ್ವಿಜ ಶುಕ್ಲ ೧೧—ತ್ರೋಟಕಹಸ್ತಾಮಲಕರು ಶಿಷ್ಯರಾದದ್ದು.

೨೬೫೮ ಪೌಷ ಶುಕ್ಲ ೧೫ ಹಸ್ತಾಮಲಕಾಚಾರ್ಯರನ್ನು ಶೃಂಗೇರಿಯಲ್ಲಿ ಅಭಿಷೇಚನಮಾಡಿದ್ದು, ಅದೇ ದಿನದಲ್ಲಿ ತ್ರೋಟಕಾಚಾರ್ಯರನ್ನು ಜ್ಯೋತಿರ್ಮಠದಲ್ಲಿ ಅಭಿಷೇಕಮಾಡಿದ್ದು.

೨೬೫೩ ವೈಶಾಖ ಶುಕ್ಲ ೧೦ ದಿಗ್ವಿಜಯದ ನಡುವೆ ಪುರುಷೋತ್ತಮಕ್ಷೇತ್ರಕ್ಕೆ ಹೋದದ್ದು ; ಅಲ್ಲಿ ದಾರುಮಯ ಜಗದೀಶ ಪ್ರತಿಷ್ಠೆ ಆ ಕ್ಷೇತ್ರಮರ್ಯಾದೆಯ ಪ್ರಬಂಧ, ಗೋವರ್ಧನಮಠಸ್ಥಾಪನೆ, ಪದ್ಮಪಾದರನ್ನು ಆ ಪೀಠಕ್ಕೆ ಅಭಿಷೇಕಮಾಡಿದ್ದು.

೨೬೫೫ ಭಾದ್ರಪದ ಶುಕ್ಲ ೧೫ರಿಂದ ೨೬೬೨ ಪುಷ್ಯ ಕೃಷ್ಣ ಅಮಾವಾಸ್ಯೆಯವರೆಗೆ ದಿಗ್ವಿಜಯಮಹೋತ್ಸವ, ಸುಧನ್ವ ಮುಂತಾದವರಿಗೆ ಪ್ರಜಾಪಾಲನೆಯನ್ನು ಮಾಡುವದೇ ಮುಂತಾದ ವಿಷಯಕ್ಕೆ ಅಪ್ಪಣೆ. ಕಾಶ್ಮೀರ ಮಠದಲ್ಲಿ ಶಾರದಾಪೀಠವಾಸ.– ಆ ಬಳಿಕ ೨೬೬೩ ಕಾರ್ತಿಕ ಶುಕ್ಲ ೩೦ರಲ್ಲಿ ಸ್ವದೇಹದಿಂದಲೇ ಕೈಲಾಸಗಮನ.

ಈ ಕಾಲಮಾನಗಳಿಗೆ ಆಧಾರವೇನೆಂಬುದನ್ನು ಪುಸ್ತಿಕೆಯಲ್ಲಿ ಕೊಟ್ಟಿಲ್ಲ.

ಇಲ್ಲಿಗೆ ಕಾಲವಿಚಾರದ ಮತಭೇದದ ಕೋಲಾಹಲವು ಮುಗಿಯಿತು. ಆಚಾರ್ಯರ ಮೂಲಗ್ರಂಥಗಳನ್ನು ನೋಡಿ ಊಹಾಪೋಹಗಳಲ್ಲಿ ಯಾವ ಯಾವದಕ್ಕೆ ಎಷ್ಟೆಷ್ಟು ಬೆಲೆಯಿದೆಯೋ ವಾಚಕರೇ ಊಹಿಸಿಕೊಳ್ಳಬೇಕು. ನಮ್ಮ ಸ್ವಂತ ಅಭಿಪ್ರಾಯಗಳಲ್ಲಿ ಕೆಲವನ್ನು ಚರಿತ್ರೆ (ಪು. ೨೪ರಿಂದ ೩೧) ಕೊಟ್ಟಿದೆ.

---

## ೫. ಶಂಕರವಿಜಯಪಾಠಗಳು

### (೧) ಆನಂದಗಿರಿ

( ಚರಿತ್ರೆ ಪುಟ ೩೯, ೫೪–೫೫, ೯೬.... )

ತೆಲುಗುಲಿಪಿಯಲ್ಲಿ ಅಚ್ಚಾಗಿರುವ **ಅನಂತಾನಂದಗಿರಿಯು** ಶಂಕರಾವತಾರದ ಕಥೆಯ ಶ್ಲೋಕಗಳನ್ನು ಇಲ್ಲಿ ಕೊಟ್ಟಿದೆ. ದೇವನಾಗರೀಪ್ರತಿಯ ಪಾಠಭೇದಗಳಿದ್ದರೆ ಅದನ್ನೂ ತೋರಿಸಿದೆ :–

ತತಃ ಸರ್ವಾತ್ಮಕೋ ದೇವಶ್ಚಿದಮ್ಬರಪುರಾಶ್ರಿತಃ ।
ಆಕಾಶಲಿಙ್ಗನಾಮ್ನಾ ತು ವಿಖ್ಯಾತೋಽಭೂನ್ಮಹೀತಲೇ ॥
ತತ್ರ ವಿದ್ವನ್ಮಹೇನ್ದ್ರಸ್ಯ ಕುಲೇ ದ್ವಿಜಗಣಾಶ್ರಿತೇ ।
ಜಾತಃ ಸರ್ವಜ್ಞನಾಮ್ನಾ ತು ಕಶ್ಚಿದ್ದ್ವಿಜಕುಲೇಶ್ವರಃ ॥
ಕಾಮಾಕ್ಷೀತಿ ಸತೀ ಚಾಭೂತ್ತಸ್ಯ ಲಕ್ಷಣಲಕ್ಷಿತಾ ।
ಚಿದಮ್ಬರೇಶ್ವರಂ ಧ್ಯಾತ್ವಾ ತಾವುಭೌ ಪ್ರಾಪತುಃ ಸುತಾವ್ ॥
ಸಾ ಕುಮಾರೀ ಸದಾ ಧ್ಯಾನಸಕ್ತಾ ಭೂಜ್ಞಾನತತ್ಪರಾ ।

ವಿಶಿಷ್ಟೇತಿ ಚ ನಾಮ್ನಾ ತು ಪ್ರಸಿದ್ಧಾಽಭೂನ್ಮಹೀತಲೇ ||
ತಾಮಷ್ಟಮೇಽಬ್ದೇ ವಿಪ್ರಾಯ ಶಾನ್ತಾಯಾದ್ಭುತಕರ್ಮಣೇ |
ಪ್ರದದೌ ವಿಶ್ವಜಿನ್ನಾಮ್ನೇ ಸರ್ವಜ್ಞೋ ಜ್ಞೋ[1] ಪಿತಾ ಸ್ವಯಮ್ ||
ಸಾ ಸಭಾ[2]ಪತಿಮುದ್ವೃತಂ ಧ್ಯಾತ್ವಾಽಕಾಶಾತ್ಮಕಂ ಶಿವಮ್ |
ಅಸ್ಯಾ[3] ರಾಧನಮತ್ಯುಗ್ರಮಾಚಕಾರ ವಿವೇಕಿನೀ ||
ತಾದೃಶೀಮಪಿ ಸಂತ್ಯಕ್ತ್ವಾ[4] ಯಯೌ ವಿಶ್ವಜಿದದ್ಭುತಮ್ |
ಅರಣ್ಯೇ[5] ತಪಸೇ ಕೃತ್ವಾ ಮನೋನಿಶ್ಚಯತಾಂ ಗತಃ |
ತದಾ ಪ್ರಭೃತಿ ಸಾ ನಾರೀ ಚಿದಮ್ಬರಮಹೇಶ್ವರಮ್ |
ಪೂಜ[7] ಯಾಮಾಸ ಪೂಜಾಭಿರ್ಧ್ಯಾನೈರಾತ್ಮಗತೈಃ ಸದಾ ||
ಸ ದೇವಃ ಸರ್ವಪೂರ್ಣೋಽಪಿ ತಸ್ಯಾ ವದನಪಙ್ಕಜಮ್ |
ಪ್ರವಿಶ್ಯ ವಿಸ್ಮಿತಾನ್ ಕುರ್ವನ್ ಜನಾನನ್ಯಾನ್ ಸಮಾಗತಾನ್ ||
ಮಹೋಗ್ರತೇಜಸಾ ಜುಷ್ಟಾ ವಿಶಿಷ್ಟಾಽಭೂತ್ ದೃಥಾಮ್ಬಿಕಾ[8] |
ಸರ್ವೈಃ ಸಂಪೂಜಿತಾ ನಿತ್ಯಂ ಪಿತ್ರಾದಿಭಿರುಪಾಸಿತಾ[9] ||
ಅತೀತೇ ಮಾಸಿ ಗರ್ಭಸ್ಯ ವೃದ್ಧಿರಾಸೀದ್ದಿನೇ ದಿನೇ |
ಚಿದಮ್ಬರೇಶ್ವರಂ ಕೃತ್ವಾ ಯಜಮಾನಂ ದ್ವಿಜೋತ್ತಮಾಃ ||
ತೃತೀಯಾದಿಷು ಮಾಸೇಷು ಚಕ್ರುಃ ಕರ್ಮಾಣಿ ವೇದತಃ |
ಪ್ರಾಪ್ತೇ ತು ದಶಮೇ ಮಾಸಿ ವಿಶಿಷ್ಟಾಗರ್ಭಗೋಲತಃ ||
ಪ್ರಾದುರಾಸೀನ್ಮಹಾದೇವಃ ಶಙ್ಕರಾಚಾರ್ಯನಾಮತಃ |
ಆಸೀತ್ತದಾ ಪುಷ್ಪವೃಷ್ಟಿಃ ದೇವಸಙ್ಘೈಃ ಪ್ರಚೋದಿತಾ |
ನೇದುರ್ದುನ್ದುಭಯೋ ದಿವ್ಯಾಃ ಸ್ವರ್ಗಲೋಕೇಽಮ್ಬರೇ ಸುಖಮ್[10] ||

## (೨) ಚಿದ್ವಿಲಾಸೀಯಬೃಹಚ್ಛಂಕರವಿಜಯಗಳು

[ಸೂಚನೆ: ಇಲ್ಲಿ ಕೊಟ್ಟಿರುವ ಬೃಹಚ್ಛಂಕರವಿಜಯದ ೩೨ನೆಯ ಪ್ರಕರಣವು ಶ್ರೀಪ್ಪಲೂರು ಕೃಷ್ಣಸ್ವಾಮಯ್ಯಗಾರು ಬರೆದ ಜಗದ್ಗುರು ಶ್ರೀಶಙ್ಕರಭಗವತ್ಪಾದಾಚಾರ್ಯಚರಿತ್ರಮು ಎಂಬ ತೆಲುಗು ಗ್ರಂಥದ ಒಂದನೆಯ ಅನುಬಂಧದಿಂದ ಆರಿಸಿದೆ. ಚೌಕಕಂಸದಲ್ಲಿ ಚಿದ್ವಿಲಾಸೀಯದ ಶ್ಲೋಕಗಳನ್ನು ಹೋಲಿಕೆಗಾಗಿ ಕೊಟ್ಟಿದೆ. ಚರಿತ್ರೆಯ ೩೬ನೆಯ ಪುಟವನ್ನು ನೋಡಿ. ]

ಕಾಲಟ್ಯಾಖ್ಯೇ ಗ್ರಾಮವರ್ಯೇ ಕೇರಳಾಲಙ್ಕೃತೀ ಕೃತೇ |
ವಿದ್ಯಾಧಿರಾಜತನಯಃ ಪ್ರಾಜ್ಞಃ ಶಿವಗುರುರ್ಬಭೌ || ೧ ||

1. 'ಅಸ್ಯಾಃ' 2. 'ಸದಾ ಪತಿಮ್' 3. 'ತಸ್ಯ' 4. 'ಸಂತ್ಯಜ್ಯ'
5. 'ಅರಣ್ಯಂ' 6. 'ಗತಮ್' 7. 'ತೋಷಯಾಮಾಸ'
8. 'ಯಥಾಮ್ಬಿಕಾ' 9. 'ಪಿತ್ರಾದಿಭಿರುಪಾಶ್ರಿತಾ' 10. 'ಚಿರಂ ಸುಖಮ್'

[ಕೇರಳರ ಕಾಲಡಿಗ್ರಾಮದಲ್ಲಿ ವಿದ್ಯಾಧಿರಾಜತನಯನಾದ ಶಿವಗುರು ಆಚಾರ್ಯರ ತಂದೆ ಎಂದು ಇಲ್ಲಿ ಹೇಳಿದೆ.]

ತದಾ ಸದಾಶಿವಃ ಶಮ್ಭುರ್ಲೋಕಾನುಗ್ರಹತತ್ಪರಃ |
ಆರ್ಯಾಮ್ಬಾಕವಿತುಸ್ತಸ್ಯ ಭಕ್ತಿವೈರಾಗ್ಯಶಾಲಿನಃ || ೨ ||
ಸುತಾರ್ಥಂ ತಪ್ಯಮಾನಸ್ಯ ಪತ್ನ್ಯಾ ಸಾರ್ಧಮಹರ್ನಿಶಮ್ |
ಮನೋರಥಂ ಪೂರಯಿತುಮಿಯೇಷ ಕರುಣಾನಿಧಿಃ || ೩ ||

[ 'ಮತ್ತೋ ವಾಞ್ಛನ್ ಸತಃ ಪುತ್ರಾನನಪತ್ಯತ್ವದುರ್ಮನಾಃ' ಎಂಬುದರಿಂದ 'ತಪಸ್ಯತಿ ಚಿರಂ ಘೋರೇ ವರ್ಷೀಯಾನಪಿ ನಿಶ್ಚಲಃ' ಎಂಬವರೆಗಿನ ಚಿ, ಶಂ, ೪–೪೨ರಿಂದ ೪೫ರವರೆಗಿನ ಶ್ಲೋಕಗಳನ್ನು ಇದಕ್ಕೆ ಹೋಲಿಸಿರಿ ]

ತತೋ (ಪೋ ?) ಮಹಿಮ್ನಾ ತತ್ಪತ್ನ್ಯಾಂ ಪ್ರವಿವೇಶ ಸ್ವತೇಜಸಾ |
ಸಾ ದಧಾರ ಸತೀ ಗರ್ಭಮಾದಿತ್ಯಸಮತೇಜಸಮ್ || ೪ ||
ನಿಧಾನಗರ್ಭಾ ಧಾತ್ರೀವ ಶಮೀವಾನ್ತರ್ಹಿತಾನಲಾ |
ವ್ಯಜಾಯತ ತದಾರ್ಯಾಮ್ಬಾ ಶಿವೈಕಾಯತ್ತಚೇತನಾ || ೫ ||

( ಪ್ರಾಚೀವಾನ್ತರ್ನಿಲೀನೇನ ಶಮೀವಾನ್ತರ್ಹಿತಾನಲಾ |... ನಿಧಾನಗರ್ಭಾ ಧಾತ್ರೀವ ತ್ರೇತೇವಾಚ್ಛಾದಿತಾ ತುಷೈಃ || ...ವ್ಯರಾಜತ ತದಾರ್ಯಾಮ್ಬಾ ಶಿವೈಕಾಯತ್ತ ಚೇತನಾ || ಚಿ. ಶಂ. ೫–೩೩ರಿಂದ ೩೫. )

ದೃಷ್ಟ್ವಾ ಶಿವಗುರುರ್ಯಜ್ವಾ ಭಾರ್ಯಾಮಾರ್ಯಾಂ ಚ ಗರ್ಭಿಣೀಮ್
ವೃಷಾಚಲೇಶಂ ಸತತಂ ಸ್ಮರನ್ನೇಕಾಗ್ರಚೇತಸಾ || ೬ ||
ದಯಾಳುತಾಂ ಸ್ತುವನ್ ಶಮ್ಭೋರ್ದಿನೇಷ್ವಪಿ ಮಹತ್ಸ್ವಪಿ |
ವವೃಧೇ ಸ ಪಯೋರಾಶಿಃ ಪೂರ್ಣೇನ್ದೋರಿವ ದರ್ಶನಾತ್ || ೭ ||

( ಚಿ. ಶಂ. ೫–೩೫, ೩೬, ೩೭ರಲ್ಲಿ ಇವೇ ಶ್ಲೋಕಗಳು. )

ವ್ಯಜಾಯತ ಶುಭಃ ಕಾಲಃ ಪಞ್ಚೋಚ್ಚಗ್ರಹಸಂಯುತಃ |
ಕಲ್ಹಾರಕಲಿಕಾಗನ್ಧಬನ್ಧುರೋ ಮರುದಾವವೌ || ೮ ||

( ಚಿ. ಶಂ. ೫–೪೪ )

ದಿಶಃ ಪ್ರಕಾಶಿತಾಕಾಶಾ ಬಭೂವುಃ ಸೂರ್ಯರಶ್ಮಿಭಿಃ |
ಪ್ರಾಯಃ ಪ್ರದಕ್ಷಿಣಜ್ವಾಲಾ ಜಜ್ವಲುರ್ಯಜ್ಞಪಾವಕಾಃ || ೯ ||

(ಚಿ. ಶಂ. ೪೫–೪೫)

ನನನ್ದುರ್ಗಾನ್ಧರ್ವಾಃ ಸರ್ವೇ ನನೃತುಶ್ಚಾಪ್ಸರೋ ಗಣಾಃ |
ಸಸೃಜುಃ ಪುಷ್ಪವರ್ಷಾಣಿ ದೇವಾ ಭೂಮ್ಯನ್ತರಿಕ್ಷಗಾಃ || ೧೦ ||

ಚಿ. ಶಂ. ೫–೪೪ )

ಆಸೀತ್ತದಾ ದಿವ್ಯಗಾನಂ ಸ್ವರ್ಗಲೋಕೇ ಚಿರಂ ಸುಖಮ್ |
ಪ್ರಸನ್ನಮಭವಚ್ಚಿತ್ತಂ ಸತಾಂ ವ್ರತಪರಾಮಪಿ || ೧೧ ||

[ ಚಿ. ಶಂ. ೫–೪೬ [

ತತಃ ಸಾ ದಶಮೇ ಮಾಸೇ ಸಂಪೂರ್ಣಶುಭಲಕ್ಷಣೇ |
ಷಡ್ವಿಂಶೇ ಶತಕೇ ಶ್ರೀಮದ್ಯುಧಿಷ್ಠಿರಶಕಸ್ಯ ವೈ || ೧೨ ||
[ಚಿ. ಶಂ. ೫–೩೭, 'ಮಾಸಿ' ಎಂದು ಪಾ॥ ]

ಏಕತ್ರಿಂಶೇಽಥ ವರ್ಷೇ ತು ಹಾಯನೇ ನನ್ದನೇ ಶುಭೇ |
ಮೇಷರಾಶಿಂ ಗತೇ ಸೂರ್ಯೇ ವೈಶಾಖೇ ಮಾಸಿ ಶೋಭನೇ || ೧೩ ||

ಶುಕ್ಲಪಕ್ಷೇ ಚ ಪಞ್ಚಮ್ಯಾಂ ತಿಥ್ಯಾಂ ಭಾಸ್ಕರವಾಸರೇ |
ಪುನರ್ವಸುಗತೇ ಚನ್ದ್ರೇ ಲಗ್ನೇ ಕರ್ಕಟಕಾಹ್ವಯೇ || ೧೪ ||
ಮಧ್ಯಾಹ್ನೇ ಚಾಭಿಜಿನ್ನಾಮ ಮುಹೂರ್ತೇ ಶುಭವೀಕ್ಷಿತೇ |
[ಚಿ. ಶಂ. ೫–೩೮. "ಮುಹೂರ್ತೇ ಚಾರ್ದ್ರಯಾ ಯುತೇ" ಎಂದು ಪಾಠಾಂತರ.]

ಸ್ವೋಚ್ಚಸ್ಥೇ ಕೇನ್ದ್ರಸಂಸ್ಥೇ ಚ ಗುರೌ ಮನ್ದೇ ಕುಜೇ ರವೌ |
ನಿಜತುಙ್ಗಗತೇ ಶುಕ್ರೇ ರವಿಣಾ ಸಙ್ಗತೇ ಬುಧೇ |
ಪ್ರಾಸೂತ ತನಯಂ ಸಾಧ್ವೀ ಗಿರಿಜೇವ ಷಡಾನನಮ್ || ೧೬ ||
[ಚಿ. ಶಂ. ೫–೩೯. ಇಲ್ಲಿರುವ ಮುಹೂರ್ತದ ವಿಷಯವನ್ನು ೪ನೆಯ ಪರಿಶಿಷ್ಟದಲ್ಲಿ ಚರ್ಚಿಸಿದೆ. ]

ಉದಯಾಚಲವೇಲೇವ ಭಾನುಮನ್ತಂ ಮಹೌಜಸಮ್ |
ದುರ್ನಿರೀಕ್ಷ್ಯೈಃ ಸ್ವತೇಜೋಭಿರ್ಭಾಸಯನ್ತಂ ದಿಶೋ ದಶ || ೧೭ ||
[ಚಿ. ಶಂ. ೩೯, ೪೧ ]

ಬಾಲತ್ವೇಽಪಿ ವಿಶಾಲಾಕ್ಷಮತಿವಿಸ್ತೃತವಕ್ಷಸಮ್ |
ಆಜಾನುಲಮ್ಬಿತಭುಜಂ ಸುವಿಶಾಲನಿಟಾಲಕಮ್ || ೧೮ ||
[ಚಿ. ಶಂ. ೫–೫೯, ೫೯ 'ಬಾಲಭಾವೇ' ಪಾ॥ ]

ಆರಕ್ತೋಪಾನ್ತನಯನವಿನಿನ್ದಿತಸರೋರುಹಮ್ |
ಮುಖಕಾನ್ತಿಪರಾಭೂತರಾಕಾಹಿಮಕರಾಕೃತಿಮ್ || ೧೯ ||
[ ಚಿ. ಶಂ. ೬೦, ೬೧ ]

ಶಙ್ಖಚಕ್ರಧ್ವಜಾಕಾರರೇಖಾಚಿಹ್ನಪದಾಮ್ಬುಜಮ್ |
ದ್ವಾತ್ರಿಂಶಲ್ಲಕ್ಷಣೋಪೇತಂ ವಿದ್ಯುದಾಭಕಲೇವರಮ್ || ೨೦ ||
[ ಚಿ. ಶಂ. ೫–೬೨ ]

ಪ್ರಮೋದಂ ದೃಷ್ಟಮಾತ್ರೇಣ ದಿಶನ್ತಂ ತಂ ಸ್ತನನ್ಧಯಮ್ |
ಪಾಯಂ ಪಾಯಂ ದೃಶಾ ಪ್ರೇಮ್ಣಾ ಶ್ರೀಕೃಷ್ಣಮಿವ ದೇವಕೀ || ೨೧ ||

ಪ್ರಪೇದೇ ನ ಕ್ಷಣಂ ತೃಪ್ತಿಂ ಚಕೋರೀವ ಸುಧಾಕರಮ್ |
ತಾದೃಶಂ ಬಾಲಕಂ ದೃಷ್ಟ್ವಾ ಸಾ ಬಭೂವಾತಿವಿಸ್ಮಿತಾ || ೨೨ ||
(ಚಿ. ಶಂ. ೫– ೬೩, ೬೪ ಕೊನೆಯ ಪಾದ 'ತ್ವಾರ್ಯಾ ಸಾ ಶುಭಲಕ್ಷಣಾ' ಪಾ.)

ಸ ಚಾದ್ಭುತಃ ಕಿಶೋರೋಽಪಿ ಕಿಞ್ಚಿದ್ವಿಚಲಿತಾಧರಃ |
ತಾಡಯನ್ ಚರಣೌ ಹಸ್ತೌ ರುರೋದ ಮಧುರಸ್ವನಮ್ || ೨೩ ||

( ಚಿದ್ವಿಲಾಸೀಯದಲ್ಲಿ ಇದರ ಹಿಂದೆ ಚತುರ್ಭುಜನಾಗಿ ತ್ರಿಣೇತ್ರನಾಗಿರುವ ಚಂದ್ರಶೇಖರನನ್ನು ನೋಡಿ ಚಕಿತಳಾಗಿ ಇವನು ವೃಷಾಚಲೇಶ್ವರನೇ ಎಂದು ನಿಶ್ಚಯಿಸಿ "ಬಾಲಭಾವದ ಲೀಲೆಗಳನ್ನು ತೋರಿಸು, ಸ್ವಾಮಿ" ಎಂದು ಬೇಡಿಕೊಂಡಳೆಂಬರ್ಥದ ಶ್ಲೋಕಗಳಿವೆ. ಪ್ರಕೃತಶ್ಲೋಕವು 'ತತಃ ಕಿಶೋರವತ್ಸೋಽಪಿ' ಎಂದು ಪ್ರಾರಂಭವಾಗಿದೆ. )

ತತ್ರತ್ಯಾ ವೃದ್ಧನಾರ್ಯೋಽಪಿ ಯಥೋಚಿತಮಥಾಚರನ್ |
ಬಾಲಕಂ ಮೇನಿರೇ ಪ್ರೋದ್ಯದಿನ್ದುಬಿಮ್ಬಮಿವೋಜ್ಜ್ವಲಮ್ || ೨೪ ||
(ಚಿ. ಶಂ. ೫–೫೧, ೬೧ ; ಪೂರ್ವೋತ್ತರಾರ್ಧಗಳು ವ್ಯತ್ಯಸ್ತಕ್ರಮದಲ್ಲಿವೆ.)
ತತಃ ಶ್ರುತ್ವಾ ಪಿತಾ ಸೋಽಪಿ ನಿಧಿಂ ಪ್ರಾಪ್ಯೇವ ನಿರ್ಧನಃ |
ಮುಮುದೇ ನಿತರಾಂ ಚಿತ್ತೇ ವಿತ್ತೇಶಂ ನಾಭ್ಯಲಕ್ಷ್ಯತ || ೨೫ ||
ಸ್ನಾತ್ವಾ ಶಿವಗುರುಸ್ತೂರ್ಣಂ ಯಜ್ವನಾಮಗ್ರಣೀಸ್ತತಃ |
ವಿಪ್ರಾನಾಕಾರಯಾಮಾಸ ಪುರನ್ಧ್ರೀರಪಿ ಸರ್ವತಃ || ೨೬ ||
ತದೋತ್ಸವೋ ಮಹಾನಾಸೀತ್ ಪುರೇ ಸದ್ಮನಿ ಸಂತತಮ್ |
ಧಾನ್ಯರಾಶೀನ್ ಮುಖಿಭ್ಯೋಽಸೌ ವಿದ್ಭ್ಯೋ ಭೂಯಃ ಪ್ರದತ್ತವಾನ್
ಧನಾನಿ ಭೂರಿ ವಿಪ್ರೇಭ್ಯೋ ವೇದವಿದ್ಭ್ಯೋ ದಿದೇಶ ಸಃ |
ವಾಸಾಂಸಿ ಭೂಯೋ ದಿವ್ಯಾನಿ ಸಫಲಾನಿ ಪ್ರದತ್ತವಾನ್ || ೨೪ ||
ಪುರನ್ಧ್ರೀಣಾಂ ಚ ನೀರನ್ಧ್ರಂ ವಸ್ತುಜಾತಮದಾದಸೌ ।
ಘಟೋಧ್ನೀರ್ಬಹುಶೋ ಗಾಶ್ಚ ಸಾಲಙ್ಕಾರಾಃ ಸದಕ್ಷಿಣಾಃ || ೨೮ ||
(ಚಿ. ಶಂ. ೫–೫೨ರಿಂದ ೫೭ರವರೆಗೆ ಇದೇ ಶ್ಲೋಕಗಳು ಇದೇ ಕ್ರಮದಲ್ಲಿ ಇರುತ್ತವೆ)
ತತಃ ಶಿವಗುರುರ್ಯಜ್ವಾ ಬ್ರಾಹ್ಮಣಾನ್ ಪೂರ್ವತೋಽಧಿಕಮ್ |
ಸಂತರ್ಪ್ಯ ಬನ್ಧುಭಿಃ ಸಾರ್ಧಂ ಮುದಿತೋ ನ್ಯವಸತ್ಸುಧೀಃ || ೩೦ ||

ಸರ್ವಜ್ಞಾನ :
ಶ್ರೀಚಿತ್ಸುಖೇಂದ್ರ ಗುರುರಾಜಸಮುದ್ಭವೋದ್ಯ-
ದ್ವೃತ್ತಂ ನಿಶಮ್ಯ ನಿತರಾಂ ಹೃಷಿತಂ ಮನೋ ಮೇ ।
ಅಗ್ರೇ ಯದದ್ಯ ವದ ತಚ್ಚರಿತಂ ಕ್ರಮೇಣ
ಭೂಯೋ ನತೋಽಸ್ಮಿ ಗುರವೇ ಭವತಾಪಹರ್ತ್ರೇ || ೩೧ ||

ಶ್ರೀಚಿತ್ಸುಖಃ :

ಸರ್ವಜ್ಞಾನಸುಧೀಮಣೇ ಸಕೃದಿಮಂ ಯೋ ವಾ ಶೃಣೋತ್ಯಾದರಾತ್
ಶ್ರೀಮಚ್ಛಙ್ಕರದೇಶಿಕೇನ್ದ್ರಚರಣಾವಿರ್ಭಾವಮತ್ಯದ್ಭುತಮ್ ।
ಸೋಽಪ್ಯದ್ಧಾ ಭವಿತಾ ಭಿದಾ ವಿಗಳಿತಸ್ತ್ವೈಕ್ಯಂ ಚ ಜೀವೇಶಯೋ–
ರ್ಜೀವನ್ಮುಕ್ತ ಇವಾಚರನ್ನತಿತರಾಂ ನಿಃಶ್ರೇಯಸಾಯೇಹತೇ ॥ ೩೨ ॥

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಶ್ರೀಮಚ್ಛಂಕರಭಗವತ್ಪೂಜ್ಯಪಾದಪಾಥೋಜ ಮದನಿಷ್ಯನ್ದಾಸ್ವಾದತುನ್ದಿಲಾನನ್ದಮಿಲಿನ್ದಾಯಮಾನಮಾನಸ ಶ್ರೀಚಿತ್ಸುಖಯತೀನ್ದ್ರ ಸರ್ವಜ್ಞಾನತಪೋಧನೇನ್ದ್ರಸಂವಾದೇ ಶ್ರೀಬೃಹಚ್ಛಂಕರವಿಜಯೇ ಶಙ್ಕರಾಚಾರ್ಯ ಸತ್ಪಥೇ ಶ್ರೀಶಙ್ಕರಪ್ರಾದುರ್ಭಾವಾಖ್ಯಂ ದ್ವಾತ್ರಿಂಶಪ್ರಕರಣಂ ಸಮಾಪ್ತಮ್

ವಿಶೇಷ : (1) ಚಿದ್ವಿಲಾಸೀಯದ ಶ್ಲೋಕಗಳನ್ನು ಬೃಹಚ್ಛಂಕರವಿಜಯ ಮೂಲದಲ್ಲಿರುವವೆಂದು ತೋರಿಸುವದಕ್ಕೆ ಚೌಕಕಂಸದಲ್ಲಿ ಸೂಚಿಸಿ ವಿಶೇಷ ವನ್ನೂ ಕೊಟ್ಟಿದೆ. ಈ ಬೃಹಚ್ಛಂಕರವಿಜಯದ ಒಂದು ಅಧ್ಯಾಯವು ಪೂರ್ಣ ವಾಗಿ ಸಿಕ್ಕಿರುವದರಿಂದ ಪೂರ್ಣಗ್ರಂಥವೂ ಕಾಂಚೀ (ಕುಂಭಕೋಣ) ಮಠದಲ್ಲಿ ಸಿಕ್ಕುವ ಸಂಭವವಿದೆ. ಹುಡುಕಿನೋಡುವದು ಅತ್ಯವಶ್ಯ.

(2) ಬೃಹಚ್ಛಂಕರವಿಜಯಕ್ಕೆ 'ಶಙ್ಕರಾಚಾರ್ಯಸತ್ಪಥ'ವೆಂದು ಹೆಸರೋ ಅಥವಾ ಆ ಗ್ರಂಥದ ಪ್ರಕೃತಭಾಗಕ್ಕೆ ಇದು ಹೆಸರೋ ತಿಳಿಯಲಿಲ್ಲ. ಆತ್ಮಬೋಧರ ಸುಷಮಾವ್ಯಾಖ್ಯಾನದಲ್ಲಿ (ಗು.ರ. ೧೯) 'ಮೌಲಾಮ್ನಾಯಶ್ಚ ಬೃಹಚ್ಛಂಕರವಿಜಯೇ ಶ್ರೀಶಙ್ಕರಾಚಾರ್ಯಸತ್ಪಥೇ ಸವಿಸ್ತರಂ ನಿರೂಪಿತಃ' ಎಂದಿದೆ. ಆದರೆ ಆತ್ಮಬೋಧರ ಪ್ರಾಮಾಣ್ಯವನ್ನು ಶಂಕಿಸು ವವರೂ ಇರುತ್ತಾರೆ.

(೩) ಗುರುಶಿಷ್ಯಸಂವಾದಕ್ರಮವು ಚಿದ್ವಿಲಾಸೀಯಕ್ಕೂ ಬೃಹಚ್ಛಂಕರ ವಿಜಯಕ್ಕೂ ಸಮಾನವಾಗಿದೆ. ಸಂವಾದದ ಮೂರನೆಯ ಶ್ಲೋಕವು ಚಿದ್ವಿಲಾಸ ದಲ್ಲಿ ಹೀಗೆಯೇ ಇದೆ. ತತ್ತ್ವಾನ್ವೇಷಕರಿಗೆ ಇದರಿಂದ ಯಾವದಾದರೊಂದು ಉಪಸಿದ್ಧಾಂತವನ್ನು ತೆಗೆಯುವದಕ್ಕೆ ಸಹಾಯವಾಗಬಹುದೆಂದು ನಮ್ಮ ನಿರೀಕ್ಷಣೆ.

## ೬. ಆನಂದಗಿರೀಯ

### (ಅ) ಆನಂದಗಿರೀಯದ ಪ್ರಾಚೀನಪಾಠ

( ಚರಿತ್ರೆಯ ಪುಟ ೪೨, ೫೩ )

ಈ ಪಾಠದ ಕೆಲವು ಶ್ಲೋಕಗಳು 'ಶ್ರೀಶಾಙ್ಕರಪೀಠತತ್ತ್ವದರ್ಶನಮ್' ಎಂಬ ಗ್ರಂಥದಲ್ಲಿ (ಪುಟ ೧೫ರಲ್ಲಿ) ಇದೆ. ಇವುಗಳಿರುವ ಪುಸ್ತಕವು ೧೭೬೭ನೆಯ ಶಕೆಯಲ್ಲಿ ಬರೆದದ್ದೆಂದು ಹೇಳಲಾಗಿದೆ.

ಕಾಲಟಾಖ್ಯೇ ಗ್ರಾಮವರ್ಯೇ ಕೇರಲಾಲಙ್ಕೃತೀಕೃತೇ ।
ವಿದ್ಯಾಧಿರಾಜನಾಮ್ನಾ ಯಃ ಪ್ರಾಜ್ಞಃ ಶಿವಗುರುರ್ಬಭೌ ॥
ತತಃ ಸದಾಶಿವಃ ಶಮ್ಭುರ್ಲೋಕಾನುಗ್ರಹತತ್ಪರಃ ।
ತಪೋಮಹಿಮ್ನಾ ತತ್ಪತ್ನ್ಯಾಂ ಪ್ರವಿವೇಶ ಸ್ವತೇಜಸಾ ॥
ಸಾ ದಧಾರ ಸತೀ ಗರ್ಭಮಾದಿತ್ಯಸಮತೇಜಸಮ್ ।
ವ್ಯಜಾಯತ ಶುಭೇ ಕಾಲೇ ಪಞ್ಚೋಚ್ಚಗ್ರಹಸಂಯುತೇ ॥

X X X X

ಆನನ್ದಂ ಬಾನ್ಧವಾಃ ಸರ್ವೇ ಪುಷ್ಪವರ್ಷೈರ್ದಿವಶ್ಚ್ಯುತಃ (?) ।
ಶನ್ನೋರ್ವರಮನುಸ್ಮೃತ್ಯ ಪಿತಾ ಶಿವಗುರುಃ ಕಿಲ ॥
ಆಯುಷೋ ಹ್ರಸ್ವತಾಂ ಜಾನನ್ನಪಿ ನೋವಾಚ ಕಿಞ್ಚನ ।
ಸರ್ವಜ್ಞತ್ವಾದಿಸುಗುಣಾನ್ ಶಮ್ಭೂಕ್ತಾಂಸ್ತಸ್ಯ ಸಂಸ್ಮರನ್ ॥

X X X X

ತಸ್ಯ ಶಙ್ಕರ ಇತ್ಯಾಖ್ಯಾಂ ಚಕ್ರೇ ಶಿವಗುರುಸ್ತತಃ ।

X X X X

ಪಞ್ಚವರ್ಷಸ್ಯ ವರ್ಣಾದಿಗ್ರಹಣೇನಾಸ್ಯ ಧೀಮತಃ ।
ಉಪನೀತಿಮಕೃತ್ವೈವ ಮಮಾರ ಮಹಿತಃ ಪಿತಾ ॥

ವಿಶೇಷ : ಇಲ್ಲಿ 'ಕಾಲಟಾಖ್ಯೇ' ಎಂಬ ಶ್ಲೋಕವು ನಾವು ಹಿಂದಿನ ಪರಿಶಿಷ್ಟದಲ್ಲಿ ಉದಾಹರಿಸಿರುವ 'ಬೃಹಚ್ಛಂಕರವಿಜಯ'ದ ೩೨ನೆಯ ಪ್ರಕರಣದ ಮೊಟ್ಟಮೊದಲನೆಯ ಶ್ಲೋಕವೇ ಆಗಿದೆ. 'ತತ. ಸದಾಶಿವಃ' ಎಂಬ ಶ್ಲೋಕವು ಅದೇ ಪ್ರಕರಣದ ೨ನೆಯ ಶ್ಲೋಕಹಲ್ಲಿದೆ. 'ತಪೋಮಹಿಮ್ನಾ' ಎಂಬ ಶ್ಲೋಕವು ಅಲ್ಲಿ ೪ನೆಯ ಶ್ಲೋಕದಲ್ಲಿದೆ. 'ಸಾ ದಧಾರ' ಎಂಬ ಶ್ಲೋಕವೂ ಅದೇ ೪ನೆಯ ಶ್ಲೋಕದಲ್ಲಿದೆ. ('ಪಞ್ಚವರ್ಷಸ್ಯ' ಎಂಬ ಶ್ಲೋಕದ ವಿಷಯಕ್ಕೆ ಚರಿತ್ರೆಯ ಪುಟ ೩೩ರಲ್ಲಿ ಹೇಳಿರುವವದನ್ನು ನೋಡಿರಿ,) ಈ ಹೋಲಿಕೆಗಳನ್ನು ಮನದಂದನೆ ಬೃಹಚ್ಛಂಕರವಿಜಯ, ಚಿದ್ವಿಲಾಸ, ಈ ಪ್ರಾಚೀನಪಾಠದ ನಿರ್ಮಾಪಕ–ಇವರು ಮೂರರಲ್ಲಿ ಯಾರೋ ಮತ್ತೊಬ್ಬರಿಂದ ವಿಷಯವನ್ನು ತೆಗೆದು ಕೊಂದಿದ್ದಾರೆಂದು ನಿಶ್ಚಿತವಾಗುತ್ತದೆ. ನಮ್ಮ ಅಭಿಪ್ರಾಯದಲ್ಲಿ ಈ ಪ್ರಾಚೀನಪಾಠವು ಯಾರೋ ಅರ್ವಾಚೀನರ ಕೈವಾಡದಿಂದ ಕೈಬರಹದ ಪುಸ್ತಕದಲ್ಲಿ ಸೇರಿರಬೇಕು. ಎನ್ನಿಸುತ್ತದೆ. ಶೋಧನಾಕಾರ್ಯದಲ್ಲಿ ನಿಪುಣರಾದ ವಿದ್ವಾಂಸರು ಇದರ ನಿಜವನ್ನು ಗೊತ್ತುಪಡಿಸಬೇಕು.

## (ಆ) ಆನಂದಗಿರೀಯದಲ್ಲಿರುವ ಪಾಠಾಂತರಗಳು

ಕಲಕತ್ತೆಯಲ್ಲಿ ಅಚ್ಚಾಗಿರುವ ದೇವನಾಗರಿಯ ಪ್ರತಿಗೂ ತೆಲುಗುಪ್ರತಿಗೂ ಇರುವ ಮುಖ್ಯಪಾಠಭೇದಗಳನ್ನು ಕಾಂಚೀಮಠದ ಪ್ರತಿವಾದಿಗಳು ತೋರಿಸಿ ಇದನ್ನು ಮಠದವರೇ ಸೇರಿಸಿರುತ್ತಾರೆನ್ನುತ್ತಾರೆ.

| ಕಲಕತ್ತೆ | | | | | ತೆಲುಗು |
|---|---|---|---|---|---|
| ಪ್ರ ೫೫ | ಪು ೧೭೯ | ತಸ್ಮಾದಾಚಾರ್ಯಮವಲಮ್ಬ್ಯ ೪೫ | | | ಪು ೨೦೯ |
| ಪ್ರ ೫೫ | ಪು ೧೮೦ | ಸ ತು ನಾರಾಯಣಃ | | | ಪು ೨೧೦ |
| ಪ್ರ ೬೨ | ಪು ೧೯೦ | ತತಃ ಪರಂ ಸರಸವಾಣೀಂ | | | ಪು ೨೨೪ |
| ಪ್ರ ೬೪ | ಪು ೧೯೧ | ತತ್ರೈವ ಪರಮಗುರುಮಪೂರ್ವಶಾಬ್ಧ | | | ಪು ೨೨೫ |
| ಪ್ರ ೬೫ | ಪು ೧೯೬ | ತಸ್ಮಾತ್ ಸರ್ವೇಷಾಂ | | | ಪು ೨೪೧ |
| ಪ್ರ ೬೭ | ಪು ೨೦೪ | ನಿಜಶಿಷ್ಯಪರಂಪರಾಂ ಶೃಙ್ಗಗಿರಿಸ್ಥಾನಸ್ಥಾಂ ಕೃತ್ವಾ | | | ಪು ೨೦೪ |
| ಪ್ರ ೭೪ | ಪು ೨೧೬ | ತತಃ ಪರಂ ಸರ್ವಜ್ಞಃ | | | ಪು ೨೫೫ |

ವಿಶೇಷ : ಈ ತೆಲುಗುಪ್ರತಿಯಲ್ಲಿ ಲಿಂಗದ ವಿಚಾರಗಳೂ ಕಾಂಚಿಯ ವಿಚಾರವೂ ಬಂದಿವೆ. ಆದ್ದರಿಂದ ಕಾಂಚೀಪರಂಪರೆಯ ಅನುಯಾಯಿಗಳ ಬದಲಾವಣೆಯಿದು ಎಂದೇ ಹೇಳಬೇಕಾಗಿದೆ. ಆದರೆ ಕಾಂಚೀಪೀಠದ ಅಭಿಮಾನಿಗಳಾದ ಎನ್. ವೆಂಕಟರಾಮನ್‌ರವರು ಇದು ಕೃತ್ರಿಮ, ನಿರುಪಯೋಗಿಗ್ರಂಥವೆಂದು ಸ್ಪಷ್ಟವಾಗಿ ಹೇಳಿಬಿಟ್ಟಿದ್ದಾರೆ! (NVSSK p 107).

---

## ೭. ಕೂಷ್ಮಾಂಡಶಂಕರವಿಜಯ

(ಚರಿತ್ರೆ. ಪುಟ. ೪೨, ೪೩–೧೦೯)

ಶಂಕರಭಗವತ್ಪಾದರವರ ಚರಿತ್ರೆಯ ವಿಷಯಗಳನ್ನು ಸಂಗ್ರಹಿಸುವಾಗ ಈ ಗ್ರಂಥವು ನಮಗೆ ದೊರೆತಿರಲಿಲ್ಲ. ಸೋಮನಾಥಯ್ಯನವರು (ಸೋ ಶಂ. ತ್ರಿ. ೨೧೧) ಬರೆದಿದ್ದ ಅನುಬಂಧಾಂಶವನ್ನು ನೋಡಿ ನಮ್ಮ ಅಭಿಪ್ರಾಯಗಳನ್ನು ಬರೆದಿದ್ದೆವು. ಈಗ ನಮಗೆ ಪೂರ್ಣಗ್ರಂಥವು ದೊರಕಿದೆ. ಆದರೆ ನಮ್ಮ ಅಭಿಪ್ರಾಯವೇನೂ ಅದರ ವಿಷಯಕ್ಕೆ ಮಾರ್ಪಟ್ಟಿಲ್ಲ.

ಗ್ರಂಥಕ್ಕೆ ಸಂಕ್ಷಿಪ್ತ ಶ್ರೀಶಙ್ಕರಕೃಥಾಮೃತಸಾರವೆಂಬ ಹೆಸರನ್ನು ಕೊಟ್ಟು ಎಡತೊರೆಯ ಪೀಠಾಧಿಪರಾಗಿದ್ದ ಶ್ರೀ ಯೋಗಾನಂದಸ್ವಾಮಿಗಳವರು 1905ರಲ್ಲಿ ಪ್ರಕಟಿಸಿದರು. ಬೆಂಗಳೂರು ಬುಕ್ಕುಡಿಪೋ ಮುದ್ರಾಕ್ಷರಶಾಲೆಯಲ್ಲಿ ಅಚ್ಚಾಗಿದ್ದ ಪುಸ್ತಕವನ್ನು ನೋಡಿ ನಾವು ಪ್ರತಿಲಿಪಿಯನ್ನು ಮಾಡಿಕೊಂಡಿರುತ್ತೇವೆ. ಮೂಲದಲ್ಲಿ 'ಶ್ರೀಶಙ್ಕರವಿಜಯಸಂಗ್ರಹೇ ಈಶ್ವರೋಪದೇಶೋ ನಾಮ ಪ್ರಥಮೋಽಧ್ಯಾಯಃ' ಎಂದು ಇರುವದರಿಂದ ಇದನ್ನು ಶಂಕರವಿಜಯಸಂಗ್ರಹವೆಂದು ಗ್ರಂಥಕರ್ತನು ಕರೆದಿರುತ್ತಾನೆಂಬುದು ಸ್ಪಷ್ಟ. ಆದರೂ ಈ ಗ್ರಂಥಕ್ಕೆ ಕೂಷ್ಮಾಂಡಶಂಕರವಿಜಯವೆಂದೇ ಹೆಸರು ರೂಢಿಯಲ್ಲಿದೆ. ಇದರ ಕೆಲವು ಶ್ಲೋಕಗಳನ್ನು ಇಲ್ಲಿ ಉದಾಹರಿಸುವೆವು. ಶ್ಲೋಕಸಂಖ್ಯೆ ನಮ್ಮದು ; ಅಚ್ಚಿನಲ್ಲಿಲ್ಲ.

## ೧ನೆಯ ಅಧ್ಯಾಯ

ಪುರಾ ಭೂಮಣ್ಡಲೇ ಕಶ್ಚಿದ್ದೇಶಃ ಕೇರಲಸಂಜ್ಞಕಃ |
ಧನಧಾನ್ಯಸಮೃದ್ಧಶ್ಚ ಸಂವೃತೋ ಬಹುಭಿರ್ಜನೈಃ || ೪ ||
ಇಲಾ ನಾಮ ನದೀ ತತ್ರ ಸರ್ವಪಾಪಪ್ರಣಾಶಿನೀ |
ಮರುದ್ವೃಧಾ ನಾಮ ಮಹಾ[1] ತಟಿನೀ ಚ ವಿರಾಜಿತಾ || ೫ ||
ಚೂರ್ಣೇತಿ[2] ಪ್ರಥಿತಾ ಲೋಕೇ ತಟಿನೀ ಪುಣ್ಯದಾ ಪರಾ |
ದೇವಾಲಯಾ ಆಶ್ರಮಾಶ್ಚ ತತ್ತೀರೇ ನಿವಸನ್ತಿ ಹಿ || ೬ ||
ಪ್ರಖ್ಯಾತಂ ಪೃಥಿವೀಮಧ್ಯೇ ಪದ್ಮನಾಭಸ್ಯ ಮನ್ದಿರಮ್ |
ಸರ್ವೇಷಾಮೇವ ಲೋಕಾನಾಂ ದರ್ಶನಾದೇವ ಮುಕ್ತಿದಮ್ || ೭ ||
ಮಹತ್ತತ್ರ ಪ್ರವಿಖ್ಯಾತಂ ಕ್ಷೇತ್ರಂ ಕಾಲಟಿಸಂಜ್ಞಯಾ |
ಪುಷ್ಪಿತೈಃ ಫಲಿತೈರ್ವೃಕ್ಷೈರ್ವಿವಿಧೈರುಪಶೋಭಿತಮ್ || ೮ ||
ಕೈಲಾಸಾಧಿಪತಿಶ್ಶಮ್ಭುಃ ಕದಾಚಿದ್ವೀಕ್ಷಣೇಚ್ಛಯಾ |
ಸರ್ವಲಕ್ಷಣಸಂಪನ್ನೋ ಭಿಕ್ಷುರೂಪಂ[3] ಸಮಾಶ್ರಿತಃ) || ೯ ||
ಚರನ್ ಕಲಿಯುಗೇ ಭೂಮೌ ಜನಾನ್ ಪಾಪರತಾನ್ ಬಹೂನ್ |
ಬ್ರಾಹ್ಮಣಾನ್ ಕ್ಷತ್ರಿಯಾನ್ ವೈಶ್ಯಾನ್ ಸ್ವಧರ್ಮಾಚಾರವರ್ಜಿತಾನ್ || ೧೦ ||
ವೇದಾಗ್ನಿಹೋತ್ರಹೀನಾಂಶ್ಚ ದೃಷ್ಟ್ವಾ ಶಮ್ಭುರ್ಮಹೀತಲೇ |
ವಿಲೋಕ್ಯ ಕಾಲಟೀಕ್ಷೇತ್ರಂ ಸುಪ್ರಶಸ್ತಂ ಮನೋಹರಮ್ || ೧೪ ||
ಆವಿರ್ಭೂಯಾತ್ರ ದುಷ್ಟಾನಾಂ ಕರ್ತವ್ಯೋ ನಿಗ್ರಹೋ ಮಯಾ |
ಇತ್ಯಾಲೋಚ್ಯ ತದಾ ಸ್ನಾತ್ವಾ ಕಾಲಟೀಕ್ಷೇತ್ರಮಾವಿಶತ್ || ೧೫ ||
ತದಾನೀಂ ಶಾನ್ತ[4]ಯತಿನಂ ದೃಷ್ಟ್ವೈವ ಗತಭರ್ತೃಕಾ[5] |
ದೇವಪೂಜಾಪರಾ ನಿತ್ಯಂ ಶಿವಭಕ್ತಿಪರಾಯಣಾ || ೧೬ ||
ಪ್ರಾತಃಸ್ನಾನಾರ್ಥಮಾಯಾನ್ತೀ ಭಿಕ್ಷುರೂಪಧರಂ ಶಿವಮ್ |
ಪ್ರಣಿಪತ್ಯಾಥ ಪಪ್ರಚ್ಛ ಕಸ್ಮಾದ್ದೇಶಾತ್ ಸಮಾಗತಃ || ೧೭ ||
ಆಗತೋಽಹಂ[6] ಮಹಾಭಾಗೇ ಕೈಲಾಸಾಧಿಪತಿಃ ಶಿವಃ |
ಆವಿರ್ಭವಾಮಿ ಚಾತ್ರೈವ ಸೇವಾಂ ಕರ್ತುಮಿಹಾರ್ಹಸಿ || ೧೮ ||

---

1, 'ತಥಾ ತಟಿನೀ' ಪಾ||
2. 'ಪೂರ್ಣಾ' ಎಂಬ ಹೆಸರಿಲ್ಲ; 'ಮರುದ್ವೃಧಾ' ಎಂದಿರುವದನ್ನು ಲಕ್ಷಿಸಬೇಕು
3. ಈಶ್ವರನು ಸಂನ್ಯಾಸಿಯ ರೂಪದಲ್ಲಿ ಬಂದನೆಂದು ಇಲ್ಲಿ ಹೇಳಿದೆ,
4. 'ಇದಾನೀಂ ಸರ್ವ (ಶರ್ವ ") ಯತಿನಂ' ಪಾ||
5, ತಾಯಿಯು ವಿಭಬ ಎಂದಿರುವದನ್ನೂ ಲಕ್ಷಿಸಬೇಕು
6. 'ಅಗತೋಽಯಂ' ಪಾ||

ಇತ್ಯುಕ್ತ್ವಾ ಖಲು ಕೂಷ್ಮಾಣ್ಡಬೀಜಮೇಕಂ ಪ್ರದಾಯ ಚ |
ತದ್ರಕ್ಷಣಾಯ ಯತ್ನೇನ ಸ್ತಮ್ಭಮೂಲೇ ಪ್ರಣಿಕ್ಷಿಪ || ೧೯ ||
ಜಲಮಾಸಿಞ್ಚ[1] ತನ್ಮೂಲೇ ವಲ್ಲೀಂ ಪುಷ್ಪಂ ಫಲಂ ತಥಾ |
ಮಾ[2] ಚ್ಛೇದಯ ಫಲಂ ಪಕ್ವಂ ಸ್ವಯಮೇವ ಪತಿಷ್ಯತಿ || ೨೦ ||
ಇತ್ಯುಕ್ತ್ವಾನ್ತರ್ದಧೇ ಶಮ್ಭುಃ ಕೈಲಾಸಮಗಮತ್ ಕ್ಷಣಾತ್ ||

X X X X

ಇತಿ ಶ್ರೀಶಙ್ಕರವಿಜಯಸಙ್ಗ್ರಹೇ, ಈಶ್ವರೋಪದೇಶೋ ನಾಮ ಪ್ರಥಮೋಽಧ್ಯಾಯಃ

ಈ ಅಧ್ಯಾಯದಲ್ಲಿ ೨೨ ಶ್ಲೋಕಗಳಿವೆ.

## ೨ನೆಯ ಅಧ್ಯಾಯ

ಸಾ ಬೀಜಂ ಚ ತತಃ ಸಮ್ಯಕ್ ಸ್ತಮ್ಭಮೂಲೇ ನಿಧಾಯ ಚ |
ಜಲಮಾಸಿಞ್ಚ(ಚ್ಯ ?) ಯತ್ನೇನ ರರಕ್ಷ ಸುಚಿರಂ ಮುದಾ || ೧ ||
ಫಲಮೇಕಂ ತದಾ ಪಕ್ವಂ ಸ್ತಮ್ಭಾಗ್ರಾನ್ನಿಪಪಾತ ಹ |
ಫಲೇ ಚ ಪತಿತೇ ತತ್ರ ಮಹಾಪುರುಷಮೀಶ್ವರಮ್ || ೨ ||
ದೃಷ್ಟ್ವಾ ಬಾಲಕಮಾದಾಯ ಸಂರರಕ್ಷ[3] ಪ್ರಯತ್ನತಃ |
ತದಾನೀಂ ಬಾಲರುದಿತಂ ಶ್ರುತ್ವಾ ತತ್ರಾಖಿಲಾ ಜನಾಃ || ೩ ||
ಆಗತ್ಯ ತದ್ಗೃಹಂ ಶೀಘ್ರಂ ಸಬಾಲಾಂ ತಾಮಥಾಬ್ರುವನ್ |
ಅಪುತ್ರಾಯಾಸ್ತವ ಕಥಂ ಬಾಲ ಏಷ ಸಮಾಗತಃ || ೪ ||
ಇತ್ಥಂ ಜನೋದಿತಂ[4] ಶ್ರುತ್ವಾ ಸಾಽಬ್ರವೀತ್ ಭಯವಿಹ್ವಲಾ |
ಇಹಾಗತ್ಯ ಯತಿಃ ಕಶ್ಚಿತು ಬೀಜಮೇಕಂ ಪ್ರದತ್ತವಾನ್ || ೫ ||
ರಕ್ಷೇತ್ಯಮೋಚನ್ಮಹ್ಯಂ ತದ್ರಕ್ಷಿತಂ ಚ ಮಯಾದರಾತ್ |
ತತ್ರ ಜಾತಾತ್ ಫಲಾತ್ತದ್ವತ್[5] ಪತಿತಾದೇಷ ಬಾಲಕಃ || ೬ ||
ಲಬ್ಧಶ್ಚಾನ್ಯನ್ನ ಜಾನೇಽಹಮಿತಿ ಶ್ರುತ್ವಾ ಚ ತೇ ಜನಾಃ |
ನಾರೀಂ ನಿರ್ಭರ್ತ್ಸ್ಯ ಕೋಪೇನ ಸರ್ವೇಽಪಿ ಸ್ವಗೃಹಂ ಯಯುಃ || ೭ ||
ತತಃ ಸಾ ಬಾಲಕಂ ಸಮ್ಯಗತಿಹರ್ಷಾದಪಾಲಯತ್ |
ಏತಸ್ಮಿನ್ನನ್ತರೇ ಕಾಲೇ ಸಮಾಗತ್ಯ ಬೃಹಸ್ಪತಿಃ || ೮ ||
ವೇದಶಾಸ್ತ್ರಪುರಾಣಾನಿ ಸರ್ವಾಣ್ಯುಪದಿದೇಶ ಹ |
ತತಃ ಸ ವೇದಶಾಸ್ತ್ರಾರ್ಥಪುರಾಣಾದಿಷು ದಕ್ಷತಾಮ್ || ೯ ||
ಆಗಮಚ್ಚ ತತಃ ಸಮ್ಯಗ್ದಿವ್ಯಜ್ಞಾನೀ ತದಾಽಭವತ್ |
ತತಃ ಸಂನ್ಯಾಸಮಾದಾಯ ಯಾತೋ ವೈ ಗುರುಸಂನಿಧಿಮ್ || ೧೦ ||
ಗೌಡಪಾದಾಭಿಧಾನಸ್ಯ ಶಿಷ್ಯಃ ಸರ್ವವಿದಾಂ ವರಃ |
ಗೋವಿನ್ದಭಗವಾನ್ ಪ್ರೀತ್ಯಾ ಬಾಲಸ್ಯೋಪಾದಿಶನ್ಮನುಮ್ || ೧೧ ||

---

1, ‘ಬಿಲಮಾಸೀಚ್ಚ’ ಪಾ॥ 2, ‘ನ’
3. ‘ಸಮರಕ್ಷತ’ ಪಾ॥ 4, ‘ಜನವಚಃ’ 5, ‘ಸದ್ಯಃ’ ಪಾ॥

ಕುಂಬಳಕಾಯಲ್ಲಿ ಹುಟ್ಟಿದ್ದ ಮಗುವಿಗೆ ಬೃಹಸ್ಪತಿಯ ಉಪದೇಶ, ಗೋವಿಂದ ಭಗವತ್ಪಾದರ ಮಂತ್ರೋಪದೇಶ —ಇವುಗಳನ್ನು ಗಮನಿಸಿರಿ.

ಈ ಅಧ್ಯಾಯದಲ್ಲಿ ೧೨ ಶ್ಲೋಕಗಳಿವೆ.

## ೩ನೆಯ ಅಧ್ಯಾಯ

ಆಚಾರ್ಯರು ಬದರಿಗೆ ಹೋಗಿ ಭಾಷ್ಯವನ್ನು ರಚಿಸಿ ತಾಯಿಯು ಸ್ಮರಿಸಿದ್ದರಿಂದ ಊರಿಗೆ ಬಂದರು. ಅಲ್ಲಿ ಬ್ರಾಹ್ಮಣರು ದಹನಕ್ರಿಯೆಗೆ ಸಹಾಯಮಾಡದಿರಲು ದೇವತೆಗಳನ್ನು (?) ಕರೆಯಿಸಿ ಅವರಿಂದ ಕ್ರಿಯೆಯನ್ನು ಮಾಡಿಸಿದರು. ಬಳಿಕ ಬದರಿಗೆ ಹೋಗಿ ವಿಷ್ಣುಶರ್ಮನೆಂಬ ಬ್ರಾಹ್ಮಣನಿಗೆ ಸಂನ್ಯಾಸವನ್ನು ಕೊಟ್ಟರು. ಪ್ರಯಾಗದಲ್ಲಿ ಹಸ್ತಾಮಲಕನು ಶಿಷ್ಯನಾದನು. ತೋಟಕನು ಮೂರನೆಯ ಶಿಷ್ಯನು. ಕಾಪಾಲಿಕಾದಿದುಷ್ಟಮತದವರನ್ನು ವಾದದಲ್ಲಿ ಜಯಿಸಿ ವರ್ಣಾಶ್ರಮಧರ್ಮವನ್ನು ಸ್ಥಾಪಿಸಿದರು —ಎಂಬುದು ಮೂರನೆಯ ಅಧ್ಯಾಯದ ಸಾರ. ಈ ಅಧ್ಯಾಯದಲ್ಲಿ ೨೦ ಶ್ಲೋಕಗಳಿವೆ.

## ೪ನೆಯ ಅಧ್ಯಾಯ

ಅಲ್ಲಿಂದ ಆಚಾರ್ಯರು ಸಿದ್ಧ(?)ಪುರಿಗೆ ಹೋದರು ; ಅಲ್ಲಿ ಸಂನ್ಯಾಸಾಶ್ರಮದೂಷಕನಾದ ಮಂಡನಮಿಶ್ರನೆಂಬ ಬ್ರಾಹ್ಮಣನಿದ್ದನು. ಅವನ ಹೆಂಡತಿ ಸುಶೀಲೆ. ಶ್ರಾದ್ಧದ ದಿನ ಆಚಾರ್ಯರು ಸಾಲಗ್ರಾಮಸ್ಥಾನದಲ್ಲಿ ಕಾಲುಚಾಚಿರಲು 'ಕುತೋ ಮುಂಡೀ' ಮುಂತಾಗಿ ವಾದಕ್ಕೆ ಅವಕಾಶವಾಯಿತು. ಈ ಸಂದರ್ಭದಲ್ಲಿ ಮಾಧವೀಯದ ಶ್ಲೋಕಗಳು (೭ರಿಂದ೨೧ರವರೆಗೆ) ಬಂದಿವೆ. ಮುಂದೆ ವ್ಯಾಸರ ವಚನದಂತೆ ಭಿಕ್ಷೆಗೆ ಆಚಾರ್ಯರನ್ನು ಕರೆದನು. (ಈ ಭಾಗವು ವಚನದಲ್ಲಿದೆ). ಮುಂದಿನ ಪಾದಭಾಗವು ಚಿದ್ವಿಲಾಸೀಯವನ್ನು ಹೋಲುತ್ತಿದೆ. ಈ ಅಧ್ಯಾಯದಲ್ಲಿ ೩೭ ಶ್ಲೋಕಗಳಿವೆ.

## ೫ನೆಯ ಅಧ್ಯಾಯ

ಇದರಲ್ಲಿ ವಾಣಿಯೊಡನೆ ಕಾಮಕಲೆಯಲ್ಲಿ ವಾದಮಾಡಿದ ವೃತ್ತಾಂತವಿದೆ. ವಾದವು ಆದಬಳಿಕ

ಸಮಾಸ್ಥಿತೈಃ ಸಭಾಸದ್ಭಿರತ್ಯರ್ಥಂ ಮಾನಿತಸ್ತದಾ ।
ವಾಣೀಂ ಪ್ರಾಹ ಮುದಾ ಯುಕ್ತಃ ಸಮಾಗಚ್ಛ ಮಯಾ ಸಹ ॥ ೮ ॥
ಇತಿ ಶ್ರುತ್ವಾ ಗುರೋರ್ವಾಕ್ಯಂ ವಾಣೀ ತು ತಮಭಾಷತ ।
ಆಗಚ್ಛಾಮಿ ತ್ವಯಾ ಸಾರ್ಧಂ ಪಶ್ಚಾನ್ಮಾಂ ನಾವಲೋಕಯ ॥ ೯ ॥
ಆಲೋಕಯಸಿ ಚೇತ್ತ್ವಂ ಹಿ ಗಚ್ಛಾಮಿ ಭವನಂ ಮಮ ।
ತಥೇತ್ಯುಕ್ತ್ವಾ ಪುರೋ ಗಚ್ಛನ್ ಗುರುಃ ಪಂಪಾಪುರಂ ಪ್ರತಿ ॥ ೧೦ ॥

ಆಯಾತಿ ವಾ ನ ವೇತೀತಿ ಪಶ್ಚಾದ್ಭಾಗಂ ಪ್ರದೃಷ್ಟವಾನ್ ।
ತದಾಗತ್ಯ ಗುರುಂ ಗನ್ತುಮನುಜ್ಞಾಂ ದಾತುಮರ್ಹಸಿ ॥ ೧೧ ॥

[ಇಲ್ಲಿಯವರೆಗಿನ ಕಥೆಯ ಸಾರವನ್ನು ಚರಿತ್ರೆಯ ೨೧೨ನೆಯ ಪುಟದಲ್ಲಿ ಬರೆದಿದೆ.]

ಇತ್ಯುಕ್ತ್ವಾ ತು ತದಾದ್ಯದೃಶ್ಯಾ ಬ್ರಹ್ಮಲೋಕಮವಾಪ ಸಾ ।
ಭವಂ ಪ್ರದಕ್ಷಿಣೀಕೃತ್ಯ ಜಿತ್ವಾ ತತ್ರ ಸುದುರ್ಮದಾನ್ ।
ಷಣ್ಮತಂ ಸ್ಥಾಪಯಾಮಾಸ ಪೃಥಿವ್ಯಾಂ ಶಙ್ಕರೋ ಗುರುಃ ॥ ೧೨ ॥
ಶೈವಂ ಚ ವೈಷ್ಣವಂ ಶಾಕ್ತಂ ಸೌರಂ ವೈನಾಯಕಂ ತಥಾ ।
ಸ್ಕಾನ್ದಂ ಚ ಭಕ್ತಿಮಾರ್ಗಂ ಚ (?) ದರ್ಶನಾನಿ ಷಡೇವ ಹಿ ॥ ೧೩ ॥
ಏವಂ ಕ್ರಮೇಣ ಸಕಲಂ ಷಣ್ಮತೋದ್ಧಾರಣಂ ಕ್ರಮಾತ್ ।
ಕೃತ್ವಾ ಜಿತ್ವಾ ಚ ವಿಮತಾನ್ ರಾಮಸೇತುಮವಾಪ ಸಃ ॥ ೧೪ ॥
ಸುರೇಶ್ವರಾಭಿಧೋ ಯೋಗೀ ಸತ್ಯಲೋಕಮವಾಪ ಸಃ ।
ಪದ್ಮಪಾದಾಭಿಧೋ ಭಿಕ್ಷುಃ ಪ್ರಾಪ್ತವಾನ್ ವೈಷ್ಣವಂ ಪದಮ್ ॥ ೧೫ ॥
ಹಸ್ತಾಮಲಕಸಂಜ್ಞಸ್ತು ಶಕ್ರಲೋಕಮವಾಪ್ತವಾನ್ ।
ಯಯೌ ತೋಟಕಯೋಗೀ ತು ಸೂರ್ಯಲೋಕಮನುತ್ತಮಮ್
ಏವಂ ಶಿಷ್ಯಾಸ್ತು ಚತ್ವಾರಸ್ತತ್ತದ್ದೇವಾಂಶಸಂಭವಾಃ ।
ಸ್ವಂ ಸ್ವಂ ಸ್ಥಾನಂ ಕ್ರಮೇಣೈವ ಶಙ್ಕರಾನುಗ್ರಹಾದ್ಯಯುಃ ॥ ೧೬ ॥
ಈದೃಶಂ ಶಙ್ಕರಾಚಾರ್ಯಚರಿತಾಮೃತಮದ್ಭುತಮ್ ।
ಶ್ರೋತವ್ಯಂ ಕೀರ್ತಿತವ್ಯಂ ಚ ಭಕ್ತ್ಯಾ ಸರ್ವೈರ್ಮನೀಷಿಭಿಃ ॥ ೧೭ ॥

ಸಕಲಭುವನಕರ್ತಾ ಸರ್ವಪಾಪೈಕಹರ್ತಾ
ಸುಜನನಿಚಯಭರ್ತಾ ಬಾಲಚನ್ದ್ರಸ್ಯ ಧರ್ತಾ ।
ಅಖಿಲಸುಖವಿಧಾತಾ ಸರ್ವಲೋಕೈಕನೇತಾ
ರಜತಗಿರಿಸುಯಾತಾ ಶಙ್ಕರಃ ಶ್ರೀಪ್ರದಾತಾ ॥

[ಇಲ್ಲಿ ಶಿಷ್ಯರು ಆಯಾ ದೇವತೆಗಳನ್ನು ಸೇರಿದರೆಂದು ಹೇಳಿರುವ ಶ್ಲೋಕಗಳು, ಸೋಮನಾಥಯ್ಯನವರಿಗೆ ಸಿಕ್ಕಿದ್ದವೋ ಇಲ್ಲವೋ ಹೇಳುವದಕ್ಕೆ ಬರುವದಿಲ್ಲ. ಅವರಲ್ಲಿದ್ದ ಪುಸ್ತಕದಲ್ಲಿ ಐದೇ ಅಧ್ಯಾಯಗಳಿದ್ದಂತೆ ಕಾಣುತ್ತದೆ. ನಮ್ಮಲ್ಲಿರುವದರಲ್ಲಿ ಆ ಶ್ಲೋಕಗಳಿರುವ ೬ನೆಯ ಅಧ್ಯಾಯವೂ ಇದೆ. ಅದರಲ್ಲಿ ಪಾಂಡವರು ಐವರೂ ಶಂಕರ, ಪದ್ಮಪಾದ ಸುರೇಶ್ವರ, ಹಸ್ತಾಮಲಕ, ತೋಟಕ– ಈ ಭಿಕ್ಷುಗಳಾದರೆಂದು ಬರೆದಿದೆ ! ]

ಸೋಮನಾಥಯ್ಯನವರ ಪುಸ್ತಕದಂತೆ ಆಚಾರ್ಯರು ಶಿವಲೋಕಕ್ಕೆ ಹೋದರೆಂದು ಇದೆಯಂತೆ ; ಆ ಶ್ಲೋಕಗಳಿವು :

ತತಃ ಶಿಷ್ಯೈಃ ಪರಿವೃತೋ ವೃಷಾದ್ರೀಶಂ ಗುರುರ್ಯಯೌ ॥ ೧೫ ॥
ಸ್ನಾಯಯಮಪೋಽನ್ತಂ ಸ ವಿಜ್ಞಾಯ ನತ್ವಾ ತತ್ರತ್ಯದೇವತಾಃ ।
ಭಕ್ತ್ಯಾ ಕುರ್ವನ್ ಹರಸ್ತೋತ್ರಂ ಶಿವಲೋಕಮವಾಪ ಸಃ ॥ ೧೬ ॥

ವಿದ್ಯಾಭಾರೇಣ ಸಂಪೂರ್ಣಃ ಸರ್ವಭಾರಂ ಪರಿತ್ಯಜನ್ ।
ದುಃಖಭಾರಂ ನ ಜಾನಾತಿ ಭಾರತೀ ಪರಿಕೀರ್ತ್ಯತೇ ।೧೦।

೧೦. ಯಾವನು ಸರ್ವಭಾರವನ್ನೂ ಪರಿತ್ಯಾಗಮಾಡಿ ವಿದ್ಯಾಭಾರದಿಂದ ಸಂಪೂರ್ಣನಾಗಿರುವನೋ ದುಃಖದ ಭಾರವನ್ನು ಅರಿಯನೋ ಅವನು 'ಭಾರತೀ' ಎನಿಸುವನು,

['ಪರಿತ್ಯಜೇತ್', 'ಪರಿಕೀರ್ತಿತಃ' ಬ,]

ಜ್ಞಾನತತ್ತ್ವೇನ ಸಂಪೂರ್ಣಃ ಪೂರ್ಣತತ್ತ್ವಪದೇ ಸ್ಥಿತಃ ।
ಪರಬ್ರಹ್ಮರತೋ ನಿತ್ಯಂ ಪುರೀ ನಾಮಾ ಸ ಉಚ್ಯತೇ ।೧೧।

೧೧. ಜ್ಞಾನತತ್ತ್ವದಿಂದ ಪರಿಪೂರ್ಣನಾಗಿ ಪೂರ್ಣತತ್ತ್ವದ ಪದದಲ್ಲಿದ್ದುಕೊಂಡು ನಿತ್ಯವೂ ಪರಬ್ರಹ್ಮದಲ್ಲಿ ರತಿಯುಳ್ಳವನು 'ಪುರೀ' ಎಂಬ ಹೆಸರುಳ್ಳವನೆನಿಸುವನು.

ಮೊದಲು ಇಂಥಿಂಥ ಯೋಗ್ಯತೆಯಿರುವವರೆಂದು ನೋಡಿ ಈ ಹೆಸರನ್ನು ಕೊಡುತ್ತಿದ್ದರೆಂದು ಭಗವತ್ಪಾದರು ತಾವೇ ಬರೆದಿರುವ ಈ ಮೇಲಿನ ವ್ಯಾಖ್ಯಾನದಿಂದ ಗೊತ್ತಾಗುತ್ತದೆ–ಎಂತ ಬಲದೇವ ಉಪಾಧ್ಯಾಯರು (ಬಲ. ಉ. ಪು. ೨೧೨) ಬರೆದಿರುತ್ತಾರೆ. ಈ ಶ್ಲೋಕಗಳನ್ನು ಆಚಾರ್ಯರೇ ಬರೆದರೆಂಬುದೇ ವಾದಗ್ರಸ್ತವಾಗಿರುವಲ್ಲಿ ಈ ಅಭಿಪ್ರಾಯಕ್ಕೆ ಬೆಂಬಲವು ಕಡಿಮೆ ಎಂದು ಹೇಳಬೇಕಾಗಿಲ್ಲ. ಇದು ಹೇಗಾದರೂ ಇರಲಿ, ಈ ನಾಮಗಳನ್ನು ಶಂಕರಸಂಪ್ರದಾಯದ ಸಂನ್ಯಾಸಿಗಳಿಗೆ ಈಗ ಇಡುತ್ತಿರುವ ಪದ್ಧತಿಯಿದೆ ಎಂಬುದು ನಿಶ್ಚಯ. ಆದರೆ ಪೀಠಾಧಿಪತಿಗಳಿಗೇ ಇವು ಮೀಸಲಾಗಿಲ್ಲ. 'ಇತಿ ದಶವಿಧಪರಿವ್ರಾಜಕಾನಾಂ ಯೋಗಪಟ್ಟನಿರ್ವಚನಾನಿ ಸಮಾಪ್ತಾನಿ' (ನ) ಎಂಬ ಉಕ್ತಿಯಿಂದ ಇವುಗಳಿಗೆ ಯೋಗಪಟ್ಟವೆಂಬ ಹೆಸರೂ ಇದೆ ಎಂದು ಗೊತ್ತಾಗುತ್ತದೆ.

ಇಲ್ಲಿ ಇನ್ನೊಂದು ವಿಚಾರ : ಕಾಂಚೀಪೀಠದ ಸ್ವಾಮಿಗಳಿಗೆ 'ಇಂದ್ರಸರಸ್ವತೀ'- ಎಂಬ ಯೋಗಪಟ್ಟವು ಈಗ ತಪ್ಪದೆ ಇರುತ್ತದೆ. 'ಏಷಾಂ ನಾಮ ತು ವ್ಯಾಖ್ಯಾತಮಿನ್ದ್ರಪೂರ್ವಾ ಸರಸ್ವತೀ' ಎಂದು ಮಠಾಮ್ನಾಯಸೇತುವಿನ ವಚನವೂ ಇದೆ. ಆರ್. ಕೃಷ್ಣಸ್ವಾಮಿ ಅಯ್ಯರವರು ಬರೆದಿರುವ "ಕುಂಭಕೋಣ ಮಠದ ಮಿಥ್ಯಾಭಿಮಾನಿಗಳು" (KNC.) ಎಂಬರ್ಥದ ಇಂಗ್ಲಿಷುಗ್ರಂಥದಲ್ಲಿ 'ಕಾಮಕೋಟೀಮಠೇ ತ್ವಸ್ಮಿನ್ ಗುರುರಿನ್ದ್ರಸರಸ್ವತೀ' ಎಂಬ ಬೇರೊಂದು ಶ್ಲೋಕಾರ್ಧವನ್ನು ಬರೆದುಕೊಂಡಿದೆ. ಆಮ್ನಾಯಾಷ್ಟಕದಲ್ಲಿ "ಮುಖ್ಯಾಮ್ನಾಯ"ವೆಂಬ ಹೆಸರಿನಿಂದ ಬರೆದಿರುವ ಭಾಗದಲ್ಲಿ ( ಪು. ೪೪೨ ) 'ಶುದ್ಧಾ ಸರಸ್ವತೀ ಚೇನ್ದ್ರಾನನ್ದಪೂರ್ವಾ ಚ ಭಾರತೀ । ಭಗವತ್ಪಾದ ಇತ್ಯಾದಿ ನಾಮಾನ್ಯನ್ಯಾನಿ ಚ ಸ್ವತಃ' ಎಂಬ ಶ್ಲೋಕವಿದೆ. ಹೀಗಿದ್ದರೂ 'ಇಂದ್ರಸರಸ್ವತೀ' ಎಂಬುದೇ ಕಾಂಚೀಮಠದವರ ಯೋಗಪಟ್ಟವೆಂಬ ನಂಬಿಕೆಯು ಈಗ ಪ್ರಚುರವಾಗಿರುತ್ತದೆ. 'ಶಂಕರಾಚಾರ್ಯರವರು ರುಗ್ಣರಾಗಿದ್ದ ಸುರೇಶ್ವರಾಚಾರ್ಯರಿಗಾಗಿ ಅಶ್ವಿನೀದೇವತೆಗಳ ಸಹಾಯವನ್ನು ಪಡೆಯಲು ಇಂದ್ರನು

ಸಿಟ್ಟಿನಿಂದ ಅಶ್ವಿನೀದೇವತೆಗಳ ಮೇಲೆ ವಜ್ರಾಯುಧವನ್ನು ಬಿಟ್ಟನು. ಆದರೆ ಅದು ಮುಂದಕ್ಕೆ ಹೋಗದೆ ಇರುವದನ್ನು ಕಂಡು ಶಂಕರಾಚಾರ್ಯರ ಪ್ರಭಾವವನ್ನು ತಿಳಿದ ಇಂದ್ರನು ತನ್ನ ಹೆಸರನ್ನು ಆ ಜಗದ್ಗುರುಗಳಿಗೆ ಕೊಟ್ಟನು ; ಸರಸ್ವತಿ ಎಂಬುದು ಕಾಶ್ಮೀರದಲ್ಲಿ ಆಚಾರ್ಯರು ಸರಸ್ವತಿಯನ್ನು ಜಯಿಸಿದ್ದರಿಂದ ಬಂದದ್ದು' ಎಂದು ವೆಂಕಟೇಶಂ ಪೆಂತುಲುರವರು (NVSSK ಪು. 19–22) ಬರೆದಿರುತ್ತಾರೆ. ಇಂದ್ರನ ವಿಷಯದ ಕಥೆಯು ಯಾವ ಶಂಕರವಿಜಯದಲ್ಲಿಯೂ ಇಲ್ಲದ್ದರಿಂದಲೂ ಆಚಾರ್ಯರಿಗೆ ಈ ಬಿರುದನ್ನು ಇಟ್ಟಿರುವದು ಎಲ್ಲಿಯೂ ಕಂಡುಬರದೆ ಇರುವದರಿಂದಲೂ ಕಾಂಚೀಪೀಠಾಧಿಪತಿಗಳನೇಕರಿಗೆ ಈ ಬಿರುದು ಇರಲಿಲ್ಲವೆಂದು ತಿಳಿಯುಬರುವದರಿಂದಲೂ ಮಠಕ್ಕೆ ಸಂಬಂಧಪಡದ ಅನೇಕರಿಗೆ ಈ ಯೋಗಪಟ್ಟವಿರುವದು ಕಂಡುಬರುವದರಿಂದಲೂ ಇದು ಸರಿಯಾದ ಕಾರಣವಲ್ಲ ಎಂದು (KMC. p. 49–50) ಆರ್ ಕೃಷ್ಣಸ್ವಾಮಿ ಅಯ್ಯರು–ಮೊದಲಾದವರು ಹೇಳುತ್ತಿದಾರೆ.

## ದಶನಾಮೀ ಸಂಪ್ರದಾಯ

ದಶನಾಮಿಗಳೆಂದು ಪ್ರಸಿದ್ಧವಾದ 'ಗೋಸಾಇ'ಗಳು ಕೆಲವರಿರುತ್ತಾರೆ. ಅವರ ಸಂಪ್ರದಾಯವು ಹೇಗೆ ಉತ್ಪನ್ನವಾಯಿತೆಂಬುದನ್ನು ನಿರ್ಣಯಿಸುವದು ಕಷ್ಟ. ಒಂದು ದಂತಕಥೆಯಿದೆ : ಒಮ್ಮೆ ಆಚಾರ್ಯರು ಪರಿವ್ರಾಜಕಕ್ರಮದಿಂದ ಶಿಷ್ಯರೊಡನೆ ಹೋಗುತ್ತಿರುವಲ್ಲಿ ಅವರ ಹಿಂದೆ ಶಿಷ್ಯರು ಬಾಯಾರಿಕೆಯಿಂದ ಸಂಕಟಪಡುತ್ತಿರುವದನ್ನು ಕಂಡು ದಾರಿಯಲ್ಲಿದ್ದ ಈಚಲುಮರದ ಹೆಂಡವನ್ನು ಕುಡಿಯುವದಕ್ಕೆ ಅಪ್ಪಣೆಕೊಟ್ಟರು ; ಎಲ್ಲರೂ ಹೊಟ್ಟೆತುಂಬ ಕುಡಿದರು. ಮುಂದೆ ಹೋಗುತ್ತಿರಲು ಅಲ್ಲಿ ತಾಮ್ರವನ್ನು ಕರಗಿಸಿಟ್ಟಿತ್ತು. ಆಚಾರ್ಯರು ಇದನ್ನು ಕುಡಿಯಿರಿ ಎಂದು ಶಿಷ್ಯರಿಗೆ ಹೇಳಲು ಮೊಟ್ಟಮೊದಲು ನಾಲ್ಕುಜನರು ಗಂಟಲು ಸುಡುವದೆಂಬುದನ್ನು ಲೆಕ್ಕಿಸದೆ ಕುಡಿದುಬಿಟ್ಟರು. ಉಳಿದವರು ಸುಮ್ಮನೆ ನಿಂತುಬಿಟ್ಟರು. ಆಗ ಅವರಿಗೆ ಗುರುಗಳು 'ಪತಿತರಾಗಿ' ಎಂದು ಶಾಪವನ್ನು ಕೊಟ್ಟರಂತೆ. ಇವರೇ ದಶನಾಮಿಗಳು. ಈ ಕಥೆಯಲ್ಲಿ ಎಷ್ಟು ಸತ್ಯಾಂಶವಿದೆಯೋ ತಿಳಿಯದು. ಇದಕ್ಕೆ ಅನೇಕ ರೂಪಗಳಿವೆ. ಬಲದೇವ ಉಪಾಧ್ಯಾಯರು ಇದನ್ನು ರೂಪಾಂತರದಲ್ಲಿ (ಬಲ.ಶಂ.ಪು. ೨೧೩) ಸಂಗ್ರಹಿಸಿರುತ್ತಾರೆ.

ಈ ದಶನಾಮಿಗಳು ಆಯುಧವನ್ನು ಧರಿಸುತ್ತಾರೆ. ರಾಜಪುತ್ರಸ್ಥಾನ ಮತ್ತು ಮಧ್ಯದೇಶಗಳಲ್ಲಿ ಈ ದಶನಾಮಿಗಳ ಅಧ್ಯಕರನ್ನು 'ಗೋಸಾಇ'ಗಳೆಂದು ಕರೆಯುತ್ತಿದ್ದರು; ಅವರು ರಾಜ್ಯಾಧಿಪತಿಗಳಾಗಿದ್ದು ಶಸ್ತ್ರಧಾರಿಗಳ ಸೈನ್ಯವನ್ನು ಇಟ್ಟುಕೊಂಡಿದ್ದರು. ಗುಪ್ತರಕಾಲದಲ್ಲಿ ಒಬ್ಬ 'ಪರಿವ್ರಾಜಕ'ರಾಜನು ಇದ್ದನಂತೆ.

ಹಿಮ್ಮತಬಹಾದೂರ'ಗಿರಿ' ಎಂಬಾತನು ಒಬ್ಬ ಸರದಾರನು. ಜಯಪುರದಲ್ಲಿ ಇಂಥ ಸಂಸ್ಥೆಯು ಈಗಲೂ ಇದೆಯಂತೆ. ದಶನಾಮಿಗಳಲ್ಲಿ ಅನೇಕ ಅಖಾಡ ಗಳುಂಟಂತೆ. ಅವುಗಳಲ್ಲಿ (೧) ಪಂಚಾಯಿತಿ ಅಖಾಡ ಮಹಾನಿರ್ವಾಣೀ ಇದರ ಮುಖ್ಯ ಸ್ಥಾನಪ್ರಯಾಗ, ಕಪಿಲದೇವರ ಉಪಾಸನೆ ಇವರದು ; (೨) ಪಂಚಾ ಯಿತಿ ಅಖಾಡಾನಿರಂಜನೀ, ಪ್ರಯಾಗ, ಸ್ವಾಮಿ ಕಾರ್ತಿಕೇಯನ ಉಪಾಸಕರು (೩) ಅಟಲ ಅಖಾಡಾ, ಗಣೇಶೋಪಾಸಕರು ; (೪) ಭೈರವ ಅಖಾಡಾ. ಈ ನಾಲ್ಕಕ್ಕೂ 'ಜೂನಾ" ಎಂಬ ಹೆಸರು (೫) ಅಖಾಡಾ ಆನಂದ, ದತ್ತಾತ್ರೇಯ ಉಪಾಸನೆ, (೬) ಅಖಾಡಾ ಅಗ್ನಿ ಮತ್ತು (೭) ಅಖಾಡಾ ಅನೂನ– ಇವರು ಹಿಂದೆ ಆಪತ್ಕಾಲದಲ್ಲಿ ಧರ್ಮರಕ್ಷಣೆಗೆ ಸಹಾಯಕರಾಗುತ್ತಿದ್ದರಂತೆ ; ನವಾಬರ ಸನ್ಮಾನಕ್ಕೆ ಪಾತ್ರರಾಗಿದ್ದಾರೆ. ಈಗ್ಗೆ ನಿರ್ವಾಣೀ, ನಿರಂಜನೀ–ಎಂಬ ಅಖಾಡ ಗಳು ಪ್ರಸಿದ್ಧವಾಗಿವೆಯಂತೆ. ಮಹಾಸಂಪದ್ಯುಕ್ತವಾದ ಈ ಅಖಾಡಗಳಿಂದ ದೇಶಕ್ಕೆ ಕಲ್ಯಾಣವಾಗುವಂತೆ ಮಾಡಿಕೊಳ್ಳುವದಕ್ಕೆ ಬರುವಂತಿದೆ ಎಂದು ಬಲದೇವ ಉಪಾಧ್ಯಾಯರು (ಬಲ. ಶಂ. ೨೧೩–೨೧೪) ಬರೆದಿರುತ್ತಾರೆ.

ಶಾಂಕರಸಂಪ್ರದಾಯದ ಯೋಗಪಟ್ಟಿಗಳಿಗೂ ಈ ದಶನಾಮಿಗಳಿಗೂ ಇರುವ ಸಂಬಂಧವನ್ನು ಐತಿಹಾಸಿಕರು ಇನ್ನೂ ಶೋಧಿಸಿ ತಿಳಿಯಬೇಕಾದ ಆವಶ್ಯಕತೆ ಇದೆ.

---

## ಶೃಂಗೇರೀಗುರುಪರಂಪರೆ

**ವಿಶೇಷ :** ಮಠಗಳ ಗುರುಪರಂಪರೆಯ ಪಟ್ಟಿಗಳು ಒಂದೇಸಮನಾಗಿರು ವದಿಲ್ಲ. ಅವುಗಳ ಒಂದು ಮಠದ ಪಟ್ಟಿಯ ವಿಷಯಕ್ಕೆ ಮಿಕ್ಕ ಮಠಗಳವರು ಆಕ್ಷೇಪಿಸುತ್ತಿರುತ್ತಾರೆ. ಮಹಾದೇವ ರಾಜಾರಾಮ ಬೋಡಸ್ ಎಂ. ಎ., ಎಲ್.ಎಲ್.ಬಿ– ಎಂಬವರು ಬರೆದ "ಶಂಕರಾಚಾರ್ಯ ವತ್ಯಾಂಚಾ ಸಂಪ್ರ ದಾಯ"–ಎಂಬ ಮರಾಠಿ ಗ್ರಂಥದಲ್ಲಿರುವ ಶೃಂಗೇರಿ ಪಟ್ಟಿಗಳನ್ನು ಇಲ್ಲಿ ಕೊಡ ಲಾಗಿದೆ. ಅವರು ತೋರಿಸಿರುವ ಪಟ್ಟಿಗಳು ನಾಲ್ಕು :

೧. ಜಗದ್ಗುರು ೞನೆಯ ನರಸಿಂಹಭಾರತೀಸ್ವಾಮಿಗಳ ಅಪ್ಪಣೆಯಂತೆ ಕ್ರಿ. ಶ. 1879ರಲ್ಲಿ ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿಗಳು ತಮಿಳುಭಾಷೆಯಲ್ಲಿ ಬರೆದದ್ದು.

೨. ಸೂರ್ಯನಾರಾಯಣರಾಯರು ವಿಜಯನಗರದ ಇತಿಹಾಸದ ಪರಿಶಿಷ್ಟದಲ್ಲಿ ಕೊಟ್ಟಿರುವದು'

೩. ಶ್ರೀಸಚ್ಚಿದಾನಂದಶಿವಾಭಿನವನೃಸಿಂಹಭಾರತೀಸ್ವಾಮಿಗಳು ವಾಣೀವಿಲಾಸ ಪ್ರೆಸ್ಸಿನಲ್ಲಿ ಅಚ್ಚುಮಾಡಿಸಿರುವದು.

೪. ರೈಸ್‌ಸಾಹೇಬರು ಮೈಸೂರು ಗೆಜಿಟಿಯರ್ ( 1907 ) ಸಂಪುಟ ೧ರ 473ನೆಯ ಪುಟದಲ್ಲಿ ಕೊಟ್ಟಿರುವದು.

ಇಲ್ಲಿ ಕೊಟ್ಟಿರುವ ಮೊದಲನೆಯ ಪಟ್ಟಿಯ ಕೆಳಗೆ ಟಿಪ್ಪಣಿಯಲ್ಲಿ ಮಿಕ್ಕ ಪಟ್ಟಿಗಳಲ್ಲಿರುವ ವೈಲಕ್ಷಣ್ಯವನ್ನು ತಿಳಿಸಿದೆ. ಶ್ರೀ|| ಕೆ. ಆರ್. ವೆಂಕಟರಾಮನ್ ರವರು ಕೊಟ್ಟಿರುವ ಪಟ್ಟಿಯನ್ನು ಕೊನೆಯಲ್ಲಿ ತೋರಿಸಿದೆ.

| ಸಂ. | ಹೆಸರು | ಸಂನ್ಯಾಸಗ್ರಹಣ | ಬ್ರಹ್ಮೀಭಾವ | ಒಟ್ಟುವರ್ಷ |
|---|---|---|---|---|
| ೧. | ಶ್ರೀಶಂಕರಾಚಾರ್ಯ | ಕ್ರಿ. ಪೂ. ೧೮ | – ಕ್ರಿ. ಪೂ. ೧೨ | ೬[1] |
| ೨. | ಸುರೇಶ್ವರಾಚಾರ್ಯ | ಕ್ರಿ. ಪೂ. ೧೨ | – ಕ್ರಿ. ಶ. ೭೭೩ | ೭೮೫ |
| ೩. | ನಿತ್ಯಬೋಧಘನ (ಸರ್ವಜ್ಞಾತ್ಮಮುನಿ)[2] | ಕ್ರಿ.ಶ. ೭೭೩ | ಕ್ರಿ.ಶ.–೮೪೮ | ೭೫ |
| ೪. | ಜ್ಞಾನಘನ[3] | ೮೪೮ | –೯೧೬ | ೬೨ |
| ೫. | ಜ್ಞಾನೋತ್ತಮ ಶಿವಾಚಾರ್ಯ[4] | ೯೧೦ | –೯೫೩ | ೪೩ |
| ೬. | ಜ್ಞಾನಗಿರಿ[5] | ೯೫೩ | –೧೦೩೮ | ೮೫ |
| ೭. | ಸಿಂಹಗಿರಿ[6] | ೧೦೩೮ | –೧೦೯೮ | ೬೦ |
| ೮. | ಈಶ್ವರತೀರ್ಥ[7] | ೧೦೯೮ | –೧೧೪೬ | ೪೮ |
| ೯. | ನರಸಿಂಹತೀರ್ಥ[8] | ೧೧೪೬ | –೧೨೨೮ | ೮೨ |
| ೧೦. | ವಿದ್ಯಾತೀರ್ಥ–ವಿದ್ಯಾಶಂಕರ[9] | ೧೨೨೮ | –೧೩೩೩ | ೧೦೫ |

1. ೨ನೆಯ ಪಟ್ಟಿಯಂತೆ ಶಂಕರಾಚಾರ್ಯರಿಗೆ ಕ್ರಿ. ಪೂ. 36–12 ಸುರೇಶ್ವರರಿಗೆ ಕ್ರಿ. ಪೂ. 28ರಿಂದ ಕ್ರಿ. ಶ. 773ವರೆಗೂ ಅಂದರೆ 800 ವರ್ಷಗಳು ಪೀಠಾಧಿಪತಿಗಳಾಗಿದ್ದರು ! ೩ನೆಯ ಟಿಪ್ಪಣಿಯಲ್ಲಿ ಸುರೇಶ್ವರರನ್ನು ವಿಶ್ವರೂಪರೆಂದಿವೆ.

೪ನೆಯ ಪಟ್ಟಿಯಂತೆ ಶಂಕರಾಚಾರ್ಯರ ಜನ್ಮಕಾಲ ಕ್ರಿ.ಶ. 737 ; ಪೀಠದಲ್ಲಿದ್ದ ಕಾಲ 745ರಿಂದ 739, ಸುರೇಶ್ವರರು 753.

ಬಲದೇವ ಉಪಾಧ್ಯಾಯರ ಪಟ್ಟಿಯಲ್ಲಿ ಸಂನ್ಯಾಸಗ್ರಹಣ ವಿಕ್ರಮಶಕ೨೨, ಸಿದ್ಧಿಕಾಲ ೪೫ ; ಜನ್ಮಾದಿಯಾಗಿ ೩೨ ವರ್ಷವೆಂದಿದೆ. ಸುರೇಶ್ವರರಿಗೆ ಸಂನ್ಯಾಸಗ್ರಹಣ ವಿಕ್ರಮ ೩೦ ರಿಂದ ೬೯೫, ಜನ್ಮಾದಿಯಾಗಿ ೭೭೫ ವರ್ಷಗಳು (!) ಎಂದು ಬರೆದಿದೆ.

2. ಸಂಕ್ಷೇಪಶಾರೀರಕಕರ್ತರು ನಂ. ೨,೪ ಈ ಪಟ್ಟಿಗಳಲ್ಲಿ ಇವರ ಜನ್ಮಕಾಲ ಕ್ರಿ ಶ, 758 ಮತ್ತು ಆಯುಸ್ಸು 90 ವರ್ಷಕೊಟ್ಟಿವೆ. ನಂ. ೩ನೆಯ ಪಟ್ಟಿಯಲ್ಲಿ 'ಬೋಧಘನ' ಎಂದಿಷ್ಟೇ ಇದೆ.

3. ೨–೪ನೆ ಪಟ್ಟಿಗಳಲ್ಲಿ ಇವರ ಕಾಲ 846-910

4. ೨–೪ರಲ್ಲಿ ಕಾಲ 905–653

5. ೨–೪ರಲ್ಲಿ ,, 949–1038

6. ೨–೪ರಲ್ಲಿ ,, 1036–1098

7. ೨–೪ರಲ್ಲಿ ,, 1097–1146

8. ೨–೪ರಲ್ಲಿ ,, 1145–1228

9. ಇದರ ಹೆಸರು ಸರ್ವಜ್ಞವಿಷ್ಣು, ಸಾಯಣಮಾಧವರ ಗುರು, ಕಾಂಚೀಪೀಠದಲ್ಲಿಯೂ (?) ಇದ್ದರು.

| ಸಂ. | ಹೆಸರು | ಸಂನ್ಯಾಸಗ್ರಹಣ | ಬ್ರಹ್ಮೀಭಾವ | ಒಟ್ಟುವರ್ಷ |
|---|---|---|---|---|
| ೧೧. | ಭಾರತೀಕೃಷ್ಣತೀರ್ಥ | ಕ್ರಿ.ಶ. ೧೩೩೩ | ಕ್ರಿ.ಶ.–೧೩೮೦ | ೪೭ |
| ೧೨. | ವಿದ್ಯಾರಣ್ಯ[1] | ೧೩೮೦ | –೧೩೮೫ | ೬ |
| ೧೩. | ಚಂದ್ರಶೇಖರಭಾರತೀ (೧)[2] | ೧೩೮೬ | –೧೩೮೯ | ೩ |
| ೧೪. | ನರಸಿಂಹಭಾರತೀ (೧) | ೧೩೮೯ | –೧೪೦೮ | ೧೯ |
| ೧೫. | ಪುರುಷೋತ್ತಮಭಾರತೀ (೧) | ೧೪೦೮ | –೧೪೪೮ | ೪೦ |
| ೧೬. | ಶಂಕರಾನಂದ | ೧೪೪೮ | –೧೪೫೪ | ೬ |
| ೧೭. | ಚಂದ್ರಶೇಖರಭಾರತೀ (೨) | ೧೪೫೪ | –೧೪೬೪ | ೧೦ |
| ೧೮. | ನರಸಿಂಹಭಾರತೀ (೨) | ೧೪೬೪ | –೧೪೭೯ | ೧೫ |
| ೧೯. | ಪುರುಷೋತ್ತಮಭಾರತೀ (೨) | ೧೪೭೯ | –೧೫೧೭ | ೩೮ |
| ೨೦. | ರಾಮಚಂದ್ರಭಾರತೀ | ೧೫೧೭ | –೧೫೬೦ | ೪೩ |
| ೨೧. | ನರಸಿಂಹಭಾರತೀ (೩)[3] | ೧೫೬೦ | –೧೫೭೩ | ೧೩ |
| ೨೨. | ನರಸಿಂಹಭಾರತೀ (೪) | | | |
| | ನರಸಿಂಹಭಾರತೀ (೧) | ೧೫೭೩ | –೧೫೭೬ | ೩ |
| ೨೩. | ನರಸಿಂಹಭಾರತೀ (೫)[4] | ೧೫೭೩ | –೧೫೯೯ | ೨೩ |
| ೨೪. | ನರಸಿಂಹಭಾರತೀ (೬) | ೧೫೯೯ | –೧೬೨೨ | ೨೩ |
| ೨೫. | ಸಚ್ಚಿದಾನಂದಭಾರತೀ (೧) | ೧೬೨೨ | –೧೬೬೨ | ೪೧ |
| ೨೬. | ನರಸಿಂಹಭಾರತೀ (೭) | ೧೬೬೩ | –೧೭೦೫ | ೪೨ |
| ೨೭. | ಸಚ್ಚಿದಾನಂದಭಾರತೀ (೨) | ೧೭೦೫ | –೧೭೪೧ | ೩೬ |
| ೨೮. | ಅಭಿನವಸಚ್ಚಿದಾನಂದಭಾರತೀ (೧) | ೧೭೪೧ | –೧೭೬೭ | ೨೬ |
| ೨೯. | ಅಭಿನವನರಸಿಂಹಭಾರತೀ (೧) | ೧೭೬೭ | –೧೭೭೦ | ೩ |
| ೩೦. | ಸಚ್ಚಿದಾನಂದಭಾರತೀ (೨) | ೧೭೭೦ | –೧೮೧೪ | ೪೪ |
| ೩೧. | ಅಭಿನವಸಚ್ಚಿದಾನಂದಭಾರತೀ (೨) | ೧೮೧೪ | –೧೮೧೭ | ೩ |
| ೩೨. | ನರಸಿಂಹಭಾರತೀ (೮) | ೧೮೧೭ | –೧೮೭೮ | ೬೧ |

1, ಸಂ. ೨–೪ ಇವುಗಳಲ್ಲಿ ಭಾರತೀಕೃಷ್ಣರ ಕಾಲ 1328–1380. ಮತ್ತು ವಿದ್ಯಾರಣ್ಯರ ಕಾಲ 1331–1386.

2. ೨–೪ನೆಯ ಯಾದಿಗಳಲ್ಲಿ ಮುಂದಿನ ಎಂಟು ಸ್ವಾಮಿಗಳಿಗೂ ಆರಂಭಕಾಲ ಕ್ರಿ. ಶ, ೧೩೬೮. ೧೩೮೭, ೧೪೦೬, ೧೪೨೮, ೧೪೬೯, ೧೪೬೪, ೧೪೭೨, ೧೫೦೮– ಹೀಗೆ ಇದೆ, 3. ೨ ಮತ್ತು ೨೪ ರಲ್ಲಿ ಮುಂದಿನ ಇಬ್ಬರು ಸ್ವಾಮಿಗಳ ಆರಂಭಕಾಲ ಕ್ರಿ. ಶ. ೧೫೫೭. ೧೫೬೩.

4. ೨ನೆಯ ಪಟ್ಟಿಯಲ್ಲಿ ೨೩ರ ಮುಂಚೆ ಹಿಂಗಡೆಯಲ್ಲಿ ' ಇಮ್ಮಡಿಯ ' ೨೪ ಮತ್ತು ೨೫–ಈ ಇವುಗಳ ಮುಂಚೆ 'ಅಭಿನವ' ಎಂಬ ವಿಶೇಷಣಗಳಿವೆ.

| ಸಂ, | ಹೆಸರು | ಸಂನ್ಯಾಸಗ್ರಹಣ | ಬ್ರಹ್ಮೀಭಾವ | ಒಟ್ಟುವರ್ಷ |
|---|---|---|---|---|
| ೩೩. | ಸಚ್ಚಿದಾನಂದಶಿವಾಭಿನವನೃಸಿಂಹ ಭಾರತೀ | ೧೮೭೮ | -೧೯೧೨ | ೩೪ |
| ೩೪. | ಚಂದ್ರಶೇಖರಭಾರತೀ (೩)[1] | ೧೯೧೨ | ೧೯೫೪ | ೪೨ |
| ೩೫. | ಅಭಿನವವಿದ್ಯಾತೀರ್ಥಭಾರತೀ | ೧೯೫೪ | | |

---

## (೧) ಶೃಂಗೇರೀಗುರುಪರಂಪರೆ

(ಶ್ರೀ|| ಕೆ. ಆರ್. ವೆಂಕಟರಾಮನ್‌ರವರು ಬರೆದಿರುವದು)

| ಸಂ, | ಹೆಸರು | ಸಂನ್ಯಾಸ | ಸಮಾಧಿ | ಪೀಠಾಧಿಪತ್ಯ |
|---|---|---|---|---|
| ೧. | ಶ್ರೀಶಂಕರಾಚಾರ್ಯರು | ೭೦೮ | ೮೨೦ | |
| ೨. | ಸುರೇಶ್ವರಾಚಾರ್ಯರು | ೮೧೩ | ೮೩೩ | |
| ೩. | ನಿತ್ಯಬೋಧಘನ | ೮೧೮ | ೮೪೮ | |
| ೪. | ಜ್ಞಾನಘನ | ೮೪೬ | ೯೧೦ | |
| ೫. | ಜ್ಞಾನೋತ್ತಮ | ೯೦೫ | ೯೫೩ | |
| ೬. | ಜ್ಞಾನಗಿರಿ | ೯೪೯ | ೧೦೩೮ | |
| ೭. | ಸಿಂಹಗಿರಿ | ೧೦೩೬ | ೧೦೯೮ | |
| ೮. | ಈಶ್ವರತೀರ್ಥ | ೧೦೯೭ | ೧೧೪೬ | |
| ೯. | ನರಸಿಂಹತೀರ್ಥ[2] | ೧೧೪೫ | ೧೨೨೮ | |
| ೧೦. | ವಿದ್ಯಾಶಂಕರತೀರ್ಥ[3] | ೧೨೨೮ | ೧೩೩೩ | |
| ೧೧. | ಭಾರತೀಕೃಷ್ಣತೀರ್ಥ | ೧೩೨೮ | ೧೩೮೦ | |
| ೧೨. | ವಿದ್ಯಾರಣ್ಯ[4] | ೧೩೩೧ | ೧೩೮೬ | |

1. ಪೀಠದಲ್ಲಿ ಚಂದ್ರಶೇಖರಭಾರತೀಸ್ವಾಮಿಗಳಿದ್ದಾಗ ಬರೆದ ಪಟ್ಟಿಯಿದು. ಬಲದೇವ ಉಪಾಧ್ಯಾಯರು ಕೊಟ್ಟಿರುವ ಪಟ್ಟಿಯಲ್ಲಿ ಶಾಲಿವಾಹನಶಕೆಗಳನ್ನು ಕೊಟ್ಟಿದೆ ಅವರು ತಮ್ಮ ಪಟ್ಟಿಗೆ ಆಧಾರವನ್ನು ಕೊಟ್ಟಿಲ್ಲ. ಇಲ್ಲಿರುವ ಪಟ್ಟಿಯಲ್ಲಿ ಮೊದಲಿನ ಕೆಲವನ್ನು ಬಿಟ್ಟರೆ ಮಿಕ್ಕವು ಸ್ವಲ್ಪ ಹೆಚ್ಚುಕಡಿಮೆ ಕಾಲಗಳು ಹೊಂದುತ್ತವೆ. ಮುಂದೆ ಕೆ. ಆರ್. ವೆಂಕಟರಾಮನ್‌ರವರು ಕೊಟ್ಟಿರುವ ಗುರುಪರಂಪರೆಯ ಪಟ್ಟಿಯನ್ನು ಬರೆದಿದೆ. ಅದೇ ನಮಗೆ ಸಿಕ್ಕಿರುವ ಇತ್ತೀಚಿನ ಪಟ್ಟಿ.

2. ಇದುವರೆಗೆ ಶ್ರೀ|| ವೆಂಕಟರಾಮನ್‌ರವರು ಚರಿತ್ರೆಯಲ್ಲಿ ಕಾಲವನ್ನು ಕೊಟ್ಟಿಲ್ಲ ಆದ್ದರಿಂದ ಇಷ್ಟು ಇತಿಹಾಸದೃಷ್ಟಿಯಿಂದ ಮಾಡಿದ ಕಲ್ಪನೆಯೆಂದಾಯಿತು.

3. ವಿದ್ಯಾತೀರ್ಥರೆಂದೂ ಇವರಿಗೆ ಹೆಸರು.

4. ಇವರ ವಿಷಯಕ್ಕೆ ಚರಿತ್ರೆಯನ್ನು (ಪು. ೩೪ನ್ನು) ನೋಡಿ. ಈ ಪಟ್ಟಿಯ ಕೆಳಗೂ ವಿಚಾರವನ್ನು ಬರೆದಿದೆ.

| ಸಂ, | ಹೆಸರು | ಸಂನ್ಯಾಸ | ಸಮಾಧಿ | ಪೀಠಾಧಿಪತ್ಯ |
|---|---|---|---|---|
| ೧೩. | ಚಂದ್ರಶೇಖರಭಾರತೀ (೧) | ೧೩೬೮ | ೧೩೮೯ | ೧೩೮೬ |
| ೧೪. | ನರಸಿಂಹಭಾರತೀ (೧)[1] | ೧೩೮೭ | ೧೪೦೮ | ೧೩೮೯ |
| ೧೫. | ಪುರುಷೋತ್ತಮಭಾರತೀ (೧) | ೧೪೦೬ | ೧೪೪೮ | ೧೪೦೮ |
| ೧೬. | ಶಂಕರಾನಂದಭಾರತೀ | ೧೪೨೮ | ೧೪೫೪ | ೧೪೪೮ |
| ೧೭. | ಚಂದ್ರಶೇಖರಭಾರತೀ (೨) | ೧೪೪೯ | ೧೪೬೪ | ೧೪೫೪ |
| ೧೮. | ನರಸಿಂಹಭಾರತೀ (೨) | ೧೪೬೪ | ೧೪೭೯ | ೧೪೬೪ |
| ೧೯. | ಪುರುಷೋತ್ತಮಭಾರತೀ (೨) | ೧೪೭೨ | ೧೫೧೭ | ೧೪೭೯ |
| ೨೦. | ರಾಮಚಂದ್ರಭಾರತೀ | ೧೫೦೮ | ೧೫೬೦ | ೧೫೧೭ |
| ೨೧. | ನರ(ನೃ)ಸಿಂಹಭಾರತೀ (೩) | ೧೫೫೭ | ೧೫೭೩ | ೧೫೬೦ |
| ೨೨. | ನರ(ನೃ)ಸಿಂಹಭಾರತೀ (೪) | ೧೫೬೩ | ೧೫೭೬ | ೧೫೭೩ |
| ೨೩. | ನರ(ನೃ)ಸಿಂಹಭಾರತೀ (೫) | ೧೫೭೬ | ೧೫೯೯ | ೧೫೭೬ |
| ೨೪. | ಅಭಿನವನರ(ನೃ)ಸಿಂಹಭಾರತೀ (೧) | ೧೫೯೯ | ೧೬೨೨ | |
| ೨೫. | ಸಚ್ಚಿದಾನಂದಭಾರತೀ (೧) | ೧೬೨೨ | ೧೬೬೩ | |
| ೨೬. | ನರ(ನೃ)ಸಿಂಹಭಾರತೀ (೬) | ೧೬೬೩ | ೧೭೦೫ | |
| ೨೭. | ಸಚ್ಚಿದಾನಂದಭಾರತೀ (೨) | ೧೭೦೫ | ೧೭೪೧ | |
| ೨೮. | ಅಭಿನವಸಚ್ಚಿದಾನಂದಭಾರತೀ (೧) | ೧೭೪೧ | ೧೭೬೭ | |
| ೨೯. | ನರ(ನೃ)ಸಿಂಹಭಾರತೀ (೭) | ೧೭೬೦ | ೧೭೭೦ | ೧೭೬೭ |
| ೩೦. | ಸಚ್ಚಿದಾನಂದಭಾರತೀ (೩) | ೧೭೭೦ | ೧೮೧೪ | |
| ೩೧. | ಅಭಿನವಸಚ್ಚಿದಾನಂದಭಾರತೀ (೨) | ೧೮೧೪ | ೧೮೧೭ | |
| ೩೨. | ನರ(ನೃ)ಸಿಂಹಭಾರತೀ (೮) | ೧೮೧೭ | ೧೮೭೯ | |
| ೩೩. | ಸಚ್ಚಿದಾನಂದಶಿವಾಭಿನಭವ ನರ(ನೃ)ಸಿಂಹಭಾರತೀ | ೧೮೬೬ | ೧೯೧೨ | ೧೮೭೯ |
| ೩೪. | ಚಂದ್ರಶೇಖರಭಾರತೀ | ೧೯೧೨ | ೧೯೫೪ | |
| ೩೫. | ಅಭಿನವವಿದ್ಯಾತೀರ್ಥ | ೧೯೩೧ | ಈಗ ಪೀಠದಲ್ಲಿದ್ದಾರೆ. | |

(೧) ಮೇಲೆ ಕೊಟ್ಟಿರುವ ಮೂರನೆಯ ಸಂಖ್ಯೆಯು ಆಯಾ ಸ್ವಾಮಿಗಳು ಎಷ್ಟನೆಯ ವರ್ಷದಿಂದ ಪೀಠಾಧಿಪತ್ಯಕ್ಕೆ ಬಂದರೆಂಬುದನ್ನು ತಿಳಿಸುತ್ತದೆ.

1, 'ನೃಸಿಂಹಭಾರತೀ' ಎಂತ ಚರಿತ್ರೆಯಲ್ಲಿ ಕೆ. ಆರ್. ವೆಂಕಟರಾಮನ್ನರು ಬರೆದಿದಾರೆ; ಮುಂದೆಯೂ ಹೀಗೆಯೇ.

ಇದರಿಂದ ಕೆಲವರು ಸ್ವಾಮಿಗಳು ತಮ್ಮ ಜೀವಿತಕಾಲದಲ್ಲಿಯೇ ಮತ್ತೊಬ್ಬರಿಗೆ ಆಶ್ರಮವನ್ನು ಕೊಡಿಸಿ ಇಟ್ಟುಕೊಳ್ಳುತ್ತಿದ್ದರೆಂದು ಗೊತ್ತಾಗುವದು.

(೨) ವಿದ್ಯಾತೀರ್ಥರು ಸಾಯಣಾಚಾರ್ಯರ, ಮಾಧವ ಅಥವಾ ವಿದ್ಯಾರಣ್ಯರ, ವೇದಾಂತದೇಶಿಕರ (!) ಮತ್ತು ಭಾರತೀಕೃಷ್ಣರ ಗುರುಗಳೆಂದೂ ಮಾಧ್ವರ ಮತ್ತು ಪೋರ್ಚುಗೀಸರ ಇಂಡಿಯದಲ್ಲಿ ರೋಮನ್ ಕಾಥೋಲಿಕರ ಹಾವಳಿಯ ಪ್ರಾಚುರ್ಯದ ಕಾರಣದಿಂದ ವದ್ಯಾತೀರ್ಥರು ಎಂಟು ಮಠಗಳನ್ನು ಸ್ಥಾಪಿಸಿ ತಮ್ಮ ಎಂಟು ಜನ ಶಿಷ್ಯರನ್ನು ಪೀಠಾಧಿಪತಿಗಳನ್ನಾಗಿ ಸ್ಥಾಪಿಸಿದರೆಂದೂ, ವಿದ್ಯಾರಣ್ಯರನ್ನು ವಿರೂಪಾಕ್ಷಮಠಕ್ಕೆ ಅಧಿಪತಿಗಳನ್ನಾಗಿ ಮಾಡಿದರೆಂದೂ, ಎನ್. ವೆಂಕಟರಾಮನ್‌ರವರು ಬರೆದಿರುತ್ತಾರೆ (NVSK p. p. 93-95). ಈ ವಿಷಯದಲ್ಲಿ ಕೆ.ಆರ್. ವೆಂಕಟರಾಮನ್‌ರವರು ನಮಗೆ ಬರೆದಿರುವದೇನೆಂದರೆ: 'ವಾಸ್ಕೋ ಡ ಗಾಮನು ಕ್ಯಾಲಿಕಟ್ ಎಂಬ ರೇವಿನಲ್ಲಿ ಇಳಿದದ್ದು ಕ್ರಿ ಶ. 1499 ಎಂದು ಹಿಂದೂದೇಶದ ಇತಿಹಾಸದಿಂದ ಗೊತ್ತಾಗುತ್ತದೆ. ಇದು ವಿದ್ಯಾತೀರ್ಥರು ಸಮಾಧಿಯಾದ ೧೩೦ ವರ್ಷಗಳಮೇಲೆ. ಈ ದೇಶದಲ್ಲಿ ಪೋರ್ಚುಗೀಸರು ಮೊಟ್ಟಮೊದಲು ತಮ್ಮ ಆಳ್ವಿಕೆಯನ್ನು ಸ್ಥಾಪಿಸಿದ್ದು-ಅಲ್ಮೇಡಾ (Almeida) ಎಂಬಾತನ ಮೂಲಕ 1509ರಲ್ಲಿ. ಎನ್. ವೆಂಕಟರಾಮನ್ನರು ಏಕೆ ಹೀಗೆಂದು ಬರೆದರೊ ಆಶ್ಚರ್ಯವಾಗಿದೆ. ಶ್ರೀಮಧ್ವಾಚಾರ್ಯರು ವಿದ್ಯಾತೀರ್ಥರ ಸಮಕಾಲಿಕರು, ವಿದ್ಯಾತೀರ್ಥರ ಸಮಾಧಿಯಾದ ಮೇಲೆಯೇ ಅವರ ಮತವು ಹರಡಿಕೊಂಡದ್ದು.'

(೩) ಶೃಂಗೇರೀಮಠವು ಬಹುಕಾಲ ಪೀಠಾಧಿಪತ್ಯವಿಲ್ಲದೆ ಇತ್ತೆಂಬುದೂ ಆಮೇಲೆ ಮತ್ತೆ ಉಜ್ಜೀವಿತವಾಯಿತೆಂಬುದೂ ಸುರೇಶ್ವರಾಚಾರ್ಯರಿಗೆ ೮೦೦ ವರ್ಷಗಳ ಕಾಲವನ್ನು ಕೊಟ್ಟಿರುವದರಿಂದಲೇ ಗೊತ್ತಾಗುತ್ತದೆ ಎಂದು ಎನ್. ವೆಂಕಟರಾಮನ್‌ರವರ ಹೇಳಿಕೆ. (NVSK p. 95; ಚರಿತ್ರೆ ಪು.೩೪೩)ವಿದ್ಯಾತೀರ್ಥರು ಸ್ಥಾಪಿಸಿದ ಎಂಟು ಮಠಗಳೂ ಶೃಂಗೇರಿಯಂತೆ ವಿದ್ಯಾರಣ್ಯ ಅಥವಾ 'ವಿದ್ಯಾಶಂಕರ' –ಎಂದು ತಮ್ಮ ಶ್ರೀಮುಖದಲ್ಲಿ ಅಥವಾ ಮಠಮುದ್ರೆಯಲ್ಲಿ ಬರೆದುಕೊಂಡಿವೆ ಎನ್ನುತ್ತಾರೆ. 'ವಿದ್ಯಾಶಂಕರ' ಎಂಬ ಹೆಸರಿನ ಮುದ್ರೆಯು ವಿದ್ಯಾತೀರ್ಥರಿಗೇ ಸಂಬಂಧಪಟ್ಟದ್ದು ಎಂಬ ಕೆ. ಆರ್. ವೆಂಕಟರಾಮನ್‌ರವರ ಮತವನ್ನು ಚರಿತ್ರೆಯಲ್ಲಿ (ಪು. ೩೪೫) ಕೊಟ್ಟಿರುತ್ತೇವೆ. ವಿದ್ಯಾಶಂಕರರು ವಿಘ್ನೇಶ್ವರ ವಿಗ್ರಹರೂಪದಿಂದ ಇದ್ದುಕೊಂಡು ಈಗಲೂ ಶೃಂಗೇರಿಯ ಮಠದ ಮೇಲು ವಿಚಾರಣೆಯ ಕರ್ತರಾಗಿರುವರೆಂಬ ಸಾಂಪ್ರದಾಯಿಕಕಥೆಯನ್ನು ಕೆ. ಆರ್ ವೆಂಕಟರಾಮನ್‌ರವರು ಇಂಗ್ಲಿಷಿನಲ್ಲಿ ಬರೆದ ಚರಿತ್ರೆಯಲ್ಲಿ(KRTTV p 45) ಬರೆದಿದೆ. ವೆಂಕಟರಾಮನ್‌ರವರು ಸುರೇಶ್ವರರಿಗೆ ೮೦೦ ವರ್ಷವೇಕೆಂಬ ಬಗ್ಗೆ ಪುಸ್ತಕದಲ್ಲಿ ಏನೂ ಹೇಳಿಲ್ಲವಾದರೂ ನಮಗೆ ಬರೆದಿರುವ ಒಂದು ಟೈಪಾದ ಇಂಗ್ಲಿಷು ಪತ್ರದಲ್ಲಿ ಹೀಗೆಂದಿರುತ್ತಾರೆ :

ಕಾಲಮಾನದ ವಿಷಯಕ್ಕೆ ಆಗಿರುವ ಭ್ರಾಂತಿಗೆ ಕಾರಣವೇನೆಂದರೆ:

(1) (ಅ) ಶಂಕರಾಚಾರ್ಯರು ಕ್ರಿಸ್ತನಿಗಿಂತ ಹಿಂದಿನ ಶತಮಾನಗಳಲ್ಲಿ ಜೀವಿಸಿದ್ದರೆಂಬ ದಂತಕಥೆಗೆ ಅಂಟಿಕೊಂಡಿರುವ ಸಂಪ್ರದಾಯ. ಈ ಕಷ್ಟದಿಂದ ಪಾರಾಗುವದಕ್ಕೆ ಶೃಂಗೇರೀಸಂಪ್ರದಾಯದ ವಿಷಯಕ್ಕೆ ಬರೆದವರು ಸುರೇಶ್ವರಾಚಾರ್ಯರಿಗೆ ೮೦೦ ವರ್ಷಗಳನ್ನು ಕೊಟ್ಟು ಅವರ ಸಮಾಧಿಯ ಕಾಲವನ್ನು ಆನೆಯ ಶತಮಾನಕ್ಕೆ ಇಳಿಸಿರುತ್ತಾರೆ. ಕಾಂಚೀ ಸಂಪ್ರದಾಯದವರು ಕ್ರಿ. ಪೂ. 509ರಿಂದ ಕ್ರಿ. ಶ. 788ರವರೆಗೆ ಹಲವುಜನ ಪೀಠಾಧಿಪತಿಗಳನ್ನು ಕಲ್ಪಿಸಿ ಶಂಕರರಿಗೆ ಸಂಬಂಧಪಟ್ಟ ಘಟನೆಗಳನ್ನು ಮೂವರು ಬೇರೆ ಬೇರೆ ಶಂಕರರಿಗೆ ಹಂಚಿಕೊಟ್ಟಿರುತ್ತಾರೆ.'' (ಚರಿತ್ರೆಯ ಪು. ೩೫೧) ನೋಡಿ

(ಆ) ''ಗುರುಗಳ ಜೀವಿತಕಾಲದಲ್ಲಿಯೇ ಒಬ್ಬರು ಸಂನ್ಯಾಸಾಶ್ರಮವನ್ನು ಸ್ವೀಕರಿಸಬಹುದು, ಗುರುಗಳು 'ಜಗದ್ಗುರು'ಗಳಾಗಿಯೂ ಅವರ ಮುಂದಕ್ಕೆ ಪಟ್ಟಕ್ಕೆ ಬರಲಿರುವವರು ಚಿಕ್ಕಸ್ವಾಮಿಗಳಾಗಿಯೂ ಇರಬಹುದು– ಎಂಬ ಸಂಪ್ರದಾಯವನ್ನರಿಯದೆ ಇರುವದರಿಂದ ಗುರುಸ್ವಾಮಿಗಳ ಮತ್ತು ಶಿಷ್ಯಸ್ವಾಮಿಗಳ ಕಾಲದಲ್ಲಿ ಏತಕ್ಕೆ ಹೆಚ್ಚುಕಡಿಮೆಯಿದೆ ಎಂಬುದು ಐತಿಹಾಸಿಕರಿಗೂ ತಿಳಿಯದೆಹೋಗಿದೆ.'' (ಕೆ. ಆರ್. ವೆಂಕಟರಾಮನ್ನರ ಪಟ್ಟಿಯಲ್ಲಿ ಬೇರೆ ಬೇರೆಯ ಪೀಠಾಧಿಪರು ಪಟ್ಟಕ್ಕೆ ಬಂದ ಕಾಲವನ್ನು ತಿಳಿಸಿದೆ).

(ಇ) ಒಂದೂವರೆ ಶತಮಾನಗಳಷ್ಟು ಕಾಲದಲ್ಲಿ 'ನರಸಿಂಹಭಾರತೀ' ಎಂಬ ಹೆಸರಿನ ಐದುಜನ ಸ್ವಾಮಿಗಳು ಆಗಿಹೋಗಿರುತ್ತಾರೆ. ಇದೂ ಕೆಲವರು ತತ್ತ್ವಾನ್ವೇಷಕರಿಗೆ ಭ್ರಾಂತಿಯನ್ನುಂಟುಮಾಡಿದೆ.''

(1) 'ಸೂರ್ಯನಾರಾಯಣರಾಯರು' ಶಂಕರರ ಜನ್ಮಕಾಲವನ್ನು ಒಂದು ಕಥೆಯ ಆಧಾರದಿಂದ ಕ್ರಿ. ಪೂ. 44 ಎಂದು ಇಟ್ಟುಕೊಂಡಿರುತ್ತಾರೆ.

ಶಂಕರರ ಜನ್ಮಕಾಲವು ಕ್ರಿ. ಶ. 788 ಎಂದಿಟ್ಟುಕೊಂಡಿರುವದರಿಂದ ಪೀಠಾಧಿಪತಿಗಳ ಕಾಲವು ಹೀಗಿರಬೇಕಾಗುತ್ತದೆ.

| | |
|---|---|
| ಶಂಕರರ (ಜನ್ಮಕಾಲ 788) | ವಿದೇಹಮುಕ್ತಿ 820 |
| ಸುರೇಶ್ವರರು ಪೀಠಕ್ಕೆ ಬಂದದ್ದು 813 | (ವಿಜಯ ಚೈತ್ರ ಶುಕ್ಲ ೧೫) |
| ಮುಕ್ತಿ | 833 (ಪ್ರಮಾಥಿ ಮಾಘ ಶುಕ್ಲ ೧೨) |
| ನಿತ್ಯಬೋಧಘನರು ಪೀಠಕ್ಕೆ ಬಂದದ್ದು 818 | (ವಿಲಂಬಿ ಆಶ್ವೀಜ ಶುಕ್ಲ ೧೨) |

(2) ರೈಸ್‌ರವರು ಕೊಟ್ಟಿರುವ ವರ್ಷಸಂಖ್ಯೆಗೆ ೧೦ ವರ್ಷ ಸೇರಿದರೆ ನಾನು ಕೊಟ್ಟಿರುವ ಕಾಲವಾಗುವದು. ಇಷ್ಟು ತಿದ್ದಿಕೊಂಡರೆ ರೈಸರು ಕೊಟ್ಟಿರುವ ಕಾಲವೆಲ್ಲ ಸರಿಯಾಗಿದೆ; ಆದರೆ ಪುಟ 306ರಲ್ಲಿ 1097ಕ್ಕೆ 1079 ಎಂದೂ 1145 (ಕ್ರೋಧನ ಮಾಘ ಶುಕ್ಲ ೧೧) ಎಂಬುದಕ್ಕೆ 1114 ಎಂದೂ ಅಚ್ಚಿನ ತಪ್ಪಾಗಿದೆ,

(೪) ವಿದ್ಯಾತೀರ್ಥರು (ಕ್ರಿ. ಶ. 1297–1385) ಕಾಂಚೀಪೀಠದ ೪೯ನೆಯ ಸ್ವಾಮಿಗಳೆಂದು ಕಾಂಚೀಸಂಪ್ರದಾಯದವರ ಹೇಳಿಕೆ (ಚರಿತ್ರೆ ಪು. ೩೫೨). ಈ ವಿಚಾರಕ್ಕೆ ಕೆ. ಆರ್. ವೆಂಕಟರಾಮನ್‌ರವರು ನಮಗೆ ಹೀಗೆಂದು ಬರೆದಿರುತ್ತಾರೆ:

"ವಿದ್ಯಾತೀರ್ಥರ ಹೆಸರಿನಲ್ಲಿ ಕ್ರಿ. ಶ. 1336ರಲ್ಲಿ ಒಂದು ಸ್ಮಾರಕವನ್ನು ಕಟ್ಟಿಸಿದೆ. ಶೃಂಗೇರಿಯಲ್ಲಿಯೂ ಕರ್ಣಾಟಕದೇಶದಲ್ಲಿರುವ ಎಷ್ಟೋ ಬೇರೆಬೇರೆಯ ಸ್ಥಲಗಳಲ್ಲಿಯೂ ಅವರನ್ನು ಶೃಂಗೇರೀಪೀಠಾಧಿಪರೆಂದು ಉಲ್ಲೇಖಿಸುವ ಶಾಸನಗಳು ಸಿಕ್ಕುತ್ತವೆ; ಆದರೆ ಅವರ ಸಂಬಂಧದ ಒಂದು ಶಾಸನವಾದರೂ ಕಾಂಚಿ

ಯಲ್ಲಾಗಲಿ ಅದರ ಹತ್ತಿರವಿರುವ ಮತ್ತೆ ಯಾವ ಸ್ಥಲದಲ್ಲಾಗಲಿ ಕಾಣಬರು ತ್ತಿಲ್ಲ. ಆದ್ದರಿಂದ ವಿದ್ಯಾತೀರ್ಥರು ಕಾಂಚೀಪೀಠಾಧಿಪತಿಗಳಾಗಿದ್ದರೆಂದು ನಂಬು ವದು ಕಷ್ಟ.

(೫) ವಿದ್ಯಾರಣ್ಯರು ಶೃಂಗೇರಿಯ ಪೀಠಾಧಿಪರಾಗಿದ್ದರೆ? ಈ ವಿಷಯ ದಲ್ಲಿ ಕೆ. ಆರ್. ವೆಂಕಟರಾಮನ್‌ರವರು ನಮಗೆ ಬರೆದಿರುವದೇನೆಂದರೆ :-

" ಎನ್. ವೆಂಕಟರಾಮನ್‌ರವರು ಶೃಂಗೇರಿಯ ಗುರುಪರಂಪರೆಯಲ್ಲಿ ವಿದ್ಯಾರಣ್ಯರನ್ನು ಸೇರಿಸುವದಕ್ಕೆ ಆಕ್ಷೇಪಣೆಯನ್ನು ತೆಗೆದಿರುತ್ತಾರೆ. ಭಾರತ ದೇಶದ ಅಥವಾ ಪರಕೀಯದೇಶದ ಒಬ್ಬನೇ ಒಬ್ಬ ಪ್ರಸಿದ್ಧ ಐತಿಹಾಸಿಕನೂ ಶೃಂಗೇರಿಗೆ ವಿದ್ಯಾರಣ್ಯರು ಪೀಠಾಧಿಪರಾಗಿದ್ದರೆಂದೂ ವಿಜಯನಗರದ ಸಂಸ್ಥಾಪಕ ರೆಂದೂ ಹೇಳದವನಿರುವದಿಲ್ಲ. ವೆಂಕಟರಾಮನ್‌ರವರ ಆಕ್ಷೇಪಣೆಗೆ ಉತ್ತರವನ್ನು ನಾನು ಬರೆದಿರುವ 'ಅತೀಂದ್ರಿಯ ಜ್ಞಾನಸಿಂಹಾಸನ' (The Threne of Transcendental Wisdom) ಎಂಬ ಪುಸ್ತಕದಲ್ಲಿ ಕಾಣಬಹುದು.

"ಇಲ್ಲಿ ಇಷ್ಟು ಹೇಳಿದರೆ ಸಾಕು. ಹರಿಹರ (೨) ರಾಯನು ಕ್ರಿ.ಶ. 1380 ರಲ್ಲಿ ವಿದ್ಯಾರಣ್ಯರಿಗೆ ಶೃಂಗೇರೀಮಠಕ್ಕೆ ಮಾನ್ಯವಾಗಿ ತಾನು ಹಿಂದೆ ಕೊಟ್ಟದ್ದ ಹಿಂದಿನ ಮಾನ್ಯಗಳಿಗೆ ಇನ್ನೂ ಕೆಲವು ಗ್ರಾಮಗಳನ್ನು ಸೇರಿಸಿಕೊಟ್ಟಿರುತ್ತಾನೆ ; ಮತ್ತು 1367ರಲ್ಲಿ ಅಷ್ಟುಹೊತ್ತಿಗಾಗಲೆ ವಿದೇಹಮುಕ್ತರಾಗಿದ್ದ ವಿದ್ಯಾರಣ್ಯರ ಸ್ಮಾರಕವಾಗಿ ಮತ್ತೊಂದು ಮಾನ್ಯವನ್ನೂ ಶೃಂಗೇರಿಮಠಕ್ಕೆ ಕೊಟ್ಟಿರುತ್ತಾನೆ. ಹರಿಹರ(೨)ನು ಶೃಂಗೇರಿಯಲ್ಲಿ ಒಂದು ಅಗ್ರಹಾರವನ್ನು ಸ್ಥಾಪಿಸಿ ಅದಕ್ಕೆ ವಿದ್ಯಾ ರಣ್ಯರ ಹೆಸರಿನಲ್ಲಿ 'ವಿದ್ಯಾರಣ್ಯಪುರ' ಎಂಬ ಹೆಸರನ್ನು ಕೊಟ್ಟಿರುತ್ತಾನೆ. ಭಾರತೀ ತೀರ್ಥರು ಮತ್ತು ವಿದ್ಯಾರಣ್ಯರು ಇವರ ಸ್ಮಾರಕವಾಗಿ ಭಾರತೀ ರಾಮನಾಥ, ಮತ್ತು ವಿದ್ಯಾವಿಶ್ವೇಶ್ವರ- ಈ ದೇವಾಲಯಗಳು ನಿರ್ಮಾಣವಾದವು.

"ಇನ್ನೊಂದು ಮಾತು. ಶ್ರೀ ವಿದ್ಯಾತೀರ್ಥರು ಭಾರತೀತೀರ್ಥರಿಗೆ 1328 ರಲ್ಲಿಯೂ ವಿದ್ಯಾರಣ್ಯರಿಗೆ 1331ರಲ್ಲಿಯೂ ಸಂನ್ಯಾಸವನ್ನು ಕೊಟ್ಟರು. ಭಾರತೀ ತೀರ್ಥರು 1333ರಿಂದ 1380ರವರೆಗೆ ಪೀಠಾಧಿಪರಾಗಿದ್ದರು. ಆ ಕಾಲಕ್ಕೆ ವಿದ್ಯಾರಣ್ಯರು ಚಿಕ್ಕಸ್ವಾಮಿಗಳಾಗಿದ್ದುಕೊಂಡು ತೀರ್ಥಯಾತ್ರೆಹೋಗುವದು, ಅಥವಾ ಹಂಪೆಯಲ್ಲಿದ್ದಾಗ ಧ್ಯಾನಮಾಡುತ್ತಿರುವದು- ಹೀಗೆ ಕಾಲಕ್ಷೇಪಮಾಡು ತ್ತಿದ್ದರು. ಅವರು 1380ರಿಂದ 1386ರವರೆಗೆ ಪೀಠಾಧಿಷ್ಠಿತರಾಗಿದ್ದರು."[1]

---

1. ಭಾರತೀಕೃಷ್ಣರಿಗೂ (1328-1380) ವಿದ್ಯಾರಣ್ಯರಿಗೂ (1331-1386) ಶೃಂಗೇರಿಯವರು ಇಸವಿ ಹಾಕಿರುತ್ತಾರಾದ್ದರಿಂದ ವಿದ್ಯಾರಣ್ಯರು ಪೀಠಾಧಿಪರೆಂದು ಹಿಡಿ ದಿರುವದು ತಪ್ಪು ಎಂತ ಎನ್. ವೆಂಕಟರಾಮನ್‌ರವರು (NVSK p. 95) ಬರೆದಿರು ವದಕ್ಕೆ ಇದು ಸಮಾಧಾನವೆಂತ ಕಾಣುತ್ತದೆ.

## (೨) ಕಾಂಚೀಮಠದ ಗುರುಪರಂಪರೆ

| | | ಪೀಠಾಧಿಪತ್ಯ | ಸಿದ್ಧಿಕಾಲ |
|---|---|---|---|
| | ಶ್ರೀಶಂಕರಾಚಾರ್ಯ | ೩೨ ಜನ್ಮ ಕ್ರಿ.ಪೂ.508 | ಸಿದ್ಧಿ ಕ್ರಿ.ಪೂ.476 |
| | ಸುರೇಶ್ವರಾಚಾರ್ಯ | ೭೦(?)[1] | ೪೦೬ |
| ೧. | ಸರ್ವಜ್ಞಾತ್ಮ | ೧೧೨ | ೩೬೪ |
| ೨. | ಸತ್ಯಬೋಧ | ೯೬ | ೨೬೮ |
| ೩. | ಜ್ಞಾನಾನಂದ | ೬೩ | ೨೦೫ |
| ೪. | ಶುದ್ಧಾನಂದ | ೮೧ | ೧೨೪ |
| ೫. | ಆನಂದಜ್ಞಾನ | ೬೯ | ೫೫ |
| ೬. | ಕೈವಲ್ಯಾನಂದ | ೮೩ | ಕ್ರಿ.ಶ. ೨೮ |
| ೭. | ಕೃಪಾಶಂಕರ (೨) | ೪೧ | ೬೯ |
| ೮. | ಸುರೇಶ್ವರ | ೮೮ | ೧೨೭ |
| ೯. | ಚಿದ್ಘನ | ೪೫ | ೧೭೨ |
| ೧೦. | ಚಂದ್ರಶೇಖರ (೧) | ೬೩ | ೨೩೫ |
| ೧೧. | ಸಚ್ಚಿದ್ಘನ | ೩೭ | ೨೭೨ |
| ೧೨. | ವಿದ್ಯಾಘನ (೧) | ೪೫ | ೩೧೭ |
| ೧೩. | ಗಂಗಾಧರ (೧) | ೧೨ | ೩೨೯ |
| ೧೪. | ಉಜ್ಜ್ವಲಶಂಕರ (೩) | ೩೭ | ೩೬೭ |
| ೧೫. | ಸದಾಶಿವ | ೮ | ೩೭೫ |
| ೧೬. | ಸುರೇಂದ್ರ | ೧೦ | ೩೮೫ |
| ೧೭. | ವಿದ್ಯಾಘನ (೨) | ೧೩ | ೩೯೮ |
| ೧೮. | ಮೂಕಶಂಕರ (೪) | ೩೯ | ೪೩೭ |
| ೧೯. | ಚಂದ್ರಚೂಡ (೧) | ೧೦ | ೪೪೭ |
| ೨೦. | ಪರಿಪೂರ್ಣಬೋಧ | ೩೪ | ೪೮೧ |
| ೨೧. | ಸಚ್ಚಿತ್ಸುಖ | ೩೧ | ೫೧೨ |
| ೨೨. | ಚಿತ್ಸುಖ (೧) | ೧೫ | ೫೩೭ |
| ೨೩. | ಸಚ್ಚಿದಾನಂದಘನ | ೨೧ | ೫೪೮ |
| ೨೪. | ಪ್ರಜ್ಞಾಘನ | ೧೬ | ೫೬೪ |

1. ಆತ್ಮಬೋಧರು ತಮ್ಮ ಸುಷಮಾಗ್ರಂಥದಲ್ಲಿ ಸುರೇಶ್ವರರು ಅಪರಮಹಂಸರಾದ್ದರಿಂದ (?) ಪೀಠದಲ್ಲಿ ಅವರನ್ನು ಗುರುಗಳು ಕೂರಿಸಲಿಲ್ಲ; ಪೀಠವ್ಯವಸ್ಥೆಯನ್ನು ನೋಡುವದಕ್ಕೆ ಅವರನ್ನು ಇಟ್ಟಿದ್ದರು (ಗು.ರ.ಪು. ೪೧)ಎಂದು ಬರೆದಿರುತ್ತಾರೆ. ಸುರೇಶ್ವರರನ್ನು ಇಲ್ಲಿ ಲೆಕ್ಕಹಿಡಿಯದೆ ಬಿಟ್ಟಿರುವದಕ್ಕೆ ಇದೂ ಒಂದು ಕಾರಣವಿರಬಹುದು.

| | | | |
|---|---|---|---|
| ೨೫. | ಚಿದ್ವಿಲಾಸ | ೧೩ | ೫೭೭ |
| ೨೬. | ಮಹಾದೇವ (೧) | ೨೪ | ೬೦೧ |
| ೨೭. | ಪೂರ್ಣಬೋಧ | ೧೭ | ೬೧೮ |
| ೨೮. | ಬೋಧ (೧) | ೩೭ | ೬೫೫ |
| ೨೯. | ಬ್ರಹ್ಮಾನಂದಘನ | ೧೩ | ೬೬೮ |
| ೩೦. | ಚಿದಾನಂದಘನ | ೪ | ೬೭೨ |
| ೩೧. | ಸಚ್ಚಿದಾನಂದ (೨) | ೨೦ | ೭೯೨ |
| ೩೨. | ಚಂದ್ರಶೇಖರ (೨) | ೧೮ | ೭೧೦ |
| ೩೩. | ಚಿತ್ಸುಖ (೨) | ೨೭ | ೭೩೭ |
| ೩೪. | ಚಿತ್ಸುಖಾನಂದ | ೨೧ | ೭೫೮ |
| ೩೫. | ವಿದ್ಯಾಘನ (೩) | ೩೦ | ೭೮೮ |
| ೩೬. | ಅಭಿನವಶಂಕರ (೪) | ೫೨ | ೮೪೦ |
| ೩೭. | ಸಚ್ಚಿದ್ವಿಲಾಸ | ೩೩ | ೮೭೩ |
| ೩೮. | ಮಹಾದೇವ (೨) | ೪೨ | ೯೧೫ |
| ೩೯. | ಗಂಗಾಧರ (೨) | ೩೫ | ೯೫೦ |
| ೪೦. | ಬ್ರಹ್ಮಾನಂದಘನ (೨) | ೨೮ | ೯೭೮ |
| ೪೧. | ಆನಂದಘನ | ೩೬ | ೧೦೧೪ |
| ೪೨. | ಪೂರ್ಣಬೋಧ (೨) | ೨೬ | ೧೦೪೦ |
| ೪೩. | ಪರಶಿವ (೧) | ೨೧ | ೧೦೬೧ |
| ೯೪. | ಬೋಧ (೨) | ೩೭ | ೧೦೯೮ |
| ೪೫. | ಚಂದ್ರಶೇಖರ (೩) | ೬೮ | ೧೧೬೬ |
| ೪೬. | ಅದ್ವೈತಾನಂದಬೋಧ | ೩೪ | ೧೨೦೦ |
| ೪೭. | ಮಹಾದೇವ (೩) | ೪೬ | ೧೨೪೭ |
| ೪೮. | ಚಂದ್ರಚೂಡ (೨) | ೫೦ | ೧೨೯೭ |
| ೪೯. | ವಿದ್ಯಾತೀರ್ಥ | ೮೮ | ೧೩೮೫ |
| ೫೦. | ಶಂಕರಾನಂದ | ೩೨ | ೧೪೧೭ |
| ೫೧. | ಪೂರ್ಣಾನಂದಸದಾಶಿವ | ೮೧ | ೧೪೯೮ |
| ೫೨. | ಮಹಾದೇವ (೪) | ೯ | ೧೫೦೭ |
| ೫೩. | ಚಂದ್ರಚೂಡ (೩) | ೧೭ | ೧೫೨೪ |

| | | | |
|---|---|---|---|
| ೫೪. | ಸರ್ವಜ್ಞಸದಾಶಿವಬೋಧ | ೧೫ | ೧೫೩೯ |
| ೫೫. | ಪರಮಶಿವ (೨) | ೪೭ | ೧೫೮೬ |
| ೫೬. | ಆತ್ಮಬೋಧ | ೫೨ | ೧೬೩೮ |
| ೫೭. | ಬೋಧ (೩) | ೫೪ | ೧೬೯೨ |
| ೫೮. | ಅದ್ವಯಾತ್ಮಪ್ರಕಾಶ | ೧೨ | ೧೭೦೪ |
| ೫೯. | ಮಹಾದೇವ (೫) | ೪೨ | ೧೭೪೬ |
| ೬೦. | ಚಂದ್ರಶೇಖರ (೪) | ೩೭ | ೧೭೮೩ |
| ೬೧. | ಮಹಾದೇವ (೬) | ೩೧ | ೧೮೧೪ |
| ೬೨ | ಚಂದ್ರಶೇಖರ (೫) | ೩೭ | ೧೮೫೧ |
| ೬೩. | ಮಹಾದೇವ (೭) | ೪೦ | ೧೮೯೧ |
| ೬೪. | ಶ್ರೀಚಂದ್ರಶೇಖರ (೬) | ೧೭ | ೧೯೦೮ |
| ೬೫. | ಮಹಾದೇವ (೮) ೭ ದಿನಗಳು | | ೧೯೦೮ |
| ೬೬. | ಚಂದ್ರಶೇಖರೇಂದ್ರಸರಸ್ವತೀ | ಈಗಿನ ಜಗದ್ಗುರುಗಳು | |

ಈ ಮೇಲೆ ಕೊಟ್ಟಿರುವ ಪಟ್ಟಿಯು ಎನ್. ವೆಂಕಟರಾಮನ್‌ರವರ ಗ್ರಂಥದಿಂದ (NVSK) ತೆಗೆದುಕೊಂಡದ್ದು. ಅವರಿಗೆ 'ಪುಣ್ಯಶ್ಲೋಕಮಂಜರೀ ಮತ್ತು ಗುರುರತ್ನಮಾಲಿಕಾ' ಮತ್ತು ಅದರಮೇಲೆ ಆತ್ಮಬೋಧರು ಬರೆದಿರುವ ಸುಷಮಾ ಎಂಬ ವ್ಯಾಖ್ಯಾನ– ಇವೇ ಮುಖ್ಯಾಧಾರಗಳು. (ಚರಿದ್ರೆ ಪು. ೧೩) 'ಇವುಗಳ ಕಾಲವೂ ಗ್ರಂಥಕಾರರೂ ಗೊತ್ತಾಗಿರುವದರಿಂದಲೂ ಶಂಕರರ ಮತ್ತು ಅದೇ ಹೆಸರಿನ ಶಿಷ್ಯಪರಂಪರೆಗೆ ಸೇರಿದ ಯತಿಗಳನ್ನು ಬೆಳೆಯಿಸಿ ಹೇಳುವದಿಲ್ಲವಾದರಿಂದಲೂ ಶಂಕರವಿಜಯಗಳಿಗಿಂತ ಇವುಗಳಲ್ಲಿಯೇ ನನಗೆ ಹೆಚ್ಚಿನ ವಿಶ್ವಾಸ. ಶಂಕರರಿಗಿಂತ ಈಗಿನ ವೇದಾಂತಇತಿಹಾಸವನ್ನು ತಿಳಿಸುವದಲ್ಲದೆ ಅವುಗಳಲ್ಲಿರುವ ಬಹಳ ಸಂದರ್ಭಗಳಲ್ಲಿ ಸಂವಾದಮಾಡಿ ನೋಡಬಹುದಾದ ಕೆಲವು ಕಾಲಸಮರ್ಪಕ ಘಟನೆಗಳನ್ನು ಅವು ತಿಳಿಸುತ್ತವೆ (NVSK. P.5) ಎಂತ ಅವರು ಬರೆದುಕೊಂಡಿರುತ್ತಾರೆ. 'ಕಾಮಕೋಟಿಪೀಠದ ಗುರುವರಂಪರೆಯ ಕಾಲದ ಪಟ್ಟಿಯು ಭಾರತದ ವಿಚಾರದ ಇತಿಹಾಸದ ಎಷ್ಟೋ ವಿಷಯಗಳಿಗೆ ಸರಿಯಾದ ಕಾಲವನ್ನು ತಿಳಿಸುವದರಿಂದ ಬಹುಮುಖ್ಯವಾಗಿರುತ್ತದೆ' (NVSK. p. 8) ಎಂತಲೂ ಅವರ ನಂಬಿಕೆ.[1]

ಆದರೆ ಕೆ. ಆರ್. ವೆಂಕಟರಾಮನ್‌ರವರು ಈ ಪರಂಪರೆಯ ವಿಷಯದಲ್ಲಿ ಬರೆದಿರುವದು ಇದಕ್ಕೆ ವಿರುದ್ಧವಾಗಿರುತ್ತದೆ. ಶಂಕರರ ಕಾಲವು ಕ್ರಿ. ಶ. 8 ಶತಕವಾಗಿದೆ ಎಂದು ಅವರು ಬರೆದಿರುವ ಅಭಿಪ್ರಾಯವನ್ನು ಆಗಲೆ (ಪು.ನ೬೩–

1. ಎನ್, ವೆಂಕಟರಾಮದ್‌ರವರೂ ಸರ್ವಜ್ಞಾತ್ಮರಿಂದ ಹಿಡಿದು ಸಚ್ಚಿದ್ಘನರವರೆಗಿನ ಕಾಲವು ಕಲ್ಪನಾಮಯವಾಗಿ ( fanciful ) ಕಾಣುತ್ತದೆ ಎಂದು ಒಪ್ಪಿರುತ್ತಾರೆ NVSK· p 9)·

೪೬೪) ಕೊಟ್ಟಿರುತ್ತೇವೆ. ಕಾಮಕೋಟಿಪೀಠದ ಪರಂಪರೆಯ ಪರೀಕ್ಷೆಯನ್ನು ಅವರು ಹೀಗೆ ಸಂಗ್ರಹವಾಗಿ ಬರೆದು ನಮಗೆ ಕಳುಹಿಸಿಕೊಟ್ಟಿರುತ್ತಾರೆ :

೧. **ಸರ್ವಜ್ಞಾತ್ಮರು** (ಗುರು ಸಂ. ೧) ಇವರು ಸಂಕ್ಷೇಪಶಾರೀರಕದ ಕರ್ತರು ; ದೇವೇಶ್ವರರ ಶಿಷ್ಯರು. ದಕ್ಷಿಣ ತಿರುವಾಂಕೋರಿನ ಮನುಕುಲಾದಿತ್ಯ ನೆಂಬ ರಾಜನ ಪ್ರೋತ್ಸಾಹದಲ್ಲಿದ್ದವರು. ೧೧ನೆಯ ಶತಮಾನದವರಿವರು.

೨. **ಜ್ಞಾನಾನಂದ, ಜ್ಞಾನೋತ್ತಮ** (ಗು.ಸಂ. ೩ ; ಕ್ರಿ.ಪೂ 26 – 205, ಪು. ೩೫೧)[1] 'ಈತನು ಮಹೋಪಾಧ್ಯಾಯನೆಂಬ ಜ್ಞಾನೋತ್ತಮಮಿಶ್ರ. ಗೌಡಬ್ರಾಹ್ಮಣ ಗೃಹಸ್ಥನು. ಕ್ರಿ. ಶ. 12ನೆಯ ಶತಮಾನದಲ್ಲಿ ಚೋಳರಾಜರ ಪ್ರೋತ್ಸಾಹದಿಂದ ಕಾವೇರಿತೀರದಲ್ಲಿ ನೆಲಸಿದನು. ಈತನು ತನ್ನ ತಂದೆಯ ಗುರುಗಳಾದ– ಶ್ರೀಶೃಂಗೇರೀಪೀಠಾಧಿಪರಾದ 'ಜ್ಞಾನೋತ್ತಮರ' ಹೆಸರು ತನಗೆ ಬಂದಿತೆಂದು ತಾನೇ ಬರೆದುಕೊಂಡಿದಾನೆ.

೩. **ಆನಂದಜ್ಞಾನ** (ಗು.ಸಂ. ೫, ಕ್ರಿ. ಪೂ. 124–55, ಪು. ೩೫೧) 'ಆನಂದಗಿರಿ'ಯೆಂದೂ ಈ ಕವಿಗೆ ಮತ್ತೊಂದು ಹೆಸರು. ಅನುಭೂತಿಪ್ರಕಾಶ ಮತ್ತು ಶುದ್ಧಾನಂದರ ಶಿಷ್ಯರು; ಇವರು ನಿಜವಾಗಿ ಇದ್ದದ್ದು ಕ್ರಿ.ಶ.13 ಪೂರ್ವಾಶ್ರಮದ ಹೆಸರು ಜನಾರ್ದನ.

೪. **ಕೃಪಾಶಂಕರ** (ಗು.ಸಂ. ೭, ಕ್ರಿ. ಶ. 28–69) ಇವರು ಷಣ್ಮತ ಸ್ಥಾಪನಾಚಾರ್ಯರಂತೆ, ಆದ್ಯಶಂಕರರಲ್ಲವಂತೆ. ಸುಭಟವಿಶ್ವರೂಪರನ್ನು ಶೃಂಗೇರೀಪೀಠಕ್ಕೆ ನಿಯಮಿಸಿದರಂತೆ! 'ವಿಶ್ವರೂಪ'ರೆಂಬವರು ಒಬ್ಬರೇ ; ಅವರೇ ಸುರೇಶ್ವರಾಚಾರ್ಯರಾದರೆಂಬುದು ಎಲ್ಲರಿಗೂ ಗೊತ್ತು.

೫. **ಚಿದ್ಘನ** (ಗು.ಸಂ. ೯, ಕ್ರಿ.ಶ. 127–172). ಇವರಿಗೆ ಶಿವಾದ್ವೈತ ದಲ್ಲಿ ಅಭಿಮಾನವಿತ್ತಂತೆ. ಶಿವಾದ್ವೈತವು ಕಾಶ್ಮೀರದಲ್ಲಿ ಸ್ಥಾಪಿತವಾದದ್ದು ಎಂಟನೆಯ ಶತಮಾನದಿಂದೀಚೆಗೆ; ಅದು ಲಕುಲೀಶದ ಪಾಶುಪತಮತಕ್ಕೆ ಪ್ರತಿಕ್ರಿಯೆ.

೬. **ಉಜ್ಜ್ವಲಶಂಕರ** (ಗು.ಸಂ. ೧೪, ಕ್ರಿ. ಶ. 329 367) ಇವರ ಕಾಲದಿಂದ ಕಾಂಚಿಯ ಕೆಲವರು ಆಚಾರ್ಯರುಗಳು ಕಾಶ್ಮೀರದಲ್ಲಿ ಇರುತ್ತಿದ್ದರೆಂದು ಹೇಳಲಾಗಿದೆ ; ಹಾಗಾದರೆ ಕಾಂಚಿಯಲ್ಲಿ ಆಗ ಏನಾಗುತ್ತಿತ್ತು ?

೭. **ಶಂಕರ (೪)** (ಗು.ಸಂ. ೧೮; ಕ್ರಿ.ಶ. 398–437, ಪು. ೩೫೧).[2] ಮೂಕರೆಂದೂ ಅವರಿಗೆ ಅಡ್ಡಹೆಸರು. ಸಾಂಪ್ರದಾಯಿಕವಾಗಿ ತಿಳಿಯಬಂದಿರುವ

1. ಕಂಸದಲ್ಲಿ ಹಾಕಿರುವುದು ಕಾಂಚೀಪರಂಪರೆಯ ಗುರುಸಂಖ್ಯೆ, ಕಾಲ ಮತ್ತು ಈಗ ನಾವು ಬರೆದಿರುವ ಚರಿತ್ರೆಯ ಪುಟ. ಮುಂದೆ ಬರೆದಿರುವುದು ಕೆ. ಆರ್. ವೆಂಕಟರಾಮನ್ನರ ಅಭಿಪ್ರಾಯ.

2. ಸುರೇಶ್ವರರ ಕಾಲದ ವಿಷಯಕ್ಕೆ ಕಾಂಚೀಶೃಂಗೇರೀಸಂಪ್ರದಾಯದ ಕಾಲಮಾನಗಳೆರಡನ್ನೂ ನಂಬುವಂತಿಲ್ಲವೆಂಬುದು (NVSK p. 54) ಎನ್. ವೆಂಕಟರಾಮನ್ನರೂ ಒಪ್ಪಿದಾರೆ.

ದೇನೆಂದರೆ, ಮೂಕನೆಂಬಾತನು ಕಾಂಚಿಯಲ್ಲಿದ್ದ ಒಬ್ಬ ಪೂಜಾರಿ. ಉಪಾಸನೆಯ ಫಲವಾಗಿ ಕಾವ್ಯಪ್ರತಿಭೆಯು ಅವನಿಗೆ ಬಂದಿತ್ತು. ಅವನ ಕಾಲವು ಹೇಗೂ ಕ್ರಿ.ಶ. 16ನೆಯ ಶತಮಾನಕ್ಕಿಂತ ಹಿಂದಿಲ್ಲ. ಕುಂಭಕೋಣದ ಪರಂಪರೆಯು ಅವನನ್ನು ಕಾಶ್ಮೀರಕ್ಕೆ ವರ್ಗಾಯಿಸಿದೆ. ಮೆಂಟನೆಂಬ ಕವಿಯನ್ನೂ ಮತ್ತು 'ಹಯಗ್ರೀವವಧ' ಎಂಬ ಅವನ ನಾಟಕವನ್ನೂ ಪರಾಮರ್ಶಿಸಲಾಗಿದೆ. ಆ ಕವಿಯ ಕಾಲವು ಆರನೆಯ ಶತಮಾನಕ್ಕಿಂತ ಬಹಳ ಈಚೆಗೆ. 'ಹಯಗ್ರೀವವಧೆ' ಎಂಬ ನಾಟಕವೂ ಯಾರಿಗೂ ತಿಳಿಯದು. ಇದರಂತೆ 'ರಾಮಲೀಲನ' ಮಣಿಪ್ರಭಾ ಎಂಬುದೂ ಕಲ್ಪನೆಯೇ. ಅವನ ನಾಟಕದ ಶ್ಲೋಕಗಳೆಂದು ಉದಾಹರಿಸಿರುವದೆಲ್ಲ ಸೃಷ್ಟಿಯೇ.

೮. ಚಂದ್ರಶೇಖರ ಪ್ರಥಮ (ಗು.ಸಂ. ೧೯, ಕ್ರಿ.ಶ. 437–47) ಮಾತೃಗುಪ್ತನು ಕಾಶ್ಮೀರದ ಅರಮನೆಯಲ್ಲಿದ್ದ ಒಬ್ಬ ಮಾವಟಿಗ. ರಾಜಕೀಯ ಸಂಚಿನಿಂದ ಬಹಳ ಸ್ವಲ್ಪಕಾಲ ಅಲ್ಲಿಯ ರಾಜನಾದನು.[1] ಕಾಶಿಯಲ್ಲಿ ಸಂನ್ಯಾಸಿಯಾಗಿ ದೇಹವನ್ನು ಬಿಟ್ಟನು. ಪೀಠಾಧಿಪತ್ಯಕ್ಕೆ ಎಂಥ ಸತ್ಪಾತ್ರನಿವನು! ಅವನಿದ್ದದ್ದು ಆರನೆಯ ಶತಮಾನ, ಐದನೆಯ ಶತಮಾನವಲ್ಲ.

೯. ಸಚ್ಚಿದಾನಂದಘನ (ಗು. ಸಂ. ೨೩, ಕ್ರಿ. ಶ. 527–48) ಸಿದ್ಧವಿಜಯಕಾವ್ಯದಲ್ಲಿ ಈ ಗುರುಗಳ ಪರಾಮರ್ಶವಿದೆಯಂತೆ. ಅದು ಯಾರ ಕಣ್ಣಿಗೂ ಬಿದ್ದಿಲ್ಲದ ಮತ್ತೊಂದು ಗ್ರಂಥ.

೧೦. ಚಿದಾನಂದಘನ (ಗು.ಸಂ. ೩೦, ಕ್ರಿ.ಶ. 668–72) ಎಂಬ ಹೆಸರು ಮತ್ತೊಂದು ಮಿಥ್ಯಾಕಲ್ಪನೆ. ಕಾಶ್ಮೀರದ ಲಲಿತಾದಿತ್ಯಮುಕ್ತಾಪೀಡನು ದಕ್ಷಿಣಕ್ಕೆ ದಂಡಯಾತ್ರೆಬಂದು ಕರ್ಣಾಟಕದ ರಟ್ಟಾರಾಣಿಯ ಮಗನನ್ನು ಸಿಂಹಾಸನಚ್ಯುತನನ್ನಾಗಿ ಮಾಡಿದ್ದನಂತೆ. ಅವನಿಗೆ ಈ ಆಚಾರ್ಯರು ಪಟ್ಟವನ್ನು ಕಟ್ಟಿಸಿದರಂತೆ. ಲಲಿತಾದಿತ್ಯನ ದಂಡಯಾತ್ರೆಯು ಕಾನ್ಯಕುಬ್ಜವವರೆಗೆ ಮಾತ್ರ ವಿಸ್ತರಿಸಿತ್ತು. ಅಲ್ಲಿಂದ ದಕ್ಷಿಣಕ್ಕೆ ಬರಲೇ ಇಲ್ಲ. ಕಾನ್ಯಕುಬ್ಜಕ್ಕೂ ಕರ್ಣಾಟಕಕ್ಕೂ ಎಲ್ಲಿಂದೆಲ್ಲಿಗೆ! ಆಗ್ಗೆ ದಕ್ಕನ್‌ಪ್ರಾಂತವನ್ನು ಚಾಲುಕ್ಯರು ಆಳುತ್ತಿದ್ದರು, ಅವರನ್ನು ಉತ್ತರದೇಶದ ಯಾವ ರಾಜನೇ ಆಗಲಿ ಪದಚ್ಯುತರನ್ನಾಗಿ ಮಾಡಿದರೆಂಬುದಕ್ಕೆ ಯಾವ ಆಧಾರವೂ ಇಲ್ಲ, ಕಾಶ್ಮೀರದ ರಾಜನು ಹಾಗೆ ಮಾಡಿದನೆಂಬುದೆಲ್ಲಿಂದ ಬಂತು? ಇದಕ್ಕೆ ಬದಲಾಗಿ ಅವರು ಹರ್ಷನನ್ನು ನರ್ಮದೆಯಿಂದ ದಕ್ಷಿಣಕ್ಕೆ ಬಾರದಂತೆ ಅಡ್ಡಗಟ್ಟಿದ್ದರು. ರಟ್ಟಾ ಎಂಬುದು ರಾಷ್ಟ್ರಕೂಟದ ತದ್ಭವವಾದ್ದರಿಂದ ಅದು ಒಬ್ಬರ ಹೆಸರೇ ಆಗಿರಲಾರದು

1. ಮಾತೃಗುಪ್ತನೇ 'ಚಂದ್ರಶೇಖರ' ಎಂಬ ಹೆಸರಿನ ಕಾಂಚೀಪೀಠಾಧಿಪತಿ ಎಂದು ಎನ್. ವೆಂಕಟರಾಮಯ್ಯನವರ ಹೇಳಿಕೆ (NvSK p. 74).

೧೧. ಶಂಕರ ಪಂಚಮ (ಗು.ಸಂ. ૩૯, ಪು.೪೦, 788 840)ಇವರ ವಿಷಯವನ್ನು ಪರೀಕ್ಷೆಮಾಡುವದನ್ನು ಸ್ಥಲಸಂಕೋಚದಿಂದ ಸದ್ಯಕ್ಕೆ ಬಿಟ್ಟಿರುತ್ತೇನೆ.

೧೨. ಬೋಧ ದ್ವಿತೀಯ (ಗು. ಸಂ. ೪೪, ಕ್ರಿ ಶ. 1061-98) 'ಇವರು ಪೂರ್ವಾಶ್ರಮದಲ್ಲಿ ಒಬ್ಬ ರಾಣಿಯ ತೃಪ್ತ್ಯರ್ಥವಾಗಿ ಕಥೆಗಳನ್ನು ಬರೆದ ಸೋಮದೇವನು. ದೇವತೆಗಳನ್ನು ಹಗುರವಾಗಿ ಅಸಡ್ಡೆಯಿಂದ ವರ್ಣಿಸಿರುತ್ತಾನೆ. ಧರ್ಮ(ಮತ)ವನ್ನು ತಿರಸ್ಕರಿಸಿರುತ್ತಾನೆ ದಡ್ಡರು, ದರೋಡೆಕೋರರು, ಠಕ್ಕರು. ಖೂನಿಕಾರರ ಗಂಡನನ್ನು ಕೊಂದ ಹೆಂಡತಿಯರು– ಇವರೇ ಅವನು ಕಥಾಪಾತ್ರಗಳು. ಕೆಲವು ಕಥೆಗಳಲ್ಲಿ ವ್ಯಭಿಚಾರದ ಕಾಮವಿಲಾಸಗಳಿವೆ. ಅವನ ಚರಿತ್ರೆಯೆಂದರೆ, ಕೊನೆಗೆ ಅವನು ಶೈವಪಂಥದ ಸಂನ್ಯಾಸಿಯಾದನೆಂದಿಷ್ಟೇ ತಿಳಿದು ಬಂದಿದೆ. ಭೋಜನು ಕೊಟ್ಟ ಚಿನ್ನದ ಪಲ್ಲಕ್ಕಿಯಲ್ಲಿ ಕಾಂಚಿಗೆ ಬಂದು ಪೀಠಾಧ್ಯಕ್ಷನಾದನೆಂದು ಇಲ್ಲಿ ಹೇಳಲಾಗಿದೆ. ಇಷ್ಟೇ ಸಾಲದೆ, ಕಾಂಚಿಯಲ್ಲಿ ಮಹಮ್ಮದೀಯರ ಕಾಟವನ್ನು ಪರಿಹರಿಸಿದನೆಂದೂ ಕಲ್ಪಿಸಲಾಗಿದೆ. ಆ ಕಾಲಕ್ಕೆ ಇದು ವೀರ ರಾಜೇಂದ್ರ, ಅಧಿರಾಜೇಂದ್ರ, ಕುಲೋತ್ತುಂಗ (೧)–ಎಂಬ ಬಲಿಷ್ಠರಾದ ಚೋಳ ರಾಜನ ರಾಜಧಾನಿಗಳಲ್ಲೊಂದಾಗಿತ್ತು. ದಕ್ಷಿಣಭಾರತದಲ್ಲೆಲ್ಲ ಅವರ ಅಧಿಕಾರವು ನಡೆಯುತ್ತಿತ್ತು. ಈ ಪ್ರಭಾವಶಾಲಿಗಳಾದ ಚೋಳಚಕ್ರಾಧಿಗತಿಗಳು ಒಬ್ಬ ಸಂನ್ಯಾಸಿಯ ಸಹಾಯದಿಂದ ಕಾಶ್ಮೀರದ ಕಳಸನೆಂಬವನ ಸಹಾಯವನ್ನು ಕೋರಿದರು ಎಂಬುದು ಎಂಥ ಹಾಸ್ಯಾಸ್ಪದವಾದ ಮಾತು ! ಇದೂ ಅಲ್ಲದೆ ಆ ಕಾಲಕ್ಕೆ ಕಾಂಚಿಗೆ ಸುತ್ತ ಒಂದಸಾವಿರ ಮೈಲಿಗಳ ಕ್ಷೇತ್ರದಲ್ಲಿ ಚೋಲನಿಗೆ ಎದುರಾಗುವ ಮಹಮ್ಮದೀಯರೇ ಇರಲಿಲ್ಲವಲ್ಲ !

೧೩. ಚಂದ್ರಶೇಖರ ತೃತೀಯ (?) ಅಥವಾ ಚಂದ್ರಚೂಡ (ಗು.ಸಂ. ೪೫, ಕ್ರಿ.ಶ. 1098-1166) ಈ ಸಂದರ್ಭದಲ್ಲಿ ಉದಾಹರಿಸಿರುವ (NVSK pp 88-89) ಜಯದೇವ. ಸುಹಲ –ಮುಂತಾದವರ ಗ್ರಂಥಗಳು ಅಪ್ರಸಿದ್ಧವಾಗಿವೆ.

೧೪. ಅದ್ವೈತಾನಂದಬೋಧ (ಗು.ಸಂ. ೪೬, ಕ್ರಿ.ಶ 1166೩1200) ಇವರು ಅಭಿನವಗುಪ್ತನನ್ನು ಜಯಿಸಿದರಂತೆ. ಆದರೆ ಆತನು ಈ ಗುರುಗಳಿಗಿಂಥ ಒಂದು ಶತಮಾನ ಮುಂಚೆಯೇ ಇದ್ದವನು ; ಈ ಗುರುಗಳ ಗ್ರಂಥಗಳ ಹೆಸರನ್ನು ಯಾರೂ ಕೇಳಿದವರಿಲ್ಲ.

೧೫. ವಿದ್ಯಾತೀರ್ಥ (ಗು. ಸಂ. ೪೮, ಕ್ರಿ ಶ. 1497-1385, ಪು. ೩೫೨). ವಿದ್ಯಾಶಂಕರರೆಂದು ಪ್ರಸಿದ್ಧರಾದ ಇವರು ಕ್ರಿ. ಶ. 1333ರಲ್ಲಿ ಸಮಾಧಿಸ್ಥರಾದರು, ಕುಂಭಕೋಣದವರು ಬರೆದಿರುವಂತೆ ಕ್ರಿ. ಶ. 1385 ರಲ್ಲಲ್ಲ. ಶೃಂಗೇರಿಯಲ್ಲಿರುವ ವಿದ್ಯಾತೀರ್ಥರ ಸಮಾಧಿಗೆ ಬುಕ್ಕ, ಹರಿಹರ

(೨) ಮುಂತಾದವರು 1346, 1356, 1375ರಲ್ಲಿ ಕೊಟ್ಟ ಮಾನ್ಯಗಳ ದಾಖಲೆ ಇದೆ. ಇವರ ಪೂರ್ವಾಶ್ರಮದ ಹೆಸರು ಸರ್ವಜ್ಞವಿಷ್ಣು ಎಂದಿತ್ತಂತೆ. ಇದು ಆಗದ ಮಾತು. ಸರ್ವಜ್ಞವಿಷ್ಣುವು ಸಾಯಣನ ಗುರುವಲ್ಲ, ಅವನ ಮಗ ಮಾಧವನ (ಕ್ರಿ. ಶ. 1400) ಗುರು.

ಇವರು ಎಂಟು ಮಠಗಳನ್ನು ಸ್ಥಾಪಿಸಿದರೆಂಬ ವಿಷಯಕ್ಕೆ ಕೆ. ಆರ್. ವೆಂಕಟರಾಮನ್ನರ ಅಭಿಪ್ರಾಯವನ್ನು ಹಿಂದೆ (ಪು. ೪೬೩) ಕೊಟ್ಟಿದೆ. 'ವಿದ್ಯಾರಣ್ಯರೇ ಹರಿಹರ ದ್ವಿತೀಯನ ಸಹಾಯದಿಂದ ಅನೇಕ ಉಪಮಠಗಳನ್ನು ಸ್ಥಾಪಿಸಿದವರು' ಎಂದು ಕೆ. ಆರ್. ವೆಂಕಟರಾಮನ್ನರ ಅಭಿಪ್ರಾಯ.

೧೬. ಶಂಕರಾನಂದ (ಗು.ಸಂ. ೫೦, ಕ್ರಿ.ಶ. 1385–1417) 'ಇವರ ಗ್ರಂಥಗಳಿಂದ ವಿದ್ಯಾತೀರ್ಥರು ಅವರ ವಿದ್ಯಾಗುರುಗಳೆಂದೂ ದೀಕ್ಷಾಗುರುಗಳು 'ಆನಂದಾತ್ಮ'ರೆಂದೂ ತಿಳಿಯಬರುತ್ತದೆ. ಸಾಮಾನ್ಯಸಂನ್ಯಾಸಿಗಳಿಂದ ಆಶ್ರಮವನ್ನು ಸ್ವೀಕರಿಸಿದವರು ಪೀಠಾಧಿಪರಾದರೆಂದು ನಂಬುವದು ಕಷ್ಟ. ಇವರು ಪೀಠಾಧ್ಯಕ್ಷರಾಗಿರಲೇ ಇಲ್ಲ.

ಎನ್. ವೆಂಕಟರಾಮನ್‌ರವರು (NVSK p. 97) ಶಂಕರಾನಂದರ ಬೃಹದಾರಣ್ಯಕದೀಪಿಕೆಯಿಂದ ಒಂದು ಶ್ಲೋಕವನ್ನು ತೆಗೆದುಕೊಂಡು ಉದಾಹರಿಸಿರುತ್ತಾರೆ:

"ಕಾಞ್ಚೀಪೀಠಜುಷಃ ಕಠೋರಧಿಷಣಾ ನಿರ್ಧೂತದುರ್ಧೂರ್ವಹ-
ದ್ವೈತಿವ್ರಾತದುರಾಗ್ರಹಗ್ರಹಭಯಾನ್ ಮಾಯಾವಿದೂರಕ್ರಿಯಾನ್ ।
ಆಚಾರ್ಯಾನ್ ಮಮ ಚನ್ದ್ರಮೌಲಿಚರಣಧ್ಯಾನೈಕತಾನಾಶಯಾನ್
ವಿದ್ಯಾತೀರ್ಥಮಹೇಶ್ವರಾನ್ ಹೃದಿ ಸದಾ ವಿದ್ಯೋತಮಾನಾನ್ ಭಜೇ ॥"

ಇದರಲ್ಲಿ ವಿದ್ಯಾತೀರ್ಥರು ಕಾಂಚೀಪೀಠಾಧ್ಯಕ್ಷರೆಂದು ಸ್ಪಷ್ಟವಾಗಿ ಉಲ್ಲೇಖಿಸಿದೆ. ಆದರೆ ಈ ಶ್ಲೋಕವು ಆ ಗ್ರಂಥದ ಯಾವ ಹಸ್ತಪತ್ರಿಕೆಯಲ್ಲಿಯೂ ಇಲ್ಲ' ಎಂದು ಕೆ. ಆರ್. ವೆಂಕಟರಾಮನ್ನರವರು ಬರೆದಿರುತ್ತಾರೆ.

೧೭. ಸರ್ವಜ್ಞಸದಾಶಿವಬೋಧ[1] (ಗು.ಸಂ. ೫೪, ಕ್ರಿ.ಶ. 1524–39) ರಾಮನಾಡಿನ ರಾಜನಾದ ಪ್ರವೀರನಿಂದ ಸೇವಿಸಲ್ಪಟ್ಟವರೆಂದು ಇವರನ್ನು ಗಣಿಸಲಾಗಿದೆ. ರಾಮನಾಡಿನಲ್ಲಿ ಆ ಹೆಸರಿನ ಅರಸು ಯಾವನೂ ಇರಲಿಲ್ಲ; ಆ ಕಾಲಕ್ಕೆ ರಾಮನಾಡರಾಜ್ಯವು ಇನ್ನೂ ರೂಪಿಸಿಕೊಂಡೇ ಇರಲಿಲ್ಲ.

೧೮. ಬೋಧ ತೃತೀಯ (ಗು.ಸಂ. ೫೭, ಕ್ರಿ ಶ. 1638–92) ಭಗವನ್ನಾಮಬೋಧೇಂದ್ರರೆಂಬವರು ತಮ್ಮ ಜೀವಿತಕಾಲದಲ್ಲೆಲ್ಲ ನಾಮಸಂಕೀರ್ತನೆ

---

1. 'ಪುಣ್ಯಶ್ಲೋಕಮಂಜರೀ' ಗ್ರಂಥಕರ್ತರಿವರು ಎಂದು ಎನ್. ವೆಂಕಟರಾಮನ್ನರ ಹೇಳಿಕೆ (NVSK p. 99).

ಯಲ್ಲಿಯೇ ನಿರತರಾಗಿದ್ದ ಮಹಾತ್ಮರು. ಕಾವೇರಿತೀರದಲ್ಲಿ 'ಗೋವಿಂದಪುರ'ವೆಂಬ ಮಠವನ್ನು ಸ್ಥಾಪಿಸಿದ್ದರು. ಪ್ರತಿವರ್ಷವೂ ಅವರ ಆರಾಧನೆಯು ಅಲ್ಲಿ ನಡೆಯುತ್ತಿದೆ. ಈ ಮಠಕ್ಕೆ ಸ್ವಾಸ್ಥ್ಯಗಳೂ ಇವೆ; ಅವುಗಳ ಮೇಲೆ ಕುಂಭಕೋಣ ಮಠಕ್ಕೆ ಯಾವ ಅಧಿಕಾರವೂ ಇರುವದಿಲ್ಲ. 'ಬೋಧ'ರು ಪೀಠಾಧಿಪತಿಗಳಾಗಿದ್ದರೆಂದು ಯಾರಿಗೂ ತಿಳಿಯದು.

೧೯. **ಪರಮಶಿವ ದ್ವಿತೀಯ, ಆತ್ಮಬೋಧ** (ಇಲ್ಲಿ ಸದಾಶಿವಬ್ರಹ್ಮರೆಂದು ಪ್ರಸಿದ್ಧವಾಗಿರುವ) ಸದಾಶಿವೇಂದ್ರರು ಪರಮಶಿವೇಂದ್ರದ್ವಿತೀಯರ ಶಿಷ್ಯರೆಂಬ ಹೇಳಿಕೆ, ಮತ್ತು ಸದಾಶಿವರು **"ಗುರುರತ್ನಮಾಲಿಕೆ"**ಯ ಕರ್ತರು ಎಂಬುದು– ಈ ಎರಡು ವಿಚಾರಪ್ರಚೋದಕವಿಷಯಗಳನ್ನು ಇಲ್ಲಿ ಚರ್ಚಿಸಬಹುದು :–

| ಕುಂಭಕೋಣದ ಪೀಠಾಧ್ಯಕ್ಷರು | ಸದಾಶಿವರ ಗ್ರಂಥಗಳಿಂದ ತಿಳಿಯಬರುವ ಶಿಷ್ಯಪರಂಪರೆ |
|---|---|
| ಸರ್ವಜ್ಞಸದಾಶಿವಬೋಧ (ಗು.ಸಂ. ೫೪) 1524–39 | ಅಭಿನವನಾರಾಯಣೇಂದ್ರಸರಸ್ವತೀ ('ಪಂಚೀಕರಣಭಾವಪ್ರಕಾಶಿಕಾ'ಕರ್ತರು) |
| \| | \| |
| ಶಿಷ್ಯರು ಪರಮಶಿವ ದ್ವಿತೀಯ (ಗು.ಸಂ ೫೫) 1539–86 | ಶಿಷ್ಯರು ಪರಮಶಿವ (ದಹರವಿದ್ಯಾಪ್ರಕಾಶಕರ್ತರು) |
| \| | \| |
| (ಶಿಷ್ಯರು ಆತ್ಮಬೋಧರು ಗು.ಸಂ. ೫೬) 1586–1638 | ಶಿಷ್ಯರು ಸದಾಶಿವೇಂದ್ರರು (ಗೊತ್ತಿರುವ ಕಾಲಗಳು 1726, 1734, 1761) |

ಮೇಲಿನ ಪಟ್ಟಿಯಿಂದ ಸದಾಶಿವೇಂದ್ರರ ಗುರುಗಳಾದ ಪರಮಶಿವರು ಕುಂಭಕೋಣದ ಪೀಠಾಧಿಪರಾದ ಪರಮಶಿವೇಂದ್ರರಿಗಿಂತ ಭಿನ್ನರೆಂದು ಸ್ಪಷ್ಟವಾಗುತ್ತದೆ. ಮೊದಲನೆಯವರ ಗುರುಗಳು ಅಭಿನವನಾರಾಯಣೇಂದ್ರರು, ಎರಡನೆಯವರ ಗುರುಗಳು ಸರ್ವಜ್ಞಸದಾಶಿವರು. ಸದಾಶಿವೇಂದ್ರರು ತಂಜಾವೂರಿನ ತುಲಸಾಜೀಮಹಾರಾಜರ, ತಿರುವಾಂಕೂರಿನ ಮಹಾರಾಜಶ್ರೀ ರಾಮವರ್ಮ ಕಾರ್ತಿಕೈ ತಿರುಮುಲ ಮತ್ತು ಪುದುಕೋಟೆಯ ರಾಜಾ ರಘುನಾಥರಾಯ ತೊಂಡಿಮಾನ– ಇವರ ಕಾಲದವರು. ಅವರು ಪುದುಕೋಟೆಯ ರಾಜ ತೊಂಡಿಮಾನನಿಗೆ ಒಂದು ಮಂತ್ರದೀಕ್ಷೆಯನ್ನು (1739ರಲ್ಲಿ) ಕೊಟ್ಟರು. ಅಂದಿನಿಂದ ರಾಜಗುರುಗಳಾದರು. ಆ ರಾಜ್ಯದ ರಿಕಾರ್ಡ್‌ಗಳಲ್ಲಿ ಸದಾಶಿವರ ಮತ್ತು ನೆರೂರಿನಲ್ಲಿರುವ ಅವರ ಸಮಾಧಿಯ ಪರಾಮರ್ಶಗಳಿವೆ. ಆ ಸಮಾಧಿಗೆ ಪುದುಕೋಟೆಯ ರಾಜನು ಗ್ರಾಮಗಳನ್ನು ಮಾನ್ಯವಾಗಿ ಕೊಟ್ಟರು

ತ್ತಾನೆ. ಹದಿನೆಂಟನೆಯ ಶತಮಾನಕ್ಕೆ ಸೇರಿದ ಸದಾಶಿವರು ಅದಕ್ಕಿಂತ ಎರಡು ಶತಮಾನಗಳ ಹಿಂದೆಯೇ ಇದ್ದು ಸಮಾಧಿಸ್ಥರಾಗಿದ್ದ ಕುಂಭಕೋಣ ಮಠದ ಶಿಷ್ಯರಾಗುವದು ಹೇಗೆ ? ಹದಿನೆಂಟನೆಯ ಶತಮಾನದ ಸದಾಶಿವರು ೧೬ನೆಯ ಮತ್ತು ೧೭ನೆಯ ಶತಮಾನದಲ್ಲಿದ್ದ ಆತ್ಮಬೋಧರ ಪ್ರೇರಣೆಯಿಂದ "ಗುರುರತ್ನಮಾಲಿಕೆ"ಯನ್ನು ಬರೆದರಂತೆ. ತನ್ನ ಕಾಲವಾದ ಒಂದು ಶತಮಾನದ ಮೇಲೆ ಹುಟ್ಟುವಾತನನ್ನು ಒಂದು ಗ್ರಂಥವನ್ನು ಬರೆಯಿರೆಂದು ಪ್ರೇರಿಸುವದು ಹೇಗೆ ? ಹೀಗಿರುವದರಿಂದ ಸದಾಶಿವೇಂದ್ರರು ಕುಂಭಕೋಣದ ಗುರುಗಳ ಶಿಷ್ಯರೂ ಅಲ್ಲ, ಗುರುರತ್ನಮಾಲಿಕೆಯನ್ನು ಬರೆಯಲೂ ಇಲ್ಲ– ಎಂಬುದು ಸ್ಪಷ್ಟವಾಗಿರುತ್ತದೆ.

೨೦. 'ಗೋಪಿನಾಥರಾಯರು[1] ಸಂಪಾದಿಸಿರುವ ತಾಮ್ರಶಾಸನಗಳಲ್ಲಿ ಅನೇಕ ಅಸಂಗತಗಳಿವೆ. ಒಂದರಲ್ಲಿ ದಾನಕೊಟ್ಟಾತನು ಸತ್ತು ೩೪ ವರ್ಷಗಳಾದ ಬಳಿಕದ ಕಾಲವನ್ನು ಹಾಕಿದೆ. ಮತ್ತೊಂದರಲ್ಲಿ ದಾನವಾಗಿ ಕೊಟ್ಟ ಗ್ರಾಮಗಳು ಕೊಟ್ಟ ರಾಜನ ರಾಜ್ಯಕ್ಕೆ ಸೇರಿರಲೇ ಇಲ್ಲ, ಮತ್ತೊಂದು ಮುಸಲ್ಮಾನರು ಕೊಟ್ಟ ದಾನವಾದರೂ ಹಿಂದೂದೇವತೆಗಳ ನಮಸ್ಕಾರಗಳಿಂದ ಪ್ರಾರಂಭವಾಗಿದೆ ; ಈ ಶ್ಲೋಕಗಳೊಳಗೆ ಎರಡು ಮಾನ್ಯದ ಕಾಲಕ್ಕಿಂತ ಒಂದು ಶತಮಾನವಾದ ಬಳಿಕ ರಚಿತವಾದ ಗ್ರಂಥದಿಂದ ಆರಿಸಿಕೊಂಡವುಗಳಾಗಿದೆ. ಇನ್ನೊಂದು ಶಾಸನಕ್ಕೂ ಈ ಮಠಕ್ಕೂ ಯಾವ ಸಂಬಂಧವೂ ಇಲ್ಲ. ಈ ಶಾಸನಗಳನ್ನು ಸರಿಯಾಗಿ ಶೋಧಿಸಿ ಪರೀಕ್ಷಿಸುವದಕ್ಕೆ ಬಹಳಕಾಲವೂ ಸ್ಥಲವೂ ಬೇಕಾಗುವದು.'

ಈವರೆಗೆ ನಾವು ಕಾಂಚೀಗುರುಪರಂಪರೆಯ ವಿಷಯಕ್ಕೆ ಆ ಪೀಠದ ಚರಿತ್ರೆಯನ್ನು ಬರೆದಿರುವ ಎನ್. ವೆಂಕಟರಾಮನ್ನರವರಿಗೂ ಶೃಂಗೇರೀಪೀಠದ ಚರಿತ್ರೆಯನ್ನು ಬರೆದಿರುವ ಕೆ.ಆರ್.ವೆಂಕಟರಾಮನ್ನರವರಿಗೂ ಇರುವ ಮತಭೇದಗಳನ್ನು ವಿಸ್ತಾರವಾಗಿಯೇ ತಿಳಿಸಿರುತ್ತೇವೆ. ಕಾಂಚೀಪೀಠದ ಗುರುಪರಂಪರೆಯಲ್ಲಿರುವ ಕೊರತೆಗಳನ್ನು ತೋರಿಸಿರುವವರಲ್ಲಿ ಕೆ.ಆರ್. ವೆಂಕಟರಾಮನ್ನರವರೇ ಹೆಚ್ಚಿನ ಐತಿಹಾಸಿಕಚಿಕಿತ್ಸಾದೃಷ್ಟಿಯನ್ನುಪಯೋಗಿಸಿರುತ್ತಾರೆಂದು ನಮ್ಮ ನಂಬಿಕೆ. ಕೆ.ಎಸ್. ಸುಂದರರಾಮಯ್ಯನವರಶ್ರೀಶೃಂಗೇರೀಶಾರದಾಪೀಠ(Sri Sringeri Sharada Mutt) ಕೆ. ಕೃಷ್ಣಸ್ವಾಮಿ ಅಯ್ಯರ್‌ರವರ 'ಕುಂಭಕೋಣಮಠದ ದುರಭಿಮಾನಗಳು' (The Kumbhakonam Mutt Claims)– ಮುಂತಾದ ಗ್ರಂಥಗಳಲ್ಲಿ ಕಾಂಚೀಪೀಠದಲ್ಲಿ ದೋಷವನ್ನು ತೆಗೆದು ತೋರಿಸುವದ

1. ಟ್ರಾವಂಕೂರು ಸಂಸ್ಥಾನದ ಪ್ರಾಕ್ತನತತ್ತ್ವವಿಮರ್ಶನಶಾಖೆಯ ಸೂಪರಿಂಟೆಂಡೆಂಟರಾಗಿದ್ದ ಗೋಪಿನಾಥರಾಯರು ಬರೆದಿರುವ (Copper Plate Inscriptions (Mardas 1916) ಎಂಬ ಇಂಗ್ಲಿಷು ಸಂಸ್ಕೃತಪುಸ್ತಕವು ನಮ್ಮಲ್ಲಿದೆ. ಅದರ ವಿಚಾರವೇನೂ ಅಷ್ಟು ಲಾಭದಾಯಕವಾಗಿಲ್ಲವೆಂದು ಬಿಟ್ಟಿದೆ.

ರಲ್ಲಿಯೇ ಹೆಚ್ಚಿನ ಅಭಿನಿವೇಶವು ಕಾಣಬರುತ್ತಿದೆ. ಶೃಂಗೇರಿಗುರುಪರಂಪರೆಗಳಲ್ಲಿರುವ ಹೆಚ್ಚುಕಡಿಮೆಗಳನ್ನೂ ಎನ್. ವೆಂಕಟರಾಮನ್‌ರವರ ಅಭಿಪ್ರಾಯಗಳನ್ನೂ ನಾವು ಈವರೆಗೆ ತಿಳಿಸಿಯೇಇರುತ್ತೇವೆ. ಕಾಂಚೀ ಶೃಂಗೇರೀಪೀಠಗಳ ವಿಷಯಕ್ಕಿರುವ ಪರಸ್ಪರಘರ್ಷಣೆಯು ನಮಗೆ ಪ್ರಕೃತವಿಷಯದಲ್ಲಿ ಯಾವ ತೀರ್ಮಾನವನ್ನೂ ಕೊಡುವಂತಿಲ್ಲ. ಇದು ಬಹಳ ದೀರ್ಘಕಾಲದಿಂದಲೂ ಆಗುತ್ತಲೇ ಇದೆ. ಪ್ರಜೋತ್ಪತ್ತಿ (1871–72)ನೆಯ ಪಂಚಾಂಗದಲ್ಲಿ ಸುಬ್ರಹ್ಮಣ್ಯಸಿದ್ಧಾಂತಿಗಳೆಂಬವರು ಪ್ರಚುರಪಡಿಸಿದ ಪಂಚಾಂಗದ ಪೀಠಿಕೆಯಲ್ಲಿ– 'ಕೂಡಲೀ ಕುಪ್ಪುಕೋಣಾದಿಮಠಾಧಿಪತಯಶ್ಚ ಯೇ | ಶೃಙ್ಗೇರೀಗುರುಶಿಷ್ಯಾ ಇತ್ಯಾದ್ರಿಯನ್ತೇಶ್ವಚಿಜ್ಜನೈಃ ||' ಎಂಬ ಶ್ಲೋಕವೊಂದು ಕಾಣಿಸಿಕೊಂಡಿತ್ತು. ಮಠಾಮ್ನಾಯ ಸೇತುವಿನಲ್ಲಿ ಕುಂಭಕೋಣದ(ಕಾಂಚೀಕಾಮಕೋಟಿ)ಪೀಠಕ್ಕೆ ಶಿಷ್ಯರಾದವರ ಮಠಗಳೇ ಮಿಕ್ಕವು ಎಂದು ಬರೆದಿರುವದನ್ನು ಆಗಲೆ ತಿಳಿಸಿದ್ದಾಗಿದೆ. ಅದಕ್ಕೆ ಇದು ಪ್ರತೀಕಾರವಾಗಿದ್ದರೂ ಇರಬಹುದು. ಮಾರನೆಯ ಅಂಗಿರಸಸಂವತ್ಸರದ ಚೈತ್ರಬಹುಳಚತುರ್ಥಿಯ ದಿದ (೭7–4–1872)[1] ಕಾಂಚೀಶೃಂಗೇರೀಪೀಠಗಳ ಅನುಯಾಯಿಗಳಾದ ಲೌಕಿಕವೈದಿಕಗೃಹಸ್ಥರು ವೇದಾಂತರಾಮಾನುಜ ಜೀಯರ್ ಎಂಬ ತಿರುವೆಲ್ಲೂರಿನ ಶ್ರೀವೈಷ್ಣವಸ್ವಾಮಿಗಳ ಅಗ್ರಾಸನಾಧಿಪತ್ಯದಲ್ಲಿ ಒಂದು ಸಭೆ ಸೇರಿದರು. ಈ ಶ್ಲೋಕಕ್ಕೆ ಯಾವ ಆಧಾರವೂ ಇಲ್ಲವೆಂದು ಸಭೆಯು ನಿರ್ಣಯಿಸಿತು.[2] ಜೀಯರ್‌ರವರ ನಿರ್ಣಯಗ್ರಂಥವನ್ನು ನೋಡಿದ್ದರಲ್ಲಿ ಅವರು ಕುಂಭಕೋಣಮಠದವರೇ ಶ್ರೀಶಂಕರಾಚಾರ್ಯರ ಗುರುಪರಂಪರೆಯವರೆಂಬುದಾಗಿದೆ. ಅಧ್ಯಕ್ಷರಿಗೆ ಮುಖ್ಯವಾಗಿ ಮಣಿಮಂಜರೀಭೇದಿನೀ ಎಂಬ ಕಾವ್ಯದ ೩ನೆಯ ಸರ್ಗದಲ್ಲಿರುವ 'ಸ ದ್ವಾದಶಾಬ್ದಂ ಗುರುರತ್ರ ಪೀಠೇ | ಸ್ಥಿತ್ವಾನವದ್ಯಾಮುಪದಿಶ್ಯ ವಿದ್ಯಾಮ್ ॥ ಶ್ರೀಪದ್ಮಪಾದಂ ಚ ನಿಧಾಯ ತತ್ರ ಜಗಾಮ ಕಾಂಚೀಪುರಮನ್ಯಶಿಷ್ಯೈಃ||' ಮಣಿ.ಭೇ. ೩–೬೩ (ಆಚಾರ್ಯರು ಹನ್ನೆರಡು ವರ್ಷಗಳಾದ ಮೇಲೆ ಪದ್ಮಪಾದರನ್ನು ನಿಲ್ಲಿಸಿ ಕಾಂಚೀನಗರಕ್ಕೆ ಹೋದರು). "ತತ್ರೈಕಂ ಕಿಲ ನಿತ್ಯಬೋಧಸುಘನಾಚಾರ್ಯಾಖ್ಯಮೇತನ್ಮಠೇ[3] ? ಪೀಠಾಧ್ಯಕ್ಷಮಥಾರಚಯ್ಯ ಸ. ಯಯೌ ತೂರ್ಣಂ ಗುರೋಃ ಸಂನಿಧಿಮ್ || (ಸುರೇಶ್ವರಾಚಾರ್ಯರು ನಿತ್ಯಬೋಧಘನಾಚಾರ್ಯರನ್ನು ಪೀಠದಲ್ಲಿಟ್ಟು ಗುರುಗಳ ಹತ್ತಿರಕ್ಕೆ ಹೋದರು) ಎಂಬ (ಮಣಿ. ಭೇ. ೪–೩೦) ಶ್ಲೋಕವೂ ಪ್ರಮಾಣಗಳು !

---

1. 'ಶ್ರೀಶಾಂಕರಪೀಠತತ್ತ್ವದರ್ಶನಮ್' (Appendix I p. 15–16).

2. ಮೇಲಿನ ತೀರ್ಮಾನವನ್ನು ಖಂಡನೆಮಾಡಿ ಭಟ್ಟ ಶ್ರೀ॥ ನಾರಾಯಣಶಾಸ್ತ್ರಿ, ಕೊಕ್ಕಂಡ ವೆಂಕಟರತ್ನಂ ಪಂತಲು ಮೊದಲಾದವರು ಕೆಲವು ಪ್ರಕಟನೆಗಳನ್ನು ಹೊರಡಿಸಿದ್ದಾಗಿ ತಿಳಿದುಬಂದಿದೆ. ನಿರ್ಣಯಕ್ಕೂ ಖಂಡನೆಗೂ ಅಷ್ಟೇ ಬೆಲೆ.

3. ನಮ್ಮಲ್ಲಿರುವ ಜೀಯರ ತೆಲುಗು ಸಿದ್ಧಾಂತಪತ್ರಿಕೆಯ ಹಾಳೆಯಲ್ಲಿ ಹರಿದಿದೆ.

"ಮಣಿಮಂಜರೀಭೇದಿನಿ''ಯಂಥ ಕಾವ್ಯವೊಂದರಮೇಲೆ ತೀರ್ಪನ್ನು ಕೊಡುವ ಮತಾಂತರದ ಗುರುಗಳ ನಿರ್ಣಯವನ್ನು ಬಯಸಿದ ವಿದ್ವಾಂಸರುಗಳ ವಿಷಯಕ್ಕೆ ಏನೂ ಬರೆಯಬೇಕಾದದ್ದೇ ಇಲ್ಲ. ಆ ಆಗ್ರಾಸನಾಧಿಪತಿಗಳೂ 'ನನಗೆ ಎಲ್ಲಾ ಪ್ರಮಾಣಗಳನ್ನೂ ತೋರಿಸಿಲ್ಲ ; ಇದ್ದಷ್ಟು ಆಧಾರದಮೇಲೆ ತೀರ್ಪಿತ್ತಿದ್ದೇನೆ' ಎಂದಿದಾರೆಂದು ಶೃಂಗೇರಿಪಕ್ಷಪಾತಿಗಳು ಹೇಳುತ್ತಿದಾರೆ ! ಇದು ಹೇಗಾದರೂ ಇರಲಿ. (೧) ಕಾಂಚೀಶೃಂಗೇರೀಪೀಠಗಳು ಮಿಕ್ಕಮಠಗಳ ಮೇಲಿನ ಆಧಿಪತ್ಯಕ್ಕೆ ಸ್ಪೈಪೋಟಿಯಿಂದ ವರ್ತಿಸಿಕೊಂಡು ಬಂದಿವೆಯೆಂದೂ. ಶಂಕರಾಚಾರ್ಯರು ಕೊನೆಗೆ ಕಾಂಚಿಯಲ್ಲಿಯೇ ಸಮಾಧಿಸ್ಥರಾದರೆಂದು ತೋರಿಸುವದಕ್ಕೆ ಬಹಳ ಹಿಂದಿನಿಂದಲೂ ಪ್ರಯತ್ನಗಳು ನಡೆಯುತ್ತಲೇಬಂದಿವೆಯೆಂದೂ ಈ ಮೇಲಿನ ಕಚ್ಚಾಟದ ವೃತ್ತಾಂತದಿಂದ ತಿಳಿಯಬರುತ್ತದೆ. "ಶ್ರೀಶಾಂಕರಪೀಠತತ್ತ್ವದರ್ಶನ" (ಶಾ. ತ. ದ. ಪು. 8)ದಲ್ಲಿ ಡಾಕ್ಟರ್ ಹಲ್ಟ್ಸ್ ಎಂಬಾತನು (Dr. Hultzsch) ಮದರಾಸ್ ಸರ್ಕಾರದ ಪ್ರಾಚ್ಯಲಿಖಿತ ಪುಸ್ತಕ ಕೋಶಾಗಾರ ಪಟ್ಟಿಯಲ್ಲಿ (Madars Govt. Oriental Manuscripts Library Cat. No. III Pages. 135-134) ಕೊಟ್ಟಿರುವ ಒಂದು ಗುರುಪರಂಪರೆಯ ಪಟ್ಟಿ ಹೀಗಿದೆ :

### ಭಾರತೀಗುರುಪರಂಪರಾಸ್ತೋತ್ರಮ್

ಆದೌ ಶಿವಸ್ತತೋ ವಿಷ್ಣುಸ್ತತೋ ಬ್ರಹ್ಮಾ ತತಃ ಪರಮ್ |
ವಸಿಷ್ಠಶ್ಚ ತತಃ ಶಕ್ತಿಃ ತತಸ್ತಸ್ಯ ಪರಾಶರಃ || ೧ ||
ತತೋ ವ್ಯಾಸಃ ಶುಕಃ ಪಶ್ಚಾತ್ ಗೌಡಪಾದಾಭಿದಸ್ತತಃ |
ಗೋವಿನ್ದಾ(ಚಾ)ರ್ಯಗುರುಸ್ತಸ್ಮಾಚ್ಛಂಕರಾಚಾರ್ಯಸಂಜ್ಞಕಃ || ೨ ||
ಪದ್ಮನಾಭ(ಪಾದಾಃ) ಸುರೇಶಶ್ಚ ಹಸ್ತಾಮಲಕತೋಟಕೌ ।
ವೇದಾನ್ತಶಿಕ್ಷಾಗುರವಃ ಸಾಚಾರ್ಯಪಾತು[1](ಆಚಾರ್ಯಾಃ ಪಾನ್ತು)ಮಾಂ ಸದಾ
ಶ್ರೀಶಙ್ಕರಾಚಾರ್ಯಮತಶ್ಚ ಪದ್ಮಪಾದಂ ಚ ಹಸ್ತಾಮಲಕಂ ಚ ಶಿಷ್ಯಮ್ |
ತಂ ತೋಟಕಂ ವಾರ್ತಿಕಕಾರಮನ್ಯಾನಸ್ಮದ್ಗುರೂನ್ ಸಂತತಮಾನತೋಽಸ್ಮಿ ||
ಸಂಸ್ಥಾಪ್ಯ ಸ್ವಮಠಂ ಕೃತ್ವಾ ತುಂಗಭದ್ರಾನದೀತಟೇ |
ತತ್ರ ಸ್ಥಿತ್ವಾ ದ್ವಾದಶಾಬ್ದಂ ಯತಿಂ ಪೃಥ್ವೀಧರಾಭಿಧಮ್ || ೩ ||
ವಿದ್ಯಾಪೀಠಾಧಿಕಂ (ಪಂ) ಕೃತ್ವಾ ಭಾರತೀಸಂಜ್ಞಯಾ ಗುರುಃ |
ಆಗಚ್ಛತ್ ಸ್ವೇಚ್ಛಯಾ ಕಾಂ(ಞ್ಚೀಂ) ಪರ್ಯಟನ್ ಪೃಥಿವೀತಲೇ || ೪ ||
ತತ್ರ ಸಂಸ್ಥಾಪ್ಯ ಕಾಮಾಕ್ಷೀಂ ಜಗಾಮ ಪರಮಂ ಪದಮ್ |
ವಿಶ್ವರೂಪಯತಿಂ ಸ್ಥಾಪ್ಯ ಸ್ವಾಶ್ರಮಸ್ಯ ಪ್ರಚಾರಣೇ || ೫ ||

---

1. ಅಚ್ಚಿನ ಪುಸ್ತಕದಲ್ಲಿ ಹೀಗೇ ಇದೆ. 'ಸಾಚಾರ್ಯಾಃ ಪಾತು ಮಾಮ್' ಎಂದಿರಬಹುದೆ ?

ಸ್ವಯಂ ಕಾಮಕೋಟಿಮಗಾತ್ಪೂರ್ಣಂ ಶ್ರೀಪೃಥ್ವೀಧರಭಾರತೀ |
ತದ್ವೃತ್ತಾನ್ತಂ ಸಮಾಕರ್ಣ್ಯ ತಪಸಃ ಸಿದ್ಧಯೇ ತದಾ ||೮||
ಶ್ರೀವಿಶ್ವರೂಪಯೋಗೀನ್ದ್ರಂ ಜಪಾತ್ವಾ ಚಿದ್ರೂಪಭಾರತೀ |
ತತೋ ಗಙ್ಗಾಧರಯತಿಃ ತತಶ್ಚಿಜ್ಜ್ಞಾನಭಾರತೀ ||
ತತೋ ಬೋಧಾಯನೋ ಮೌನೀ ತತೋ ಜ್ಞಾನೋತ್ತರೋ ಯತಿಃ |
ತಸ್ಮಾಚ್ಛಿವಾನನ್ದಯತಿಃ ತತೋ ಜ್ಞಾನೋತ್ತಮೋ ಗುರುಃ ||
ತಸ್ಮಾನ್ನೃಸಿಂಹಯತಿರಾಟ್ ತತ ಈಶ್ವರಭಾರತೀ |
ತತ ಈಶ್ವರಭಾರತ್ಯಾ ನೃಸಿಂಹಾಭಿಧಭಾರತೀ ||
ತಸ್ಮಾದ್ವಿದ್ಯಾಶಙ್ಕರಾಖ್ಯೋ ಯತಿಃ ಕೃಷ್ಣಯತಿಸ್ತಥಾ |
ತಸ್ಮಾಚ್ಛಂಕರಯೋಗೀ ಚ ಚನ್ದ್ರಶೇಖರಭಾರತೀ ।
ತತ ಅಸಿ (ಆಸೀತ್ ?) ತತೋ ಜಾತಃ ಸಚ್ಚಿದಾನಂದಭಾರತೀ ||
ತತೋ ಬ್ರಹ್ಮಾನನ್ದಯತಿಸ್ತತಶ್ಚಿದ್ರೂಪಭಾರತೀ |
ಪುರುಷೋತ್ತಮಯೋಗೀ ಚ ತತೋಽಭೂನ್ಮಧುಸೂದನಃ ||
ಗುರುಸ್ತತೋ ಜಗನ್ನಾಥೋ ವಿಶ್ವಾನಂದಯತಿಸ್ತಥಾ |
ತಸ್ಮಾಚ್ಚ ವಿಮಲಾನನ್ದೋ ಯೋ ವಿದ್ಯಾರಣ್ಯಭಾರತೀ ||
ತತೋ ಜಾತೋ ತ್ರಿಸ್ವರೂಪಯತಿರ್ಬೋಧಾಯನಸ್ತಥಾ |
ತತೋ ಜಾತೋ ತಮ (ಜ್ಞಾನೋತ್ತಮ ?) ಯತಿಸ್ತತಃ ಶಂಕರಭಾರತೀ ||

ಈ ಮೇಲೆ ಕೊಟ್ಟಿರುವದು ಕಚ್ಚುಕಚ್ಚಾಗಿರುವ ಗ್ರಂಥದ ಭಾಗವಾಗಿದೆ. ಶ್ಲೋಕಕ್ಕೆ ಸಂಖ್ಯೆಹಾಕಿರುವವರು ನಾವು. ೫ ರಿಂದ ೮ನೆಯ ಶ್ಲೋಕಗಳವರೆಗಿನ ಭಾಗವನ್ನು ಯಾರೋ ಕಾಂಚೀಪಕ್ಷಪಾತಿಗಳು ಇಲ್ಲಿ ಸೇರಿಸಿದಾರೆಂಬುದಕ್ಕೂ ಅವಕಾಶವಿದೆ. ಈ ಗುರುಪರಂಪರೆಯುನ್ನು ಯಾರು ಯಾವಾಗ ಏಕೆ ಬರೆದರೋ ನಿಶ್ಚಯಿಸಿದರೆ ಇದರ ಯೋಗ್ಯತೆ ಗೊತ್ತಾದೀತು.

ಇಲ್ಲಿಗೆ ಕಾಂಚೀಪೀಠದ ಪರಂಪರೆಯ ವಿಚಾರವು ಸಾಕು. ಇನ್ನುಮುಂದೆ ಉತ್ತರದ ಮೂರು ಮುಖ್ಯಮಠಗಳ ಸುದ್ದಿಯನ್ನು ಬರೆದು ಆಮೇಲೆ ಉಪಮಠಗಳ ವಿಚಾರಕ್ಕೆ ತೆರಳುವೆವು. ಶೃಂಗೇರಿಯ ಅಥವಾ ಕಾಂಚಿಯ ಪೀಠಾಧಿಪರುಗಳ ಕಾಲದ ಶಕ, ಸಂವತ್ಸರ, ಮಾಸ, ತಿಥಿ–ಮುಂತಾದ ವಿವರಗಳನ್ನು ನಮಗೆ ಲಭಿಸಿದಷ್ಟನ್ನೂ ಇಲ್ಲಿ ಕೊಟ್ಟಿರುವದಿಲ್ಲ. ಏಕೆಂದರೆ ಈಗಿನ ವಾದಗ್ರಸ್ತಸ್ಥಿತಿಯಲ್ಲಿ ಅವೆಲ್ಲ ಕಲ್ಪನಾರಾಜ್ಯಕ್ಕೇ ಸೇರಿದವುಗಳೆನ್ನಬೇಕಾಗಿದೆ. ಮುಂದಿನ ಮಠಗಳ ವಿಷಯದಲ್ಲಿಯೂ ಹೀಗೆಯೇ ತಿಳಿಯಬೇಕು.

---

## (೩) ದ್ವಾರಕಾಪೀಠಗುರುಪರಂಪರೆ

ಈ ಪೀಠದ ವಿಷಯವಾಗಿ ನಮಗೆ ತಿಳಿದಿರುವದು ಅತ್ಯಲ್ಪ. ಅಲ್ಲಿನ ಪೀಠಾಧಿಪತ್ಯಕ್ಕೆ ಅಧಿಕಾರಿಗಳು ಯಾರೆಂಬ ಬಗ್ಗೆ ವಿವಾದವುಂಟಾಗಿ ಕೊನೆಗೆ ಈಗಿರುವ ಶ್ರೀಮದಭಿನವಸಚ್ಚಿದಾನಂದತೀರ್ಥಸ್ವಾಮಿಗಳೇ ಅಧಿಕಾರಿಗಳೆಂದು ಸರಕಾರದವರಿಂದ ತೀರ್ಮಾನವಾದಂತೆ ಅವರೇ ಪೀಠಾದಿಷ್ಠಿತರಾಗಿ ಶಿಷ್ಯರುಗಳಿಗೆ ಧರ್ಮಜ್ಞಾನೋಪದೇಶವನ್ನು ಮಾಡುತ್ತಾ ಇರುತ್ತಾರೆ. ಕ್ರಿ. ಶ. 1957ರಲ್ಲಿ ಪೀಠದಿಂದ ಪ್ರಕಾಶಿತವಾಗಿರುವ ಗುರುಪರಂಪರೆಯ ಪಟ್ಟಿಯನ್ನೂ ಬಲದೇವ ಉಪಾಧ್ಯಾಯರ ಮತ್ತು ಬೋಡಸ್‌ರವರ ಪಟ್ಟಿಯಲ್ಲಿನ ವ್ಯತ್ಯಾಸಗಳನ್ನೂ ಈ ಕೆಳಗೆ ಕೊಟ್ಟಿದೆ :

| | | | |
|---|---|---|---|
| | | | ಬಲ, ಉಪಾಧ್ಯಾಯ |
| ೧. | ಸುರೇಶ್ವರಾಚಾರ್ಯರು (ಯುಧಿ. ಶ) | ೨೬೯೨ | ೨೬೯೧ |
| ೨. | ಚಿತ್ಸುಖಾಚಾರ್ಯರು | ೨೭೧೫ | |
| ೩. | ಸರ್ವಜ್ಞಾನಾಚಾರ್ಯ | ೨೭೭೪ | |
| ೪. | ಬ್ರಹ್ಮಾನಂದತೀರ್ಥ | ೨೮೩೩ | ೭೮೨೩ |
| ೫. | ಸ್ವರೂಪಾಭಿಜ್ಞಾ(ನಾ)ಚಾರ್ಯ | ೨೮೯೦ | |
| ೬. | ಮಂಗಲಮೂರ್ತ್ಯಾಚಾರ್ಯ | ೨೯೪೨ | |
| ೭. | ಭಾಸ್ಕರಾಚಾರ್ಯ | ೨೯೯೫ | |
| ೮. | ಪ್ರಜ್ಞಾನಾಚಾರ್ಯ | ೩೦೦೮ | |
| ೯. | ಬ್ರಹ್ಮಜ್ಯೋತ್ಸ್ನಾಚಾರ್ಯ | ೩೦೪೦ | |
| ೧೦. | ಆನಂದಾವಿರ್ಭಾವಾಚಾರ್ಯ | ವಿಕ್ರಮ ೦ | |

### ಮಹಾದೇವ ರಾಜಾರಾಮ ಬೋಡಸ್

| | | |
|---|---|---|
| | ಶ್ರೀಶಂಕರಾಚಾರ್ಯ ಜನ್ಮ | ೨೬೩೧ |
| | ಸಂನ್ಯಾಸ | ೨೬೩೯ |
| | ನಿರ್ಯಾಣ | ೨೬೬೩ |
| ೧. | ಬ್ರಹ್ಮಸ್ವರೂಪಾಚಾರ್ಯ | ಕ್ರಿ. ಪೂ. ೪೪೦ |
| ೨. | ಚಿತ್ಸುಖ | ೪೧೬ |
| ೩. | ಬ್ರಹ್ಮಾನಂದತೀರ್ಥ | ೩೫೭ |
| ೫. | ಸ್ವರೂಪಾಭಿಜ್ಞಾನ | ೨೪೫ |
| ೬. | ಮಂಗಲಮೂರ್ತಿ | ೧೯೩ |
| ೭. | ಭಾಸ್ಕರ | ೧೪೦ |
| ೮, | ಪ್ರಜ್ಞಾನ | ೧೨೭ |

| | | ಬಲ, ಉಪಾಧ್ಯಾಯ | ಬೋಡಸ್ |
|---|---|---|---|
| ೯. ಬ್ರಹ್ಮಜ್ಯೋತ್ಸ್ನ | | ೯೫ | |
| ೧೦. ಆನಂದಾವಿರ್ಭಾವ | | ಸಂವತ್ ೨೫ | |

ಇಲ್ಲಿಂದ ಮುಂದಕ್ಕೆ ಇರುವ ವ್ಯತ್ಯಾಸಗಳನ್ನು ಪಕ್ಕದಲ್ಲಿ ತೋರಿಸಿದೆ.

| | | | |
|---|---|---|---|
| ೧೧. ಕಲಾನಿಧಿತೀರ್ಥ ವಿಕ್ರಮ | ೮೨ | | ೮೨ |
| ೧೨. ಚಿದ್ವಿಲಾಸಾಚಾರ್ಯ | ೧೧೯ | | |
| ೧೩. ವಿಭೂತ್ಯಾನನ್ದಾಚಾರ್ಯ | ೧೫೪ | | |
| ೧೪. ಸ್ಫೂರ್ತಿನಿಲಯ (ಪಾದ) | ೨೦೩ | | |
| ೧೫. ವರತಂತುಪಾದ | ೨೪೯ | ೨೫೯ | |
| ೧೬. ಯೋಗಾರೂಢಾಚಾರ್ಯ | ೨೬೦ | ೩೬೦ | ೦೫೦ |
| ೧೭. ವಿಜಯಡಿಂಡಿಮಾಚಾರ್ಯ | ೩೪೯ | | |
| ೧೮. ವಿದ್ಯಾತೀರ್ಥ | ೪೩೭ | | |
| ೧೯. ಚಿಚ್ಛಕ್ತಿದೇಶಿಕ | ೪೮೩ | ೪೩೮ | |
| ೨೦. ವಿಜ್ಞಾನೇಶ್ವರತೀರ್ಥ | ೫೧೧ | | |
| ೨೧. ಋತಂಭರಾಚಾರ್ಯ | ೫೭೨ | | |
| ೨೨. ಅಮರೇಶ್ವರಗುರು | ೬೦೮ | | |
| ೨೩. ಸರ್ವತೋಮುಖತೀರ್ಥ | ೬೬೯ | | |
| ೨೪. ಆನಂದದೇಶಿಕ | ೭೨೧ | | ಸ್ವಾನಂದದೇಶಿಕ |
| ೨೫. ಸಮಾಧಿರಸಿಕಾಚಾರ್ಯ | ೭೯೯ | | |
| ೨೬. ನಾರಾಯಣಾಶ್ರಮ | ೮೩೬ | | |
| ೨೭. ವೈಕುಣ್ಠಾಶ್ರಮ | ೮೮೫ | | |
| ೨೮. ವಿಕ್ರಮಾಶ್ರಮ | ೯೧೧ | | ತ್ರಿವಿಕ್ರಮಾಶ್ರಮ |
| ೨೯. ನರಸಿಂಹಾಶ್ರಮ | ೯೬೦ | | |
| ೩೦. ತ್ರ್ಯಂಬಕಾಶ್ರಮ | ೯೬೫ | | |
| ೩೧. ವೈಷ್ಣವಾಶ್ರಮ | ೧೦೦೧ | | ವಿಶ್ರಮಾಶ್ರಮ |
| ೩೨. ಕೇಶವಾಶ್ರಮ | ೧೦೬೦ | ೧೦೦೬ | |
| ೩೩. ಚಿದಂಬರಾಶ್ರಮ | ೧೦೮೩ | | |
| ೩೪. ಪದ್ಮನಾಭಾಶ್ರಮ | ೧೧೧೯ | | |
| ೩೫. ಮಹಾದೇವಾಶ್ರಮ | ೧೧೮೪ | | |
| ೩೬. ಸಚ್ಚಿದಾನಂದಾಶ್ರಮ | ೧೨೦೭ | | |
| ೩೭. ವಿದ್ಯಾಶಂಕರಾಶ್ರಮ | ೧೨೬೫ | | |
| ೩೮. ಅಭಿನವಸಚ್ಚಿದಾನಂದಾಶ್ರಮ | ೧೨೯೩ | | |

| | | ಬಲ. | ಉಪಾಧ್ಯಾಯ | ಬೋಡಸ್ |
|---|---|---|---|---|
| ೩೯. | ಶಶಿಶೇಖರಾಶ್ರಮ | ೧೨೨೬ | ೧೩೨೬ | ೧೩೨೬ |
| ೪೦. | ವಾಸುದೇವಾಶ್ರಮ | ೧೩೫೧ | ೧೩೬೨ | ೧೩೬೧ |
| ೪೧. | ಪುರುಷೋತ್ತಮಾಶ್ರಮ | ೧೩೯೪ | | |
| ೪೨. | ಜನಾರ್ದನಾಶ್ರಮ | ೧೪೦೮ | | |
| ೪೩. | ಹರಿಹರಾಶ್ರಮ | ೧೪೧೧ | | |
| ೪೪. | ಭವಾಶ್ರಮ | ೧೪೨೧ | | |
| ೪೫. | ಬ್ರಹ್ಮಾಶ್ರಮ | ೧೪೩೬ | | |
| ೪೬. | ವಾಮನಾಶ್ರಮ | ೧೪೫೩ | | |
| ೪೭. | ಸರ್ವಜ್ಞಾಶ್ರಮ | ೧೪೮೯ | | |
| ೪೮. | ಪ್ರದ್ಯುಮ್ನಾಶ್ರಮ | ೧೪೯೫ | | |
| ೪೯. | ಗೋವಿಂದಾಶ್ರಮ | ೧೫೨೩ | | |
| ೫೦. | ಚಿದಾಶ್ರಮ | ೧೫೭೬ | | |
| ೫೧. | ವಿಶ್ವೇಶ್ವರಾಶ್ರಮ | ೧೬೦೮ | | |
| ೫೨. | ದಾಮೋದರಾಶ್ರಮ | ೧೬೧೫ | | |
| ೫೩. | ಮಹಾದೇವಾಶ್ರಮ | ೧೬೧೬ | | |
| ೫೪. | ಅನಿರುದ್ಧಾಶ್ರಮ | ೧೬೨೫ | | |
| ೫೫. | ಅಚ್ಯುತಾಶ್ರಮ | ೧೬೨೯ | | |
| ೫೬. | ಮಾಧವಾಶ್ರಮ | ೧೬೬೫ | | ೧೬೮೫ |
| ೫೭. | ಅನಂತಾಶ್ರಮ | ೧೭೧೬ | | |
| ೫೮. | ವಿಶ್ವರೂಪಾಶ್ರಮ | ೧೭೨೧ | | |
| ೫೯. | ಚಿದ್ಘನಾಶ್ರಮ | ೧೭೨೬ | | |
| ೬೦. | ನೃಸಿಂಹಾಶ್ರಮ | ೧೭೩೫ | | |
| ೬೧. | ಮನೋಹರಾಶ್ರಮ | ೧೭೬೧ | | |
| ೬೨. | ಪ್ರಕಾಶಾನಂದಸರಸ್ವತೀ | ೧೭೯೫ | | |
| ೬೩. | ವಿಶುದ್ಧಾಶ್ರಮ | ೧೬೯೯ | | ವಿಶುದ್ಧಾನಂದಾಶ್ರಮ |
| ೬೪. | ವಾಮನೇಂದ್ರ | ೧೮೩೧ | | ವಾಮನೇಶ |
| ೬೫. | ಕೇಶವಾಶ್ರಮ | ೧೮೨೮ | | |
| ೬೬. | ಮಧುಸೂದನಾಶ್ರಮ | ೧೮೪೯ | | |
| ೬೭. | ಹಯಗ್ರೀವಾಶ್ರಮ | ೧೮೬೨ | | |
| ೬೮. | ಪ್ರಕಾಶಾಶ್ರಮ | ೧೮೬೩ | | |
| ೬೯. | ಹಯಗ್ರೀವಾನಂದಸರಸ್ವತೀ | ೧೮೭೪ | | |

| | ಬಲ. ಉಪಾಧ್ಯಾಯ | ಬೋಡಸ್ |
|---|---|---|
| ೨೦. ಶ್ರೀಧರಾಶ್ರಮ | ೧೯೧೪ | |
| ೨೧. ದಾಮೋದರಾಶ್ರಮ | ೧೯೨೮ | |
| ೨೨. ಕೇಶವಾಶ್ರಮ | ೧೯೩೫ | |
| ೨೩. ರಾಜರಾಜೇಶ್ವರ (ಶಂಕರಾಶ್ರಮ) | ೧೯೫೬ | ೧೯೫೭ |
| ೨೪. ಮಾಧವತೀರ್ಥ | ೧೯೭೩ | ೧೯೭೦ |
| ೨೫. ಶಾಂತ್ಯಾನಂದಸರಸ್ವತೀ* | ೧೯೮೧ | ೧೯೭೬ |
| ೨೬. ಚಂದ್ರಶೇಖರಾಶ್ರಮ | ೨೦೦೦ | |
| ೨೭. ಶ್ರೀಮದಭಿನವಸಚ್ಚಿದಾನಂದತೀರ್ಥಸ್ವಾಮಿಗಳು ಈಗ ಇರುವವರು. | | |

೧. ಮೇಲೆ ಕೊಟ್ಟಿರುವ ಪಟ್ಟಿಗಳಲ್ಲಿ ಒಂದೆರಡು ಕಡೆ ಹೊರತು ಮಿಕ್ಕ ಕಡೆಗಳಲ್ಲಿ ಕಾಲಗಳೆಲ್ಲ ಮೂರು ಪಟ್ಟಿಗಳಲ್ಲಿಯೂ ಸರಿಹೋಗಿವೆ. ದ್ವಾರಕೆ ಮತ್ತು ಕಾಂಚಿ ಇವೆರಡು ಪಟ್ಟಿಗಳಲ್ಲಿಯೂ ಶಂಕರಾಚಾರ್ಯರಿಗೆ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಕಾಲವನ್ನು ಎಂದರೆ ಕ್ರಿ.ಪೂ. ೫ನೆಯ ಶತಮಾನವನ್ನು ಕೊಟ್ಟಿರುತ್ತದೆ; ಇವೆರಡರಲ್ಲಿಯೂ ಮೊದಮೊದಲಿನ ಗುರುಗಳಿಗೆ ಹೆಚ್ಚಿನ ಕಾಲಾವಧಿಯನ್ನೂ ಇತ್ತೀಚಿನ ಗುರುಗಳಿಗೆ ಒಪ್ಪುವ ಕಾಲವನ್ನೂ ಬರೆದಿರುತ್ತದೆ. ಎರಡು ಮಠಗಳಲ್ಲಿಯೂ ಒಂದೇ ಕಾಲಾವಧಿಗೆ ಅಷ್ಟೇ ಸಂಖ್ಯೆಯ ಪೀಠಾಧ್ಯಕ್ಷರನ್ನು ಕೊಟ್ಟಿರುತ್ತದೆ ಎಂಬುದು ಕಾಂಚೀಮಠದ ಪಟ್ಟಿಗೆ ಪುಷ್ಟಿಯನ್ನು ಕೊಡುತ್ತದೆ ಎಂದು ಎನ್. ವೆಂಕಟರಾಮನ್ನರು (NVSK p. 13–14) ಬರೆದಿರುತ್ತಾರೆ. ಆದರೆ ಕಾಂಚೀಕಾಲಾವಧಿಯ ವಿಷಯಕ್ಕೇ ವಿವಾದವಿರುವದರಿಂದ ಈ ಹೇಳಿಕೆಯಿಂದ ನಮಗೆ ಹೆಚ್ಚಿನ ವಿಷಯವೇನೂ ಸಿಕ್ಕಿದಂತೆ ಆಗಿಲ್ಲ.

೨. ಎನ್. ವೆಂಕಟರಾಮನ್, ಬಲದೇವ ಉಪಾಧ್ಯಾಯ– ಇವರಿಬ್ಬರೂ ಬರೆದಿರುವಂತೆ ದ್ವಾರಕೆಯ ಪೀಠಾಧಿಪತಿಗಳ ವಿಷಯಕ್ಕೆ ಐತಿಹಾಸಿಕಘಟನೆಗಳು ಯಾವವೂ ದೊರೆತಿಲ್ಲ.

೩. ಈ ಪಟ್ಟಿಯಲ್ಲಿ ಸುರೇಶ್ವರರನ್ನು ಸೇರಿಸಿರುವದನ್ನು ಲಕ್ಷಿಸಬೇಕು. ಅವರಿಗೆ ಯುಧಿಷ್ಠಿರಶಕ ೨೬೪೯ರಲ್ಲಿ ಮಾಘ ಶುಕ್ಲ ೭ರಲ್ಲಿ ಶಾರದಾಪೀಠಕ್ಕೆ ಅಧ್ಯಕ್ಷರಾಗಿ ಅಭಿಷೇಕವಾಯಿತೆಂದು ಈ ಪುಸ್ತಿಕೆಯಲ್ಲಿದೆ. ಈ ಪೀಠಕ್ಕೆ ಹಸ್ತಾಮಲಕರು ಆಚಾರ್ಯರೆಂದು ಎರಡು ಕಡೆಗಳಲ್ಲಿ (ಬಲ. ಶಂ. ಪು. ೧೬೭, ೧೭೭) ಬರೆದಿರುವ ಬಲದೇವ ಉಪಾಧ್ಯಾಯರು ಶಾರದಾಪೀಠಕ್ಕೆ ಮೊದಲನೆಯ ಆಚಾರ್ಯರು ಸುರೇಶ್ವರಾಚಾರ್ಯರೆಂದೇ ಬರೆದುಕೊಂಡಿರುತ್ತಾರೆ (ಪು. ೧೭೭).

* ಬಲದೇವ ಉಪಾಧ್ಯಾಯರ ಮತ್ತು ಬೋಡಸ್‌ರವರ ಪಟ್ಟಿ ಇಲ್ಲಿಗೆ ನಿಂತಿದೆ.

೪. ಮಠಾಮ್ನಾಯದಲ್ಲಿ 'ಭದ್ರಕಾಲೀ'ದೇವಿ ಎಂದಿದ್ದರೂ ಈ ಪೀಠಕ್ಕೆ ಶಾರದಾಪೀಠವೆಂಬ ಹೆಸರು ಹೇಗೆ ಬಂದಿತೆಂಬುದು ವಿಚಾರಣೀಯವಾಗಿದೆ ಶಾರದಾಪ್ರತಿಷ್ಠೆಯನ್ನು ಯುಧಿಷ್ಠಿರ ಶಕೆ ೨೬೪೮ ಯಲ್ಲಿಯೇ ಮಾಡಲಾಯಿತೆಂದು (ಪು. ೪೦೪ ನೋಡಿ) ದ್ವಾರಕೆಯವರ ಸಂಪ್ರದಾಯವಿದ್ದರೂ 'ಭದ್ರಕಾಲಿ' ಎಂಬ ದೇವಿಗೇ ಪ್ರಾಶಸ್ತ್ಯವೇಕೆ? ಮಠಾಮ್ನಾಯಸೇತುವಿನಲ್ಲಿ 'ಕಾಲಿಕಾಪೀಠಶಾಸನೇ' ಎಂದಿರುವದು ದ್ವಾರಕೆಗೆ ಒಪ್ಪಾದ ಮಹಾನುಶಾಸನದಲ್ಲಿ ಮಾತ್ರ 'ಶಾರದಾಪೀಠ ಸಾತ್ಯತಾಃ' ಎಂದು ಆಗಿದೆ. ಆದರೂ ದ್ವಾರಕಾಸಂಕ್ಷಿಪ್ತ ಇತಿಹಾಸದಲ್ಲಿ 'ಭದ್ರ ಕಾಲೀ' ಎಂದಿದೆ, ಶಾರದಾದೇವಿಯ ಹೆಸರಿಲ್ಲ. ಬಲದೇವ ಉಪಾಧ್ಯಾಯರು (ಪು.೩೦೫)ರಲ್ಲಿ ಆಚಾರ್ಯರು ವಿಶ್ವರೂಪರೆಂದು ಬರೆದಿದಾರೆ. 'ದ್ವಾರಕಾಸಂಸ್ಥಾನದ ಸಂಕ್ಷಿಪ್ತ ಇತಿಹಾಸ' ಎಂಬ ಪುಸ್ತಿಕೆಯಲ್ಲಿರುವ ಮಠಾಮ್ನಾಯದಲ್ಲಿ 'ಸ್ವರೂಪ ಬ್ರಹ್ಮಚಾರ್ಯಾಖ್ಯ ಆಚಾರ್ಯಃ ಪದ್ಮಪಾದಕಃ' (ಪು.೪೮) ಎಂದೇ ಇದೆ. ಹೀಗೆಯೇ ಕಾಂಚಿಯಲ್ಲಿ ಕಾಮಾಕ್ಷಿದೇವಿಗೆ ಹೆಚ್ಚಿನ ಪ್ರಾಶಸ್ತ್ಯವಿರುವದು ಯುಕ್ತವಾದರೂ ತಮ್ಮದು ಶಾರದಾಪೀಠವೆಂದೇ ಕಾಂಚಿಯವರು ಹೇಳಿಕೊಳ್ಳುತ್ತಿದಾರೆ. ಶೃಂಗೇರಿಯಲ್ಲಿ ಶಾರದಾಪ್ರತಿಷ್ಠೆಯಾಯಿತೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಇದರ ಗುಟ್ಟೇನೆಂಬುದೂ ಶೋಧಿಸತಕ್ಕದ್ದಾಗಿದೆ.

## ದ್ವಾರಕಾಗುರುಪರಂಪರೆ (೨ನೆಯ ಪಟ್ಟಿ)

(ಸಂಕ್ಷಿಪ್ತ ಇತಿಹಾಸದ ಪುಟ ೫೨)

ಇದರಲ್ಲಿ ಈ ಆಚಾರ್ಯರ ಹೆಸರುಗಳಿವೆ :

ಶ್ರೀಶಂಕರಾಚಾರ್ಯರು. ೧. ಶ್ರೀಪದ್ಮಪಾದಾಚಾರ್ಯರು. ೨. ವಿಷ್ಣು ಸ್ವಾಮಿತೀರ್ಥರು. ೩. ಬ್ರಹ್ಮಾನಂದತೀರ್ಥರು. ೪. ಕೃಷ್ಣಾನಂದತೀರ್ಥರು. ೫. ಕೈವಲ್ಯಾನಂದತೀರ್ಥರು. ೬. ವಿಜ್ಞಾನಾನಂದತೀರ್ಥರು. ೭. ಸದಾನಂದ ತೀರ್ಥರು. ೮. ಕೃಷ್ಣಾನಂದ ಯೋಗೀಂದ್ರತೀರ್ಥರು. ೯. ಶಿವಾನಂದತೀರ್ಥರು. ೧೦. ಸದಾನಂದತೀರ್ಥರು (೨). ೧೧. ಸಚ್ಚಿದಾನಂದತೀರ್ಥರು. ೧೨. ಕೃಷ ಯೋಗೀಂದ್ರತೀರ್ಥರು ೧೩. ಸದಾಶಿವಾನಂದತೀರ್ಥರು. ೧೪. ಸಚ್ಚಿದಾನಂದ ತೀರ್ಥರು (೨). ೧೫. ಅಭಿನವಯೋಗೀಂದ್ರತೀರ್ಥರು. ೧೬. ಸದಾನಂದ ತೀರ್ಥರು (೩). ೧೭. ಕೃಷ್ಣಾನಂದತೀರ್ಥರು (೨). ೧೮. ಸಚ್ಚಿದಾನಂದ ತೀರ್ಥರು (೩). ೧೯. ಸದಾನಂದತೀರ್ಥರು (೪). ೨೦. ಕೃಷ್ಣಾನಂದತೀರ್ಥರು (೩) ೨೧. ಸಚ್ಚಿದಾನಂದತೀರ್ಥರು (೪). ೨೨. ಕೃಷ್ಣಾನಂದತೀರ್ಥರು (೪). ೨೩. ಸಚ್ಚಿದಾನಂದತೀರ್ಥರು (೫). ೨೪. ಕೈವಲ್ಯಾನಂದತೀರ್ಥರು. (೨) ೨೫. ಕೃಷ್ಣಾನಂದತೀರ್ಥರು (೫). ೨೬. ಸದಾನಂದತೀರ್ಥರು (೫) ೨೭. ಸಚ್ಚಿದಾನಂದ ತೀರ್ಥರು (೬). ೨೮. ಅಗ್ನಿಮೂರ್ಧಕೃಷ್ಣಾನಂದತೀರ್ಥರು. ೨೯. ಸಚ್ಚಿದಾ

ನಂದತೀರ್ಥರು (೭). ೩೦. ಅಭಿನವ ಕೃಷ್ಣಾನಂದತೀರ್ಥರು. ೩೧ ಅಭಿನವ ಸದಾನಂದತೀರ್ಥರು. ೩೨. ಅಭಿನವ ಕೃಷ್ಣಾನಂದತೀರ್ಥರು (೨). ೩೩. ಅಭಿನವ ಸದಾನಂದತೀರ್ಥರು (೨) ೨೪ ಅಭಿನವ ಕೃಷ್ಣಾನಂದತೀರ್ಥರು (೩) ೩೫. ಶ್ರೀಮದಭಿನವ ಸಚ್ಚಿದಾನಂದತೀರ್ಥಸ್ವಾಮಿಗಳವರು.

ಈ ಪಟ್ಟಿಯಲ್ಲಿ ಲಕ್ಷಿಸತಕ್ಕ ವಿಷಯಗಳೇನೆಂದರೆ :

(೧) ಮೇಲೆ ನಾವು ಕೊಟ್ಟಿರುವ ಪಟ್ಟಿಗೂ ಈ ಪಟ್ಟಿಗೂ ಆಚಾರ್ಯರ ಸಂಖ್ಯೆ ಅಥವಾ ಹೆಸರುಗಳಲ್ಲಿ ಹೊಂದಿಕೆಯೇ ಇಲ್ಲ. ೨. ಈ ಪಟ್ಟಿಯಲ್ಲಿ 'ತೀರ್ಥ' ಎಂಬ ಯೋಗಪಟ್ಟಕ್ಕೆ ಪ್ರಾಚುರ್ಯವಿದೆ, ಪದ್ಮಪಾದಾಚಾರ್ಯರನು ಸುರೇಶ್ವರರ ಸ್ಥಾನದಲ್ಲಿಟ್ಟಿದೆ.

ದ್ವಾರಕಾಮಠದ ವಿಷಯಕ್ಕೆ ನಮಗೆ ಯಾವ ಐತಿಹಾಸಿಕವಿಷಯಗಳೂ ತಿಳಿದಿಲ್ಲ. ಆದರೆ ಈಗಿನ ಪೀಠಾಧಿಪತಿಗಳಾಗಿರುವ ಶ್ರೀಮದಭಿನವಸಚ್ಚಿದಾನಂದ ತೀರ್ಥಸ್ವಾಮಿಗಳವರಿಗಿಂತ ಹಿಂದೆ ಮೈಸೂರು ಪ್ರಾಂತದಲ್ಲಿದ್ದ ಕೆಲವರು ಗುರುಗಳ ಚರಿತ್ರೆಯ ಘಟನೆಗಳನ್ನು 'ಶ್ರೀದ್ವಾರಕಾಜಗದ್ಗುರು ಸಂಸ್ಥಾನದ ಸಂಕ್ಷಿಪ್ತ ಇತಿಹಾಸ' ಎಂಬ ಪುಸ್ತಿಕೆಯಿಂದ ಸಂಗ್ರಹಿಸಿದೆ.

೧. 'ಪವಿತ್ರದ್ವಾರಕಾಪೀಠದಲ್ಲಿ ಶ್ರೀಮತ್ಪದ್ಮಪಾದಾಚಾರ್ಯರಿಂದಾರಂಭಿಸಿ ಕ್ರಮವಾಗಿ ಶಿಷ್ಯಪರಂಪರೆಯು ನಡೆದುಬರುತ್ತಿರಲು ಶಾಲಿವಾಹನಶಕ ೧೪೦೦ ವರ್ಷಗಳ ಸುಮಾರಿನಲ್ಲಿ ಯವನರ ಉಪಟಳವು ಬಲುಹೆಚ್ಚಿ ಇನ್ನಲ್ಲಿ ವಾಸಿಸಲು ಸಾಧ್ಯವಿಲ್ಲವೆಂಬಷ್ಟು ಬಹಳ ತೊಂದರೆಯಾದಾಗ ಆಗಿನ ಗುರುಗಳಾದ ಶ್ರೀಕೃಷ್ಣಾನಂದತೀರ್ಥಸ್ವಾಮಿಗಳವರು ದ್ವಾರಕೆಯನ್ನು ಬಿಟ್ಟು ಇತ್ತ ದಕ್ಷಿಣದೇಶಕ್ಕೆ ಬಂದು ವಿಜಯನಗರದರಸರಿಂದ ಸನ್ಮಾನಿತರಾದರಲ್ಲದೆ ಅರಸರ ಆದರ ಸತ್ಕಾರಗಳಿಂದ ಸಂತುಷ್ಟರಾಗಿ ಮುಳುಬಾಗಿಲಿನಲ್ಲಿ ಮಠವನ್ನು ಸ್ಥಾಪಿಸಿಕೊಂಡು ಅಲ್ಲಿಯೇ ತಪಸ್ಸಾಮ್ರಾಜ್ಯನಿರತರಾಗಿ ನಿಂತರು. ಶ್ರೀಕೃಷ್ಣಾನಂದ ಸ್ವಾಮಿಗಳವರಿಂದ ಪ್ರತಿಷ್ಠಿತವಾದ್ದರಿಂದ ಆ ಮಠಕ್ಕೆ ಶ್ರೀಕೃಷ್ಣಾನಂದಮಠವೆಂದು ಪ್ರಸಿದ್ಧಿಯುಂಟಾಯಿತು.' (ಇತಿ. ೮-೯).

[ಟಿಪ್ಪಣಿಯಲ್ಲಿ ,ಶಕೆ ೧೪೬೯ನೆಯ ಪರಾಭವಸಂವತ್ಸರದ ಮಾಘ ಬಹುಳ ಪಂಚಮಿ (ಕ್ರಿಸ್ತಾಬ್ದ 1547)ರಲ್ಲಿ ಮುಳುಬಾಗಿಲು ತಾಲೋಕಿನೊಳಗಿನ ಪಾಯಸಂಕಿಳ್ಳಿಗ್ರಾಮ ಮುಂತಾದ ಏಳೂವರೆಗ್ರಾಮಗಳನ್ನು ಶ್ರೀಕೃಷ್ಣಾನಂದಸ್ವಾಮಿಗಳವರ ಮಠಕ್ಕೆ ಶಿಷ್ಯ ಪ್ರಶಿಷ್ಯಪಾರಂಪರ್ಯವಾಗಿ ಅನ್ನಛತ್ರದೀಪಾರಾಧನೆ ಸಕಲಧರ್ಮದ ಬಗ್ಗೆ ಸಹಿರಣ್ಯೋದಕದಾನವಾಗಿ ಕೊಟ್ಟಿರುವಂತೆ ಶಾಸನವಿದೆ'-ಎಂತ ಬರೆದಿದೆ, ಕೋಲಾರ ಜಿಲ್ಲೆಯ ಮುಳುಬಾಗಿಲು ತಾಲ್ಲೋಕಿನಲ್ಲಿ ಶ್ರೀಕೃಷ್ಣಾನಂದಮಠದ ಹತ್ತಿರವಿರುವ ವಿಠ್ಠಲಸ್ವಾಮಿ ದೇವಸ್ಥಾನದ ಮುಂದೆ ಈ ಶಾಸನವಿದೆಯಂತೆ.]

೨. ಇವರ ಬಳಿಕ ಸದಾನಂದತೀರ್ಥಸ್ವಾಮಿಗಳು, ಬಳಿಕ ಸಚ್ಚಿದಾನಂದ ತೀರ್ಥಸ್ವಾಮಿಗಳು ಪೀಠಕ್ಕೆ ಬಂದರು. ಮೂರನೆಯವರು ಶ್ರೀ ಅಗ್ನಿಮೂರ್ಧ ಕೃಷ್ಣಾನಂದತೀರ್ಥಸ್ವಾಮಿಯವರು ; 'ಇವರಿಗೆ ಸಿಟ್ಟುಬಂದಾಗ ಶಿರಸ್ಸಿನಿಂದ ಬೆಂಕಿಕಿಡಿಗಳು ಹಾರುತ್ತಿದ್ದುದರಿಂದ ಅಗ್ನಿಮೂರ್ಧ ಎಂಬ ಉಪನಾಮವು ಬಂದಿದ್ದಿತು' (ಪು. ೯).

೩. ಶಾಲಿವಾಹನ ೧೫೮೮ರಲ್ಲಿ ಸಚ್ಚಿದಾನಂದತೀರ್ಥಸ್ವಾಮಿಗಳು ಭದ್ರಸಮುದ್ರ ಅಗ್ರಹಾರದ ಬ್ರಾಹ್ಮಣರಿಗೆ ಕೊಟ್ಟ ಒಂದು ತಾಮ್ರಶಾಸನದಲ್ಲಿ "ಶ್ರೀ ಅಗ್ನಿಮೂರ್ಧ ಕೃಷ್ಣಾನಂದತೀರ್ಥಸ್ವಾಮಿಗಳವರಿಗೆ 'ಶಿವ ವೆಂಕಟೇಂದ್ರ ರಚಿತಾನೇಕಾರ್ಹಣೇಷು" ಎಂಬುದೊಂದು ವಿಶೇಷಣವು ಕೊಡಲ್ಪಟ್ಟಿದೆ. ಇದರಿಂದ ನಗರದ ಶಿವಪ್ಪನಾಯಕನು ಅಗ್ನಿಮೂರ್ಧಕೃಷ್ಣಾನಂದತೀರ್ಥಸ್ವಾಮಿಗಳನ್ನು ಸತ್ಕರಿಸಿದಂತೆ ಕಾಣುತ್ತದೆ (ಪು. ೧೦). ಇದೇ ಸ್ವಾಮಿಗಳಿಗೆ ಮಠ ಧರ್ಮಕ್ಕಾಗಿ ಶಾಲಿವಾಹನ ೧೫೮೩ನೆ ಶಾರ್ವರಿಸಂವತ್ಸರದಲ್ಲಿ ಕೆಳದಿ ಶಿವಪ್ಪನಾಯಕರ ತಮ್ಮ ವೆಂಕಟಪ್ಪನಾಯಕರೂ ಶಾಲಿವಾಹನಶಕ ೧೫೮೪ನೆ ಪ್ಲವ ಸಂವತ್ಸರದಲ್ಲಿ ಶಿವಪ್ಪನಾಯಕರ ತಮ್ಮ ಭದ್ರಪ್ಪನಾಯಕರೂ ಇನಾಮುಗ್ರಾಮಗಳನ್ನು ಕೊಟ್ಟಿರುವದಕ್ಕೆ ತಾಮ್ರಶಾಸನಗಳಿವೆ. ಶಾಲಿವಾಹನ ೧೫೮೨ರಲ್ಲಿ ವಿಜಯನಗರದ ಆರನೆ ಶ್ರೀರಂಗರಾಯರು ಬೇಲೂರಿಗೆ ಒಂದೆರಡು ಮೈಲು ದೂರವಿರುವ ರಣಗಟ್ಟೆ- ಹಾರೋನಹಳ್ಳಿ ಸೂರಾಪುರ– ಎಂಬ ಗ್ರಾಮಗಳನ್ನು ಇವರಿಗೆ ಇನಾಮಾಗಿ ಕೊಟ್ಟಿದ್ದರೆಂದು ಆ ಗ್ರಾಮಗಳಲ್ಲಿ ಶಿಲಾಶಾಸನಗಳಿವೆ. ಇದರಿಂದ ಶಾಲಿವಾಹನ ೧೫೭೫ (ಕ್ರಿಸ್ತಾಬ್ಧ 1653) ಸುಮಾರಿನಲ್ಲಿ ಶ್ರೀಸಂಸ್ಥಾನವು ಕೋಲಾರ ಮುಳುಬಾಗಿಲಿನಿಂದ ತೀರ್ಥಹಳ್ಳಿ ತಾಲ್ಲೂಕಿಗೆ ಬಂತೆಂದು ಊಹಿಸಬಹುದಾಗಿದೆ–ಎಂದು ಇತಿಹಾಸ (ಪು. ೧೦).

೪. ಕೆಳದಿರಾಜನು ತೀರ್ಥರಾಜಪುರದ (ತೀರ್ಥಹಳ್ಳಿ) ಹತ್ತಿರ ಭದ್ರಸಮುದ್ರ ಅಗ್ರಹಾರದಲ್ಲಿ ತುಂಗಾನದಿಯ ದಡದಲ್ಲಿ ಒಂದು ಮಠವನ್ನು ಕಟ್ಟಿಸಿಕೊಟ್ಟು ಸಂಸ್ಥಾನದ ಖರ್ಚಿಗಾಗಿ ಭೂದಾನಶಾಸನಗಳನ್ನಿತ್ತನು. ಈ ಊರಿಗೂ ಅಂದಿನಿಂದ ಮುಳುಬಾಗಿಲು ಎಂದೇ ಹೆಸರುಬಂದಿತು (ಪು. ೧೧) ಸ್ವಾಮಿಗಳು ಗಜಾರಣ್ಯಕ್ಷೇತ್ರವಾದ ತಲಕಾಡಿನಲ್ಲಿ ಒಂದು ಮಠವನ್ನು ಸ್ಥಾಪಿಸಿದರು. ಅಲ್ಲಿಯೂ ಒಂದು ಭಾಗವತಸಂಪ್ರದಾಯದ ಮಠವಿದೆ. ಅದಕ್ಕೆ 'ಬಾಲಕೃಷ್ಣಾನಂದ ಮಠ'ವೆಂದು ಹೆಸರು. (ಪು. ೧೨).

೫. ಅಭಿನವಕೃಷ್ಣಾನಂದತೀರ್ಥರು (ಗು. ಸಂ. ೩೦) ಉತ್ತರದೇಶದಲ್ಲೆಲ್ಲ ಸಂಚಾರಮಾಡಿ ಮಠದ ಕೀರ್ತಿಯನ್ನು ಹೆಚ್ಚಿಸಿದರು (ಪು. ೧೪).

೬. **ಅಭಿನವಸದಾನಂದತೀರ್ಥರು** ಶಾಲಿವಾಹನ ೧೭೭೫ರಲ್ಲಿ ಸಂಚಾರ ಕ್ರಮದಿಂದ ಗುಜರಾತಿಗೆ ಹೋಗಲಾಗಿ ಅಲ್ಲಿ ಇವರೇ ನಿಜವಾಗಿ ದ್ವಾರಕಾಪೀಠಕ್ಕೆ ಹಕ್ಕುದಾರರೆಂದು ಮಹಾಜನರಿಂದ ನಿರ್ಣಯವಾಯಿತು (ಪು. ೧೬).

೭. **ಅಭಿನವಕೃಷ್ಣಾನಂದತೀರ್ಥರು** (ಗು. ಸಂ. ೩೪) ಕ್ರಿ. ಶ. 1894ರಲ್ಲಿ ಸಂನ್ಯಾಸವನ್ನು ಸ್ವೀಕರಿಸಿದರು. ಇವರು ಭರತಖಂಡವಲ್ಲೆಲ್ಲ ಸಂಚಾರಮಾಡಿ ಪ್ರಸಿದ್ಧರಾದರು (ಪು. ೧೬–೧೮).

ಈಗ ಶ್ರೀಮದಭಿನವಸಚ್ಚಿದಾನಂದತೀರ್ಥಸ್ವಾಮಿಗಳವರು ದ್ವಾರಕಾ ಪೀಠಾಧಿಷ್ಠಿತರಾಗಿರುತ್ತಾರೆ. ಈ ಮೇಲಿನ ಚರಿತ್ರೆಯ ಭಾಗವನ್ನು ದ್ವಾರಕಾ ಮಠಕ್ಕೆ ಸಂಬಂಧಿಸಿದ್ದನೆಂಬ ಕಾರಣದಿಂದ ಇಲ್ಲಿ ಸಂಗ್ರಹಿಸಿಕೊಡಲಾಗಿದೆ.

## (೪) ಗೋವರ್ಧನಮಠ

ಈ ಪೀಠದ ಚರಿತ್ರೆಯೇನೂ ನಮಗೆ ತಿಳಿದಿಲ್ಲ. ಇದು ಜಗನ್ನಾಥಪುರಿ ಯಲ್ಲಿದೆ. ಬಲದೇವ ಉಪಾಧ್ಯಾಯರು ಕೊಟ್ಟಿರುವ (ಪು. ೧೮೧)ಶ್ಲೋಕ ಬದ್ಧವಾಗಿರುವ ಗುರುಪರಂಪರೆಯನ್ನು ಈ ಕೆಳಗೆ ಕೊಟ್ಟಿರುತ್ತೇವೆ. ಟಿಪ್ಪಣಿಯಲ್ಲಿ ಬೋಡಸ್‌ರವರ ಪಟ್ಟಿಯಲ್ಲಿ ಕಾಣುವ ಹೆಚ್ಚುಕಡಿಮೆಗಳನ್ನು ತೋರಿಸಬೇಕೆಂದಿ ದ್ದೆವು. ಬರಿಯ ಹೆಸರುಗಳೇ ಆಗಿರುವದರಿಂದ ವಾಚಕರಿಗೆ ಪ್ರಯೋಜನ ವೇನೂ ಆಗಲಾರದೆಂದು ಬರೆಯಲಿಲ್ಲ.

[ಮಾಧವಸ್ಯ ಸುತಃ ಶ್ರೀಮಾನ್ ಸನನ್ದನ ಇತಿ ಶ್ರುತಃ |
ಪ್ರಕಾಶಬ್ರಹ್ಮಚಾರೀ ಚ ಋಗ್ವೇದೀ ಸರ್ವಶಾಸ್ತ್ರವಿತ್ || ೧೭ ||
ಶ್ರೀಪದ್ಮಪಾದಃ ಪ್ರಥಮಾಚಾರ್ಯತ್ವೇನಾಭ್ಯಷಿಚ್ಯತ |
ಶ್ರೀಮತ್ಪರಮಹಂಸಾದಿಬಿರುದೈರಖಿಲೈಃ ಸಹ || ೧೮ ||
ಅಙ್ಗವಙ್ಗಕಲಿಙ್ಗಾಶ್ಚ ಮಗಧೋತ್ಕಲಬರ್ಬರಾಃ |
ಗೋವರ್ಧನಮಠಾಧೀನಾಃ ಕೃತಾಃ ಪ್ರಾಚೀವ್ಯವಸ್ಥಿತಾಃ || ೧೯ ||
ತಸ್ಮಿನ್ ಗೋವರ್ಧನಮಠೇ ಶಙ್ಕರಾಚಾರ್ಯಪೀಠಗಾನ್ |
ಜಗದ್ಗುರೂನ್ ಕ್ರಮಾದ್ ವಕ್ಷ್ಯೇ ಜನ್ಮಮೃತ್ಯುನಿವೃತ್ತಯೇ || ೨೦ ||]
ಪದ್ಮಪಾದಃ ಶೂಲಪಾಣಿಸ್ತತೋ ನಾರಾಯಣಾಭಿಧಃ |
ವಿದ್ಯಾರಣ್ಯೋ ವಾಮದೇವಃ ಪದ್ಮನಾಭಾಭಿಧಸ್ತತಃ || ೨೧ ||
ಜಗನ್ನಾಥಃ ಸಪ್ತಮಃ ಸ್ಯಾದಷ್ಟಮೋ ಮಧುರೇಶ್ವರಃ |
ಗೋವಿನ್ದಃ ಶ್ರೀಧರಸ್ವಾಮೀ ಮಾಧವಾನನ್ದ ಏವ ಚ || ೨೨ ||
ಕೃಷ್ಣಬ್ರಹ್ಮಾನನ್ದನಾಮಾ ರಾಮಾನನ್ದಾಭಿಧಸ್ತತಃ |
ವಾಗೀಶ್ವರಃ ಶ್ರೀಪರಮೇಶ್ವರೋ ಗೋಪಾಲನಾಮಕಃ || ೨೩ ||

ಜನಾರ್ದನಸ್ತಥಾ ಜ್ಞಾನಾನನ್ದಶ್ಚಾಷ್ಟಾದಶಃ ಸ್ಮೃತಃ |
ಮಧ್ಯಕಾಲೇ ಸ್ಥಿತಾನೇತಾನಾಚಾರ್ಯಾಖ್ಯಾನ್ ನಮಾಮ್ಯಹಮ್ || ೨೪ ||
ಅಥ ತೀರ್ಥಾಭಿಧಾನ್ ಶ್ರೀಮದ್ಗೋವರ್ಧನಮಠೇ ಸ್ಥಿತಾನ್ |
ಅಸ್ಮದಾಚಾರ್ಯಪರ್ಯನ್ತಾನ್ ಗುರೂನ್ನಾಮ್ನಾ ಸ್ಮರಾಮ್ಯಹಮ್ || ೨೫ ||
ಏಕೋನವಿಂಶ ಆಚಾರ್ಯೋ ಬೃಹದಾರಣ್ಯತೀರ್ಥಕಃ |
ಮಹಾದೇವೋಽಥ ಪರಮಬ್ರಹ್ಮಾನನ್ದಸ್ತತಃ ಸ್ಮೃತಃ || ೨೬ ||
ರಾಮಾನನ್ದಸ್ತತೋ ಜ್ಞೇಯಸ್ತ್ರಯೋವಿಂಶಃ ಸದಾಶಿವಃ |
ಹರೀಶ್ವರಾನನ್ದತೀರ್ಥೋ ಬೋಧಾನನ್ದಸ್ತತಃ ಪರಮ್ || ೨೭ ||
ಶ್ರೀರಮಕೃಷ್ಣತೀರ್ಥೋಽಥ ಚಿದ್ಬೋಧಾತ್ಮಾಭಿಧಸ್ತತಃ |
ತತ್ತ್ವಾಕ್ಷರಮುನಿಃ ಪಶ್ಚಾದೂನತ್ರಿಂಶಸ್ತು ಶಙ್ಕರಃ || ೨೮ ||
ಶ್ರೀವಾಸುದೇವತೀರ್ಥಶ್ಚ ಹಯಗ್ರೀವ ಶ್ರುತೀಶ್ವರಃ |
ವಿದ್ಯಾನನ್ದಸ್ತ್ರಯಸ್ತ್ರಿಂಶೋ ಮುಕುನ್ದಾನನ್ದ ಏವ ಚ || ೨೯ ||
ಹಿರಣ್ಯಗರ್ಭತೀರ್ಥಶ್ಚ ನಿತ್ಯಾನನ್ದಸ್ತತಃ ಪರಮ್ |
ಸಪ್ತತ್ರಿಂಶಃ ಶಿವಾನನ್ದೋ ಯೋಗೀಶ್ವರಸುದರ್ಶನೌ || ೩೦ ||
ಅಥ ಶ್ರೀವ್ಯೋಮಕೇಶಾಖ್ಯೋ ಜ್ಞೇಯೋ ದಾಮೋದರಸ್ತತಃ |
ಯೋಗಾನನ್ದಾಭಿಧಸ್ತೀರ್ಥೋ ಗೋಲಕೇಶಸ್ತತಃ ಪರಮ್ || ೩೧ ||
ಶ್ರೀಕೃಷ್ಣಾನನ್ದತೀರ್ಥಶ್ಚ ದೇವಾನನ್ದಾಭಿಧಸ್ತಥಾ |
ಚನ್ದ್ರಚೂಡಾಭಿಧಃ ಷಟ್ಚತ್ವಾರಿಂಶೋಽಥ ಹಲಾಯುಧಃ || ೩೨ ||
ಸಿದ್ಧಸೇವ್ಯಸ್ತಾರಕಾತ್ಮಾ ತತೋ ಬೋಧಾಯನಾಭಿಧಃ |
ಶ್ರೀಧರೋ ನಾರಾಯಣಶ್ಚ ಜ್ಞೇಯಶ್ಚಾನ್ಯಃ ಸದಾಶಿವಃ || ೩೩ ||
ಜಯಕೃಷ್ಣೋ ವಿರೂಪಾಕ್ಷೋ ವಿದ್ಯಾರಣ್ಯಸ್ತಥಾಪರಃ |
ವಿಶ್ವೇಶ್ವರಾಭಿಧಸ್ತೀರ್ಥೋ ವಿಬುಧೇಶ್ವರ ಏವ ಚ || ೩೪ ||
ಮಹೇಶ್ವರಸ್ತೂನಷಷ್ಟಿತಮೋಽಥ ಮಧುಸೂದನಃ |
ರಘೂತ್ತಮೋ ರಾಮಚನ್ದ್ರೋ ಯೋಗೀನ್ದ್ರಶ್ಚ ಮಹೇಶ್ವರಃ || ೩೫ ||
ಓಙ್ಕಾರಾಖ್ಯಃ ಪಞ್ಚಷಷ್ಟಿತಮೋ ನಾರಾಯಣೋಽಪರಃ |
ಜಗನ್ನಾಥಃ ಶ್ರೀಧರಶ್ಚ ರಾಮಚನ್ದ್ರಸ್ತಥಾಪರಃ || ೩೬ ||
ಅಥ ತಾಮ್ರಕತೀರ್ಥಃ ಸ್ಯಾತ್ ತತ ಉಗ್ರೇಶ್ವರಃ ಸ್ಮೃತಃ |
ಉದ್ದಣ್ಡತೀರ್ಥಶ್ಚ ತತಃ ಸಂಕರ್ಷಣಜನಾರ್ದನೌ || ೩೭ ||
ಅಖಣ್ಡಾತ್ಮಾಭಿಧಸ್ತೀರ್ಥಃ ಪಞ್ಚಸಪ್ತತಿಸಂಖ್ಯಕಃ |
ದಾಮೋದರಃ ಶಿವಾನನ್ದಸ್ತತಃ ಶ್ರೀಮದ್ಗದಾಧರಃ || ೩೮ ||
ವಿದ್ಯಾಧರೋ ವಾಮನಶ್ಚ ತತಃ ಶ್ರೀಶಙ್ಕರೋಽಪರಃ |
ನೀಲಕಣ್ಠೋ ರಾಮಕೃಷ್ಣಸ್ತಥಾ ಶ್ರೀಮದ್ರಘೂತ್ತಮಃ || ೩೯ ||

ದಾಮೋದರೋಽನ್ಯೋ ಗೋಪಾಲಃ ಷಡಶೀತಿತಮೋ ಗುರುಃ |
ಮೃತ್ಯುಞ್ಜಯೋಽಥ ಗೋವಿನ್ದೋ ವಾಸುದೇವಸ್ತಥಾಽಪರಃ || ೪೦ ||
ಗಙ್ಗಾಧರಾಭಿಧಸ್ತೀರ್ಥಸ್ತತಃ ಶ್ರೀಮತ್ಸದಾಶಿವಃ |
ವಾಮದೇವಶ್ಚೋಪಮನ್ಯುರ್ಹಯಗ್ರೀವೋ ಹರಿಸ್ತಥಾ || ೪೧ ||
ರಘೂತ್ತಮಾಭಿಧಸ್ತ್ವನ್ಯಃ ಪುಣ್ಡರೀಕಾಕ್ಷ ಏವ ಚ |
ಪರಶಙ್ಕರತೀರ್ಥಶ್ಚ ಶತಾದೂನಃ ಪ್ರಕಥ್ಯತೇ || ೪೨ ||
ವೇದಗರ್ಭಾಭಿಧಸ್ತೀರ್ಥಸ್ತತೋ ವೇದಾನ್ತಭಾಸ್ಕರಃ |
ರಾಮಕೃಷ್ಣಾಭಿಧಸ್ತ್ವನ್ಯಶ್ಚತುಃಶತತಮೋ ಮತಃ |
ವೃಷಧ್ವಜಃ ಶುದ್ಧಬೋಧಸ್ತತಃ ಸೋಮೇಶ್ವರಾಭಿಧಃ || ೪೪ ||
ಅಷ್ಟೋತ್ತರಶತತಮೋ ಯೋಪದೇವಃ ಪ್ರಕೀರ್ತಿತಃ |
ಶಮ್ಭುತೀರ್ಥೋ ಭೃಗುಶ್ಚಾಥ ಕೇಶವಾನನ್ದತೀರ್ಥಕಃ || ೪೫ ||
ವಿದ್ಯಾನನ್ದಾಭಿಧಸ್ತೀರ್ಥೋ ವೇದಾನನ್ದಾಭಿಧಸ್ತತಃ |
ಶ್ರೀಬೋಧಾನನ್ದತೀರ್ಥಶ್ಚ ಸುತಪಾನನ್ದ ಏವ ಚ || ೪೬ ||
ತತಃ ಶ್ರೀಧರತೀರ್ಥೋಽನ್ಯಸ್ತಥಾ ಚಾನ್ಯೋ ಜನಾರ್ದನಃ |
ಕಾಮನಾಶಾನನ್ದತೀರ್ಥಃ ಶತಮಷ್ಟಾದಶಾಧಿಕಮ್ || ೪೭ ||
ತತೋ ಹರಿಹರಾನನ್ದೋ ಗೋಪಾಲಾಖ್ಯೋಽಪರಸ್ತತಃ |
ಕೃಷ್ಣಾನನ್ದಾಭಿಧಸ್ತ್ವನ್ಯೋ ಮಾಧವಾನನ್ದ ಏವ ಚ |
ಮಧುಸೂದನತೀರ್ಥೋಽನ್ಯೋ ಗೋವಿನ್ದೋಽಥ ರಘೂತ್ತಮಃ |
ವಾಮದೇವೋ ಹೃಷೀಕೇಶಸ್ತತೋ ದಾಮೋದರೋಽಪರಃ || ೪೯ ||
ಗೋಪಾಲಾನನ್ದತೀರ್ಥಶ್ಚ ಗೋವಿನ್ದಾಖ್ಯೋಽಪರಸ್ತತಃ ।
ತಥಾ ರಘೂತ್ತಮಶ್ಚಾನ್ಯೋ ರಾಮಚನ್ದ್ರಸ್ತಥಾಪರಃ || ೫೦ ||
ಗೋವಿನ್ದೋ ರಘುನಾಥಶ್ಚ ರಾಮಕೃಷ್ಣಸ್ತತೋಽಪರಃ |
ಮಧುಸೂದನತೀರ್ಥಶ್ಚ ತಥಾ ದಾಮೋದರೋಽಪರಃ || ೫೧ ||
ರಘೂತ್ತಮಃ ಶಿವೋ ಲೋಕನಾಥೋ ದಾಮೋದರಸ್ತತಃ |
ಮಧುಸೂಧನತೀರ್ಥಾಖ್ಯಸ್ತತ ಆಚಾರ್ಯ ಉಚ್ಯತೇ || ೫೨ ||
ಆಜನ್ಮಬ್ರಹ್ಮಚಾರೀ ಯೋ ಭಾತಿ ಗೋವರ್ಧನೇ ಮಠೇ |
ದ್ವಿಚತ್ವಾರಿಂಶದಧಿಕಶತಸಂಖ್ಯಃ ಸನನ್ದನಾತ್ || ೫೩ ||
ಶ್ರೀಮತ್ಪರಮಹಂಸಾದಿನಾನಾಬಿರುದಶೋಭಿತಾನ್ |
ತೀರ್ಥಾಭಿಧಾನಿಮಾನ್ ಸರ್ವಾನ್ ಗುರೂನ್ನಿತ್ಯಂ ನಮಾಮ್ಯಹಮ್ || ೫೪ ||

೧. ಈ ಮಠದಲ್ಲಿ 'ತೀರ್ಥ' ಎಂಬ ಹೆಸರಿನವರೇ ಬಹಳ, ೫೩ನೆಯ ಶ್ಲೋಕವನ್ನು ನೋಡಿದರೆ ಬ್ರಹ್ಮಚರ್ಯದಿಂದಲೇ ಸಂನ್ಯಾಸಿಗಳಾಗಬೇಕೆಂಬ ನಿಯಮವು ಈ ಪೀಠದಲ್ಲಿಲ್ಲವೆಂದು ತೋರುತ್ತದೆ.

೨. ಶ್ರೀಭಾರತೀಕೃಷ್ಣತೀರ್ಥರೆಂಬ ಸ್ವಾಮಿಗಳು ಈ ಪೀಠದಲ್ಲಿ ಸುಪ್ರಸಿದ್ಧರಾಗಿದ್ದು ಬ್ರಹ್ಮೀಭೂತರಾದಮೇಲೆ ಈಚೆಗೆ ನಮಗೆ ಮಠಾಧ್ಯಕ್ಷರು ಯಾರೆಂಬುದು ತಿಳಿದಿಲ್ಲ.

—

## (೫) ಜ್ಯೋತಿರ್ಮಠ

ಈ ಮಠವು ಬದರಿಯಿಂದ ೨೦ ಮೈಲು ದಕ್ಷಿಣಕ್ಕೆ ಇದೆ; 'ಜೋಶೀ' ಮಠವೆಂದು ಸಾಮಾನ್ಯರು ಕರೆಯುತ್ತಾರೆ. ಬದರಿಯ ಪೂಜಾರಿಯಾದ ರಾವಲಜಿ ಯವರ ಸ್ಥಾನವಿದು. ಅಕ್ಟೋಬರ್ ತಿಂಗಳಿಂದ ಏಪ್ರಿಲ್‌ವರೆಗೆ ಚಳಿಯ ನಿಮಿತ್ತದಿಂದ ಬದರಿಯ ಮಂದಿರವು ಮುಚ್ಚಿರುತ್ತದೆ; ಆಗ ಚಲಪ್ರತಿಮಾದಿಗಳನ್ನು ಇಲ್ಲಿಗೆ ತರುತ್ತಾರೆ. ಬದರಿಯಲ್ಲಿರುವ ಮೂರ್ತಿಯನ್ನು ಆಚಾರ್ಯರು ಪ್ರತಿಷ್ಠೆ ಮಾಡಿದರೆಂದು ಐತಿಹಾಸಿಕರು ತಿಳಿಯುತ್ತಾರೆ. ಈ ಮಠದ ವಿಷಯವೆಲ್ಲ ನಮಗೆ ಬಲದೇವ ಉಪಾಧ್ಯಾಯರ ಪುಸ್ತಕದಲ್ಲಿಯೇ (ಪು. ೧೮೩) ಸಿಕ್ಕಿರುತ್ತದೆ. ಇಲ್ಲಿಯ ಗುರುಪರಂಪರೆಯನ್ನು ಪ್ರಾತಃಸ್ಮರಣೆಗೆಂದು ಜನರು ನೆನಪಿಟ್ಟಿರುತ್ತಾ ರಂತೆ :

ತೋಟಕೋ ವಿಜಯಃ ಕೃಷ್ಣಃ ಕುಮಾರೋ ಗರುಡಧ್ವಜಃ |
ವಿನ್ಧ್ಯೋ ವಿಶಾಲೋ ವಕುಲೋ ವಾಮನಃ ಸುನ್ದರೋಽರುಣಃ ||
ಶ್ರೀನಿವಾಸಃ ಸುಖಾನನ್ದೋ ವಿದ್ಯಾನನ್ದಃ ಶಿವೋ ಗಿರಿಃ |
ವಿದ್ಯಾಧರೋ ಗುಣಾನನ್ದೋ ನಾರಾಯಣ ಉಮಾಪತಿಃ ||
ಏತೇ ಜ್ಯೋತಿರ್ಮಠಾಧೀಶಾ ಆಚಾರ್ಯಾಶ್ಚಿರಜೀವಿನಃ |
ಯ ಏತಾನ್ ಸಂಸ್ಮರೇನ್ನಿತ್ಯಂ ಯೋಗಸಿದ್ಧಿಂ ಸ ವಿನ್ದತಿ ||

ಬಲ. ಶಂ. ಪು. ೧೮೮

[ಈ ಮೂರು ಶ್ಲೋಕಗಳಲ್ಲಿ ಹೇಳಿರುವ ಮಠಾಧೀಶ್ವರರು ಚಿರಂಜೀವಿಗಳು, ಇವರ ಸ್ಮರಣೆಯನ್ನು ನಿತ್ಯವೂ ಮಾಡುವವರಿಗೆ ಯೋಗಸಿದ್ಧಿಯಾಗುವದು ಎಂದು ಇಲ್ಲಿ ಹೇಳಿದೆ.[

ಬಲದೇವ ಉಪಾಧ್ಯಾಯರ ಕಲ್ಪನೆ ಏನೆಂದರೆ, ಸ್ಥೂಲರೂಪದಿಂದ ಲೆಕ್ಕ ಹಾಕಿದರೆ ವಿಕ್ರಮ ಸಂ. ೭೦೦ರಿಂದ ೧೧೦೦ರವರೆಗೂ ಈ ಪರಂಪರೆ ಇತ್ತು; ಆಮೇಲೆ ಪರಂಪರೆ ಉಚ್ಛಿನ್ನವಾಯಿತು. ೪೦೦ ವರ್ಷಗಳು ಯಾರೂ ಆಚಾರ್ಯ ರಿರಲಿಲ್ಲ. ಈ ಸಂನ್ಯಾಸಿಗಳೇ ಮೊದಲಿಂದಲೂ ಬದರೀನಾಥನ ಅರ್ಚನೆಯನ್ನು ಮಾಡುತ್ತಿದ್ದರು. ಸಂವತ್ ೧೫೦೦ರಿಂದ ಮುಂದಕ್ಕೆ ಬದರಿಯ ಮಹಾಂತರ ನಾಮಾವಲಿ ಸಿಕ್ಕುತ್ತದೆ. ಇವರೇ ಮಠಕ್ಕೂ ಅಧ್ಯಕ್ಷರಾಗಿದ್ದರೆಂದು ತೋರುತ್ತದೆ. ಇದಕ್ಕಿಂತ ಮೊದಲಿನ ೪೦೦ ವರ್ಷಗಳ ಅಧ್ಯಕ್ಷರ ಪರಿಚಯವು ಸಿಕ್ಕುತ್ತಿಲ್ಲ. ಈ ಅಧ್ಯಕ್ಷರ ನಾಮಾವಳಿ ಹೀಗಿದೆ :

| | ಹೆಸರು | ಸಂವತ್ಕಾಲ | ಪೂಜಾಕಾಲ |
|---|---|---|---|
| ೧. | ಬಾಲಕೃಷ್ಣಸ್ವಾಮಿ | ೧೫೦೦–೧೫೫೭ | ೫೭ |
| ೨. | ಹರಿಬ್ರಹ್ಮಸ್ವಾಮಿ | ೧೫೫೭–೧೫೫೮ | ೧ |
| ೩. | ಹರಿಸ್ಮರಣಸ್ವಾಮಿ | ೧೫೫೮–೧೫೬೬ | ೮ |
| ೪. | ವೃಂದಾವನಸ್ವಾಮಿ | ೧೫೬೬–೧೫೭೮ | ೨ |
| ೫. | ಅನಂತನಾರಾಯಣಸ್ವಾಮಿ | ೧೫೬೮–೧೫೬೯ | ೧ |
| ೬. | ಭವಾನಂದಸ್ವಾಮಿ | ೧೫೬೯–೧೫೮೩ | ೧೪ |
| ೭. | ಕೃಷ್ಣಾನಂದಸ್ವಾಮಿ | ೧೫೮೩–೧೫೯೩ | ೧೦ |
| ೮. | ಹರಿನಾರಾಯಣಸ್ವಾಮಿ | ೧೫೯೩–೧೬೦೧ | ೮ |
| ೯. | ಬ್ರಹ್ಮಾನಂದಸ್ವಾಮಿ | ೧೬೦೧–೧೬೨೧ | ೨೦ |
| ೧೦. | ದೇವಾನಂದಸ್ವಾಮಿ | ೧೬೨೧-೧೬೩೬ | ೧೮ |
| ೧೧. | ರಘುನಾಥಸ್ವಾಮಿ | ೧೬೩೫–೧೬೬೧ | ೨೫ |
| ೧೨. | ಪೂರ್ಣದೇವಸ್ವಾಮಿ | ೧೬೬೧–೧೫೮೭ | ೨೭ |
| ೧೩. | ಕೃಷ್ಣದೇವಸ್ವಾಮಿ | ೧೬೮೭–೧೬೯೬ | ೯ |
| ೧೪. | ಶಿವಾನಂದಸ್ವಾಮಿ | ೧೬೯೬–೧೭೦೩ | ೭ |
| ೧೫. | ಬಾಲಕೃಷ್ಣಸ್ವಾಮಿ | ೧೭೦೩–೧೭೧೭ | ೧೪ |
| ೧೬. | ನಾರಾಯಣೋಪೇಂದ್ರಸ್ವಾಮಿ | ೧೭೧೭–೧೭೫೦ | ೩೩ |
| ೧೭. | ಹರಿಶ್ಚಂದ್ರಸ್ವಾಮಿ | ೧೭೫೦–೧೭೬೩ | ೧೩ |
| ೧೮. | ಸದಾನಂದಸ್ವಾಮಿ | ೧೭೬೩–೧೭೭೩ | ೧೦ |
| ೧೯. | ಕೇಶವಸ್ವಾಮಿ | ೧೭೭೩–೧೭೮೧ | ೮ |
| ೨೦. | ನಾರಾಯಣತೀರ್ಥಸ್ವಾಮಿ | ೧೭೮೧-೧೮೨೩ | ೪೧ |
| ೨೧. | ರಾಮಕೃಷ್ಣಸ್ವಾಮಿ | ೧೮೨೩–೧೮೩೩ | ೧೦ |

ಇಲ್ಲಿಂದ ಮುಂದಕ್ಕೆ ಸಂನ್ಯಾಸಿಗಳ ಕೈಯಿಂದ 'ಬ್ರಹ್ಮಚಾರೀ ರಾವಲ'ರ ವಶಕ್ಕೆ ಬಂತು. ೧೮೩೩ರಲ್ಲಿ ರಾಮಕೃಷ್ಣಸ್ವಾಮಿಗಳು ದೇಹವನ್ನಿಟ್ಟಮೇಲೆ ಉತ್ತರಾಧಿಕಾರಿಗಳು ಯಾರೂ ಇರಲಿಲ್ಲ ಗಡವಾಲ ಮಹಾರಾಜ ಪ್ರದೀಪಶಾಹ ಎಂಬಾತನು ಅಲ್ಲಿಗೆ ಬಂದು ಪೂಜಾರಿಯಿಲ್ಲದ್ದನ್ನು ಕಂಡು ಗೋಪಾಲನೆಂಬವನಿಗೆ (ದೇವರಿಗೆ ನೈವೇದ್ಯಕ್ಕೆ ಏರ್ಪಾಡುಮಾಡುತ್ತಿದ್ದ ನಂಬೂದ್ರಿಬ್ರಾಹ್ಮಣ) 'ರಾವಲ' ಎಂಬ ಸ್ಥಾನವನ್ನು ಕೊಟ್ಟು ಛತ್ರಿಚಾಮರಾದಿಗಳೊಡನೆ ರಾಮಕೃಷ್ಣಸ್ವಾಮಿಗಳ ಸ್ಥಾನದಲ್ಲಿಟ್ಟನು. ಅಂದಿನಿಂದ ಅಲ್ಲಿ 'ರಾವಲರೇ' ಇರುತ್ತಾರೆ. ಅವರೆಲ್ಲರೂ ನಂಬೂದ್ರಿಯವರೇ ಆಗಿರುತ್ತಾರೆ. ಈ ರಾವಲರ ಪರಂಪರೆಯ ಪಟ್ಟಿಯನ್ನು ಈಗ ಕೊಡುತ್ತೇವೆ :

| | ಹೆಸರು | ಅಧಿಕಾರ | ಪೂಜಾವಧಿ |
|---|---|---|---|
| ೧. | ಗೋಪಾಲ ರಾವಲ | ೧೮೩೩–೧೮೪೨ | ೯ |
| ೨. | ರಾಮಚಂದ್ರ ರಾಮಬ್ರಹ್ಮ | ೧೮೪೨–೧೮೪೩ | ೧ |
| ೩. | ನೀಲದಂತ ರಾವಲ | ೧೮೪೩–೧೮೪೮ | ೫ |
| ೪. | ಸೀತಾರಾಮ | ೧೮೪೮–೧೮೫೯ | ೧೧ |
| ೫. | ನಾರಾಯಣ | ೧೮೫೯–೧೮೭೩ | ೧೪ |
| ೬. | ನಾರಾಯಣ (೨) | ೧೮೭೩–೧೮೯೮ | ೨೫ |
| ೭. | ಕೃಷ್ಣ | ೧೮೯೮–೧೯೦೨ | ೨ |
| ೮. | ನಾರಾಯಣ (೩) | ೧೯೦೨–೧೯೧೬ | ೧೪ |
| ೯. | ಪುರುಷೋತ್ತಮ | ೧೯೧೬–೧೯೫೭ | ೪೧ |
| ೧೦. | ವಾಸುದೇವ | ೧೯೫೭–೧೯೫೮ | ೧ |

(ವಾಸುದೇವ ರಾವಲರು ಕಾರಣಾಂತರದಿಂದ ತ್ಯಾಗಪತ್ರವನ್ನು ಕೊಟ್ಟರು; ಅವರ ತರುವಾಯ ನಂಬೂದ್ರಿ ರಾವಲರನ್ನು ಮಾಡಿದ್ದರು; ಅವರು ದೇಹವಿಟ್ಟ ಬಳಿಕ ಮತ್ತೆ ವಾಸುದೇವ ರಾವಲರಿಗೇ ಪ್ರಾಪ್ತವಾಯಿತು. ಆದ್ದರಿಂದ ಅವರ ಹೆಸರು ಎರಡು ಬಾರಿ ಬಂದಿದೆ).

| | | | |
|---|---|---|---|
| ೧೧. | ರಾಮ ರಾವಲ | ೧೯೫೮–೧೯೬೨ | ೪ |
| ೧೨. | ವಾಸುದೇವ | ೧೯೬೨–೧೯.... | — |

ಈ ರಾವಲರಿಗೆ ಬದರೀನಾಥಸಂಬಂಧವೇ ಮುಖ್ಯ; ಮಠಕ್ಕೆ ಸಾಕ್ಷಾತ್ತಾಗಿ ಸಂಬಂಧವೇನೂ ಇಲ್ಲ. 'ಮಠವು ಬಹುಕಾಲ ಅಧ್ಯಕ್ಷರಿಲ್ಲದೆ ಇತ್ತು. ಈಗ ಕಾಶಿಯ ವಿದ್ವಾನ್ ಬ್ರಹ್ಮಾನಂದಸ್ವಾಮಿಗಳು ಅಧ್ಯಕ್ಷರಾಗಿರುತ್ತಾರೆ' -ಎಂದು ಬಲದೇವ ಉಪಾಧ್ಯಾಯರು ಬರೆದಿರುತ್ತಾರೆ. ಈಚೆಗೆ ಅಲ್ಲಿ ಯಾರಿದ್ದಾರೋ ನಮಗೆ ತಿಳಿಯದು. ಅಲ್ಲಿಯ ಪೀಠವೂ ವಿವಾದಸ್ಥಾನವಾಗಿದೆ ಎಂದು ನಮಗೆ ತಿಳಿಯಬಂದಿದೆ. ಈ ಪೀಠದ ಮಾಹಾತ್ಮ್ಯವನ್ನು ಬಲದೇವ ಉಪಾಧ್ಯಾಯರು (ಬಲ. ಶಂ. ಪು. ೧೮೬) ಬರೆದಿರುತ್ತಾರೆ. ಗುರುಪರಂಪರೆಗೆ ಸಂಬಂಧಪಟ್ಟಿಲ್ಲವೆಂದು ಅದನ್ನು ಇಲ್ಲಿ ಕಾಣಿಸಿಲ್ಲ.

## (೬) ಸುಮೇರುಮಠ

ಮಠಾಮ್ನಾಯದಲ್ಲಿ ಇದರ ಹೆಸರೂ ಇದ್ದರೂ ಇದರ ವಿಷಯಕ್ಕೆ ಹೆಚ್ಚಿಗೆಯೇನೂ ನಮಗೆ ತಿಳಿದಿಲ್ಲ.

## ಉಪಪೀಠಗಳು

ಈವರೆಗೆ ಹೇಳಿದ ಪ್ರಧಾನಪೀಠಗಳಲ್ಲದೆ ಕೂಡಲಿ, ಸಂಕೇಶ್ವರ, ಪುಷ್ಪಗಿರಿ, ಶಿವಗಂಗೆ– ಮುಂತಾದ ಅನೇಕ ಪೀಠಗಳಿವೆ. ಇವುಗಳ ವಿಷಯವು

ಅಷ್ಟಾಗಿ ಇತಿಹಾಸಶುದ್ಧವಾಗಿಲ್ಲವಾದ್ದರಿಂದ ಅವುಗಳ ವಿಷಯವಾಗಿ ಹೆಚ್ಚಿಗೆ ಬರೆಯುವದು ಆಗಿಲ್ಲ. ನಮಗೆ ತಿಳಿದಿರುವಷ್ಟು ಕೆಲವು ಮುಖ್ಯವಿಷಯಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ತಿಳಿಸುವೆವು.

## (೧) ಕೂಡಲಿ

( ಚರಿತ್ರೆ ಪುಟ. ೩೪೯ )

ಕೆ.ಆರ್. ವೆಂಕಟರಾಮನ್‌ರವರು ಬರೆದಿರುವದೇನೆಂದರೆ : (೧) ತೀರ್ಥ ಮತ್ತೂರು ಮತ್ತು ಕೂಡಲಿಮಠಗಳು ೧೪ನೆಯ ಶತಮಾನದಲ್ಲಿ ಶೃಂಗೇರಿಗುರುಗಳ ಮತ್ತು ಚಕ್ರವರ್ತಿಗಳ ಮಾರ್ಗದರ್ಶಿತ್ವದಿಂದ ಸ್ಥಾಪಿತವಾದವು (KRTTW p. 41). (೨) ಕೂಡ್ಲಿಮಠದ ಸ್ವಾಮಿಗಳು ಬಿಜಾಪುರದ ಸರಕಾರದವರನ್ನು ಹರಕೆರೆ ಮತ್ತು ಮಂಡಲಿಗ್ರಾಮಗಳನ್ನು ತಮ್ಮ ಸ್ವಾಧೀನಕ್ಕೆ ಕೊಡುವಂತೆ ಪ್ರೇರಿಸಿದರು. ಶ್ರೀಸಚ್ಚಿದಾನಂದಸ್ವಾಮಿಗಳ ಸ್ವಾಸ್ಥ್ಯಗಳಿಗೆ ಅಡ್ಡಿ ತರಬಾರ ದೆಂತ ಖೋಜಾಯಿಸಮಲ್ ಖಾನ್, ಆಡಾಮ್ ಅಫಸಲ್ ಖಾನ್ ಮತ್ತು ಖಾನ್ ಅಲಿ ಷಾ–ಇವರಿಗೆ ವೀರಭದ್ರನಾಯಕನು ಬರೆದನು (KRTTW p. 63). (೩) ಕ್ರಿ. ಶ. 1561 ರಲ್ಲಿ ಕೃಷ್ಣಪ್ಪನಾಯಕನು ಶಿವವಿಷ್ಣುಗಳ ಐಕ್ಯವನ್ನು ಪರಾಮರ್ಶಿಸಿ ಒಂದು ಶಾಸನದಲ್ಲಿ 'ಈ ವಿವಾದವನ್ನು ತಪ್ಪಿಸುವ ದಕ್ಕೆ ಮಹಾ ಕರುಣಾಶಾಲಿಗಳಾದ ಹರಿಯೂ ಹರನೂ ಹರಿಹರನೆಂಬ ದಿವ್ಯರೂಪ ವನ್ನು 'ಕೂಡಲಿ'ಯಲ್ಲಿ (ಹರಿಹರದಲ್ಲಿ) ಸ್ವೀಕರಿಸಿದರು" (KRTTW p. 73)

ಆದರೆ ಕೂಡಲಿಯವರ ಅಭಿಪ್ರಾಯವು ಬೇರೆಯಾಗಿದೆ. ಶ್ರೀಸಂಸ್ಥಾನ ದವರು ಮೈಸೂರಿನಲ್ಲಿ ಅಚ್ಚುಮಾಡಿಸಿ ಪ್ರಕಟಿಸಿರುವ 'ಗುರುಪರಂಪರಾನಾಮ ಮಾಲೆ'ಯಲ್ಲಿ ಈ ಶ್ಲೋಕಗಳಿವೆ :

ತಜ್ಜ' ಪರಿವ್ರಾಟ್ ಸುತ್ರಾಮಾ ಶ್ರೀನೃಸಿಂಹಸುಭಾರತೀ ।
ವಾರಣಸ್ಯಾದಿತೀರ್ಥಾನಾಂ ಯಾತ್ರಾರ್ಥಮಗಮದ್ಗುರುಃ ॥೨೭॥
ಪ್ರತ್ಯಾವೃತ್ತೋ ಬಹೋಃ ಕಾಲಾಚ್ಛೃಙ್ಗೇರ್ಯಾಂ ಚ ಮಹಾಜನೈಃ ।
ಅನ್ಯಂ ಹಠಾದವಿಧಿನಾ ಕೃತಂ ದೃಷ್ಟ್ವಾ ಯತಿಂ ಸ್ವಯಮ್ ॥೨೩॥
ತುಙ್ಗಭದ್ರಾಸಙ್ಗಮಗಂ ಕೂಹಲೀಕ್ಷೇತ್ರಮೇತ್ಯ ಸಃ ।
ಜಗದ್ಗುರುಪದಂ ತತ್ರ ಪ್ರತಿಷ್ಠಾಪ್ಯಾವಸತ್ ಸುಖಮ್ ॥೨೪॥

'ರಾಮಚಂದ್ರಭಾರತಿಗಳಾದಮೇಲೆ ಬಂದ ಶ್ರೀನೃಸಿಂಹಭಾರತಿಗಳು ವಾರಾಣಸ್ಯಾದಿ ತೀರ್ಥಕ್ಷೇತ್ರಗಳ ಯಾತ್ರಾರ್ಥವಾಗಿ ಹೋಗಿ ಬಹಳಕಾಲದ ಮೇಲೆ ಹಿಂತಿರುಗಿಬರಲು ಶೃಂಗೇರಿಯಲ್ಲಿ ಮಹಾಜನರಿಂದ ಮತ್ತೊಬ್ಬನನ್ನು ಬಲಾತ್ಕಾರದಿಂದ ಸಂನ್ಯಾಸಿಯಾಗಿ ಮಾಡಿದ್ದನ್ನು ಕಂಡು ತಾವು ಭದ್ರಾಸಂಗಮ

ದಲ್ಲಿರುವ ಕೂಡಲೀಕ್ಷೇತ್ರಕ್ಕೆ ಬಂದು ಅಲ್ಲಿ ಜಗದ್ಗುರುಪದವನ್ನು ಪ್ರತಿಷ್ಠಾಪನೆ ಮಾಡಿ ಸುಖವಾಗಿದ್ದರು' ಎಂಬುದು ಶ್ಲೋಕಗಳ ಅರ್ಥ. ಈ ವಿಷಯದಲ್ಲಿ ಈಗಿನ ಕೂಡಲೀ ಶೃಂಗೇರಿ ಜಗದ್ಗುರು ಸ್ವಾಮಿಗಳವರನ್ನು ಕೇಳಲಾಗಿ ಅವರು ಶ್ರೀಮಜ್ಜಗದ್ಗುರು ಶ್ರೀಕೂಡ್ಲಿಶೃಂಗೇರಿ ಸಂಸ್ಥಾನದ "ಪ್ರಾಚೀನ ಶಾಸನ ಲೇಖನ ಸಂಗ್ರಹ" ಎಂಬ ಶಿರೋನಾಮೆಯ ಒಂದು ಅಚ್ಚಿನ ಪ್ರತಿಯನ್ನು ತೋರಿಸಿದರು. ಅದರ ಒಂದನೆಯ ಭಾಗದಲ್ಲಿ 'ಕದಂಬರ ಮತ್ತು ವಿಜಯನಗರದವರ ಕಾಲ'ದ ಶಾಸನಾವಿಗಳು ಪ್ರಕಟಿತವಾಗಿರುತ್ತವೆ. ಎರಡನೆಯ ಭಾಗದಲ್ಲಿ 'ಮಠಾಧೀಶ್ವರರು ಮುಂತಾದವರ ಲೇಖನಗಳು' ಎಂಬ ಶಿರೋನಾಮೆಯಲ್ಲಿ ವಿಷುಸಂವತ್ಸರದ ಮಾಘ ಶುದ್ಧ ೭ ಶಾ. ಶ. ೧೫೦೪ ಕ್ರಿ. ಶ. 1582ನೇ ಕಾಲದ ಒಂದು ಬಾಲಬೋಧಲಿಪಿಯ ಪತ್ರವಿದೆ. ಸಾಂಪ್ರದಾಯಿಕವಾದ ಬಿರುದುಬಾವಲಿಗಳ ಒಕ್ಕಣೆಯನ್ನು !--

"ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ....ಋಷ್ಯಶೃಂಗಪುರವರಾಧೀಶ್ವರ ತುಂಗಭದ್ರಾತೀರವಾಸ ಶ್ರೀಮದ್ವಿದ್ಯಾಶಂಕರ ಪಾದಪದ್ಮಾರಾಧಕ ಶ್ರೀರಾಮಚಂದ್ರಭಾರತೀಸ್ವಾಮಿ ಕರಕಮಲ ಸಂಜಾತ ಶೃಂಗೇರೀ ಶ್ರೀನೃಸಿಂಹಭಾರತೀಸ್ವಾಮಿನಾಂ ಚರಣಸರೋಜೇಷು" ಎಂದು ಕೊಟ್ಟಬಳಿಕ--

ತಮ್ಮ ಪ್ರಿಯಶಿಷ್ಯನಾದ ಶೃಂಗೇರೀ ಶ್ರೀಶಾರದಾಂಬನವರ ಪೂಜೆಗೆ ನೇಮಿಸಲ್ಪಟ್ಟ ರಾಮಚಂದ್ರಭಾರತಿಯು ಭಾಷಾಪೂರ್ವಕ ಬರಶಿ ವಪ್ಪಿಶಿದ ನಿಬಂಧನೆ ಬಿನ್ನವತ್ತಳೆ ಅದಾಗಿ ಶ್ರೀಕರ್ತರು ಮಹಾಯಾತ್ರೆಗೆ ಚಿತ್ತೈಸಿದ ವ್ಯಾಳ್ಯದಲ್ಲಿ ಸ್ಥಲದ ಮಹಾಜನಗಳು ಕೃತ್ರಿಮತನದಿಂದ ನಮಗೆ ಆಶ್ರಮಾಕೊಡಿಸಿ ತಾವೂ ಸಳಕ್ಕೆ ಬರಬಾರದು ದುರಾಲೋಚನೆ ಮಾಡಿ ಸ್ಥಳ ಬಂದುಕಟ್ಟುಮಾಡಿಕೊಂಡು ಇವ್ವಲ್ಲಿ ಯಾತ್ರೀತೀರ್ಥಾಮಾಡಿಕೊಂಡು ತಾವು ಪುನಃ ಶೃಂಗೇರಿಗೆ ಚಿತ್ತೈಸಬೇಕೆಂದು ಸಕಲದೇಶಗಳೂ ಸಂಚಾರಮಾಡಿಕೊಳ್ಳುತ್ತಾ ತುಂಗಭದ್ರಾಸಂಗಮ ಕೂಡ್ಲಿಕ್ಷೇತ್ರಕ್ಕೆ ದಿಗ್ವಿಜಯಮಾಡಿದ ತರುವಾಯ ಸ್ಥಳದ ವಿದ್ಯಾಮಾನಗಳ್ಯಾವತ್ತೂ ದಿವ್ಯಚಿತ್ತಕ್ಕೆ ಶ್ರುತವಾಗಿ ನಮಗೆ ಕೃತ್ರಿಮತನದಿಂದ ಆಶ್ರಮಾಕೊಡಿಶಿದ ಮಹಾಜನ ನಮ್ಮನ್ನು ಸಹ ಈ ಕೂಡ್ಲೀಕ್ಷೇತ್ರಕ್ಕೆ ಕರಶಿಕೊಂಡು ನಿಗ್ರಹಪೂರ್ವಕ ಅಜ್ಞಾಮಾಡಿಶಿದ ಕಾರಣ ನಾವು ಶ್ರೀದಿವ್ಯಚಿತ್ತದಲ್ಲಿ ಅಪ್ಪಣೆಯಾದಪ್ರಕಾರ ನಡೆದುಕೊಳ್ಳುವದಕ್ಕೆ ಸಿದ್ಧವಾಗಿ ಇದ್ದೇನೆಂದು ವಿನಯಪೂರ್ವಕ ಬಿನ್ನಹಮಾಡಿಕೊಂಡದ್ದರಿಂದ ಪರಮಕಾರುಣ್ಯ ಹುಟ್ಟಿ ಅನುಗ್ರಹಪೂರ್ವಕ ಅಪ್ಪಣೆ ದಯಪಾಲಿಶಿ ಸ್ಥಳದಲ್ಲಿ ಶ್ರೀಶಾರದಾಂಬನವರ ಪೂಜಾ ಮುಂತಾದ ವಿನಿಯೋಗವನ್ನು ನಿಬಂಧನೆಪ್ರಕಾರ ನಡಿಶಿಕೊಂಡು ಅಜ್ಞಾನುಸಾರ ನಡಕೊಂಬುವಂತೆ ಅಪ್ಪಣೆ ಆಯಿತಾದ ಕಾರಣಾ ಅದೇ ಮೇರೆಗೆ ಶ್ರೀ ಅಮ್ಮನವರ ಪೂಜಾಮಾಡಿಕೊಂಡು ಕಾಲಂಪ್ರತಿಯಲ್ಲೂ ಹುಟ್ಟಿಮುಟ್ಟಿದ ಆದಾಯವೆಚ್ಚದ ಲೆಖ್ಖಾಮಿಗತೀ ಆದ ದ್ರವ್ಯಸಹಾ ಶ್ರೀಸನ್ನಿಧಾನಕ್ಕೆ ವಪ್ಪಿಸಿಕೊಳ್ಳುತ್ತಾ ಬಂದೆನು. ಮುಂದೆ ತಾವು ಸಂಸ್ಥಾನಕ್ಕೆ ನೇಮಿಸಲ್ಪಟ್ಟವರಿಗೂ ತಮ್ಮ ಸ್ಥಾನಾಪನ್ನರಾಗಿ ಕರಕಮಲಸಂಜಾತ

ರಾಗಿ ನೇಮಿಸಲ್ಪಟ್ಟವರಿಗೂ ಇನೇ ಪ್ರಕಾರ ಆದಾಯುವೆಚ್ಚಾ ಮಿಗತೀಹಣ ಸಹ ವಪ್ಪಿಶಿ ಕೊಂಡು ಸಂಚಾರ ಆಚಾರವಿಚಾರ ಮೊದಲಾದ ಹೆಚ್ಚು ಹವ್ಯಾನಕ್ಕೆ ಹೋಗದೇ ಅಜ್ಞಾನು ಸಾರ ನಡಕೊಳ್ಳತಕ್ಕವನು. ಇವಕ್ಕೆ ನಮ್ಮ ಪರಂಪರಾಗತದಲ್ಲಿ ಯಾರಾದರೂ ಅನ್ಯಥಾ ಮಾಡಿದಲ್ಲಿ ಶ್ರೀಗುರುಚರಣಕ್ಕೆ ಅನ್ಯಥಾಮಾಡಿದ ಹಾಗೆ ಎಂದು ನಮ್ಮ ಆತ್ಮಸಾಕ್ಷಿಯಿಂದ ಭಾಷಾಪೂರ್ವಕ ಬರಿಶಿ ಒಪ್ಪಿಶಿವ ಬಿನ್ನವತ್ತಳೇ ವಿಷುಸಂವಶ್ಸರದ ಮಾಘ ಶುದ್ಧ ೭ರಲ್ಲೂ ಇತಿ ವಿಜ್ಞಪ್ತಯಃ (ಶ್ರೀ) ॥'

ಎಂತ ಬರೆದಿದೆ. ಚಿತ್ರಭಾನು ಶಾ. ಶ. ೧೫೦೫ ಕ್ರಿ ಶ. 1583ರಲ್ಲಿ ಪೂಜೆಮಾಡಿ ಮಿಗತೀಹಣ ಐನೂರನಲವತ್ತೆಂಟು ವರಹ ಚಿಲ್ಲರೆ ಕೊಟ್ಟು ಕಳು ಹಿಸಿದ್ದಕ್ಕೆ ಪತ್ರವೂ ಬಂದಿದೆ :—

ಈ ವಿಷಯದಲ್ಲಿ ಕೂಡಲಿಯ ಶ್ರೀಶ್ರೀಗಳವರ ಸಂನಿಧಿಯಲ್ಲಿ ನಾವು ಕೇಳಿದ ಪ್ರಶ್ನೆಗಳಿವು :—

(೧) ಈ ಪತ್ರದಲ್ಲಿ ತೋರಿಬರುವ ಮಠಗಳೆರಡಕ್ಕೂ ಇರುವ ಸಂಬಂಧವು ಯಾವಾಗ ಹೇಗೆ ಕಡಿದುಹೋಯಿತು ?— ಎಂಬುದಕ್ಕೆ ದಾಖಲೆ ಏನಾದರೂ ಇದೆಯೆ ?

(೨) ಶೃಂಗೇರಿ, ಕೂಡಲಿಶೃಂಗೇರಿಮಠಗಳ ಶಿಷ್ಯಕೋಟಿಗೆ ಸೇರಿರುವವರ ಗ್ರಾಮಗಳ ಗಡಿ ಯಾವಾಗ, ಹೇಗೆ ನಿರ್ಣಯವಾಯಿತು ? ಬಹಳ ಹತ್ತಿರವಿರುವ ಗ್ರಾಮಗಳು ಬೇರೆಬೇರೆಯ ಮಠಗಳಿಗೆ ಸೇರಿದ್ದು ಹೇಗೆ ?

(೩) ಕೂಡಲಿಮಠದವರು ಸಂಚಾರಹೊರಟಾಗ ಚಂದ್ರಮೌಳೀಶ್ವರಲಿಂಗ ಅವರಲ್ಲಿತ್ತೆ? ಇದ್ದರೆ ಅದು ಮತ್ತೆ ಶೃಂಗೇರಿಗೆ ಯಾವಾಗ, ಹೇಗೆ ಹೋಯಿತು ?

ಮೊದಲನೆಯ ಎರಡು ಪ್ರಶ್ನೆಗಳಿಗೆ ಮನಸ್ತೃಪ್ತಿಕರವಾದ ಉತ್ತರಗಳು ಸಿಕ್ಕಲಿಲ್ಲ. ಮೂರನೆಯ ಪ್ರಶ್ನೆಗೆ ಉತ್ತರವಾಗಿ ಶ್ರೀಮಠದ ಕಡಿತದ ಒಂದು ಭಾಗವನ್ನು ಓದಿತೋರಿಸಿದರು. ಅದರಲ್ಲಿ ಶೃಂಗೇರೀಮಠದವರು ರಾಜರ ಸಹಾಯದಿಂದ ಬಲಾತ್ಕಾರಪೂರ್ವಕವಾಗಿ ಚಂದ್ರಮೌಳೀಶ್ವರ, ಮತ್ತು ಕೆಲವು ಅನರ್ಘಪದಾರ್ಥಗಳನ್ನು ತೆಗೆದುಕೊಂಡುಹೋದದ್ದಾಗಿ ಬರೆದಿತ್ತು.

ಕೂಡಲಿ ಶೃಂಗೇರಿ ಮತ್ತು ಶೃಂಗೇರಿ—ಈ ಎರಡರಲ್ಲಿ ಶಂಕರಾಚಾರ್ಯರು ಸ್ಥಾಪಿಸಿದ ಮಠವು ಎಲ್ಲಿಯದು?—ಎಂಬ ಬಗ್ಗೆ ವಿವಾದವನ್ನು ಕೆಲವರು ತೆಗೆದಿರು ತ್ತಾರೆ. ಶೃಂಗೇರಿಯು ತುಂಗಾತೀರದಲ್ಲಿದೆ, ಕೂಡಲಿಯೇ ಮೊದಲಿನ ಶೃಂಗೇರಿ ಯಾಗಿತ್ತು. ಚಿಕ್ಕಮಗಳೂರು ತಾಲ್ಲೂಕಿನ (Epigraphica Carnatica No. 77, p. 186) ಶಾಸನವೊಂದರಲ್ಲಿ ತುಂಗಭದ್ರಾತೀರದಲ್ಲಿ ಮಾರ್ಕಂಡೇಯ, ಅಗಸ್ತ್ಯ—ಮುಂತಾದವರು ತಪಸ್ಸುಮಾಡಿದರು: ಇಲ್ಲಿ ಒಂದು ಪರ್ವತವು ಎದ್ದುಕೊಂಡಿತು—ಎಂದಿದೆಯಂತೆ. "ಋಷ್ಯಶೃಂಗ"ರ ಹೆಸರಿಸಿಂದ

ಇದಕ್ಕೆ ಶೃಂಗೇರೀ ಎಂಬ ಹೆಸರಾಯಿತೆಂದೂ ಈ ಸ್ಥಳಕ್ಕೆ ನರಸಿಂಹಕ್ಷೇತ್ರ, ಕೂಡಲಿ, ವಿದ್ಯಾನಗರ (?) ಋಷ್ಯಾಶ್ರಮ–ಎಂದು ಮುಂತಾದ ಹೆಸರುಗಳಿದ್ದವೆಂದೂ ವಿದ್ಯಾರಣ್ಯರ ಗುರುಗಳಾದ ಭಾರತೀತೀರ್ಥರು ಏಕಾಂತವಾಗಿ ತಪಸ್ಸುಮಾಡುವದಕ್ಕೆಂದು ಆರಿಸಿಕೊಂಡಿದ್ದರಿಂದ (ಸುಮಾರು ಕ್ರಿ. ಶ. 1346 ರಲ್ಲಿ) ಇನ್ನೊಂದಕ್ಕೂ ಗೌಣವಾಗಿ 'ಶೃಂಗೇರಿ' ಎಂಬ ಹೆಸರು ಬಂದಿತೆಂದೂ ಅವರ ಕಲ್ಪನೆ. ಇದಕ್ಕೆ ಬಹುಜನಸಮ್ಮತಿಯು ಇರುವಂತೆ ಈವರೆಗೆ ಕಾಣಿಸಲಿಲ್ಲ.

ಕೂಡಲಿಯ ಮಠವು ಈಗ ಎರಡು ಶಾಖೆಗಳಾಗಿ ಒಡೆದುಕೊಂಡಿದೆ. ಒಂದು "ಕೂಡಲಿಶೃಂಗೇರಿ' ಎಂಬ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ. ಅವರ ಅಭಿಪ್ರಾಯದಂತೆ ಶೃಂಗೇರಿಯ ಪೀಠಾಧಿಪರು ಅವರೇ ಆಗಿದ್ದು ಶೃಂಗೇರಿಯ ಪೀಠದವರು ಶಾರದಮ್ಮನವರ ಪೂಜೆಗೆ ಅವರಿಂದ ನಿಯಮಿಸಲ್ಪಟ್ಟವರ ಪೀಳಿಗೆಯವರು. ಈ ಕೂಡಲಿಮಠಕ್ಕೆ ಹಕ್ಕುದಾರರು ಯಾರು ?–ಎಂಬ ಬಗ್ಗೆ ವಿವಾದವು ನಡೆದು ಈಗ ಈಗಿನ ಪೀಠಾಧಿಪರಾದ ಶ್ರೀಸಚ್ಚಿದಾನಂದಶಂಕರಭಾರತೀಸ್ವಾಮಿಗಳವರ ಅಧೀನವಾಗಿಯೇ ಮಠದ ಸ್ವಾಸ್ಥ್ಯಗಳೆಲ್ಲ ಇರುತ್ತವೆ. 1873ನೆಯ ಇಸವಿಯಿಂದ ತಾವು ನಿಜವಾದ ಹಕ್ಕುದಾರರೆಂತ ಹೇಳಿಕೊಂಡುಬಂದಿರುವ ಮತ್ತೊಂದು ಶಾಖೆಯವರಿಗೆ ಕೆಲವು ಭೂಮಿಕಾಣಿಗಳೂ ಶಿಷ್ಯವರ್ಗವೂ ಸೇರಿರುತ್ತವೆ. ಅವರು ಹೇಳುವದೇನೆಂದರೆ, 'ಶ್ರೀನರಸಿಂಹಭಾರತಿಸ್ವಾಮಿಗಳು ಸುಮಾರು 1580ರಲ್ಲಿ ಯಾತ್ರೆಗೆ ಹೋಗಿದ್ದಾಗ ಶೃಂಗೇರಿಯ ಜನರು 'ಪುಸ್ತಕ ಸಂನ್ಯಾಸ'ಕ್ರಮದಿಂದ ನರಸಿಂಹಭಾರತಿಸ್ವಾಮಿ ಎಂಬವರನ್ನು ('ರಾಮಚಂದ್ರ ಭಾರತಿ'ಯವರನ್ನಲ್ಲ) ಶೃಂಗೇರಿಪೀಠದಲ್ಲಿ ಕುಳ್ಳಿರಿಸಿದರು. ಆಗ್ಗೆ ಕೆಳದಿಯಲ್ಲಿ ಆಳುತ್ತಿದ್ದ ವೆಂಕಟಪ್ಪನಾಯಕ ( 1553–1629 ) ನಲ್ಲಿಗೆ ಈ ವಿವಾದವು ಹೋಗಲು ಆತನು ಹೊಸ ಸಂನ್ಯಾಸಿಯು ಶಾರದಮ್ಮನವರ ಪೂಜೆಗೇ ನಿಂತು ಅಲ್ಲಿರುವ ಮಠದ ವಿಚಾರವನ್ನು ನೋಡಿಕೊಂಡಿರಬೇಕೆಂದು ನಿರ್ಣಯಿಸಿದನು.[1] ಶೃಂಗೇರಿಜಹಗೀರಿಯ ನಂ. 2 ಮತ್ತು 12ನೆಯ ಶಾಸನಗಳಲ್ಲಿ (ಪು. 348 ಮತ್ತು 374 Epigraphica Carnatika Kadur Dist.)

---

1. ಈ ವಿಷಯದಲ್ಲಿ 'ಗುರುವಂಶಕಾವ್ಯ'ದಲ್ಲಿ ೧೧ನೆಯ ಸರ್ಗದಲ್ಲಿ ಮೇಲಿನ ಅಭಿಪ್ರಾಯಕ್ಕೆ ವಿರುದ್ಧವಾದ ಶ್ಲೋಕಗಳು ಇರುವದಾಗಿ ಶೃಂಗೇರಿಮಠದವರ ಕಡೆಯಿಂದ ತಿಳಿದುಬಂದಿದೆ. 'ರಾಮಚಂದ್ರಭಾರತಿಗಳ ಶಿಷ್ಯನಾದ ನರಸಿಂಹಭಾರತಿ ಎಂಬಾತನು ಮಾಡಿದ ಗುರುದ್ರೋಹದಿಂದ ಅವನನ್ನು ಮಠದಿಂದ ಓಡಿಸಲಾಗಿ ರಾಜರ ಪ್ರೇರಣೆಯಿಂದ ಆತನು ಕೂಡಲಿಯಲ್ಲಿ ಉಳಿದನು. ಮುಂದೆ ಆತನ ಕಾಲಾನಂತರ ಮಠದ ಆಸ್ತಿಗಳನ್ನೆಲ್ಲ ಪುನಃ ಶ್ರೀಸಚ್ಚಿದಾನಂದಮುನೀಶ್ವರರಿಗೆ ರಾಜನು ಕೊಟ್ಟನು'– ಎಂಬುದು ಶ್ಲೋಕಗಳ ಸಾರ. ಗುರುವಂಶಕಾವ್ಯವನ್ನು ನಾವು ನೋಡಿಲ್ಲ.

ಕೂಡ್ಲಿಶೃಂಗೇರಿಯು ನರಸಿಂಹಭಾರತೀಸ್ವಾಮಿಗಳ 'ಚರಣಾರವಿಂದದ ಶಿಷ್ಯ' ಎಂದು ಬರೆದುಕೊಂಡಿರುತ್ತಾರೆ; 'ಕರಕಮಲಸಂಜಾತ' ಎಂದು ಬರೆದುಕೊಂಡಿಲ್ಲ ವಸ್ತುಸ್ಥಿತಿಯು ಹೀಗಿದ್ದರೂ ಶೃಂಗೇರಿಯವರು ತಾವೇ ಶೃಂಗೇರಿಮಠದ ಜಗದ್ ಗುರುಗಳೆಂದು ಹೇಳಿಕೊಳ್ಳುತ್ತಾಬಂದಿರುತ್ತಾರೆ. ಹೊಸ ಶೃಂಗೇರಿಯಲ್ಲಿ ಉಳಿದ ನರಸಿಂಹಭಾರತೀಸ್ವಾಮಿಗಳ ಮಠಕ್ಕೆ ಹಲವು ಗ್ರಾಮಗಳು ದಾನವಾಗಿ ಬಂದವು; ಅವರ ಕೀರ್ತಿಯೂ ಹಬ್ಬಿತು. ಅವರನ್ನು ಜಗದ್ಗುರುಗಳೆಂದು ಪ್ರಧಾನ ಶೃಂಗೇರಿಮಠದ ಅಧಿಪತಿಗಳೂ ಭಕ್ತರೂ ಸರಕಾರದವರೂ ಹೇಗೆ ಒಪ್ಪಿದರೆಂಬುದು ಈಗ ನಿಶ್ಚಯವಾಗುವಂತಿಲ್ಲ. ಮಹಾರಾಷ್ಟ್ರದಲ್ಲಿ ಆಳುತ್ತಿದ್ದ ಸಾಹು ಮಹಾರಾಜನ ಆಮಂತ್ರಣದಿಂದ ಸಾತಾರೆಗೆ ಬಂದಿದ್ದ ಕೂಡ್ಲಿ ಶೃಂಗೇರಿಯ ಶಂಕರಭಾರತೀಸ್ವಾಮಿಗಳು ( ನರಸಿಂಹಭಾರತೀಸ್ವಾಮಿಗಳ ಶಿಷ್ಯರು ) ಮತ್ತು ಅಲ್ಲಿಗೇ ಬಂದಿದ್ದ ಸಂಕೇಶ್ವರ ಮತ್ತು (ಹೊಸ) ಶೃಂಗೇರಿಯ ಸ್ವಾಮಿಗಳು– ಈ ಮೂವರ ಸಂನಿಧಿಯಲ್ಲಿ ಮಹಾರಾಜನು ಕ್ರಿ. ಶ. 1725ರಲ್ಲಿ ಈ ಮೂರೂ ಮಠಗಳಿಗೆ ಆಚಾರವಿಚಾರಕ್ಕೆ ಒಳಪಟ್ಟ ಕ್ಷೇತ್ರಗಳನ್ನು ಗೊತ್ತುಮಾಡಿದನು. ಆ ತೀರ್ಪಿನಂತೆ ಸಂಕೇಶ್ವರಕ್ಕೆ ಉತ್ತರಭಾಗ. (ಕೂಡ್ಲಿ)ಶೃಂಗೇರಿಗೆ ದಕ್ಷಿಣಭಾಗ, (ಹೊಸ) ಶೃಂಗೇರಿಗೆ ಸ್ಥಲದೇವತೆಯ ಪೂಜೆ– ಹೀಗೆ ವಿಭಾಗಮಾಡಿದನು. ಸಂಕೇಶ್ವರಮಠದ ಚರಿತ್ರೆ ಇದಕ್ಕೆ ಆಧಾರ. ಶೃಂಗೇರಿಯ ಸ್ವಾಮಿಗಳು ಕ್ರಿ. ಶ. 1742ರಲ್ಲಿ ಮಠಾಧಿಪತಿಗಳ ಬಿರುದುಬಾವಲಿಗಳೊಡನೆ ಸಂಚಾರಕ್ಕೆ ಹೊರಡಲು ಕೆಳದಿಯ ಇಮ್ಮಡಿ ಬಸಪ್ಪನಾಯಕನು ಪೂರ್ವಪದ್ಧತಿಗೆ ವಿರೋಧವಾಗಿ ಹಾಗೆ ಮಾಡದಂತೆ ತಡೆಗಟ್ಟಿದನು. ಇನ್ನೊಂದು ಸಲ ಕ್ರಿ. ಶ. 1806ರಲ್ಲಿ ದಿವಾನ ಪೂರ್ಣಯ್ಯನವರು ಹೀಗೆಯೇ ಅಡ್ಡಿಮಾಡಿ ಹುಕುಂಕೊಟ್ಟಿರುತ್ತಾರೆ. ಆದರೂ ಶೃಂಗೇರಿಯವರು ಕ್ರಮಕ್ರಮವಾಗಿ ತಮ್ಮದು ಜಗದ್ಗುರುಪೀಠವೆಂಬುದನ್ನು ಶಾಸನಾದಿಗಳ ಮೂಲಕ ಪ್ರಚುರಪಡಿಸಿಕೊಂಡುಬಂದಿರುತ್ತಾರೆ.

ಈ ಮೇಲೆ ನಾವು ಸಂಗ್ರಹಿಸಿಕೊಟ್ಟಿರುವ ವಿವರಣೆಯನ್ನು Indian Patriot ('ಭಾರತದೇಶಾಭಿಮಾನಿ' ಎಂಬರ್ಥದ) ಇಂಗ್ಲಿಷ್ ವರ್ತಮಾನಪತ್ರಿಕೆಯ 1912 ಇಸವಿ, ಏಪ್ರಿಲ್ 19 ಮೇ 15, ಮತ್ತು ಜೂನ್ 5– ಈ ತಾರೀಖುಗಳ ಸಂಚಿಕೆಯಿಂದ ತೆಗೆದುಕೊಂಡಿದೆಯೆಂದು ಬೆಂಗಳೂರುಶಾಖೆಯ ಕೂಡಲಿಶೃಂಗೇರಿಮಠದವರು ಹೇಳುತ್ತಿದಾರೆ. '1879ನೆಯ ಹೇವಿಳಂಬಿ ಸಂವತ್ಸರದ ಕೂಡಲಿಶೃಂಗೇರಿಮಹಾಸಂಸ್ಥಾನದ 'ಆಡಳಿತದರ್ಶನ'ದಲ್ಲಿ ಸ್ವಲ್ಪ ಹೆಚ್ಚುಕಡಿಮೆ ಇದೇ ವಿವರವು ಸಂಕ್ಷಿಪ್ತವಾಗಿ ಇರುತ್ತದೆ. ಆ ವೃತ್ತಾಂತದಲ್ಲಿ ಕರ್ಣಾಟಕದ ರಾಜರುಗಳಿಂದಲೇ ಅಲ್ಲದೆ ಔರಂಗಜೇಬ, ಇಬ್ರಾಹಿಂ ಆದಿಲ್‌ಷಹ, ಪೇಶ್ವೆಯರು, ಮಹಾರಾಷ್ಟ್ರೀಯ ಅರಸರುಕೂಡ ಕೂಡಲಿಶೃಂಗೇರಿಮಠಕ್ಕೆ ಮಾಡಿದ ಸಹಾಯದ ಉಲ್ಲೇಖವಿದೆ.

ಬೊಂಬಾಯಿಯಲ್ಲಿ (ಕ್ಷೇಮರಾಜ ಶ್ರೀಕೃಷ್ಣದಾಸ ಶ್ರೇಷ್ಠಿಯವರ) ವೆಂಕಟೇಶ್ವರಮುದ್ರಾಲಯದಲ್ಲಿ ಅಚ್ಚಾಗಿರುವ ಶ್ರೀಕಾಶೀ ಶೇಷವೆಂಕಟಾಚಲಶಾಸ್ತ್ರಿಗಳು ಸಂಪಾದಿಸಿರುವ ಶಾರೀರಕಭಾಷ್ಯದ ಭೂಮಿಕೆ (ಪು. ೩೨)ಯಲ್ಲಿರುವ ಈ ಕಥೆಯು ಹೀಗಿದೆ :

"೧೪೨೨ನೇ ಶಕ(?)ವರ್ಷದಲ್ಲಿ ಶ್ರೀಶಂಕರಾಚಾರ್ಯರಿಂದ ಹತ್ತನೆಯವರಾದ ಶ್ರೀಶಂಕರಭಾರತೀಸ್ವಾಮಿಗಳವರು ಶ್ರೀಗೋವಿಂದಭಗವತ್ಪಾದರ (?) ಗುಹೆಯನ್ನು ನೋಡುವದಕ್ಕೆ ಹಿಮಾಲಯಕ್ಕೆ ಹೋಗಿ ಗುಹಾಪ್ರವೇಶಮಾಡುವಾಗ 'ಇಷ್ಟು ದಿನಕ್ಕೆ ನಾನು ಹೊರಕ್ಕೆ ಬರುವೆನು, ಹಾಗೆ ಬಾರದೆ ಇದ್ದರೆ ನಿಮ್ಮೊಳಗೆ ಒಬ್ಬರನ್ನು ಗುರುವಾಗಿ ಆರಿಸಿಕೊಂಡು ಪೀಠದಲ್ಲಿ ಕೂರಿಸಿರಿ' ಎಂದರಂತೆ. ಅವರು ಕಾಲದೊಳಗೆ ಬಾರದ್ದರಿಂದ ಶಿಷ್ಯರು ಹಿಂದಕ್ಕೆ ಬಂದು ಕೂಡಲಿಯನ್ನು ಸೇರಿದರು. ಇತ್ತ ಗುಹೆಯಿಂದ ಹೊರಹೊರಟ ಶಂಕರಭಾರತಿಗಳೂ ಅಲ್ಲಿಗೆ ಬಂದು ಸೇರಿದರು. ಶೃಂಗೇರಿಯಲ್ಲಿ ಒಬ್ಬರಿಗೆ ಪುಸ್ತಕಸಂನ್ಯಾಸವನ್ನು ಕೊಟ್ಟಿದ್ದ ಮಠಾಧಿಕಾರಿಗಳು ಅವರಿಗೆ ಶೃಂಗೇರಿಯನ್ನು ಪ್ರವೇಶಿಸಲು ಅವಕಾಶವನ್ನು ಕೊಡಲಿಲ್ಲ. ಸ್ವಾಮಿಗಳ ಶಿಷ್ಯರು ನ್ಯಾಯಾಲಯದಲ್ಲಿ ದೂರುಕೊಟ್ಟರು. 'ಹೊಸ ಸಂನ್ಯಾಸಿಗಳು ಶಾರದಾ ಪೂಜೆಯನ್ನು ಮಾಡಿಕೊಂಡು ಶೃಂಗೇರಿಯಲ್ಲಿಯೇ ಇರಬೇಕು ; ಶಂಕರಭಾರತೀ ಸ್ವಾಮಿಗಳವರು ದೇಶಸಂಚಾರಾದಿಗಳನ್ನು ಮಾಡಿಕೊಂಡು ಕೂಡಲಿಯಲ್ಲಿರಬೇಕು' ಎಂದು ನ್ಯಾಯಾಲದಲ್ಲಿ 1855ನೇ ಜನವರಿ 31ರಲ್ಲಿ ತೀರ್ಮಾನವಾಯಿತು." ಇಲ್ಲಿ ಸಂಗ್ರಹಿಸಿಕೊಟ್ಟಿರುವ ಈ ವೃತ್ತಾಂತವು 'ಶ್ರೀಸಂಸ್ಥಾನಸಂಕೇಶ್ವರಮಠ. ಕರವೀರ ವ ಸಂಕೇಶ್ವರಚಾ ಇತಿಹಾಸ್'' ಎಂಬ ಮಹಾರಾಷ್ಟ್ರಪುಸ್ತಕದಲ್ಲಿ ಅಚ್ಚಾಗಿದೆಯಂತೆ.

ಈಗ ಈ ವಿಷಯದಲ್ಲಿ ಶ್ರೀ|| ಕೆ. ಆರ್. ವೆಂಕಟರಾಮನ್‌ರವರು ತಮ್ಮ ಅಭಿಪ್ರಾಯವನ್ನು ಪ್ರಕಟಿಸಿ ನಮಗೆ ಬರೆದಿರುವದರ ಸಾರವೇನೆಂದರೆ :—

೧

(೧) ಮೈಸೂರು ಗೆಜಿಟಿಯರ್ V–p. 1307ರಲ್ಲಿ ಹೀಗಿದೆ :

Kudali. a sacred village in Shimoga Taluk, at the confluence of the Tunga and Bhadra, is the seat of **a matha connected with the one at Sringeri, the original Guru having been appointed by the Sringeri Swami abont 528 years ago**

**to minister to the smarthas of Maharastra descent.**

ಈ ಗ್ರಂಥವನ್ನು ಪ್ರಕಟಿಸುವದಕ್ಕಿಂತ 528 ವರ್ಷಗಳ ಹಿಂದೆ ಶೃಂಗೇರಿ ಸ್ವಾಮಿಗಳಿಂದ ಮಹಾರಾಷ್ಟ್ರವಂಶೀಯರಾದ ಸ್ಮಾರ್ತರ ಆಚಾರವಿಚಾರಗಳನ್ನು ನೋಡಿಕೊಳ್ಳುವದಕ್ಕೆಂದು ಸ್ಥಾಪಿತವಾದ ಮಠವು ಕೂಡಲಿ ಎಂಬ ಪವಿತ್ರಸ್ಥಲದಲ್ಲಿದೆ—ಎಂದು ವಾಕ್ಯದ ಅರ್ಥ.

(೨) ಶೃಂಗೇರಿಯಲ್ಲಿ 1500ರಲ್ಲಿದ್ದ ಪೀಠಾಧಿಪತಿಗಳು ಪುರುಷೋತ್ತಮ ಭಾರತಿಗಳು ; ಶ್ರೀಕಾಶೀ ಶೇಷ ವೆಂಕಟಾಚಲಶಾಸ್ತ್ರಿಗಳು ಹೇಳುವಂತೆ 'ಶಂಕರ ಭಾರತಿ'ಗಳಲ್ಲ.

೨

(೧) ಕೂಡಲಿಮಠದವರ ರಿಕಾರ್ಡಿನಲ್ಲಿರುವಂತೆ 1582ರಲ್ಲಿ 'ರಾಮಚಂದ್ರಭಾರತಿ'ಗಳೆಂಬ ಹೆಸರಿನ ಸ್ವಾಮಿಗಳು ಇರಲಿಲ್ಲ; ಆಗ (ಐದನೆಯ) ನರಸಿಂಹಭಾರತೀಸ್ವಾಮಿಗಳಿದ್ದರು.

(೨) ರಾಮಚಂದ್ರಭಾರತಿಗಳು ವಿಷುಸಂವತ್ಸರದಲ್ಲಿಯೂ ಮುಂದಿನ ವರ್ಷವೂ (ಕ್ರಿ. ಶ. 1583) ಬರೆದುಕೊಟ್ಟರೆಂಬ "ಬಿನ್ನವತ್ತಳೆ"ಗಳ ಕನ್ನಡವು ಬಹಳ ಇತ್ತೀಚಿನ ಭಾಷೆಯಂತಿದೆ, ೧೬ನೆಯ ಶತಮಾನಕ್ಕೆ ಸೇರಿದ್ದಾಗಿಲ್ಲ.

(೩) ಶೃಂಗೇರಿಯಲ್ಲಿ 1582, 1583ರಲ್ಲಿದ್ದ ನರಸಿಂಹಭಾರತೀಸ್ವಾಮಿಗಳಿಗೆ ವಿದ್ಯಾನರಸಿಂಹಭಾರತೀ(ಸ್ವಾಮಿ)ಗಳೆಂದೂ ಹೆಸರಿತ್ತು (M. A. R. 1934 No. 51.)

(೪) ಯುವ (1576)ಸಂವತ್ಸರದ ಕಾರ್ತಿಕ ಬಹುಳ ೧೫ರಲ್ಲಿ ಸಂಕಣ್ಣನಾಯಕನು ನರಸಿಂಹಭಾರತಿ (ಅಮ್ಮಾಜಿಸ್ವಾಮಿ)ಗಳ ಶಿಷ್ಯರಾದ ವಿದ್ಯಾರಣ್ಯಸ್ವಾಮಿಗಳ ನಡತೆಯನ್ನು ವಿಚಾರಮಾಡಿ ಮಹಾಜನರ ಹೇಳಿಕೆಯಂತೆ ಅವರು ಮಠಾಧಿಪತಿಗಳಾಗಿರಲು ಅನರ್ಹರೆಂದು ತೀರ್ಮಾನವಿತ್ತನು.

(೫) ಬ್ರಹ್ಮೇಶಭಟ್ಟನೆಂಬಾತನು ಕೂಡಲಿಮಠವನ್ನು ಸ್ವಾಧೀನಪಡಿಸಿಕೊಂಡನು, ಶಿವಪ್ಪನಾಯಕನು ಅವನು ಪೀಠಕ್ಕೆ ಅನರ್ಹನೆಂದು ಗೊತ್ತುಮಾಡಿ ಅಮ್ಮಾಜಿಗಳಿಗೆ ಕೊಟ್ಟಿದ್ದ ಗ್ರಾಮಗಳನ್ನು ಶೃಂಗೇರಿಮಠಕ್ಕೆ ಕೊಟ್ಟನು. (ಶಾರ್ವರಿ ಭಾದ್ರಪದ ಕ್ರಿ. ಶ. 166.)

(೬) ಕ್ರಿ. ಶ. 1807ರಲ್ಲಿ ದಿವಾನ ಪೂರ್ಣಯ್ಯನವರು ಶೃಂಗೇರಿಸ್ವಾಮಿಗಳಿಗೆ ಮಾತ್ರವೇ ಅಡ್ಡಪಾಲಕಿಯ ಮರ್ಯಾದೆ ಬಿರುದು ಸೇರತಕ್ಕದ್ದೆಂದೂ

ಮಿಕ್ಕ ಮಠಗಳ ವಿಷಯದಲ್ಲಿ ಶೃಂಗೇರಿಯ ಜಗದ್ಗುರುಗಳೇ ಯೋಗ್ಯನಿರೂಪ ಗಳನ್ನು ಕೊಡತಕ್ಕವರೆಂದೂ (1810) ಹುಕುಂಮಾಡಿರುತ್ತಾರೆ.

(೭) ಸಾತಾರೆಯ ಶಂಭುಛತ್ರಪತಿಯು ಶೃಂಗೇರಿಸ್ವಾಮಿಗಳಿಗೇ(ಕೂಡಲಿ ಗಲ್ಲ) ಇನಾಮುಜಮೀನುಗಳೇ- ಮುಂತಾದವು ಸೇರತಕ್ಕದ್ದೆಂದು ಹುಕುಂ ಮಾಡಿರುತ್ತಾನೆ.

(೮) ಕೆಲವು ಬಿರುದುಮಾನಮರ್ಯಾದೆಗಳ ಬಗ್ಗೆ ಹೈದರಾಬಾದಿನಲ್ಲಿ ಯೂ ಮೈಸೂರಿನಲ್ಲಿಯೂ ಕೂಡಲಿಯವರು ಮಾಡಿಕೊಂಡ ದೂರುಗಳನ್ನು ತಳ್ಳಿಹಾಕಿ ಹೈದರಾಬಾದ್ ಸರಕಾರದವರೂ (ಕ್ರಿ. ಶ. 1845) ಮೈಸೂರು ದಿವಾನರೂ (1884), ಮೈಸೂರು ರೆಸಿಡೆಂಟರೂ (1895) ಶೃಂಗೇರಿಪರವಾಗಿ ಯೇ ಫೈಸಲುಕೊಟ್ಟಿರುತ್ತಾರೆ.

ಈವರೆಗೆ ನಾವು ಬರೆದಿರುವ ವಿವರಗಳು ವಾಚಕರಿಗೆ ದಿಗ್ಭ್ರಮೆಯನ್ನು ಉಂಟುಮಾಡುವದು ಸ್ವಾಭಾವಿಕವಾಗಿದೆ. ಎರಡು ಮಠಗಳ ಕಡೆಯವರೂ ತಮ್ಮ ರಿಕಾರ್ಡುಗಳನ್ನು ತೋರಿಸುತ್ತಿದಾರೆ; ಎರಡು ಕಡೆಯವರಿಗೂ ಮಹಾರಾಷ್ಟ್ರದವರ, ಹೈದರಾಬಾದಿನವರ ಮತ್ತು ಮೈಸೂರಿನವರ ಸಹಾಯ ವಾಗಿದೆ. ಈ ಕಥೆಯು ಪುರಾಣಗಳಲ್ಲಿರುವ ಪುಂಡರೀಕವಾಸುದೇವನ ಕಥೆಯಾಗಿ ಕಾಣುತ್ತಿದೆ. ನಿಜವಾದ ವಾಸುದೇವನು ಯಾರು ? ವಾಸುದೇವನೇ ಬಲ್ಲ ! ಋಷಿಮೂಲವನ್ನೂ ನದೀಮೂಲವನ್ನೂ ಹೆಚ್ಚಾಗಿ ಶೋಧಿಸುವದಕ್ಕೆ ಹೋಗ ಬಾರದು–ಎಂಬ ನಾಣ್ಣುಡಿಯೊಂದುಂಟು. ನಾವೂ ಆ ಅಭಿಪ್ರಾಯಕ್ಕೆ ತಲೆಬಾಗಿ ಈ ಪುರಾಣವನ್ನು ಇಲ್ಲಿಗೆ ನಿಲ್ಲಿಸುವೆವು.

ಕೂಡಲಿಯ ಮಠದ ಗುರುಪರಂಪರೆಯಲ್ಲಿ ೭೭ ಗುರುಗಳ ಹೆಸರುಗಳಿವೆ. ಹೆಚ್ಚಿಗೆ ವಿಷಯಗಳೇನೂ ಚರಿತ್ರಾರ್ಹವಾಗಿ ಸಿಕ್ಕಿಲ್ಲವಾದ್ದರಿಂದ ಅವನ್ನು ಇಲಿ ಬರೆಯಲಿಲ್ಲ.

## (೨) ಶಿವಗಂಗೆ

ಈ ಸಂಸ್ಥಾನವು ಬೆಂಗಳೂರಿನ ಪಶ್ಚಿಮಕ್ಕೆ ಸುಮಾರು ೩೪ ಮೈಲು ದೂರ ದಲ್ಲಿರುವ ಶಿವಗಂಗೆಬೆಟ್ಟದ ಉತ್ತರದ ತಪ್ಪಲಲ್ಲಿದೆ.

ಈ ಮಠದ ವಿಷಯಕ್ಕೆ ಶ್ರೀ|| ಕೆ. ಆರ್. ವೆಂಕಟರಾಮಯ್ಯನವರು ಬರೆದಿರುವ ದೇನೆಂದರೆ : ಶೃಂಗೇರಿಯ ಅಭಿನವನೃಸಿಂಹಭಾರತಿ(ಪ್ರಥಮ)–ಇವರು ಅಲ್ಲಿ[1] ಮೈಸೂರು ರಾಜಒಡೆಯರ ಪ್ರಾರ್ಥನೆಯಂತೆ ಶಿವಗಂಗೆಯಲ್ಲಿ ಒಂದು ಮಠವನ್ನು ಸ್ಥಾಪಿಸಿ ತಮ್ಮ ಶಿಷ್ಯರಾದ ಶಂಕರಭಾರತಿಗಳನ್ನು ಅಲ್ಲಿ ಪೀಠಾಧಿಪತಿಗಳನ್ನಾಗಿ

ಮಾಡಿದರು. (KRTTW. 50), ಈ ಪೀಠದ ಅಧ್ಯಕ್ಷರಾಗಿದ್ದ ಅಭಿನವೋದ್ಧಂಡಗಂಗಾಧರಭಾರತಿಗಳು ತಮ್ಮ ಶಿಷ್ಯರ ವರ್ತನೆಯಿಂದ ಅಸಂತುಷ್ಟರಾಗಿ ಬೇರೊಬ್ಬ ಸ್ವಾಮಿಗಳನ್ನು ಪೀಠದಮೇಲೆ ಇಡಬೇಕೆಂದು ಪ್ರಾರ್ಥಿಸಿದ ದಾಖಲೆಗಳು (1841, 43, 47) ಇವೆ.

ಈ ಮಠದವರೂ ಮೇಲಿನ ವಿಷಯಕ್ಕೆ ಉಪೋದ್ಬಲಕವಾಗಿ ಕೆಲವು ವಿಷಯಗಳನ್ನು ನಮಗೆ ಬರೆದುಕೊಟ್ಟಿರುತ್ತಾರೆ. ಶ್ರೀಶೃಂಗೇರೀ ಶಿವಗಂಗಾಜಗದ್ಗುರುಪೀಠವೆಂದೇ ಇದಕ್ಕೆ ಹೆಸರು. ಕಾಲಟಿಯಲ್ಲಿ ಶ್ರೀಸಚ್ಚಿದಾನಂದಶಿವಾಭಿನವನೃಸಿಂಹಭಾರತೀಸ್ವಾಮಿಗಳ ದಿವ್ಯಸನ್ನಿಧಿಯಲ್ಲಿ 1910ನೆಯ ಫೆಬ್ರವರಿ 21 (ಸೌಮ್ಯ ಮಾಘ ಶು. ೧೨) ಶ್ರೀಶಂಕರಭಗವತ್ಪಾದರವರ ಮತ್ತು ಶ್ರೀಶಾರದಾಂಬೆಯ ವಿಗ್ರಹಗಳ ಪ್ರತಿಷ್ಠೆಯು ನಡೆದಾಗ ಶಿವಗಂಗೆಯ ಸ್ವಾಮಿಗಳೂ ಸಂನಿಹಿತರಾಗಿದ್ದರು. ಅದನ್ನು ಪ್ರಕೃತಗ್ರಂಥಕರ್ತರು ಕಣ್ಣಾರೆ ನೋಡಿದ್ದಾರೆ. ಆದ್ದರಿಂದ ಈ ಮಠದ ವಿಷಯಕ್ಕೆ ಯಾವ ವಿವಾದವೂ ಇಲ್ಲ.

## (೩) ಸಂಕೇಶ್ವರಮಠ

ಈ ಪೀಠದ ವಿಷಯಕ್ಕೆ ಕಾ. ಶೇ. ವೆಂಕಟಾಚಲಶಾಸ್ತ್ರಿಗಳು ಬರೆದಿರುವುದೇನೆಂದರೆ: ಕೂಡಲೀಪೀಠವನ್ನು ಸ್ಥಾಪಿಸಿದ ಶ್ರೀಶಂಕರಭಾರತೀಸ್ವಾಮಿಗಳು ಮತ್ತೆ ಕಾಶೀಯಾತ್ರೆಗೆ ಹೊರಟು ಮಧ್ಯಮಾರ್ಗದಲ್ಲಿ ಸಂಕೇಶ್ವರಗ್ರಾಮದ ಉತ್ತರದಲ್ಲಿರುವ ವಲ್ಲಭಗಡವೆಂಬಲ್ಲಿಗೆ ಹರಿದ್ರಾದೇವಿಯ ದರ್ಶನಕ್ಕಾಗಿ ಬಂದರು. 'ನೀವು ಸಂಕೇಶ್ವರನ ಪೂಜೆಯನ್ನು ಮಾಡಿರಿ' ಎಂದು ಅವರಿಗೆ ಸ್ವಪ್ನವಾಗಲಾಗಿ ಕಶ್ಮಲಾಪಹಾರಿ (ಹಿರಣ್ಯಕೇಶೀ) ನದಿಯಲ್ಲಿ ದಿನವೂ ಮಿಂದು ಈಶ್ವರಪೂಜೆಯನ್ನು ಮಾಡುತ್ತಿದ್ದರು. ಒಮ್ಮೆ ಬಿಜಾಪುರ ಬಾದಷಹನ ಸೇನಾಪತಿಯಾದ ಇಬ್ರಾಹಿಂ ಕ್ಯಾದಲ್ ಎಂಬಾತನು ಅಲ್ಲಿಗೆ ಬಂದು ಅವರಿಗೆ ಕೆಲವು ಗ್ರಾಮಗಳನ್ನು ಕೊಟ್ಟನು. ಮುಂದೆ ಕೊಲ್ಲಾಪುರದ ಮಹಾರಾಜರು ಕೆಲವು ಗ್ರಾಮಗಳನ್ನು ಕೊಟ್ಟರು. ಅಲ್ಲಿಂದ ಮುಂದಕ್ಕೆ ಮಠಕ್ಕೆ 'ಕರವೀರ'ಮಠವೆಂದೇ ಹೆಸರು ಬಂತು. ಈ ಮಠದಲ್ಲಿ ಶಂಕರಭಾರತಿಗಳು ಗೃಹಸ್ಥರೊಬ್ಬರಿಗೆ ಸಂನ್ಯಾಸವನ್ನು ಕೊಟ್ಟು ಪೀಠಾಧಿಪರನ್ನಾಗಿ ಮಾಡಿದ್ದರಿಂದ ಆ ಸಂಪ್ರದಾಯವೇ ಈಗಲೂ ನಡೆದುಕೊಂಡುಬಂದಿದೆ. ಈ ಎರಡು ಮಠಗಳಲ್ಲಿಯೂ 'ಭಾರತೀ' ಎಂಬ ಹೆಸರೇ ಬಂದಿರುವುದಕ್ಕೆ ಶೃಂಗೇರೀಸಂಪ್ರದಾಯಕ್ಕೆ ಸೇರಿರುವುದೇ ಕಾರಣ (ಪು. ೨೪–೩೫).

## ಕೂಡಲೀಕರವೀರಮಠಗಳ ಸಂಬಂಧ

ವಿಶಿಷ್ಟಾದೇವಿಯ ಮುಖದ್ವಾರದಿಂದ ಒಳಹೊಕ್ಕು ಚಿದಂಬರೇಶ್ವರನೇ ಶಂಕರಾಚಾರ್ಯರಾಗಿ ಯುಧಿಷ್ಠಿರಶಕ ೨೭೩೫ರಲ್ಲಿ ಸರ್ವಧಾರಿವರ್ಷದಲ್ಲಿ ಜನಿಸಿ

ದನು. ಆಚಾರ್ಯರು ನಾಲ್ಕು ಶಿಷ್ಯರನ್ನು ನಾಲ್ಕು ದಿಕ್ಕುಗಳಲ್ಲಿ ಸ್ಥಾಪಿಸಿದ ಪೀಠಗಳಿಗೆ ಅಧಿಪತಿಗಳನ್ನಾಗಿ ನೇಮಿಸಿದರು. ಶೃಂಗೇರಿಯಲ್ಲಿ ಕೆಲವು ಕಾಲವಿದ್ದು ಸರಸ್ವತಿಯ ವಾಕ್ಕನ್ನು ಸತ್ಯವಾಗಿಸಲೋಸುಗ 'ದಕ್ಷಿಣಕಾಶಿ' ಎಂದು ಪ್ರಸಿದ್ಧವಾದ ಕರವೀರಕ್ಷೇತ್ರದಲ್ಲಿ ಮಠವನ್ನು ಸ್ಥಾಪಿಸಿ ಇಲ್ಲಿ ವಿದ್ಯಾಧರ್ಮಪೀಠವನ್ನು ಸ್ಥಾಪಿಸಿರೆಂದು ಶಿಷ್ಯರಿಗೆ ಅಪ್ಪಣೆಯಿತ್ತು ಬೊಂಬಾಯಿನಗರದ ಹತ್ತಿರವಿರುವ "ವಿಮಲನಿರ್ಮಲ"ವೆಂಬ ಕ್ಷೇತ್ರದಲ್ಲಿ ಸಮಾಧಿಸ್ಥರಾದರು.[1]

ಮುಂದೆ ಅನೇಕ ವರ್ಷಗಳ ತರುವಾಯ ಶೃಂಗೇರಿಯ ಪೀಠಾಧಿಪರಾದ ವಿದ್ಯಾನೃಸಿಂಹಭಾರತೀಸ್ವಾಮಿಗಳವರು ತಮ್ಮ ಶಿಷ್ಯರಾದ ವಿದ್ಯಾಶಂಕರ ಭಾರತಿಗಳಿಗೆ ವ್ಯಾಸದತ್ತಚಂದ್ರಮೌಳೀಶ್ವರಲಿಂಗದ ಪೂಜೆಯನ್ನು ಯಥಾವಿಧಿಯಾಗಿ ಪೂಜಿಸುತ್ತಿರುವಂತೆ ಹೇಳಿ ಮಹಾಯಾತ್ರೆಗೆ ಹೋಗಿ ಹಿಂತಿರುಗಿದಾಗ ಶಿಷ್ಯಸ್ವಾಮಿಗಳು ತಾವೇ ನನ್ನನ್ನು ಇಲ್ಲಿ ಸ್ಥಾಪಿಸಿ ಈಗ ಮತ್ತೆ ಪೀಠವನ್ನು ಬಯಸುವದು ತಕ್ಕದ್ದಲ್ಲವೆಂದು ಬಿನ್ನವಿಸಿಕೊಂಡರು. ಇವನು ನಮ್ಮ ಶಿಷ್ಯನು ಎಂದು ಅವನನ್ನು ಉಪೇಕ್ಷೆಮಾಡಿ, ಕೂಡಲಿಯಲ್ಲಿ ಬೇರೆ ಒಂದು ಮಠವನ್ನು ಸ್ಥಾಪಿಸಿ ನಿಂತರು. ಬಳಿಕ ಕರವೀರ(ಕೊಲ್ಲಾಪುರದ) ಅರಸನ ಪ್ರಾರ್ಥನೆಯಂತೆ ತಮ್ಮ ಶಿಷ್ಯನನ್ನು ಅಲ್ಲಿಗೆ ಕಳುಹಿಸಿಕೊಟ್ಟರು. ಕೆಲವು ದಿನಗಳಾದ ಬಳಿಕ ಕೂಡಲಿಯಲ್ಲಿದ್ದ ಸ್ವಾಮಿಗಳು ಬಹಳ ವೃದ್ಧರಾಗಿದ್ದದ್ದರಿಂದ 'ಈ ಕೂಡಲೆ ನೀವು ಹೊರಟುಬರಬೇಕು ; ನೀವು ಬರುವದು ತಡವಾದರೆ ನೀವು ಪ್ರತ್ಯುತ್ತರವನ್ನು ಕಳುಹಿಸುವ ಬ್ರಾಹ್ಮಣನಿಗೇ ಸಂನ್ಯಾಸವನ್ನು ಕೊಟ್ಟು ಇಲ್ಲಿಗೆ ಕಳುಹಿಸಬೇಕು' ಎಂದು ಬರೆದರು. ಕರವೀರಸ್ವಾಮಿಗಳು ಕಳುಹಿಸಿಕೊಟ್ಟ ಬ್ರಾಹ್ಮಣಸಂನ್ಯಾಸಿಯು ಹರಿಹರಕ್ಕೆ ಬರುವದರೊಳಗೆ ವೃದ್ಧ ಸ್ವಾಮಿಗಳು ಸಮಾಧಿಸ್ಥರಾದರು. ಆ ಸಂನ್ಯಾಸಿಯು ಕೂಡಲಿಗೆ ಬರುವಹೊತ್ತಿಗೆ ಮಠದ ಸರ್ವಾಧಿಕಾರಿಯು ತನ್ನ ಕಡೆಯವರೊಬ್ಬರಿಗೆ ಪುಸ್ತಕಸಂನ್ಯಾಸವನ್ನು ಕೊಡಿಸಿ[2] ಪೀಠಕ್ಕೆ ಕೂರಿಸಿದ್ದನು. ಆದ್ದರಿಂದ ಕರವೀರದಿಂದ ಬಂದ ಸ್ವಾಮಿಯು ಅಲ್ಲಿಗೇ ಹಿಂತಿರುಗಿ ಬಂದು ಗುರುಸಂನ್ನಿಧಿಯಲ್ಲಿ ನಿಂತುಬಿಟ್ಟನು (ಪು. ३೭).

ಮುಂದೆ ಒಮ್ಮೆ ಕೂಡಲಿಯ ಸ್ವಾಮಿಗಳು ಸಾತಾರೆಗೆ ಬಂದು ತಮಗೂ ಕರವೀರದ ಪೀಠಾಧಿಪತಿಗಳಿಗೂ ಆಚಾರಾದಿವ್ಯವಸ್ಥೆಗಳಲ್ಲಿ ಸಮಾನಹಕ್ಕುಗಳಿರು

1. ಆನಂದಗಿರಿಯು ಹೇಳುವ 'ಶಂಕರರು' ಇವರೇ ಆಗಿರಬಹುದೆ ?

2. ಈ ದಂತಕಥೆಯಂತೆ ಕೂಡಲಿಮಠದವರೇ 'ಪುಸ್ತಕಸಂನ್ಯಾಸಿಗಳ ಪರಂಪರೆಯವರು' ಎಂದು ಕರವೀರಪೀಠದ ಅನುಯಾಯಿಗಳು ಹೇಳಿರುವಂತೆ ಆಯಿತು, ಕೂಡಲಿಮಠದ ದ್ವಿತೀಯಶಾಖೆಯವರು ಹೇಳುವಂತೆ ಶೃಂಗೇರಿಯವರಿಗೆ ಈ ಅಪವಾದ ವಿಲ್ಲವೆಂದಾಯಿತು.

ವಂತೆ ಮಾಡಿಸಿಕೊಡಬೇಕೆಂದು ಛತ್ರಪತಿಗಳ ಆಜ್ಞೆಯನ್ನು ಪಡೆಯುವದಕ್ಕೆ ಪ್ರಯತ್ನಮಾಡಿದರು. ಮಹಾರಾಜನು ಎಲ್ಲವನ್ನೂ ವಿಚಾರಮಾಡಿ ಕೂಡಲಿ ಸ್ವಾಮಿಗಳು ಅಲ್ಲಿಯ ದೇವಪೂಜೆಯನ್ನು ಮಾಡಿಕೊಂಡು ತುಂಗಭದ್ರಾಮಲಾಪಹಾರಿಣೀನದಿಗಳ ನಡುವೆ ಇರುವ ಭಾಗದಲ್ಲಿ ಆಚಾರವ್ಯವಹಾರಾದಿಗತನ್ನು ನೋಡಿಕೊಂಡಿರತಕ್ಕದ್ದು, ಮಲಾಪಹಾರಿಣಿಯ ಉತ್ತರಕ್ಕೆ ಪೂರ್ವಪಶ್ಚಿಮ ಸಮುದ್ರಗಳ ನಡುವೆ ಇರುವ ಭಾಗದಲ್ಲಿ ಕರವೀರಪೀಠಾಧಿಪರ ಅಧಿಕಾರವೇ ಇರತಕ್ಕದ್ದು–ಎಂದು ಇಬ್ಬರು ಸ್ವಾಮಿಗಳನ್ನೂ ಒಪ್ಪಿಸಿ ನಿರ್ಣಯಿಸಿದನು[1] (ಪು. ೩೬–೩೭).

ಇಲ್ಲಿ ನಾವು ಸಂಗ್ರಹಿಸಿಕೊಟ್ಟಿರುವಷ್ಟು ಭಾಗವನ್ನು ಶ್ರೀ|| ಕಾ. ಶೇ ವೆಂಕಟಾಚಲಶಾಸ್ತ್ರಿಗಳವರು ಪ್ರೊ. ರಾಜವಾಡೇಕೃತ "ಮರಾಠ್ಯಾಂ ಚ್ಯಾ ಇತಿಹಾಸಾಚೀಂ ಸಾಧನೇಂ" ಎಂಬ ಪುಸ್ತಕದಿಂದ ತೆಗೆದುಕೊಂಡದ್ದೆಂದು ಬರೆದಿರುತ್ತಾರೆ.

## ಕರವೀರ(ಸಂಕೇಶ್ವರ)ಮಠದ ವಿಷಯಕ್ಕೆ ಇನ್ನೊಂದು ಕಥೆ

ಸೋಮವಂಶದ ಕೃಷ್ಣರಾಜನೆಂಬಾತನು ಕ್ರಿ. ಶ. ೧೩ನೇ ಶತಮಾನದಲ್ಲಿ ಕರವೀರದಲ್ಲಿ ಆಳುತ್ತಿದ್ದನು. ಆತನ ಪ್ರಾರ್ಥನೆಯಂತೆ (ಮೊದಲಿನ ಕಥೆಯಲ್ಲಿ ಹೇಳಿರುವ) ಶಂಕರಭಾರತೀಸ್ವಾಮಿಗಳು ಬೊಂಬಾಯಿಯ ಹತ್ತಿರವಿರುವ 'ವಸಈ' ಗ್ರಾಮದ ಹತ್ತಿರವಿರುವ 'ವಿಮಲನಿರ್ಮಲ' ಎಂಬಲ್ಲಿ ಸಮಾಧಿಸ್ಥರಾದರು. ಈಗಲೂ ಅಲ್ಲಿ ಅವರದ್ದು ಒಂದು ಧರ್ಮಪೀಠವಿದೆ ಎಂದು ತಿಳಿಯಬರುತ್ತದೆ. ಹೀಗೆಯೇ ಸಂಕೇಶ್ವರ, ಖಿದ್ರಾಪುರ, ನೃಸಿಂಹವಾಡಿ, ಗೋಲವಣ, ಪೈಠಣ, ಕಾಶಿ–ಮುಂತಾದ ಸ್ಥಲಗಳಲ್ಲಿಯೂ ಕರವೀರದವರ ಪೀಠಗಳು ನಿರ್ಮಿತವಾಗಿವೆ.

ಕಿ. ಶ. ೧೫೦೦ರ ಸುಮಾರಿನಲ್ಲಿ ಸಂಕೇಶ್ವರದಲ್ಲಿ ಒಂದು ಮಠವನ್ನು ಮೇಲೆ ಹೇಳಿದ ಶಂಕರಭಾರತೀಸ್ವಾಮಿಗಳು–ಜಗದ್ಗುರು ದೇವ ಗೋಸಾವಿ ಎಂದೂ ಅವರಿಗೆ ಮತ್ತೊಂದು ಹೆಸರು– ಒಂದು ಮಠವನ್ನು ಸ್ಥಾಪಿಸಿದರು. ಕೊನ್ಹೇರ ರಾವ್ ಪಟವರ್ಧನ (ಕಾಗವಾಡಕರ) ಎಂಬ (ಪೇಶ್ವೆಗಳ) ಸೇನಾಪತಿಯು ಲೂಟಿ ಮಾಡಿ ಮಠಕ್ಕೆ ಬೆಂಕಿಹೊತ್ತಿಸಿದ್ದರಿಂದ ಅಲ್ಲಿದ್ದ ಆಚಾರ್ಯರು ಸಂಕೇಶ್ವರದಲ್ಲಿ

1. ಸಾಹುಛತ್ರಪತಿಯ ತೀರ್ಪಿನಲ್ಲಿರುವ ವಿಷಯಗಳಲ್ಲಿ ಕೂಡಲಿಯ ದ್ವಿತೀಯ ಶಾಖೆಯವರು ಹೇಳುವದಕ್ಕೂ ಇಲ್ಲಿರುವ ವೃತ್ತಾಂತಕ್ಕೂ ವೈಲಕ್ಷಣ್ಯವಿದೆ ಎಂಬುದನ್ನು ಲಕ್ಷಿಸಬೇಕು. ಇಲ್ಲಿ ಕರವೀರಪೀಠದವರಿಗೇ ಮುಖ್ಯಸ್ಥಾನ. ಈ ತೀರ್ಪನ್ನು ಶೃಂಗೇರಿಯ ನೃಸಿಂಹಭಾರತೀಸ್ವಾಮಿಗಳವರಿಗೂ ಸಾಹುಮಹಾರಾಜನು ಕಾರ್ತಿಕ ಕೃಷ್ಣ ೦ ಸೋಮವಾರದ (ಸಂವತ್ಸರದ ಹೆಸರಿಲ್ಲ) ಪುತ್ರವೊಂದರಲ್ಲಿ ತಿಳಿಸಿದ್ದಾಗಿ ಶಾಸ್ತ್ರಿಗಳು ಬರೆದಿರುತ್ತಾರೆ.

ಯೇ ನಿಂತಿತು. ಅಲ್ಲಿಂದ ಮುಂದಕ್ಕೆ ಮೊದಲನೆಯ ಆಚಾರ್ಯರಿಗೆ ಕರವೀರ ಪೀಠಾಧಿಪರೆಂದೂ ಸಂಕೇಶ್ವರಪೀಠಾಧಿಪರೆಂದೂ ಹೆಸರು ಬಳಕೆಗೆ ಬಂತು. ಈ ವೃತ್ತಾಂತವು ಮರೆತುಹೋದದ್ದರಿಂದ ಈಗ ಸಂಕೇಶ್ವರವೇ ಅನಾದಿಯೆಂದು ಹೇಳಿಕೊಳ್ಳುತ್ತಿದ್ದಾರೆ.

## ವಿಶೇಷ

ಮಿ॥ ರಾ॥ ಬೋಡಸ್‌ರವರು ಬರೆದಿರುವ 'ಶಂಕರಾಚಾರ್ಯ' ಎಂಬ ಪುಸ್ತಕದಲ್ಲಿಯೂ ಸ್ವಲ್ಪ ಹೆಚ್ಚುಕಡಿಮೆಯಾಗಿ ಮೇಲೆ ಹೇಳಿದ ವಿವರಗಳೇ ಕಂಡುಬರುತ್ತವೆ (ಪು. ೬೯–೭೭). ಅವರು ಕೊಟ್ಟಿರುವ ಇನ್ನೂ ಕೆಲವು ವಿವರಗಳನ್ನು ಇಲ್ಲಿ ವಾಚಕರ ಮನಸ್ಸು ಮತ್ತಷ್ಟು ಗಲಿಬಿಲಿಯಾದೀತೆಂದು ಕೊಡಲಿಲ್ಲ. ಕರವೀರದಲ್ಲಿ (೧) ಸಾಕ್ಷಾತ್ತಾಗಿ ಶಂಕರಾಚಾರ್ಯರು, (೨) ಶೃಂಗೇರಿಯ ಶಂಕರಭಾರತೀಸ್ವಾಮಿಗಳು, (೩) ವಿದ್ಯಾನರಸಿಂಹಭಾರತೀಸ್ವಾಮಿಗಳು–ಈ ಮೂವರಲ್ಲಿ ಒಬ್ಬರು ಮಠವನ್ನು ಸ್ಥಾಪಿಸಿದರು ಎಂದು ಕಥೆಗಳಿಂದ ಏರ್ಪಡುತ್ತದೆ. ಕರವೀರದವರಿಗೂ ಕೂಡಲಿ ಶೃಂಗೇರಿಯವರಿಗೂ ಯಾವದು ಗುರುಪೀಠ, ಯಾವದು ಶಿಷ್ಯಸ್ವಾಮಿ ಪೀಠ ?– ಎಂಬ ಬಗ್ಗೆ ವಿವಾದವಿದೆ. ಕರವೀರ, ಸಂಕೇಶ್ವರ– ಈ ಎರಡರ ಅನುಯಾಯಿಗಳಲ್ಲಿ ಯಾವದು ಮೂಲಮಠ? ಎಂಬ ಬಗ್ಗೆ ವಿವಾದವಿದೆ ಎಂದಾಯಿತು.

ಈಗ ಇನ್ನೊಂದು ವಿಷಯ. ಶ್ರೀಕೂಡಲಿ ಜಗದ್ಗುರುಗಳವರನ್ನು ನಾವು ಸಾಕ್ಷಾತ್ತಾಗಿ ನೋಡಿದಾಗ ಅವರು ಸಂಕೇಶ್ವರಮಠದಿಂದ ತಮ್ಮ ಮಠಕ್ಕೆ ಬಂದಿದ್ದ ಎರಡು ಪತ್ರಗಳನ್ನು ತೋರಿಸಿದ್ದರು. ಅವುಗಳಲ್ಲೊಂದು ಕ್ರಿ. ಶ. 1558ರಲ್ಲಿ ಬರೆದದ್ದು. ಅದರ ಪ್ರಾರಂಭದ ಒಕ್ಕಣೆ ಹೀಗಿದೆ :–

**ಪಿಂಗಲ ಸಂವತ್ಸರ ಮಾಘ ಶು. ೧೫. ಶಾ. ಶ. ೧೪೮೦ ಕ್ರಿ. ಶ. 1558 ಅತ್ಯಂತಪ್ರಿಯಶಿಷ್ಯ ಅಭಿನವವಿದ್ಯಾಶಂಕರಭಾರತೀ ಮಠ ಸಂಸ್ಥಾನ ಶಂಕೇಶ್ವರ ಯಾಣ (ಚ?) ತ್ರಿಸಂಧ್ಯಾಕಾಲೀ ವಿಜ್ಞಾಪನಾಪೂರ್ವಕ ಕೃತ ದಂಡವತ್ ಪ್ರಣಾಮಾಃ ||**

ಇದು

(೧) ಪಿಂಗಲಸಂವತ್ಸರದ ಮಾಘ ಶು. ೧೫ ಶಾ. ಶ. ೧೪೮೦.

'ಶ್ರೀಮಜ್ಜಗದ್ಗುರು ಶ್ರೀಕೂಡ್ಲಿ – ಶೃಂಗೇರಿಸಂಸ್ಥಾನದ 'ಪ್ರಾಚೀನಶಾಸನ –ಲೇಖನಸಂಗ್ರಹ'ದ ಒಂದನೆಯ ಭಾಗದ ೧೪ನೆಯ ಜಂಜರುಸಂಖ್ಯೆಯಪತ್ರ.[1]

1. ಶ್ರೀಶ್ರೀಗಳವರು ನಮಗೆ ಈ ಪುಸ್ತಕದ ಒಂದು ಪ್ರತಿಯನ್ನು ಕೊಟ್ಟಿದ್ದು ಮತ್ತೆ ಏಕೋ ಹಿಂದಕ್ಕೆ ತರಿಸಿಕೊಂಡುಬಿಟ್ಟರು. ಪುಸ್ತಕದಲ್ಲಿ ಕೆಲವು ತಪ್ಪುಗಳನ್ನು ತಿದ್ದಬೇಕಾಗಿದೆ ಎಂತ ನಮಗೆ ತಿಳಿಸಿರುತ್ತಾರೆ. ಆದ್ದರಿಂದ ಈ ಸಂಖ್ಯೆಗಳು ಹೆಚ್ಚುಕಡಿಮೆ ಯಾದೀತೇನೊ, ತಿಳಿಯದು.

(೨) ಇನ್ನೊಂದು (ಸಂಖ್ಯೆ ೧೦) ಸಂವತ್ಸರ ನಮೂದಿಲ್ಲದ ಪತ್ರ. ಊಹೆಯಿಂದ ಹಾಕಿರುವ ವರ್ಷ ಸುಮಾರು ಶಾ.ಶ. ೧೬೦೭, ಕ್ರಿ.ಶ. 1686. ಇದರಲ್ಲಿರುವ ಒಕ್ಕಣೆ ಹೀಗಿದೆ :-

ಶ್ರಿಮತ್ಪರಮಹಂಸ ಪರಿವ್ರಾಜಕಾದ್ಯನೇಕ ಬಿರುದ ಮಾಲಾ ವಿಶಿಷ್ಟ ಶೃಂಗೇರಿ ತಂಕರಭಾರತೀ ಯತೀಂದ್ರಾನ್ ಪ್ರತಿ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯಾದ್ಯನೇಕ ಬಿರುದಾಂಕಿತ ಶೃಂಗೇರಿ ನರಸಿಂಹಭಾರತೀ ಯತೀಂದ್ರಕೃತ ಪರಸ್ಪರಂ ನಾರಾಯಣ ಸ್ಮರಣ ಪೂರ್ವಕ

[ಈ ಪತ್ರದಲ್ಲಿ ಶೃಂಗೇರಿಯವರು ಬರೆದ ಪತ್ರದಲ್ಲಿ ಸಮಾನಪ್ರತಿಪತ್ತಿಯಿಂದ ಬರೆದ ಒಕ್ಕಣೆಯನ್ನು ಲಕ್ಷಿಸಬೇಕು. ಶಾರದಾಪೂಜಾಸಕ್ತ– ಎಂದೇನೂ ಇಲ್ಲಿಲ್ಲ.]

ಪತ್ರಿಕೆಯೆಲ್ಲವೂ ದೇವನಾಗರಿಯಲ್ಲಿದೆ. ಅದರ ವಿಷಯದ ಸಾರವೇನೆಂದರೆ:

'ಮೊಕ್ಶೂರ ಮಹಾದೇವ'ನೆಂಬಾತನ ಮೂಲಕ ಕಳುಹಿಸಿದ 'ವಿಜ್ಞಪ್ತಿ' ಪತ್ರಿಕೆಯಿಂದಲೂ ಕೊಂಡಿಭಟ್ಟರು ಬಾಯಲ್ಲಿ ಹೇಳಿದ್ದರಿಂದಲೂ ಅಲ್ಲಿಯ ವಿಚಾರವೆಲ್ಲ ತಿಳಿಯಿತು.

ಭಾಗ್ಯನಗರದ ಕಡೆಯಲ್ಲಿ ಸಂಕೇಶ್ವರದ ಯಾವನೋ ಒಬ್ಬನು ತನ್ನ ಹೊಟ್ಟೆಯನ್ನು ಹೊರೆದುಕೊಳ್ಳುವದಕ್ಕಾಗಿ 'ನನಗೆ ಕೂಡಲಿಮಠದ ಶ್ರೀಗಳು ಸಂನ್ಯಾಸವನ್ನು ಕೊಟ್ಟಿರುತ್ತಾರೆ' ಎಂದು ಹೇಳಿಕೊಳ್ಳುತ್ತಿದಾನಂತೆ. ವಿಚಾರಿಸಿದ್ದರಲ್ಲಿ ಅವನು ಋಗ್ವೇದಿ, ಗೃಹಸ್ಥ, ಗೋಸಾವೀಸಂಪ್ರದಾಯದವನು. ಇಂಥವನು ದ್ರಾವಿಡ, ದಕ್ಷಿಣಾಮ್ನಾಯ ಭೋಗವಾರಸಂಪ್ರದಾಯದ ಭಗವತ್ಪಾದರ ಸಂಪ್ರದಾಯಕ್ಕೆ ಹೇಗೆ ಅಧಿಕಾರಿಯಾದಾನು? ಈ ಮಠದಲ್ಲಿ ಬ್ರಹ್ಮಚರ್ಯವಾದ ಮೇಲೆ ಸಂನ್ಯಾಸ, ಯಜುರ್ವೇದದಲ್ಲಿರುವ ಮಹಾವಾಕ್ಯ, ಹೀಗಿರುವಲ್ಲಿ ಅವನು ಹೇಗೆ ಈ ಮಠದ ಸಂನ್ಯಾಸಕ್ಕೆ ಅಧಿಕಾರಿಯಾದಾನು ? ಈ ವೇಷಧಾರಿಗೆ ಯಥಾಯೋಗ್ಯವಾಗಿ ಕೊಂಡಿಭಟ್ಟನ ಮೂಲಕ ದಂಡನೆಯ ಪತ್ರವನ್ನು ತಾವು ಕೊಡಬೇಕು ; ಅಥವಾ ಅವನ ವಿಚಾರವನ್ನು ಬರೆದು ಕಳುಹಿಸಿದರೆ ನಾವೇ ಅವನಿಗೆ ನಿಗ್ರಹಕೊಡುವೆವು.'

ಈ ಎರಡು ಪತ್ರಿಕೆಗಳನ್ನು ನೋಡಿದರೆ ಸಂಕೇಶ್ವರಮಠದವರು ಕೂಡಲಿಮಠಕ್ಕೆ ಅಧೀನರೆಂದು ಒಂದು ಪತ್ರದಿಂದ, ಅವರಿಗೆ ಶಂಕರಸಂಪ್ರದಾಯದ ಸಂನ್ಯಾಸಕ್ಕೆ ಅಧಿಕಾರವೇ ಇಲ್ಲವೆಂದು ಮತ್ತೊಂದು ಪತ್ರದಿಂದ ತಿಳಿಯಬರುತ್ತದೆ. ಇದರ ನಿಜವನ್ನು ತಿಳಿಯಬೇಕೆಂದು ನಾವು 1960ರಲ್ಲಿ ಚಾತುರ್ಮಾಸ್ಯಕ್ಕಾಗಿ ಧಾರವಾಡದಲ್ಲಿ ನಿಂತಿದ್ದಾಗ ಸಂಕೇಶ್ವರಮಠಕ್ಕೆ ಪತ್ರವನ್ನು ಬರೆಯಿಸಿದೆವು.

ಅಂಚೆಯ ಇಲಾಖೆಯಿಂದ ಬೇರೆಬೇರೆ ಮೂರು ಕಡೆಗಳಲ್ಲಿ[1] ಆ ಹೆಸರಿನ ಮಠಗಳಿರುವದಾಗಿ ತಿಳಿಯಬಂದಿತು. ರಿಜಿಸ್ಟರುಮೂಲಕ ಬರೆದ ಪತ್ರಗಳಿಗೆ ಸಂಕೇಶ್ವರದಿಂದ ಮಾತ್ರ (ಸಂ. 56|60–61 ತಾ॥ 11–9–60) ಹೀಗೆಂದು ಉತ್ತರವು ಬಂದಿತು: 'ತಾವು ಕೇಳಿದ ಖುಲಾಸಾದ ಬಗ್ಗೆ ನಮ್ಮಲ್ಲಿರುವ ರಿಕಾರ್ಡದಲ್ಲಿ ತಪಾಸ್ ಮಾಡಿ ತಮಗೆ ಏನಂಬೋದನ್ನು ತಿಳಿಸುವದಲ್ಲಿ ಬರುವದು. ರಿಕಾರ್ಡು ನೋಡುವ ಕೆಲಸ ಸುರು ಅದೆ. ತಿಳಿಯಬೇಕು.'

## ೪ ಅವನೀಮಠ

ಈ ಮಠವು ಶಂಗೇರೀಮಠದ ಶ್ರೀನೃಸಿಂಹಭಾರತೀಸ್ವಾಮಿಗಳು ಕೋಲಾರದಲ್ಲಿಳಿದಿದ್ದಾಗ ಸ್ಥಾಪಿಸಿದರು (MAR. 1929, p. 88) ಎಂದು ಕೆ. ಆರ್ ವೆಂಕಟರಾಮನ್‌ರವರು (KRTΓW. p. 60) ಬರೆದಿರುತ್ತಾರೆ. ಅವರ ಶ್ರೀಮುಖದಲ್ಲಿರುವ ಒಕ್ಕಣೆಯಲ್ಲಿ ಶ್ರೀಶೃಂಗೇರೀ 'ಶ್ರೀವಿದ್ಯಾಶಙ್ಕರದೇವದಿವ್ಯಶ್ರೀಪಾದಪದ್ಮಾರಾಧಕ' ಎಂದಿರುವದರಿಂದಲೂ 'ಅವನಿಶೃಂಗೇರಿ'ಮಠವೆಂಬ ಹೆಸರಿರುವದರಿಂದಲೂ ಇದು ಸಂಭಾವಿತವೆಂದೇ ತೋರುತ್ತದೆ. ಆದರೆ ಈಚೆಗೆ ಅವನೀಮಠವು ಸ್ವತಂತ್ರವಾಗಿ ಶಂಕರಾಚಾರ್ಯರ ಸಂಪ್ರದಾಯಕ್ಕೆ ಸೇರಿದ ಮಠವೆಂದು ಬರೆದ ಒಂದು ತಮಿಳುಗ್ರಂಥದ ಕನ್ನಡಾನುವಾದವೂ ನಮಗೆ ಸಿಕ್ಕಿರುತ್ತದೆ. ಇದು 'ಪದ್ಮಪಾದಾಚಾರ್ಯವಿರಚಿತವಾದ ಗ್ರಂಥದ ಆಧಾರದಿಂದ ತಾವು ಬರೆದಿರುವದಾಗಿ ಹೇಳಿಕೊಂಡಿರುವ ಶ್ರೀಬ್ರಹ್ಮವಿದ್ಯಾನಂದನಾಥಭಾರತೀಸ್ವಾಮಿಗಳ ಕೃತಿ.[2]

## ೫. ಶ್ರೀರಾಮಚಂದ್ರಾಪುರಮಠ

ಶೃಂಗೇರಿಯ ಶ್ರೀಶಂಕರಾನಂದಭಾರತಿ (1448–54) ಇವರ ಶಿಷ್ಯ ಮಾಧವಭಾರತಿಗಳವರು ಚಕ್ರವರ್ತಿಯಿಂದ ಒಂದು ಇನಾಮತಿಯನ್ನು ಪಡೆದು (A.R.S.I.E. 1916 No. 27,Sg. R. 7) ಗೋಕರ್ಣದಲ್ಲಿ ಒಂದು ಮಠವನ್ನು ಸ್ಥಾಪಿಸಿದರು-ಎಂದು ಕೆ.ಆರ್. ವೆಂಕಟರಾಮನ್‌ರವರು(KRTT-W p. 52) ಬರೆದಿರುತ್ತಾರೆ.

---

1. (೧) ಶಂಕರಾಚಾರ್ಯರು : ಕರವೀರಮಠ, ಕೊಲ್ಹಾಪುರ : ಬೊಂಬಾಯಿ, (೨) ಶ್ರೀಜಗದ್ಗುರು ಶ್ರೀಶಂಕರಾಚಾರ್ಯಸಂಕೇಶ್ವರಮಠ, ಸಂಕೇಶ್ವರ (ಬೆಳಗಾಂವಿ) (೩) ಶ್ರೀಜಗದ್ಗುರು(ಕರವೀರ) ಶ್ರೀಶಂಕರಾಚಾರ್ಯ ಡಾ॥ ಕುರ್ತಕೋಟಿ, ಕೃಷ್ಣಮಂದಿರು ಪಂಚವಟಿ, ನಾಸಿಕ.

2. ಈ ಸ್ವಾಮಿಗಳು 'ಓಂಕಾರಸ್ವಾಮಿ'ಗಳೆಂಬ ಹೆಸರಿನಿಂದ ಪ್ರಖ್ಯಾತರಾಗಿ ಮೈಸೂರಿನಲ್ಲಿ ಹಲವು ವರ್ಷಗಳಿಂದ ಇದ್ದು ಅಲ್ಲಿಯೇ ಸಮಾಧಿಸ್ಥರಾದರು. ಅವನೀಮಠಕ್ಕೆ ತಾವೂ ಅಧಿಕಾರಿಗಳೆಂದು ಹೊಡೆದಾಡಿ ವ್ಯವಹಾರದಲ್ಲಿ ಪರಾಜಿತರಾದವರಿವರು.

ಮಠದ ಇತಿಹಾಸಪ್ರಕಾಶನಸಮಿತಿಯವರು ಪ್ರಕಟಿಸಿರುವ 'ಹವ್ಯಕಸಮಾಜ ಮತ್ತು ಶ್ರೀಗುರುಮಠದ ಸಂಕ್ಷಿಪ್ತ ಇತಿಹಾಸ' ಎಂಬ ಪುಸ್ತಕದಲ್ಲಿರುವ ವಿವರವೇನೆಂದರೆ : ಶ್ರೀಶಂಕರಾಚಾರ್ಯರು ಸುರೇಶ್ವರರನ್ನು ಶೃಂಗೇರಿಯಲ್ಲಿ ಸ್ಥಾಪಿಸಿ ಅವರ ಶಿಷ್ಯರಾದ ವಿದ್ಯಾನಂದರನ್ನು ಕರೆದುಕೊಂಡು ತೀರ್ಥಯಾತ್ರಾ ಕ್ರಮದಿಂದ ಗೋಕರ್ಣಕ್ಕೆ ಬಂದರು. ಅಲ್ಲಿ ಅಗಸ್ತ್ಯಶಿಷ್ಯರಾದ ವರದಮುನಿಗಳು ತಪೋರಾಮ, ಸೀತಾ, ಲಕ್ಷ್ಮಣ; ಪಟ್ಟಾಭಿರಾಮ, ಸೀತಾ, ಲಕ್ಷ್ಮಣ-ಎಂಬ ಆರು ವಿಗ್ರಹಗಳನ್ನು ಆಚಾರ್ಯರಿಗೆ ಕೊಟ್ಟು ಹಿಮಾಲಯಕ್ಕೆ ತೆರಳಿದರು. ಆಚಾರ್ಯರು ಪ್ರಶಿಷ್ಯನಾದ ವಿದ್ಯಾನಂದನಿಗೆ ಅವುಗಳನ್ನು ಕೊಟ್ಟು 'ಅಶೋಕ' ಎಂಬಲ್ಲಿ ಮಠವನ್ನು ಸ್ಥಾಪಿಸಿ ನಿರ್ಮಿಸಿ ಅದಕ್ಕೆ ಆತನನ್ನು ಅಧಿಪತಿಯಾಗಿ ಮಾಡಿದರು. (ಹ, ಗು. ಇ. ೨೬, ೨೭) ಶ್ರೀರಾಮನೇ ಇದಕ್ಕೆ ಮುಖ್ಯಾಧಿದೇವತೆಯಾದದ್ದರಿಂದ ಇದಕ್ಕೆ 'ರಘೂತ್ತಮಮಠ'ವೆಂದು ಹೆಸರಾಯಿತು. ಹೀಗೆ ಸುರೇಶ್ವರಜ್ಯೇಷ್ಠ ಶಿಷ್ಯರಾದ ವಿದ್ಯಾನಂದರಿಂದ ರಘೂತ್ತಮ(ರಾಮಚಂದ್ರಮಠವೂ), ಎರಡನೆಯ ಶಿಷ್ಯರಾದ ನಿತ್ಯಬೋಧಘನಾಚಾರ್ಯರಿಂದ ಶೃಂಗೇರಿಮಠವೂ ಸ್ವತಂತ್ರವಾಗಿ ನಡೆದುಕೊಂಡು ಬಂದವು (ಹ.ಗು.ಇ. ೨೮). ರಘೂತ್ತಮಮಠದ ಗುರುಪರಂಪರೆಯಲ್ಲಿ ೧೧ನೆಯವರಾದ ರಾಮಚಂದ್ರಭಾರತಿಗಳು ಹಂಪೆಯ ಸೋಮಣ್ಣನಾಯಕನಿಂದಲೂ ಕೆಳದಿ ಮತ್ತು ನಗರದ ಸಂಸ್ಥಾನಿಕರಿಂದಲೂ ಕೆಲವು ಉಪಕಾರಗಳನ್ನು ಪಡೆದು ನಗರದಿಂದ ದಕ್ಷಿಣಕ್ಕೆ ಶರಾವತೀನದೀತೀರದಲ್ಲಿ ಅಗಸ್ತ್ಯತೀರ್ಥದ ಉತ್ತರ, ಶ್ರೀಕಾರ್ಣಗಿರಿಯ ಉತ್ತರಪೂರ್ವಗಳ ಮಧ್ಯಭಾಗದಲ್ಲಿಯೂ ಇದ್ದ ಪ್ರದೇಶಕ್ಕೆ 'ರಾಮಚಂದ್ರಾಪುರ'ವೆಂದು ಹೆಸರಿಟ್ಟು ಸೀತಾರಾಮಲಕ್ಷ್ಮಣವಿಗ್ರಹಗಳನ್ನು ಸ್ಥಾಪಿಸಿದರು. ಅಲ್ಲಿಂದ ಮುಂದಕ್ಕೆ ಈ ಮಠಕ್ಕೆ ರಾಮಚಂದ್ರಮಠವೆಂದು ಹೆಸರಾಯಿತು. ಅಲ್ಲಿಂದೀಚೆಗೆ ರಘೂತ್ತಮಮಠದಲ್ಲಿ ಬೇರೆ ಮಠಾಧಿಪತಿಗಳಿಲ್ಲ.

ಅಂದಿನಿಂದ ಕೆಕ್ಕಾರಿನ ಮಠದಲ್ಲಿಯೂ ಆಶ್ರಮಪರಂಪರೆ ನಡೆಯುತ್ತಾ ಬಂದಿತು.

[ಹೀಗೆ ಒಬ್ಬ ಗುರುಗಳ ಶಿಷ್ಯರೇ ಎರಡುಕಡೆಗಳಲ್ಲಿ ಏಕೆ ಯಾವ ಸಂದರ್ಭದಲ್ಲಿ ಬೇರೆಬೇರೆಯ ಮಠಗಳನ್ನು ಸ್ಥಾಪಿಸಿದರೆಂಬುದಕ್ಕೆ ವಿವರವು ಚರಿತ್ರೆಯಲ್ಲಿಲ್ಲ.]

ಕೆಕ್ಕಾರುಮಠದ 'ರಾಮಚಂದ್ರಭಾರತಿ'ಗಳ ಶಿಷ್ಯರಲ್ಲೊಬ್ಬರು ನೆಲೆಮಾವಿನಲ್ಲಿ ಉಳಿದರು (ಹ.ಗು.ಇ.ಪು. ೩೧). ಕೆಕ್ಕಾರುಮಠದ ೧೩ನೆಯ ರಾಘವೇಶ್ವರ ಭಾರತಿಗಳು ರಾಮಚಂದ್ರಮಠದ ೨೫ನೆಯ ರಾಮಚಂದ್ರಭಾರತಿಗಳು ಇನ್ನೂ

1. ಗುರುಪರಂಪರೆಯ ೧೦ನೆಯವರಾದ ರಾಘವೇಶ್ವರಭಾರತಿ (1464)ಗಳ ಶಿಷ್ಯರು 'ರಘೂತ್ತಮಭಾರತಿ' ಎಂಬವರಿಂದ ಈ ರಘೂತ್ತಮಮಠವು ಮುನ್ನಡೆಯಿತಂತೆ.

ಚಿಕ್ಕವರಾದ್ದರಿಂದ ಅಲ್ಲಿಯ ಎಲ್ಲಾ ಆಡಳಿತಗಳನ್ನೂ ನೋಡಿಕೊಳ್ಳುತ್ತಿದ್ದರು. ಇವರು ಶಾ.ಶ. ೧೭೪೭ರಲ್ಲಿ ಮುಕ್ತರಾದಬಳಿಕ ರಾಮಚಂದ್ರಭಾರತಿಗಳೇ ಎರಡು ಮಠಗಳಿಗೂ ಅಧಿಕಾರಿಗಳಾದರು. ಕೆಕ್ಕಾರಿನಲ್ಲಿ ಮತ್ತೆ ಬೇರೆ ಸಂನ್ಯಾಸಿಗಳು ಬರಲಿಲ್ಲ, ಮಠಾಧಿಪತಿಗಳಿಲ್ಲ.

[ಬೇರೆಬೇರೆಯಾಗಿದ್ದ ಎರಡು ಮಠಗಳೂ ಇಲ್ಲಿಗೆ ಒಂದಾದಂತೆ ಆಯಿತು.]

ಗುರುಪರಂಪರೆಯಲ್ಲಿ ೧೫ನೆಯವರಾದ ಅನಂತೇಂದ್ರಭಾರತಿಗಳು ತಮ್ಮ ಶಿಷ್ಯರನ್ನು ರಾಮಚಂದ್ರಾಪುರದಲ್ಲಿ ಕೂಡಿಸಿ ತಾವು ಬಿದರಕಾಲು ಎಂಬಲ್ಲಿ ಮಠವನ್ನು ಸ್ಥಾಪಿಸಿ ಕೆಲವು ಆಸ್ತಿಗಳನ್ನು ಸಂಪಾದಿಸಿಕೊಂಡರು.

೧೯ನೆಯ ರಘುನಾಥಭಾರತಿಗಳ ಕಾಲದಲ್ಲಿ ತೀರ್ಥಹಳ್ಳಿಯಲ್ಲಿ ಒಂದು ಮಠವು ಸ್ಥಾಪಿತವಾಗಿದ್ದು ಅಲ್ಲಿನ ಹವ್ಯಕಬ್ರಾಹ್ಮಣರ ಮೇಲುವಿಚಾರಣೆಯನ್ನು ನಡೆಯಿಸುತ್ತಿತ್ತು.

೩೦ನೆಯ ರಾಮಚಂದ್ರಭಾರತಿಗಳ ಕಾಲದಲ್ಲಿಯೇ ಕೆಕ್ಕಾರುಮಠವು ರಾಮಚಂದ್ರಾಪುರದಲ್ಲಿ ವಿಲೀನವಾಯಿತು.

೩೧ನೆಯ ರಾಘವೇಂದ್ರಭಾರತಿಗಳ ಕಾಲದಲ್ಲಿ ಸಿದ್ದಾಪುರದ ತಾಲ್ಲೂಕಿನ ಕೊಂಬಿನಕೈಮಠ, ಕಳಸದ ರುದ್ರಪಾದಮಠ, ಅಮಗೊಡ್ಲಿನ ಕೃಷ್ಣಾನಂದಮಠ, ಹೊಸಳ್ಳಿಮಠ– ಈ ನಾಲ್ಕು ರಾಮಚಂದ್ರಮಠದಲ್ಲಿ ವಿಲೀನವಾದವು. ತೀರ್ಥಹಳ್ಳಿಮಠವೂ ಹೀಗೆಯೇ ವಿಲೀನವಾಯಿತು.

೩೨ನೆಯ ರಾಘುವೇಶ್ವರಭಾರತಿಗಳ ಕಾಲದಲ್ಲಿ ಮಂಗಳೂರುಪ್ರಾಂತದ ೫೦೦ ಹವ್ಯಕಮನೆಗಳವರು ಶೃಂಗೇರಿಗೆ ಸೇರಿಕೊಂಡರು. ಕೋರ್ಟಿನಲ್ಲಿ ವ್ಯಾಜ್ಯ ನಡೆದು ಶೃಂಗೇರಿಯವರು ಸ್ವತಂತ್ರವಾಗಿರುವ ರಾಮಚಂದ್ರಮಠದ ಆಡಳಿತದಲ್ಲಿ ಕೈಹಾಕುವದು ತಪ್ಪೆಂದು ನಿರ್ಣಯವಾಯಿತು. ಶಿಷ್ಯರು ಮತ್ತೆ ರಾಮಚಂದ್ರಪುರದ ಮಠಕ್ಕೆ ಸೇರಿಕೊಂಡರು.

೩೩. ಈಗ ಶ್ರೀ॥ ರಾಘವೇಂದ್ರಭಾರತೀಸ್ವಾಮಿಗಳು ಪೀಠಾಧಿಪತಿಗಳಾಗಿದ್ದಾರೆ.

## ೬. ವಿರೂಪಾಕ್ಷಮಠ

ಈ ಮಠವನ್ನು ಕಾಂಚೀಪೀಠದ ಗುರುಪರಂಪರೆಯಲ್ಲಿ ೪೯ನೆಯವರಾದ ವಿದ್ಯಾತೀರ್ಥರು ಮಾಧ್ವರ ಮತ್ತು ಪೋರ್ಚುಗೀಸರ ಪ್ರದೇಶದಲ್ಲಿದ್ದ ರೋಮನ್ ಕ್ಯಾಥೊಲಿಕರ ಮತಪ್ರಚಾರವನ್ನು ತಡೆಗಟ್ಟುವದಕ್ಕೆಂದು ಶಿಷ್ಯರ ಮೂಲಕ ಎಂಟು ಹೊಸ ಮಠಗಳನ್ನು ಸ್ಥಾಪಿಸಿದರೆಂದೂ ಅವರ ಶಿಷ್ಯರಾದ ವಿದ್ಯಾರಣ್ಯರು ಮತ್ತು ಭಾರತೀತೀರ್ಥರಾದವರು ಸಂನ್ಯಾಸಿಗಳೊಡನೆ ಆ ಮಠವನ್ನು ಅಧಿಪತಿಗಳಾಗಿ ನೋಡಿಕೊಳ್ಳುತ್ತಿದ್ದರೆಂದೂ ತಾವು ವಿರೂಪಾಕ್ಷಮಠಕ್ಕೆ ಅಧ್ಯಕ್ಷರಾದರೆಂದೂ ೮೦೦

ವರ್ಷಗಳಿಂದ ಶಿಥಿಲವಾಗಿದ್ದ ಶೃಂಗೇರಿಮಠವನ್ನು ಉಜ್ಜೀವನಗೊಳಿಸಿದರೆಂದೂ ಎನ್. ವೆಂಕಟರಾಮನ್‌ರವರು(NVSSK ಪು. 95–96)ರಲ್ಲಿ)ಬರೆದಿರುತ್ತಾರೆ. ಇದಕ್ಕೆ ಸುಷುಮಾಗ್ರಂಥದಲ್ಲಿ ಬರೆದಿರುವದೇ ಆಧಾರವಾಗಿರಬೇಕು.

"ಶ್ರೂಯತೇ ಚಾಯಮೇವ ಶ್ರೀಶಂಕರಾನಂದೇಂದ್ರ ಮುನಿನಾ ದತ್ತವಿದ್ಯಾರಣ್ಯ ನಾಮಾ ಷಷ್ಟ್ಯಾಪ್ಟಭಿಃ ಸಬ್ರಹ್ಮಚಾರಿಭಿಃ ಸಚ್ಚಿದಾನಂದಾದಿಭಿರಚೀಕ್ಲೃಪಚಷ್ಟಿ ಮಠಾನಾತ್ಮಸಶ್ಕೈಕಮಧಿಶ ಜಗದ್ಭದ್ರಮನು ವಿರೂಪಾಕ್ಷೇಶ್ವರಮ್ ಅಶಿವೇಲ ಪ್ರವೃದ್ಧ ಮಧ್ವಕದಧ್ವಾದಿವಿಮತ ಪ್ರಚಾರರೋಧಿನ ಇತಿ" ॥ ಗು.ರ.ಸು. ೭೫.

ಆದರೆ ಸುಷುಮಾಕಾರರು 'ಹೀಗೆಂದು ಹೇಳುತ್ತಾರೆ' ಎಂದೇ ಬರೆದಿರುತ್ತಾರೆ. ಇದು ಐತಿಹಾಸಿಕಕಾಲಮಾನಕ್ಕೆ ಹೊಂದುವಂತಿಲ್ಲವೆಂದು ಕೆ. ಆರ್. ವೆಂಕಟ ರಾಮನ್‌ರವರು ಬರೆದಿರುವದನ್ನು ಶೃಂಗೇರಿಯ ಗುರುಪರಂಪರೆಯ ವಿಮರ್ಶೆಯ ಸಂದರ್ಭದಲ್ಲಿ (ಪು. ೪೬೩) ತಿಳಿಸಿರುತ್ತೇವೆ.

ನಮಗೆ ಸಿಕ್ಕಿರುವ ವಿರೂಪಾಕ್ಷಪೀಠಗುರುಪರಂಪರೆಯ ಪಟ್ಟಿಯಲ್ಲಿ[1] ಶೃಂಗೇರಿಯ ಗುರುಪರಂಪರೆಯ ೧೧ನೆಯವರಾದ ಭಾರತೀಕೃಷ್ಣತೀರ್ಥರ ಶಿಷ್ಯ ರಾದ ವೇದಭಾಷ್ಯಕರ್ತರಾದ ವಿದ್ಯಾರಣ್ಯಸ್ವಾಮಿಗಳು ವಿರೂಪಾಕ್ಷಮಠವನ್ನು ಸ್ಥಾಪಿಸಿದರು ಎಂದಿದೆ. ಅವರು ಶೋಭಕೃತ್ ವೈಶಾಖ ಶುಕ್ಲ ತೃತೀಯಾ ದಿನ ಆ ಕ್ಷೇತ್ರದ ಗುಹೆಯಲ್ಲಿ ಯೋಗಸಮಾಧಿಯನ್ನು ಹೊಂದಿದರೆಂದಿದೆ. ಕೆ. ಆರ್. ವೆಂಕಟರಾಮನ್‌ರವರು ಶಕಟಪುರ (ಬಂಡಿಗದ್ದೆ), ಹರಿಹರಪುರ' ತೀರ್ಥ ಮತ್ತೂರು' ಕೂಡಲಿ –ಈ ಮಠಗಳು ಈ ಕಾಲದಲ್ಲಿ ಸ್ಥಾಪಿತವಾದವೆಂದು (KRTTW p. 44) ಬರೆದಿರುತ್ತಾರಾದರೂ ಈ ಮಠವನ್ನು ಹೆಸರಿಸಿಲ್ಲ.

## ೭. ಪುಷ್ಪಗಿರಿ

ಎನ್. ವೆಂಕಟರಾಮನ್‌ರವರು (NVSSK ಪು.95)ಬರೆದಿರುವ ಎಂಟು ಮಠಗಳಲ್ಲಿ ಇದೂ ಒಂದು.

ನಮಗೆ ಸಿಕ್ಕಿದ್ದ ಪುಸ್ತಕದಲ್ಲಿ, (ಇದರಲ್ಲಿ ಜಗನ್ನಾಥದಲ್ಲಿ ಪದ್ಮಪಾದರನ್ನೂ ದ್ವಾರಕೆಯಲ್ಲಿ ಹಸ್ತಾಮಲಕರನ್ನೂ, ಜ್ಯೋತಿರ್ಮಠದಲ್ಲಿ ತೋಟಕಾಚಾರ್ಯ ರನ್ನೂ, ಶೃಂಗೇರಿಯಲ್ಲಿ ಸುರೇಶ್ವರರನ್ನೂ ಆಚಾರ್ಯರು ಇಟ್ಟರೆಂದಿದೆ (?) ಕೈಲಾಸಾಚಲದಿಂದ ಚಂದ್ರಮೌಳಿಲಿಂಗಗಳನ್ನು ತಂದು ಶಿಷ್ಯರಿಗೆ ಕೊಟ್ಟ ರೆಂದಿದೆ') ಸುರೇಶ್ವರರಿಂದ ಸದಾನಂದಸರಸ್ವತಿಗಳೂ ಮುಂದೆ ಆನಂದಗಿರೀಂದ್ರ ಆಮೇಲೆ ಕೃಷ್ಣಾನಂದಸರಸ್ವತಿಗಳು, ಆಮೇಲೆ ಬಂದವರು ವಿದ್ಯಾರಣ್ಯರು.[2] ಶಕೆ ೧೧೭೮ರಲ್ಲಿ ವಿದ್ಯಾರಣ್ಯರು ಕಾಂಚಿಯಲ್ಲಿದ್ದರು, ಅವರು ಪಂಪಾಕ್ಷೇತ್ರ

1. ಇದು 1931ರಲ್ಲಿ 'ಜಾನಪಾಟಿ ಪಟ್ಟಾಭಿರಾಮಶಾಸ್ತ್ರಿಗಳು' ಕರ್ನೂಲ್‌ನಲ್ಲಿ ಪ್ರಕಾಶಿಸಿರುವ ತೆಲುಗುಪುಸ್ತಕ.

2. ಶಾಲೆವಾಹನಶಕೆ ೧೭೭೭ರಲ್ಲಿ ಅಚ್ಚಾದ ತೆಲುಗುಲಿಪಿಯ ಪುಸ್ತಕವಿದು,

ದಲ್ಲಿಯೂ ಇದ್ದರು–ಎಂದು ಹೇಳಿದೆ. ಶಿಷ್ಯರಾದ ಚಂದ್ರಶೇಖರಭಾರತಿಗಳನ್ನು ಶೃಂಗೇರಿಯಲ್ಲಿಟ್ಟು ತಾವು ವಿರೂಪಾಕ್ಷದಲ್ಲಿ ಮಠವನ್ನು ಮಾಡಿ ನೃಸಿಂಹೇಂದ್ರ ಭಾರತಿಗಳೆಂಬ ಶಿಷ್ಯರನ್ನು ಅಲ್ಲಿಟ್ಟು ಶುಭಕೃತ್ಸಂವತ್ಸರದ ( ? ) ಕೃಷ್ಣ ೩ ಸೋಮವಾರದ ದಿನ ತೆರಳಿದರು. "ನೃಸಿಂಹೇಂದ್ರಭಾರತಿಗಳಿಂದ ಮುಂದಕ್ಕೆ ಎರಡು ಪೀಠಗಳಾದವು" ಎಂದು ಬರೆದಮೇಲೂ ಕೆಲವು ಗುರುಗಳ ಹೆಸರುಗಳನ್ನು ಬರೆದಿದೆ. ಬಳಿಕ ವಿದ್ಯಾಶಂಕರಭಾರತಿಗಳ ಶಿಷ್ಯರಾದ ವಿದ್ಯಾನೃಸಿಂಹೇಂದ್ರ ಸರಸ್ವತಿಗಳು ಶಿಷ್ಯರ ಪ್ರಾರ್ಥನೆಯಂತೆ ಪುಷ್ಪಗಿರಿಗೆ ಬಂದು ಅಲ್ಲಿ ಮಠವನ್ನು ನಿರ್ಮಿಸಿ ಶಕೆ ೧೩೨೯ ಸರ್ವಜಿತ್ ವೈಶಾಖ ಶುದ್ಧ ಸಪ್ತಮೀ ಭೃಗು ವಾರದಲ್ಲಿ ನೃಸಿಂಹೇಂದ್ರಸರಸ್ವತಿಗಳನ್ನು ಪೀಠಾಧಿಪರನ್ನಾಗಿ ಮಾಡಿ ದರು–ಎಂದು ಬರೆದಿದೆ

ಈ ಪಟ್ಟಿಯಲ್ಲಿ ಶೃಂಗೇರೀಗುರುಪರಂಪರೆಯೂ ಸರಿಯಾಗಿರುವಂತೆ ಕಾಣು ವದಿಲ್ಲ. ಆಗಾಗ್ಗೆ ಕಾಂಚಿಯ ಸಂಬಂಧವನ್ನು ಗಂಟುಹಾಕಿರುತ್ತದೆ ಎಂಬು ದನ್ನು ಲಕ್ಷಿಸಬೇಕು. ಈ ಗುರುಪರಂಪರೆಯ ಪಟ್ಟಿಗೆ ಎಷ್ಟು ಬೆಲೆಯನು ಕೊಡಬೇಕೆಂಬುದನ್ನು ವಾಚಕರೇ ಊಹಿಸಿಕೊಳ್ಳಬೇಕಾಗಿದೆ.

## ಉಪಸಂಹಾರ

ಶ್ರೀಕಾಶೀಶೇಷ ವೆಂಕಟಾಚಲಶಾಸ್ತ್ರಿಗಳು ಶಾರೀರಕಮೀಮಾಂಸೆಯ ಭಾಷ್ಯ ದಲ್ಲಿ ಶ್ರೀಶಂಕರಾಚಾರ್ಯಪರಂಪರೆಯವೆಂದು ಒಟ್ಟು ೩೫ ಮಠಗಳ ಹೆಸರನ್ನು ಕೊಟ್ಟಿರುತ್ತಾರೆ. (ಶಂ. ಚ. ಪು. ೨೩,೨೪) ಇವುಗಳಲ್ಲಿ ನಮಗೆ ಸಿಕ್ಕಿದಷ್ಟು ಮಠಗಳ ಹೆಸರುಗಳನ್ನು ಉಲ್ಲೇಖಿಸಿ ಮೇಲೆ ವಿವರವನ್ನು ಕೊಟ್ಟಿದೇವೆ. ರಾಮ ಚಂದ್ರಾಪುರದ ಮಠದ ಚರಿತ್ರೆಯಿಂದ ಕೆಲವು ಉಪಮಠಗಳ ಹೆಸರುಗಳು ಸಿಕ್ಕಿವೆ; ಅವನ್ನು ಆ ಮಠದ ಚರಿತ್ರೆಯ ವಿವರದಲ್ಲಿ ನಾವು ಕಪ್ಪಕ್ಷರದಲ್ಲಿ ಅಚ್ಚು ಮಾಡಿಸಿರುತ್ತೇವೆ.

ಮೇಲ್ಕಂಡ ಉಪಪೀಠಗಳ ಜೊತೆಗೆ 1963ನೆಯ ಏಪ್ರಿಲ್ 28ನೆಯ ತಾರೀಖಿನ "ಪ್ರಭಾತ" ಎಂಬ ಮಂಗಳೂರಿನ ವಾರಪತ್ರಿಕೆಯ "ಶ್ರೀಜಗದ್ಗುರು ಅಂಕ"ವೆಂಬ ವಿಶೇಷಸಂಚಿಕೆಯ ಪುಟ 8–9ರಲ್ಲಿ ಈ ಕೆಳಗೆ ಹೆಸರಿಸಿರುವ ಮಠ ಗಳ ಸಂಕ್ಷಿಪ್ತವಿವರವಿದೆ. ವಾಚಕರ ಅವಗಾಹನೆಗಾಗಿ ಅವುಗಳ ಹೆಸರುಗಳನು ಮಾತ್ರ ಇಲ್ಲಿ ಕೊಡಲಾಗಿದೆ :–

(೧) ಹರಿಹರಮಠ (ಕೊಪ್ಪ ತಾ||) (೨) ಭಂಡಿಗೇಡಿಮಠ(ಕೊಪ್ಪ ತಾ||) (೩) ಯೋಗಾನಂದೇಶ್ವರಮಠ, ಹೊಳೆನರಸೀಪುರ (೪) ಕೋದಂಡಾಶ್ರಮಮಠ, ಹೆಬ್ಬೂರು (ತುಮಕೂರು ಡಿ||) (೫) ಬಾಳೆಕುದುರುಮಠ (ಉಡುಪಿ ತಾ||) (೬) ಯಡನೀರುಮಠ(ಕಾಸರಗೋಡುತಾ||) (೭) ಹೊನ್ನವಳ್ಳಿಮಠ(ಶಿರಸಿತಾ||)

(೮) ಚಿತ್ರಾಪುರಮಠ, ಶಿರಾಲಿ (ಉ. ಕನ್ನಡ) (೯) ಕೈವಲ್ಯಮಠ, ಕವಲೇಸಿ (ಗೋವಾ) (೧೦) ತಾರಕೇಶ್ವರಮಠ, (ಬಂಗಾಳ) (೧೧) ಚಿಂತಾಮಣಿಮಠ, ಹೊಸಪೇಟೆ.

ಈ ಪರಿಶಿಷ್ಟವನ್ನು ಉಪಸಂಹಾರಮಾಡುವಾಗ ನಮ್ಮದೊಂದು ನಮ್ರ ವಿಜ್ಞಾಪನೆಯನ್ನು ಇಲ್ಲಿ ಮಾಡಿಕೊಳ್ಳಬೇಕಾಗಿದೆ. ಈವರೆಗೆ ಬರೆದಿರುವ ಮಠಗಳು ಅಥವಾ ಉಪಮಠಗಳು– ಈಗ ಎಷ್ಟೋ ಶಿಷ್ಯಕೋಟಿಯನ್ನು ಉದ್ಧರಿಸುತ್ತಿವೆ. ಆಯಾ ಮಠದ ಅನುಯಾಯಿಗಳು ಆಯಾ ಮಠದಲ್ಲಿ ಶ್ರದ್ಧಾಭಕ್ತಿಯಿಂದ ನಡೆದುಕೊಳ್ಳುವದು ಯುಕ್ತವೂ ಆಗಿದೆ. ನಾವು ಇಲ್ಲಿ ಬರೆದಿರುವ ಇತಿಹಾಸ, ಕಾಲ, ವಿದ್ವಾಂಸರ ಅಭಿಪ್ರಾಯಗಳು, ಅವುಗಳ ಮೇಲೆ ನಮ್ಮ ಅಭಿಪ್ರಾಯ– ಇವುಗಳನ್ನೆಲ್ಲ ಕೊಟ್ಟಿರುವದು ಮಠಗಳ ಚರಿತ್ರೆಯನ್ನು ಐತಿಹಾಸಿಕದೃಷ್ಟಿಯಿಂದ ನೋಡುವವರಿಗೆ ಎಷ್ಟು ತೊಂದರೆಗಳಿವೆ ಎಂಬುದನ್ನು ಸ್ಪಷ್ಟಪಡಿಸುವದಕ್ಕೇ ಹೊರತು ಯಾವದೊಂದು ಮಠದ ಮೇಲಿನ ದುರಭಿಮಾನ ಅಥವಾ ದ್ವೇಷದಿಂದ ಒಂದು ಚಕಾರಶಂಕಾರವನ್ನೂ ನಾವು ಇಲ್ಲಿ ಬರೆದಿಲ್ಲವೆಂಬುದನ್ನು ಪ್ರತಿಜ್ಞಾಪೂರ್ವಕವಾಗಿ ತಿಳಿಸುತ್ತೇವೆ.

ಪೀಠಾಧಿಪತಿಗಳೆಲ್ಲರೂ ಶ್ರೀಶಂಕರಭಗವತ್ಪಾದರವರ ಪ್ರತಿನಿಧಿಗಳು. ಅವರುಗಳಲ್ಲಿ ಅನೇಕರು ಸಂಸ್ಕೃತವಿದ್ಯಾಭ್ಯಾಸಕ್ಕೆ ಕೊಡುತ್ತಿರುವ ಪ್ರೋತ್ಸಾಹವು ಅತ್ಯಂತ ಅಭಿನಂದನೀಯವಾಗಿರುತ್ತದೆ. ಜನರಿಗೆ ಗುರುದೇವತೆಗಳಲ್ಲಿ ಶ್ರದ್ಧೆಯೂ ಧರ್ಮದಲ್ಲಿ ಅಭಿರುಚಿಯೂ ಕಡಿಮೆಯಾಗುತ್ತಿರುವ ಈ ಕರಾಲಕಲಿಕಾಲದಲ್ಲಿ ವೇದಾಂತಾಭ್ಯಾಸಕ್ಕೆ ಮನವೊಲಿಯುವವರು ಎಲ್ಲಿ ಸಿಕ್ಕಬೇಕು ? ಶ್ರೀಶಂಕರಭಗವತ್ಪಾದರವರ ಪ್ರೇರಣೆಯಿಂದ ಎಲ್ಲಾ ಮಠಗಳೂ ಸೇರಿ ಕರ್ಮಜ್ಞಾನಗಳ ಪ್ರಸಾರಕ್ಕೆ ಅನುಕೂಲವಾದ ಮಹಾವಿದ್ಯಾಪೀಠವೊಂದನ್ನು ನಿರ್ಮಿಸುವಂತಾಗಲೆಂದು ಆ ಮಹಾಮಹಿಮರನ್ನು ಸೆರಗೊಡ್ಡಿ ಬೇಡಿಕೊಳ್ಳುತ್ತೇವೆ.

ಓಂ ತತ್ ಸತ್

---

# ಗ್ರಂಥಕರ್ತರ ಬಗ್ಗೆ

ಸುಮಾರು ಎಂಟು ದಶಕಗಳ ಕಾಲ ಶ್ರೀಶಂಕರಾಚಾರ್ಯರ ಪ್ರಸ್ಥಾನತ್ರಯಭಾಷ್ಯಗಳನ್ನೇ ಮತ್ತೆ ಮತ್ತೆ ವ್ಯಾಸಂಗ ಮಾಡಿ ಶಂಕರ ವೇದಾಂತ ಪ್ರಕ್ರಿಯೆಯನ್ನು ನಿರ್ಧರಿಸಿ ಕಂಡುಕೊಂಡಿರುವ ಈ ಗ್ರಂಥಕರ್ತರಾದ ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು ಶ್ರೀಶಂಕರಭಗವತ್ಪಾದರ ಜೀವನ ಚರಿತ್ರೆಯನ್ನು ಗೊತ್ತುಮಾಡಲು ಹೊರಟು ಬಹಳ ಪರಿಶ್ರಮಪಟ್ಟು ಕಡೆಗೆ ಸರ್ವಸಮ್ಮತವಾಗಿ ಕಂಡು ಬಂದ ವಿಷಯಗಳನ್ನು ನಿರ್ಭೀತಿಯಿಂದ ಈ ಗ್ರಂಥದಲ್ಲಿ ತಿಳಿಸಿದ್ದಾರೆ. ಉಳಿದ ಕಲ್ಪಿತ ಕಥೆಗಳನ್ನೆಲ್ಲ ಯುಕ್ತಿಗಳಿಂದ ಜಾಲಾಡಿ ಅವುಗಳ ಅಸಾರತೆಯನ್ನೂ ಪ್ರಕಟಿಸಿದ್ದಾರೆ.

ಆದರೆ ಶಂಕರರ ಜೀವನ ಚರಿತ್ರೆಯನ್ನು ಪ್ರಾಮಾಣಿಕವಾಗಿ ಕಂಡು ಹಿಡಿದು ತಿಳಿಸಲು ಹೋದವರಿಗೆ ಬರಬಹುದಾದ ತೊಡಕುಗಳನ್ನೆಲ್ಲ ಇಲ್ಲಿ ಪ್ರಸ್ತಾಪಿಸಿ ನಿಜವಾದ ಶಂಕರರ ಚರಿತ್ರೆಯು ಅಲಭ್ಯವೆಂದೂ ಆ ಆಚಾರ್ಯರ ಪ್ರಸ್ಥಾನತ್ರಯಭಾಷ್ಯಗಳೇ ನಿಜವಾದ ಶಂಕರಾಚಾರ್ಯರೆಂದೂ ಓದುಗರಿಗೆ ಮನವರಿಕೆ ಮಾಡಿಕೊಟ್ಟಿದ್ದಾರೆ.

ಇಂಥ ಮಹಾಪ್ರಬಂಧವನ್ನು ರಚಿಸಿ ಕನ್ನಡದ ಜನರಿಗೆ ನೀಡಿ ಶ್ರೀ ಶಂಕರಾಚಾರ್ಯರ ವಿಷಯಕ್ಕೆ ಜನರಿಗೆ ಇರಬಹುದಾದ ಮೌಢ್ಯವನ್ನು ನಿರಾಸಮಾಡಿ ಭಗವತ್ಪಾದರಲ್ಲಿ ಶ್ರದ್ಧಾಭಕ್ತಿಗಳುಂಟಾಗುವಂತೆಯೂ ಸತ್ಯವಾದ ಚರಿತ್ರೆಯು ದುರ್ಲಭವೆಂದೂ ತಿಳಿಸಿ ಕೊಟ್ಟಿರುವ ಗ್ರಂಥಕರ್ತರಿಗೆ ಶಂಕರಭಕ್ತರೆಲ್ಲರೂ ಚಿರಋಣಿಗಳಾಗಿದ್ದಾರೆ.



ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು
(1880-1975)